

ನನ್ನ ದೃಷ್ಟಿಯಲ್ಲಿ ಶ್ರೀ ಟಿ. ಮಹಾಬಲೇಶ್ವರ ಭಟ್ಟ ಎಂಬುದು ಶುದ್ದ ಸ್ನೇಹಕ್ಕಿರುವ ಪರ್ಯಾಯ ಪದ. ಭಟ್ಟರು ಅಜಾತ ಶತ್ರು. ಅಪ್ರಮೇಯ, ಮಾನವ ಪ್ರೇಮಿಗಳು : ಹಣ, ಅಧಿಕಾರ, ಕೀರ್ತಿ, ಅಂತಸ್ತು ಇವು ಯಥೇಚ್ಛವಾಗಿದ್ದರೂ ಮನುಷ್ಯರಾಗೇ ಉಳಿದಿರುವ ಮಹಾನುಭಾವರು. ತಮ್ಮ ಹೃದಯಕ್ಕೆ ಹತ್ತಿರಾದವರು ಎಂಬ ಭಾವನೆ ಮೂಡಿದರೆ ಸಾಕು, ಭಟ್ಟರು ಅವರನ್ನು ತಮ್ಮ ಹೃದಯದಿಂದಲೇ ಅಪ್ಪಿ ಆಲಂಗಿಸಿಕೊಂಡು ಅವರಿಗಾಗಿ ಅಲ್ಲೊಂದು ಸ್ಥಳ ಮೀಸಲಿರಿಸುತ್ತಾರೆ. ಉತ್ಪ್ರೇಕ್ಷೆ ಎನಿಸದಿದ್ದರೆ ಅವರ ಒಡನಾಟ. ಸ್ನೇಹ, ಗಂಗೆಯಂತೆ ಪಾವನ. ಅಗ್ನಿಯಂತೆ ಪರಿಶುದ್ದ. ಅವರದು ಬೆಲ್ಲವನು ಮೆದ್ದಂತಹ ಬಲ್ಲವರ ಒಡನಾಟ. "ಓಹೋ" ಬನ್ನಿ ಮಾರಾಯ್ರೆ, ನಮ್ಮೂರಿಗೆ ಹೋಗುವ, ಒಂದೆರಡು ದಿನ ಆರಾಮ ಇರಿ, ಏನೂ ಇದ್ದದ್ದೇ ಜೀವನದಲ್ಲಿ ಜಂಜಾಟ ಎಂಬ ಅವರ ಆತ್ಮೀಯ ನುಡಿಗಳಲ್ಲಿ ಕಿಲುಬೇ ಇಲ್ಲ. ಕಪ್ಪು, ಕಲ್ಮಶಗಳಿರದ ನಿರ್ವ್ಯಾಜ ಪ್ರೇಮ, ಸೌಜನ್ಯ, ಸೌಶೀಲ್ಯ, ಸಜ್ಜನಿಕೆ, ಸ್ನೇಹ ಪರತೆ ಇವುಗಳನ್ನು ಈ ದುಬಾರಿ ದಿನಗಳಲ್ಲಿ ಎಲ್ಲಿ ಕೊಂಡು ತರಲಿ. ಅವು ಭಟ್ಟರ ಅಂಗಡಿಯಲ್ಲಿ ಮಾತ್ರ ಸಿಗುವ ಸರಕುಗಳು.

**ಡಾ|| ಸಾ.ಶಿ. ಮರುಳಯ್ಯ**

ರೂ. ೨೯೫

# ಮಹಾಬಲ

ಶ್ರೀಯುತ ಟಿ. ಮಹಾಬಲೇಶ್ವರ ಭಟ್ಟರ

ಎಪ್ಪತ್ತನೇ ಹುಟ್ಟು ಹಬ್ಬದ ಅಭಿನಂದನ ಗ್ರಂಥ



ಸಂಪಾದಕರು

ತಿರುಮಲ ಮಾವಿನಕುಳಿ

ಪ್ರಕಾಶ್ ಆರ್. ಕಮ್ಮಾರ್

ಪ್ರಕಾಶಕರು

ಶ್ರೀ ಟಿ. ಮಹಾಬಲೇಶ್ವರ ಭಟ್ಟ ಅಭಿನಂದನ ಸಮಿತಿ ಪರವಾಗಿ

ಹೇಮಂತ ಸಾಹಿತ್ಯ

ನಂ.೯೭೨ 'ಸಿ' ನಾಲ್ಕನೇ 'ಇ' ಬ್ಲಾಕ್, ರಾಜಾಜಿನಗರ

ಬೆಂಗಳೂರು - ೫೬೦ ೦೧೦

Felicitation Volume Presented to Sri T. Mahabaleshwara Bhatta, well known Kannada author, on the occasion of felicitation function of his completion of 70th year. Published by Hemantha Sahithya, No. 972, 'C', 4th 'E' Block, Rajajinagar, Bangalore - 10, on behalf of T. Mahabaleshwara Bhatta Abhinandana Samithi, Sagar- 577 401 KARNATAKA.

ಪುಟಗಳು : 486 + xvi

ಮೊದಲನೇ ಮುದ್ರಣ : ೧೯೯೭

ಬೆಲೆ : ರೂ. ೨೯೫-೦೦
(ಎರಡು ನೂರು ತೊಂಬತ್ತೈದು ರೂ.ಗಳು ಮಾತ್ರ)



ಮುಖಪುಟ ವಿನ್ಯಾಸ : ಶ್ರೀ ಚಂದ್ರಕಾಂತ ಪಟ್ವಣ

ಚಿತ್ರಗಳು : ರೂಪದರ್ಶಿ ಕಲರ್ ಲ್ಯಾಬ್, ಸಾಗರ
ಶ್ರೀ ಗಣೇಶ ಸ್ಟುಡಿಯೋ, ಸಾಗರ

ರೇಖಾ ಚಿತ್ರ : ಕಲಾವಿದ ಶ್ರೀ ಬಿ.ಕೆ.ಎಸ್. ವರ್ಮ

ಪ್ರಕಾಶಕರು :
**ಹೇಮಂತ ಸಾಹಿತ್ಯ**
೯೭೨, ಸಿ, ೪ನೇ 'ಇ' ಬ್ಲಾಕ್, ರಾಜಾಜಿನಗರ
ಬೆಂಗಳೂರು - ೫೬೦ ೦೧೦

ಮುದ್ರಣ :
ಸತ್ಯಶ್ರೀ ಪ್ರಿಂಟರ್ಸ್ ಪ್ರೈ. ಲಿ.,
೧೬೪, ೫ನೇ ಮುಖ್ಯರಸ್ತೆ, ಚಾಮರಾಜ ಪೇಟೆ
ಬೆಂಗಳೂರು - ೫೬೦ ೦೧೮ ದೂರವಾಣಿ : ೬೨೫೭೩೬

# ಮಹಾಬಲ

ಶ್ರೀ ಟಿ. ಮಹಾಬಲೇಶ್ವರ ಭಟ್ಟರ

ಎಪ್ಪತ್ತನೇ ಹುಟ್ಟು ಹಬ್ಬದ ಅಭಿನಂದನ ಗ್ರಂಥ

ಎರಡು ಮನೆಗಳ ಹೆಸರು, ಖ್ಯಾತಿಗಳು ಉಳಿವಂತೆ,
ತುಂಬಿದಾಯುಷ್ಯದಲಿ, ಬಾಳಿ ಬದುಕು

– ವಿ. ಸೀ.

# ಸಂಪಾದಕ ಮಂಡಳಿ

# ಮುನ್ನುಡಿ

೧

ಸರಿ ಸುಮಾರು ಐವತ್ತು ವರ್ಷಗಳಿಂದಲೂ ಸಾರ್ವಜನಿಕಕ್ಕೆ ತಮ್ಮನ್ನು ತೆರೆದುಕೊಂಡು ಕನ್ನಡ-ನಾಡು-ನುಡಿಯನ್ನು ಒಳಗೊಂಡಂತೆ ಸಮಾಜದ ಹಲವು ಹತ್ತು ಕ್ಷೇತ್ರಗಳಲ್ಲಿ ಅವ್ಯಾಹತವಾಗಿ ಅನುಪಮ ಸೇವೆ ಸಲ್ಲಿಸುತ್ತಾ ಬಂದಿರುವ ಹಿರಿಯರಾದ ಶ್ರೀ ಟಿ. ಮಹಾಬಲೇಶ್ವರ ಭಟ್ಟರ ಬದುಕನ್ನು ಸಮೀಕ್ಷೆಗೆ ಒಳಪಡಿಸಿ ಕೃತಜ್ಞತಾ ಭಾವದಿಂದ ಸ್ಮರಿಸಿಕೊಳ್ಳುವುದು, ಅವರ ಎಪ್ಪತ್ತರ ವಸಂತದ ಶುಭ ಸಂದರ್ಭದಲ್ಲಿ ಜನತೆಯ ಪರವಾಗಿ ಅಂತಃಕರಣಪೂರ್ವಕವಾಗಿ ಅಭಿನಂದನೆ ಸಲ್ಲಿಸುವುದು ಈ ಅಭಿನಂದನ ಗ್ರಂಥದ ಆಶಯ. ಇಂತಹ ಗ್ರಂಥವೊಂದನ್ನು ಅರ್ಪಿಸಿಕೊಳ್ಳುವ ಅವರಿಗೂ ಮತ್ತು ಹೃತ್ಪೂರ್ವಕವಾಗಿ ಅರ್ಪಿಸುವ ನಮಗೂ ಅವಕಾಶ ಒದಗಿ ಬಂದಿರುವುದು ಒಂದು ಯೋಗಾಯೋಗವೆಂದು ಭಾವಿಸಿದ್ದೇವೆ.

೨

ಸಮಕಾಲೀನ ಸಂದರ್ಭ ತುಂಬ ಕಳವಳಕಾರಿಯಾಗಿದೆ. ಈ ಶತಮಾನದ ಪೂರ್ವಾರ್ಧದಲ್ಲಿದ್ದ ಭಾರತೀಯ ಸಂಸ್ಕೃತಿ ಇಂದು ಆಧುನಿಕತೆಯ ಸೆಳೆತಕ್ಕೆ ಬಲಿಯಾಗಿ ಜೀವನವನ್ನು ಬೇರೆಯೇ ಆದ ಅರ್ಥದಲ್ಲಿ ವ್ಯಾಖ್ಯಾನಿಸಬೇಕಾದ ಕಾಲದಲ್ಲಿ ನಾವಿಂದು ಬದುಕುತ್ತಿದ್ದೇವೆ. ಪ್ರೀತಿ, ವಿಶ್ವಾಸ, ಸಹಬಾಳ್ವೆಗಳೆಲ್ಲ ಮಂಗಮಾಯವಾಗಿ ಆ ಸ್ಥಳದಲ್ಲಿ ಪರಸ್ಪರ ದ್ವೇಷ, ಅಸೂಯೆ ಅಪನಂಬಿಕೆಗಳು ಜಾಜ್ವಲ್ಯಮಾನವಾಗಿ ಬೆಳಗುತ್ತಿವೆ. ಹಾಗಾಗಿ ಮನುಷ್ಯ ಸಂಬಂಧಗಳೆಲ್ಲ 'ಹಣ'ದ ಮೇಲೆ ಕೇಂದ್ರಿಕೃತವಾಗಿ ಸಾತ್ವಿಕ ತೇಜಸ್ಸಿನ ವ್ಯಕ್ತಿಗಳೆಲ್ಲ ದಿನದಿಂದ ದಿನಕ್ಕೆ ಅಪ್ಪಷ್ಟೇ ಕಣ್ಮರೆಯಾಗುತ್ತಿದ್ದಾರೆ. ಒಟ್ಟಂದದಲ್ಲಿ ವ್ಯಷ್ಟಿ ಮತ್ತು ಸಮಷ್ಟಿ ಹಿತ ಗೊಂದಲಕ್ಕೆ ಈಡಾಗಿ ಮಾನವೀಯ ಮೌಲ್ಯಗಳೆಲ್ಲ ನಾಪತ್ತೆಯಾಗುತ್ತಿವೆ.

ಇಂತಹ ವಿಷಮ ಸನ್ನಿವೇಶದಲ್ಲಿಯೂ ಸಹಾ ಕಾರ್ಮೋಡದಲ್ಲೊಂದು ಬೆಳ್ಳಿಯ ರೇಖೆಯಂತೆ ಮೌಲ್ಯಗಳೆಲ್ಲ ಆಮೂಲಾಗ್ರ ನಾಶವಾಗಿಲ್ಲ ಎಂಬುದಕ್ಕೆ ಜೀವಂತ ಉದಾಹರಣೆಯಾಗಿ ಹಳೆಯ ತಲೆಮಾರಿನ ಕೆಲವು ವ್ಯಕ್ತಿಗಳಾದರೂ ನಮ್ಮ ಕಣ್ಮುಂದೆ ಈಗಲೂ ಇದ್ದಾರೆ. ಅಂತಹ ವಿರಳ ವ್ಯಕ್ತಿಗಳಲ್ಲಿ ಶಿವಮೊಗ್ಗ ಜಿಲ್ಲೆ ಸಾಗರ ತಾಲ್ಲೂಕಿನ ಬೇದೂರು ಎಂಬ ಪುಟ್ಟ ಹಳ್ಳಿಯ ಶ್ರೀಯುತ ಟಿ. ಮಹಾಬಲೇಶ್ವರ ಭಟ್ಟರು ಒಬ್ಬರು.

ಭಟ್ಟರ ಬದುಕು ವೈಯಕ್ತಿಕವಾಗಿ ಮತ್ತು ಸಾರ್ವಜನಿಕವಾಗಿ ಮಾದರಿಯಾದದ್ದು, ಅನುಕರಣೀಯ ಆದರ್ಶದ ಬೆಳಕು ಚೆಲ್ಲುವಂಥದ್ದು. ಅದು ಕಾರಣ ಅವರ ಸುಸಂಸ್ಕೃತವಾದ ಮನಸ್ಸಿನ ಪರಿಪಕ್ವವಾದ ಜೀವನದ ಉದ್ದ, ಅಗಲ, ಆಳವನ್ನು ಗುರುತಿಸುವುದು, ಗೌರವಿಸುವುದು ಹಾಗೂ ಶಾಶ್ವತವಾಗಿ ದಾಖಲಿಸುವುದು ಅಪೇಕ್ಷಣೀಯವಾದ ಕರ್ತವ್ಯ ಎಂದು ಅನೇಕ ಜನ ಮಿತ್ರರು ಆಲೋಚನೆ ಮಾಡಿದ್ದರ ಫಲಶ್ರುತಿಯಾಗಿ ಅವರಿಗೆ ಅರ್ಪಿಸಲು, 'ಮಹಾಬಲ' ಅಭಿನಂದನ ಗ್ರಂಥ ಪ್ರಕಟವಾಗುತ್ತಿದೆ. ಷೇಕ್ಸ್‌ಪಿಯರ್ ಸರಿಯಾಗಿಯೇ ಹೇಳಿದಂತೆ 'ನೆನಪು ಚಿರಂತನ ದಾಖಲೆಯಾಗಿ ಉಳಿಯುವುದು ಗ್ರಂಥಗಳ ಮುಖಾಂತರ ಮಾತ್ರಾ!''

೩

ಭಟ್ಟರ ಬಗ್ಗೆ ಬರೆಯಲು ಹೊರಟರೆ ಸಹಜವಾಗಿಯೇ ಕಂಡು ಕೇಳಿದ ಹಲವಾರು ಘಟನೆಗಳು ನೆನಪಿಗೆ ಬರುತ್ತವೆ. ಅದರಲ್ಲಿ ಮುಖ್ಯವಾದದ್ದು ಅವರ ಬಾಲ್ಯ. ಸಾಗರ ತಾಲ್ಲೂಕು ಕರೂರು ಸೀಮೆಯ 'ತೊರೆಮನೆ' ಎಂಬ ಚಿಕ್ಕ ಹಳ್ಳಿಯಲ್ಲಿ ೧೯೨೮ರಲ್ಲಿ ಜನನ. ತಂದೆ ವಿಶ್ವನಾಥ ಭಟ್ಟ, ತಾಯಿ ವೆಂಕಮ್ಮ. ಅಕ್ಕ-ತಂಗಿ, ಅಣ್ಣ-ತಮ್ಮ ಯಾರೂ ಇಲ್ಲ. ಬೀಳುಬಿದ್ದ ಜಮೀನು, ಸಾಲದ್ದಕ್ಕೆ ಮೈತುಂಬ ಸಾಲದ ಹೊರೆ ಬೇರೆ. ಶರಾವತಿ ನದಿಯ ಆಚೆದಡದಲ್ಲಿದ್ದ ಬಹುತೇಕ ಬಂಧುಗಳೆಲ್ಲಾ ಹಿರೇಭಾಸ್ಕರ ಅಣೆಕಟ್ಟಿನಿಂದ ಊರು ಮುಳುಗಡೆಯಾಗಿ ಗುಳೇಎದ್ದು ಪಯಣ ಹೊರಟಾಗ ಭಟ್ಟರಿಗೆ ೧೬ ವರ್ಷ ಮಾತ್ರ. ಆಗಷ್ಟೇ ಕಣ್ಣು ತೆರೆಯುತ್ತಿದ್ದ 'ಮಹಾಬಲ' ಏಕಾಂಗಿ. ದುಃಸ್ಥಿತಿಯಲ್ಲಿದ್ದ ಜಮೀನುಗಳನ್ನೆಲ್ಲಾ ಅನಿವಾರ್ಯವಾಗಿ ಮಾರಾಟ ಮಾಡಿ ಹೊರಟಾಗ ಆಶ್ರಯಕ್ಕೆ ಬಂದವರು ಕಾಲಾಂತರದಲ್ಲಿ ಮಗಳನ್ನೇ ಕೊಟ್ಟು ಮದುವೆ ಮಾಡಿದ ದಿ. ಹು.ಕ. ಚಕ್ರಪಾಣಿಯವರು. ತಬ್ಬಲಿ ಬಾಲಕನನ್ನು ಮನೆಯಲ್ಲೇ ಇಟ್ಟುಕೊಂಡು ಸಾಕಿ ಸಲಹಿದ ಅವರು ಉಪಾಧ್ಯಾಯರನ್ನು ಕರೆಸಿ ಓದು ಬರಹ ಕಲಿಸಿದರು. ಅದೇ ಕಾಲಕ್ಕೆ ಕರೂರುಸೀಮೆಯಿಂದ ಮುಳುಗಡೆಯಾಗಿ ಸಾಗರಕ್ಕೆ ಬಂದಿದ್ದ ದಿ. ಮಾವಿನಕುಳಿ ಚನ್ನಕೇಶವ ಭಟ್ಟರು ಭಟ್ಟರ ಕಷ್ಟ-ಸುಖದಲ್ಲಿ ಭಾಗಿಯಾಗಿ ಆರೈಕೆಮಾಡಿದರು. ಭಟ್ಟರ ಮಾತಿನಲ್ಲಿಯೇ ಹೇಳುವುದಾದರೆ 'ಇವರಿಬ್ಬರೂ ಸದಾ ಪ್ರಾತಃಸ್ಮರಣೀಯರು'. ಅಟ್ಟ ಏರಿದ ಮೇಲೆ ಏಣಿ ಒದೆಯುವ ಪ್ರವೃತ್ತಿ ಭಟ್ಟರದ್ದಲ್ಲ.

ಭಟ್ಟರ ಬಾಲ್ಯವನ್ನು ಕಂಡ ಬಲ್ಲವರು, ಅವರ ವ್ಯಕ್ತಿತ್ವವನ್ನು ಕುರಿತು ಆಡುವುದನ್ನು ಕೇಳಿದ್ದೇವೆ. ನಮ್ಮ ಬಾಲ್ಯದಿಂದಲೂ ವ್ಯಕ್ತಿಯಾಗಿ ಅದ್ವಿತೀಯರಾದ ಭಟ್ಟರ ಬಹುಮುಖ ಗುಣವಿಶೇಷಗಳನ್ನು ಗಮನಿಸುತ್ತಲೇ ಬಂದಿದ್ದೇವೆ. ಈ

ನಾಡಿನ ಸಣ್ಣತನಗಳಿಂದ ದೂರವಾದ ಅವರನ್ನು ಪರಿಚಯಿಸಿಕೊಂಡ ನಂತರ ಮರೆಯುವುದು ಸಾಧ್ಯವಾಗದೆ ಕುಳಿತಿದ್ದೇವೆ.

ಅದಕ್ಕೆ ಕಾರಣ ಸ್ಪಷ್ಟ. ಶಿಸ್ತು, ಅಚ್ಚುಕಟ್ಟುತನ ಮತ್ತು ಸಮಯ ಪ್ರಜ್ಞೆ ಇವು ಮೂರೂ ಭಟ್ಟರ ಅನುದಿನದ ಬಾಳಿನಲ್ಲಿ ಢಾಳಾಗಿ ಎದ್ದು ಕಾಣುವ, ಹಾಸು ಹೊಕ್ಕಾಗಿರುವ ವೈಶಿಷ್ಟ್ಯಗಳು. ವೈಯುಕ್ತಿಕ ನೆಲೆಯಲ್ಲಿ ಹೇಗೋ, ಸಾರ್ವತ್ರಿಕ ಸಮಾರಂಭಗಳಲ್ಲೂ ಹಾಗೆ. ಗರಿಗರಿಯಾದ ಉದ್ದನೆಯ ಜುಬ್ಬಾ, ಸರಿಯಾಗಿ ನಿರಿಗೆಯಾದ ಪಂಚೆ, ತಿದ್ದಿದ ಕ್ರಾಪು, ಸುಕ್ಕು ಕಾಣದ ಮುಖ, ಯಾವ- ಯಾವ ವಸ್ತುಗಳು ಎಲ್ಲೆಲ್ಲಿ ಇರಬೇಕೋ, ಎಷ್ಟುಹೊತ್ತಿಗೆ ನೋಡಿದರೂ ಅಲ್ಲಲ್ಲೇ ಇರಬೇಕು. ಇದು ಏಕಪ್ರಕಾರವಾಗಿ ಬದುಕಿನುದ್ದಕ್ಕೂ ಭಟ್ಟರೇ ಕಾಪಾಡಿಕೊಂಡು ಬಂದದ್ದು. ಡೀಸೆನ್ಸಿ, ನೀಟ್‌ನೆಸ್ ಇವೆಲ್ಲ ಅವರ ಬಾಳಿನ ಅವಿಭಾಜ್ಯ ಅಂಗಗಳಾಗಿ ಉಸಿರಿನಲ್ಲಿ ಬೆರೆತು ಹೋಗಿವೆ. ಹಲವರ ಉದ್ಗಾರದಲ್ಲಿ ಅವರೊಬ್ಬ 'ಮೆಜೆಸ್ಟಿಕ್ ಮ್ಯಾನ್'.

ಅಂಜುವ, ಸಿಡುಕುವ ಪ್ರವೃತ್ತಿಯಿಲ್ಲದೆ ಯಾವತ್ತೂ ನೇರವಾಗಿ ನಡೆವ ಸ್ವಭಾವ ಭಟ್ಟರದು. ಇದಕ್ಕೆಲ್ಲಾ ಕಾರಣ ಮೂಲತಃ ಆಳವಾಗಿ ಬೇರೂರಿರುವ ಅವರ ಜೀವನ ಶ್ರದ್ಧೆ. ಇರುವ ಮೂರುದಿನ ಸುಂದರವಾಗಿ ಸುಖವಾಗಿ ಬದುಕಬೇಕು ಎಂಬುದು ಅವರ ತತ್ವ. ಬಾಲಕರಿರಲಿ ಬಲ್ಲಿದರಿರಲಿ ಎಲ್ಲರನ್ನೂ ಗೌರವದಿಂದ ಕಾಣುವ ಸಮಚಿತ್ತ. ಕಷ್ಟವಿರಲಿ, ಸುಖವಿರಲಿ ಅನ್ಯರನ್ನು ಕುರಿತು ವಿನಾಕಾರಣ ಟೀಕಿಸುವ ಮನೋಧರ್ಮ ಅವರಲ್ಲಿ ಸುಳಿಯುವುದಿಲ್ಲ. ಕೈಲಾದರೆ ಸಹಾಯ ಸಲ್ಲಿಸಬೇಕು, ಇಲ್ಲವಾದರೆ ಸುಮ್ಮನಾದರೂ ಇರಬೇಕು ಎಂಬುದು ಅವರ ನಿಲುವು. ಒಮ್ಮೆ ಸ್ನೇಹವಾದರೆ ಸಾಕು ನೆನಪಿಟ್ಟು ಉಳಿಸಿಕೊಳ್ಳುವ ಜಾಯಮಾನ ಮನುಷ್ಯ ಸಂಬಂಧಗಳನ್ನು ಗಟ್ಟಿಮಾಡಿಕೊಳ್ಳುವುದರ ಬಗ್ಗೆ ಅವರಿಗಿರುವ ಅಪಾರ ಆಸಕ್ತಿಯನ್ನು ಪ್ರಕಟಿಸುತ್ತದೆ. ಕಾಲನಿಷ್ಠೆ ಮತ್ತು ಕರ್ತವ್ಯ ಪ್ರಜ್ಞೆಯನ್ನು ಕಠಿಣವಾದ ಪರಿಶ್ರಮದಿಂದ ರೂಢಿಸಿಕೊಂಡದ್ದು ಬದುಕಿಗೆ ವರವಾಗಿ ಪರಿಣಮಿಸಿದೆ - ಎಂದೇ ಒಮ್ಮೆ ಏನೂ ಸ್ಥಿತಿವಂತರಾಗಿರದ ಭಟ್ಟರು ಸಾಗರದ ಹತ್ತಿರದ 'ಬೇದೂರು' ಎಂಬ ಹೊಸಹಳ್ಳಿಗೆ ಹೋಗಿ ಸ್ವಂತ ಮನೆ ಅಡಿಕೆ ತೋಟಗಳನ್ನು ಹೊಸದಾಗಿ ಸೃಷ್ಟಿಸಿಕೊಳ್ಳಲು ಸಾಧ್ಯವಾಯಿತು.

ಭಟ್ಟರ ಅನುಭವಗಳೆಲ್ಲ ಭಟ್ಟರಿಗೇ ಸಾಟಿ ಎನ್ನಬೇಕು. ಘಂಟೆ ತೂಗುವಲ್ಲಿ ಬ್ರಾಹ್ಮಣರಾಗಿ, ಅಂಗಡಿ (ಮಹಾನಂದ ಸ್ಟೋರ್ಸ್) ತೆರೆದಾಗ ವೈಶ್ಯರಾಗಿ, ಜಲಂಧರ ಪ್ರಕಟನಾಲಯ ಪ್ರಾರಂಭಿಸಿದಾಗ,ಬರಹಗಾರರಿಗೆ ಪ್ರೋತ್ಸಾಹ ನೀಡಿದ ಪ್ರಕಾಶಕರಾಗಿ, ಸಹಕಾರಿ ಬಂಧುಗಳಾಗಿ ರಾಜಕಾರಣದಲ್ಲೂ ಪಳಗಿ, ಶಿಕ್ಷಣ

ಸಂಸ್ಥೆಗಳಲ್ಲೂ ದುಡಿದವರಾಗಿ ಇವೆಲ್ಲದರ ಜೊತೆ ಜೊತೆಯಲ್ಲಿಯೇ ಅವಿರತವಾಗಿ ಕನ್ನಡ ಪರ ಸಂಘಟನೆಯಲ್ಲಿ ತಮ್ಮನ್ನು ತಾವೇ ತೊಡಗಿಸಿಕೊಂಡು ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಜೀವನವನ್ನು ರೂಪಿಸುವಲ್ಲಿ ಕ್ರಿಯಾಶೀಲವಾಗಿ ದುಡಿಯುತ್ತಾ ಬಂದವರು ಭಟ್ಟರು. ನಿಂತ ನೆಲದ, ಜಲದ ಪ್ರಶ್ನೆ ಬಂದಾಗ ಕ್ಷತ್ರಿಯರಾಗಿ ಹೋರಾಟಕ್ಕೆ ನಿಂತವರು. ವಿಶೇಷವಾಗಿ ಸಾಗರವನ್ನು ತಮ್ಮ ಕಾರ್ಯ ಕ್ಷೇತ್ರವನ್ನಾಗಿಸಿಕೊಂಡು ಸುತ್ತ-ಮುತ್ತೆಲ್ಲಾ ಕನ್ನಡದ ವಾತಾವರಣವನ್ನು ನಿರ್ಮಿಸಿ, ಜನಮಾನಸದಲ್ಲಿ ನಾಡು-ನುಡಿಯ ಬಗ್ಗೆ ಅಭಿಮಾನ ಕೆರಳಿಸಿ, ಇಂದಿಗೂ ಕಾರ್ಯ ತತ್ಪರರಾಗಿರುವುದು ಯುವಜನರನ್ನು ನಾಚಿಸುವಂತಿದೆ.

ಒಟ್ಟಿನಲ್ಲಿ ಒಂದೇ ಮಾತಿನಲ್ಲಿ ಹೇಳುವುದಾದರೆ-ಸಮಾಜದ ನಾನಾ ರಂಗಗಳಲ್ಲಿ ಕೈಯಾಡಿಸಿ ತಮ್ಮದೇ ಆದ ವ್ಯಕ್ತಿತ್ವದ ಛಾಪು ಮೂಡಿಸಿದವರು ಭಟ್ಟರು. ಗುಣಕ್ಕೆ ಮತ್ಸರ ಪಡದೆ, ಎಲ್ಲರೊಳು ಒಂದಾಗಿ ಸರ್ವಜನಾದರಣೀಯ ರಾದವರು. ಹೊಟ್ಟೆಕಿಚ್ಚು ಪಡುವಷ್ಟು ಸುಂದರವಾಗಿ ಬಾಳನ್ನು ಸಂಪೂರ್ಣಗೊಳಿಸಿಕೊಂಡ ಭಟ್ಟರ ವರ್ಣರಂಜಿತ ವ್ಯಕ್ತಿತ್ವ ನಿಜವಾಗಿಯೂ 'ಮಹಾಬಲ'ದ ಸಂಕೇತವೇ ಸರಿ. ಎಂದೇ 'ಮಹಾಬಲ' ಎಂಬ ಹೆಸರು ಭಟ್ಟರಿಗೆ ಹೇಗೋ ಹಾಗೇ ಈ ಗ್ರಂಥಕ್ಕೂ ತುಂಬಾ ಅನ್ವರ್ಥಕ ಅಂದುಕೊಂಡಿದ್ದೇವೆ.

ಈ ಗ್ರಂಥದಲ್ಲಿ ನಾಲ್ಕು ಭಾಗಗಳಿವೆ. ಮೊದಲನೆಯ ಭಾಗದಲ್ಲಿ ಭಟ್ಟರನ್ನು ಬಲ್ಲ ಹಿರಿಯರ ಹಾರೈಕೆ, ಮಿತ್ರರ ಬರಹಗಳಿವೆ. ಈ ಬರಹಗಳಲ್ಲಿ ಭಟ್ಟರ ವ್ಯಕ್ತಿತ್ವದ ವಿವಿಧ ಮಗ್ಗುಲುಗಳು ಅನಾವರಣಗೊಂಡಿವೆ. ಎರಡನೆಯ ಭಾಗದಲ್ಲಿ ಭಟ್ಟರ ಬದುಕಿನ ಅವಿಸ್ಮರಣೀಯ ಘಟನೆಗಳನ್ನು ಮೆಲುಕು ಹಾಕುವ ಚಿತ್ರಸಂಪುಟವಿದೆ. ಮೂರನೆಯ ಭಾಗದಲ್ಲಿ - ಇದೊಂದು ಸಂಗ್ರಹ ಯೋಗ್ಯ ಗ್ರಂಥವಾಗಬೇಕೆಂಬ ಹಿನ್ನೆಲೆಯಲ್ಲಿ ಚಿಂತಿಸಿ, ಬರಮಾಡಿಕೊಂಡ, ತರಾವರಿ ವಿಷಯಗಳ ಮೇಲೆ ನಾಡಿನ ವಿದ್ವಾಂಸರು ಬರೆದ ಲೇಖನಗಳಿವೆ. ನಾಲ್ಕನೆಯ ಭಾಗ ಭಟ್ಟರ ಜೀವನದ ಮೈಲುಗಲ್ಲುಗಳನ್ನು ಸೂಚಿಸುವ ಪಟ್ಟಿಗೆ ಮೀಸಲಾದದ್ದು.

ನಾಡಿನಾದ್ಯಂತ ಹರಡಿರುವ, ಭಟ್ಟರನ್ನು ಗೊತ್ತಿರುವ ಹಿರಿಯರು, ಸ್ನೇಹಿತರು, ಕವಿತೆ, ಬರಹಗಳನ್ನು ಸಕಾಲಕ್ಕೆ ಕಳುಹಿಸಿಕೊಟ್ಟು, ಉಪಕರಿಸಿದ್ದಾರೆ. ಈ ಮಹನೀಯರಿಗೆ ನಮ್ಮ ಕೃತಜ್ಞತಾಪೂರ್ವಕ ಅಭಿನಂದನೆಗಳು. ನಮ್ಮ ಜೊತೆ, ದೊಡ್ಡದಾದ ಈ ಕಾರ್ಯ ಕೈಗೂಡುವಲ್ಲಿ ಕಳೆದ ಒಂದು ವರ್ಷದಿಂದಲೂ, ಸಂಪಾದಕ ಮಂಡಲಿಯ ಸದಸ್ಯರು ಸಹಕರಿಸಿದ್ದಾರೆ ಗೆಳೆಯರಾದ ಶ್ರೀ ಎಂ. ರಾಜು,

ಮತ್ತು ಶ್ರೀ ಎಸ್. ಚಂದ್ರ ಪ್ರಸಾದ್ ಅವರು ಬಂದ ಬರಹಗಳ ಸುಂದರ ಹಸ್ತಪ್ರತಿ ಮಾಡಿಕೊಟ್ಟಿದ್ದಾರೆ. ಲೇಖನಗಳ ಪರಿಶೀಲನೆಯೊಂದಿಗೆ ಈ ಗ್ರಂಥವು ಅಂದವಾಗಿ, ಅಚ್ಚುಕಟ್ಟಾಗಿ ಮೂಡಿಬರುವಂತೆ ಶ್ರೀ ಬೇಡರೆಡ್ಡಿ ಹಳ್ಳಿ ಪಂಪಣ್ಣನವರು ಶ್ರಮಿಸಿದ್ದಾರೆ. ಇವರೆಲ್ಲರಿಗೂ ನಮ್ಮ ಆತ್ಮೀಯ ನೆನಕೆಗಳು.

ಈ ಅಭಿನಂದನ ಗ್ರಂಥವನ್ನು ಸುಂದರವಾಗಿ, ಅಚ್ಚುಕಟ್ಟಾಗಿ, ಸಕಾಲದಲ್ಲಿ ಮುದ್ರಿಸಿಕೊಟ್ಟ ಸತ್ಯಶ್ರೀ ಪ್ರಿಂಟರ್ಸ್, ಚಾಮರಾಜಪೇಟೆ ಬೆಂಗಳೂರಿನ ಎಲ್ಲಾ ಗೆಳೆಯ ವೃಂದಕ್ಕೂ, ಮುಖಪುಟ ವಿನ್ಯಾಸಮಾಡಿರುವ ಶ್ರೀ ಚಂದ್ರಕಾಂತ ಪಟ್ಟಣರವರಿಗೂ, ಈ ಗ್ರಂಥವನ್ನು ಪ್ರಕಾಶನಮಾಡಿರುವ ಆತ್ಮೀಯರಾದ ಶ್ರೀ ಎಂ. ವೆಂಕಟೇಶ್, ಹೇಮಂತ ಸಾಹಿತ್ಯ, ರಾಜಾಜಿನಗರ, ಬೆಂಗಳೂರು ಇವರಿಗೂ ನಮ್ಮ ಹಾರ್ದಿಕ ಅಭಿನಂದನೆಗಳು ಸಲ್ಲುತ್ತವೆ.

ಈ ಅಭಿನಂದನ ಗ್ರಂಥದ ಅನುಷ್ಠಾನಕ್ಕೆ ಸಕಾಲಿಕ ಆರ್ಥಿಕ ನೆರವು ನೀಡಿರುವ ಎಲ್ಲಾ ಮಹನೀಯರನ್ನೂ ಅಭಿಮಾನಿಗಳನ್ನೂ ಕೃತಜ್ಞತೆಯಿಂದ ಸ್ಮರಿಸುತ್ತೇವೆ. ಅಲ್ಲದೆ ಈ ಗ್ರಂಥವನ್ನು ಹೊರತರುವಲ್ಲಿ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಶ್ರಮಿಸಿರುವ ಎಲ್ಲರಿಗೂ ನಮ್ಮ ಪ್ರೀತಿಯ ನಮನಗಳು.

ಜ

ಭಟ್ಟರಿಗೆ ಈ ಗ್ರಂಥ ತಕ್ಕುದಾಯಿತೇ ಇಲ್ಲವೇ ಎಂಬ ಆತಂಕದೊಂದಿಗೆ ಭಟ್ಟರು ನೂರ್ಕಾಲ ಆರೋಗ್ಯ ಭಾಗ್ಯಾದಿಗಳಿಂದ ಕೂಡಿ ಬಾಳಲಿ ಎಂದು ಹಾರೈಸುತ್ತಾ ಅವರ ಎಪ್ಪತ್ತನೆಯ ಹುಟ್ಟು ಹಬ್ಬದ ಶುಭ ಸಂದರ್ಭದಲ್ಲಿ ಈ ಅಭಿನಂದನ ಗ್ರಂಥವನ್ನು ಅವರಿಗೆ ಪ್ರಾಂಜಲ ಮನಸ್ಸಿನಿಂದ ಸಮರ್ಪಿಸುತ್ತಿದ್ದೇವೆ.

ಸಾಗರ
೧೦.೯.೧೯೯೭

ಸಂಪಾದಕ ಮಂಡಳಿಯ ಪರವಾಗಿ
ತಿರುಮಲ ಮಾವಿನಕುಳಿ
ಪ್ರಕಾಶ ಆರ್. ಕಮ್ಮಾರ್

# ಪರಿವಿಡಿ

## ಚಿತ್ರ ಸಂಪುಟ – ಭಾಗ–೨

## ಸಾಹಿತ್ಯ ಹಾಗೂ ಚಿಂತನೆ – ಭಾಗ – ೩

# ಎಪ್ಪತ್ತರ ಸೋಜಿಗ

- ತಿರುಮಲ ಮಾವಿನ ಕುಳಿ

ಠಾಕು ಠೀಕಿನ ರಸಿಕ; ಎತ್ತರದ ನಿಲುವು
ಇಳಿಬಿದ್ದ ಜುಬ್ಬದಲ್ಲಿ ತಲೆಯೆತ್ತಿ ನಡೆದರೆಂದರೆ
ಆಹ! ರಾಜಕುಮಾರ; ಗರಿ ಗರಿ ಎರಡು ರೂಪಾಯಿ
ಮುಗುಳುನಗೆ, ತಿದ್ದಿದ ಕ್ರಾಪು ಶಿಸ್ತಿನ ಸಿಪಾಯಿ.

ಬಾಗದ ಬೆನ್ನು ಸೋಲದ ಜಾಯಮಾನ
ವಯಸ್ಸು ನಿಂತಿರಬಹುದೇ ? ಆಗಾಗ್ಗೆ ಅನುಮಾನ
ಅನುದಿನವೂ ಅಚ್ಚುಕಟ್ಟು; ಸಂಸ್ಕೃತಿಯ ಮೈಕಟ್ಟು
ಮನೆ ಮಾರು ಬಂಗಾರ; ಸದಾ ಕಲಿಯುವ ಸಡಗರ.

ಮಾತು ಮಕರಂದ; ಮಾತೊಂದು ಹೂಬಾಣ
ಮೈ ಮನವೆಲ್ಲ ನಿತ್ಯ ಜೋಪಾನ
ಚುರುಕಿನಲಿ ಇಪ್ಪತ್ತರ ತರುಣ, ಜಾಣ
ಮುಟ್ಟಿದ್ದೆಲ್ಲ ಚಿನ್ನವಾಗುವ ಪರುಷ ಗುಣ.

ಎಲ್ಲ ಸಾಂಗೋಪಾಂಗ; ಬಹುಜನಕಿಲ್ಲ ಯೋಗಾಯೋಗ
ನಂಬಿದರೆ ನಂಬಿ ಬಿಟ್ಟರೆ ಬಿಡಿ
ಶೂನ್ಯದಲಿ ಮಾನ್ಯತೆಯ ಮೆರೆದ 'ಮಹಾಬಲ'
ಭಟ್ಟರು ಎಂಬ ಸೋಜಿಗಕೆ ಈಗ ಎಪ್ಪತ್ತು
ನೂರ್ಕಾಲ ಬಾಳಲೆಂಬ ಹಾರೈಕೆ
ಈ ಹೊತ್ತು.

# ಸಾಗರ ಮಿತ್ರ

ಸಾಹಿತ್ಯಕ್ಕೆ ಮಹಾಬಲೇಶ್ವರ ಭಟಂ. ಸ್ನೇಹಕ್ಕೆ ಮಾ ಸಾಗರಂ.
ಸೌಹಾರ್ದಕ್ಕಿವ ಹೇಳಿ ಮಾಡಿಸಿದವಂ. ಆತಿಥ್ಯದೊಳ್ ಗಟ್ಟಿಗಂ.
ಊಹಾತೀತದ ಸಜ್ಜನಂ. ಸೃಜನಶೀಲೋದಾರ  ಸದ್ಭಾವುಕಂ
ಬಾಹುದ್ವಂದ್ವವ ಬೀಸಿ ಬೀಸಿ ಕರೆವಂ ಸಾಹಿತ್ಯ ಸಂಸಕ್ತರಂ.

ಸಾಗರ ವೇದಿಕೆಯೊಳಗಡೆ
ಜಾಗರವಾಡದಿರುವಂಥ ಕವಿ ನವಿಲುಂಟೇ
ಸ್ವೀಕರಿಸಿರ್ಪುದು ಕನ್ನಡ
ಯಾಗದ ಅಧ್ವರ್ಯುವೆಂದು ಸಾಗರ ನಿನ್ನಂ

ತುಂಬಿತು ಎಪ್ಪತ್ತೆಂದರೆ
ನಂಬಲಾರೆನು ನಾನು ಸಾಹಸೋದ್ಯಮಿಯೀತಂ
ಕೊಂಬುದು ಮನಸಿನ ವಯಸನು
ಡೊಂಬಿನ ದೇಹದಲಿ ವಯಸು ಮುಖ್ಯವದಲ್ಲಂ

ಸಾಗರ ವಾಸಿಯಾಗಿರುವೆ  ಸಾವಿರ ಕಾಣ್ಕೆಗಳನ್ನು ಕಟ್ಟುತಂ
ಬೀಗುತ ಮುಂದೆ ಸಾಗಿ ಯುವಶಕ್ತಿಯ ಸಂಘಟಿಸುತ್ತ ಕಾರ್ಯಕ್ರ-
ಮಂಗಳ ಹಮ್ಮಿಗೊಂಡಿರುವೆ ಓದುವ ಸಂಸ್ಕೃತಿಯನ್ನು ಬೀರಿದೈ
ಮಂಗಳವಾಗಲೆಂದು ನೆನೆದಾದರದಿಂದಲೆ ನಿನ್ನ ವಂದಿಪೆಂ.

– ಅ.ರಾ. ಮಿತ್ರ

# ಶುಭಾಸಂಶೆ

- ಪ್ರೊ. ಟಿ. ಕೇಶವ ಭಟ್ಟ

ಕಂದ :

ಶಿವಮೊಗ್ಗದ ಸಾಗರದೊ-
ಪ್ಪುವ ತೊರೆಮನೆಯಾ ಮಹಾಬಲೇಶ್ವರ ಭಟ್ಟರ್
ಭುವನ, ಹಿತ ಕಾರ್ಯರತರಾ
ದವರ್ಗೆಪ್ಪತ್ತಾಯ್ತು ವರ್ಷವಾಯುರ್ಮಾನಂ. ?

ಶ್ರೀ ವಿಶ್ವನಾಥ ಭಟ್ಟ-
ರ್ಗಾ ವೆಂಕಮ್ಮಂಗೆ ಪುತ್ರವರರಾಗುತೆ ಪ-
ದ್ಮಾವತಿ ಸತಿಯೊಳ್ ಮಕ್ಕಳ್
ತಾವೇಳ್ವರ ತಂದೆಯಾಗಿ ಜಸವಡೆದರಿವರ್

ಶಾಲಾಧ್ಯಯನಕೆ ಮೀರಿ ವಿ-
ಶಾಲಾನುಭವವನೆ ಭಾರತಾಂಬೆಯ ಸೇವಾ
ಶೀಲದೆ ಪಡೆದವರಾರೀ
ಕಾಲದೊಳೆನಲರಿವನಾಂತ ಪುರುಷ ಪ್ರವರರ್

ಲಕ್ಷಿಸಿ ಜನಹಿತಮಂ ನಿ-
ರ್ಲಕ್ಷಿಸಿ ಕಷ್ಟವನೆ ರಾಜಕೀಯದೆ ಕಾಂಗ್ರೆಸ್
ಪಕ್ಷದೊಳ್ ನಮ್ರಸೇವೆಯ
ದೀಕ್ಷೆಯ ಬೆಳ್ಗಸವನಾಂತರಿವರತಿ ಧೀರರ್

**ಮತ್ತೇಭವಿಕ್ರೀಡಿತ ವೃತ್ತ :**

ಕೃತಿನಿರ್ಮಾಣನಿಬದ್ಧ ಕಂಕಣಯುತರ್ ಸಂಗೀತ ಸಾಹಿತ್ಯ ಸಂ-
ಸ್ಕೃತಿ ವಿಸ್ತಾರರತರ್, ಸುಶೀಲಚರಿತರ್ ಸನ್ಮಾನಿತರ್ ಸಾಗರ
ಕ್ಷಿತಿ ಕೃಷ್ಯುನ್ನತಿ ಸಾಧಕರ್ ವಿವಿಧ ಸೇವಾಕ್ಷೇತ್ರ ಸಂಭಾವಿತರ್-
ಸ್ಥಿತಿವಂತರ್ ಸುಜನ ಪ್ರಿಯರ್ ಸಕಲರಾತ್ಮೀಯರ್ ವಲಂ ಮತ್ತಿವರ್

**ಕಂದ :**

ಭಾಷೋನ್ನತಿಗಂ ಸುಕೃತಿ ವಿ-
ಶೇಷ ವಿರಚನಾ ಪ್ರಕಾಶನಂಗಳ್ಗಿನ್ನೀ
ಶೇಷಾಯು ಮೀಸಲಿರೆ ವಿ-
ಶ್ವೇಶನ ದಯೆಯಿಂದೆ ಬಾಳ್ಗಿವರ್ ನೂರ್ಗಾಲಂ.

# ಕವಿ ವಿಭೂತಿಗೆ ನಮನ

– ಪ್ರೊ. ವಿ. ಎನ್. ಭಟ್ಟ

ಶ್ರೀ ಮಹಾಬಲ ಸಕಲ ಕಾರ್ಯದೊಳು ದಕ್ಷ
ಅದಕೆ ಹಲವೇದಿಕೆಗೆ ಅವನೆ ಅಧ್ಯಕ್ಷ
ಅಡಿಯಿಟ್ಟ ರಂಗದೊಳು ಎಲ್ಲೆಲ್ಲೂ ಸಿದ್ಧಿ
ನಾಡಿನಾದ್ಯಂತ ಆ ಹೆಸರು ಪ್ರಸಿದ್ಧಿ

ಕನ್ನಡದ ಕೆಲಸದೊಳು ತನು-ಮನವ ಸವೆಸಿ
ಕಾದಂಬರಿಗಳಿಂದ ಸಹೃದಯರ ತಣಿಸಿ
ಕಥೆ-ಕವನ ಸಾಹಿತ್ಯ ರಸದೂಟ ಬಡಿಸಿ
ಎಲ್ಲೆಲ್ಲಿಯೂ ಮಹಾ-ಬಲನು ತಾನೆನಿಸಿ

ಹಲವು ಸಾಹಿತಿಗಳನು ಕರೆದು ಉಪಚರಿಸಿ
ಸಾಹಿತ್ಯ ಸಸಿಗಳನು, ನೀರೆರೆದು ಬೆಳೆಸಿ
ಹಲವಾರು ಸಾಹಿತ್ಯ, ಗೋಷ್ಠಿಗಳ ನಡೆಸಿ
ಅಡಿಯಿಟ್ಟರಂಗವನ್ನೆಲ್ಲ ಮಡಿಗೊಳಿಸಿ

ಮನೆ-ಮನೆಗೂ ಕನ್ನಡದ ದೀಪವನು ಹಚ್ಚಿ
ಜನರೆಲ್ಲ ಕೊಂಡರೀ ಸಾಹಸವ ಮೆಚ್ಚಿ
ಬಾಳಲೀ ಚೇತನವು ನೂರು ವರ್ಷ
ಮಾರ್ಗದರ್ಶನ ಸಿಗಲು ನಮಗೆ ಹರ್ಷ

# ಬಿಳಿಯ ಬದುಕಿನ ವ್ಯಕ್ತಿ

- ವಿ. ಎಂ. ಶರ್ಮ

ಉರಿಯುತಿದೆ, ನಿಶ್ಚಲದಿ, ತನಗೆ ತಾನೇ,
ಬಾಳನಂದಾದೀಪ, ಗಾಳಿ ಮಳೆಯೊಳಗೂ
ಸುತ್ತಮುತ್ತಲು ಸೌಮ್ಯಕಿರಣಗಳ ಹೊಳಪು,
ನೆರಳೆಲ್ಲ ಹಿಂದಿಹುದು, ಮುಂದೆ ಬೆಳಕು.

ತೈಲವನು ಹೀರುತ್ತ, ದೇಹವನೆ ಉರಿಸುತ್ತ
ಬೆಳಕಬೀರುತಲಿಹುದು, ಕತ್ತಲೆಯ ಜಗಕೆ,
ಹಣತೆ ಕಿರಿದಾದರೂ ಉರಿಬೆಳಕು ವಿಸ್ತಾರ,
ಸೊಡರಿನಾರತಿ ಎತ್ತಲದುವೆ ಶೃಂಗಾರ.

ಅನುಭವದ ಹರಹು ತಾನೇಳು ದಶಕಗಳಷ್ಟು,
ಹಚ್ಚ ಹಸುರಾಗಿಹುದು, ಎದೆಯ ಹೊಲವು.
ಬತ್ತದಿಹ ನೇಹರಸ, ಮಂದ ಮಂದಾ ನಿಲವು,
ಪೈರುಪಚ್ಚೆಗಳಿಲ್ಲಿ, ಮರವು ನೆಳಲು.

ತನ್ನತಾ ತೆಯ್ದು, ಪರಿಮಳಿಸಿಹುದು, ಸಿರಿಗಂಧ,
ಮಲ್ಲಿಗೆಯ ಬಿಳುಪಿನೊಲು ಬಾಳು ಅರಳಿಹುದು.
ಮೌನಬಂಗಾರ, ಮಾತುಬೆಳ್ಳಿಯ ಹೊಳಪು,
ಬರೆಹವದು, ಬಿತ್ತಿರ್ದ ಬೀಜದಂತಿಹುದು.

ಉಡಿಗೆ ತೊಡಿಗೆಗಳಲ್ಲಿ ಒಪ್ಪವೂ ಓರಣವು,
ನಡೆಯಲ್ಲಿ, ಗಾಂಭೀರ್ಯ, ಅಡಗಿದಂತಿಹುದು.
ಹಿಡಿದ ಕಾರ್ಯವ ಮಾಡಿ ಮುಗಿಸುವಂತಹ, ಹಠವು,
ಬಡಿವಾರವಿನಿತಿಲ್ಲ, ನಾಗರಿಕತನದಿ.

ಜೀವನದ ಹೂಬಳ್ಳಿ, ಹಬ್ಬಿಹರಡಿಹುದೀಗ,
ಚಪ್ಪರದ ತುಂಬ, ಮಲ್ಲಿಗೆಯ ಬೆಳಗು,
ಅರಳಿದರಳಿನ ತೆರದಿ, ಬಗೆಯು ಕಿರು ನಗೆಯಾಗಿ
ಬಿಳಿಯು, ಬದುಕನೆ ತುಂಬಿ, ಪರಿಮಳಿಸುತಿಹುದು.

# ಉತ್ಸಾಹಕೆ ಇಪ್ಪತ್ತು

- ಎಸ್. ಬಿ. ಹೊಸಮನಿ

ಮಳೆ-ನೀರು
ಹಳ್ಳಹೊಳೆ ಹರಿದು
ಸಾಗರ ಸೇರುವಂತೆ
ನಾಡಿನ ಖ್ಯಾತ
ಉದ್ಯಮಿ
ಪತ್ರಿಕೋದ್ಯಮಿ
ವೈದ್ಯರು
ಲೇಖಕರು
ನಟರು, ಚಿತ್ರಕಾರರು, ಹಾಸ್ಯಗಾರರು
ನೃತ್ಯ, ಗಾಯನ, ಜಾನಪದ ಕಲಾವಿದರು
ಸಾಹಿತಿ ಸುಸಂಸ್ಕೃತರು
ಪ್ರಶಸ್ತಿ ಪುರಸ್ಕೃತರು
ಗಣ್ಯ ಅಧಿಕಾರಿಗಳು
ಖ್ಯಾತ ರಾಜಕಾರಣಿಗಳು
ಹೀಗೆ ಪ್ರತಿಭಾನ್ವಿತರೆಲ್ಲ
ಒಂದಿಲ್ಲೊಂದು ಸಮಾರಂಭದಲಿ
ಶಾಂತಪರಿಸರದ
ಸಾಗರದಲಿ, ಸೇರುತ್ತಾರೆ.

ಸಾಗರದಲಿದ್ದರೆ ಸಾಕು
ನಾಡಿನ ಗಣ್ಯರ
ದರ್ಶನ ಭಾಗ್ಯ
ಮಹಾನಗರಗಳಲಿ ಸೇರದ ಸಂಖ್ಯೆಯಲಿ

ಸೇರುತ್ತಾರೆ
ಸಾಗರದ ಸಭೆ, ಸಮಾರಂಭಗಳಲಿ
ಪ್ರೇಕ್ಷಕರು.
ಇವರು ಬರಿ ಪ್ರೇಕ್ಷಕರಲ್ಲ
ಸಾಹಿತ್ಯ, ಸಂಸ್ಕೃತಿ, ಪ್ರಿಯಸಹೃದಯಿ
ಸುಸಂಸ್ಕೃತ ಸಜ್ಜನರು
ಇದಕೆ ಪ್ರೇರಕರು : ವಿದ್ವಜ್ಜನರು
ಇವರಲೊಬ್ಬರು
ಸಾಹಿತಿ ; ಮಹಾಬಲೇಶ್ವರಭಟ್ಟರು.

ತೊರೆಮನೆ ಮಹಾಬಲೇಶ್ವರ ಭಟ್ಟರಿಗೆ
ಎಪ್ಪತ್ತು
ಎಂದರು ಮಿತ್ರರು.
ಇನ್ನೂ ಇಪ್ಪತ್ತರ
ಯುವ ಉತ್ಸಾಹಿ
ಮಹಾಬಲೇಶ್ವರ ಭಟ್ಟರಿಗೆ ಎಪ್ಪತ್ತು
ಹೌದು
ಇವರ ಉತ್ಸಾಹಕೆ ಇಪ್ಪತ್ತು

ಗರಿಗರಿಯಾದ, ಧೋತಿ
ಇಸ್ತ್ರಿಮಾಡಿದ ಜುಬ್ಬ
ಅಚ್ಚುಕಟ್ಟಾಗಿ ಬಾಚಿದ, ಕೂದಲು
ಮಂದಹಾಸದ, ಮೊಗ
ಕಾಂತಿ ಸೂಚಕ, ಕಣ್ಣುಗಳು
ಭಟ್ಟರ-ಭಾವಕೆ
ಇನ್ನಷ್ಟು ಹೊಳಹುಗಳು
ಶಿಸ್ತು-ಎಂದರೆ
ಮಹಾಬಲೇಶ್ವರಭಟ್ಟರು
ಮಹಾಬಲೇಶ್ವರ ಭಟ್ಟರು ಎಂದರೆ ಶಿಸ್ತು
ಎಂಬಷ್ಟರ ಮಟ್ಟಿಗೆ ಇವರ ಇರವು
ಉತ್ಸಾಹಕೂ, ಇರಬೇಕಿದರ ನೆರವು.

ಬರಹಗಾರರನು
ತುಂಬು ಮನದಿಂದ ಹರಸುವ
ತೆರೆದ ಮನದಿಂದ ಪ್ರೋತ್ಸಾಹಿಸುವ
ಹಿರಿಯ ಬರಹಗಾರರನು
ಎದೆತುಂಬಿ ಗೌರವಿಸುವವರು
ತುಂಬಿದೆದೆಯಿಂದ ಸ್ನೇಹ ಸ್ವೀಕರಿಸುವವರು
ಮಾತು ಮಿತ
ಮೃದು-ಮಧುರ
ಸರಳತೆಗೆ ಮಾದರಿ
ಜೊತೆಗೆ ಸಾಹಿತ್ಯ ಲಹರಿ
ಸೊಗಸುಗಾರ
ಕಟ್ಟಿ 'ತೋರಣ'
'ಗುಲಾಬಿ' ಕವನ
'ಹೂಮಾಲೆ' ಕನ್ನಡತಿಗೆ
ಒಪ್ಪಿಸಿದ
ಕನ್ನಡ ಕುವರ
ಸಾಗರದಿ, ಕನ್ನಡ ಸೊಗಸು, ಹರಡಿ.
ಸಾಹಿತ್ಯಪಡೆ ನಿರ್ಮಿಸಿದ
ಭಟ್ಟರು
ಆದರಾತಿಥ್ಯಕ್ಕೆ, ಹೆಸರುವಾಸಿ
ಸೌಜನ್ಯಸಹವಾಸಿ

ಪುಸ್ತಕ ಮೇಳವೇರ್ಪಡಿಸಿ
ಪ್ರತಿವರ್ಷ
ಜನದೆದೆಯ, ತುಂಬಿ
ಪುಸ್ತಕ ಪ್ರೀತಿ
ಸಾಗರದಿ ತೆರೆ ತೆರೆಯಾಗಿ
ಸಾಗರದ ರೀತಿಯಲಿ
ಶಾಂತ, - ಗಂಭೀರ
ವೈವಿಧ್ಯಮಯ ಕಾರ್ಯಕ್ರಮ
ಹಮ್ಮಿಲ್ಲದೆ

ಹಮ್ಮಿಕೊಂಡು
ರಸದೌತಣನೀಡಿ
ಕನ್ನಡದ ತಾಯಿಗೆ ನುಡಿ
ನಮನ ಸಲ್ಲಿಸುವ
ಭಟ್ಟರು - ಕನ್ನಡದ ಭಟರು

ಕ್ಷೇತ್ರ, ವಿವಿಧ
ಸಮಾಜ ಸೇವೆಗೂ ಸಿದ್ಧ
ಹಲವು, ಹತ್ತು ದಾರಿಯಲಿ
ಸೇವೆಯನು ಹೊತ್ತು
ಹೊತ್ತಗೆಯ ತೆರೆದಂತೆ
ಹೊತ್ತು, ಹೊತ್ತನು, ಹೊನ್ನಿನಂತೆ
ಬಳಸಿ
ಭಟ್ಟರು, ನಿರತರು, ಸೇವೆಯಲಿ

ಮಹಾಬಲೇಶ್ವರ ಭಟ್ಟರಿಗೆ
ತುಂಬಲಿ ನೂರು
ಚೈತನ್ಯ ಚಿಲುಮೆ
ಚಿಮ್ಮಲಿ
ಉತ್ಸಾಹ ಉಕ್ಕಲಿ
ಜಗ ದೊಡೆಯ, ನೀಡಲಿ
ಸುಖಸಮೃದ್ಧಿ
ಸಂತುಷ್ಟಿ, ಪುಷ್ಟಿ
ಸಂತಸದ, ಪುಷ್ಪವೃಷ್ಟಿ

# ತೊರೆಮನೆ ಮಹಾಬಲರು

- ವಂದಗದ್ದೆ ಚಂದ್ರ ಮೌಳಿ

ಉಕ್ಕುಕ್ಕಿ ಮೊರೆವ ತೊರೆಯುಕ್ಕಂದ ಚೈತನ್ಯದುತ್ಕಟತೆ;
ಕುಗ್ಗದ ಸೆಟೆದೆದೆಯಲಿ ಮುಗಿಲೆತ್ತರದ ಧೀಮಂತ ಗಭೀರತೆ;
ಛಲದಿಂದ ಪುಟಿದೆದ್ದ ಆ ಪಾಹಕ ಮುಗುಳ್ನಗೆಯು.
ಮಿಂಚನಪ್ಪುವ ಪ್ರಾಜ್ವಲ್ಯ ಸಂಸ್ಕರಣದಲಿ ಅಂತರಂಗವ ಕೆದಕಿ ಜಾಲಾಡಿ ತೆಕ್ಕೆಗೆ
ಸಿಕ್ಕಿಸುವ ಔದಾರ್ಯ;
ಹೃದಯ ತುಂಬುವ ಅಂತಃಕರಣದೊಲವ ಶ್ರೀಮಂತಿಕೆ;
ಫಳಫಳನೆ ಹೊಳೆಯುವ ನೇತ್ರದ್ವಯಗಳಲ್ಲಿ, ಹುದುಗಿಸಿದ, ಆ ಮಂದಹಾಸ,
ಸರಸ-ಸ್ನಿಗ್ಧ, ಮೃದು-ಮಧುರ, ನೋಟವಲ್ಲೂ, ಬಿಗಿಯಾದ, ಭಾವಬಲ;
ತಮ್ಮದೇ ಆದ ಸಹಜ ಧೀಶಕ್ತಿಯ ಕೂಡೆ
ಹೃದಯ ವೈಶಾಲ್ಯವ ನೆಲೆಗೊಳಿಸುತ್ತಾ
ಹೊತ್ತಾರೆ ಇಬ್ಬನಿಯ ಮಬ್ಬಿನಲ್ಲಿ, ಕಣ ಕಣಗಳಿಗೆಲ್ಲಾ
ಸಜ್ಜನಿಕೆಯ ಅಗ್ಗಳಿಕೆ ಲೇಪಿಸುತ್ತಾ
ಮಾಗಿ ಚಳಿಯ ಎಳೆ ಬಿಸಿಲ ಬೆಚ್ಚನಪ್ಪುಗೆಯ ಖುಷಿ ಚೆಲ್ಲುತ್ತಾ,
ತಲೆತುಂಬ ಗಹನ ವಿಚಾರದ ಹುನ್ನಾರ ಹೊತ್ತು,
ಕರಗತವಾದ, ಆಳದನುಭವದ ಕಾವಿನ ಭರಾಟೆಯಲಿ;
ಮಲೆನಾಡ ಮಣ್ಣವಾಸನೆ ಕಂಪ ಬಾಂದಳಕೆ ಹೊಮ್ಮಿಸುತ್ತಾ,
ತೊರೆಮನೆಯ ಸಿರಿಹೊತ್ತು ಮೈತಾಳಿ ಬರುವರು,
ಸಾಗರದ ಫಲಭರಿತ, ನೆಲದ ಜಾಯಮಾನಕ್ಕೆ ಒಗ್ಗಿದ,
ಬೇದೂರ ಶ್ರೀಗಂಧ, ಸಿರಿಗನ್ನಡದ, ಗುರುಕೃಪ ಗೋವಿಂದರು
ನಮ್ಮ ನಿಮ್ಮೆಲ್ಲರ ''ಮಹಾಬಲರು''.
ಸದಾ ಆನಂದಮಯರು, ಸ್ನೇಹಸುಧಾಪಾವನರು, ಸಹೃದಯ, ಶ್ರೀಕಾಂತರು;

ಸಿದ್ಧಿಯಲಿ ಪ್ರಸಿದ್ಧಿಯ ಮರೆಮಾಟ, ಪ್ರಚಾರದೆದುರು ವಿಚಾರದ ಸಫಲತೆ,
ಮೊಂಡಾದಲಗ ಮಸೆತು ಒಪ್ಪ ಓರಣದ ಕುಸುರಿ ಹಚ್ಚೆ; ವಾಗ್ದೇವಿ ನಮನ
ಒಡಲಾಳ ಸಾಹಿತ್ಯ ಅತಃರ್ಜಲದಿ ಜಿನುಗಿದ ಪ್ರೇಮಾಂಕುರ ಮಾಧುರ್ಯ;

ಕಥೆ, ಕಾದಂಬರಿ, ಕಾವ್ಯ ಪೂರ್ತ, ಕನ್ನಡ ನಿತ್ಯೋತ್ಸವ, ಜೀವನ ಪಾವನ,
ನೆಲ ನಾಡ, ಬಸಿರ, ಕನ್ನಡದುಸಿರ, ತೇಜದ ಝೇಂಕಾರ
ಎಲ್ಲಾ ಚೊಕ್ಕ, ಸಾಂದ್ರ – ಮಹಾಬಲರ 'ಜಲಂಧರ'
ತಿಳಿ ನೀರ-ಬತ್ತಲಾರದ ಕವಿತ್ವದ ಕೊಳದಲ್ಲಿ

ಜೋಗ ದುಂದುಭಿಯ ಝೇಂಕಾರದ ಕಾಂತತೆಯ ಕೂಡೆ,
ಜಲನೆಲದ, ಜೀವ-ಜೀವ, ಸಂಕುಲದ, ಚೇತೋಹಾರಿ;
'ಜಗವು ನಗುತಿರಲಿ, ಜಗದಳಲು ನನಗಿರಲಿ' ಎಂದು
ವಿಷವುಂಡು ಅಮೃತವ ಹಾಯಿಸುತ್ತಾ –
ಹೆಗಲೊಡ್ಡಿ ಸಂಸ್ಥೆಯ ಮಣಬಾರ ಹೊರುವ
ಇವರ ದರುಶನವು – 'ಆಹ್ಲಾದ' –
ರಣಬಿಸಿಲುರಿಧಗೆಯಲ್ಲಿ ತಣ್ಣೀರ ಮಿಂದಂತೆ

ಮೌನದಲ್ಲೇ ದುಡಿಮೆಯ ಗಾನ ಗೇಯಿಸುವವರು,
ಚೆಲ್ಲಿದ ಮಾತುಗಳೋ – ತೂಕಕ್ಕಿಟ್ಟ ಸಾಂದ್ರ ನೆಲೆಗಟ್ಟು, ಪೂರ್ಣ 'ಅಪರಂಜಿ;'
ಸಮಚಿತ್ತ, ಸಮಭಾವಗಳ ಕೂಡೆ ಸರ್ವೋದಯವೇ ಕರುಳಕೂಗು,
ಪರಿಶುದ್ಧ ರಾಜಕಾರಣವೆ ? ಕಾಂಗ್ರೆಸ್ಸೇ ? ಸಾಹಿತ್ಯವೇ ? ಸಂಘ-ಸಂಸ್ಥೆಗಳೇ ?
ಇಲ್ಲ – ಕೃಷಿ ಸಾಹಚರ್ಯೆಯ ಬೆಳೆಸಿರಿ, ರಿವಾಜೆ ?
ಅನನ್ಯ, ಅನ್ಯಾದೃಶ-ಹೊಳಪು, ಛಾಪು ಎಲ್ಲೆಲ್ಲೂ –
ಶಿಸ್ತು, ಒಪ್ಪ ಓರಣದ ಹೊಲಬು, ಚೊಕ್ಕ ಕಿಮ್ಮತ್ತಿನ ಥಂಬರು;
ಪ್ರೇಮ ನಿನಾದ, ಹೃದಯದ ಮೌನ ಸಂಗೀತ
ಬೇದೂರಲ್ಲಿಮುಂಜಾನೆ ಬಿರಿದ ಮಲ್ಲಿಗೆಯಂತೆ
ಕಂಪುದೂರ – ಬಹುದೂರ:

ದಿಗಂತ ಚುಂಬಿಸುವ ಈ ಹೆಮ್ಮರದ ಮಣ್ಣಸೊಗಡಲ್ಲಿ–
ಮೊಳೆತು, ಚಿಗುರಿ, ಬಲಿತು – ಫಲಪುಷ್ಪ ನೀಡಿದ ಸಂಕುಲವದೆಷ್ಟೋ
'ದುಡಿಮೆಯಲಿ ದೇವರ ಹುಡುಕು'
'ಏಳು ! ಎದ್ದೇಳು ! ಜಾಗೃತ'
'ಆಲಸ್ಯದಿಂದಮೃತ ವಿಷಮಪ್ಪುದು'
ಚಿಂತಿಸು, ಧ್ಯಾನಿಸು, ಅಭ್ಯಸಿಸು, ಲೇಖನ ಹರಿಸೆಂದು–
ಪ್ರೋತ್ಸಾಹದ ಬರೆ ಎಳೆದು,
ನಾಡ ನುಡಿಯಕ್ಕರದ ಗಾನದ ಕಿರಿಮರಿಗಳಿಗೆಲ್ಲಾ ಉಣಬಡಿಸಿ,

ಸಹೃದಯತೆಯ ಜಲವೆರೆದು ಉತ್ತು, ಬಿತ್ತಿ, ಪುಷ್ಟಿ ಸೂಸಿ,
ಮೊಗ್ಗರಳಿ ಹೂವಾಗಿ, ತೆನೆ - ತೊನೆದಾಡುವೆಡೆಯೆಲ್ಲಾ -
ಕಲಾ ಕೌಶಲ; ಹೇಮಕಾರನ ಸಾಫಲ್ಯ ಸೃಷ್ಠಿ

ಮಲೆನಾಡ ಜೀವ, ಜೀವನದ, ಮನ, ಮನೆಯ,
ಸೃಜನತೆಯ ಮಾಂತ್ರಿಕರು-
ಬೆಳ್ಮುಗಿಲ ಸೆರಗೊತ್ತಿದ ಶುಭ್ರಶ್ವೇತ ಜುಬ್ಬಕ್ಕಂಟಿದಷ್ಟೇ-
ಪ್ರೇಮಕ್ಕಡಿಯಾಳಾಗುವ ನಿತ್ಯ ಶುಭ್ರತೆ -
ಸಾರಾಸಗಟುತನದ ಗಭೀರತೆ !
ಕ್ಷಣ ಕ್ಷಣಕೂ ಹೊಸನೋಟ, ರಚನ-ಕ್ರಿಯಾ ಹೊಸ ಪಾತ
ಈ ಪುರುಷಸಿಂಹರ, ಕೂಟ
ತಿಳಿಹಾಸ್ಯದ ಗಿಲೀಟು -
ನಗೆಯೊಲುಮೆಯ ನಿರ್ವ್ಯಾಜ ನಮ್ರ

ಗರಿಗೆದರಿ ಉಲಿಯುವ ಚಿಲಿಪಿಲಿನಾದ ತರಂಗಗಳ
ಅನಂತತೆಯಲ್ಲಿ -
'ಏಕತೆಯ' ಹುಡುಕುವ ಶುಭೋದಯ ದಾರ್ಶನಿಕರೇ,
ಎಪ್ಪತ್ತರಲ್ಲೂ ಮುಪ್ಪಡರದಿಪ್ಪತ್ತರ - ಬಿಸಿನೆತ್ತರ ಸರದಾರರೇ -
ನಿತ್ಯ ನಿರಂಜನ ಸಿದ್ಧರೇ
ನಮ್ಮೆಲ್ಲ ಹೃದಯಾಂತರಾಳದ ಮಹಾಬಲರೇ -
"ವಂದನೆ - ನಿಮಗೆ - ಅಭಿವಂದನೆ."

# ಅಳಿಸದ ನೆನಪು

**– ಡಾ॥ ಕೆ. ಶಿವರಾಮ ಕಾರಂತ**

ಈ ಶತಮಾನದ ನಾಲ್ಕು, ಐದನೇ ದಶಕಗಳ ಅವಧಿಯಲ್ಲಿ ನಾನು ಹಲವು ಕಾರಣಗಳಿಂದ ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕಿನಲ್ಲಿ ಅಲೆದಾಡುತ್ತಿದ್ದೆ. ಅಂದಿನ ದಿನಗಳಲ್ಲಿ ಶುದ್ಧ ಮಲೆನಾಡು ಎನಿಸಿದ ಆ ಪ್ರದೇಶದಲ್ಲಿ ಯಕ್ಷಗಾನ ಹಸ್ತ ಪ್ರತಿಗಳ ಅನ್ವೇಷಣೆಗಾಗಿ ಅಲೆದಾಡುತ್ತಿದುದೇ ಹೆಚ್ಚು. ಆಗ ಸ್ವಾಭಾವಿಕವಾಗಿಯೇ, ಸಾಹಿತ್ಯ, ಸಂಸ್ಕೃತಿ ಮೊದಲಾದ ಕ್ಷೇತ್ರಗಳಲ್ಲಿ ಸಾರ್ವಜನಿಕ ಜೀವನದಲ್ಲಿ ಬಲು ಹೆಚ್ಚಿನ ಉತ್ಸಾಹದಿಂದ ಕರ್ತವ್ಯ ನಿರತರಾದ ಶ್ರೀ ಟಿ. ಮಹಾಬಲೇಶ್ವರ ಭಟ್ಟರ ನಿಕಟ ಪರಿಚಯವಾಯಿತು. ತಮ್ಮ ಪ್ರದೇಶದ ಜನರ ನಡುವೆ ಯಾವ ಪ್ರಸಂಗ ಬಂದರೂ ಯಾರನ್ನು ಕೇಳಲಿ ? – ಎಂದರೆ, ಟಿ. ಮಹಾಬಲೇಶ್ವರ ಭಟ್ಟರನ್ನೇ ತೋರಿಸುತ್ತಿದ್ದರು. ಹೀಗಾಗಿ ಸಾಗರ ಸೀಮೆಯನ್ನು ನೆನೆಯುವಾಗಲೆಲ್ಲ ನನಗೆ, ಅವರು ಸಾಧಿಸಿದ ಹೆಸರು, ಜನಪ್ರಿಯತೆ ನೆನೆವಂತೆ ಆಗುತ್ತಿದೆ. ಅವರಿಗೆ ಈಗ ಏಳನೆಯ ದಶಕ ಸಮೀಪಿಸುತ್ತಿದೆ – ಎಂದರೆ, ತಮ್ಮ ತಾರುಣ್ಯದ ಉತ್ಸಾಹವನ್ನು ಉಳಿಸಿಕೊಂಡು, ತಮ್ಮ ಸ್ವದೇಶದ ಜನರ ಅನೇಕ ಅವಶ್ಯಕತೆಗಳಿಗೆ ಮಾರ್ಗದರ್ಶಿಯಾಗಿ ಜನತೆಯ ವಿಶ್ವಾಸ, ಅಭಿಮಾನ, ಮಾರ್ಗದರ್ಶನಗಳಿಗೆ ಗುರಿಯಾಗಿದ್ದಾರೆ.'' ಎಂದಂತೆ.

ಸಾಗರ ಪ್ರದೇಶದ ಜನ ಜೀವನವನ್ನು ನೆನೆಯುವಾಗಲೆಲ್ಲ, ಅಂದಿನ ಯೌವ್ವನಸ್ಥ ಟಿ. ಮಹಾಬಲೇಶ್ವರ ಭಟ್ಟರ ಬಿಂಬ ನನಗೆ ಕಾಣಿಸಿಯೇ ಕಾಣಿಸುತ್ತದೆ. ಮಲೆನಾಡಿನ ಸೀಮೆಯ ಜನರ ಮುಂದೆ, ಹಿರಿಯ ಸಮಾಜ ಸೇವಕರನ್ನು ನೆನೆಯುವಾಗಲೆಲ್ಲ – ಅವರ ಕುಗ್ಗದ, ಕುಂದದ ಉತ್ಸಾಹ ನನ್ನ ಕಣ್ಣೆದುರಿಗೆ ಬರುತ್ತದೆ.

ಸಾಗರ ಸೀಮೆಯ ನನ್ನ ಪರಿಚಯದ ಸ್ಮರಣೀಯ ವ್ಯಕ್ತಿ ಶ್ರೀ ಟಿ. ಮಹಾಬಲೇಶ್ವರ ಭಟ್ಟರು.

# ಮರೆಯಲಾರದ ನೆನಪು

– ಡಾ|| ಪು. ತಿ. ನರಸಿಂಹಾಚಾರ್

ಶಿವಮೊಗ್ಗ ಜಿಲ್ಲೆಯಲ್ಲಿ, ಸಾಗರ ತಾಲೂಕಿನ ಇಕ್ಕೇರಿ ಸೀಮೆಯ ಬೇದೂರು, ಒಂದು ಪುಟ್ಟಹಳ್ಳಿ. ಅಲ್ಲಿಗೆ ಒಮ್ಮೆ ಹೋಗುವ ಅವಕಾಶ ದೊರೆಯಿತು. ಕೆಳದಿ ಶ್ರೀ ಗುಂಡಾಜೋಯಿಸರಲ್ಲಿ ಹೋದಾಗ ಅಲ್ಲಿಗೆ ಹೋದೆ. ನನ್ನೊಡನೆ ಶ್ರೀ ಸಿಟ್ಟೂರು ಶ್ರೀನಿವಾಸರಾಯರು, ಶ್ರೀ ಗುಂಡಾಜೋಯಿಸರು ಇದ್ದರು. ಬಹಳ ದಿನಗಳಿಂದಲೂ ಪರಿಚಿತರಾಗಿರುವ ಶ್ರೀ ಟಿ. ಮಹಾಬಲೇಶ್ವರ ಭಟ್ಟರಲ್ಲಿಗೆ ಹೋದಾಗ ನನಗಾದ ಆನಂದ ಹೇಳತೀರದು. ಅಲ್ಲಿಯ ನಿಸರ್ಗ ಸಂಪತ್ತೇ ನನ್ನನ್ನು ತೃಪ್ತಿಗೊಳಿಸಿತು. ಬಹಳ ದೀರ್ಘಕಾಲದಿಂದ ಪರಿಚಿತರಾದ ಭಟ್ಟರನ್ನು ಅವರ ವಿವಿಧ ಕೆಲಸಕಾರ್ಯಗಳನ್ನ, ಅವರ ಉತ್ಸಾಹವನ್ನ, ತಾಯಿನಾಡಿನ ಸೇವೆಯನ್ನ, ಸಾಹಿತ್ಯದ ರಚನೆಯನ್ನ ನೋಡಿದ್ದೇನೆ. ಪತ್ರಿಕೆಯ ಮೂಲಕ ತಿಳಿದಿದ್ದೇನೆ, ಸಂತೋಷ ಪಟ್ಟಿದ್ದೇನೆ.

ನಾನು ಸಾಗರಕ್ಕೆ ಬಂದಾಗ, ಅವರೊಂದಿಗೆ ಹೋದಾಗ, ಅವರ ಆದರಾತಿಥ್ಯದ ಸುಖವನ್ನು ಅನುಭವಿಸಿ, ಆಗಾಗ ಸಂತೋಷದಿಂದ ನೆನೆಯುತ್ತಿದ್ದೇನೆ. ಶ್ರೀ ಕೆ.ವಿ. ಸುಬ್ಬಣ್ಣ, ಶ್ರೀ ಅಡಿಗರ ಜೊತೆಗೆ ಶ್ರೀ ಭಟ್ಟರ ನೆನಪು ಪದೇ, ಪದೇ ಮನಸ್ಸಿನಲ್ಲಿ ಸುಳಿಯುತ್ತಿದೆ. ಸಾಗರಪ್ರಾಂತ್ಯದಲ್ಲಿ ಸಾಹಿತ್ಯ, ಸಮಾಜದ ಸೇವೆಯನ್ನು ಯಾವುದೇ ಪ್ರತಿಫಲಾಪೇಕ್ಷೆಯಿಲ್ಲದೆ, ಬಹಳ ದೀರ್ಘಕಾಲದಿಂದಲೂ ಮಾಡುತ್ತಾ ಬಂದು, ಆ ಭಾಗದಲ್ಲಿ ಒಳ್ಳೆಯ ಹೆಸರನ್ನು ಗಳಿಸಿದ್ದಾರೆ. ಅನೇಕ ನನ್ನ ಮಿತ್ರರು ಶ್ರೀ ಮಹಾಬಲೇಶ್ವರ ಭಟ್ಟರ ಸಾಧನೆ ಕುರಿತು ಮಾತನಾಡುವುದನ್ನು ಕೇಳಿದ್ದೇನೆ. ಈಗ ಅವರಿಗೆ ೭೦ ವರ್ಷ ಎಂದರೆ ನಂಬಲು ಸಾಧ್ಯವಾಗುತ್ತಿಲ್ಲವಲ್ಲ ! ದೇವರು ಚೆನ್ನಾಗಿ ಇಡಲಿ. ಅವರಿಗೆ ನನ್ನ ಹಾರ್ದವಾದ ಶುಭಾಶಯಗಳು, ಶ್ರೇಯಸ್ಸನ್ನು ಕೋರುತ್ತೇನೆ.

ಜೀವನದ ಉದ್ದಕ್ಕೂ ಒಳ್ಳೆಯದಾಗಲಿ ಎಂದು ಹಾರೈಸುವೆ.

# ಅಚ್ಚುಮೆಚ್ಚಿನ ಆತ್ಮೀಯ

– ಗೊ.ರು. ಚನ್ನಬಸಪ್ಪ

ಶ್ರೀ ಟಿ. ಮಹಾಬಲೇಶ್ವರ ಭಟ್ಟರೊಡನೆ ನನಗಿರುವ ಪರಿಚಯ ಸುಮಾರು ನಲವತ್ತು ವರ್ಷಗಳದ್ದೆಂದು ಕಾಣುತ್ತದೆ. ಸಾಗರದಲ್ಲೊಮ್ಮೆ ಗೋಪಾಲಕೃಷ್ಣ ಅಡಿಗರ ನೇತೃತ್ವದಲ್ಲಿ ನಡೆದ ಕರ್ನಾಟಕ ಯುವಜನ ಪರಿಷತ್ತಿನ ಸಂದರ್ಭ. ಗೆಳೆಯ ಕೋಣಂದೂರು ಲಿಂಗಪ್ಪ ಅವರು ಆಗ ಕ್ರಿಯಾಶಾಲಿ ಪಾತ್ರವಹಿಸಿದ್ದರು. ಆ ಸಮಾವೇಶದಲ್ಲಿ ಏನೋ ಗದ್ದಲವಾದ ನೆನಪು. ಚರ್ಚೆಯಲ್ಲಿ ನಡೆದ ಮಾತುಕತೆಗಳ ನೆನಪಿಲ್ಲ. ಆದರೂ ಅಡಿಗರ ನಿಲುವನ್ನು ವಿರೋಧಿಸಿ ಚರ್ಚೆ ಆದಂತೆ ನೆರಳುನೆನಪು. ಸಮಾವೇಶದ ವ್ಯವಸ್ಥೆಯಲ್ಲಿ ಮಹಾಬಲೇಶ್ವರ ಭಟ್ಟರು ಸ್ವಯಂ ಸೇವಕರಂತೆ ಓಡಾಡುತ್ತಿದ್ದ ದೃಶ್ಯ ಮಾತ್ರ, ಇನ್ನೂ ಕಣ್ಣಿಗೆ ಕಟ್ಟಿದಂತಿದೆ.

ಮಹಾಬಲೇಶ್ವರ ಭಟ್ಟರು ಮಲೆನಾಡು ನೆಲದ ಸಂಸ್ಕೃತಿಯ ಪ್ರತೀಕವಾಗಿದ್ದಾರೆಂದರೆ ಅವರೊಡನೆ ನನಗಿರುವ ಹಳೆಯ ಪರಿಚಯದ ಪರಿಣಾಮವೇನಲ್ಲ. ಅವರನ್ನು, ಅವರ ಚಟುವಟಿಕೆಗಳನ್ನು ಗಮನಿಸುತ್ತ ಬಂದಿರುವ ಯಾರಿಗಾದರೂ ಇದು ಅತಿಶಯೋಕ್ತಿಯಲ್ಲ ಎಂದೆನಿಸದಿರದು. ರಾಜಕೀಯದ ಸಂಬಂಧವಿಟ್ಟುಕೊಂಡವರಂತೆ ಕಂಡರೂ ಅದರಿಂದ ನಿರ್ಲಿಪ್ತರಾಗಿರುವ ವ್ಯಕ್ತಿ. ಅವರನ್ನು ಹೆಚ್ಚಾಗಿ ಗುರುತಿಸಿರುವುದು ಸಾಂಸ್ಕೃತಿಕ ವ್ಯಕ್ತಿಯಾಗಿಯೇ. ಮಲೆನಾಡಿನ (ಶಿವಮೊಗ್ಗ ಜಿಲ್ಲೆಯ) ಯಾವುದೇ ಸಾಹಿತ್ಯಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಮಹಾಬಲೇಶ್ವರ ಭಟ್ಟರ ಪಾತ್ರವಿಲ್ಲದೆ ಇರಲು ಸಾಧ್ಯವಿಲ್ಲ. ಅವರು ಸಂಸ್ಕೃತಿ ಪರ ಎಲ್ಲ ಸಂಘಟನೆಗಳಲ್ಲೂ ಹಾಸು-ಹೊಕ್ಕು.

ನಾನು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷನಾಗಿದ್ದಾಗ ಅವರು ಸಾಗರ ತಾಲೂಕು ಘಟಕದ ಅಧ್ಯಕ್ಷರಾಗಿದ್ದರು. ರಾಜ್ಯದ ಅತ್ಯಂತ ಕ್ರಿಯಾತ್ಮಕ ತಾಲ್ಲೂಕು ಸಾಗರ ಘಟಕ ಎದ್ದು ಕಾಣುವಂತೆ ಮಾಡಿದ ಶ್ರದ್ಧಾಳು ಶ್ರೀ ಮಹಾಬಲೇಶ್ವರ ಭಟ್ಟ ಅವರು. ಅವರು ಎಲ್ಲಾ ಕೆಲಸಗಳನ್ನೂ ಕೈಗೆತ್ತಿಕೊಳ್ಳುವುದಿಲ್ಲ. ಆಯ್ಕೆಗೆ ಅವರ ಆದ್ಯತೆ. ಆರಿಸಿಕೊಂಡ ಕೆಲಸವನ್ನು ಅಚ್ಚುಕಟ್ಟಾಗಿ ನಿರ್ವಹಿಸುವ ಅನುಭವದ ಕೈ ಅವರದು. ಒಂದು ಸಾಮಾನ್ಯ ದತ್ತಿ ಉಪನ್ಯಾಸದ ಕಾರ್ಯಕ್ರಮವಾದರೂ ಅದು

ಶಿಸ್ತು ಮತ್ತು ಪ್ರಭಾವ ಪೂರ್ಣವಾಗಿ ನಡೆಯಬೇಕೆನ್ನುವವರು. ಕನ್ನಡ ಸಾಹಿತ್ಯ ಕೃತಿಗಳ ಮಾರಾಟ ವ್ಯವಸ್ಥೆಯಲ್ಲಿ ಅವರೊಂದು ವಿಶಿಷ್ಟ ದಾಖಲೆಯನ್ನೇ ಸ್ಥಾಪಿಸಿದ್ದಾರೆ. ಆ ಮೂಲಕ ಕನ್ನಡ ಸಾಹಿತ್ಯ ಪ್ರಸಾರದಲ್ಲಿ ಮೌಲಿಕ ಸೇವೆ ಸಲ್ಲಿಸಿದ್ದಾರೆ.

ಶ್ರೀ ಮಹಾಬಲೇಶ್ವರ ಭಟ್ಟರು ತುಂಬ ಸಜ್ಜನಿಕೆಯ ವ್ಯಕ್ತಿ. ಪ್ರಚಾರಕ್ಕಿಂತ ವಿಚಾರಕ್ಕೆ ಮಹತ್ವಕೊಡುವ ಪ್ರವೃತ್ತಿ. ಅವರ ಎಪ್ಪತ್ತನೆಯ ವರ್ಷದಲ್ಲಿ ಅಭಿನಂದನ ಗ್ರಂಥವೊಂದನ್ನು ಹೊರತರುತ್ತಿರುವುದು ತುಂಬ ಸೂಕ್ತವಿದೆ. ಈ ಸಂದರ್ಭದಲ್ಲಿ ಅವರಿಗೆ ನನ್ನ ಹಾರ್ದಿಕ ಅಭಿನಂದನೆಗಳು.

# ಅಪರೂಪದ ವ್ಯಕ್ತಿ

**- ಕೆ. ಶಾಮರಾವ್**

ಸಾಗರದ ಶ್ರೀ ಟಿ. ಮಹಾಬಲೇಶ್ವರ ಭಟ್ಟರು ಒರ್ವ ಅಪರೂಪದ ವ್ಯಕ್ತಿ. ವಿದ್ಯೆ, ವಿನಯ, ಶಿಸ್ತು, ಅಚ್ಚುಕಟ್ಟುತನ, ಸೌಜನ್ಯ ಮತ್ತುಸಹೃದಯಗಳಿಗೆ ಹೆಸರಾದ ವ್ಯಕ್ತಿ. ನಾನು ಅವರನ್ನು ಅನೇಕ ವರ್ಷಗಳಿಂದ ಬಲ್ಲೆ. ೧೯೫೦ರ ದಶಕದಲ್ಲಿ ನಾನು ನನ್ನ 'ಸಂಜಯ' ವಾರಪತ್ರಿಕೆಯ ಸಲುವಾಗಿ ಸಾಗರಕ್ಕೆ ಹೋಗುತ್ತಿದ್ದಾಗ ಅವರ ಪರಿಚಯವಾಯಿತು. ಇತ್ತೀಚಿಗೆ ಅವರು ನಮ್ಮ ಪತ್ರಿಕೆಯ ಸುದ್ದಿಗಾರರು ಮತ್ತು ಅಂಕಣಕಾರರಾದ ಮೇಲಂತೂ ಅವರು ನಮ್ಮ ಪತ್ರಿಕೆಯ ಬಳಗದವರಲ್ಲಿ ಒಬ್ಬರಾದರು. ಅವರು ಬರೆಯುತ್ತಿದ್ದ ''ಬೇವು - ಬೆಲ್ಲ'' ಎಂಬ ಅಂಕಣ ತುಂಬಾ ಜನಪ್ರಿಯವಾಗಿದೆ.

ಶ್ರೀ ಮಹಾಬಲೇಶ್ವರ ಭಟ್ಟರ ಇನ್ನೊಂದು ವಿಶೇಷ ಸ್ವಭಾವವೆಂದರೆ, ಎಲ್ಲರನ್ನೂ ನಗುನಗುತ್ತಾ ಸ್ವಾಗತಿಸುವುದು, ಮಾತನಾಡಿಸುವುದು, ಅವರ ಯೋಗಕ್ಷೇಮವನ್ನು ವಿಚಾರಿಸುವುದು ಹಾಗೂ ಅವರ ಸಮಸ್ಯೆಗಳಿಗೆ ಸೂಕ್ತ ಸಮಾಧಾನವನ್ನು ತಮ್ಮದೇ ಆದ ರೀತಿಯಲ್ಲಿ ಹೇಳುವುದು, ಈ ಸ್ವಭಾವ ಎಲ್ಲರನ್ನೂ ಬೆರಗುಗೊಳಿಸುತ್ತದೆ.

ಅಡಿಕೆ ವ್ಯವಸಾಯ ಶ್ರೀ ಭಟ್ಟರ ಮುಖ್ಯ ಉದ್ಯೋಗ. ಈ ಕ್ಷೇತ್ರದಲ್ಲಿ ಅವರು ಅನೇಕ ಅಪೂರ್ವ ಸಾಧನೆಗಳನ್ನು ಮಾಡಿದ್ದಾರೆ. ಸಾಗರಕ್ಕೆ ಕೆಲವೇ ಮೈಲು ದೂರದಲ್ಲಿರುವ ಅವರ ತೋಟಕ್ಕೆಒಮ್ಮೆ ಹೋಗಿ ಬಂದರೆ ಶ್ರೀ ಭಟ್ಟರ ವ್ಯಕ್ತಿತ್ವದ ಚಿತ್ರ ಕಣ್ಣಿಗೆ ಕಟ್ಟಿದಂತಿರುತ್ತದೆ. ಇಷ್ಟೇ ಅಲ್ಲ, ಅಡಿಕೆ ಬೆಳೆಗಾರರ ಮತ್ತು ಮಾರಾಟಗಾರರ ಸಮಸ್ಯೆಗಳನ್ನು ಶ್ರೀ ಭಟ್ಟರು ಆಳವಾಗಿ ಅಭ್ಯಾಸ ಮಾಡಿ,ಮಲೆನಾಡಿನ ಅಡಿಕೆ ಬೆಳೆಗಾರರ ಹೃದಯದಲ್ಲಿ ಒಂದು ಶಾಶ್ವತ ಸ್ಥಾನಗಳಿಸಿದ್ದಾರೆ. ಶಿವಮೊಗ್ಗ ಮಲೆನಾಡು ಅಡಿಕೆ ಮಾರಾಟದ ಸಹಕಾರ ಸಂಘದ ನಿರ್ದೇಶಕರಾಗಿ, ಉಪಾಧ್ಯಕ್ಷರಾಗಿ ಹಲವು ವರ್ಷ ಸೇವೆ ಸಲ್ಲಿಸಿದ್ದಾರೆ.

ಶ್ರೀ ಭಟ್ಟರು ವ್ಯವಸಾಯಗಾರರಷ್ಟೇ ಅಲ್ಲ, ರಾಜಕೀಯ ಕ್ಷೇತ್ರದಲ್ಲೂ ಸಾಕಷ್ಟು ಸೇವೆ ಸಲ್ಲಿಸಿದ್ದಾರೆ. ಸಾಹಿತ್ಯಕ್ಷೇತ್ರದಲ್ಲಿಯೂ ಅವರ ಸೇವೆ

ಅವಿಸ್ಮರಣೀಯವಾದುದು. ಅನೇಕ ಕಥಾ ಸಂಕಲನಗಳನ್ನು, ಕವನ ಸಂಕಲನಗಳನ್ನು ಮತ್ತು ಕಾದಂಬರಿಗಳನ್ನು ಪ್ರಕಟಿಸಿ ಸಾಹಿತ್ಯ ಕ್ಷೇತ್ರದಲ್ಲಿ ಚಿರಪರಿಚಿತರಾಗಿದ್ದಾರೆ. ಶಿವಮೊಗ್ಗ ಜಿಲ್ಲಾ ಬರಹಗಾರರ ಮಂಡಲಿಯ ಅಧ್ಯಕ್ಷರಾಗಿ, ಕನ್ನಡಸಂಘದ ಅಧ್ಯಕ್ಷರಾಗಿ, ಶಿವಮೊಗ್ಗದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಸ್ವಾಗತ ಸಮಿತಿಯ ಉಪಾಧ್ಯಕ್ಷರಾಗಿ ಶ್ರೀ ಭಟ್ಟರು ಸಲ್ಲಿಸಿರುವ ಸೇವೆ ಪ್ರಶಂಸನೀಯವಾದುದು. ಕುಮಾರ ವ್ಯಾಸನಷ್ಟೇ ಪ್ರಸಿದ್ಧಿಯಾಗಿದ್ದ 'ಪರಮ ದೇವ' ಎಂಬ ಕವಿಯ 'ತುರಂಗ ಭಾರತ'ವನ್ನು ಇತ್ತೀಚಿಗೆ ಬೆಳಕಿಗೆ ತಂದು, ಅದನ್ನು ಕನ್ನಡಿಗರ ಮುಂದೆ ಇಟ್ಟಿರುವುದು ಶ್ರೀ ಭಟ್ಟರ ಹಲವು ಸಾಹಿತ್ಯ ಸಾಧನೆಗಳಲ್ಲಿ ಅತೀ ಮುಖ್ಯವಾದುದು.

ಕೆಲವು ವರ್ಷಗಳ ಹಿಂದೆ ಶ್ರೀ ಭಟ್ಟರು ರಾಜಕೀಯದಲ್ಲಿಯೂ ಇದ್ದರು. ಕಾಂಗ್ರೆಸ್ ಪಕ್ಷದ ಸಕ್ರಿಯ ಸದಸ್ಯರಾಗಿ ಸುಮಾರು ೪೦ ವರ್ಷಗಳ ಕಾಲ ದುಡಿದರು. ಆದರೆ ಇತ್ತೀಚಿನ ರಾಜಕೀಯದಿಂದ ಬೇಸತ್ತು, ದೂರಸರಿದು, ಕೇವಲ ಸಮಾಜ ಸೇವೆಯಲ್ಲಿ ತಮ್ಮ ಸಮಯ ಕಳೆಯುತ್ತಿದ್ದಾರೆ.

ಶ್ರೀ ಮಹಾಬಲೇಶ್ವರ ಭಟ್ಟರಲ್ಲಿ ಎದ್ದು ಕಾಣುವುದು ಅವರ ನಗೆಮುಖ, ಸೌಜನ್ಯ, ಸಹೃದಯತೆ ಮತ್ತು ಮಲೆನಾಡಿನ ಜನರ ವೈಶಿಷ್ಟ್ಯವೆನಿಸಿದ ಅತಿಥಿ ಸತ್ಕಾರ ಸ್ವಭಾವ. ಇವುಗಳ ಪರಿಚಯವಾದವರು ಶ್ರೀ ಭಟ್ಟರನ್ನು ಮುಕ್ತ ಕಂಠದಿಂದ ಹೊಗಳುವುದು, ಅವರ ಸ್ನೇಹವನ್ನು ಸದಾ ಅಪೇಕ್ಷಿಸುವುದು ಸ್ವಾಭಾವಿಕ.

ಶ್ರೀ ಮಹಾಬಲೇಶ್ವರ ಭಟ್ಟರಿಗೆ ೭೦ ವರ್ಷಗಳು ತುಂಬಿದ್ದು, ಈ ಸಮಯದಲ್ಲಿ ಅವರ ಅಭಿಮಾನಿಗಳು ಒಂದು ಅಭಿನಂದನ ಗ್ರಂಥ ತರಲು ನಿಶ್ಚಯಿಸಿರುವುದು ನನಗೆ ತುಂಬಾ ಸಂತೋಷವನ್ನುಂಟುಮಾಡಿದೆ. ಭಗವಂತನು ಶ್ರೀ ಭಟ್ಟರಿಗೆ ಇನ್ನೂ ಹೆಚ್ಚಿನ ಆಯುಸ್ಸು, ಆರೋಗ್ಯಗಳನ್ನು ದಯಪಾಲಿಸಲಿ, ಅವರು ಎಲ್ಲಾ ಕ್ಷೇತ್ರಗಳಲ್ಲಿ ಇನ್ನೂ ಹೆಚ್ಚಿನ ಸೇವೆಸಲ್ಲಿಸಲು ಅವಕಾಶವಾಗಲೆಂದು ನಾನು ಹಾರೈಸುತ್ತೇನೆ.

# ಯಶಸ್ಸಿನಿಂದ ಯಶಸ್ಸಿಗೆ

**– ಚದುರಂಗ**

ಶ್ರೀ ಮಹಾಬಲೇಶ್ವರ ಭಟ್ಟರನ್ನು ನಾನು ನಾಲ್ಕೈದು ಸಲ ಭೇಟಿಯಾಗಿರಬಹುದು. ಒಮ್ಮೆ ಕುವೆಂಪು ಸಾಕ್ಷ್ಯಚಿತ್ರ ತೆಗೆಯುವ ಪ್ರಯುಕ್ತ ಸಾಗರಕ್ಕೆ ಬಂದಿದ್ದಾಗ ಕುವೆಂಪು ಸಾಗರದಲ್ಲಿ ಭಾಷಣ ಮಾಡುವುದಿತ್ತು. ಅವರನ್ನು ಹೆಚ್ಚು ಹತ್ತಿರದಿಂದ ಕಾಣುವಂತಾಯಿತು. ಅವರ ವ್ಯಕ್ತಿತ್ವದ ಘನತೆ ಗಾಂಭೀರ್ಯಗಳು ನನಗೆ ಪ್ರಿಯವಾದವು. ಅವರದು ಸಮೃದ್ಧ ಸಾಹಿತ್ಯ ಬದುಕು. ಅನೇಕ ಕತೆ ಕಾದಂಬರಿಗಳನ್ನು ಬರೆದು ಕನ್ನಡ ಸಾಹಿತ್ಯವನ್ನು ಅವರು ಶ್ರೀಮಂತಗೊಳಿಸಿದ್ದಾರೆ. ಅವರ – 'ಗುಲಾಬಿ' ಕಥಾಸಂಕಲನ, 'ಹೊಸೂರಿನ ಹಲವರು' ಕಾದಂಬರಿ 'ಹೂಮಾಲೆ' ಕವನ ಸಂಕಲನ ಇತ್ಯಾದಿ ಹಲವಾರು ಕೃತಿಗಳು ವಾಸ್ತವಿಕತೆ ಮತ್ತು ಸಂವೇದನಾ ಶೀಲಗಳಿಂದ ಕನ್ನಡ ರಸಿಕರ ಹಾಗೂ ವಿಮರ್ಶಕರ ಮೆಚ್ಚುಗೆ ಗಳಿಸಿವೆ.

ಶ್ರೀ ಭಟ್ಟರು ಕಥೆಗಾರರಾಗಿ, ಕಾದಂಬರಿಕಾರರಾಗಿ ಮಾತ್ರವಲ್ಲದೆ 'ಸಾಹಿತ್ಯ ಶಿಲ್ಪಿಗಳು' ಎನ್ನುವ ಕೃತಿಯನ್ನೂ ರಚಿಸಿದ್ದಾರೆ. ಇವರ ಸಾಧನೆ ಸಾಹಿತ್ಯ ಸೇವೆಯಲ್ಲೇ ನಿಂತಿಲ್ಲ, ಅವರ ಉತ್ಸಾಹಿ ಚೇತನ, ಸಾಮಾಜಿಕ ಹಾಗೂ ರಾಜಕೀಯ ಕ್ಷೇತ್ರಗಳಲ್ಲಿಯೂ ಕೆಲಸಮಾಡಿದೆ. ಇಂದೂ ಸಹ ಮಾಡುತ್ತಿದೆ. ಪುರಸಭಾ ಸದಸ್ಯರಾಗಿ ಸತತ ಹನ್ನೆರಡು ವರ್ಷಗಳ ಸಾರ್ಥಕ ಸೇವೆ. ನಾನು ಸಾಗರಕ್ಕೆ ಬಂದಿದ್ದಾಗ ಅವರ ಕಾರ್ಯಕ್ಷಮತೆ ಹಾಗೂ ದಕ್ಷತೆಯ ಬಗೆಗೆ ಅಲ್ಲಿನ ಕೆಲವರು ಪ್ರಮುಖರು ಶ್ರೀ ಭಟ್ಟರ ಗುಣಗಾನಮಾಡಿದ್ದನ್ನು ಇಂದಿಗೂ ನಾನು ಮರೆತಿಲ್ಲ. ರಾಜ್ಯ ಮಟ್ಟದ 'ಶರಾವತಿ ನೀರು ಮುಳುಗಡೆ ಪುನರ್ ವ್ಯವಸ್ಥೆ' ಸಮಿತಿಯಲ್ಲಿ ರಾಜ್ಯ ಸರ್ಕಾರದ ಪ್ರತಿನಿಧಿಯಾಗಿ ಆರು ವರ್ಷಗಳ ಕಾಲ ಸೇವೆ ಸಲ್ಲಿಸಿದ್ದಾರೆ. ಕನ್ನಡಸಂಘವನ್ನೂ ಇವರು ಮರೆತಿಲ್ಲ. ಅಲ್ಲೂ ಸಹ ಎಂಟು ವರ್ಷ ಕೆಲಸ ಮಾಡಿ ಕನ್ನಡ ಸಂಘ ಸಾಗರದಲ್ಲಿ ನೆಲೆ ನಿಲ್ಲಲು ಸಹಾಯ ಮಾಡಿದ್ದಾರೆ. ಇಷ್ಟೆಲ್ಲಾ ಕೆಲಸಗಳ ಜತೆಗೆ ರಾಜಕೀಯ ಕ್ಷೇತ್ರದಲ್ಲೂ ಹಲವಾರು ವರ್ಷಗಳಿಂದ ದುಡಿದವರು.

ಹೀಗೆ ಶ್ರೇಷ್ಠರೂ, ದಕ್ಷರೂ, ಪ್ರಾಮಾಣಿಕರೂ ಆದ ಶ್ರೀ ಮಹಾಬಲೇಶ್ವರ ಭಟ್ಟರಿಗೆ ಎಪ್ಪತ್ತು ವರ್ಷದ ಈ ಶುಭಸಂದರ್ಭದಲ್ಲಿ ಶ್ರೀಯುತರು ವಿವಿಧ ಕ್ಷೇತ್ರಗಳಲ್ಲಿ

ಸಾಧಿಸಿರುವ ಹಾಗೂ ಸಾಧಿಸುತ್ತಿರುವ ಸ್ತುತ್ಯ ಕಾರ್ಯಗಳನ್ನು ನೆನೆದು ತಾವು 'ಅಭಿನಂದನ ಗ್ರಂಥ' ತರುತ್ತಿರುವುದು ಹೆಮ್ಮೆಯ ಹಾಗೂ ಸಂತೋಷದ ಸಂಗತಿ.

ಶ್ರೀ ಮಹಾಬಲೇಶ್ವರ ಭಟ್ಟರ ಜೀವನ ಹೀಗೇ ಯಶಸ್ಸಿನಿಂದ ಯಶಸ್ಸಿಗೆ ಸಾಗಲಿ, ಎಂದು ಹಾರೈಸುತ್ತೇನೆ.

# ನಾನು ಕಂಡ ಸಜ್ಜನ

– ಪ್ರೊ|| ಎಲ್. ಎಸ್. ಶೇಷಗಿರಿರಾವ್

ಮೃದು ನುಡಿಯ–ಮೃದು ನಡೆಯ, ಆದರೆ ಅಷ್ಟೇ ಗಟ್ಟಿ ವ್ಯಕ್ತಿತ್ವದ ಶ್ರೀ ಟಿ. ಮಹಾಬಲೇಶ್ವರಭಟ್ಟರ ಪರಿಚಯವೇ ಒಂದು ಸಂತೋಷ. ಎಷ್ಟು ಒರಟಾಗಿ ಅಭಿಪ್ರಾಯವನ್ನು ಹೇಳಿದರೆ ಅಷ್ಟು ಅದು ಸತ್ಯವಾಗುತ್ತದೆ, ಎನ್ನುವ ಭಾವನೆಯು ಹೆಚ್ಚುತ್ತಿರುವ ಈ ಕಾಲದಲ್ಲಿ, ಒರಟುತನವೇ ಒಂದು ಮೌಲ್ಯವಾಗುತ್ತಿರುವ ದಿನಗಳಲ್ಲಿ, ಜಾಹಿರಾತಿನ ಈ ಯುಗದಲ್ಲಿ, ಸೌಜನ್ಯದಿಂದ, ಸದ್ದಿಲ್ಲದ ತಮ್ಮ ಗಟ್ಟಿ ಕೆಲಸದಿಂದ, ತಾವಿದ್ದ ಕಡೆ ಒಂದು ಸ್ನೇಹಮಯವಾದ, ಕ್ರಿಯಾಶೀಲತೆಯ ವಾತಾವರಣವನ್ನು ನಿರ್ಮಿಸುತ್ತಾರೆ. ಶ್ರೀ ಮಹಾಬಲೇಶ್ವರ ಭಟ್ಟರು. ಸುಮಾರು ಹದಿನೆಂಟನೆಯ ವಯಸ್ಸಿಗೆ ಅಖಿಲ ಭಾರತ ಕಾಂಗ್ರೆಸ್ ಪಕ್ಷದ ಸದಸ್ಯರಾದ ಶ್ರೀ ಭಟ್ಟರು, ನಲವತ್ತೂರು ವರ್ಷಗಳ ಕಾಲ ರಾಜಕೀಯದಲ್ಲಿ ಪಕ್ಷಾಂತರವೇ ಒಂದು ವೃತ್ತಿಯಾದ ದಿನಗಳಲ್ಲಿಯೂ, ಒಂದೇ ಪಕ್ಷಕ್ಕೆ ನಿಷ್ಠರಾಗಿ ಉಳಿದರು. ನಲವತ್ತೂರು ವರ್ಷಗಳ ಕಾಲ ಅವರ ರಾಜಕೀಯ ಕೆಲಸವು ರಾಡಿ ಇಲ್ಲದ ತಿಳಿ ನೀರಿನ ಹೊಳೆಯಾಗಿ ಹರಿಯಿತು ಎನ್ನುವುದು ನಮಗೆಲ್ಲ ಅವರಲ್ಲಿ ಗೌರವವನ್ನು ಮೂಡಿಸುವ ಸಂಗತಿ.

ಪುರಸಭೆಯ ಸದಸ್ಯರು, ತಾಲ್ಲೂಕು ಮತ್ತು ಜಿಲ್ಲಾ ಕಾಂಗ್ರೆಸ್ ಸಮಿತಿಗಳಲ್ಲಿ ಹಲವು ಹಂತಗಳಲ್ಲಿ ಕಾರ್ಯ ನಿರ್ವಹಣೆ, ತಾಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘದ ಅಧ್ಯಕ್ಷರು ಕೃಷಿ ಭೂ ಅಭಿವೃದ್ಧಿ ಬ್ಯಾಂಕಿನ ಅಧ್ಯಕ್ಷರು, ಮಲೆನಾಡು ಅಭಿವೃದ್ಧಿ ಪ್ರತಿಷ್ಠಾನದಲ್ಲಿ ೧೬ ವರ್ಷಗಳ ಸದಸ್ಯರು, ಪತ್ರಕರ್ತರು, ಪ್ರಕಾಶಕರು, ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು, ಅಂಕಣಕಾರ, ಕವಿ, ಕಾದಂಬರಿಕಾರ, ಗದ್ಯ ಬರಹಗಾರ – ಒಬ್ಬ ವ್ಯಕ್ತಿಯು ಇಷ್ಟೊಂದು ಕ್ಷೇತ್ರಗಳಲ್ಲಿ ಕೆಲಸಮಾಡಿದ್ದಾರೆ, ಜೊತೆಗೆ ಜನರ ಪ್ರೀತಿಯನ್ನೂ, ಗೌರವವನ್ನೂ ಉಳಿಸಿಕೊಂಡಿದ್ದಾರೆ – ಎಂದಾಗ ಮಹಾಬಲೇಶ್ವರ ಭಟ್ಟರ ವ್ಯಕ್ತಿತ್ವದ ಶ್ರೀಮಂತಿಕೆ ಸಾಮರ್ಥ್ಯಗಳಿಗೆ ಕನ್ನಡಿಯನ್ನು ಹಿಡಿದಂತೆ. ಸಾಹಿತ್ಯದಿಂದ ಸಾರ್ವಜನಿಕ ಜೀವನ, ಸಾರ್ವಜನಿಕ ಜೀವನದಿಂದ, ಸಾಹಿತ್ಯ, ಪರಸ್ಪರ ಪೋಷಣೆಯನ್ನು ಪಡೆಯುವುದನ್ನು ಶ್ರೀ ಭಟ್ಟರ ಬದುಕಿನಲ್ಲಿ ಕಾಣಬಹುದು.

ಶ್ರೀ ಭಟ್ಟರದು ಸೃಜನಶೀಲ 'ಕ್ರಿಯೇಟೀವ್' ಸಾಮರ್ಥ್ಯ. ಕವನ ಕಾದಂಬರಿ ಮೊದಲಾದ ಸಾಹಿತ್ಯ ಪ್ರಕಾರಗಳಲ್ಲಿ ಮಾತ್ರವಲ್ಲ ಸಂಸ್ಥೆಗಳನ್ನು ಕಟ್ಟಿ ಬೆಳೆಸುವುದರಲ್ಲಿಯೂ ಸಾರ್ಥಕವಾಗಿ ತೊಡಗಿಕೊಂಡವರು ಅವರು. ಶ್ರೀ ಭಟ್ಟರನ್ನು ಬೆಂಗಳೂರಲ್ಲಿ ಕಂಡಿದ್ದೇನು. ಅವರೊಡನೆ ಹಲವಾರು ವಿಷಯಗಳನ್ನು ಕುರಿತು ಮಾತನಾಡಿದ್ದೇನೆ. ಸಾಗರದಲ್ಲಿ ಅವರನ್ನು ಕಂಡಿದ್ದೇನೆ. ಅವರು ವ್ಯವಸ್ಥೆ ಮಾಡಿದ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದೇನೆ. ಅವರ ಮಾರ್ಗದರ್ಶನದಲ್ಲಿ ಪ್ರಕಟವಾದ ಪುಸ್ತಕಗಳನ್ನು ನೋಡಿದ್ದೇನೆ. ಕಾರ್ಯದಕ್ಷತೆಯೊಡನೆ 'ಟೀಮ್ ಸ್ಪಿರಿಟ್' ಹತ್ತು ಜನರೊಂದಿಗೆ ಹೊಂದಿಕೊಂಡು ಕೆಲಸ ಮಾಡಬಲ್ಲ ಮನೋಧರ್ಮ ಅವರಿಗಿದೆ. ಇಂತಹ ಕೆಲಸಕ್ಕೆ ಪೂರ್ಣ ಯೋಜನೆಯ 'ವಿಷನ್' ಬೇಕು, ಕಾರ್ಯವಿಧಾನದ ಸ್ಪಷ್ಟ ಕಲ್ಪನೆ ಬೇಕು, ಎಲ್ಲಕ್ಕಿಂತ ಮುಖ್ಯವಾಗಿ ತಾಳ್ಮೆ ಬೇಕು. ಅದು ಇವರಲ್ಲಿದೆ.

ಶ್ರೀ ಭಟ್ಟರ ಬರಹಗಳಲ್ಲಿ ಜನ ಜೀವನದ ಪರಿಚಯವೂ ಇದೆ. ವ್ಯಕ್ತಿಗಳ ಜೀವನ ಚಿತ್ರಗಳೂ ಇವೆ. ರಾಜಕೀಯ ಪಕ್ಷದ ಸಕ್ರಿಯ ಸದಸ್ಯರಾಗಿ ಮಾತ್ರವಲ್ಲದೆ ಪುರಸಭೆಯ ಸದಸ್ಯರಾಗಿ, ನೀರು ಮುಳುಗಡೆ ಪುನರ್ ವಸತಿಯ ಸಮಿತಿಯ ಸದಸ್ಯರಾಗಿ, ಮಲೆನಾಡು ಅಭಿವೃದ್ಧಿ ಪ್ರತಿಷ್ಠಾನದ ಸದಸ್ಯರು, ಉಪಾಧ್ಯಕ್ಷರಾಗಿ, ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘದ ಅಧ್ಯಕ್ಷರಾಗಿ ಕೆಲಸ ಮಾಡಿರುವ ಶ್ರೀ ಭಟ್ಟರಿಗೆ ಸಾಮಾನ್ಯ ಜನ ಜೀವನದ ನಿಕಟ ಸಂಪರ್ಕವಿದೆ, ನಾಡಿನ ಮುನ್ನಡೆಯಲ್ಲಿ ಬರಿಯ ಹಂಬಲವಷ್ಟೇ ಅಲ್ಲದೆ ಕೃಷಿ, ಕೈಗಾರಿಕೆ, ಮುಂತಾದ ಕ್ಷೇತ್ರಗಳಲ್ಲಿ ಆಗಬೇಕಾದ ಕ್ರಿಯಾತ್ಮಕ ಕೆಲಸದ ಅನುಭವವಿದೆ. ಅಪೂರ್ವ ಶ್ರೀಮಂತ ವ್ಯಕ್ತಿತ್ವ ಶ್ರೀ ಭಟ್ಟರದು.

ಸುಮಾರು ಮೂವತ್ತು ವರ್ಷಗಳ ಕೆಳಗೆ 'ರಾಜಾಜಿ' ಒಂದು ಮಾತನ್ನು ಹೇಳಿದರು. ''ಇಂದು ಸಾರ್ವಜನಿಕ ಜೀವನದಲ್ಲಿರುವ ಯಾವುದೇ ವ್ಯಕ್ತಿಗೆ ನಾವು ಸಲ್ಲಿಸಬಹುದಾದ ಅತೀ ಹೆಚ್ಚಿನ ಪ್ರಶಂಸೆ ಎಂದರೆ 'ಅವನೊಬ್ಬ ಸಜ್ಜನ ಎನ್ನುವುದು.' ರಾಜಾಜಿ ಆ ಮಾತನ್ನು ಹೇಳಿದ ನಂತರ ಈ ಮೂವತ್ತು ವರ್ಷಗಳಲ್ಲಿ ಸಾರ್ವಜನಿಕ ಜೀವನವು ಅಸಹ್ಯ ಬರಿಸುವಷ್ಟು ಕೊಳಕಾಗಿದೆ. ಇಂತಹ ಕಾಲದಲ್ಲಿಯೂ ಶ್ರೀ ಮಹಾಬಲೇಶ್ವರ ಭಟ್ಟರು ಒಳ್ಳೆಯ ಸಾಹಿತಿ, ಸಾರ್ವಜನಿಕ ಜೀವನದ ಒಳ್ಳೆಯ ಕೆಲಸಗಾರರು, ಸಜ್ಜನರು, ಎಂದು ನಾವು ಹೇಳಬಹುದು, ಎನ್ನುವುದು ಅಭಿಮಾನದ ಸಂಗತಿ.

ಎಪ್ಪತ್ತನೆಯ ವರ್ಷಕ್ಕೆ ಕಾಲಿಡುತ್ತಿರುವ ಶ್ರೀ ಮಹಾಬಲೇಶ್ವರ ಭಟ್ಟರಿಗೆ ದೀರ್ಘಾಯುಸ್ಸು, ಸಂತೋಷ, ಎಲ್ಲ ಶುಭಗಳನ್ನು ಹಾರೈಸುತ್ತೇನೆ.

# ಸಮೃದ್ಧವಾಗಿ ನೂರು ವರ್ಷ ಬಾಳಬೇಕು

- ಕಯ್ಯಾರ ಕಿಞ್ಞಣ್ಣರೈ

ಸಾರ್ವಜನಿಕ ಜೀವನದ ವಿವಿಧ ಕ್ಷೇತ್ರಗಳಲ್ಲಿ ತಮ್ಮ ನಿರಂತರವಾದ ಶ್ರದ್ಧಾಪೂರ್ವಕವಾದ ದುಡಿಮೆಯಿಂದ, ಆ ಕ್ಷೇತ್ರಗಳನ್ನು ಸಮೃದ್ಧವನ್ನಾಗಿಸಿ, ತಮ್ಮ ಬದುಕನ್ನು ಬೆಳಗಿಸಿದ ಹಲವಾರು ಮಹಿಳೆಯರೂ, ಮಹನೀಯರೂ ಕನ್ನಡ ನಾಡಿನಲ್ಲಿಯೂ ಇದ್ದಾರೆ ಎಂಬುದು ಅಭಿಮಾನ ಪಡುವಂತಹ ವಿಷಯವಾಗಿದೆ. ಅಂಥಹವರಿಂದಲೇ ನಾಡು ನುಡಿಗಳಿಗೆ ಶ್ರೇಯಸ್ಸು ಒದಗಿದೆ. ಆ ದುಡಿಮೆಗೆ ಅವರು ಪ್ರತಿಫಲವನ್ನು ಅಪೇಕ್ಷಿಸುವವರು ಸರ್ವಥಾ ಅಲ್ಲ; ಅಂಥಹ ಸತ್ಕಾರ್ಯ ತ್ಯಾಗಪೂರ್ಣವಾದುದು, ಪವಿತ್ರವಾದುದು. ಆದಕಾರಣ, ಅವರನ್ನು ಸರಿಯಾಗಿ ಗುರುತಿಸಿ ಜನತೆ ಕೊಂಡಾತಕ್ಕದ್ದಿದೆ. ಇದು ಸಾರ್ವಜನಿಕ ಜೀವನದಲ್ಲಿ ಸಲ್ಲಿಸತಕ್ಕ ಋಣವಾಗಿದೆ. ಅಂತಹ ಯೋಗ್ಯ ಪರಂಪರೆಯಿಂದ ಒಳ್ಳೆಯ ಕೆಲಸ ಮಾಡುವವರಿಗೆ ಯೋಗ್ಯ ಪ್ರೋತ್ಸಾಹ ದೊರಕುತ್ತದೆ. ತಮ್ಮ ಜೀವನದ ನಿರಂತರ ದುಡಿಮೆ ಸಾರ್ಥಕ ವಾಯಿತೆಂಬ ಸಮಾಧಾನವುಂಟಾಗುತ್ತದೆ. ಉತ್ತಮ ಕಾರ್ಯಗಳು ಸಕಲ ಕ್ಷೇತ್ರಗಳಲ್ಲೂ ಉತ್ತರೋತ್ತರ ಸಾಗುತ್ತಾಹೋಗಲು ಅನುಕೂಲವಾಗುವುದು.

ಸಾರ್ವಕಾಲಿಕವಾದ ಈ ನೀತಿಯನ್ನು ಅನುಸರಿಸಿ, ಸಾಗರದ ಸಾರ್ವಜನಿಕರು, ಕಳೆದ ನಲವತ್ತು ವರ್ಷಗಳಿಂದಲೂ ಹೆಚ್ಚಿನ ಕಾಲ, ನಾಡು-ನುಡಿ ಸಂಸ್ಕೃತಿಗಳ ಕ್ಷೇತ್ರಗಳಲ್ಲಿ ನಿರಂತರ ದುಡಿದು ತನ್ನ ಪ್ರಭಾವದ ಮುದ್ರೆಯೊತ್ತಿದ್ದ, ತೊರೆಮನೆ ಶ್ರೀ ಮಹಾಬಲೇಶ್ವರ ಭಟ್ಟರನ್ನು ಅವರ ಇಂದಿನೀ ತುಂಬಿದ ವಯಸ್ಸಿನಲ್ಲಿ ಅಭಿನಂದನಾ ಗ್ರಂಥ ಸಮರ್ಪಣೆ ಮೊದಲಾದ ರೀತಿಯಿಂದ ಸಾರ್ವಜನಿಕ ಸನ್ಮಾನ ಗೌರವ ನೀಡಲು ನಿಶ್ಚಯಿಸಿದ್ದು ಅಭಿನಂದನೀಯವಾಗಿದೆ. ಹಲವು ವರ್ಷಗಳಿಂದ ನನಗೆ ಪರಿಚಿತರೂ ಆಗಿರುವ ಶ್ರೀಯುತ ಮಹಾಬಲೇಶ್ವರ ಭಟ್ಟರ ಕುರಿತಾಗಿ ನನ್ನ ಮೆಚ್ಚುಗೆಯ ಮಾತುಗಳನ್ನುದಾಖಲಿಸಲು ನನಗೆ ಅತೀವ ಸಂತೋಷವೆನಿಸುತ್ತದೆ.

ಶ್ರೀಯುತರನ್ನು ನಾನು ಅವರ ಸಾರ್ವಜನಿಕ ಹಾಗೂ ಸಾಹಿತ್ಯಕ ಕಾರ್ಯಕಲಾಪಗಳ ವಿಚಾರ ಆಗಾಗ ಕೇಳಿ ತಿಳಿದಂತೆ, ಹಲವು ಸಭೆ, ಸಮ್ಮೇಳನಗಳಲ್ಲಿ ಕಂಡು ಅರಿತುಕೊಂಡಿದ್ದೇನೆ. ಶುದ್ಧ ಖಾದಿಯ ಶುಭ್ರ ಉಡುಪಿನ ಉನ್ನತ ವ್ಯಕ್ತಿತ್ವ ಕಂಡಾಗಲೇ ಆಕರ್ಷಕ. ; ಆ ವ್ಯಕ್ತಿತ್ವಕ್ಕೆ ತಕ್ಕ ಸಜ್ಜನಿಕೆಯ ನಡತೆ ಹಾಗೂ ಮಾತುಕತೆಗಳು.

ನಾನು ವಯಸ್ಸಿನಲ್ಲಿ ಹಿರಿಯನು ಎಂದೋ ಏನೋ ಕಂಡಾಗಲೆಲ್ಲಾ ಹತ್ತಿರ ಬಂದು ಆತ್ಮೀಯವಾಗಿ ಮಾತನಾಡುವ ವಿನಯವಂತಿಕೆ ಅವರದು. ಅಂತಹ ಹಲವು ಸಲದ ಸಂದರ್ಶನಗಳ ಸವಿ ನೆನಪುಗಳು ನನ್ನ ಸ್ಮರಣೆಯಲ್ಲಿ ಸದಾ ಹಸಿರಾಗಿವೆ. ಮನಸ್ಸಿಗೆ ಮುದ ನೀಡುತ್ತವೆ.

ಕಳೆದ ನಲವತ್ತು ವರ್ಷಗಳಿಗಿಂತಲೂ ಅಧಿಕ ಕಾಲ, ಅವರು ದೇಶಕ್ಕೆ ಸ್ವಾತಂತ್ರ್ಯ ದೊರಕಲು ಹೆಚ್ಚಿನ ಸಹಾಯ ನೀಡಿದ ಕಾಂಗ್ರೆಸ್ ಸಂಸ್ಥೆಯ ಸದಸ್ಯರಾಗಿ ದುಡಿದದ್ದು, ಅವರ ದೇಶಪ್ರೇಮದ ಸಾಕ್ಷಿಯಾಗಿದೆ. ಗಾಂಧಿ, ನೆಹರು ಪ್ರಭೃತಿಗಳು ಸುಭಾಸ್‌ಚಂದ್ರಬೋಸ್ ರಂತಹವರು ಅಂದು ಅವರ ಅನುಯಾಯಿಗಳಾದ ಜ್ಞಾತ-ಅಜ್ಞಾತ ಸ್ವಾತಂತ್ರ್ಯ ಯೋಧರು ಸತ್ಯ ಅಹಿಂಸಾ ಶಕ್ತಿಯಿಂದ ಸೂರ್ಯಮುಳುಗದ ಸಾಮ್ರಾಜ್ಯವೈಭವ ನಡೆವಿದ್ದು ಬ್ರಿಟೀಷರ ದಾಸ್ಯದ ನೊಗದ ಭಾರವನ್ನು ಕಿತ್ತೊಗೆದು ಸ್ವಾತಂತ್ರ್ಯದ ಅಮೃತವನ್ನು ನಾಡಿಗರಿಗೆ ಒದಗಿಸಿದ ಮಹಾ ಸಂಸ್ಥೆ ಕಾಂಗ್ರೆಸ್. ಆ ಸ್ಫೂರ್ತಿಯಲ್ಲಿ - ಆ ದೇಶಾಭಿಮಾನದ ಹಿನ್ನೆಲೆಯಲ್ಲಿ ಆ ಪಕ್ಷದ ಅನುಯಾಯಿಯಾಗಿ ಅಷ್ಟುದೀರ್ಘಕಾಲ ತನ್ನ ಪಾಲಿನ ದುಡಿಮೆ ಮಾಡುತ್ತಾ ಬಂದು, ಇಂದು ಅದೇ ಪಕ್ಷವಿರಲಿ, ಇತರ ಯಾವುದೇ ಪಕ್ಷವಾಗಲೀ ಎಲ್ಲಾ ರಾಜಕೀಯವನ್ನೂ ದೂರಸರಿಸಿ, ಕೇವಲ ಸಾಹಿತ್ಯ ಸಮ್ಮೇಳನಗಳ ಸೇವಾ ಕಾರ್ಯದಲ್ಲಿ ನಿರತರಾಗಿರುವುದು ಕಾಲೋಚಿತವಾಗಿದೆ; ಯೋಗ್ಯವೇ ಎನಬೇಕು. ಸ್ವಾತಂತ್ರ್ಯ ಸಂಗ್ರಾಮ ಸಂದರ್ಭದಲ್ಲಿ ಕಾಂಗ್ರೆಸ್ ಪಕ್ಷದ ಸಕ್ರಿಯ ಸದಸ್ಯನಾಗಿದ್ದ ನಾನು, ಸ್ವಾತಂತ್ರ್ಯದೊರೆದ ಕೂಡಲೇ ಆ ಪಕ್ಷವನ್ನುವಿಸರ್ಜಿಸಿ ದೇಶಕಟ್ಟುವ ರಚನಾತ್ಮಕ ಕಾರ್ಯಗಳಲ್ಲಿತೊಡಗಿರಿ ಎಂದು ಉಪದೇಶಿಸಿದ ಮಹಾತ್ಮಾಗಾಂಧಿಯವರ ಉದ್ದೇಶದಂತೆ, ೧೯೪೭ ರ ನಂತರ ಕಾಂಗ್ರೆಸ್ ಪಕ್ಷದ ಸದಸ್ಯತ್ವವನ್ನು ಮುಂದುವರಿಸದೆ ಮಾತಿನಲ್ಲಿ ಇನ್ನಾವುದೇ ರಾಜಕೀಯ ಪಕ್ಷಕ್ಕೂ ಸೇರದ ನನ್ನ ಮನೋಗತಿಗೂ ಶ್ರೀಯುತ ಮಹಾಬಲೇಶ್ವರ ಭಟ್ಟರ ಇಂದಿನ ನಿರ್ಧಾರ ಸಂಪೂರ್ಣ ಸರಿಯೆಂದು ತೋರಿದೆ. ಅಂದು, ಗುಲಾಮಗಿರಿಯ ನೊಗದ ಭಾರತವನ್ನು ಹೆಗಲಿಂದ ಕಿತ್ತೊಗೆಯಲು, ಅಂಟಿದ ದಾಸ್ಯದ ಕೆಸರನ್ನು ತೊಳೆದು ಸ್ವತಂತ್ರ ಶುಚಿರ್ಭೂತರಾಗಲು, ಕಾಂಗ್ರೆಸ್ಸಿನಂತಹ ತ್ಯಾಗಮಯ ಸಂಸ್ಥೆಯ ಸದಸ್ಯತ್ವ ಸಹಕಾರ ರಾಷ್ಟ್ರದ ಸಮಸ್ತ ಜನತೆಗೂ ತೀರಾ ಅವಶ್ಯವಿತ್ತು. ಅದರಂತೆ ಇಂದು ಸಕಲ ಪಕ್ಷೀಯರಿಗೂ ಒಬ್ಬರಿಗಲ್ಲದಿದ್ದರೆ ಇನ್ನೊಬ್ಬರಿಗೆ, ಮೈಗೆ ಅಂಟಿಕೊಂಡಿರುವ ಭ್ರಷ್ಟಾಚಾರಗಳ ಲೇಪನದಿಂದ ದೂರವಾಗಿರಲು ಯಾವುದೇ ರಾಜಕೀಯ ಪಕ್ಷದ ಸೇರ್ಪಡೆಯೂ ಅಯೋಗ್ಯವಾಗಿ, ಕೇವಲ ರಚನಾತ್ಮಕ ಕಾರ್ಯಗಳಲ್ಲಿಯೇ ಆಸಕ್ತರಾಗುವುದು ದೇಶಕ್ಕೂ ವ್ಯಕ್ತಿಗಳಿಗೂ ಯೋಗ್ಯವೆಂದು ಪ್ರತ್ಯಕ್ಷವಾಗಿರುವಾಗ ಶ್ರೀ ಭಟ್ಟರ ಈ ನಿರ್ಧಾರ ಅಭಿನಂದನೀಯವಾಗಿದೆ.

ಶ್ರೀ ಮಹಾಬಲೇಶ್ವರ ಭಟ್ಟರು, ಇಷ್ಟರಲ್ಲೇ ಕಥಾ ಸಂಕಲನ, ಕವನ ಸಂಗ್ರಹ, ಜೀವನ ಚಿತ್ರಣ, ಕಾದಂಬರಿ ಇತ್ಯಾದಿ ಸಾಹಿತ್ಯಕ್ಷೇತ್ರಗಳಲ್ಲಿ ಹತ್ತಾರು ಕೃತಿಗಳನ್ನು ನೀಡಿ ಕೀರ್ತಿಗಳಿಸಿದ್ದಾರೆ. ನಾಡಿನ ಬೇರೆ ಬೇರೆ ಪತ್ರಿಕೆಗಳಲ್ಲಿ ನೂರಾರು ಪ್ರಬಂಧ ಲೇಖನಗಳನ್ನು ಪ್ರಕಟಿಸಿ ಮೆಚ್ಚುಗೆ ಪಡೆದಿದ್ದಾರೆ. ಈಗಲೂ, ಕೆಲವು ಪತ್ರಿಕೆಗಳಲ್ಲಿ ಅಂಕಣಗಾರರಾಗಿ ಯಶಸ್ವೀ ಲೇಖಕರೆಂದು ಮನ್ನಣೆಗೊಂಡಿದ್ದಾರೆ. ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತಿನ, ಅಲ್ಲಿನ ಕನ್ನಡ ಸಂಘ ಸಂಸ್ಥೆಗಳ ಅಧ್ಯಕ್ಷರಾಗಿ, ಸ್ವಂತ ಪುಸ್ತಕ ಪ್ರಕಾಶನ ಸಂಸ್ಥೆಯ ಸ್ಥಾಪಕರಾಗಿ ಹೀಗೆ ನಿರಂತರ ಕನ್ನಡ-ಸಾಹಿತ್ಯ-ಸಂಸ್ಕೃತಿಗಳ ಕ್ಷೇತ್ರಗಳಲ್ಲಿ ತನ್ನನ್ನು ರಚನಾತ್ಮಕವಾಗಿ ತೊಡಗಿಸಿಕೊಂಡಂತೆ, ಮಲೆನಾಡಿನ ಅಭಿವೃದ್ಧಿ ಕಾರ್ಯದಲ್ಲಿ,ಸಹಕಾರಿ ಸಂಸ್ಥೆಗಳಲ್ಲಿ ಸಾಕಷ್ಟುಕೆಲಸ ಮಾಡಿ ಹೆಸರು ಮಾಡಿರುವುದು ಪ್ರಶಂಸನೀಯವಾಗಿದೆ.

ಇಂತಹ ಅವರ ಉತ್ತಮ ಹಾಗೂ ಶ್ರೇಯಸ್ಕರವಾದ ಕಾರ್ಯ ಕಲಾಪಗಳನ್ನು ಜನತೆ ಗುರುತಿಸಿ, ಇಷ್ಟರಲ್ಲಿಯೇ ಅವರ ಐವತ್ತನೆಯ ಹುಟ್ಟು ಹಬ್ಬದ ಅಭಿನಂದನಾರ್ಥ, ಸನ್ಮಾನ ಸಮಾರಂಭ ಜರುಗಿದ್ದಲ್ಲದೆ, ಅವರಿಗೆ 'ಮಹಾನಂದ' ಎಂಬ ಸಾರ್ಥಕ ಹೆಸರಿನ ಒಂದು ಅಭಿನಂದನಗ್ರಂಥವನ್ನು ಸಾರ್ವಜನಿಕರು ಸಮರ್ಪಿಸಿದ್ದು, ಅವರ ಹಿರಿಯ ಯೋಗ್ಯತೆಗೆ ಸಾಕ್ಷಿಯಾಗಿದೆ. ಇಂದು ಶ್ರೀ ಮಹಾಬಲೇಶ್ವರ ಭಟ್ಟರು, ವಯಸ್ಸಿನಲ್ಲಿ 'ಸಪ್ತತೆ' ಸಮೀಪಿಸಿದ್ದು ಸಾಂಸ್ಕೃತಿಕ, ಸಾಹಿತ್ಯಿಕ ಕಾರ್ಯಕಲಾಪಗಳಲ್ಲಿ ಇನ್ನಷ್ಟುಹೆಚ್ಚಿನ ದುಡಿಮೆ ಸಾಧಿಸಿರುವೀ ಸಂದರ್ಭದಲ್ಲಿ ಅವರ ಕೀರ್ತಿ ಅಭಿನಂದನೆಗಳು ಇನ್ನಷ್ಟು ಉಜ್ವಲವಾಗಿ ಶೋಭಾಯಮಾನ ರೀತಿಯಲ್ಲಿ ಬೆಳಗಲಿ ಎಂದು ಹಾರೈಸುತ್ತೇನೆ.

ಈ ಸಂದರ್ಭದಲ್ಲಿ ಈಶೋಪನಿಷತ್ತಿನ ಮಂತ್ರವನ್ನೊ-ನಾನು ಉಚ್ಚರಿಸಿ ಶ್ರೀಯುತ ಭಟ್ಟರಿಗೆ ಸಮೃದ್ಧಿಯನ್ನು ಹಾರೈಸಬಯಸುತ್ತೇನೆ:

''ಕುರ್ವನ್ನೇವೇಹ ಕರ್ಮಾಣಿ
ಜಿಜೀವಿಷೇತ್ ಶತಂ ಸಮಾಃ''

''ಜೀವನದಲ್ಲಿ ನಮ್ಮ ಪಾಲಿಗೆ ಬಂದ ಕರ್ತವ್ಯ ಕರ್ಮಗಳನ್ನು ನಿರಂತರ ಮಾಡುತ್ತಾ ಇದ್ದು ನೂರು ವರ್ಷಗಳ ಸಮೃದ್ಧವಾದ ಬದುಕನ್ನುಬಾಳಬೇಕು'' - ಎಂಬುದು ಆ ಆರ್ಷೇಯ ಮಂತ್ರದ ಅರ್ಥ. ಭಟತಿ ಇತಿ (ಪಠತಿ ಇತಿ) ಭಟ್ಟಃ ಭಟ್ಟ ಎಂಬ ಕುಲನಾಮ, ವೇದೋಪನಿಷತ್ತುಗಳನ್ನು ಅಭ್ಯಾಸ ಮಾಡಿದ ವಿದ್ವಾಂಸರಿಗೆ ಬಂದದ್ದು. ಶ್ರೀ ಮಹಾಬಲೇಶ್ವರ ಭಟ್ಟರೂ ಆ ವಿದ್ವಾಂಸ ಪರಂಪರೆಯವರೇ ಆಗಿದ್ದಾರೆ. ಹಾಗಾಗಿಯೂ ಮೇಲೆ ಉದ್ಧರಿಸಿದ ಆಯತನಿಷದ್ವಾಣಿ, ಅವರ ಜೀವನದಲ್ಲಿ ಸಂಪೂರ್ಣ ಸಾಂಗತವೂ, ಸಾರ್ಥಕವೂ ಆಗಲಿ; ಶ್ರೀ ಮಹಾಬಲೇಶ್ವರ ಭಟ್ಟರಿಗೆ ಸಕಲ ಶ್ರೇಯಸ್ಸುಗಳೂ ಲಭಿಸಲಿ ಎಂದು ಹೃತ್ಪೂರ್ವಕ ಹಾರೈಸುತ್ತೇನೆ.

# ಅಟ್ಟವೇರಿದರೂ ನೆಲಗಟ್ಟು ಮರೆಯದ ಭಟ್ಟರು

- ಪ್ರೊ. ಕೆ.ಎಸ್. ನಿಸಾರ್ ಅಹಮದ್

ಶ್ರೀ ಟಿ. ಮಹಾಬಲೇಶ್ವರ ಭಟ್ಟರು ನನ್ನ ಬಹುಕಾಲದ ಮಿತ್ರರು. ನನ್ನ ಅಚ್ಚುಮೆಚ್ಚಿನವರಲ್ಲಿ ಒಬ್ಬರು. ಬಾಂಧವ್ಯಗಳು ವ್ಯಾವಹಾರಿಕವಾಗುತ್ತಿರುವ ಈಚಿನ ದಿವಸಗಳಲ್ಲಿ ತಮ್ಮ ಹೃದಯವಂತ ಸಜ್ಜನತೆಯನ್ನು ಕಾಪಾಡದಂತೆ ಬೆಚ್ಚಗಿಟ್ಟುಕೊಂಡಿರುವುದು ಅಚ್ಚರಿಯೇ ಸರಿ. ಇಂಥ ವಿರಳ ಮಾದರಿಯೆನಿಸುವ ಕೆಳೆಯರೊಬ್ಬರ ಸ್ನೇಹ ಸೌಜನ್ಯಗಳ ಸವಿಯನ್ನುಂಡು ಅವನ್ನು ಆಗಾಗ್ಗೆ ಸ್ಮರಿಸುವವರ ಪೈಕಿ ನಾನೂ ಒಬ್ಬ.

ಅವರ ಮೈತ್ರಿ ಅಪ್ಪಟ, ಅವ್ಯಾಜ ಸ್ವರೂಪ. ಲೇನೆದೇನೆಗಳ ಲೆಕ್ಕಾಚಾರವನ್ನು ಲೆಕ್ಕಿಸದಂಥದ್ದು, ಎಲ್ಲರೊಡನೆ ಸೌಹಾರ್ದ ಸೌಶೀಲ್ಯದೊಂದಿಗೆ ವರ್ತಿಸುವ ಸ್ವಭಾವ ಅವರಿಗೆ ಹುಟ್ಟಿನಿಂದ ಸಿದ್ಧಿಸಿರಬೇಕು. ಹಮ್ಮು ಧಿಮಾಕು ಬಿರುನುಡಿ, ಹಂಗಣೆ ಅವರನಿಘಂಟಿನಿಂದ ಹೊರಗಾಗಿರುವಂಥವು. ತಮಗೆ ಸರಿತೋಚಿದ್ದನ್ನು ಮುಚ್ಚುಮರೆಯಿಲ್ಲದೆ ಹೇಳುವಾಗಲೂ ನೋವಿಗೆ ಆಸ್ಪದವಾಗದಂತೆ ಎಚ್ಚರ ವಹಿಸುವವರು.

ಈ ನಯವಂತ ನಡಾವಳಿ ಬದುಕಿನ ಅನುಭವದಿಂದ ಗಳಿಸಿಕೊಂಡಿದ್ದೇ ವಿನಾ ನಮ್ಮ ಅನೇಕ ಉದ್ಭಟ ಬುದ್ಧಿಜೀವಿಗಳಂತೆ ಕಲಿಕೆಯಿಂದ ಕಮಾಯಿಸಿಕೊಂಡದ್ದಲ್ಲ. ಯಾರಲ್ಲೇ ಆಗಲಿ ಚೂರು ವಿಶೇಷ ಕಂಡಿತೆ ? ಬಿಗುಮಾನವಿಲ್ಲದೆ ತೆರೆದ ಮನಸ್ಸಿನಿಂದ ಕೊಂಡಾಡುವ ಔದಾರ್ಯವುಳ್ಳವರು. ಅವಕಾಶವೊದಗಿತೆ ? ಆ ಕಿಂಚಿತ್ ವಿಶಿಷ್ಟಗುಣಕ್ಕೆ ಮರ್ಯಾದೆ ಸಲ್ಲಿಸಲೋ ಎನುವಂತೆ ಅವರೇ ಖುದ್ದಾಗಿ ಸತ್ಕಾರಕ್ಕೆ ಮುಂದಾಗುವವರು. ಈ ಮಾತು ಸ್ವಾನುಭವಸಿದ್ಧವೆಂದು ಬೇರೆ ಹೇಳಬೇಕಾಗಿಲ್ಲ.

ಮಹಾಬಲೇಶ್ವರ ಭಟ್ಟರ ಹೆಸರು ಮೂರುವರೆ ದಶಕಗಳಿಂದ ನನಗೆ ಪರಿಚಿತವಾದರೂ ನನ್ನ ಅವರ ನೇರ ಭೇಟಿಯಾದದ್ದು ೨೫ ವರ್ಷಗಳ ಹಿಂದೆ, ಬೆಂಗಳೂರಿನಲ್ಲಿ ಜರುಗಿದ ಸಾಹಿತ್ಯ ಸಮ್ಮೇಳನವೊಂದರ ಪುಸ್ತಕಗಳ ಮಳಿಗೆಯ

ಬಳಿ ಅಪ್ಪಾಡುತ್ತಿದ್ದಾಗ. ಆಗ ಯಾರೋ ತೆಗೆದ ನಮ್ಮ ಭಾವಚಿತ್ರ ಭಟ್ಟರ ಹತ್ತಿರ ಇನ್ನೂ ಇದೆ. ಅಂದಿನಿಂದ ಇಂದಿನ ತನಕ ನಮ್ಮ ಮೈತ್ರಿ ಮೆರಗುಗುಂದಿಲ್ಲ. ಅಷ್ಟೇ ಅಲ್ಲ, ಅದರ ಸ್ನಿಗ್ಧತೆ ಇನ್ನೂ ಅಧಿಕಗೊಳ್ಳುತ್ತಿದೆ.

ಭಟ್ಟರು ಸಾಗರ ತಾಲ್ಲೂಕಿನ ಹಲವು ಹಿರಿಯ, ಮರ್ಯಾದಸ್ಥ ಸಂಘ-ಸಂಸ್ಥೆಗಳ ತಲೆಯಾಳಾಗಿ ದುಡಿದಿರುವುದು, ದುಡಿಯುತ್ತಿರುವುದು ಅನೇಕರಿಗೆ ತಿಳಿದಿದೆ. ಕನ್ನಡ ನಾಡು ನುಡಿಗಳ ಹಿತಚಿಂತನೆಯ, ಸಾಹಿತ್ಯ ರಚನೆಯ ಕೈಂಕರ್ಯದಲ್ಲಿ ತೊಡಗಿಕೊಂಡು ಛೇಷೆನ್ನಿಸಿಕೊಂಡಿರುವುದೂ, ಹಲವರಿಗೆ ಗೊತ್ತಿದೆ. ಆದರೆ ಅವರು ನಿಜವಾದ ಅರ್ಥದಲ್ಲಿ 'ಮಣ್ಣಿನಮಗ' ಎನ್ನುವುದನ್ನು ಅವರು ಬೇದೂರಿನಲ್ಲಿ ಸ್ವಂತ ಮೆಹನತ್ತಿನಿಂದ ಎಬ್ಬಿಸಿರುವ ಕಂಗೊಳಿಕೆಯ ತೋಟವನ್ನು ನೋಡಿಯೇ ಅರಿಯಬೇಕು.

ಭಟ್ಟರು ಅಟ್ಟವನ್ನೇರಿರುವುದು ಇತರರ ಹೆಗಲೇರಿ ಅಲ್ಲ; ತಮ್ಮದೇ ಕಾಲುಗಳ ಪರಿಶ್ರಮದಿಂದ – ಮೆಟ್ಟಿಲು ಮೆಟ್ಟಿಲಲ್ಲೂ ಸುಧಾರಿಸಿಕೊಂಡು. ಅಟ್ಟ ತಲುಪಿದೊಡನೆ ನೆಲಗಟ್ಟನ್ನು ಮರೆತವರೂ ಅಲ್ಲ. ಈ ನೆಲೆಯಲ್ಲಿಯೂ ಅವರಿಗೆ ಸದಾ ಹೂವಿನ ಸುಪ್ಪತ್ತಿಗೆಯೇ ಖಾಯಂ ಆಗಿರುವುದೆಂದು ಭಾವಿಸಬೇಕಾಗಿಲ್ಲ. ಪರಿಸ್ಥಿತಿ ಹೀಗಿದ್ದಾಗ್ಯೂ ಆರಂದೆರ ಹಿಗ್ಗದೆ- ಮೂರೆಂದರೆ ಕುಗ್ಗದೆ – ಸಮತಲ ಬಾಳನ್ನು ಸಾಗಿಸುತ್ತ ಮುಂದುವರೆಯುತ್ತಿದ್ದಾರೆ. ಅವರ ಅಪ್ರದರ್ಶಕ ಜಾಯಮಾನದ ಆಚಾರ ವಿಚಾರ ನಡೆ ನುಡಿ ವಿನಯಶಾಲೀನತೆ ಎಂಥವರಿಗೂ ಒಂದು ಆಯಸ್ಕಾಂತ. ಅವರೊಡನೆ ಕಳೆದ ಸಮಯ ಸಂತೋಷಪ್ರದ ಸುಸ್ಮರಣೆಯ ಸುಗ್ಗಿ.

ಭಟ್ಟರು, ಕಾರ್ಯಾರ್ಥ ಬೆಂಗಳೂರಿಗೆ ಬಂದಾಗ ನನ್ನನ್ನು ಭೇಟಿಯಾಗುವುದೋ, ಶಕ್ಯವಾಗದಿದ್ದಲ್ಲಿ ದೂರವಾಣಿಸುವುದೋ ಸಾಮಾನ್ಯ. ಅವರ ನೂರೆಂಟು ಸಾರ್ವಜನಿಕ ಕೆಲಸಗಳ ಮಧ್ಯದಲ್ಲೂ, ಸಮಯಾಭಾವದಲ್ಲೂ ತಡವರಿಸದೆ ಸಾಗಿಬಂದಿರುವ ಸ್ನೇಹಪರ ಶಿಷ್ಟಾಚಾರ ಇದು. ನಾನು ಲೇಖಕನಾಗಿ ಕನ್ನಡಕ್ಕೆ ಕಿಂಚಿತ್ ಸೇವೆ ಸಲ್ಲಿಸುತ್ತಿರುವುದರ ಬಗ್ಗೆ ಅವರಿಗೆ ಅಪಾರ ಅಕ್ಕರಾಸ್ಥೆ, ಹೆಮ್ಮೆ.

ಹಿರಿಯರು, ಕಿರಿಯರು ಎನ್ನುವ ವ್ಯತ್ಯಾಸಗಣಿಸದೆ 'ಸಾರ್' 'ಸ್ವಾಮಿ' ಎಂದು ಭಟ್ಟರು ಸಂಬೋಧಿಸುತ್ತ ಸಂವಾದಿಸುವ ಪರಿ, ಇಂದಿನ ತರುಣರಿಗೆ ಮರ್ಯಾದೆಯಲ್ಲಿ ಒಂದು ಪಾಠ. ಸಂಸ್ಕೃತಿ ರೂಪಿತ ಸಭ್ಯ ಜೀವವೊಂದು ಯಾವ ಎತ್ತರ ಮುಟ್ಟಬಲ್ಲದು, ಆ ಮೂಲಕ ಹೆರವರಿಗೆ ಎಂಥ ತಿಳಿ ಹರ್ಷವನ್ನು ವರ್ಷಿಸಬಹುದು ಎಂಬುದರ ಅನುಭವವಾಗ ಬೇಕೆ ? ಹಾಗಿದ್ದಲ್ಲಿ, ಭಟ್ಟರ ಸಹವಾಸದಲ್ಲಿ ಕೆಲವು ತಾಸು ಕಳೆದು ನೋಡಿ.

೧೯೭೮ರಲ್ಲಿ ಭಟ್ಟರು ನನ್ನನ್ನು ಸಾಗರಕ್ಕೆ ಆಹ್ವಾನಿಸಿದರು. ಅಲ್ಲಿನ ರೋಟರಿ ಸಂಸ್ಥೆಯಲ್ಲಿ ನನ್ನ ಉಪನ್ಯಾಸ, ಸ್ವಂತ ಕವಿತೆಗಳ ಓದಿಕೆ ಏರ್ಪಾಟಾಗಿತ್ತು. ಜೊತೆಗೆ ಆತ್ಮೀಯ ಸನ್ಮಾನ ಕೂಡ; ಆಗಷ್ಟೇ ಬೆಳಕು ಕಂಡಿದ್ದ ಕನ್ನಡದ ಮೊಟ್ಟ ಮೊದಲನೆಯ ಭಾವಗೀತೆಗಳ ಧ್ವನಿಸುರುಳಿ ನನ್ನ ''ನಿತ್ಯೋತ್ಸವ''ದ ಬಿಡುಗಡೆ ಸಮಾರಂಭವೂ ಅಲ್ಲಿ ನೆರವೇರಿಬಿಟ್ಟಿತು. ಈ ಎಲ್ಲ ವಿಜೃಂಭಣೆಯ ಹಿಂದೆ ಮಿತ್ರ ಭಟ್ಟರ ದುಡಿಮೆ ಎಷ್ಟು ಶ್ರಮ ಪೂರ್ಣವೆಂಬುದು ನನಗೆ ಗೊತ್ತು. ಆ ಸುಖ ಸಂಭ್ರಮದ ಸಂದರ್ಭವನ್ನು ಈಗ ನೆನೆದರೆ ಭಟ್ಟರಿಗೆ ಕೃತಜ್ಞತೆಯಿಂದ ಕೈ ಜೋಡಿಸಬೇಕೆನ್ನಿಸುತ್ತದೆ.

ಆ ದಿವಸ ಮಧ್ಯಾಹ್ನ, ಅವರ ಕೆಲವು ಸ್ಥಳೀಯ ಸಾಹಿತಿ ಸ್ನೇಹಿತರೊಂದಿಗೆ, ಬೇದೂರಿನ ತೋಟದ ಮನೆಗೆ ನನ್ನನ್ನು ಕರೆದೊಯ್ದದ್ದು ಸಾಗರದ ನನ್ನ ಪ್ರವಾಸಕ್ಕೆ ಸಿಕ್ಕಿದ ವಿಶೇಷ ಬೋನಸ್. ಹಾದಿಯಲ್ಲಿ ಇತಿಹಾಸ ಪ್ರಸಿದ್ಧ ಇಕ್ಕೇರಿಯ ದರ್ಶನದ ಅಪೂರ್ವಲಾಭ ಬೇರೆ. ಬೇದೂರಿನ ಪ್ರಶಾಂತ, ಧೂಳೀಧೂಸರ ಮುಕ್ತ ರಮಣೀಯ ತಾಣದಲ್ಲಿ ಬಿಸಿನೆತ್ತರ ಹರಯವಂತರ ಹುರುಪಿನಿಂದ ಅಲೆದಾಡಿದ್ದು, ಭಾವವಶ ತನ್ಮಯತೆಗೆ ಒಳಗಾದದ್ದು ನೆನಪಿನ ಅಕ್ಷಯ ನಿಧಿ. ಬೆಂಗಳೂರಿನ ಯಾಂತ್ರೀಕೃತ, ಕಲ್ಲೋಲಿತ ಬಾಳ್ವೆಯಲ್ಲಿ ಜೀವಕ್ಕೆ ಅದೊಂದು ನಿರಾಳತೆಯ ನಡುಗಡ್ಡೆ.

ಬೇದೂರಿನ ತೋಟದ ಮನೆಯಲ್ಲಿ ಮಡದಿ ಮಕ್ಕಳು ಆಪ್ತೇಷ್ಟರು ನೆರೆದು ಹಬ್ಬದ ಉಲ್ಲಸಿತ ವಾತಾವರಣ. ತೋಟವನ್ನು ಸ್ವಂತ ದೇಖಿಬಾಲಿಯಲ್ಲಿ ಎತ್ತರಿಸಿದ ವಿವರಗಳ ಬಗ್ಗೆ ಭಟ್ಟರಿಂದ ಉತ್ಸಾಹದ ನುಡಿ ಸಾಕ್ಷ್ಯಚಿತ್ರ. ಇವೆಲ್ಲಕ್ಕೆ ಕಿರೀಟವಿಟ್ಟಂತೆ ಮಲೆನಾಡು ತನದ ಮೊಹರುಳ್ಳ ಮೋಜಿನ ಭೋಜನದ ಮೇಜುವಾನಿ. ಖುಷಿಯಾಗಿ ಬೇದೂರನ್ನು ಬಿಡುವ ಮುಂಚೆ ಮತ್ತೊಂದು ಅನಿರೀಕ್ಷಿತ. ಫಲತಾಂಬೂಲ ನೀಡಿಕೆಯೊಂದಿಗೆ ನನ್ನ ಕೊರಳಿಗೆ ಘಮಲಿನ ಮಲ್ಲಿಗೆ ಹಾರ ಏರಿಸಿ, ಭಟ್ಟರು ''ಇನ್ನೂ ಹೆಚ್ಚು ಹೆಚ್ಚು ನಾಡು ನುಡಿಗಳ ಸೇವೆ ಮಾಡಿ ಕೀರ್ತಿಶಾಲಿಗಳಾಗಿ'' ಎಂದು ಹಾರೈಸಿದಾಗಲಂತೂ ಆಭಾರಿಯಾದ ನನ್ನ ಕಣ್ಣು ಜರತಾರಿ; ಹೃದಯ ರವಿಕಿರಣ ಸ್ಪರ್ಶಿತ ನೀರ್ಗಲ್ಲು. ಆಗ ''ಸ್ವರ್ಗದೊಳಗೀ ಸ್ನೇಹ ದೊರೆವುದೇನು ?'' ಎಂಬ ವಿ.ಸೀ. ಪದ್ಯದ ಸಾಲಿನ ಅನಾಯಾಸ ಸ್ಮರಣೆ.

೧೯೮೫ರಲ್ಲಿ ಮತ್ತೊಮ್ಮೆ ನನಗೆ ಸಾಗರ ದರ್ಶನದ ಅನಿವಾರ್ಯ ಒದಗಿಬಂತು. ಆಗ ನಾನು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷನಾಗಿದ್ದೆ. ಜಿಲ್ಲೆ ಹಾಗೂ ತಾಲ್ಲೂಕು ಮಟ್ಟದಲ್ಲಿ ಸಾಹಿತ್ಯಕಾರ್ಯಕ್ರಮಗಳನ್ನು ನಿಯೋಜಿಸುವ ಸಲುವಾಗಿ ಕರ್ನಾಟಕದ ವಿವಿಧ ಸ್ಥಳಗಳಿಗೆ ಪ್ರವಾಸ ಮಾಡುತ್ತಿದ್ದೆ. ಮಂಡ್ಯ, ಮೈಸೂರು, ಮಡಿಕೇರಿ, ಮಂಗಳೂರುಗಳಿಗೆ ಹೋಗಿ ಅಲ್ಲಿ ಪತ್ರಿಕಾ ಗೋಷ್ಠಿ, ಸಾಹಿತಿ ಕಲಾವಿದರ ಭೇಟಿಗಳಲ್ಲಿ ಪಾಲ್ಗೊಂಡು, ಇದೇ ಆಶಯದಿಂದ ಸಾಗರಕ್ಕೆ ಬರುವುದಾಗಿ ಮಹಾಬಲೇಶ್ವರ ಭಟ್ಟರಿಗೆ ಮೊದಲೇ ಕಾಗದ ಬರೆದು ತಿಳಿಸಿದ್ದೆ.

ನಾನು ಒಂದು ದಿನ ಮುಂಚೆಯೇ ಬರುವೆನೆಂದು ಗ್ರಹಿಸಿ ಅವರು ಪತ್ರಿಕಾಗೋಷ್ಠಿಯನ್ನು ಏರ್ಪಡಿಸಿದ್ದಲ್ಲದೆ ಗಣ್ಯರ ಸಭೆ ಕೂಡಿಸಲು ಕರೆಯೋಲೆಯನ್ನು ಅಚ್ಚಿಸಿದರು. ಆಗ ಅವರು ಮಲೆನಾಡು ಅಡಿಕೆ ಮಾರಾಟದ ಸಹಕಾರ ಸಂಘದ ಉಪಾಧ್ಯಕ್ಷರಾಗಿದ್ದರೆಂದು ನೆನಪು. ಹೀಗಾಗಿ, ಆ ಕಚೇರಿಯ ಮಹಡಿಯಲ್ಲಿರುವ ವಸತಿಗೃಹದಲ್ಲಿ ತಂಗಿದ್ದರು. ನನ್ನೊಡನೆ ಮೈಸೂರಿನ ಚಿತ್ರಕಲಾವಿದ ಪಿ.ಆರ್. ತಿಪ್ಪೇಸ್ವಾಮಿ ಬಂದಿದ್ದು, ಅಲ್ಲಿ ಎರಡು ಹಗಲು ಉಳಿದಿದ್ದೆವು. ಆಗಲೂ ಮತ್ತೊಮ್ಮೆ ಬೇದೂರಿಗೆ ಹೋಗಿ ಸವಿನೆನಪಿನೊಂದಿಗೆ ಮರಳಿದ್ದೆವು.

ಆವೊತ್ತು ಭಾನುವಾರ, ಹೀಗಾಗಿ ರಜೆ. ಆದರೂ ಕೇವಲ ಮೂರು ನಾಲ್ಕು ಗಂಟೆಗಳ ಮಿತಾವಧಿಯಲ್ಲಿ ಭಟ್ಟರು ಊರಿನ ಪ್ರಮುಖ ಪತ್ರಿಕಾಕರ್ತರನ್ನು, ಸಾಹಿತಿಗಳನ್ನು ಸಭೆಕೂಡಿಸಿದರು. ಆ ವಸತಿ ಗೃಹದಲ್ಲಿ ಎರಡು ದಿವಸ ಆತ್ಮೀಯವಾಗಿ ಉಪಚರಿಸಿದರು. ಆಗ ಭಟ್ಟರೊಂದಿಗೆ ನಾವು ಆಡದ, ಚರ್ಚಿಸದ ವಿಷಯವಿರಲಿಲ್ಲ. ಅವರಿಗೆ ಬಿಡುವಿನ ಬಡತನವಿದ್ದಾಗ್ಯೂ ನಮ್ಮೊಡನೆ ಅವರು ಪುರಸೊತ್ತಾಗಿ ಕಳೆದ ಸಂಪದ್ಯುಕ್ತ ಸಮಯವಾಗಲಿ, ರಾತ್ರಿ ಬಸ್ ಬರುವವರೆಗೂ ಕಾದು, ಕಿಕ್ಕಿರಿದ ಬಸ್ಸಿನಲ್ಲಿ ಸೀಟಿನ ವ್ಯವಸ್ಥೆ ಮಾಡಿಸಿ, ನಾವು ಸಾಗರ ಬಿಡುವವರೆಗೂ ಹಸನ್ಮುಖರಾಗಿ ಮಾತಾಡುತ್ತಾ ಇದ್ದದ್ದಾಗಲಿ ಮರೆಯಲು ಸಾಧ್ಯವೇ ಇಲ್ಲ. ವಸತಿ ಗೃಹದಿಂದಬಸ್ ಸ್ಟ್ಯಾಂಡಿಗೆ ಹೊರಟಾಗ ಹಾದಿಯಲ್ಲಿ ಅವರನ್ನುಕಂಡು ಮಾತಾಡಿಸಿದ ಪರಿಚಿತರ ಸಂಖ್ಯೆ ನನಗೆ ಸೋಜಿಗ ಬರಿಸಿತ್ತು; ಈ ವ್ಯಕ್ತಿಯ ಜನಾದರಣೀಯತೆಯ ಬಗೆಗೆ ಸಾಕ್ಷ್ಯ ನೀಡಿತ್ತು.

ಅಚ್ಚ ಬಿಳಿಯ ಜುಬ್ಬ, ಅಪರೂಪಕ್ಕೆ ಮುಚ್ಚುಕೋಟು, ಗರಿಗರಿಯಾದ ಧೋತ್ರ, ಕೊಡೆ, ಪಂಪ್‌ಷೂ, ನೀಟಾಗಿ ಬಾಚಿ ಬೈತಲೆ ತೆಗೆದು ಕೂರಿಸಿದ ಕಪ್ಪುಕೂದಲು, ವಯಸ್ಸನ್ನು ಮರೆಮಾಚುವ ಚುರುಕು ನಡಿಗೆ ಮತ್ತು ಮುಖದ ಕಾಂತಿ, ಭಟ್ಟರನ್ನು ದೂರದಿಂದ ಗುರುತು ಹಿಡಿಯುವ ಲಾಂಛನಗಳು. ಮಾತುಗಳ ನಡುವಣ ಉಮೇದು, ವಿಶಿಷ್ಟ ಉಚ್ಚಾರ, ಅಲ್ಲಲ್ಲಿ ನುಸುಳುವ ಗ್ರಾಮ್ಯ ನುಡಿಗಟ್ಟಿನ ಸೊಗಡು ಅವರು ಮಲೆನಾಡಿಗರೆಂಬುದನ್ನು ಪರಿಣಿತ ಕಿವಿಗಳಿಗೆ ಅಪ್ರಯಾಸವಾಗಿ ಮನದಟ್ಟು ಮಾಡಿಸುತ್ತವೆ.

ಕಳೆದ ವರ್ಷ ಮಾರ್ಚ್ ತಿಂಗಳಲ್ಲಿ ೬೦ ತುಂಬಿದ ಕಾರಣಕ್ಕಾಗಿ ಶಿವಮೊಗ್ಗೆಯ ಕರ್ನಾಟಕ ಸಂಘದ ವತಿಯಿಂದ, ಅದರ ಅಧ್ಯಕ್ಷರಾದ ಶ್ರೀ ಜಿ.ಕೆ. ಸುಬ್ರಹ್ಮಣ್ಯ ಹಾಗೂ ಇತರಕಾರ್ಯಕರ್ತರು ನನ್ನನ್ನು ಆದರ ಪೂರ್ವಕವಾಗಿ ಸನ್ಮಾನಿಸಿದರು. ಭಟ್ಟರು ಸಾಗರದಿಂದ ಶಿವಮೊಗ್ಗಕ್ಕೆ ಮಧ್ಯಾಹ್ನವೇ ಆಗಮಿಸಿ ರಾತ್ರಿ ಬಹಳ ಹೊತ್ತಿನ ತನಕ ಆ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದು ಮರಳಿದರು. ಅವರಿಗೇ

ಗೌರವ ಪ್ರದಾನವಾಗುತ್ತಿರುವಷ್ಟು ಗೆಲವು ನಲಿವು ಹುಮ್ಮಸ್ಸು ಅವರ ಮಾತುಗಳಿಂದ ವ್ಯಕ್ತವಾಗುತ್ತಿದ್ದವು. ನಿಜವಾದ ಸ್ನೇಹದ ಲಕ್ಷಣ ಇದಲ್ಲದಿದ್ದರೆ ಮತ್ತಾವುದು ? ಇಂಥವರನ್ನು ನೋಡಿ, ಇವರ ನಡೆನುಡಿಗಳಲ್ಲಿ ಭಾಗಿಗಳಾಗಿದ್ದಲ್ಲದೆ ''ಸಹೃದಯ'' ''ಸಂಭಾವಿತ'' ಎಂಬ ಪದಗಳ ಅರ್ಥ, ಹಿರಿಮೆ ಮನವರಿಕೆಯಾಗದೇನೋ !.

ಸನ್ಮಿತ್ರರಾದ ಶ್ರೀ ಟಿ. ಮಹಾಬಲೇಶ್ವರ ಭಟ್ಟರಿಗೆ ೭೦ರ ಈ ಶುಭಾವಸರದಲ್ಲಿ ಅಭಿನಂದನ ಗ್ರಂಥವನ್ನು ಹೊರತರಲು ಅವರ ಸ್ನೇಹಿತರು, ಹಿತೈಷಿಗಳು ಎಣಿಸಿರುವುದು ಕಾಲೋಚಿತವಾಗಿದೆ. ಅವರ ಬಗೆಗೆ ನನ್ನಿಂದ ಒಂದು ಬರಹವನ್ನು ಅಪೇಕ್ಷಿಸಿದ್ದಕ್ಕೆ ಧನ್ಯವಾದಗಳು.

ಭಟ್ಟರಿಗೆ, ಅವರ ಕುಟುಂಬದ ಎಲ್ಲರಿಗೆ ಆಯುರಾರೋಗ್ಯ ಭಾಗ್ಯಗಳು ಸಮನಿಸಲೆಂದು ಹಾರ್ದಿಕವಾಗಿ ಹಾರೈಸುವೆ.

# ನಾನು ಮತ್ತು ನಮ್ಮ ಭಟ್ಟರು

- ಡಾ. ಸಾ.ಶಿ. ಮರುಳಯ್ಯ

ಸ್ನೇಹಕ್ಕೆ ಸ್ವಾರ್ಥ ಮೂಲ. ಅವೆರಡೂ ಅನ್ಯೋನ್ಯ ಜೀವಿಗಳು. ಒಂದನ್ನಗಲಿ ಇನ್ನೊಂದು ಇರಲಾರದು. ಇದ್ದರೆ ಬಹಳ ದಿನ ಬದುಕಲಾರದು. ಸ್ನಿಗ್ಧದಿಂದ ಬಂಧ ಶಬ್ದ ಸ್ನೇಹ. ಸ್ನಿಗ್ಧಕ್ಕೆ ಅಂಟು ಎಂದರ್ಥ. ಆ ಅಂಟು ಸ್ವಾರ್ಥದೊಳಗಿನ ಬಿಡಿಸಲಾಗದ ಗಂಟು. ಆದರಿಂದಲೇ ಇರಬೇಕು ದೊಡ್ಡವರು ಹೇಳುವುದು 'ಸ್ವಾರ್ಥ ಮತ್ತು ಸ್ನೇಹಗಳದ್ದು ಅಪರೂಪದ ದಾಂಪತ್ಯ' ಎಂದು.

ಸ್ನೇಹಕ್ಕೂ ಸ್ವಾರ್ಥಕ್ಕೂ ಇರುವುದು ಮಜ್ಜಿಗೆ ಮತ್ತು ನೀರು ಇವುಗಳಿಗಿರುವ ವಿಶ್ವಾಸವಲ್ಲ; ಹಾಲು ಮತ್ತು ನೀರು ಇವುಗಳಿಗಿರುವ ಬಾಂಧವ್ಯ. ಸಮಯ ಬಂದರೆ - ಬಂದರೇನು ? ಬಂದೇ ಬರುತ್ತೆ - ಒಂದು ಪಾತ್ರೆಯಲ್ಲಿ ನೀರು ಬೆರಸಿದ ಮಜ್ಜಿಗೆ ತುಂಬಿಟ್ಟರೆ ಸ್ವಲ್ಪ ಹೊತ್ತಿನಲ್ಲಿ ಮಜ್ಜಿಗೆ ತಳಕ್ಕಿಳಿದು ಬಚ್ಚಿಟ್ಟುಕೊಂಡು ಮೇಲೆ ಬರೀ ನೀರು ಉಳಿಸಿ ನೋಡಿದವರಿಗೆ ಬೇಸರ ತರುವಂತೆ ಮಾಡುತ್ತೆ. ಒಂದು ವೇಳೆ ಮೇಲಿನ ತಿಳಿ ನೀರನ್ನು ಕಲಕದೆ ತೆಗೆದರೆ 'ಕಳೆದ್ಹೋಯ್ತಂತ ಕುಣಿದಾಡುತ್ತೆ ದೊಡ್ಡದೊಂದು ಕಾಟತೊಂದ್ರೆ' ಅಂದುಕೊಳ್ಳುತ್ತೆ ಮಜ್ಜಿಗೆ. ಆದರೆ ಹಾಲು ಹಾಗಲ್ಲ. ಒಲೆ ಮೇಲೆ ಕುಳಿತು ಕಾಯುವಾಗ ನೀರು ಆವಿಯಾಗಿ ಅಮರವಾದರೆ ಹಾಲು ಮುಳು ಮುಳು ಅಳುತ್ತೆ. ತುಂಬಾ ತಡವಾದರೆ ನೀರೆಂಬ ನೀರೆಯಿಂದಗಲಿದ ವಿರಹ ತಾಳಲಾರದೆ ಆತ್ಮಾರ್ಪಣಕ್ಕೂ ಸಿದ್ಧವಾಗಿ ಅಗ್ನಿ ಪ್ರವೇಶ ಮಾಡುತ್ತೆ. ಅಲ್ಲಿ ಸಹಗಮನ ಅಲ್ಲದಿರಬಹುದು, ಆದರೆ ಅನುಗಮನವಂತೂ ಸತ್ಯ. ನೀರನ್ನು ಬೇರೆ ಮಾಡಿದ ಮಜ್ಜಿಗೆಗೆ ತನ್ನಬಾಳಗೆಳತಿಯ ಸಲುವಾಗಿ ಕಣದಷ್ಟೂ ಕಾಳಜಿ ಮಾಡುವುದಿಲ್ಲ.

ಹಾಲು ನೀರುಗಳಂತೆ ಆತ್ಮೀಯ ಭಾವ ತಳೆದ ಸ್ವಾರ್ಥ ಮತ್ತು ಸ್ನೇಹಗಳ ನಂಟು ಅನುಕರಣೀಯ ಅಲ್ಲ; ಅನನ್ಯವಂತೂ ಅಲ್ಲವೇ ಅಲ್ಲ. ಅವೆರಡರ ಅಂತರಂಗದ ಬೆಸುಗೆಯಲ್ಲಿ ಏನೋ ಎಂತದೋ ಒಂದು ಅವಲೋಹಬೆರೆತಿದೆ ಎಂಬ ಗುಮಾನಿ. ಆದರೆ ಆ ತತ್ವವನ್ನು ಎಲ್ಲೆಡೆಯೂ ಅನ್ವಯಿಸಹೋಗುವುದು ಸುತರಾಂ ತಪ್ಪು. ಎಲ್ಲಾ ಸಿದ್ಧಾಂತಗಳಿಗೂ ಅಪವಾದ (Exceptions) ಗಳಿದ್ದ ಹಾಗೆ

ಇದಕ್ಕೂ ಅಪವಾದಗಳಿವೆ. ಅಂತಹ ಅಪವಾದಗಳಲ್ಲಿ ನನ್ನ ಆತ್ಮೀಯ ಮಿತ್ರರಾದ ಶ್ರೀ ಟಿ. ಮಹಾಬಲೇಶ್ವರ ಭಟ್ಟರ ಸ್ನೇಹವೂ ಒಂದು.

ನನ್ನ ದೃಷ್ಟಿಯಲ್ಲಿ ಮಹಾಬಲೇಶ್ವರ ಭಟ್ಟ ಎಂಬುದು ಶುದ್ಧ ಸ್ನೇಹಕ್ಕಿರುವ ಪರ್ಯಾಯಪದ. ಭಟ್ಟರು ಅಜಾತ ಶತ್ರು, ಅಪ್ರಮೇಯ ಮಾನವ ಪ್ರೇಮಿಗಳು. ಹಣ, ಅಧಿಕಾರ, ಕೀರ್ತಿ, ಅಂತಸ್ತು ಇವು ಯಥೇಚ್ಛವಾಗಿದ್ದರೂ ಮನುಷ್ಯರಾಗೇ ಉಳಿದಿರುವ ಮಹಾಮಾನವರು. ತಮ್ಮ ಹೃದಯಕ್ಕೆ ಹತ್ತಿರಾದವರು ಎಂಬ ಭಾವನೆ ಮೂಡಿದರೆ ಸಾಕು ಭಟ್ಟರು ಅವರನ್ನು ತಮ್ಮ ಹೃದಯದಿಂದಲೇ ಅಪ್ಪಿ ಆಲಂಗಿಸಿಕೊಂಡು, ಅವರಿಗಾಗಿ ಅಲ್ಲೊಂದು ಸ್ಥಳ ಮೀಸಲಿರಿಸುತ್ತಾರೆ. ಉತ್ಪ್ರೇಕ್ಷೆ ಎನಿಸದಿದ್ದರೆ ಅವರ ಒಡನಾಟ, ಸ್ನೇಹ, ಗಂಗೆಯಂತೆ ಪಾವನ, ಅಗ್ನಿಯಂತೆ ಪರಿಶುದ್ಧ. ಅವರದು ಬೆಲ್ಲವನು ಮೆದ್ದಂತಹ ಬಲ್ಲವರ ಒಡನಾಟ. 'ಓಹೋ' ಬನ್ನಿ ಮಾರಾಯ್ರೆ, ನಮ್ಮೂರಿಗೆ ಹೋಗುವ, ಒಂದೆರಡು ದಿನ ಆರಾಮ ಇರಿ. ಏನು ಇದ್ದದ್ದೇ ಜೀವನದಲ್ಲಿ ಜಂಜಾಟ,'' ಎಂಬ ಅವರ ಆತ್ಮೀಯ ನುಡಿಗಳಲ್ಲಿ ಕಿಲುಬೇ ಇಲ್ಲ. ಕಪ್ಪು ಕಲ್ಮಶಗಳಿರದ ನಿರ್ವ್ಯಾಜ ಪ್ರೇಮ. ಸೌಜನ್ಯ, ಸೌಶೀಲ್ಯ, ಸಜ್ಜನಿಕೆ, ಸ್ನೇಹಪರತೆ - ಇವುಗಳನ್ನು ಈ ದುಬಾರಿ ದಿನಗಳಲ್ಲಿ ಎಲ್ಲಿ ಕೊಂಡು ತರಲಿ. ಅವು ಭಟ್ಟರ ಅಂಗಡಿಯಲ್ಲಿ ಮಾತ್ರ ಸಿಗುವ ಸರಕುಗಳು. ಅಣ್ಣನ ಕ್ಷಮೆ ಬೇಡಿ ಹೇಳುವುದಾದರೆ -

ಧರೆಯ ಮೇಲೆ ಅಂಗಡಿಯನಿಟ್ಟಿದ್ದಾನೆ
ಮಹಾಬಲೇಶ್ವರನೆಂಬ ಶೆಟ್ಟಿ
ಒಮ್ಮನವಾದರೆ ಒಡನೆ ನುಡಿವನು
ಇಮ್ಮನವಾದರೆ ನುಡಿಯನು
ಕಾಣೆಯ ಸೋಲ, ಅದ್ದಗಾಣೆಯ ಗೆಲ್ಲ
ಜಾಣ ನೋಡಯ್ಯ ಶ್ರೀನಿವಾಸ ಉಡುಪ
- ಇಂತಹ ಸ್ನೇಹದ ಮೂಲ ಸೂತ್ರ ತಿಳಿದ ವ್ಯಕ್ತಿ ಅಂದರೆ -
"Be slow in making friends,
And slower still in losing them"
- ಎಂಬುದು ಭಟ್ಟರ ಸ್ನೇಹ ಸಂಹಿತೆ.

ಸಾಗರಕ್ಕೆ ಹೋದ ಸಾಹಿತಿಗಳು ಮಹಾಬಲೇಶ್ವರ ಭಟ್ಟರ ತೋಟದ ಮನೆಯಲ್ಲಿ ಒಮ್ಮೆಯಾದರೂ ಊಟ ಮಾಡಿಲ್ಲ ಎಂದರೆ ಅವರು ಸಾಗರಕ್ಕೆ ಹೋಗಿಯೇ ಇಲ್ಲ ಎಂದು ಹೇಳಬೇಕಾಗುತ್ತದೆ. ಅ.ನ.ಕೃಷ್ಣರಾಯರಿಂದ ಹಿಡಿದು ಅ.ರಾ.ಮಿತ್ರರವರೆಗೆ ಎಲ್ಲರೂ ಅವರ ಮನೆಯ ಉಪ್ಪುಂಡವರೆ. 'ಎಂಥಾ ಮರುಳಯ್ಯ

ಇದು ಎಂತಾ ಮರುಳು' ಅನುಭವಿಸಿದ ನನಗೇಕೆ ? ಕೇಳಿದ ನಿಮಗೂ ಅಷ್ಟೇ ಅಚ್ಚರಿ. ಮಹಾಬಲೇಶ್ವರ ಭಟ್ಟ ಅಂಥದೊಂದು ಆಶ್ಚರ್ಯದ ಶಿಶು.

ಮಿತಭಾಷಿ ಭಟ್ಟರಿಗೆ ಅತಿಯಾಸೆ ಇಲ್ಲ. ಅಂದಾಕ್ಷಣಕ್ಕೆ ಸಿದ್ಧಾರ್ಥ ಬುದ್ಧನಂತೆ ಆಸೆಯನ್ನೇ ನಾಶಗೈದವರಲ್ಲ. ಅವರು ಸ್ನೇಹಜೀವಿ, ಭ್ರಾತೃ ಪ್ರೇಮಿ, ವಾತ್ಸಲ್ಯಮೂರ್ತಿ. ಗೃಹ ದೇವತೆಯಂತಿರುವ ಶ್ರೀಮತಿ ಪದ್ಮಾವತಿ ಎಂಬ ನನ್ನಕ್ಕನಿಗೆ ಅಭಿಮಾನಿ ಗಂಡ, ಗೀತ, ಪುಷ್ಪ, ವಿಶ್ವನಾಥ, ಶ್ರೀನಾಥ, ರೋಹಿಣಿ, ಭಾಗ್ಯ, ತಿಮ್ಮಪ್ಪ – ಈ ಮಕ್ಕಳಿಗೆ ಅಕ್ಕರೆಯ ತಂದೆ, ಮೊಮ್ಮಕ್ಕಳಿಗೆ ಸಕ್ಕರೆಯ ತಾತ, ಸೊಸೆಯಂದಿರಿಗೆ 'ಬೆಲ್ಲದಂಥಾ ಮಾವ' ಇವರ ಮನೆ ಒಂದು ಜೇನು ಗೂಡು. ಮುಟ್ಟಿದೆಡೆಯಲ್ಲಿ ಪ್ರೀತಿ ವಾತ್ಸಲ್ಯಗಳ ಜೇನು ಹನಿಯುತ್ತದೆ. ಇವರದು ಬೆಚ್ಚನೆಯ ಮನೆ, ವೆಚ್ಚಕ್ಕೆಹೊನ್ನು, ಇಚ್ಛೆಯನರಿತು ನಡೆವ ಸತಿ, ರಾಮ, ಲಕ್ಷ್ಮಣ, ಭರತರಂತಹ ಸದ್ಭಾವ ಭಾಗೀರಥಿಯ ಮಕ್ಕಳು ಮತ್ತು ಸೊಸೆಯಂದಿರು. ಇವರಿಂದ ಕೂಡಿದ ಸ್ವರ್ಗ ! ಹೀಗಿರುವಾಗ ಸ್ವರ್ಗಕ್ಕೆ ಕಿಚ್ಚುಹಚ್ಚುವಂತಹ ಸಂಸಾರ ಎಂದು ಬೇರೆ ಹೇಳಬೇಕೆ ?

ಭಟ್ಟರ ಮತ್ತು ನನ್ನ ಸ್ನೇಹ ಜನ್ಮ ಜನ್ಮಾಂತರದ್ದಲ್ಲ. ನಾವಿಬ್ಬರೂ ಲಂಗೋಟಿ ಫ್ರೆಂಡ್ಸೂ ಅಲ್ಲ. Birds of the same feather flocked together ಅಂದಂತೆ ಒಂದೇ ಮನೋಧರ್ಮದವರು ನಾವು. ಕುಡುಕ ಕುಡುಕರು ಬಹು ಬೇಗ ಸ್ನೇಹಿತರಾಗ್ತಾರಂತೆ. ಹಾಗೆ ವೀರ ವೀರರು ಮೆಚ್ಚಿ ಗೆಳೆಯರಾದದ್ದುಂಟು. ಅದಕ್ಕೆ ಸಾಕ್ಷಿ ಪುರಾವೆಗಳಿವೆ; ಸಾಹಿತ್ಯಾಧಾರಗಳೂ ಇವೆ. ನೋಡಿ, ಟ್ರೋಜನ್ ವಾರ್‌ನಲ್ಲಿ ಟ್ರಾಯ್ ನಗರದ ಹೆಕ್ಟರ್‌ನು ಸಲಾಮಿಸ್‌ನಿಂದ ಯುದ್ಧಕ್ಕೆಹೋಗಿದ್ದ ಏಜಾಕ್ಸ್‌ನ ಪರಾಕ್ರಮವನ್ನು ಕಂಡು, ಮೆಚ್ಚಿ, ತನ್ನಂತಹ ಶೂರನನ್ನು ಪೌರುಷ ಪ್ರದರ್ಶಿಸಿ ಆಶ್ಚರ್ಯಗೊಳಿಸಿದ್ದರಿಂದ, ತನ್ನ ಶತ್ರುಪಕ್ಷದ ಪರಮ ಶತ್ರು ಸೇನಾನಿಯೇ ಆಗಿದ್ದರೂ ಅವನಿಗೆ ತನ್ನ ಅಮೂಲ್ಯವಾದ ಖಡ್ಗವನ್ನಿತ್ತು ಗೌರವಿಸಿದನಂತೆ. ಇದಲ್ಲವೇ ಶೂರನ ಲಕ್ಷಣ ! ಅದೇ ರೀತಿಯ ಶೌರ್ಯ ಸಂಪರ್ಕ 'ಗಿಲ್ಗಮಿಶ್' ಮತ್ತು 'ಎಂಕಿಡೊ'ರವರದು. ಅಸ್ಸೀರಿಯಾ ಬ್ಯಾಬಿಲೋನಿಯಾ ಭಾಷೆಗಳಲ್ಲಿರುವ 'ಗಿಲ್ಗಮಿಶ್' ಎಂಬ ಜಾನಪದ ಮಹಾಕಾವ್ಯವನ್ನು ಓದಿದರೆ ಎಲ್ಲಾಗೊತ್ತಾಗುತ್ತೆ. 'ಗಿಲ್ಗಮಿಶ್' ಯೂರಿಕ್ ದೇಶದ ಚಕ್ರವರ್ತಿ, ಅಸಹಾಯ ಶೂರ, ಅದ್ಭುತ ಪರಾಕ್ರಮಿ. ಸೋಲು ಎಂಬ ಶಬ್ದವೇ ಅವನಿಗೆ ತಿಳಿದಿರಲಿಲ್ಲ. ಎಲ್ಲಾ ಗೆಲುವು ಎಲ್ಲೆಲ್ಲೂ ಗೆಲುವು. ಅವನ ಸೊಕ್ಕು ಮುರಿಯಲೆಂದೇ ದೇವರು 'ಎಂಕಿಡು'ವನ್ನು ಸೃಷ್ಟಿಸಿದ. ಎಂಕಿಡು ಹುಟ್ಟಿದ್ದು ಕಾಡಿನಲ್ಲಿ, ಬೆಳೆದದ್ದು ಕಾಡುಮೃಗಗಳ ಜೊತೆಯಲ್ಲಿ. ಅವನ ದೇಹ ಬಟ್ಟೆ ಮುಟ್ಟಿರಲಿಲ್ಲ. ಮನುಷ್ಯರಂತೆ ಮಾತಿಲ್ಲ, ಆಹಾರವೂ ಕಾಡು ಪ್ರಾಣಿಗಳಂತೆ ಬೇಟೆಯಾಡಿ ತಂದ ಹಸಿ ಮಾಂಸ. ಅಂತಹ ಮಾನವ ಮೃಗವನ್ನು ಮನುಷ್ಯನನ್ನಾಗಿ ಮಾಡಲು ಯತ್ನ ನಡೆಯಿತು. ಓರ್ವ

ದೇವದಾಸಿಯನ್ನು ಚಿತ್ರಲೆಯಾಗಿ ಅವನೆಡೆಗೆ ಬಿಡಲಾಯಿತು. ಅವಳ ಸಹವಾಸದಿಂದ ಎಂಕಿಡು ಹಸಿಮಾಂಸ ಬಿಟ್ಟು ಬೆಂದ ಮಾಂಸ ತಿನ್ನತೊಡಗಿದ; ಮೇಕೆ ಹಾಲು ಕುಡಿಯುವುದನ್ನು ಕಲಿತ. ಮಾನ ಮುಚ್ಚಿಕೊಳ್ಳುವಷ್ಟು ಮರ್ಯಾದೆಯೂ ಅವನಿಗೆ ಬಂತು. ಆದರೆ ಯೂರಿಕ್ ನಗರದ ದ್ವಾರದಲ್ಲಿ ಪ್ರವೇಶ ದೊರೆಯಲಿಲ್ಲ. ಸಮ್ರಾಟ ಗಿಲ್ಗಮಿಶ್‌ಗೂ ಎಂಕಿಡುವಿಗೂ ಹೋರಾಟ ನಡೆಯಿತು. ಪರಿಣಾಮವಾಗಿ ಕೋಟೆ ಬಾಗಿಲುಗಳು ಪುಡಿಪುಡಿಯಾದವು. ಆಗಸೆಯ ಬೆಳೆಯಿದ್ದ ಮರಗಳು ಬೇರು ಕಳೆದುಕೊಂಡು ಉರುಳಿದವು. ಬಂಡೆಗಳು ನುಚ್ಚು ನುರಿಯಾದವು. ಅಕ್ಷತೆಯ ಕಾಳಿನಂತೆ ನಕ್ಷತ್ರಗಳು ತಳತಳ ಉದುರಿದವು. ಸಪ್ತ ಸಾಗರಗಳು ಕುದಿದೆದ್ದವು. ಆದರೆ ಆ ದ್ವಂದ್ವ ಯುದ್ಧದಲ್ಲಿ ಯಾರೂ ಗೆಲ್ಲಲಿಲ್ಲ, ಯಾರೂ ಸೋಲಲಿಲ್ಲ. ಅವರಿಬ್ಬರ ಸಂಧಾನಕ್ಕೆ ಮುಂದಾಗುವ ಎದೆಗಾರಿಕೆ ಯಾರಿಗೂ ಇರಲಿಲ್ಲ. ಅದ್ದರಿಂದ ಆಕಸ್ಮಿಕ ಸಂದರ್ಭದಲ್ಲಿ ದರ್ಶಿಸಿದರೂ ರಾಮಕೃಷ್ಣರು, ಸ್ವಾಮಿ ವಿವೇಕಾನಂದರನ್ನು ಗುರುತಿಸಿದಂತೆ ಗಿಲ್ಗಮಿಶ್ ಮತ್ತು ಎಂಕಿಡು ಒಂದಾದರು, ಪರಸ್ಪರ ಪರಾಕ್ರಮ ಪ್ರದರ್ಶನವನ್ನು ಮೆಚ್ಚಿಕೊಂಡರು. ಅನ್ಯೋನ್ಯ ಗೆಳೆಯರಾದರು. ಜಗತ್ತಿನ ಇತಿಹಾಸದಲ್ಲಾಗಲಿ ಕಾವ್ಯದಲ್ಲಾಗಲಿ ಕಾಣಸಿಗದಂಥಾ ಸ್ನೇಹ, ಪ್ರಾಪ್ತವಾಯಿತು ಅವರಿಬ್ಬರಲ್ಲಿ. ಅನೇಕ ದಿನಗಳು ಹಾಗೆಯೇ ಬದುಕಿದರು. 'ಇಜಟ ಕರ್ಣನ ಕೂಡೆ, ಹಗಲಿರುಳಾಟ ಕರ್ಣನ ಕೂಡೆ'. ಎಂಬಂತೆ ಎರಡು ದೇಹ ಒಂದೇ ಆತ್ಮ ಆದರು. ಇವರಿಬ್ಬರ ಸ್ನೇಹ, ದೇವತೆಗಳನ್ನೂ ನಾಚಿಸಿತು. ಈಷ್ಟರ್ ಎಂಬುವಳ ಕುತಂತ್ರದಿಂದಾಗಿ ಎಂಕಿಡು ಅಕಾಲ ಮರಣಕ್ಕೆ ತುತ್ತಾದ. ತನ್ನ ಪ್ರಾಣ ಸ್ನೇಹಿತನನ್ನು ಬದುಕಿಸಲು ಗಿಲ್ಗಮಿಶ್ ಪಟ್ಟ ಸಾಹಸ ವ್ಯರ್ಥವಾಯಿತು. ಕಡೆಗೆ; ''ಹುಟ್ಟು ಆಕಸ್ಮಿಕ, ಮರಣ ಅನಿವಾರ್ಯ' ಎಂಬ ಸಿದ್ಧಾಂತಕ್ಕೆ ಬರುತ್ತಾನೆ.

ನಾನು ತಿಳಿದಿದ್ದೆ, ಸ್ನೇಹಕ್ಕೆ ಭಾರತ ತವರು ಎಂದು; ಭಾರತವನ್ನು ಬಿಟ್ಟರೆ ಜಗತ್ತಿನ ಬೇರಾವ ರಾಷ್ಟ್ರಕ್ಕೂ ಸ್ನೇಹದ ಅರ್ಥ ತಿಳಿದಿಲ್ಲ ಎಂದು. ನಮ್ಮ ಮಹಾಭಾರತದಲ್ಲಿ ಬರುವ ಕರ್ಣ ದುರ್ಯೋಧನರ ಮೈತ್ರಿಯ ಮುಂದೆ ಬೇರಾವ ಸ್ನೇಹವೂ ನಿಲ್ಲುವುದಿಲ್ಲ ಎಂದು ಭಾವಿಸಿದ್ದೆ. ಆದರೆ ಅಮೇರಿಕೆಯಲ್ಲಿ ನನ್ನ ಮಗಳ ಮನೆಯಲ್ಲಿದ್ದಾಗ ನಾನು ಓದಿದ ಗಿಲ್ಗಮಿಶ್ ನನ್ನ ಸಂಕುಚಿತ ಭಾವನೆಯ ಕಣ್ಣು ತೆರೆಸಿತು. ಸ್ನೇಹ ಎಂಬುದಿದ್ದರೆ ಗಿಲ್ಗಮಿಶ್ ಮತ್ತು ಎಂಕಿಡುರವರಂತಹ ನಿಃಸ್ವಾರ್ಥ, ನಿಷ್ಕಪಟ ಹಾಗೂ ಪವಿತ್ರ ಪ್ರಾಂಜಲ ಗೆಳೆತನದಂತೆ ಇರಬೇಕು ಅನ್ನಿಸಿತು. ಇವರ ಸ್ನೇಹಕ್ಕೆ ಹೋಲಿಸಿದರೆ ನಮ್ಮ ಮಹಾಭಾರತದ ಕರ್ಣ ದುರ್ಯೋಧನರ ಮೈತ್ರಿಯೂ ಪವಿತ್ರವಾದುದೇ, ಆದರೆ ಅವರ ಅವ್ಯಾಜ ಪ್ರೇಮವನ್ನು ಪ್ರಶ್ನಿಸುವ ಹುನ್ನಾರ ಕೃಷ್ಣನದ್ದಿತ್ತು. ಅದು ಕೈತವದ ಶಿಕ್ಷಾ ಗುರುವಿನ ಸಮಯ ಸಾಧಕ ಚಾತುರ್ಯ ಎನ್ನಿಸದೆ ಇರುವುದಿಲ್ಲ. ಸಂದರ್ಭ ತಮಗೆ ತಿಳಿದೇ ಇದೆ. ಆದರೂ ಒಂದು ಮಾತು ಹೇಳಲೆ ?

ಒಮ್ಮೆ ಕರ್ಣ ದುರ್ಯೋಧನರಿಬ್ಬರೂ ಬೇಟೆಗೆ ಹೋಗಿದ್ದರಂತೆ. ನಗರಕ್ಕೆ ಹಿಂತಿರುಗುವಾಗ ಗಂಗಾನದಿಯ ತಟದಲ್ಲಿ ಸತ್ಯಂತಪ ಮಹಾಮುನಿಗಳ ಆಶ್ರಮವನ್ನು ಪ್ರವೇಶಿಸಿದರು. ದರ್ಶನಾಶೀರ್ವಾದಗಳಿಗಾಗಿ ಮುನಿಗಳ ಮುಂದೆ ನಿಂತಾಗ ಸತ್ಯಂತಪರು ಒಂದೇ ಒಂದು ಆಸನ ತರಿಸಿ 'ಕರ್ಣ, ಕುಳಿತುಕೋ ಅಪ್ಪ' ಅಂದರು. ಅದರಿಂದ ಅಪಮಾನಿತನಾದೆನೆಂದು ಭಾವಿಸಿದ ದುರ್ಯೋಧನ ಏನೋ ಒಂದು ನೆಪ ಹೇಳಿ ಕರ್ಣನನ್ನು ಆಶ್ರಮದಿಂದ ಹೊರಗೆ ಕಳುಹಿಸಿ, ಮುನಿಗಳನ್ನು ತರಾಟೆಗೆ ತೆಗೆದುಕೊಂಡ 'ಆನಿರೆ ನೀಮಿದೇಕೆ ದಯೆಗೈಯ್ವಿರೊ ಮಾಂಗುಲಿಗಂಗೆ''. ಎಂದು ಇಲ್ಲಿನ 'ಆನಿರೆ' ಎಂಬ ಮೂರಕ್ಷರದ ಶಬ್ಧದಲ್ಲಿದುರ್ಯೋಧನನ ಅಹಂಭಾವವೆ ಮೂರ್ತಿಮತ್ತಾಗಿ ನಿಂತಿರುವುದನ್ನು ಕಾಣಬಹುದು.'ಆನಿರೆ' ಅಂದರೆ ಚಕ್ರವರ್ತಿ ಸಾರ್ವಭೌಮನಾದ ನಾನಿರಬೇಕಾದರೆ, ನನ್ನ ಕೈಕೆಳಗಿನ ಸಾಮಂತನಿಗೇಕೆ ಅಗ್ರಸ್ಥಾನ? 'ಆನಿರೆ' ಅಂದರೆ ಸತ್ಕುಲ ಪ್ರಸೂತನೂ ಸದ್ವಂಶ ಸಂಜಾತನೂ ಆದ ನಾನಿರಬೇಕಾದರೆ ಹೀನಕುಲದವನಾದ ಕರ್ಣನಿಗೇಕೆ ಮೊದಲ ಮನ್ನಣೆಯ ಮಣೆ ?

ದುರ್ಯೋಧನನ ಈ ದುರ್ಭಾವನೆಗಳಿಗೆ ಉತ್ತರವಾಗಿ ಸತ್ಯಂತಪರು ತಿಳಿಯ ಹೇಳಿದರು. 'ಕರ್ಣ ಯಾರೆಂದು ತಿಳಿದಿದ್ದೀಯೆ ? ಅವನು ಕುಂತಿಯ ಚೊಚ್ಚಲ ಕಂದ; ಸೂರ್ಯಾಂಶ ಸಂಭೂತ. ಕೌರವರಾದ ನಿಮಗೂ ಧರ್ಮರಾಯಾದಿ ಪಾಂಡವರಿಗೂ ಹಿರಿಯ. ಅವನೇ ಈ ಸಾಮ್ರಾಜ್ಯ ಪಟ್ಟ ಪದವಿಗಳಿಗೆ ಹಕ್ಕುದಾರ'. ಅಂದಾಗ, ದುರ್ಯೋಧನನ ಬುದ್ಧಿ ಅಂದುಕೊಂಡಿತು. ಮುಳ್ಳೊಳೆ ಮುಳ್ಳ ಪಾಟಿಸುವೆನೆಂದು. (ಮುಳ್ಳಿನಿಂದಲೇ ಮುಳ್ಳನ್ನು ತೆಗೆಯುತ್ತೇನೆ). ಅಂದರೆ ಪಾಂಡವನಾದ ಕರ್ಣನಿಂದಲೇ ಪಾಂಡವರ ನಾಶಮಾಡಿಸುತ್ತೇನೆ ಎಂದು.

ನನ್ನ ಮತ್ತು ಭಟ್ಟರ ಸ್ನೇಹ ಕರ್ಣ ದುರ್ಯೋಧನರದ್ದಲ್ಲ; ಗಿಲ್ಗಮಿಶ್ ಮತ್ತು ಎಂಕಿಡುರವರದ್ದೂ ಅಲ್ಲ. ನಮ್ಮದು ಅವ್ಯಾಜ ಮೈತ್ರಿ, ಅನಿಮಿತ್ತ ಬಂಧುತ್ವ.

ನಮ್ಮಿಬ್ಬರ ಪ್ರಥಮ ಸಮಾಗಮ ಶಿವಮೊಗ್ಗೆಯಲ್ಲಿ, ನಾನಿದ್ದ ಬಾಡಿಗೆ ಮನೆಯಲ್ಲಿ. ಅಂದು ರಾಷ್ಟ್ರಕವಿ ಕುವೆಂಪುರವರ ಅರವತ್ತನೆಯ ಹುಟ್ಟು ಹಬ್ಬದ ಆಚರಣೆ. ಅದ್ದೂರಿಯ ಕಾರ್ಯಕ್ರಮ, ಕವಿವರ್ಯರ ತೌರಾದ ಶಿವಮೊಗ್ಗೆಯಲ್ಲಿ. ಅರವತ್ತರ ಅಭಿನಂದನೆಗಾಗಿ ರಚಿತವಾದ ಸಮಿತಿಯಲ್ಲಿನಾನು ಮತ್ತು ನನ್ನ ಗೆಳೆಯ ಕೆ. ನಾಗೇಂದ್ರಪ್ಪ ಕಾರ್ಯದರ್ಶಿಗಳು. ವರಕವಿ ಬೇಂದ್ರೆಯವರನ್ನು ಅಂದಿನ ಸಮಾರಂಭಕ್ಕೆ ಅತಿಥಿಯಾಗಿ ಕರೆದಿದ್ದೆವು. ಕವಿದ್ವಯರನ್ನು ಸಭೆಗೆ ಪರಿಚಯಿಸುವ ಹೊಣೆ ನನ್ನದಾಗಿತ್ತು. ಅದ್ಭುತವಾಗಿ, ಅಲಂಕಾರಿಕ ಭಾಷೆಯಲ್ಲಿ, ಕಾವ್ಯಮಯ ಶೈಲಿಯಲ್ಲಿ ಪರಿಚಯಿಸಿದೆ. ಸಹಸ್ರಾರು ಜನರ ಸಭೆ ಅಂದು ಮಂತ್ರಮುಗ್ದವಾಗಿತ್ತು. ಜೊತೆಗೆ ನಾನು ಬಾಯಿ ಬಡಕ ಅಲ್ಲ, ಮಾತು ಬಲ್ಲವ, ಎಂಬುದು ಸಾಬೀತಾಯಿತು.

ವೇದಿಕೆಯ ಮೇಲಿದ್ದ ನನ್ನನ್ನು ನೋಡಿ, ನುಡಿ ಕೇಳಿ ಮೆಚ್ಚಿದ ಮಹಾಬಲೇಶ್ವರ ಭಟ್ಟರು ತಮ್ಮೂರಿನ ಅಂದರೆ ಸಾಗರದ ಶ್ರೀನಿವಾಸ ಉಡುಪ, ಮಧ್ಯಸ್ಥ, ಪಂಪಣ್ಣ ಮೊದಲಾದವರ ಕೂಡೆ ಸಾಹಿತಿಗಳ ತಂಡವನ್ನೇ ಕರೆತಂದರು, ನನ್ನ ಮನೆಗೆ ಮಾರನೆಯದಿನ, ಅಂದಿನಿಂದ ನನ್ನ ಮತ್ತು ಸಾಗರದ ಸಂಬಂಧ ಬೆಳೆಯಿತು. ಅದು ಇಂದಿಗೂ ಉಳಿದಿದೆ ಎಂದಿಗೂ ಉಳಿಯುತ್ತೆ. ಅದರ ರೂವಾರಿ ಬಹುಮುಖಿ ಪ್ರತಿಭೆಯ ಕಾಯಕಯೋಗಿ ಶ್ರೀ ಮಹಾಬಲೇಶ್ವರ ಭಟ್ಟರ ಮತ್ತು ನನ್ನ ನಂಟು ಅಚ್ಚಳಿಯದೆ ಉಳಿದಿದೆ. ಈ ಜನ್ಮವಿರುವವರೆಗೂ ಅದು ಹಚ್ಚ ಹಸುರಾಗಿ, ಹೊಚ್ಚ ಹೊಸದಾಗಿ ಉಳಿಯುವಂಥದು. ಅಷ್ಟೇ ಅಲ್ಲ ಚಂದ್ರಮತಿ ಕೇಳಿಕೊಂಡಳಂತೆ ಜನ್ಮ ಜನ್ಮಾಂತರವೂ ಸತ್ಯ ಹರಿಶ್ಚಂದ್ರನೇ ತನ್ನ ಪತಿಯಾಗಲಿ ಎಂದು. ನಾನು ಆಶಿಸುತ್ತೇನೆ, ಮುಂದಿನ ಜನ್ಮಗಳಲ್ಲೂ ಅಕ್ಕರೆಯ ಅಭಿಮಾನಿ ಮಹಾಬಲೇಶ್ವರ ಭಟ್ಟರ ಸ್ನೇಹ ಲಭಿಸಲಿ ಎಂದು.

**“ಓಂ ತತ್‌ಸತ್”**

# ಸಾರ್ಥಕ ಜೀವನದ ಪ್ರತೀಕ

- ಪ್ರೊ. ಎಸ್.ಆರ್. ಮಳಗಿ

ಶ್ರೀ ಟಿ. ಮಹಾಬಲೇಶ್ವರ ಭಟ್ಟರು ಶಿವಮೊಗ್ಗ ಜಿಲ್ಲೆಯ ಸಾಗರದ ಗಣ್ಯ ಮಹನೀಯರಲ್ಲಿ ಒಬ್ಬರು. ಅವರು ೯-೯-೧೯೭೭ರಂದು ತಮ್ಮ ವಯಸ್ಸಿನ ಎಪ್ಪತ್ತನೆಯ ವರ್ಷದಲ್ಲಿ ಪಾದಾರ್ಪಣೆ ಮಾಡಲಿರುವುದು ತಿಳಿದು ಬಂದಿದೆ. ಈ ಶುಭ ಸಂದರ್ಭದಲ್ಲಿ ಅವರ ಮಿತ್ರರೂ, ಅಭಿಮಾನಿಗಳೂ ಸೇರಿ ಒಂದು 'ಅಭಿನಂದನ ಗ್ರಂಥ'ವನ್ನು ಹೊರತರಲಿರುವುದನ್ನರಿತು ಸಂತೋಷಗೊಂಡಿದ್ದೇನೆ. ಅಭಿನಂದನ ಸಮಿತಿಯ ಸಂಚಾಲಕರಾದ ಶ್ರೀ ತಿರುಮಲ ಮಾವಿನ ಕುಳಿ ಮತ್ತು ಶ್ರೀ ಪ್ರಕಾಶ್. ಆರ್. ಕಮ್ಮಾರ್ ಇವರ ಅಪೇಕ್ಷೆಯ ಮೇರೆಗೆ ಈ ಲೇಖನಕ್ಕೆ ತೊಡಗಿದ್ದೇನೆ.

೧೯೬೯ರಿಂದ, ೧೯೭೧ರ ವರೆಗೆ ಎರಡು ವರ್ಷಗಳ ಕಾಲ ನಾನು ಸಾಗರದಲ್ಲಿದ್ದೆ; ಅಲ್ಲಿಯ 'ಮಲೆನಾಡು ಅಭಿವೃದ್ಧಿ ಪ್ರತಿಷ್ಠಾನದ ಲಾಲ್ ಬಹದ್ದೂರ್ ಕಲಾ, ವಿಜ್ಞಾನ ಮತ್ತು ಎಸ್.ಬಿ. ಸೊಲಬಣ್ಣಶೆಟ್ಟಿ ವಾಣಿಜ್ಯ ಮಹಾವಿದ್ಯಾಲಯದ ಪ್ರಾಂಶುಪಾಲನಾಗಿದ್ದೆ. ಇದು ಇಪ್ಪತ್ತೈದು ವರ್ಷಗಳ ಹಿಂದಿನ ಮಾತು. ಅಂದಿನ ಎಷ್ಟೋ ಸಂಗತಿಗಳು ಹಾಗೂ ಮಾನ್ಯ ಮಿತ್ರರ ನೆನಪು ಇಂದು ಮಸುಕು ಮಸುಕು. ಆದರೂ ಈ ಅಲ್ಪಾವಧಿಯ ಸಾಗರದ ನನ್ನ ಜೀವನದ ಹಲವು ರಸನಿಮಿಷಗಳ ನೆನಪುಗಳು ನನ್ನ ಮನದಲ್ಲಿ ಅಚ್ಚಳಿಯದಿವೆ, ಅಮೂಲ್ಯವೆನಿಸಿವೆ. ಇವುಗಳಲ್ಲಿ ಶ್ರೀ ಟಿ. ಮಹಾಬಲೇಶ್ವರ ಭಟ್ಟರ ನೆನಪುಗಳೋ ಮರೆಯಲಾರದಂಥವು. ನಾನು ಸಾಗರದ ಕಾಲೇಜಿನಲ್ಲಿ ಕೆಲಸಕ್ಕೆ ಸೇರಿದ್ದ ಹೊಸತರಲ್ಲಿ ಶ್ರೀಯುತ ಭಟ್ಟರನ್ನು ಮೊದಲ ಸಲ ಅವರ ಮನೆಯಲ್ಲಿಯೇ ಕಂಡು ಪರಿಚಯ ಮಾಡಿಕೊಂಡೆ. ಅಂದಿನ ನನ್ನ ಆತ್ಮೀಯ ಕಿರಿಯ ಮಿತ್ರರೂ ಕಾಲೇಜಿನ ಸಹಾಯಕ ಅಧ್ಯಾಪಕರೂ ಆಗಿದ್ದ ಶ್ರೀ ಗುರುಪಾದ ಹೆಗಡೆ ಮತ್ತು ಶ್ರೀ ತಾರಾನಾಥ ಭಟ್ಟ ಇವರ ಮೂಲಕ ಈ ಪರಿಚಯ ಸೌಭಾಗ್ಯ ನನಗೊದಗಿತು. ಆ ಮೊದಲ ನೋಟದಲ್ಲಿಯೇ ಶ್ರೀ ಟಿ. ಮಹಾಬಲೇಶ್ವರ ಭಟ್ಟರ ವಿಶಿಷ್ಟ ವ್ಯಕ್ತಿತ್ವದ ಹಲವು ಮುಖಗಳ ಕೆಲಮಟ್ಟಿನ ಪರಿಚಯ ನನಗಾಯ್ತು. ಅವರ ಸರಳ ಖಾದೀ ಉಡುಪು, ಮೆಲುನಗೆ, ನೇರಮಾತುಕಥೆ, ಮನೆಯ ಚೆಲುವಾದ ಪರಿಸರ ಇತ್ಯಾದಿಗಳಲ್ಲಿ ಅವರ ನಯವಿನಯ ಸಂಸ್ಕೃತಿ ಸಂಪನ್ನತೆ, ಸಮಾಜ ಸೇವಾ ತತ್ಪರತೆ, ರಾಷ್ಟ್ರಭಕ್ತಿ, ಕನ್ನಡನಾಡು-ನುಡಿಗಳ ಬಗ್ಗೆ ಆಸಕ್ತಿ, ಸಾಹಿತ್ಯ ರಚನಾಶಕ್ತಿ

ಇಪ್ಪುಗಳನ್ನು ಗುರುತಿಸಿದ್ದೆ. ಕ್ರಮೇಣ ಪರಿಚಯ ಸ್ನೇಹವಾಗಿ ಪರಿಣಮಿಸಿತು. ಅವರ ಜೀವನದ ಬಗ್ಗೆ ಹೆಚ್ಚು ಹೆಚ್ಚಾಗಿ ತಿಳಿದಂತೆ ಅವರನ್ನು ಕುರಿತ ನನ್ನ ಪ್ರೀತ್ಯಾದರ ಭಾವಗಳು ಹೆಚ್ಚಿದವು. ಅಪರಿಚಿತ ಸ್ಥಳದಲ್ಲಿ ಇಂಥಾ ಸುಸಂಸ್ಕೃತ ಧ್ಯೇಯವಾದೀ ಸ್ನೇಹಿತರ ಸತ್ಸಂಗವು ಅಮೂಲ್ಯವೆನಿಸಿದ್ದು ಸಹಜ.

ಶ್ರೀ ಟಿ. ಮಹಾಬಲೇಶ್ವರ ಭಟ್ಟರ ವ್ಯಕ್ತಿತ್ವದಲ್ಲಿ ಯಾರನ್ನೂ ಬೆರಗುಗೊಳಿಸುವ ಅಂಶವೆಂದರೆ, ೧೯೪೬ರಲ್ಲಿ ತಮ್ಮ ಹದಿನೆಂಟನೆಯ ವರ್ಷದ ಎಳೇ ಹರೆಯದಲ್ಲಿಯೆ ಅಖಿಲ ಭಾರತ ಕಾಂಗ್ರೆಸ್ ಪಕ್ಷದ ಪ್ರಾಥಮಿಕ ಹಾಗೂ ಸಕ್ರಿಯ ಸದಸ್ಯರಾದುದು; ಮತ್ತು ಅಂದಿನಿಂದ ಅರ್ಧ ಶತಮಾನದಷ್ಟು ಕಾಲ ಅದೊಂದೇ ಪಕ್ಷದಲ್ಲಿದ್ದು ನಿಷ್ಠೆಯಿಂದ ದೇಶ ಸೇವೆಗೈಯ್ದುದು. ಇದು ಅವರ ಅಸಾಮಾನ್ಯ ತಪಸ್ಸಾಧನೆಯೆಂದೇ ನನ್ನ ಭಾವನೆ!

೧೯೪೨ ರಿಂದ ದೇಶದ ಸ್ವಾತಂತ್ರ್ಯ ಚಳುವಳಿ ಕೊನೆಯ ಹಂತವನ್ನು ತಲುಪಿದ್ದ ಅತಿ ಮಹತ್ವದ ಕಾಲ. ಬ್ರಿಟಿಷ್ ಸಾಮ್ರಾಜ್ಯಶಾಹಿಗೆ ಕ್ವಿಟ್ ಇಂಡಿಯಾ, ಚಲೇ ಜಾವ್ - ದೇಶ ಬಿಟ್ಟುತೊಲಗಿ'' ಎಂದು ಕೂಗೆಬ್ಬಿಸಿದ ಕಾಲವದು. ಈ ರಭಸದ ಆಂದೋಲನದಲ್ಲಿ ಧುಮುಕಿದ್ದ ಕಾರಣದಿಂದ ಬಹುಶಃ ಶ್ರೀ ಭಟ್ಟರಿಗೆ ಎಸ್.ಎಸ್.ಎಲ್.ಸಿ. ಪರೀಕ್ಷೆ ಮುಗಿಸಿದ ನಂತರ ತಮ್ಮ ವಿದ್ಯಾಭ್ಯಾಸವನ್ನು ಮುಂದುವರಿಸುವುದಾಗಿರಲಿಕ್ಕಿಲ್ಲ. ಆದರೆ ಮಹಾತ್ಮರ ನೇತೃತ್ವದಲ್ಲಿ, ಪಂಡಿತ ಜವಹರಲಾಲ್ ನೆಹರೂ, ಸರ್ದಾರ್ ವಲ್ಲಭಭಾಯಿ ಪಟೇಲ್, ಡಾ. ರಾಜೇಂದ್ರ ಪ್ರಸಾದ್, ರಾಜಾಜಿ, ಲಾಲ್‌ಬಹದ್ದೂರ್ ಶಾಸ್ತ್ರೀ ಮುಂತಾದ ಪ್ರಖ್ಯಾತ ಸ್ವಾತಂತ್ರ್ಯ ಯೋಧರು ಅತುಲ ಸ್ವಾರ್ಥ ತ್ಯಾಗದಿಂದ, ಗಾಢ ನಿಷ್ಠೆಯಿಂದ ನಡೆಸಿದ್ದ ಸ್ಫೂರ್ತಿದಾಯಕ ಸತ್ಯಾಗ್ರಹದಲ್ಲಿ ಪಾಲ್ಗೊಳ್ಳುವುದೇ ಇವರಿಗೆ ಒಂದು ಅಧ್ಯಯನವೆನಿಸಿರಬೇಕು. ಆಗ ಈ ರಾಷ್ಟ್ರ ನಾಯಕರ ನಿತ್ಯದ ರಾಜಕೀಯ ಹಾಗೂ ಸಾರ್ವಜನಿಕ ಕಾರ್ಯ -ಕಲಾಪಗಳ ಹಾಗೂ ಅವರ ಜೀವನ ಚರಿತ್ರೆಗಳ ಸೂಕ್ಷ್ಮಾವಲೋಕನ ಮತ್ತು ನಿರಂತರ ವ್ಯಾಸಂಗ ಇವರಿಗೆ ಶಾಲೆ-ಕಾಲೇಜುಗಳಲ್ಲಿ ದೊರೆಯಲಾರದ ಮೌಲಿಕ ವಿದ್ಯೆಯನ್ನು ಸಂಸ್ಕೃತಿಯ ಪಾಠಗಳನ್ನು ನೀಡಿರಬೇಕು. ಈ ಬಗೆಯ ದೇಶ ಸೇವಾ ಸಾಧನೆಯಲ್ಲಿ ಇವರಿಗೆ ತಮ್ಮ ಜೀವನದ ಗುರಿಯೇ ನೆಂಬುದರ ಅರಿವು ಮೂಡಿರಬೇಕು. ಇವರ ಜೀವನ ಪಥ ಖಚಿತಪಟ್ಟಿರಬೇಕು.

ಆ ಕಾಲದ ವಿದ್ಯಾರ್ಥಿಗಳಲ್ಲಿ ಅದೆಷ್ಟು ಜನ ಇವರ ಹಾಗೆ ಆ ಗಂಡಾಂತರಕಾರೀ ಸ್ವಾತಂತ್ರ್ಯ ಯುದ್ಧದಲ್ಲಿ ಧುಮುಕಿದರು? ಮಹಾತ್ಮರ ಸತ್ಯಾಗ್ರಹದ ಕರೆಗೆ ಅದೆಷ್ಟು ಜನ ಓಗೊಟ್ಟರು? ತಮ್ಮ ಬಾಳನ್ನೇ ದೇಶಕ್ಕಾಗಿ ಮುಡಿಪಿಡುವ ಅಂಥ ದೇಶ ಭಕ್ತಿಯ ಪ್ರೇರಣೆ, ಅಂಥ ನಿಸ್ವಾರ್ಥ ಭಾವಾವೇಶ ಹುಟ್ಟುವುದು ಎಲ್ಲರ ಅಳವಿನದಲ್ಲ.

ಉಚ್ಚ ಸಂಸ್ಕೃತಿ, ಶಿಷ್ಟ ತಾಯ್ತಂದೆ – ಅಜ್ಜ–ಮುತ್ತಜ್ಜಂದಿರ ಬಳುವಳಿಯ ಸಂಸ್ಕಾರವುಳ್ಳ ಹಾಗೂ ಜನ್ಮ ಜನ್ಮಾಂತರಗಳ ಆತ್ಮ ಸಂಸ್ಕಾರವುಳ್ಳ ಅಪರೂಪದ ಕೆಲವೇ ಕೆಲವರಲ್ಲಿ ಇಂಥಹ ಮಿಡಿತವಿರುತ್ತದೆ. 'ಆಂತರಃ ಕೋಪಿ ಹೇತುಃ' – ಎಂಬ ಕಾವ್ಯೋಕ್ತಿಯಂತೆ ಹೃದಯಾಂತರಾಳದಲ್ಲಿ ಯಾವುದೋ ಒಂದು ದಿವ್ಯ ಚೇತನದ ಮಿಡಿತವಿದು; ಅಂಥ ವಿರಳ ವ್ಯಕ್ತಿಗಳಲ್ಲಿ ಶ್ರೀ ಟಿ. ಮಹಾಬಲೇಶ್ವರ ಭಟ್ಟರು ಒಬ್ಬರೆಂದೇ ನನ್ನ ಅನಿಸಿಕೆ.

ಎರಡನೆಯದಾಗಿ, ಶ್ರೀ ಭಟ್ಟರ ರಾಜಕೀಯ ಪಕ್ಷನಿಷ್ಠೆ ಅನುಪಮ. ೧೯೪೬ ರಿಂದ ೪೩ ವರ್ಷಗಳ ದೀರ್ಘಕಾಲ ಕಾಂಗ್ರೆಸ್ ಪಕ್ಷವೊಂದರಲ್ಲೇ ಅವರು ಸೇವೆ ಸಲ್ಲಿಸಿದ್ದು ಸಾಮಾನ್ಯ ಮಾತಲ್ಲ. ಸ್ವಾತಂತ್ರ್ಯ ಪ್ರಾಪ್ತಿಯ ಆನಂತರದಲ್ಲಿ ಯಾವ ಯಾವುವೋ ಕಾರಣಗಳಿಂದ ಏನೇನೋ ಉದ್ದೇಶವಿರಿಸಿಕೊಂಡು ಹಲವಾರು ರಾಜಕೀಯ ಪಕ್ಷಗಳು ಹುಟ್ಟಿಕೊಂಡುದು ಈ ದೇಶದ ಪ್ರಚಲಿತ ಇತಿಹಾಸ. ದೇಶಕ್ಕೆ ಸ್ವಾತಂತ್ರ್ಯ ತಂದುಕೊಟ್ಟ ಆನಂತರ ದೇಶದ ಆಡಳಿತದ ನೊಗಹೊತ್ತು ಬಹುಕಾಲ ಸಾರ್ಥಕ ಸೇವೆಸಲ್ಲಿಸಿದ ಪಕ್ಷವೆಂದರೆ ಕಾಂಗ್ರೆಸ್ಸು. ಆದರೆ ಪಂಡಿತ ನೆಹರೂ, ಲಾಲ್ ಬಹದ್ದೂರ್ ಶಾಸ್ತ್ರಿಯವರ ತರುವಾಯ ಬರಬರುತ್ತಾ ಕೇಂದ್ರಹಾಗೂ ರಾಜ್ಯ ಸರ್ಕಾರಗಳ ಆಡಳಿತಗಳಲ್ಲಿ ದಕ್ಷತೆ – ನ್ಯಾಯನಿಷ್ಠೆ ಕುಸಿಯುತ್ತಾಹೋದುದು ಎಲ್ಲರೂ ಬಲ್ಲ ಸಂಗತಿ. ಇದರಿಂದ ಭದ್ರವಾಗಿ ತಳವೂರಿದ್ದ ಕಾಂಗ್ರೆಸ್ ಪಕ್ಷದಲ್ಲೂ ಒಡಕುಂಟಾಗಿ ಬೇರೆ ಬೇರೆ ಪಕ್ಷಗಳು ಹುಟ್ಟಿಕೊಂಡವು. ಅಧಿಕಾರ ಲಾಲಸೆ, ಸ್ವಾರ್ಥ ಪರತೆ, ಅಹಂಕಾರ ಪ್ರವೃತ್ತಿ, ಮುಂತಾದ ಕೀಳು ಭಾವನೆಗಳು ಪ್ರತಿಯೊಂದು ಪಕ್ಷದಲ್ಲೂ ತಲೆದೋರಿ ಪಕ್ಷ–ಪಕ್ಷಗಳನಡುವೆ ಈರ್ಷೆ, ಅಸೂಯೆ, ಛಲ, ದ್ವೇಷ, ಅನಾರೋಗ್ಯಕರ ಸ್ಪರ್ಧಾ ಮನೋವೃತ್ತಿ ಉಲ್ಬಣಿಸತೊಡಗಿದವು. ಒಂದು ಕಾಲಕ್ಕೆ ಸಬಲ ಹಾಗೂ ಅದ್ವಿತೀಯವೆನಿಸಿದ್ದ ಕಾಂಗ್ರೆಸ್ಸು ಬಹಳಷ್ಟು ದುರ್ಬಲ ಪಕ್ಷವಾಗಿ ಇಂದು ನಿಂತಿದೆ. ಈಗಂತೂ ಭ್ರಷ್ಟಾಚಾರವೂ ಕಾಂಗ್ರೆಸ್ಸನ್ನೊಳಗೊಂಡು ಎಲ್ಲ ರಾಜಕೀಯ ಪಕ್ಷಗಳಲ್ಲೂ ಭೂತಾಕಾರವಾಗಿ ತಾಂಡವವಾಡುತ್ತಿರುವ ಕರಾಳ ದೃಶ್ಯ ತೀರ ಅಸಹ್ಯವೆನಿಸಿದೆ. ಕಾಂಗ್ರೆಸ್ಸು ಹಾಗೂ ಇತರ ಎಲ್ಲಾ ರಾಜಕೀಯ ಪಕ್ಷಗಳೂ ಈ ದುರ್ಗತಿಗೆ ಇಳಿಯುವ ದುರ್ಲಕ್ಷಣಗಳನ್ನು ಶ್ರೀ ಮಹಾಬಲೇಶ್ವರ ಭಟ್ಟರು ಮೊದಲೇ ಅರಿತುಕೊಂಡಿದ್ದರೆಂದು ಊಹಿಸಬಹುದಾಗಿದೆ. ಅವರು ರಾಜೀವಗಾಂಧಿಯವರು ಪ್ರಧಾನ ಮಂತ್ರಿಯಾಗಿದ್ದ ಕಾಲದವರೆಗೆ ಎಂದರೆ ೧೯೮೯ರವರೆಗೆ ಕಾಂಗ್ರೆಸ್ ಪಕ್ಷದಲ್ಲಿ ಸೇವೆ ಸಲ್ಲಿಸಿ, ಆನಂತರ ದೇಶದ ರಾಜಕೀಯದಿಂದಲೇ ನಿವೃತ್ತಿ ಹೊಂದಿದರು. ನಿವೃತ್ತಿಯ ಈ ಕಾಲದಲ್ಲಿ ಯಾವ ರಾಜಕೀಯ ಪಕ್ಷಕ್ಕೂ ಸೇರದೆ, ತಮಗೆ ಎಂದಿನಿಂದಲೂ ಒಲವಿದ್ದ ಸಾಹಿತ್ಯ, ಶಿಕ್ಷಣ ಹಾಗೂ ಸಮಾಜ ಸೇವೆಯಲ್ಲಿ ತೃಪ್ತಿ ಹೊಂದುತ್ತಾ, ರಾಜಕೀಯದಿಂದ ದೂರಸರಿದುದು ಅರ್ಥಪೂರ್ಣವಾಗಿದೆ.

ಶ್ರೀ ಮಹಾಬಲೇಶ್ವರ ಭಟ್ಟರ ಜೀವನೋತ್ಸಾಹ, ಕಾರ್ಯೋತ್ಸಾಹ ಅಪ್ರತಿಮ. ನಿಷ್ಠಾವಂತ ರಾಜಕೀಯ ಹಾಗೂ ಸಾಮಾಜಿಕ ಸೇವೆಯ ಪ್ರಭಾವದಿಂದ ತಮ್ಮ ಇಪ್ಪತ್ತೈದನೆಯ ವರ್ಷದ ತಾರುಣ್ಯದಲ್ಲಿಯೇ ಸಾಗರದ ನಾಗರೀಕ ಲೋಕಕ್ಕೆ ಅಚ್ಚು-ಮೆಚ್ಚಿನ ನಾಯಕರೆನಿಸಿದರು. ಸಾಗರ ಪುರಸಭೆಯ ಸದಸ್ಯರಾಗಿ ಒಂಭತ್ತು ವರ್ಷಗಳ ಕಾಲ ಜನಸೇವೆ ಸಲ್ಲಿಸಿದರು. ತರುವಾಯ ಸಾಗರ ತಾಲೂಕು ಕಾಂಗ್ರೆಸ್ ಪಕ್ಷದ ಪ್ರಧಾನ ಕಾರ್ಯದರ್ಶಿಯಾಗಿ, ಅನಂತರ ಅಧ್ಯಕ್ಷರಾಗಿ ಹಾಗೆಯೇ ಶಿವಮೊಗ್ಗ ಜಿಲ್ಲೆಯ ಕಾಂಗ್ರೆಸ್ ಸಮಿತಿಗೂ ಉಪಾಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದರು. ರಾಜ್ಯ ಮಟ್ಟದ ಶರಾವತಿ ನೀರು ಮುಳುಗಡೆ ಪುನರ್ವಸತಿ ಸಮಿತಿಗೆ ರಾಜ್ಯ ಸರ್ಕಾರದ ಪ್ರತಿನಿಧಿಯಾಗಿ, ಸಾಗರ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘದ ಅಧ್ಯಕ್ಷರಾಗಿ, ಸಾಗರ ಕೃಷಿ ಭೂ ಅಭಿವೃದ್ಧಿ ಬ್ಯಾಂಕಿನ ಅಧ್ಯಕ್ಷರಾಗಿ ಸಾರ್ಥಕ ಸೇವೆ ಸಲ್ಲಿಸಿದರು. ಇವೆಲ್ಲದರ ಜೊತೆಗೆ ಏಕಕಾಲದಲ್ಲಿ ಮಲೆನಾಡು ಅಭಿವೃದ್ಧಿ ಪ್ರತಿಷ್ಠಾನದ 'ಉಪಾಧ್ಯಕ್ಷರಾಗಿ ಶಿಕ್ಷಣ ಕ್ಷೇತ್ರದಲ್ಲಿ ಇನ್ನೂ ದುಡಿಯುತ್ತಿದ್ದಾರೆ. ೧೯೯೧ರಲ್ಲಿ ಜರುಗಿದ ಈ ಪ್ರತಿಷ್ಠಾನದ ಬೆಳ್ಳಿ ಹಬ್ಬದ ಕಾರ್ಯಧ್ಯಕ್ಷರಾಗಿ ಇವರು ಸಲ್ಲಿಸಿದ ಸೇವ ಸ್ಮರಣೀಯವಾಗಿದೆ. ಈ ಬೆಳ್ಳಿ ಹಬ್ಬವು ವಿಜೃಂಭಣೆಯಿಂದ ಜರುಗಿದ್ದನ್ನು ನಾನು ಕಣ್ಣಾರೆ ಕಂಡೆ. ಆಗಲಾಲ್ ಬಹದ್ದೂರ್ ಕಾಲೇಜಿನ ನಿವೃತ್ತ ಪ್ರಾಂಶುಪಾಲನೆಂದು ನನ್ನನ್ನು ಆಮಂತ್ರಿಸಿ ಸತ್ಕರಿಸಿದ್ದನ್ನು ನಾನು ಮರೆಯಲಾರೆ.

ಶ್ರೀ ಮಹಾಬಲೇಶ್ವರ ಭಟ್ಟರು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಮಾಡಿದ ಕೃಷಿಯೂ ಗಮನಾರ್ಹವಾದುದು. ೧೯೪೪ರಲ್ಲಿ ತಮ್ಮ ಇಪ್ಪತ್ತೊಂದನೆಯ ವಯಸ್ಸಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಕವಿಗೋಷ್ಠಿಯಲ್ಲಿ ಮೊದಲಬಾರಿ ಭಾಗವಹಿಸುವ ಅರ್ಹತೆ ಪಡೆದು, ಅಂದಿನಿಂದ ಈವರೆಗೆ ಅವರ ವೈವಿಧ್ಯಮಯ ಸಾಹಿತ್ಯ ರಚನೆ ನಿರಂತರವಾಗಿ ನಡೆದೇ ಇದೆ. ಎರಡು ಕಥಾ ಸಂಕಲನಗಳು, ಎರಡು ಕವನ ಸಂಗ್ರಹಗಳು, ಎರಡು ಜೀವನ ಚರಿತ್ರೆಗಳು, ಮೂರು ಸಾಹಿತಿ ಪರಿಚಯ ಗ್ರಂಥಗಳು, ಮೂರು ಕಾದಂಬರಿಗಳು ಇತ್ಯಾದಿ ಇವರ ಹನ್ನೆರಡು ಸಾಹಿತ್ಯಕೃತಿಗಳು ಪ್ರಕಟವಾಗಿವೆ. 'ನನ್ನ ಬದುಕು' ಎಂಬ ಇವರ ಆತ್ಮ ಕಥನವು ಬೇಗ ಪ್ರಕಟವಾಗಲಿರುವುದನ್ನು ತಿಳಿದು, ಅದನ್ನೋದುವ ಲವಲವಿಕೆ ನನಗುಂಟಾಗಿದೆ. 'ಆರಾಧನೆ' ಮತ್ತು 'ಸಂಭ್ರಮ' ಎಂಬೆರಡು ಸ್ಮರಣ ಸಂಚಿಕೆಗಳ ಸಂಪಾದಕ-ಪ್ರಧಾನ ಸಂಪಾದಕರಾಗಿ ಕಾರ್ಯ ನಿರ್ವಹಿಸಿದ್ದಾರೆ. ಅಲ್ಲದೆ ಸಂಯುಕ್ತ ಕರ್ನಾಟಕ' ಪತ್ರಿಕೆಗೆ ಮತ್ತು ಶಿವಮೊಗ್ಗದ 'ಜನವಾರ್ತೆ' ಪತ್ರಿಕೆಗೆ ಅಂಕಣಕಾರರಾಗಿ ವೈಚಾರಿಕ ಲೇಖನಗಳನ್ನು ಒದಗಿಸುತ್ತಾಬಂದಿದ್ದಾರೆ. ನಮ್ಮ ನಾಡಿನ ವಿವಿಧ ಪತ್ರಿಕೆಗಳಲ್ಲಿ ಇನ್ನೂರಕ್ಕೂ ಹೆಚ್ಚು ಲೇಖನಗಳು ಪ್ರಕಟಗೊಂಡುದನ್ನು ಅರಿತಿದ್ದೇನೆ.

ರಾಷ್ಟ್ರಸೇವೆ, ಸಮಾಜಸೇವೆ, ಸಾಹಿತ್ಯ, ಶಿಕ್ಷಣ, ಸಂಸ್ಕೃತಿ, ಕಲೆ ಇತ್ಯಾದಿ ವಿವಿಧ ರಂಗಗಳಲ್ಲಿ ಇವರು ಸಲ್ಲಿಸಿದ ಸೇವೆಗಾಗಿ ಸಾಗರ ಪ್ರಾಂತ್ಯದ ಮಹಾಜನತೆ ಇವರ ಐವತ್ತನೆಯ ವರ್ಷದ ಹುಟ್ಟುಹಬ್ಬವನ್ನ ಇಪ್ಪತ್ತು ವರ್ಷಗಳ ಹಿಂದೆ ೧೯೭೮ರಲ್ಲಿ ವೈಭವದಿಂದ ಆಚರಿಸಿ, ಸತ್ಕರಿಸಿದ್ದು ಯಥೋಚಿತ. ಆಗ 'ಮಹಾನಂದ' ಎಂಬ ಅಭಿನಂದನ ಗ್ರಂಥವನ್ನು ಸಿದ್ಧಪಡಿಸಿ ಅವರಿಗೆ ಅರ್ಪಿಸಿದ್ದೂ ಉಂಟು.

ಇದೀಗ ಇವರ ಎಪ್ಪತ್ತನೆಯ ಹುಟ್ಟು ಹಬ್ಬ ಶ್ರೀ ಟಿ. ಮಹಾಬಲೇಶ್ವರ ಭಟ್ಟರ ಜೀವನ ಚರಿತೆ ತರುಣರಿಗೊಂದು ಮಾದರಿ. ಆದಿ ಪಂಪನು ಒಂದು ಸಾವಿರ ವರ್ಷಗಳ ಹಿಂದೆ ತನ್ನ ಮೆಚ್ಚಿಕೆಯ ಬನವಾಸಿಯ ಕನ್ನಡಿಗರನ್ನು ಕುರಿತು, **''ಚಾಗದ, ಭೋಗದ, ಅಕ್ಕರದ, ಗೇಯದ, ಗೊಟ್ಟಿಯಲಂಪಿನ ಇಂಪುಗಳ್ಗೆ ಆಗರಮಾದ ಮಾನಿಸರೇ ಮಾನಿಸರ್; ಅಂತವರಾಗಿ ಪುಟ್ಟಲ್ ಏನಾಗಿಯುಂ ಏನೋ ತೀರ್ದಪುದೇ? ತೀರದೊಡಂ ಮರಿದುಂಬಿಯಾಗಿ ಮೇಣ್ ಕೋಗಿಲೆಯಾಗಿ ಪುಟ್ಟುವುದು ನಂದನದೋಳ್ ಬನವಾಸಿ ದೇಶದೊಳ್''** – ಎಂದು ಹಾಡಿ ಹೊಗಳಿದ್ದಾನೆ ! ಪ್ರಾಚೀನ ಬನವಾಸಿ ದೇಶದ ಒಂದು ಭಾಗವೇ ಆಗಿರುವ ಸಾಗರ ಪ್ರಾಂತ್ಯದ ಇಂಪು–ಸೊಂಪಿನ ಸೊಗವುಕ್ಕುವ ಈ ನಾಡಿನಲ್ಲಿ ಹುಟ್ಟಿ ಬೆಳೆಯುತ್ತಿರುವ ಶ್ರೀ. ಟಿ. ಮಹಾಬಲೇಶ್ವರ ಭಟ್ಟರು ಅಂಥಹ ಮಹನೀಯರು, ಮಹಾನುಭಾವರು ! ಇವರು ಆಯುರಾರೋಗ್ಯ ಸಂಪನ್ನರಾಗಿ ಬಹುಕಾಲದವರೆಗೆ ಇದೇ ಬಗೆಯ ಜೀವನೋತ್ಸಾಹ ಕಾರ್ಯೋತ್ಸಾಹಗಳಿಂದ ಯುಕ್ತರಾಗಿ ಬಾಳಲಿ ಎಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ. ಆ ದಯಾ ಘನ ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.

**॥ ಓಂ ಶಾಂತಿಃ ಶಾಂತಿಃ ಶಾಂತಿಃ ॥**

# ಶ್ರೀ ಭಟ್ಟರ ಜೀವನ ಹಾಗೂ ಶಿಸ್ತು

– ಎಲ್. ಟಿ. ತಿಮ್ಮಪ್ಪ ಹೆಗಡೆ

ಶುಭ್ರ ಉಡುಪಿನ, ಎತ್ತರದ ಶರೀರದ ಸಾವಿರ ಸಂಖ್ಯೆಯ ಗುಂಪಿನಲ್ಲೂ ಎದ್ದು ಕಾಣುವ, ಗುರುತಿಸಲು ಸುಲಭವಾದ ವ್ಯಕ್ತಿತ್ವದ ಶ್ರೀ ತೊರೆಮನೆ ಮಹಾಬಲೇಶ್ವರ ಭಟ್ಟರು. ಶ್ರೀ ಟಿ.ಎಂ. ಭಟ್ಟರೆಂದೇ ಇಡೀ ತಾಲ್ಲೂಕಿನಲ್ಲಿ ಚಿರಪರಿಚಿತರು. ನಾಲ್ಕು ದಶಕಕ್ಕೂಹೆಚ್ಚಿನ ಹತ್ತಿರದ ಪರಿಚಯ ಮತ್ತು ಸ್ನೇಹ ನನಗೆ ಶ್ರೀ ಭಟ್ಟರೊಂದಿಗೆ. ಸಮಯ ಪ್ರಜ್ಞೆ ಮತ್ತು ಯಾವುದೇ ಕೆಲಸ ಕಾರ್ಯಗಳಲ್ಲಿ ಶಿಸ್ತು. ಅಚ್ಚುಕಟ್ಟು ತನಕ್ಕೆ ಶ್ರೀ ಭಟ್ಟರನ್ನು ಯಾರೂ ಸರಿಗಟ್ಟಲಾರರು. ನನ್ನ ಇಷ್ಟು ದಿನಗಳ ಅನುಭವದಲ್ಲಿ ಯಾವುದೇ ಸಭೆ ಕಾರ್ಯಕ್ರಮಗಳಿಗೆ ಎಂದೂ ತಡವಾಗಿ ಅವರು ಹೋದವರಲ್ಲ. ಆರಂಭದಲ್ಲಿ ಕನ್ನಡ ಸಾಹಿತ್ಯಪುಸ್ತಕಗಳ ಪರಿಚಯ, ಜೊತೆಗೆ ಓದುವ ಹವ್ಯಾಸ ಬೆಳೆಸಿಕೊಳ್ಳಲು ಅವಕಾಶವಾಗಿದ್ದು, ಸಾಗರದಲ್ಲಿದ್ದ ಶ್ರೀ ಭಟ್ಟರ ಅಂಗಡಿ. ನನಗೆ ಮತ್ತು ಅನೇಕ ಗೆಳೆಯರಿಗೆ ಅದು ದಿನನಿತ್ಯ ಸೇರುವ ಚರ್ಚಿಸುವ ಕೇಂದ್ರವಾಗಿತ್ತು. ಹಾಗೂ ಅನೇಕ ಕವಿಗಳ ಮತ್ತು ಸಾಹಿತಿಗಳ ಪರಿಚಯಕ್ಕೂ ಅವಕಾಶವಾಗಿತ್ತು. ಒಂದು ರೀತಿಯಲ್ಲಿ ಶ್ರೀ ಭಟ್ಟರು ಸಾಹಿತಿಯ ವ್ಯಕ್ತಿತ್ವದಲ್ಲಿ ಅಡಗಿರುವ ರಾಜಕಾರಣಿ. ಅಂದರೆ ಈಗ ಅನೇಕರು ರಾಜಕಾರಣದಲ್ಲಿ ಜೀವನದ ಎಲ್ಲಾ ಸಮಯ ಕಳೆದು, ಕೊನೆಯಲ್ಲಿ ಸಾಹಿತ್ಯಕ್ಷೇತ್ರಕ್ಕೆ ಕಾಲಿಟ್ಟಿದ್ದನ್ನು ನೋಡುತ್ತೇವೆ. ಆದರೆ ಶ್ರೀ ಭಟ್ಟರು ಮೂಲತಃ ಸಾಹಿತಿ, ರಾಜಕೀಯ ನಂತರದ್ದು. ಸಾಹಿತಿಗಳನ್ನು ಕರೆಸಿ ಸನ್ಮಾನಿಸುವುದು, ರಾಜಕೀಯ ಸಭೆಗಳು, ಸಮ್ಮೇಳನ ನಡೆಸುವುದು, ಹೀಗೆ ಯಾವುದೇ ಕಾರ್ಯಕ್ರಮ ಇರಲಿ ಅದು ಸಣ್ಣದು ಅಥವಾ ದೊಡ್ಡದೆಂಬುವುದಿಲ್ಲದೆ ಅಚ್ಚುಕಟ್ಟಾಗಿ ಪ್ರತಿಯೊಂದು ಅಂಶವನ್ನೂ ಚೆನ್ನಾಗಿ ಆಲೋಚಿಸಿ, ಹೊಂದಿಸುವುದು ಶ್ರೀ ಭಟ್ಟರ ವಿಶೇಷ ಜಾಣ್ಮೆ. ಪ್ರಾರ್ಥನೆಯಿಂದ ಮೊದಲಾಗಿ ವಂದನಾರ್ಪಣೆವರೆಗೆ ಗೊಂದಲವಿಲ್ಲದೆ ಚಾಕಚಕ್ಯತೆಯಿಂದ ಯಾವುದಾದರೂ ಕಾರ್ಯಕ್ರಮ ನಡೆದರೆ – ಅದಕ್ಕೆ ಶ್ರೀ ಭಟ್ಟರ ಮಾರ್ಗದರ್ಶಿತ್ವ ಇರಲೇ ಬೇಕು; ಎಂಬ ಪ್ರಸಿದ್ಧಿ. ಆಳವಾಗಿ ಚಿಂತಿಸಿ, ಶಿಸ್ತು ಬದ್ಧ ಕಾರ್ಯಕ್ರಮ ನಡೆಸುವುದು ಭಟ್ಟರ ವೈಶಿಷ್ಟ್ಯ. ಸಮಯ ನಿಷ್ಠೆಯಲ್ಲೂ ಭಟ್ಟರದೇ ಮೇಲುಗೈ. ಸಾರ್ವಜನಿಕ ಕಾರ್ಯಕ್ರಮ ಮತ್ತುದೊಡ್ಡ ಸಭೆಗಳಿಗೆ ಮಾತ್ರಾ ಅದು ಸೀಮಿತವಲ್ಲ. ಮನೆಯಲ್ಲಿ ಊಟ–ಉಪಹಾರ ಸಮಯ, ಓದು, ತಿರುಗಾಟ,ಹೀಗೆ ವೈಯಕ್ತಿಕ ಜೀವನದಲ್ಲೂ ಇದನ್ನು ನಾವು ಗುರುತಿಸಿಕೊಳ್ಳಬಹುದು. ಇದರಲ್ಲಿ ಹತ್ತು ನಿಮಿಷಗಳು

ಸಹಾ ಹೆಚ್ಚುಕಮ್ಮಿ ಇರುವುದಿಲ್ಲ. ಉಡುಪಿನ ಶುಭ್ರತೆ ನಿರಿಗೆ, ಆಗಷ್ಟೇ ಧೋಭೀ ಇಸ್ತ್ರೀ ಮಾಡಿಕೊಟ್ಟರೂ ನಾವು ಹಾಗೆ ಇಟ್ಟುಕೊಳ್ಳಲೂ ಆಗದು. ಆದರೆ ಶ್ರೀ ಭಟ್ಟರು ಇಡೀ ದಿನ ಪ್ರಯಾಣ ಮಾಡಿ ಬಂದರೂ ನಮಗೆ ಆಗತಾನೇ ಆ ಉಡುಪು ಧರಿಸಿದಂತೆ ಕಾಣುವುದು. ಆದ್ದರಿಂದ ಈ ಶುಭ್ರತೆ, ಶಿಸ್ತಿನ ಜೀವನ ಕ್ರಮ ಮತ್ತು ಸದಾ ಎಚ್ಚರ ಅವರನ್ನು ಎಪ್ಪತ್ತು ವಸಂತ ದಾಟಿದ್ದರೂ ಅದಕ್ಕಿಂತ ಹತ್ತು ವರ್ಷದಷ್ಟು ಕಡಿಮೆ ವಯಸ್ಸಿನಲ್ಲಿ ಗುರುತಿಸುವಂತೆ ಆಗುತ್ತದೆ. ಆತಿಥ್ಯದಲ್ಲಿ ಶ್ರೀಭಟ್ಟರದು ಎತ್ತಿದ ಕೈ. ಸದಾ ನಗುಮುಖದ, ಶ್ರಮವನ್ನು ಲೆಕ್ಕಿಸದ ಸಹಧರ್ಮಿಣಿಯ ಸಹಕಾರ ಶ್ರೀ ಭಟ್ಟರ ಭಾಗ್ಯ. ಪ್ರಸಿದ್ಧ ಸಾಹಿತಿಗಳು ಮತ್ತುರಾಜಕಾರಣಿಗಳಿಗೆ ನೀಡಿದ ಆತಿಥ್ಯಗಳಲ್ಲಿ ಇತ್ತೀಚಿನವರೆಗೂ ನಾನೊಬ್ಬ ಖಾಯಂ ಆಹ್ವಾನಿತನಾಗುವ ಭಾಗ್ಯವಿತ್ತು. ಶರಾವತಿ ಹಿನ್ನೀರಿನಿಂದ ಆವೃತ್ತವಾದ ಕರೂರು ಹೋಬಳಿಯ ತೊರೆಮನೆ ಮೂಲದ, ಚಿಕ್ಕಂದಿನಲ್ಲೇ ಪಿತೃವಿಯೋಗ ಹೊಂದಿದ್ದರಿಂದ ಹೆಚ್ಚಿನ ವಿದ್ಯಾಭ್ಯಾಸದಿಂದ ವಂಚಿತರಾದರೂ ಚಿಂತನೆ ಮತ್ತು ಅಧ್ಯಯನದ ಹವ್ಯಾಸಗಳಿಂದ, ಶ್ರಮ ಮತ್ತು ಧೃಡನಿರ್ಧಾರಗಳಿಂದ, ಜನರನ್ನು ಸೇರಿಸುವ ಮತ್ತು ಬಳಸುವ ಜಾಣ್ಮೆಯನ್ನು ಬೆಳೆಸಿಕೊಂಡು ವ್ಯಕ್ತಿಗತ ಉತ್ತಮ ಸಂಸ್ಕಾರಗಳಿಂದಾಗಿ ಯಾರಿಗೂ, ಯಾವುದಕ್ಕೂ ಕಡಿಮೆಯಿಲ್ಲದ ಸಾಧನೆ ಮಾಡಿ, ಶ್ರೀಭಟ್ಟರು ಸಾಗರದ ಸಮಕಾಲೀನ ಜನ ಜೀವನದಲ್ಲಿ ತಮ್ಮದೇ ಆದ ಛಾಪನ್ನು ಕೂರಿಸಿದ್ದಾರೆ.

ಪುಸ್ತಕಗಳು, ಸ್ಮರಣ ಸಂಚಿಕೆಗಳು, ವರ್ಷದ ವಿಶೇಷ ಸಂಚಿಕೆಗಳು ಇವುಗಳು ಎಲ್ಲಾ ಸಾಹಿತ್ಯ ಪ್ರಿಯರ ಮನೆಯಲ್ಲಿ ಇದ್ದರೂ ಒಮ್ಮೆ ಓದಿದ ನಂತರ ಬೇಕಾದಾಗ ಮತ್ತೆ ಸಿಗುವಂತೆ ವ್ಯವಸ್ಥಿತವಾಗಿ ಇಟ್ಟಿರುವುದು ಶ್ರೀ ಭಟ್ಟರ ಮನೆಯಲ್ಲಿ ಮಾತ್ರಾ. ಅಲ್ಲದೆ ಕನ್ನಡದ ಯಾವುದೇ ಸಾಹಿತಿಗಳ, ಕವಿಗಳ, ನಾಟಕಕಾರರ, ವಿಮರ್ಶಕರ, ಪತ್ರಿಕಾ ಸಂಪಾದಕರ, ರಾಜಕಾರಣಿಗಳ ಮಾಹಿತಿಗೆ ಸೂಕ್ತ ಸಾಹಿತ್ಯ ಶ್ರೀ ಭಟ್ಟರ ಸಂಗ್ರಹದಲ್ಲಿ ಲಭ್ಯ. ಮನೆಯಲ್ಲಿ ಪೀಠೋಪಕರಣಗಳು ಮತ್ತು ಪುಸ್ತಕಗಳ ಹೊತ್ತಿಗೆಗಳಲ್ಲಿ ಯಾವುದೇ ಸಮಯದಲ್ಲೂ ಧೂಳು ಹಿಡಿಯದೇ ಸ್ವಚ್ಛವಾಗಿಡುವ ಮಾಂತ್ರಿಕ ಕಲೆ ಶ್ರೀ ಭಟ್ಟರದ್ದು. ಹಾಗೆಯೇ ಬೇದೂರಿನಂತಹ ಹಳ್ಳಿಯಲ್ಲೂ ಮನೆ ಎದುರಿನ ಚಿಕ್ಕ ಉದ್ಯಾನವನದ ನೋಟ, ಮನೆಯ ಎದುರು ಮತ್ತು ಪಕ್ಕದ ಅಡಿಕೆ ತೋಟದ ಹಿನ್ನೆಲೆಯಲ್ಲಿ ಪಟ್ಟಣದಿಂದ ಬರುವ ಅತಿಥಿಗಳ ಮನಸ್ಸನ್ನು ಸೂರೆಗೊಳ್ಳುವುದು ಸಹಜ "ಆಡು ಮುಟ್ಟದ ಸೊಪ್ಪಿಲ್ಲ" ವೆನ್ನುವುದು ಹೇಗೆ ಪ್ರತೀತಿಯೋ ಹಾಗೆ ಶ್ರೀ ಟಿ. ಎಂ. ಭಟ್ಟರು ಕೈಯಾಡಿಸದ ಕ್ಷೇತ್ರವಿಲ್ಲ. ಅವರೊಂದಿಗೆ ಪ್ರವಾಸ, ಚಿಂತನೆ, ಒಡನಾಟ ನಮಗೂ ಅನುಭವದೊಂದಿಗೆ ಸ್ಫೂರ್ತಿ ನೀಡುವಂಥಾದ್ದು. ಶ್ರೀ ಟಿ. ಮಹಾಬಲೇಶ್ವರ ಭಟ್ಟರು ಶತಾಯುಷಿಗಳಾಗಿ, ತುಂಬು ಆರೋಗ್ಯದಿಂದ ಜೀವಿಸಿ, ಉತ್ತಮ ಆದರ್ಶ ಮತ್ತು ತುಂಬು ಜೀವನಕ್ಕೆ ಒಂದು ಮಾದರಿಯಾಗಿ ನಮಗೆಲ್ಲಾ, ಬಹುಕಾಲ ಮಾರ್ಗದರ್ಶನ ನೀಡಲಿ ಎಂದು ಆಶಿಸುತ್ತೇನೆ.

# ಅವಿರತ ಚಟುವಟಿಕೆಗಳ ಚಿಲುಮೆ

- ಡಾ || ದೊಡ್ಡೇರಿ ವೆಂಕಟಗಿರಿರಾವ್

ಕಳೆದ ನಲವತ್ತೈದು ವರ್ಷಗಳಿಂದಲೂ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಗಳನ್ನು ಕುರಿತು, ಸಾಗರದಲ್ಲಿ ಅವಿರತವಾಗಿ ಶ್ರಮಿಸುತ್ತಿರುವ ಶ್ರೀ ಟಿ. ಮಹಾಬಲೇಶ್ವರ ಭಟ್ಟರ ಬಗ್ಗೆ ನಾಲ್ಕು ಮಾತುಗಳನ್ನು ಬರೆಯಬೇಕೆಂದು ಅಭಿನಂದನ ಸಮಿತಿಯವರು ಕೋರಿದ್ದಾರೆ. ಯೋಗ್ಯವಾದುದೂ ಅರ್ಹವಾದುದೂ ಆದ ಕಾರ್ಯಗಳನ್ನು ಮಾಡುವವರ ಜೊತೆಗೆ ಸೇರಿಸಿಕೊಳ್ಳಬೇಕಾದುದು ಸುಯೋಗ್ಯವಾದುದು.

ನನಗೆ ನೆನಪಿರುವಂತೆ, ನನಗೆ ಶ್ರೀ ಮಹಾಬಲೇಶ್ವರ ಭಟ್ಟರ ಪರಿಚಯವಾದುದು ಸುಮಾರು ಐವತ್ತು ವರ್ಷಗಳ ಹಿಂದೆ ಎನ್ನಬಹುದು. ಆಗ ಅವರು 'ಮಹಾನಂದ ಸ್ಟೋರ್ಸ್' ಎಂಬ ಹೆಸರಿನ ವ್ಯಾಪಾರೋದ್ಯಮದಲ್ಲಿದ್ದರು. ಅವರ ಪರಿಚಯವಾಗಲು ಮುಖ್ಯ ಕಾರಣವೆಂದರೆ, ಅವರು ನನ್ನ ಆತ್ಮೀಯ ಮಿತ್ರರಾಗಿದ್ದ ದಿ. ಹುಲಿಮನೆ ಕಾಳಿ ಚಕ್ರಪಾಣಿರಾಯರ ಮಗಳನ್ನು ಮದುವೆ ಆಗಿದ್ದರು. ದಿ. ಚಕ್ರಪಾಣಿರಾಯರದು ಸುಸಂಸ್ಕೃತ ಮನೆತನ. ಆ ಮನೆತನದಲ್ಲಿ ಹುಟ್ಟಿ ಬೆಳೆದ ಅವರ ಮಗಳು ಶ್ರೀಮತಿ. ಪದ್ಮಾವತಿಯೂ ಅದನ್ನು ಮೈಗೂಡಿಸಿಕೊಂಡವರು. ಅತಿಥಿ ಅಭ್ಯಾಗತರನ್ನು ಸತ್ಕರಿಸುವ ಕಲೆ ಹುಟ್ಟಿನಿಂದ ಬಂದಿರಬೇಕು.

ಒಮ್ಮೆ ಕಾರ್ಯಾರ್ಥವಾಗಿ ನಾನು ಸಾಗರಕ್ಕೆ ಬಂದಿದ್ದಾಗ ಶ್ರೀ ಮಹಾಬಲೇಶ್ವರ ಭಟ್ಟರು ನನ್ನನ್ನು ಕಂಡು ಮಾತಾಡಿ ಮನೆಗೆ ಭೋಜನಕ್ಕೆ ಆಹ್ವಾನಿಸಿದರು. ಆತ್ಮೀಯ ಗೆಳೆಯನ ಅಳಿಯನ ಕರೆಗೆ ಇಲ್ಲ ಎನ್ನಲಾರದಾದೆ. ಭೋಜನ ಮತ್ತು ಭೋಜನಾನಂತರದ ಮಾತುಕತೆಗಳು ಮುಗಿದಾಗ ಸುಮಾರು ೪ ತಾಸು ಕಳೆದಿತ್ತು. ಸಾಹಿತ್ಯ ಮತ್ತು ಕಲೆಗಳ ಕುರಿತ ಮಾತುಕತೆಗಳಿಗೆ ಗಡಿ-ಮಿತಿ ಇಲ್ಲ. ಶ್ರೀ ಭಟ್ಟರ ಮಾತು ವಸ್ತು ಶೈಲಿಗಳಲ್ಲಿ, ಚರ್ಚೆಯ ಬೆಡಗುಗಳಲ್ಲಿ ಅವರಿಗೆ ಇರುವ ಆಸಕ್ತಿ ಮತ್ತು ನಿಷ್ಠೆಗಳನ್ನು ಗಮನಿಸಿ ಸಂತೋಷವಾಗಿತ್ತು. ನಮ್ಮ ಮಾತಿನ ಮಧ್ಯೆ ನಯ ವಿನಯಗಳಿಂದ ಕೂಡಿ ಸಂದರ್ಭಗಳಿಗನುಗುಣವಾಗಿ ಮಾತಾಡುತ್ತಿದ್ದ ಶ್ರೀಮತಿ, ಪದ್ಮಾವತಿಯು ನನಗೆ ಕವಿ, ರತ್ನಾಕರವರ್ಣಿ ಬರೆದಿರುವ -

“ಕಲೆಯನರಿವ ಪುರುಷನ ಪಡೆವುದು, ಪೂರ್ವ
ದೊಳು ನಾರಿ ಮಾಡಿದ ಪುಣ್ಯ,
ಕಲೆಗನುಕೂಲೆಯ  ಪಡೆವುದು ಪುರುಷನ
ಬಲುಪುಣ್ಯವಕ್ಕು ನಿನ್ನಾಣೆ

‘ಉತ್ತುಮ ನಾಯಕ ಮತ್ತುತ್ತುಮ ಸತಿಯು ಸಂ-
ಪತ್ತಿನೊಳಗೊಂಡಿರುವಾಗ
ಎತ್ತಿ ಕಾತರದಿಂದ ನೆಲೆಸಲು ತಮ್ಮ
ಚಿತ್ತ ಪಕ್ವವ ಮಾಡದಿಹರೆ’

– ಎಂಬ ಕೆಲವು ಸಾಲುಗಳನ್ನು ನೆನಪಿಗೆ ತಂದಿದ್ದರು.

ಮುಂದೆ ಸುಮಾರು ೧೦ ವರ್ಷಗಳ ಕಾಲ ನಾನು ಶ್ರೀ ಮಹಾಬಲೇಶ್ವರ ಭಟ್ಟರನ್ನು ಕಾಣದಿದ್ದರೂ ಅವರು ಸಾಹಿತ್ಯ ಮತ್ತು ಸಮಾಜ ಸೇವೆಗಳಲ್ಲಿ ತಮ್ಮನ್ನು ನಿಕಟವಾಗಿ ತೊಡಗಿಸಿಕೊಂಡಿದ್ದ ವಿಚಾರ ತಿಳಿದಿತ್ತು.

೧೯೫೨ರಲ್ಲಿ ಎಂದು ನೆನಪು. ಅವರಿಂದ ನನಗೆ – ‘ಹೊಸೂರಿನ ಹಲವರು’ ಎಂಬ ಹೆಸರಿನ ಅವರು ಬರೆದ ಪುಸ್ತಕವು ಅಂಚೆ ಮೂಲಕ ಬಂದಿತ್ತು. ಆ ಕೃತಿಯು ಅಂದಿನ ಅವರ ಸುತ್ತ- ಮುತ್ತದ ಸಮಾಜದ, ಜನರ ಲೋಪದೋಷಗಳನ್ನು ಎತ್ತಿ ತೋರಲು ಅವರು ಮಾಡಿದ್ದ ಒಂದು ಪ್ರಯತ್ನವಾಗಿತ್ತು. ಒಂದು ರೀತಿಯ ವಿಡಂಬನ ಕೃತಿಯಾಗಿದ್ದು, ಆ ಕಾಲಕ್ಕೆ ಅದು ಒಂದು ರೀತಿಯ ಹೊಸ ಪ್ರಯತ್ನವಾಗಿತ್ತು.

ಕೆಲವು ವರ್ಷಗಳನಂತರ ನಾನು ಅವರನ್ನು ಪುನಃ ಸಾಗರದಲ್ಲಿ ಭೆಟ್ಟಿಯಾಗಿದ್ದೆ. ಆಗಿನ ಕನ್ನಡ ಸಾಹಿತಿಗಳನ್ನು ಜನತೆಗೆ ಪರಿಚಯಿಸಲು ಬರೆದಿದ್ದ ಎರಡು ಪುಸ್ತಕಗಳನ್ನು ಅವಲೋಕಿಸಿದ್ದೆ. ಅವರು ಆಗ ಕಾಂಗ್ರೆಸ್‌ಪಕ್ಷಕ್ಕೆ ತನು-ಮನಗಳನ್ನು ಅರ್ಪಿಸಿಕೊಂಡು ಪಕ್ಷದ ಪ್ರಧಾನ ಕಾರ್ಯದರ್ಶಿಯಾಗಿ ದುಡಿಯುತ್ತಿದ್ದರು. ಸುಮಾರು ೪೦ ಕ್ಕೂ ಹೆಚ್ಚು ವರ್ಷಗಳ ಕಾಲ ಕಾಂಗ್ರೆಸ್ ಪಕ್ಷಕ್ಕೋಸ್ಕರ ದುಡಿದಿದ್ದಾರೆಂದು ಕೇಳಿದ್ದೇನೆ. ಜನ ಮೆಚ್ಚಬೇಕಾದ ಸೇವೆ.

ಶ್ರೀ ಮಹಾಬಲೇಶ್ವರ ಭಟ್ಟರು ಸಾಮಾಜಿಕ ಸುಧಾರಣೆ ಮತ್ತು ಸೇವೆಯಲ್ಲಿಯೂ ಹಿಂಜರಿದವರಲ್ಲ. ಸದಾ ಮುಂಚೂಣಿಯ ಕಾರ್ಯಕರ್ತರಾಗಿದ್ದರೆಂದು ಬಲ್ಲವರಿಂದ ಕೇಳಿದ್ದೇನೆ. ಸಾಹಿತ್ಯ, ಸಂಸ್ಕೃತಿ, ಕಲೆ, ನಾಟಕ ಈ ಎಲ್ಲ ಕ್ಷೇತ್ರಗಳ ಅಭಿವೃದ್ಧಿಗಾಗಿ ಸಾಗರ ಪ್ರಾಂತ್ಯದಲ್ಲಿ ೧೫ ವರ್ಷಗಳಿಗೂ ಹೆಚ್ಚು ಕಾಲ ದುಡಿದಿದ್ದಾರೆಂದು ಬಲ್ಲವರಿಂದ ಕೇಳಿದ್ದೇನೆ.

ಅಷ್ಟೇ ಅಲ್ಲ, ಅವರು ತಾವು ಸ್ವತಃ ವ್ಯವಸಾಯಗಾರರಾಗಿಯೂ, ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘಗಳ ಮೂಲಕ ತಾಲೂಕಿನ ವ್ಯವಸಾಯಾಭಿವೃದ್ಧಿಯ ಕಾರ್ಯಗಳಲ್ಲಿ ಸಕ್ರಿಯವಾಗಿ ತೊಡಗಿಕೊಂಡು ಶ್ರಮಿಸಿದ್ದಾರೆ. ಬೇದೂರಿನಲ್ಲಿರುವ ಅವರ ಮನೆ ಮತ್ತು ಹೂದೋಟ, ಮುಂದಿರುವ ಅಡಿಕೆ ತೋಟ, ಅವರ ವ್ಯವಸಾಯ ಕ್ರಮಗಳನ್ನು ಕಣ್ಣಾರೆ ಕಂಡ ಮೇಲೆ ಮೇಲಿನ ಅಭಿಪ್ರಾಯಕ್ಕೆ ಪುಷ್ಟಿ ದೊರೆಯಿತು.

ವಿದ್ಯಾಪ್ರಸಾರ ಮತ್ತು ತತ್ಸಂಬಂಧ ಸಂಸ್ಥೆಗಳಕಾರ್ಯಭಾರಗಳಲ್ಲಿ ಶ್ರೀ ಭಟ್ಟರ ದುಡಿಮೆ ಕಡೆಗಣಿಸುವಂತಹುದಲ್ಲ. ಮಲೆನಾಡು ಅಭಿವೃದ್ಧಿ ಪ್ರತಿಷ್ಠಾನದ ಕಾರ್ಯಭಾರದಲ್ಲಿ ಅವರು ಇಂದೂ ತೊಡಗಿದ್ದಾರೆಂದು ಕೇಳಿ ಅಚ್ಚರಿಯಾಯ್ತು.

ಕನ್ನಡ ನಾಡಿನ ದಿನಪತ್ರಿಕೆ, ವಾರಪತ್ರಿಕೆಗಳಲ್ಲಿ ಅವರ ನೂರಾರು ಪ್ರಚಲಿತ ಇತರ ವಿಷಯಗಳನ್ನು ಕುರಿತ ಲೇಖನಗಳಲ್ಲಿಹಲವು ಲೇಖನಗಳನ್ನು ಓದಿದ್ದೇನೆ.

ನನಗೆ ತಿಳಿದ ಹಾಗೆ ಈಗಾಗಲೇ ಅವರ ಮಿತ್ರರೂ ಅಭಿಮಾನಿಗಳೂ ಸುಮಾರು ೨೦ ವರ್ಷಗಳ ಹಿಂದೆಯೇ ತಮ್ಮ ಪ್ರೀತಿ ವಿಶ್ವಾಸಗಳ ಮೆಚ್ಚುಗೆ ತೋರಲು ಒಂದು ಅಭಿನಂದನ ಗ್ರಂಥವನ್ನು ಪ್ರಕಟಿಸಿದ್ದರೆಂದು ನನ್ನ ನೆನಪಿಗೆ ಬರುತ್ತದೆ. ಈಗ ಅವರ ೭೦ನೇ ಹುಟ್ಟುಹಬ್ಬ ಸನ್ನಿಹಿತವಾಗುವಾಗ ಅವರ ಮಿತ್ರರೂ, ಅಭಿಮಾನಿಗಳೂ ಸೇರಿ ಮತ್ತೊಂದು ಅಭಿನಂದನ ಗ್ರಂಥವನ್ನು ಪ್ರಕಟಿಸುತ್ತಿದ್ದಾರೆಂದು ತಿಳಿದು ಸಂತಸವಾಯಿತು. ಅದು ಸಾಮಾಜಿಕ, ಸಾಹಿತ್ಯಿಕ, ವಾಣಿಜ್ಯ ಮತ್ತು ವಿದ್ಯಾಕ್ಷೇತ್ರಗಳಲ್ಲಿ ಶ್ರೀ ಮಹಾಬಲೇಶ್ವರ ಭಟ್ಟರ ನಿರಂತರ ಆಸಕ್ತಿ, ಶ್ರದ್ಧೆ ಮತ್ತು ಸೇವಾ ಮನೋಭಾವದ ಒಂದು ದ್ಯೋತಕ ಎಂಬುದರಲ್ಲಿ ಎರಡು ಮಾತಿಲ್ಲ.

ಶ್ರೀ ಮಹಾಬಲೇಶ್ವರ ಭಟ್ಟರ ಸರ್ವತೋಮುಖವಾದ ಸೇವೆಯು ಈ ಸಮಾಜಕ್ಕೆ ಇನ್ನೂ ಹಲವು ದಶಕಗಳ ಕಾಲ ದೊರೆಯುವಂತೆ ಭಗವಂತನು ಅವರನ್ನೂ, ಅವರ ಸಂಸಾರವನ್ನು ಹರಸಲಿ ಎಂದು ಹಾರೈಸುತ್ತೇನೆ.



# ಸೌಜನ್ಯಶೀಲ ವ್ಯಕ್ತಿತ್ವ

– ಶಾ. ಮಂ. ಕೃಷ್ಣರಾವ್

ಸಹಾನುಭೂತಿ, ಸಹೃದಯತೆ, ಸಮಾಧಾನ, ಸೌಜನ್ಯ ಶೀಲರ ಲಕ್ಷಣ. ಒಂದು ಮಾತು, ಒಂದು ನಗು, ಬಳಿಗೆ ಬಂದವರಿಗೆ ತೃಪ್ತಿ ನೀಡುತ್ತದೆ. ಮೊದಲು ಇಷ್ಟಾದರೆ ಸಾಕು. ಆ ಮೇಲೆ ಉಳಿದುದೆಲ್ಲ. 'ಸತ್ಯವನ್ನು ಹೇಳು, ಹೇಳುವ ಸತ್ಯವನ್ನು ಪ್ರಿಯಾವಾಗಿ ಹೇಳು.' ಎನ್ನುವುದರಲ್ಲಿ ನಮ್ಮ ಹಿರಿಯರು ನಮಗೆ ಸೌಜನ್ಯದ ಗೆರೆಯನ್ನು, ಕಾಣಿಸಿದ್ದಾರೆ. 'ಅಯ್ಯಾ ಎಂದರೆ ಸ್ವರ್ಗ, ಎಲವೋ ಎಂದರೆ ನರಕ' ಎನ್ನುವ ಮಾತಿನಲ್ಲಿ ಸೌಜನ್ಯದ ಸ್ವರೂಪ ವ್ಯಕ್ತವಾಗುತ್ತದೆ.' – ಹೀಗೆ ಸೌಜನ್ಯದ ಲಕ್ಷಣಗಳನ್ನು ಬಿಡಿ ಬಿಡಿಸಿ ಹೇಳಿದ್ದಾರೆ ಡಾ. ಹಾ. ಮಾ. ನಾಯಕರು.

ಸೌಜನ್ಯ ತನ್ನ ಜೀವದುಸಿರಾಗಿ ಹಿಡಿದು ಇದುವರೆಗೂ ಸೌಜನ್ಯದ ಸೀಮೆಯನ್ನು ದಾಟದವರು ಶ್ರೀ ಟಿ. ಮಹಾಬಲೇಶ್ವರ ಭಟ್ಟರು. ಸೌಜನ್ಯದ ಸಿಹಿಯನ್ನು ಸವಿಯಬೇಕಿದ್ದರೆ, ಆತ್ಮೀಯತೆಯ ಸುಗಂಧವನ್ನು ಪೂಸಿಕೊಳ್ಳಬೇಕಾದರೆ ಶಿವಮೊಗ್ಗ ಜಿಲ್ಲೆಯ ಸಾಗರ ನಗರಕ್ಕೆ ಹೋಗಬೇಕು. ಸಾಗರ ಎಂಬ ಹೆಸರಿಗೆ ಅನ್ವರ್ಥಕವಾಗುವ ಹೃದಯ ವೈಶಾಲ್ಯವುಳ್ಳ ಮಹಾಬಲೇಶ್ವರ ಭಟ್ಟರು ಅಲ್ಲಿದ್ದಾರೆ. ಅವರ ಮನೆ ಹತ್ತಿರದ ಹಳ್ಳಿಯಲ್ಲಿದೆ, ಬೇಸಾಯವಿದೆ, ಅವರ ಆಸಕ್ತ ಅಭಿರುಚಿಗಳ ನೆಲೆಯಿದೆ. ಒಂದು ದೊಡ್ಡ ಬದುಕಿನ ಆದರ್ಶವಿದೆ.

ಸುಮಾರು ಮೂವತ್ತು ವರ್ಷಗಳ ಹಿಂದೆ – ಮಹಾಬಲೇಶ್ವರ ಭಟ್ಟರ ಒಂದು ಪುಸ್ತಕದಂಗಡಿಯಿತ್ತು. ಅಚ್ಚುಕಟ್ಟಾಗಿ ಕನ್ನಡ ಪುಸ್ತಕಗಳನ್ನು ಜೋಡಿಸಿದ ಅಂಗಡಿಯಲ್ಲಿ ಒಂದೆಡೆ ಮಹಾಬಲೇಶ್ವರ ಭಟ್ಟರು ಕೂರುತ್ತಿದ್ದರು. ಶುಭ್ರವಾದ ಧೋತರ, ಅದರ ಮೇಲೊಂದು ಶುಭ್ರ ಜುಬ್ಬಾ. ಅದರ ಮೇಲೊಂದು ಜಾಕೀಟು, ಅಥವಾ ಕ್ಲೋಸ್ ಕಾಲರ್ ಉದ್ದನೆಯ ಕೋಟು – ಎಲ್ಲವೂ ಖಾದಿ. ನೀಟಾಗಿ ಬಾಚಿದ ಕ್ರಾಪ್. ಸಣಕಲಾದ ಶರೀರ, ನಗುಮುಖ ಮಹಾಬಲೇಶ್ವರ ಭಟ್ಟರ ಪರಿಚಯ ಹೇಳುತ್ತಿದ್ದವು. ಮಹಾಬಲೇಶ್ವರ ಭಟ್ಟರು ಪುಸ್ತಕದ ವ್ಯಾಪಾರಿ ಹೌದು. ಅದಕ್ಕಿಂತ ದೊಡ್ಡ ಓದುಗರು. ಯಾವ ಸಮಯದಲ್ಲೇ ಅಂಗಡಿಗೆ ಹೋಗಲಿ, ಭಟ್ಟರು ಪುಸ್ತಕ –ಪತ್ರಿಕೆ ಓದುವುದನ್ನು ಕಾಣಬಹುದಿತ್ತು. ಅದಿಲ್ಲದಿದ್ದರೆ ಅವರ ಆಸ್ಥಾನದಲ್ಲಿ ಸಾಹಿತ್ಯಾಸಕ್ತರು ಸೇರಿ ಸಾಹಿತ್ಯಗೋಷ್ಠಿ ನಡೆಸುತ್ತಿದ್ದರು.

ಅಂದು ಬಡಕಲಾದ ಶರೀರ ಇಂದು ಮೈದುಂಬಿಕೊಂಡಿದೆ. ವೇಷ-ಭೂಷಣದಲ್ಲಿ ಅದೇ ಅಚ್ಚುಕಟ್ಟು, ಅದೇ ಪ್ರೀತಿ-ವಿಶ್ವಾಸ, ಸೌಜನ್ಯದ ಸ್ವಾಗತ, ಸಾಹಿತ್ಯ ಹಾಗೂ ಸಾಮಾಜಿಕ ಕಾರ್ಯದಲ್ಲಿ ಅದೇ ಆಸಕ್ತಿ. ರಾಜಕೀಯದಲ್ಲೂ ಅದೇ ಕುತೂಹಲ, ಭಟ್ಟರಲ್ಲಿ ಇಂದಿಗೂ ಉಳಿದುಕೊಂಡಿದೆ.

ಭಟ್ಟರು ಬದುಕಿನಲ್ಲಿ ಅನೇಕ ಏರು-ಪೇರುಗಳನ್ನು ಕಂಡಿದ್ದಾರೆ. ಜೀವನದ ಸೋಪಾನಗಳನ್ನು ಬೀಳುತ್ತ-ಏಳುತ್ತಾ ಹತ್ತಿದ್ದಾರೆ. ಸುಖ ಬಂದಾಗ ಹಿಗ್ಗಲಿಲ್ಲ - ದುಃಖ ಬಂದಾಗ ಕುಗ್ಗಲಿಲ್ಲ - ಇದು ಭಟ್ಟರ ಜಾಯಮಾನ. ಈಗ ಅವರ ಪುಸ್ತಕದಂಗಡಿ ಇಲ್ಲ. ಅವರು ಸಾಗರದ ಹತ್ತಿರದಲ್ಲಿರುವ ಬೇದೂರು ಎಂಬ ಹಳ್ಳಿಯಲ್ಲಿ ನಿಂತು ಬೇಸಾಯ ನಡೆಸುತ್ತಿದ್ದಾರೆ. ಅವರಿಂದು ಒಂದು ವ್ಯಕ್ತಿಯಾಗಿ ಉಳಿಯದೇ ಒಂದು ಶಕ್ತಿಯಾಗಿ ಬೆಳೆದಿದ್ದಾರೆ. ಕವಿ-ಕಲಾವಿದ, ರಾಜಕೀಯಸ್ಥರೆಲ್ಲರಿಗೂ ಭಟ್ಟರು ಬೇಕು.

ಮನೆಯ ಸುತ್ತಲೂ ಅಡಿಕೆಯ ತೋಟ. ವೈವಿಧ್ಯಮಯ ಗುಲಾಬಿ ಗಿಡಗಳ ಕೃಷಿ, ಗಿಳಿ-ಪಾರಿವಾಳ, ಹಸು, ಕುರಿ-ನಾಯಿ-ಬೆಕ್ಕು ಎಲ್ಲವೂ ಇವೆ. ಈ ಮನೆಯು ಹಿನ್ನೆಲೆಯಲ್ಲಿ ಹಸುರುಡುಗೆಯ ನಿಸರ್ಗ ಸೌಂದರ್ಯ ಸಲಿಲದಲ್ಲಿ ಮೀಯುತ್ತಿದೆ. ಭಟ್ಟರು ನಿಸರ್ಗವನ್ನು ಗಾಢವಾಗಿ ಪ್ರಿತಿಸುತ್ತಾರೆ -ಎಂಬುದು ತಿಳಿಯಬೇಕಾದರೆ ಒಮ್ಮೆ ಅವರ ಮನೆಗೆ ಸಂದರ್ಶಿಸಬೇಕು.

ಭಟ್ಟರು ಮೂರು ವರ್ಷದವರಿರುವಾಗ ತಂದೆಯನ್ನು ಕಳೆದುಕೊಂಡರು. ಕೃಷಿಯಿಲ್ಲದೆ ಇವರ ಆಸ್ತಿ ಬರಡಾಯಿತು. ಅವರ ಸೋದರಮಾವ ಚಕ್ರಪಾಣಿರಾಯವರು, ಅವರ ಪತ್ನಿ ಮೀನಾಕ್ಷಮ್ಮನವರು ಮಹಾಬಲೇಶ್ವರ ಭಟ್ಟರನ್ನು ತಮ್ಮ ಮನೆಯಲ್ಲಿರಿಸಿಕೊಂಡು ಸಾಕಿ, ಸಲಹಿ, ವಿದ್ಯಾಭ್ಯಾಸ ಮಾಡಿಸಿದರು. ಮುಂದೆ ಅವರ ಮಗಳನ್ನುಕೊಟ್ಟು ವಿವಾಹಮಾಡಿದರು.

ಅಲ್ಲದೆ ಭಟ್ಟರ ತಾಯಿ ವೆಂಕಮ್ಮನವರ ತಂಗಿ ಮೀನಾಕ್ಷಮ್ಮ, ಅವರ ಪತಿ ಮಾವಿನ ಕುಳಿ ಚೆನ್ನಕೇಶವ ಭಟ್ಟರೂ ಇವರನ್ನು ಸಲಹಿದರು. ತಾನು ಈ ಸ್ಥಿತಿಗೆ ಬರಬೇಕಾದರೆ ಈ ನಾಲ್ವರ ಪೋಷಣೆ ಹಾಗೂ ಆಶೀರ್ವಾದಗಳು ಕಾರಣವೆಂದು ಭಟ್ಟರು ಕೃತಜ್ಞತೆಯಿಂದ ಸ್ಮರಿಸುತ್ತಾರೆ. ಮೂಲತಃ ತೊರೆಮನೆಯವರಾದ ಭಟ್ಟರ ಮನೆತನ ಹಿರೇಭಾಸ್ಕರ ಅಣೆಕಟ್ಟಿನ ಮುಳುಗಡೆಯಿಂದಾಗಿ ತಮ್ಮ ಆಸ್ತಿಯನ್ನು ಮಾರಿ ಸಾಗರಕ್ಕೆ ಬಂದು ನೆಲೆಸಿದ್ದರು. ಆಗ ಅವರಿಗೆ ಹದಿನಾರು ವರ್ಷ.

ಸಾಗರದ ನಗರದ ಸುಸಂಸ್ಕೃತ ವಾತಾವರಣ ಭಟ್ಟರ ಬದುಕಿಗೊಂದು ಹೊಸ ತಿರುವು ನೀಡಿತು. ಶಾಲೆಯ ದಿನಗಳಿಂದಲೇ ಅವರ ಓದುವ ಅಭಿರುಚಿ ಬೆಳೆಯಿತು.

ಓದುವ ಗೀಳು ಎಷ್ಟು ಅಂಟಿಕೊಂಡಿತ್ತೆಂದರೆ ಅವರು ಪುಸ್ತಕ ಭಂಡಾರ ತೆರೆಯಲು ಅದೇ ಸ್ಫೂರ್ತಿಯಾಯಿತು. ಇದರಿಂದ ಲೇಖಕರು – ಪುಸ್ತಕ ವ್ಯಾಪಾರಿಗಳೊಂದಿಗೆ ಸಂಪರ್ಕ ಬೆಳೆಯಿತು. ಓದುತ್ತಿದ್ದಂತೆ ಬರೆಯುವ ಹಂಬಲ ಬೆಳೆಯಿತು. ಬರೆದುದನ್ನು ಪ್ರಕಟಿಸುವ ಉಮ್ಮಳ ಉಂಟಾಯಿತು.

ಆರಂಭದಲ್ಲಿ – ಚಿಕ್ಕ ಪುಟ್ಟ ಲೇಖನ, ಕತೆ, ಕವನ ಬರೆಯತೊಡಗಿದರು. ಅಂದಿನ 'ಪ್ರಜಾಮತ' 'ವಿಶ್ವಕರ್ನಾಟಕ' (ತಿ..ತಾ. ಶರ್ಮ) ಪತ್ರಿಕೆಗಳಲ್ಲಿ ಇವರ ಬರಹಗಳು ಪ್ರಕಟಗೊಂಡು, ನಾಡಿನ ಹಿರಿಯ ಬರಹಗಾರರ ಗಮನ ಸೆಳೆಯಿತು. ಸಾಗರದಲ್ಲಿ ನಡೆಯುವ ಸಾವಜಾಜಿಕ ಕಾರ್ಯದಲ್ಲಿ ಭಟ್ಟರು ದುಡಿಯತೊಡಗಿದುದರಿಂದ ಸಾಗರದಲ್ಲಿ ಭಟ್ಟರ ಹೆಸರು ಜನಪ್ರಿಯವಾಯಿತು.

ಮೊದಲು ಡಿ.ವಿ.ಜಿ. ಅವರ 'ಮಂಕುತಿಮ್ಮನ ಕಗ್ಗ' ದಿಂದ ಪ್ರಭಾವಿತರಾದ ಇವರ ಮುಂದೆ ಆಚಾರ್ಯ, ಬಿ.ಎಂ.ಶ್ರೀ. ತೀ.ನಂ. ಶ್ರೀ. ಅವರ ಸಾಹಿತ್ಯದಿಂದ ಪರೋಕ್ಷವಾಗಿ ಪ್ರಭಾವಿತರಾದರು. ಕನ್ನಡ ಸೇನಾನಿ ಅ.ನ.ಕೃಷ್ಣರಾಯರ ಸಂಪರ್ಕದಿಂದ ಭಟ್ಟರಲ್ಲಿ ಬರೆಯುವ ಆತ್ಮ ವಿಶ್ವಾಸ ಬೆಳೆಯಿತು. ಹೊಸ ಹೊಸ ಬರಹಗಾರರನ್ನು ಪ್ರೋತ್ಸಾಹಿಸುವ ಕೃಷ್ಣರಾಯರು ಭಟ್ಟರಲ್ಲಿದ್ದ ಪ್ರತಿಭೆಯನ್ನು ಗುರುತಿಸಿ, ಮಾರ್ಗದರ್ಶನ ಮಾಡಿ ಹುರಿದುಂಬಿಸಿದರು. ಕೃಷ್ಣರಾಯರ ಬರಹಗಾರರ ಬಳಗದಲ್ಲಿದ್ದ ಎಂ. ರಾಮಮೂರ್ತಿ, ಬೀಚಿ, ನಾಡಿಗೇರ ಕೃಷ್ಣರಾಯರು, ಅರ್ಚಿಕ ವೆಂಕಟೇಶ, ಭಾರಧ್ವಾಜ ಮೊದಲಾದವರೊಂದಿಗೆ ಸಾಹಿತ್ಯ ಸಮಾಲೋಚನೆ ಮಾಡುವ ಸದಾವಕಾಶ ಪ್ರಾಪ್ತವಾಯಿತು. ಜೊತೆಗೆ ಮಾಸ್ತಿ, ಗೋಕಾಕ, ಬೇಂದ್ರೆ, ಮುಗಳಿ, ಪು.ತಿ.ನ ಮೊದಲಾದ ಕನ್ನಡ ದಿಗ್ಗಜಗಳ ಸಾಹಿತ್ಯವನ್ನೋದಿ ಅರಗಿಸಿಕೊಂಡರು. ಒಟ್ಟಿನಲ್ಲಿ ಹೇಳುವುದಾದರೆ ನವೋದಯ ಹಾಗೂ ಪ್ರಗತಿಶೀಲ ಸಾಹಿತ್ಯದಲ್ಲಿ ಬಂದ ಕೃತಿಗಳನ್ನು ಭಟ್ಟರು ಓದಿಕೊಂಡರು. ಅವರ ಓದು ವ್ಯಾಪಕವಾದಂತೆ ಅವರ ಶೈಲಿಯಲ್ಲಿ ತಾಜಾತನ–ಮೊನಚು ಮೂಡಿಕೊಂಡವು.

ಇವರು ಕತೆ, ಕಾದಂಬರಿ, ಕವನ, ಜನ ಜೀವನದ ಕುರಿತು ಬರೆದಿದ್ದಾರೆ. 'ತೋರಣ' 'ಗುಲಾಬಿ' ಇವರ ಕಥಾ ಸಂಗ್ರಹಗಳು. ಕರ್ನಾಟಕದ ಹಿರಿಯ ಸಾಹಿತಿಗಳನ್ನು ಪರಿಚಯಿಸುವ ಎರಡು ಭಾಗಗಳಲ್ಲಿ ಪ್ರಕಟವಾದ 'ಸಾಹಿತ್ಯ ಶಿಲ್ಪಿಗಳು' ಎಂಬ ಗ್ರಂಥಗಳು ಅವರು ಹತ್ತಿರದಿಂದ ಸಾಹಿತಿಗಳನ್ನು ಕಂಡ ಬಗೆಯನ್ನು ಆತ್ಮೀಯ ಶೈಲಿಯಲ್ಲಿ ಕಾಣುತ್ತೇವೆ. ಅವರ ಈ ಬರಹಗಳಲ್ಲಿ ಸಹೃದಯತೆ ಇದೆ. ಗೆಳೆತನದ ಬನಿಯಿದೆ. ಜನ ಸಾಮಾನ್ಯರಿಗೂ ತಲುಪುವ ಲಾಲಿತ್ಯಮಯ ಶೈಲಿಯಿದೆ. 'ಅಣ್ಣ–ತಂಗಿ' 'ವ್ಯಾಘ್ರಮುಖ' 'ಮಾನವ ರಾಕ್ಷಸರು' ಇವರ ಕಾದಂಬರಿಗಳು. ಈ ಕಾದಂಬರಿಗಳಲ್ಲಿ ಇಂದಿನ ಜೀವನದ ವಿಮರ್ಶೆಯಿದೆ. ಬದುಕು ಸುಧಾರಿಸುವ ಕಳಕಳಿಯಿದೆ. ಸೋಗು–ಆಡಂಬರಗಳನ್ನು ಧಿಕ್ಕರಿಸುವ ದನಿಯಿದೆ. ಜೀವನದ

ಋಜುತ್ವವನ್ನು ಪುಷ್ಟೀಕರಿಸುವ ಅಭಿಲಾಷೆಯಿದೆ. ಕನ್ನಡದ ಕವಿ-ಕಲಾವಿದರನ್ನು ಕುರಿತು ಪ್ರಕಟಿಸಿದ 'ಕನ್ನಡ ಕುಲದೀಪಕರು' ಕವಿ-ಕಲಾವಿದರ ಪರಿಚಯ ನೀಡಿದರೆ 'ಹೊಸೂರಿನ ಹಲವರು' ಕಾಲ್ಪನಿಕ ವೈಯಕ್ತಿಕ ಚಿತ್ರಗಳು 'ಹೊಸೂರಿನ ಹಲವರು' ಕಾಲ್ಪನಿಕ ವ್ಯಕ್ತಿ ಚಿತ್ರಗಳು. 'ಹೊಸೂರಿನ ಹಲವರು' ಒಂದು ಉತ್ತಮ ಬರವಣಿಗೆಗೆ ಒಂದು ಉದಾಹರಣೆಯೆನ್ನಬಹುದು. ನಮ್ಮ ಜೀವನದ ಸುತ್ತಮುತ್ತ ಇಂಥ ಪಾತ್ರಗಳು ಸುಳಿಯುತ್ತಿರುತ್ತವೆ. ಆದರೆ ನಾವು ಅದನ್ನು ಗುರುತಿಸುವುದಿಲ್ಲ. ಭಟ್ಟರು ಈ ಕೃತಿಯಲ್ಲಿ ವ್ಯಕ್ತಿಯ ಒಳ ಹೊರಗುಗಳನ್ನು ತುಂಬಾ ಮಾರ್ಮಿಕವಾಗಿ, ಮನೋಜ್ಞವಾಗಿ ಚಿತ್ರಿಸಿದ್ದಾರೆ.

ಭಟ್ಟರು ಬರೆದುದು ಕಡಿಮೆ. ಅವರ ಒಂದು ಕಾಲು ರಾಜಕೀಯ ರಂಗದಲ್ಲಿ, ಮತ್ತೊಂದು ಕಾಲು ಸಾಹಿತ್ಯದಲ್ಲಿ. ಅವರು ರಾಜಕೀಯ ರಂಗಕ್ಕೆ ಹೋದುದರಿಂದ ರಾಜಕೀಯಕ್ಕೆ ಎಷ್ಟು ಲಾಭವಾಯಿತೋ ಗೊತ್ತಿಲ್ಲ. ಆದರೆ ಕನ್ನಡಕ್ಕಂತೂ ನಷ್ಟವಾಯಿತು. ಅವರ ಬರವಣಿಗೆ ಸ್ಪಷ್ಟವಾಗಿ ನಿಚ್ಚಳವಾದ ದಿಶೆಯಲ್ಲಿ ಸಾಗುತ್ತಿರುವಾಗಲೇ ಭಟ್ಟರು ಸಾಹಿತ್ಯ ಕೈಬಿಟ್ಟಿದ್ದರಿಂದ ಕನ್ನಡದಲ್ಲಿ ಒಳ್ಳೆಯ ಕೃತಿಗಳನ್ನು ಕೊಡುವ ಸಾಮರ್ಥ್ಯವುಳ್ಳ ಇವರು ಸಾಹಿತ್ಯದಲ್ಲಿ ನಿರಂತರತೆಯನ್ನು ಕಾಪಾಡಿಕೊಳ್ಳಲಿಲ್ಲ. ಅವರ ಅಧ್ಯಯನ, ಆಸಕ್ತಿ, ಪರಿಸರ ದೊಡ್ಡದು. ಅವರು ಕಂಡುಂಡ ಬದುಕನ್ನೇ ಚಿತ್ರಿಸಿದ್ದರೂ ಕೆಲವು ಕಾದಂಬರಿಗಳು ಕನ್ನಡಕ್ಕೆ ಲಭಿಸುತ್ತಿದ್ದವು. ಆದರೆ ಅವರು ಹಮ್ಮಿಕೊಂಡ ಸಾಮಾಜಿಕ ಕಾರ್ಯ, ರಾಜಕೀಯ ಕ್ಷೇತ್ರದ ದುಡಿಮೆಯಿಂದಾಗಿ ಭಟ್ಟರು ಸಾಹಿತ್ಯಕ್ಕಾಗಿ ಸಮಯ ನೀಡಲಿಲ್ಲ. ಅವರ 'ಹೊಸೂರಿನ ಹಲವರು' 'ಮಾನವ ರಾಕ್ಷಸರು' ಅವರ ಬರವಣಿಗೆಯ ಗಟ್ಟಿತನ ತೋರಿಸಬಲ್ಲವು.

ಭಟ್ಟರು ಕಳೆದ ನಲವತ್ತೈದು ವರ್ಷಗಳಿಂದ ಸಮಾಜ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಕಳೆದ ನಲವತ್ತೆರಡು ವರ್ಷಗಳಿಂದ ರಾಷ್ಟ್ರೀಯ ಕಾಂಗ್ರೆಸ್ ಸದಸ್ಯರಾಗಿ, ಅನೇಕ ವರ್ಷ ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ ಸದಸ್ಯ, ಮೂರು ವರ್ಷ ಕಾರ್ಯದರ್ಶಿ, ನಾಲ್ಕು ವರ್ಷ ಉಪಾಧ್ಯಕ್ಷ, ಐದು ವರ್ಷ ಅಧ್ಯಕ್ಷರಾಗಿ ಕೆಲಸಮಾಡಿದ್ದಾರೆ. ಇವರು ಮನಸ್ಸು ಮಾಡಿದ್ದರೆ ರಾಜ್ಯ ಶಾಸನ ಸಭೆಯ ಸದಸ್ಯರಾಗಿ ಸುಲಭವಾಗಿ ಆಯ್ಕೆಯಾಗುತ್ತಿದ್ದರು. ತಮ್ಮ ಮಿತ್ರರನ್ನು ಚುನಾವಣೆಗಿಳಿಸಿ, ಅವರ ಪರವಾಗಿ ಪ್ರಚಾರ ಮಾಡಿ ಆರಿಸಿತಂದಿದ್ದಾರೆ. ಭಟ್ಟರ ರಾಜಕೀಯ ರಂಗದ ಸೇವೆ ಅಧಿಕಾರ ಪ್ರೇರಿತವಲ್ಲ. ಹಾರ, ತುರಾಯಿ, ಚಪ್ಪಾಳೆಗಳನ್ನು ಗಿಟ್ಟಿಸುವುದಕ್ಕಲ್ಲ. ತಾವಿರುವ ಕ್ಷೇತ್ರದ ಸೇವೆ ಮಾಡಬೇಕೆಂಬ ಏಕಮಾತ್ರ ಉದ್ದೇಶದಿಂದ ಕೂಡಿದ್ದು, ರಾಜಕೀಯ ರಂಗದಲ್ಲಿ ಅವರಿಗೆ ಅನೇಕರು ಮಿತ್ರರಿದ್ದಾರೆ. ಅವರ ಸಮಾಜ ಸೇವೆಗೆ ಈ ರಾಜಕೀಯ ಮಂದಿಗಳ ಸಹಾಯ ಸಹಕಾರ ದೊರಕಿದೆ.

ಭಟ್ಟರು ತಮ್ಮ ಮಿತ್ರರನ್ನು ಸೇರಿಸಿಕೊಂಡು 'ಕನ್ನಡ ಸಂಘ' ಸ್ಥಾಪಿಸಿದರು. ನಾಟಕ ಕಲೆಯನ್ನು ಪ್ರೋತ್ಸಾಹಿಸಲು 'ಕಮಲ ಕಲಾಸಂಘ'ದ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸುತ್ತಾ ಅಖಿಲ ಕರ್ನಾಟಕ ನಾಟಕ ಸ್ಪರ್ಧೆಯನ್ನು ಪ್ರತಿ ವರ್ಷ ಹತ್ತು - ಹದಿನೈದು ದಿನ ನಡೆಸಿ ಕನ್ನಡ ನಾಟಕ ಕಲೆಗಳನ್ನು ಹುರಿದುಂಬಿಸಿದರು.

'ಕನ್ನಡ ಸಂಘ'ದ ಅಧ್ಯಕ್ಷರಾಗಿದ್ದಾಗ ಕನ್ನಡ ಸಂಘ ಹಮ್ಮಿಕೊಳ್ಳುವ ಕಾರ್ಯಕ್ರಮದಲ್ಲಿ ದ.ರಾ.ಬೇಂದ್ರೆ, ಮಾಸ್ತಿ, ಶಿವರಾಮ ಕಾರಂತ, ವಿ.ಕೃ. ಗೋಕಾಕ, ರಂ.ಶ್ರೀ, ಮುಗಳಿ, ಬಸವರಾಜ ಕಟ್ಟೀಮನಿ, ಕುವೆಂಪು, ಅ.ನ.ಕೃ. ಮೊದಲಾದವರನ್ನು ಬರಮಾಡಿಕೊಂಡು ಅದ್ದೂರಿಯಾಗಿ ಸತ್ಕರಿಸಿ, ಸಾಹಿತ್ಯಿಕ ಅಭಿರುಚಿ ಬೆಳೆಯುವಂತೆ ಮಾಡಿದ್ದಾರೆ. ಅಲ್ಲದೆ ಬೇರೆ-ಬೇರೆ ಸಂದರ್ಭಗಳಲ್ಲಿ ವಿ.ಸೀ. ಎಂ.ಪಿ.ಎಲ್ ಶಾಸ್ತ್ರೀ, ಬಿ.ಹೆಚ್. ಶ್ರೀಧರ, ಡಾ. ಸಾ.ಶಿ. ಮರುಳಯ್ಯ, ಕೋ ಚೆನ್ನಬಸಪ್ಪ, ಗೋಪಾಲಕೃಷ್ಣ ಅಡಿಗ, ಗೀತಾ ಕುಲಕರ್ಣಿ, ಬೀಚಿ, ಶ್ರೀರಂಗ, ದೇ. ಜವರೇಗೌಡ, ಶ್ರೀ ಕೃಷ್ಣ ಆಲನಹಳ್ಳಿ, ಮೊದಲಾದವರನ್ನು ಕರೆತಂದು ಉಪನ್ಯಾಸ, ಸತ್ಕಾರ ಏರ್ಪಡಿಸಿ, ಸಾಗರದ ಜನತೆಗೆ ಪರಿಚಯಿಸಿದರು. 'ಭಟ್ಟರು ಸಂಘಟಿಸಿದ ಅಖಿಲ ಕರ್ನಾಟಕ ನಾಟಕ ಸ್ಪರ್ಧೆಯೇ ಇರಲಿ, ಸಾಹಿತಿಗಳ ಸತ್ಕಾರವಿರಲಿ, ರಾಜ್ಯೋತ್ಸವ ಇರಲಿ, ನಾಡಹಬ್ಬವಿರಲಿ, ಕವಿಗೋಷ್ಠಿ, ವಿಚಾರಗೋಷ್ಠಿ, ಶಿವಮೊಗ್ಗೆಯಲ್ಲಿ ನಡೆದ ಅಖಿಲ ಭಾರತ ಕನ್ನಡಸಾಹಿತ್ಯ ಸಮ್ಮೇಳನವೇ ಇರಲಿ, ಅದರಲ್ಲಿ ಭಟ್ಟರ ಶಿಸ್ತು, ಅಚ್ಚುಕಟ್ಟುತನ ಇರಲೇಬೇಕು. ಬಂದವರೊಂದಿಗೆ ಆತ್ಮೀಯ ನಡವಳಿಕೆ, ಸಮಯ ಪ್ರಜ್ಞೆ-ನುಡಿಯ ನಿತಾಂತ ಪ್ರೇಮ, ಕಾರ್ಯಕ್ರಮದ ಸಫಲತೆಯನ್ನು ಸಾರುತ್ತಿದ್ದವು.

ಶ್ರೀಯುತರು ಹಿರಿಯ ಸಾಹಿತಿಗಳನ್ನು ಗೌರವಿಸಿದಂತೆ, ಕಿರಿಯ ಸಾಹಿತಿಗಳನ್ನೂ ಬೆನ್ನು ತಟ್ಟಿ ಅವರಿಂದ ಭಾಷಣ ಮಾಡಿಸಿದ್ದಾರೆ. ನಾಟಕ, ಕಾದಂಬರಿ ಬರೆಸಿದ್ದಾರೆ. ಅ.ನ.ಕೃ. ಅವರಂತೆಯೇ ಭಟ್ಟರು ತಮ್ಮ ಸುತ್ತಲಿನ ಗೆಳೆಯರನ್ನು ಸಾಹಿತ್ಯ-ಸಾಮಾಜಿಕ ಸೇವೆಗೆ ಸಿದ್ಧಪಡಿಸಿ ತಮ್ಮ ಸುತ್ತಲಿನ ವಾತಾವರಣವನ್ನು ಸಾಹಿತ್ಯಮಯಗೊಳಿಸಿದರು. 'ಜಲಂಧರ ಪ್ರಕಟನಾಲಯ' ಎಂಬ ಪ್ರಕಟಣ ಸಂಸ್ಥೆ ಆರಂಭಿಸಿ ಹೊಸ ಪ್ರತಿಭೆಗಳ ಪುಸ್ತಕಗಳನ್ನು ಬೆಳಕಿಗೆ ತಂದು ಮುನ್ನಡೆಸಿದರು.

೧೯೭೬ರಲ್ಲಿ ಶಿವಮೊಗ್ಗದಲ್ಲಿನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಸ್ವಾಗತ ಸಮಿತಿಯ ಉಪಾಧ್ಯಕ್ಷರಾಗಿ ಮೂರುದಿನ ಸಂಭ್ರಮದಲ್ಲಿ ಸಾಹಿತ್ಯ ಸಮ್ಮೇಳನ ನಡೆಸಿದರು. ಇದಲ್ಲದೆ ಅನೇಕ ಸಂಸ್ಥೆಗಳಲ್ಲಿ ದುಡಿದರು. ಆದರೆ ಇವರು ಒಂದೆಡೆ ಹೇಳಿದಂತೆ 'ಪ್ರಜಾಪ್ರಭುತ್ವದಲ್ಲಿ ಸಾರ್ವಜನಿಕ ಕೆಲಸ ಮಾಡುವವನು ಬಹಳ ಎಚ್ಚರದಿಂದ ಇರಬೇಕಾಗುತ್ತದೆ. ಸಾರ್ವಜನಿಕ ಕೆಲಸ, ಸೇವೆಗಾಗಿ ಇರಬೇಕೇ ಹೊರತು, ಆ ಕೆಲಸದಿಂದ ಹಿಡಿದ ಸ್ಥಾನ ಮಾನಗಳಿಂದ, ಅಧಿಕಾರದಿಂದ ಇನ್ನೊಬ್ಬರನ್ನು ಹಿಂಸಿಸುವುದಕ್ಕಾಗಲೀ, ದ್ವೇಷ ಸಾಧಿಸಿ

ಕೊಳ್ಳುವುದಕ್ಕಾಗಲೀ ಇರಬಾರದು.' ಈ ಮಾತು ಅವರ ಸಾರ್ವಜನಿಕ ಕಾರ್ಯದ ಹಿನ್ನೆಲೆಯನ್ನು ತಿಳಿಸುತ್ತದೆ.

ಸಾಹಿತ್ಯದ ಬಗೆಗೂ ಅವರು ''ಒಟ್ಟಿನಲ್ಲಿ ನಾವು ಬೆಳೆಯದೆ, ದೊಡ್ಡವರಾಗದೆ ಸಾಹಿತ್ಯ ಬೆಳೆಯಲಾರದು, ದೊಡ್ಡದಾಗಲಾರದು ಎಂಬುದೇ ನನ್ನ ಸ್ಪಷ್ಟಅಭಿಪ್ರಾಯ. ನನ್ನ ಬರವಣಿಗೆ ಕೂಡ ಅದು ನನ್ನ ತೃಪ್ತಿಗೆ ಹೊರತು, ಇನ್ನೊಬ್ಬರ ತೃಪ್ತಿಗಾಗಲೀ, ಹೊಗಳಿಕೆಗಾಗಲೀ ಅಥವಾ ಉದ್ಧಾರಕ್ಕಾಗಲೀ ಅಲ್ಲ; ಇದು ಕೇವಲ ನನ್ನ ತೃಪ್ತಿಗೇ' ಎಂದು ತಮ್ಮ ಖಚಿತವಾದ ನಿಲುವು ಸಾರಿದ್ದಾರೆ.

ಪ್ರಜಾಪ್ರಭುತ್ವದ ರಾಜಕೀಯ ರಂಗದಲ್ಲಿ ದುಡಿದು, ಕೆಟ್ಟ ಹೆಸರು ಸಂಪಾದಿಸದೇ, ಹಣ ಸಂಪಾದಿಸದೇ ಶುದ್ಧಮನಸ್ಕರಾಗಿ ಸಮಾಜ ಸೇವೆ ಮಾಡಿದ ಭಟ್ಟರು, ಸಾಹಿತ್ಯವನ್ನು ಸ್ವಸಂತೋಷಕ್ಕಾಗಿ ನಿರ್ಮಿಸಿದರೂ ಅದರಿಂದ ಅವರು ಅನ್ಯರಿಗೂ ಸಂತೋಷ ನೀಡಿದ್ದಾರೆ. ಮಹಾಬಲೇಶ್ವರ ಭಟ್ಟರ ಬದುಕು ದೊಡ್ಡದು. ಅವರು ಕಂಡ ಜೀವನ ಅದಕ್ಕೂ ದೊಡ್ಡದು. ಅದನ್ನೆಲ್ಲಾ ಕ್ರೋಢೀಕರಿಸಿ ತಮ್ಮ ಆತ್ಮ ಚರಿತ್ರೆಯಲ್ಲಿ ಬರೆದರೆ ಅದೊಂದು ಅಪೂರ್ವ ದಾಖಲೆಯಾದೀತು.

ಭಟ್ಟರಿಗೆ ೫೦ ತುಂಬಿದಾಗ ಅವರ ಅಭಿಮಾನಿಗಳು ಅವರನ್ನು ಸತ್ಕರಿಸಿ, 'ಮಹಾನಂದ' ಎಂಬ ಗೌರವ ಗ್ರಂಥ ಅರ್ಪಿಸಿದರು. ಅದರಲ್ಲಿ ಅವರನ್ನು ಹತ್ತಿರದಿಂದ ಕಂಡವರ ಸ್ವಾರಸ್ಯಪೂರ್ಣ ಬರಹಗಳಿವೆ. ಈಗ ಅವರಿಗೆ ೭೦. ಈಗಲೂ ಅವರ ಸ್ನೇಹಿತರು, ಅಭಿಮಾನಿಗಳು ಅಭಿನಂದನ ಗ್ರಂಥ ಒಪ್ಪಿಸಿ ಸನ್ಮಾನಿಸಲಿದ್ದಾರೆ. ಇದು ಅವರು ತಮ್ಮ ಸ್ನೇಹಿತರನ್ನು, ಹಿತೈಷಿಗಳನ್ನು ಕಂಡ ಪ್ರೀತಿಗೆ ಸಲ್ಲುವ ಗೌರವ. ಅವರು ನೂರು ವಸಂತಗಳನ್ನು ಕಂಡು, ನಾಡು- ನುಡಿ ಶ್ರೀಮಂತಗೊಳಿಸಲಿ ಎಂದು ಹಾರೈಸುವೆ.

# ಮಲೆನಾಡಿನ ಪ್ರತಿಭಾನ್ವಿತ

- ವ್ಯಾಸರಾಯ ಬಲ್ಲಾಳ

ದೂರದ ಮುಂಬಯಿಯಲ್ಲಿದ್ದು ನಾನು ಬೆರಳೆಣಿಕೆಯ ಸಂದರ್ಭಗಳಲ್ಲಷ್ಟೆ ಸಾಗರದ ಶ್ರೀ ಟಿ. ಮಹಾಬಲೇಶ್ವರ ಭಟ್ಟರನ್ನು ಕಂಡಿರುವೆನಾದರೂ ಅವರ ಬದುಕಿನ ಸಾಹಿತ್ಯಕ ಹಾಗೂ ಸಾಂಸ್ಕೃತಿಕ ಮಗ್ಗಲುಗಳ ಬಗ್ಗೆ ಸಾಕಷ್ಟು ಕೇಳಿದ್ದೇನೆ. ಕರ್ನಾಟಕದ ಭೂಪಟದಲ್ಲಿ ಸಾಂಸ್ಕೃತಿಕ ಶ್ರೀಮಂತಿಕೆಗೆ ಒಂದು ಪ್ರಮುಖ ಕೇಂದ್ರವೆಂದು ಹೆಸರು ಪಡೆದಿರುವ ಸಾಗರದಲ್ಲಿ ದೀರ್ಘಕಾಲ ಸಾಹಿತ್ಯ, ಕಲೆ, ಸಂಸ್ಕೃತಿಗಳಿಗೆಂದು ಸಕ್ರಿಯವಾಗಿ ತನ್ನನ್ನು ತೊಡಗಿಸಿಕೊಂಡು ಶ್ರೀ ಟಿ. ಮಹಾಬಲೇಶ್ವರ ಭಟ್ಟರನ್ನು ಅವರ ಎಪ್ಪತ್ತನೆಯ ಹುಟ್ಟು ಹಬ್ಬದ ಸಂದರ್ಭದಲ್ಲಿ ನಾಡು ನೆನೆಸಿಕೊಳ್ಳುವುದು ಉಚಿತವೇ ಆಗಿದೆ. ಅವರು ಇಂದಿನ ಸಾಮಾಜಿಕ ಜೀವನವನ್ನು ಪ್ರಭಾವಿಸುವ ಎಲ್ಲ ಕ್ಷೇತ್ರಗಳಲ್ಲಿ ತನ್ನನ್ನು ತೊಡಗಿಸಿಕೊಂಡವರು. ಸ್ವತಃ ಬರಹಗಾರರಾಗಿ, ಅಂಕಣಕಾರರಾಗಿ, ಪ್ರಕಾಶಕರೂ ಆಗಿ ಸಾಹಿತ್ಯ ಕ್ಷೇತ್ರದಲ್ಲಿ ದುಡಿದವರು. ಸಾಂಸ್ಕೃತಿಕವಾಗಿ ನುಡಿಯ ಶ್ರೀಮಂತಿಕೆಗೆ ಕಾರಣವಾಗುವ ಹಲವಾರು ಕೆಲಸಗಳಲ್ಲಿ ಪ್ರಾಮಾಣಿಕವಾಗಿ ದುಡಿದು ಪ್ರಮುಖ ಸಾಹಿತ್ಯಕ ಸಾಂಸ್ಕೃತಿಕ ಸಂಸ್ಥೆಗಳ ಚಟುವಟಿಕೆಗಳನ್ನು ರೂಪಿಸಲು ನೆರವಾದವರು. ಮಲೆನಾಡಿನ ಅಭಿವೃದ್ಧಿಯ ದೃಷ್ಟಿಯಿಂದ ಸಂಬಂಧಿಸಿದ ಸಭೆ. ಸಮಿತಿಗಳಲ್ಲಿ ಸಲಹೆ ಸೂಚನೆಗಳನ್ನಿತ್ತು ದುಡಿದವರು. ಅವರು ದೀರ್ಘಕಾಲ ಸಾಮಾಜಿಕ ಹಿತದಲ್ಲೆ ತಮ್ಮ ಆದರ್ಶವನ್ನು ರೂಪಿಸಿಕೊಂಡು ಮಾಡಿರುವ ಸಾರ್ವಜನಿಕ ಸೇವೆಯನ್ನು ನೆನಪಿಸಿಕೊಂಡು ಅವರ ೭೦ನೇ ಹುಟ್ಟು ಹಬ್ಬದ ಸಂದರ್ಭದಲ್ಲಿ ಅವರನ್ನು ಅಭಿನಂದಿಸುವ ಕಾರ್ಯಕ್ರಮವು ತುಂಬಾ ಔಚಿತ್ಯ ಪೂರ್ಣವಾದ, ಕೃತಜ್ಞತೆಯ ಕಾರ್ಯಕ್ರಮವೆಂದು ಹೇಳಲು ಅನುಮಾನಿಸಬೇಕಾಗಿಲ್ಲ.

ಶ್ರೀ ಭಟ್ಟರ ಸಾರ್ವಜನಿಕ ಸೇವೆ ಇದೇ ರೀತಿ ದೀರ್ಘಕಾಲ ಮುಂದು ವರೆಯುವಂತಾಗಲಿ ಎಂದು ನನ್ನ ಹಾರೈಕೆ.

# ಸಾರ್ಥಕ ಬದುಕಿಗೆ ಚಿನ್ನದ ಚೌಕಟ್ಟು

– ಕೆ. ವಾಸುದೇವಾಚಾರ್

ಆತ್ಮೀಯ ಟಿ. ಮಹಾಬಲೇಶ್ವರ ಭಟ್ಟರಿಗೆ ವರ್ಷ ಎಪ್ಪತ್ತು ತುಂಬುತ್ತಿದೆ ಅಂದರೆ ನಂಬುವುದು ಕಷ್ಟ.

ಅವರ ಚಟುವಟಿಕೆ, ಆರೋಗ್ಯ, ಚಿಂತನೆ, ಸದಾ ಕ್ರಿಯಾಶೀಲತೆಯ ಸ್ವಭಾವ, ವೈವಿಧ್ಯಮಯ ಕ್ಷೇತ್ರಗಳಲ್ಲಿ ಸಕ್ರಿಯ ಕೆಲಸ. ನೋಡುತ್ತಿದ್ದರೆ ಐವತ್ತೂ ದಾಟಿಲ್ಲ ಅನ್ನಿಸುತ್ತದೆ.

ಈ ಎಪ್ಪತ್ತರ ಸವಿ-ಸುಂದರ ನೆನಪಿಗೆ 'ಒಂದು ಅಭಿನಂದನ ಗ್ರಂಥ' ಅಗತ್ಯವಾಗಿ ಆಗಬೇಕಿದ್ದ ಕೆಲಸ. ಆ ಗ್ರಂಥಕ್ಕೆ ಶ್ರೀ ಭಟ್ಟರನ್ನು ಕುರಿತು ಬರೆಯುವುದು ಒಂದು ಹೆಮ್ಮೆಯ, ಆತ್ಮೀಯ ಅನುಭವ. ಇಂತಹ ಉತ್ತಮ ಚಿಂತನೆ ನಡೆಸಿ, ಅವರ ವ್ಯಕ್ತಿತ್ವಕ್ಕೊಂದು ಚಿನ್ನದ ಮೆರಗು ನೀಡುವ ಅವರ ಅಭಿಮಾನಿಗಳು; ಮಿತ್ರರಾದ ತಿರುಮಲ ಮಾವಿನಕುಳಿ, ಪ್ರಕಾಶ್ ಕಮ್ಮಾರರು ಅಭಿನಂದನಾರ್ಹರು.

ಐವತ್ತು, ಅರವತ್ತು, ಎಪ್ಪತ್ತು, ಎಂಭತ್ತು, ತೊಂಭತ್ತು, ನೂರು ವರ್ಷಗಳು ತುಂಬಿದಾಗ ಅನೇಕರು ಅವರವರ ಸಂಸ್ಕಾರ, ಅಭಿರುಚಿ, ಆಸಕ್ತಿಗೆ ತಕ್ಕಂತೆ ಜನ್ಮದಿನಗಳನ್ನು ನೆನಪಿಸಿಕೊಳ್ಳುವುದು ಎಂದಿನಿಂದಲೂ ಆಚರಣೆಯಲ್ಲಿದೆ. ಕೆಲವರು ಧಾರ್ಮಿಕ ವಿಧಿಗಳ ಮೂಲಕ ಶಾಂತಿ ಮಾಡಿಕೊಳ್ಳುತ್ತಾರೆ. ಹೋಮ, ಹವನ, ವಿಶೇಷ ಪೂಜೆ, ಪ್ರಾರ್ಥನೆ ಸಲ್ಲಿಸುತ್ತಾರೆ. ಅನ್ನ, ಧಾನ್ಯ, ವಸ್ತುಗಳ ದಾನವನ್ನೂ ಮಾಡುತ್ತಾರೆ. ಕೆಲವರು ತೀರ್ಥಯಾತ್ರೆ ಕೈಗೊಳ್ಳುತ್ತಾರೆ. ಕೆಲವರು ಕೇಕ್ ಕತ್ತರಿಸಿ, ಪಾನ ಪಾರ್ಟಿ ಮಾಡಿಸುತ್ತಾರೆ. ಜನ್ಮ ದಿನಗಳು ಹೀಗೆ ನಾನಾ ರೀತಿಯ ಆಚರಣೆಯಲ್ಲಿವೆ.

ಸಾಹಿತಿಗಳು, ಬರಹಗಾರರು, ಬುದ್ಧಿಜೀವಿಗಳು; ಸಂಶೋಧಕರು ಸ್ವಲ್ಪ ವಿಶಿಷ್ಟವಾಗಿ ತಮ್ಮ ಜನ್ಮ ದಿನಗಳನ್ನು ಆಚರಿಸುತ್ತಾರೆ. ಅವರ ಸಾಧನೆ, ಸೇವೆ; ಕೃತಿ ರಚನೆ, ಪಡೆದಿರುವ ಪುರಸ್ಕಾರ, ಅವರ ಬದುಕಿನ ಮುಖ್ಯ ಘಟನೆಗಳನ್ನು ಕುರಿತಾಗಿ ವಿವರ ಇರುವ ಗ್ರಂಥವನ್ನು ಪ್ರಕಟಿಸುವುದು ಒಂದು ಸಂಪ್ರದಾಯದಂತೆ

ಬೆಳೆದು ಬಂದಿದೆ. ಈ ಗ್ರಂಥಗಳು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಅತ್ಯಮೂಲ್ಯ ಆಕರ ಗ್ರಂಥಗಳಾಗಿ, ವ್ಯಕ್ತಿತ್ವವನ್ನು ಅರಳಿಸುವ ಮೌಲಿಕ ಗ್ರಂಥಗಳಾಗಿ ಸಾರ್ಥಕವಾಗುತ್ತವೆ. ಜೊತೆ-ಜೊತೆಯಲ್ಲಿ ಸಂಬಂಧಪಟ್ಟ ವ್ಯಕ್ತಿಯ ಶ್ರಮ, ಸಾಧನೆ, ಸಿದ್ಧಿಗಳ ಪರಿಚಯವೂ ಹೊರಗಿನವರಿಗೆ ತಿಳಿಯುವಂತಹ ಸುವರ್ಣಾವಕಾಶ ಒದಗಿಸುತ್ತವೆ. ಈಗಾಗಲೇ ಹೊರಬಂದಿರುವ ಅನೇಕ ಅಭಿನಂದನ ಗ್ರಂಥಗಳನ್ನು ನೋಡಿದಾಗ ಇದೊಂದು ಅತ್ಯುತ್ತಮ ಶ್ರೇಷ್ಠ ಕೆಲಸವೆಂದು ವ್ಯಕ್ತವಾಗುತ್ತದೆ.

ನನ್ನ ಶ್ರೀ ಮಹಾಬಲೇಶ್ವರ ಭಟ್ಟರ ಪರಿಚಯ ಸರಿ ಸುಮಾರು ೧೯೬೮ರಿಂದ. ನಮ್ಮ ಜಿಲ್ಲೆಯಲ್ಲಿ ನಾನು ಕೇಳುತ್ತಿರುವ, ಪತ್ರಿಕೆಗಳಲ್ಲಿ ಓದುತ್ತಿರುವ ಪ್ರಮುಖ ಹೆಸರು ಶ್ರೀ ಭಟ್ಟರದ್ದು.

ಶ್ರೀ ಭಟ್ಟರು ಕಾಂಗ್ರೆಸ್ ಪಕ್ಷದ ನಾನಾ ಹಂತದ ಅಧಿಕಾರ ನಿರ್ವಹಿಸಿದ್ದುದು; ಕೃಷಿ ಕ್ಷೇತ್ರದ ಪ್ರಮುಖರಾಗಿಯೋ, ಅಡಿಕೆ ಸಹಕಾರ ಸಂಘದ ಪದಾಧಿಕಾರಿಗಳಾಗಿಯೋ, ಸಂಘ-ಸಂಸ್ಥೆಗಳ ಸಕ್ರಿಯ ವ್ಯಕ್ತಿಯಾಗಿಯೋ ಸದಾ ಪತ್ರಿಕೆಗಳಲ್ಲಿ ಓದುತ್ತಿದ್ದ ದಿನಗಳವು. ಒಬ್ಬರೇ ವ್ಯಕ್ತಿಯಲ್ಲಿ ನಾನಾ ವಿಷಯಗಳ ಮೇಲಿರುವ ಅಭಿರುಚಿ ಆಸಕ್ತಿ ಸಕ್ರಿಯವಾಗಿ ತೊಡಗಿಕೊಳ್ಳುವ ಪ್ರವೃತ್ತಿ ಅಪರೂಪ ಯಾರಿಂದಲೂ ಬೆರಳು ತೋರಿಸಿಕೊಳ್ಳದೆ ಎಲ್ಲರಲ್ಲೂ ಬೆರೆತು ನಗು ನಗುತ್ತಾ ಕೆಲಸ ಮಾಡುತ್ತಿದ್ದ ರೀತಿಗಳು ಶ್ರೀ ಭಟ್ಟರನ್ನು ಒಬ್ಬ ಶ್ರೇಷ್ಠ ವಿಶೇಷ ವ್ಯಕ್ತಿತ್ವದ ಪಂಗಡಕ್ಕೆ ಸೇರಿದವರು ಎನ್ನುವ ಭಾವನೆ ಮೂಡುತ್ತಿತ್ತು.

ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನೊಂದಿಗೆ ಶ್ರೀ ಭಟ್ಟರ ಸಂಪರ್ಕ ಸುಮಾರು ೧೯೬೮ರಲ್ಲಿ . ಶ್ರೀ ಜಿ. ನಾರಾಯಣರು ಕೇಂದ್ರ ಕ.ಸಾ.ಪ.ದಲ್ಲಿ ಅಧ್ಯಕ್ಷರಾಗಿದ್ದರು. ಕ.ಸಾ.ಪ.ದ ಕೆಲಸ ಕಾರ್ಯಗಳು ಬೆಂಗಳೂರನ್ನು ಬಿಟ್ಟು ಜಿಲ್ಲಾ ಕೇಂದ್ರಗಳಿಗೆ,ತಾಲ್ಲೂಕು ಕೇಂದ್ರಗಳಿಗೆ ತಲುಪಬೇಕೆಂದು ಯೋಚಿಸಿ ೧೯೬೮ರಲ್ಲಿ ಪ್ರಥಮವಾಗಿ ಜಿಲ್ಲಾ ಸಮಿತಿಗಳನ್ನು ಶ್ರೀ ಜಿ. ನಾರಾಯಣರು ರಚಿಸಿದರು. ಆಗ ಜಿಲ್ಲೆಯ ಪ್ರಥಮ ಅಧ್ಯಕ್ಷರಾದವರು ಡಾ. ಸರ್ಜಾಚಂದ್ರಶೇಖರಯ್ಯ. ಆಗ ನಾನು ಶಿವಮೊಗ್ಗ ತಾಲ್ಲೂಕು ಪ್ರತಿನಿಧಿಯಾಗಿ ನೇಮಕಗೊಂಡೆ. ಆ ಸಂದರ್ಭದಲ್ಲಿ ಬೇರೆ - ಬೇರೆ ತಾಲ್ಲೂಕುಗಳಿಗೆ ಜಿಲ್ಲಾ ಕ.ಸಾ.ಪ.ದ ಪ್ರತಿನಿಧಿಗಾಗಿ ಆರಿಸುವಾಗ ಸಾಗರದ ಶ್ರೀ ಭಟ್ಟರ ಹೆಸರು ಪ್ರಧಾನವಾಗಿತ್ತು. ನಂತರ ಸುಮಾರು ೧೯೭೦ರಲ್ಲಿ ಪ್ರಥಮ ಜಿಲ್ಲಾ ಸಾಹಿತ್ಯ ಸಮ್ಮೇಳನವನ್ನು ಹೊಂಬುಜದಲ್ಲಿ (ಹುಂಚ) ನಡೆಸಿದ ಕೀರ್ತಿ ಡಾ. ಸರ್ಜಾ ಅವರದ್ದು. ಆಗಲೂ ಪ್ರಮುಖವಾಗಿ ಕೇಳಿ ಬರುತ್ತಿದ್ದ ಹೆಸರು ಶ್ರೀ ಭಟ್ಟರದ್ದು. ನಂತರ ಜಿಲ್ಲಾ ಕ.ಸಾ.ಪ. ಅಧ್ಯಕ್ಷರಾದವರು ಪತ್ರಿಕೋದ್ಯಮಿ,

ದಿ. ಶ್ರೀ ನಂಜುಂಡಶಾಸ್ತ್ರಿಯವರು. ಇವರು ಸುಮಾರು ೯ ವರ್ಷ ಜಿಲ್ಲಾ ಅಧ್ಯಕ್ಷರಾಗಿದ್ದರು. ಆಗಲೂ ನಾನು ಶಿವಮೊಗ್ಗ ತಾಲ್ಲೂಕು ಪ್ರತಿನಿಧಿ ನಮ್ಮ ಜಿಲ್ಲೆಯ ಇತರೆ ತಾಲ್ಲೂಕುಗಳಲ್ಲಿ ಹೆಚ್ಚಿನ ಚಟುವಟಿಕೆಗಳು ಇರಲಿಲ್ಲ. ಈ ೯ ವರ್ಷಗಳೂ ಕೇಂದ್ರದಲ್ಲಿ ಅಧ್ಯಕ್ಷರಾಗಿದ್ದವರು ಶ್ರೀ ಜಿ. ನಾರಾಯಣರು. ನಂತರ ಜಿಲ್ಲೆಯ ಅಧ್ಯಕ್ಷರಾದವರು ಶ್ರೀ ಜಿ. ಗೋವಿಂದರಾಜು ಅವರು, ಸುಮಾರು ೧೯೭೭ರಲ್ಲಿ. ಇವರ ಕಾಲದಲ್ಲಿ ಎರಡನೆಯ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನ ಸಾಗರದಲ್ಲಿ ಯಶಸ್ವಿಯಾಗಿ ನಡೆಯಿತು.

೨೦.೧೨.೧೯೮೦ರಲ್ಲಿ ಸಾಗರದಲ್ಲಿ ಶಿವಮೊಗ್ಗ ಜಿಲ್ಲೆಯ ಎರಡನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಸ್ವಾಗತ ಸಮಿತಿ ಅಧ್ಯಕ್ಷರಾಗಿ ಆ ಸಮ್ಮೇಳನವನ್ನು 'ನಭೂತೋ ನ ಭವಿಷ್ಯತಿ' ಎನ್ನುವಂತೆ ನಡೆಸಿದ ಕೀರ್ತಿ ಶ್ರೀ ಭಟ್ಟರದು. ಆಗ ಶ್ರೀ ಜಿ. ಗೋವಿಂದರಾಜು ಜಿಲ್ಲಾಧ್ಯಕ್ಷರಾಗಿದ್ದರು. ನಾನು ಜಿಲ್ಲಾ ಕಾರ್ಯದರ್ಶಿ. ಆ ಸಂದರ್ಭದಲ್ಲಿ ಶ್ರೀ ಭಟ್ಟರ ಸಂಪರ್ಕ ಇನ್ನೂ ನಿಕಟವಾಯಿತು. ಅವರ ಕಾರ್ಯವ್ಯಾಪ್ತಿಯ ಪರಿಚಯ ಇನ್ನೂ ಗಾಢವಾಯಿತು. ೧೨.೧೧.೧೯೭೭ರಲ್ಲಿ ಶ್ರೀ ಭಟ್ಟರ ಐವತ್ತನೆಯ ವರ್ಷದ ಹುಟ್ಟು ಹಬ್ಬ ನಡೆಯಿತು. ಆಗ ಜಿಲ್ಲಾ ಕ.ಸಾ.ಪ. ದ ಕಾರ್ಯದರ್ಶಿಯಾಗಿದ್ದು, ಆ ಸಮಾರಂಭದಲ್ಲಿ ಪಾಲುಗೊಂಡಿದ್ದ ನನಗೆ ಅವರ್ಣನೀಯ ಆನಂದ. ಆಗಿನ ಕೇಂದ್ರ ಕ.ಸಾ.ಪ.ದ ಅಧ್ಯಕ್ಷರಾಗಿದ್ದ ಹಂಪನಾ ರ ಸಮ್ಮುಖದಲ್ಲಿ ನಡೆದ ಈ ಸಮಾರಂಭ ಅವಿಸ್ಮರಣೀಯ. ಈ ಸಂದರ್ಭದಲ್ಲಿ ಪ್ರಕಟವಾದ 'ಮಹಾನಂದ' ಅಭಿನಂದನಾ ಗ್ರಂಥವನ್ನು ನೋಡಿದಾಗ ಶ್ರೀ ಭಟ್ಟರು ವಿರಾಟ ಸ್ವರೂಪದ ದರ್ಶನವಾಯಿತು.

ಧಾರ್ಮಿಕ ಗುರುಗಳು; ರಾಜಕೀಯ ಮುತ್ಸದ್ದಿಗಳು; ಮಾಜಿ-ಹಾಲಿ ಮುಖ್ಯಮಂತ್ರಿ ಮಹೋದಯರು; ರಾಜಕೀಯದಲ್ಲಿ ಮೇರು ಸ್ಥಾನದಲ್ಲಿರುವವರು ಇವರ ಹತ್ತಿರದ ಆತ್ಮೀಯರು. ಸಾಹಿತ್ಯ ಕ್ಷೇತ್ರದಲ್ಲಿರುವ ಪ್ರಥಮ ಶ್ರೇಣಿಯ ದಿಗ್ಗಜಗಳ ಜೊತೆಗಿನ ಇವರ ಹತ್ತಿರದ ಸಂಪರ್ಕ-ಆತ್ಮೀಯತೆ; ಸಾಗರದ ಕನ್ನಡ ಸಂಘದ ಸ್ಥಾಪಕ ಅಧ್ಯಕ್ಷಸ್ಥಾನ; ಜೊತೆಗೆ ವಿವಿಧ ಕ್ಷೇತ್ರಗಳ ಸಂಘ ಸಂಸ್ಥೆಗಳಲ್ಲಿ ಉನ್ನತ ಸ್ಥಾನಗಳು ಇವರ ವೈವಿಧ್ಯಮಯವಾದ ಸಾಂಸ್ಥಿಕ ವ್ಯಕ್ತಿತ್ವಕ್ಕೆಮೆರಗು ನೀಡುವಂತಹವು. 'ಆಡುಮುಟ್ಟದ ಸೊಪ್ಪಿಲ್ಲ' ಭಟ್ಟರಿಲ್ಲದ ಸಂಘ-ಸಂಸ್ಥೆಗಳಿಲ್ಲ;' ಎನ್ನುವ ಮಾತು ಸೂರ್ಯನ ಬೆಳಕಿನಷ್ಟೇ ಸತ್ಯವಾದದು.

ಶ್ರೀ ಜಿ. ಗೋವಿಂದರಾಜು ದಿವಂಗತರಾದ ನಂತರ ನಾನು ಜಿಲ್ಲಾ ಕ.ಸಾ.ಪ. ದ ಅಧ್ಯಕ್ಷನಾಗಿ ಆಗಿನ ಕೇಂದ್ರ ಅಧ್ಯಕ್ಷರಾಗಿದ್ದ ಹಂಪ.ನಾ. ರಿಂದ ನೇಮಕಗೊಂಡೆ.

ಆಗ ಶ್ರೀ ಭಟ್ಟರು ಜಿಲ್ಲಾ ಕ.ಸಾ.ಪ.ದ ಕಾರ್ಯಕಾರೀ ಸಮಿತಿಯಲ್ಲಿ ಸಂಘ-ಸಂಸ್ಥೆಯ ಪ್ರತಿನಿಧಿಯಾಗಿ ಪುನಃ ಜಿಲ್ಲಾಧ್ಯಕ್ಷರಿಂದ ನೇಮಕಗೊಂಡರು. ಸುಮಾರು ೧೯೮೦ರಿಂದ ೧೯೯೦ರವರೆಗೆ ೧೦ ವರ್ಷಗಳಲ್ಲಿಮೊದಲ ೪-೫ ವರ್ಷ ಸಾಗರ ತಾಲ್ಲೂಕು ಪ್ರತಿನಿಧಿಯಾಗಿ ಶ್ರೀ ಶ್ರೀನಿವಾಸ ಉಡುಪರು, ಎರಡನೇ ೪-೫ ವರ್ಷಗಳಲ್ಲಿ ಶ್ರೀ ನೀ.ನಾ. ಮಧ್ಯಸ್ಥರು, ತಾಲ್ಲೂಕು ಪ್ರತಿನಿಧಿಯಾಗಿ ಸೇವೆಸಲ್ಲಿಸಿದರು. ಆ ಸಂದರ್ಭದಲ್ಲಿ ಶ್ರೀ ಭಟ್ಟರ ಊರು ಬೇದೂರಿಗೆ ೨-೩ ಬಾರಿ ನಾನು ಹೋಗಿದ್ದೆ. ಅವರ ಮನೆ ಸದಾ ಅತಿಥಿಗಳಿಂದ ತುಂಬಿರುತ್ತಿತ್ತು. ಉನ್ನತ ರಾಜಕಾರಣಿಗಳು, ಸಚಿವರು, ಶಾಸಕರು, ಖ್ಯಾತ-ವಿಖ್ಯಾತ ಸಾಹಿತಿಗಳು; ಕಲಾವಿದರು, ಸಂಘ-ಸಂಸ್ಥೆಯ ಪ್ರತಿನಿಧಿಗಳು, ಕ್ರೀಡಾಪಟುಗಳು, ಕೃಷಿಕರು, ಜನಸಾಮಾನ್ಯರು ಹೀಗೆ ಸಮಾಜದ ಎಲ್ಲಾ ವರ್ಗದವರೊಂದಿಗೆ ಬೆರೆಯುವ, ಮಾತನಾಡುವ ಆತಿಥ್ಯ ಮಾಡುವ ಪರಿ ಬೆಲೆ ಕಟ್ಟಲಾಗದು, ಹೋಲಿಕೆಗೆ ಬಾರದಂತಹುದು. ಮನೆ ಮಂದಿಯೆಲ್ಲಾ ಆದರ ಆತಿಥ್ಯದಲ್ಲಿ ಭಟ್ಟರಿಗೇ ಸರಿ-ಸಾಟಿಯಾಗಿ ನಿಲ್ಲುವವರು. ಮನೆ, ತೋಟ, ಅಡಿಕೆ ಕೃಷಿಯ ವಿವಿಧ ಮಜಲು, ಹೂತೋಟ ಎಲ್ಲವನ್ನೂ ತೋರಿಸಿ ವಿವರಿಸುತ್ತಾ ಮೈ ಮರೆವ ಪರಿಸರ ಪ್ರೇಮಿ, ನನಗೂ ಕೆಲವು ಹೂಗಿಡಗಳನ್ನು ಶಿವಮೊಗ್ಗೆಯಲ್ಲಿ ಬೆಳೆಸಲು ಕೊಟ್ಟಿದ್ದರು. ಇನ್ನೊಂದು ಅಪೂರ್ವ-ವಿಶೇಷ ಸಂಗತಿಯೆಂದರೆ ಅವರ ಮನೆ ಹತ್ತಿರ ಅವರೇ ನಿರ್ಮಿಸಿರುವ 'ಸಂಸ್ಕೃತಿ' ಮಂದಿರ. ಈ ಮಂದಿರದಲ್ಲಿ ಇವರೇ ನಡೆಸುವ ಕಲೆ, ಸಾಹಿತ್ಯ, ಸಂಗೀತ, ನಾಟಕ, ಯಕ್ಷಗಾನ, ಪ್ರವಚನ, ಗಮಕ ಎಲ್ಲವೂ ಶ್ರೀ ಭಟ್ಟರ ಅಭಿರುಚಿಯ ಅಭಿಜಾತಕಗಳ ಕುರುಹುಗಳು. ಅವರ ಸಾಹಿತ್ಯ ಸಂಸ್ಕೃತಿಯ ಮನೋಧರ್ಮಕ್ಕೆ ಮಾಡಿಸಿದ ಚಿನ್ನದ ಕಿರೀಟ. ಕಾರಂತ, ಕುವೆಂಪು, ಬೇಂದ್ರೆ, ತ.ರಾ.ಸು. ಅ.ನ.ಕೃ, ಗೋಕಾಕರು, ಕಟ್ಟೀಮನಿಯವರು ಹೀಗೆ ಎಲ್ಲಾ ಕನ್ನಡ ಸಾಹಿತ್ಯ ದಿಗ್ಗಜಗಳ ಕಾರ್ಯಕ್ರಮಗಳನ್ನು ನಡೆಸಿ ಸಾಹಿತ್ಯ ರಸದೌತಣವನ್ನು ನೀಡುತ್ತಿದ್ದರು. ಅವರ ಮನೆಗೆ ಹೋದವರು ಆ ಕಲಾಮಂದಿರವನ್ನು ನೋಡಲೇ ಬೇಕು. ಹೆಮ್ಮೆಯಿಂದ ಆ ಕಲಾ ಮಂದಿರವನ್ನು ಅವರು ವರ್ಣಿಸುವಾಗ ಅವರಿಗಾಗುವ ಸಂತೋಷ, ಉತ್ಸಾಹ ಹಿಮಾಲಯವನ್ನೇರಿದವರ ಉತ್ಸಾಹದಷ್ಟು. ಅವರು ಸದಾ ಒಬ್ಬ ಅಚ್ಚ ಕನ್ನಡದ ಕಟ್ಟಾ ಅಭಿಮಾನಿಯಾಗಿ, ಕನ್ನಡದ ಸೇನಾನಿಯಾಗಿ, ಅದರ ಸಮಗ್ರ ನೆಲೆಗಾಗಿ, ಕಾಯಾ-ವಾಚಾ-ಮನಸಾ ಶ್ರಮಿಸಿದವರು.

ಇವರು ಸುಮಾರು ೧೩ ಕೃತಿಗಳನ್ನು ಪ್ರಕಟಿಸಿದ್ದಾರೆ. ಕಾದಂಬರಿ, ಕಥಾ ಸಂಕಲನ, ಜೀವನ ಪರಿಚಯ, ಕವನ ಸಂಗ್ರಹ, ವಿಮರ್ಶೆಗಳು ಅವರ ಅಭಿರುಚಿಗೆ ಸಾಂಸ್ಕೃತಿಕ ಮನೋಧರ್ಮಕ್ಕೆ, ಕಲಾವಂತ ಮನಸ್ಸಿಗೆ, ನಿರ್ಮಲ ಚಿಂತನೆಗೆ, ಪರಿಶುದ್ಧ ನಡತೆಗೆ ಸಾಕ್ಷಿಯಾಗಿವೆ.

ಬದುಕಿನ ಈ ಎಲ್ಲಾ ಶ್ರೇಷ್ಠ ನಡೆಯಲ್ಲಿ ಅವರ ಪತ್ನಿ, ಮಕ್ಕಳೂ ಕೂಡ ಹೆಜ್ಜೆ ಹಾಕಿದ್ದಾರೆ. ಇಂತಹ ಕೌಟುಂಬಿಕ ಸಂಸ್ಕೃತಿ, ಸಂತೃಪ್ತಿ, ಹೆಮ್ಮೆ; ಸೌಭಾಗ್ಯ ಎಷ್ಟುಜನರಿಗೆ ಇರುತ್ತದೆ ?

ಕಾಂಗ್ರೆಸ್ ಪಕ್ಷದಲ್ಲಿ ಅನೇಕ ಉನ್ನತ ಸ್ಥಾನಗಳು; ಸಾಗರದ ಪುರಸಭೆ ಸದಸ್ಯರಾಗಿ, ಮಲೆನಾಡು ಅಭಿವೃದ್ಧಿ ಪ್ರತಿಷ್ಠಾನದ ಉಪಾಧ್ಯಕ್ಷರಾಗಿ ಇದೀಗ ಸುಮಾರು ೬ ವರ್ಷಗಳಿಂದ ತಾಲ್ಲೂಕು ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಸಲ್ಲಿಸುತ್ತಿರುವ ಸೇವೆ ಅಮೋಘವಾದದ್ದು. ಪತ್ರಿಕೆಗಳಲ್ಲಿ ಬರಹಗಾರರಾಗಿ, ಒಂದೊಂದು ಉನ್ನತ ಸ್ಥಾನಗಳಲ್ಲಿ ೫ ರಿಂದ ೧೦ ವರ್ಷಗಳವರೆಗೆ ಸೇವೆ ಸಲ್ಲಿಸಿದವರಾಗಿ, ಅವರ ವಯಸ್ಸಿಗೆ ಮೀರಿದ ಎತ್ತರದ ಸ್ಥಾನವನ್ನು ಗಳಿಸಿದ್ದಾರೆ. 'ಸರ್ವೇ ಜನಾಃ ಸುಖಿನೋ ಭವಂತು' - ಇವರ ಜೀವನ ಮಂತ್ರ.

ಸುಮಾರು ೧೯೯೮ ರಿಂದ ೬ ವರ್ಷಗಳ ಕಾಲ ಶ್ರೀ ಭಟ್ಟರು ಸಾಗರ ತಾಲ್ಲೂಕು ಕ.ಸಾ.ಪ. ದ ಅಧ್ಯಕ್ಷರಾಗಿ ಅವರು ಸಾಧಿಸಿದ ಕೆಲಸ, ಅದ್ಭುತವಾದುದು. ಸಾಹಿತ್ಯದ ಕಾರ್ಯಕ್ರಮಗಳು, ಜನರನ್ನು ಆಕರ್ಷಣೆ ಮಾಡುತ್ತಿದ್ದುದು ಅಷ್ಟೇ ಅಲ್ಲ; ಸಾಹಿತ್ಯಾಭಿಮಾನಿಗಳು ಮುಂದಿನ ಸಮಾರಂಭ ಯಾವಾಗ ? ಯಾವುದು ? ಎಂದು ಕುತೂಹಲದಿಂದ ಕಾಯುವಂತಹ ವಾತಾವರಣ ನಿರ್ಮಾಣವಾಯಿತು. ಒಂದು ಕಾರ್ಯಕ್ರಮಕ್ಕಿಂತ ಇನ್ನೊಂದು ತೀರಾ ಭಿನ್ನ. ಅಷ್ಟೇ ವಿಶಿಷ್ಟವಾದವುಗಳು. ನಾಡಿನ ಎಲ್ಲಾ ಮೂಲೆ - ಭಾಗಗಳಿಂದಲೂ ಸಾಹಿತಿ- ಕಲಾವಿದರನ್ನು ಆಹ್ವಾನಿಸಿ ಸಾಗರದ ಅಭಿಮಾನಿಗಳಿಗೆ ಪರಿಚಯಿಸುವ ಅವರದ್ದೇ ಆದ ರೀತಿ ಆಕರ್ಷಣೀಯ.

ತಾಲ್ಲೂಕು ಸಮಿತಿಗೆ ಆರ್ಥಿಕ ಸ್ವಾವಲಂಬನೆಯನ್ನು, ದೃಢತೆಯನ್ನು ತಂದುಕೊಟ್ಟ ಕೀರ್ತಿ ಅವರದ್ದು. ಸಾಧಿಸಬೇಕಾದ್ದು, ಸಾಗರ ತಾಲೂಕು ಪ್ರತಿ ಹಳ್ಳಿಗೂ ಕ.ಸಾ.ಪ. ಸಂದೇಶ ಮುಟ್ಟಿಸುವ ಕೆಲಸ ಇದ್ದು, ಈಗಿನ ಅವರ ಸೇವೆ ಮೌಲಿಕವಾದದ್ದು - ಉನ್ನತವಾದದದ್ದು. ಮೂರನೇ ಬಾರಿಗೂ ಸಾಗರ ತಾಲೂಕು ಕ.ಸಾ.ಪ.ದ ಅಧ್ಯಕ್ಷರಾಗಿ ಈಗಾಗಲೇ ಒಂದೂವರೆ ವರ್ಷ ಶ್ರೇಷ್ಠ ಮಟ್ಟದ ಕೆಲಸ ನಿರ್ವಹಿಸಿದ್ದಾರೆ. ಇತರೆ ತಾಲ್ಲೂಕುಗಳಿಗೆ ಮೇಲ್ಪಂಕ್ತಿ ಹಾಕಿದ್ದಾರೆ. ಅವರಿಗೆ ಜಿಲ್ಲಾ ಸಮಿತಿ ಪರವಾಗಿ, ನನ್ನ ವೈಯಕ್ತಿಕವಾಗಿ ಹಾರ್ದಿಕ, ಆತ್ಮೀಯ ಅಭಿನಂದನೆ ಸಲ್ಲಿಸುತ್ತೇನೆ.

ಈ ಹಿಂದೆಯೂ ಅನೇಕ ಬಾರಿ ಪ್ರಸ್ತಾಪಿಸಿದ್ದಂತೆ, ೧೯೯೫ರಲ್ಲಿ ನಡೆದ ಜಿಲ್ಲಾ ಕ.ಸಾ.ಪ.ದ ಅಧ್ಯಕ್ಷತೆಗೆ ಸ್ಪರ್ಧಿಸಲು ನಾನು, ನನ್ನ ಮಿತ್ರರು ಶ್ರೀ ಭಟ್ಟರನ್ನು ಒತ್ತಾಯಿಸಿದೆವು. ಆದರೆ ಅವರು ಅಷ್ಟೇ ವಿನಮ್ರತೆಯಿಂದ ಅದನ್ನು ನಿರಾಕರಿಸಿದರು. ಅವರ ನಿಸ್ವಾರ್ಥ ಸೇವೆಗೆ ಇನ್ನೊಂದು ಕಿರೀಟ ತೊಡಿಸಿದರು.

ಇಂತಹ ಅಪರೂಪದ, ಅಪರಂಜಿ ಶುದ್ಧದ ಸಾಹಿತಿ, ಸಮಾಜ ಸೇವಕ, ಬರಹಗಾರ, ಸಂಘ-ಸಂಸ್ಥೆಗಳ ಏಕಮೇವಾದ್ವಿತೀಯ ನಾಯಕ; ಶ್ರೇಷ್ಠ ಸಂಘಟಿಕ, ಶ್ರೇಷ್ಠ ವಾಗ್ಮಿ, ಶ್ರೇಷ್ಠ ಕೃಷಿಕ ಎಂದೆಲ್ಲಾ ಅಭಿದಾನ ಪಡೆದ ಶ್ರೀ ಭಟ್ಟರಿಗೆ ನೂರಕ್ಕೂ ಮಿಕ್ಕಿದ ಆಯಸ್ಸನ್ನೂ, ನಶಿಸಲಾರದ ಸಂಪತ್ತನ್ನೂ ಕರುಣಿಸಲೆಂದು ಆ ದೇವರನ್ನು ಪ್ರಾರ್ಥಿಸುತ್ತೇನೆ.

ಅವರ ಕುಟುಂಬ ವರ್ಗಕ್ಕೂ ಸರ್ವ ಸೌಭಾಗ್ಯ ಉಂಟಾಗಲೆಂದು ಹಾರೈಸುತ್ತೇನೆ. ಕೃಷ್ಣಮೂರ್ತಿ ಪುರಾಣಿಕರ ಮಾತಿನೊಂದಿಗೆ ಈ ಲೇಖನ ಮುಗಿಸುತ್ತೇನೆ.

''ನಿನ್ನ ಸೇವೆಯ ಘನತೆ; ನಿನ್ನ ಜನುಮದ ಗಳಿಕೆ,
ಜನ್ಮ ಸಾರ್ಥಕವಯ್ಯಾ; ಅಭಿನಂದನೆ ನಿನಗೆ;''

# ಸಾಗರದ ಸಾಂಸ್ಕೃತಿಕ ಸಾಹಿತ್ಯ ಸರದಾರ

- ಮಾವಿನಕುಳಿ ಶ್ರೀನಿವಾಸ

ನನಗೂ ಭಟ್ಟರಿಗೂ ಹತ್ತಿರ ಇಪ್ಪತ್ತು ವರ್ಷಗಳ ಅಂತರ. ನನ್ನ ಬಾಲ್ಯದಲ್ಲಿ ಭಟ್ಟರಿಗೆ ಹದಿಹರೆಯದ ಪ್ರಾಯ. ಸುಂದರ ವದನ. ಸದಾ ಮುಗುಳ್ನಗೆ ಮಾಸದ ಮಂದಹಾಸ. ಧೀರ ಗಂಭೀರ ನಡೆ. ಭವ್ಯಾಕೃತಿ. ದಟ್ಟ ಕ್ರಾಪು. ದಿಟ್ಟತೆಯ ಸಂಕೇತ. ತಮ್ಮದೇ ಶೈಲಿಯ ಕಚ್ಚೆ ಪಂಚೆ, ಜುಬ್ಬಾ. ತನಗಾಗಿಯೇ ಹೊಲಿಸಿದ ಪಾಕೀಟಿನಲ್ಲಿ ಪೆನ್ನು ಫಳ ಫಳ. ಶುಭ್ರ ಶ್ವೇತ ಖಾದಿ ವಸ್ತ್ರಧಾರಿ. ಆಕರ್ಷಕ ವ್ಯಕ್ತಿತ್ವ. ಚೆಲುವಾಂತ ಚೆನ್ನಿಗರಾಯ. ಬೇರೆ ಭಟ್ಟರಿಗಿಂತ ಭಿನ್ನವಾದ ಭಟ್ಟರ ಮನಸ್ಸು ಮೃದು, ಮಾತು ನೇರ, ಸ್ವಭಾವ ಸರಳ. ಆರೋಗ್ಯ ಪೂರ್ಣ ಕಳೆ. ಶಿವಪ್ಪ ನಾಯಕನೂ ನಾಚುವಂತಹ ಶಿಸ್ತುಗಾರ. ಅದ್ಭುತ ಕನಸುಗಾರ - ಸಾಗರದ ಈ ಸರದಾರ. ಎಪ್ಪತ್ತರ ಈ ಸಮೀಪ ಈಗ, ಅಲ್ಲಿ ಇಲ್ಲಿ ಚಿಂತನೆಯ ರೇಖೆ. ಅಲ್ಲಲ್ಲಿ ಮಿಂಚುವ ಬೆಳ್ಳಿಗೂದಲು ಬಿಟ್ಟರೆ ಭಟ್ಟರು ಆಗ ಹೇಗೋ ಈಗಲೂ ಹಾಗೆ. ಅದೇ ಸ್ನೇಹಪೂರ್ಣನಗೆ, ನಡೆನುಡಿ. ಒಂದಿನಿತೂ ಬದಲಾಗಿಲ್ಲ.

ಕತ್ತಲು ಕವಿದ ನಾಡಿನ ಬೆಳಕಿಗಾಗಿ ಮನೆ ಮಠ ಮುಳುಗಿದಾಗ, ತೊರೆಮನೆ ತೊರೆದು ಮಹಾ 'ಸಾಗರ'ದಲ್ಲಿ ಈಜುವ ಏಕಾಂಗಿ ಸಾಹಸ. ಬಲು ಆತ್ಮ ವಿಶ್ವಾಸ. ಸಮೃದ್ಧ ನಿತ್ಯ ಹರಿದ್ವರ್ಣ ಕಾಡಿನಿಂದ ಬಟಾನು ಬಯಲಿಗೆ ಒಂದೆಡೆ ಬೇರು ಕಿತ್ತು ಇನ್ನೊಂದೆಡೆ ತಳವೂರುವ ಸಂಕಟ. ಬತ್ತಲಾಗದೆ ಬಯಲು ಸಿಕ್ಕದಿಲ್ಲಿ! ನೀರಲ್ಲಿ ಮುಳುಗಿದ ಮೇಲೆ ಛಳಿ ಏನು, ಮಳೆಯೇನು ? ಹೆಸರು ಮಹಾಬಲ. ಎದೆಗುಂಡಿಗೆಯೂ ಗಟ್ಟಿ. ಪ್ರವಾಸದ ವಿರುದ್ಧ ಸೆಣಸು. ಎಲೆಲೆ ವಿಧಿ ! ನೋಡಿಲ್ಲಿ ನಿಂತಿರುವೆನೆದೆಸೆಟೆದು ! ಎಂಬ ಸವಾಲು ಅಲ್ಲಿಂದ ಇಲ್ಲಿಯ ತನಕ ಭಟ್ಟರದು ಬಹು ದೀರ್ಘ ಪಯಣ. ಕಷ್ಟ ಸುಖ, ಸಿಹಿ ಕಹಿ, ಆಸೆ ನಿರಾಸೆಗಳ ಸಮ್ಮಿಶ್ರಣ. ನೋವು ನಲಿವು, ಸೋಲು ಗೆಲವು, ಏರಿಳಿತಗಳ ನೂರು ಬಣ್ಣ ನೂರು ರೇಖೆ ಕೊನೆಯಿಲ್ಲದ ದಾರಿ ದೂರ. ದೂರ ತೀರ.

ಪುಸ್ತಕ ಭಂಡಾರದ ಮೂಲಕ ಸಾಗರ ಸುತ್ತ ಮಂದಿಗೆ ಸಾಹಿತ್ಯ ಸಂಸ್ಕೃತಿ ಉಣಬಡಿಸುವ ಪ್ರಥಮ ಪ್ರಯತ್ನ ಹೊಸ ಪ್ರತಿಭೆಗಳನ್ನು ಹೊರತರುವ ತವಕ. ಕಥೆ

ಕಾದಂಬರಿ, ನಾಟಕ, ಕವಿತೆ, ವಿಮರ್ಶೆ, ಪತ್ತೇದಾರಿ. ಯಾವುದು ಯಾರಿಗುಂಟು ಯಾರಿಗಿಲ್ಲ ? ಸ್ವತಃ ಬರವಣಿಗೆ ಸಾಹಿತಿಗಳ ಅಂತರಂಗ ಪ್ರವೇಶ. ನಾಡು ನುಡಿ, ಸೇವೆಗೆ ಮಿಗಿಲಿಲ್ಲದ ಉತ್ಸಾಹ. ಪ್ರಕಾಶನದ ಮೂಲಕ ಸಾಹಿತ್ಯ ದೇಗುಲಕ್ಕೆ ನೀರು ಹೊರುವ ಕಾಯಕ'ಜಲಂಧರ' ಬರಹ ಪ್ರಕಟಣೆಗಳೇ ಬದುಕಿನ ಬೀಜಮಂತ್ರವಲ್ಲ. ಸಾಗರ ಪ್ರಗತಿಗಾಗಿಭಟ್ಟರು ಪ್ರಯೋಗ ಪರಿಣತಮತಿ. ಸಾಹಿತ್ಯ ಮಾರ್ಗದಲ್ಲೇ ಅನಿವಾರ್ಯ ರಾಜಕೀಯ ಪರಕಾಯ ಪ್ರವೇಶ. ಸಾಹಿತ್ಯ ರಾಜಕೀಯಗಳ ಅನುರಾಗ ಸಂಗಮ–ಕಾಕತಾಳೀಯ. ರೈಲು ತಡೆ ಸತ್ಯಾಗ್ರಹ. ಹಳ್ಳಿಕೇರಿ ಗುದ್ಲೆಪ್ಪ ಗುದ್ದಲೀ ಪೂಜೆ. ಭಟ್ಟರ ಬಾಯಲ್ಲಿ ಬೆಂಕಿ. ಗುಟುರು. 'ಬೆಳಗಾವಿ ನಮ್ಮದು, ನಿಪ್ಪಾಣಿ ನಮ್ಮದು,' ಮೆರವಣಿಗೆ ನೇತೃತ್ವ. ಅವಿರತ ಹೋರಾಟ. ಕೊರೆತವಿಲ್ಲದ, ಕೊರತೆಯಿಲ್ಲದ ಮಾತುಗಾರ. ಸಮರ್ಥ ಸಂಘಟಕ. ಬದುಕು ಸಾರ್ಥಕ.

ಭಟ್ಟರು ಮತ್ತೆ ಕಣ್ಣ ಹೊರಳಿಸಲಿಲ್ಲ. ಹಿಂದೆ ತಿರುಗಿ ನೋಡಲಿಲ್ಲ. ಕೆಂಗಲ್ಲರಿಂದ ಅರಸುತನಕ ರಾಜಕೀಯ ಒಡನಾಟ–ತಾಲೂಕಿನಿಂದ ರಾಜಧಾನಿಯವರೆಗೆ. ಜಿಲ್ಲೆಯಾಗಲು ಸಾಗರವೇ ಸೂಕ್ತ – ಕೈಗೂಡದ ಕನಸು. ಕೃಷ್ಣರಾಯರಿಂದ ಕಾರಂತರ ತನಕ, ಬೇಂದ್ರೆ, ಗೋಕಾಕ್, ಮುಗಳಿ, ಕುವೆಂಪು, ಕಟ್ಟೀಮನಿ ತನಕ ಬಿಡದ ಅಂಟಿನ ನಂಟು– ಸಾಹಿತ್ಯದ ಬ್ರಹ್ಮಗಂಟು. ಕನ್ನಡ ಸಾರಸ್ವತ ಲೋಕಕ್ಕೆ ಲಗ್ಗೆ – ಅತಿರಥ ಮಹಾರಥರಿಗೆ ಸಾಗರದ ಸನ್ಮಾನ. ಕನ್ನಡ ಸಾಹಿತ್ಯ ಪರಿಷತ್ತು – ಭಟ್ಟರ ವೇದೋಪನಿಷತ್ತು ಅಂದಿನಿಂದ ಇಂದಿಗೂ. ಚೈನಾ, ಯುದ್ಧಕ್ಕೆ ಕಾಲು ಕೆರೆದ ಕಾಲ. ರಾಷ್ಟ್ರ ರಕ್ಷಣಾನಿಧಿ ಕೊಡುಗೆ. ಭಟ್ಟರ ಪ್ರಯತ್ನ ಅಪಾರ. ಭಟ್ಟರು ಬೆಳೆದ ಬೆಳಸಿದ ರೀತಿ ವಿಸ್ಮಯ. ಭಟ್ಟರು ಕಟ್ಟಿದ ಸಂಘ – ಸಂಸ್ಥೆಗಳಿಗೆ, ಸಂಘಟನೆಗಳಿಗೆ ಲೆಕ್ಕವಿಲ್ಲ. ಸಾಧನೆಗಳ ಪಟ್ಟಿ ಪ್ರಸ್ತುತವಾದರೂ ಇಲ್ಲಿ ಸಾಧ್ಯವಲ್ಲ – ಸ್ಥಳಾಭಾವ.

ಅವರಿವರ ಹಾಗೆ ಹೆರವರ ಮನೆಯಲ್ಲಿ ಕವಳ ಕತ್ತರಿಸುತ್ತಾ, ಪಟ್ಟಾಂಗ ಹೊಡೆಯುತ್ತಾ ಕಾಲ ಕಳೆಯಲಿಲ್ಲ –ಎಂಬುವುದೇ ಭಟ್ಟರ ಮೇಲಿನ ಆರೋಪ. ಕುಹಕಿಗಳಿಲ್ಲದ ಜಾಗವಿಲ್ಲ. ದಾಸರೇ ಹಾಡಿ ಹೋಗಿದ್ದಾರೆ – ನಿಂದಕರಿರಬೇಕಯ್ಯಾ ... ಊರಿದ್ದಲ್ಲಿ ಕೊಳೆಗೇರಿ ಸಹಜ. ಹೊಗಳಿಕೆಗೆ ಹಿಗ್ಗದ ತೆಗೆಳಿಕೆಗೆ ಕುಗ್ಗದ ಭಟ್ಟರು ಮಹಾಸ್ವಾಭಿಮಾನಿ. ಬಂಧು–ಬಾಂಧವ್ಯದಿಂದ ಬೇರೆಯಾದ, ಭಟ್ಟರ ಬದುಕು ಸರ್ವ ಧರ್ಮ ಸಮನ್ವಯ. ಅಣ್ಣಬಾರ, ತಮ್ಮ ಬಾರ ಎಂಬ ಮಮಕಾರ. ಇದಮಿತ್ಥಂ–ತನ್ನದೇ ಸರಿಯೆನ್ನುವ ಸೋಗಲಾಡಿತನವಿಲ್ಲ. ಗುಂಡು–ತುಂಡು ಮುಖಂಡರ ಧಿಮಾಕು–ಹೇಳಲಿಲ್ಲ, ಬಹುಪರಾಕು. ಇಲ್ಲಮರ್ಜಿ, ಇಲ್ಲವಯ್ಯ ರಾಜಿ. ವಂದಿ ಮಾಗದರಾಗಲಿಲ್ಲ. ಯಾರ ಮನೆ ಮುರಿದಿಲ್ಲ. ಆಸ್ತಿ ದೋಚಿಲ್ಲ–

ಭಟ್ಟರ ದುಮ್ಮಾನ. ಎಲ್ಲರೂ ಸರ್ವ ಸಮಾನ, ಎಂದೇ ಭಟ್ಟರು ಶಾಸಕರಾಗಲಿಲ್ಲ. ಮಂತ್ರಿಯಾಗಲಿಲ್ಲ. ಔದಾರ್ಯ ಕೆಲವೊಮ್ಮೆ ನುಂಗಲಾರದ ವಿಷ. ಯಾರು ಒಪ್ಪಲಿ ಬಿಡಲಿ ಕಳಂಕರಹಿತ ಭಟ್ಟರು ಅಂತರಂಗದಲ್ಲಿ ಅಪರೂಪದ ಅಪ್ಪಟ ಕಲಾವಿದ. ಇಲ್ಲ, ಇಲ್ಲ ಏನೊಂದನೂ ಮಾಡಲಿಲ್ಲ ಈತನು. ನಿಜ, ಏನೆಲ್ಲ ಸಾಧನೆಗಳ ನಡುವೆ ಏನೂ ಮಾಡಿಯೇ ಇಲ್ಲವೆಂಬ ಭಾವ. ಕೊರಗಿಲ್ಲದ ನಿರ್ಲಿಪ್ತತೆ. ತೊರೆಮನೆ ತೊರೆಯದಿದ್ದರೆ ಭಟ್ಟರು ಬೆಳೆಯುತ್ತಿದ್ದರೋ ಇಲ್ಲವೋ ಯಾರಿಗೆಗೊತ್ತು? ಎಂದೇ ಭಟ್ಟರ ಪ್ರಾಮಾಣಿಕ ಸಿದ್ಧಿಗೆ ಅಳತೆಗೋಲು ಇಲ್ಲ.

ಆದರೂ ಪೂರ್ವದ ಮಣ್ಣಿನ ವಾಸನೆ, ಸೆಳೆತ ಭಟ್ಟರನ್ನು ಬಿಡಲಿಲ್ಲ. ಯಾವುದಕ್ಕೂ ಸೈ. ಸಾಲ ಸೋಲ ಮಾಡಿ ರೂಢಿಸಿದ ಕೃಷಿ. ಅಲ್ಲಿ ಕೈಯಾಡಿಸಿ ಬೆಳೆ ತೆಗೆದ ಭಟ್ಟರಿಗೆ ಖುಷಿ. ಭಟ್ಟರ ಬತ್ತದ ಜೀವನೋಲ್ಲಾಸ ಅನೂಹ್ಯ; ನಿರಂತರ ವ್ಯಾಸಂಗ, ಚಟುವಟಿಕೆ ಅದಮ್ಯ, ಅದ್ಭುತ. ' ಏನು ನಡೆ ? ಏನು ಒಪ್ಪ ? ಮಾಬಲನ್ನು ನೋಡಿ ನೀವೆಲ್ಲ ಕಲೀಬೇಕು' ಎಂದಿದ್ದ ಅಪ್ಪನ ನುಡಿ ಮನಸ್ಸಿನ ಕನ್ನಡಿ. ಈ ರಾಜಕೀಯ ಇನ್ನು ಸಾಕು. ಭಟ್ಟರು ಕೈಮುಗಿದರು. ಯಾರು ಯಾರನ್ನೂ ಸರಿಮಾಡಲಾಗದೆಂಬ ವೈರಾಗ್ಯ ಭಾವ. ವಿಷಾದ ಯೋಗ. ವಿದಾಯ ಹೇಳಿದ್ದು ಸರಿಯೇ ? ಜಿಜ್ಞಾಸೆ. ಹಿಂದೆ ಜೈಲಿಗೆ ಹೋದವರು ನಾಯಕರಾಗಿದ್ದರು. ಇಂದು ನಾಯಕರಾದವರು ಜೈಲಿಗೆ ಹೋಗುತ್ತಿದ್ದಾರೆ. ಎಲ್ಲಿ ನೋಡಿದರಲ್ಲಿ ಹವಾಲ. ಅಳೆದು ಸುರಿದರೆ ರಾಜಕೀಯ ಸನ್ಯಾಸವೇ ಲೇಸು. ಪಾರದರ್ಶಕತೆಗೆ ಇಲ್ಲಿ ಇಲ್ಲ ಸ್ಥಾನ. ನಾಡಿಗೆ ಬೆಳಕು ಬಂದಾಗ ಭಟ್ಟರು ಕತ್ತಲಲ್ಲಿ. ಕತ್ತಲಿನಿಂದ ಬೆಳಕಿನೆಡೆಗೆ, ಭಟ್ಟರು ಬೆಳಕಿಗೆ ಬಂದಾಗ ನಾಡಿಗೆ ಕತ್ತಲು ಕವಿಯುತ್ತಿದೆ. ತಿರುಗಿದೆ ಇತಿಹಾಸ ಇನ್ನೊಂದು ಸುತ್ತು.

ಪ್ರಶಸ್ತಿಗಳಿಗೆ ಬಾಯಿ ಬಿಡದ ಭಟ್ಟರು ಸಾಗರ ಸಂಪತ್ತು. ಸಂರಕ್ಷಣೆ ವಿಶಾಲ ಸಾಗರಕ್ಕೆ ಸೇರಿದ್ದು. ಸರ್ಕಾರಕ್ಕೆ ಕಣ್ಣು ಕಿವಿ ಹೃದಯ ಎಂಬುದಿಲ್ಲ. ಭಟ್ಟರ ಕ್ರಿಯಾಶೀಲತೆಯನ್ನು ಗುರುತಿಸದಿರುವುದು ಸರ್ಕಾರದ ನಿಷ್ಕ್ರಿಯತೆಗೊಂದು ನಿದರ್ಶನ. ಸಾಗರದ ಸಂಸ್ಕೃತಿ ಸಾಹಿತ್ಯಕ್ಕೊಂದು ಹೊಸ ಆಯಾಮ ತಂದು ಕೊಟ್ಟ ಹಿರಿಮೆ ಭಟ್ಟರದು. ಅವಿಶ್ರಾಂತ ದುಡಿಮೆಯಿಂದ ಮಾಗಿದ ಮನಸ್ಸು, ವಯಸ್ಸು. ಇಲ್ಲ ಭಟ್ಟರಿಗೆ ಯಾವುದೇ ದುಶ್ಚಟ–ಇಂದಿನ ಯುವಜನತೆಗೆ ಒಂದು ಪಾಠ. ಭಟ್ಟರಂತಹ 'ಕನ್ನಡ ಭಟನನ್ನು' ಹೆತ್ತ ಆ ಮಹಾತಾಯಿ ಧನ್ಯೆ. ನೂರು ನಮನ. ಸಾಗರ ಮೂಲೆಯಿಂದ ಬಣ್ಣ ಬಣ್ಣದ ಚಿತ್ತಾರ ಬರೆದ ಭಟ್ಟರ ಸಂತತಿ ಸಾವಿರವಾಗಲಿ, ಜನಮನದಲ್ಲಿ ಬೇರೂರಿದ ಭಟ್ಟರು ನೂರ್ಕಾಲ ಬಾಳಲಿ, ತಂಪಾಗಿರಲಿ ಮನದಾಳದ ಹಂಬಲ, ಸದಾಶಯ.

# ಬೆಲ್ಲದಂತಹ ಬಾಳು

– ಡಾ॥ ಎಸ್.ಪಿ. ಪದ್ಮಪ್ರಸಾದ್

''ಮಲೆನಾಡಿನ ದಟ್ಟಕಾಡುಗಳ ನಡುವೆ ಹರಿವ ತಿಳಿದೊರೆಯಂತೆ ಸ್ವಚ್ಛವಾಗಿ ನಡೆದ ಬದುಕು; ಸದ್ದುಗದ್ದಲವಿಲ್ಲ. ಆದರೆ ನೀರೂಡಿಸಿದ ಸಸ್ಯರಾಶಿಯ ಸಂಖ್ಯೆಗೆ, ಜೀವ ಜಂತುಗಳಿಗೆ ಉಣಿಸಿದ, ತಂಪಿಗೆ ಲೆಕ್ಕವಿಲ್ಲ. ಸದಾ ಅದೇ ಪ್ರಶಾಂತತೆ. ಮಳೆಗಾಲದಲ್ಲಿ ಸಣ್ಣ ತೊರೆಯೂ ಉಕ್ಕುವಂತೆ ಒಮ್ಮೊಮ್ಮೆ ಉಕ್ಕಿದರೂ ಶಾಂತತೆಗೆ ಮರಳುವುದು ಬಹುಬೇಗ'' – ಇದು ತೊರೆಮನೆ ಮಹಾಬಲೇಶ್ವರ ಭಟ್ಟರ ರೀತಿ. ಇದೇ ಅವರ ಅನನ್ಯತೆ. ಹೀಗಲ್ಲದೆ ಮತ್ತೊಂದು ತೆರದಲ್ಲಿ ಬಾಳುವುದು ಅವರಿಗೆ ಗೊತ್ತಿಲ್ಲ. ಇಂಥ ವಿಶಿಷ್ಟತೆಯಿಂದಾಗಿಯೇ ತಮ್ಮ ಪರಿಸರದಲ್ಲಿ, ಅದೂ ಎಂತಹ ಪರಿಸರ ಒಂದೊಂದು ವೈಶಿಷ್ಟ್ಯವನ್ನು ಹೊಂದಿಯೇ ದೊಡ್ಡ ಹೆಸರನ್ನು ಮಾಡಿರುವಂಥ ಅನೇಕ ವ್ಯಕ್ತಿಗಳು ಇರುವಂಥ ಮಲೆನಾಡಿನ ಪರಿಸರ ಎದ್ದುಕಾಣವಂಥ, ನೂರಾರು ಜನ ಸ್ನೇಹ ಪ್ರೀತಿ, ಗೌರವಗಳಿಂದ ಪ್ರತಿದಿನ ನೆನಪಿಸುವಂಥ ವ್ಯಕ್ತಿಯಾಗಿ ಸಾಗರದ ಟಿ. ಮಹಾಬಲೇಶ್ವರ ಭಟ್ಟರು ಬಾಳಿ ಬೆಳೆದು ನಿಂತಿದ್ದಾರೆ.

''ಎತ್ತರದ ನಿಲುವು, ಗೌರವರ್ಣ, ಮಾಟವಾದ ಸ್ಫುರದ್ರೂಪಿಯ ಚಹರೆ, ಸದಾ ಬಿಳುಪು ಜುಬ್ಬಾ ಮತ್ತು ಕಚ್ಚೆಪಂಚೆ, ಓರಣವಾಗಿ ಬಾಚಿದ ತಲೆಗೂದಲು ಒಡೆಯನಿಗೆ ವಿಧೇಯನಾಗಿ 'ಇಟ್ಹಾಂಗೆ ಇರು'ವುದನ್ನು ಕಲಿತಿರುವುದು, ಮಾತಿನಲ್ಲಿ ಬಿಗುವಿಲ್ಲ; ಆದರೆ ತೂಕವಿದೆ. ಒಡನಾಟದಲ್ಲಿ ಅತಿ ಸಲುಗೆಗೆಡೆಯಿಲ್ಲದಿದ್ದರೂ ಆಪ್ತತೆಯಿದೆ. ನೆರವಾಗುವ ತೆರೆದ ಮನೋಭಾವವಿದೆ. ಬುದ್ಧಿ, ಚರ್ಚೆಗೆ ಸದಾ ತೆರೆದುಕೊಂಡಿರುತ್ತದೆ. ಅನಗತ್ಯ ವಿವಾದಗಳಿಗೆ, ಘರ್ಷಣೆಗೆ ಎಡೆಕೊಡದಿರುವ ಹೊಂದಾಣಿಕೆಯ ಮನೋಭಾವ' ಇದು ಮಹಾಬಲೇಶ್ವರ ಭಟ್ಟರ ಒಳ-ಹೊರಗಿನ ರೀತಿ. ಅವರ ಈ ಹದನ ಇಂದು – ನಿನ್ನೆಯದಲ್ಲ; ಅವರನ್ನು ಬಲ್ಲವರಿಗೆಲ್ಲ ಗೊತ್ತು ಕನಿಷ್ಠ ಮೂರು ದಶಕಗಳ ಹಿಂದೆಯೇ ಈ ಪ್ರಬುದ್ಧತೆಯನ್ನು ಅವರು ಮುಟ್ಟಿದ್ದಾರೆ. ಅಂದಿನಿಂದ ಇಂದಿನವರೆಗೂ ಮತ್ತೆ ಮತ್ತೆ ಪುಟಕ್ಕಿಟ್ಟ ಚಿನ್ನದಂತೆ ಹೆಚ್ಚು ಹೆಚ್ಚು ಹೊಳಪಾಗುತ್ತಾಬಂದಿದ್ದಾರೆ.

ಈ ಕಾರಣದಿಂದಲೇ ಇರಬೇಕು-ಭಟ್ಟರು ಬಹುಶಃ ಎಂದೂ ವಿವಾದಕ್ಕೆ ಒಳಗಾಗಿಲ್ಲ. ಭಿನ್ನಾಭಿಪ್ರಾಯಗಳನ್ನು ಅವರು ಎದುರಿಸಿದ್ದೂ, ವ್ಯಕ್ತಪಡಿಸಿದ್ದೂ

ಕಡಿಮೆ ಸಾರಿ ಏನಲ್ಲ. ಆದರೆ ಅವರ ಜೊತೆಗಾರರೆಲ್ಲರಿಗೂ ಗೊತ್ತಿತ್ತು-ಭಿನ್ನಾಭಿಪ್ರಾಯ ಬೇರೆ, ವೈಯಕ್ತಿಕ ಸ್ನೇಹ ಸೌಹಾರ್ದತೆ ಬೇರೆ ಎಂಬುದನ್ನು ಭಟ್ಟರು ಬಲ್ಲರು ಎಂಬುದನ್ನು. ಸಂಗತಿಗಳನ್ನು ಕಲಬೆರಕೆ ಮಾಡದಿರುವುದು 'ಸಜ್ಜನನ ಮುಖ್ಯ ಲಕ್ಷಣಗಳಲ್ಲಿ ಒಂದು' ಎಂದು ಒಬ್ಬ ಇಂಗ್ಲೀಷ್ ಲೇಖಕ ಹೇಳುತ್ತಾನೆ. ಆ ಲೇಖಕನ ಹೇಳಿಕೆಯನ್ನು ಭಟ್ಟರು ಖಂಡಿತಾ ಓದಿಲ್ಲ. ಆದರೆ ತುಂಬ ಸಹಜವೆನ್ನುವಂತೆ ಆ ನಡತೆಯನ್ನು ಅವರು ಅಳವಡಿಸಿಕೊಂಡರು.

ಭಟ್ಟರ ಔಪಚಾರಿಕ ವಿದ್ಯಾಭ್ಯಾಸ ತುಂಬಾ ಕಡಿಮೆ. ಆದರೆ ಅದು ಈಗಿನ ದೃಷ್ಟಿಯಲ್ಲಿ. ೧೯೪೫ರ ಹೊತ್ತಿಗೆ ಮೆಟ್ರಿಕ್ ಮುಗಿಸುವುದೇ ಒಂದು ಸಾಹಸದ ಕೆಲಸವಾಗಿತ್ತು. ಬಹುಶಃ ಆಗ ಇಡೀ ಸಾಗರ ತಾಲೂಕಿಗೆ ಸಾಗರದಲ್ಲಿ ಒಂದೇ ಪ್ರೌಢಶಾಲೆ ಇತ್ತೆಂದು ಕಾಣುತ್ತದೆ. ಅಷ್ಟೇಕೆ, ಇಡೀ ಶಿವಮೊಗ್ಗ ಜಿಲ್ಲೆಯಲ್ಲಿ ಆಗ ಎಂಟೊಂಭತ್ತು ಪ್ರೌಢಶಾಲೆಗಳಿದ್ದವೇನೋ ! (ಹೊಸನಗರ, ಸೊರಬ, ಶಿಕಾರಿಪುರ ತಾಲ್ಲೂಕುಗಳಲ್ಲಿ ಬಹುಶಃ ಪ್ರೌಢ ಶಾಲೆಗಳಿರಲಿಲ್ಲ ಎಂದು ಕಾಣುತ್ತದೆ.) ಆ ದಿನಗಳಲ್ಲಿ ವ್ಯವಸಾಯಸ್ಥರ ಮನೆ ಹುಡುಗರು ತೋಟ ಗದ್ದೆಗಳ ಕಡೆಗೂ ಸಿಗಾಕೊಟ್ಟುಕೊಂಡು, ಬ್ರಾಹ್ಮಣರ ಹುಡುಗರಾದರೆ ಮಡಿ; ಹುಡಿ, ದೇವರು-ದಿಂಡರು, ಸಂಧ್ಯಾವಂದನೆಗಳನ್ನು ಮುಗಿಸಿಕೊಂಡು ಶಾಲೆಗೆ ಹೋಗಿಬರುವ ಕೆಲಸ ಮಾಡುತ್ತಿದ್ದರು. ಮಹಾಬಲೇಶ್ವರ ಭಟ್ಟರೂ ಹೀಗೇ ಮಾಡಿ ತಮ್ಮ ಮೆಟ್ರಿಕ್ ವಿದ್ಯಾಭ್ಯಾಸ ಮುಗಿಸಿದರು.

ಭಾರತವು ಸ್ವಾತಂತ್ರ್ಯ ಪಡೆಯುವ ಹೊಸ್ತಿಲಲ್ಲಿದ್ದ ಕಾಲವದು. ಕೇಂದ್ರದಲ್ಲಿ ನಡುಗಾಲ ಸರ್ಕಾರ ಸ್ಥಾಪನೆಯಾಗುವ ಸಂದರ್ಭ. ಬಹುತೇಕ ಜನರಿಗೆ ಕಾಂಗ್ರೆಸ್ಸೇ ಆದರ್ಶ. ಅದರಿಂದಲೇ ದೇಶದ ಪ್ರಗತಿ-ಸಾಧ್ಯ. ಎಂಬ ಭಾವನೆ. ಇದಕ್ಕೆ ಇಂಬಾಗುವಂತೆ ಗಾಂಧೀ, ನೆಹರೂ, ಪಟೇಲರಂಥ ಮಹಾನ್ ನಾಯಕರುಗಳು ಇದ್ದ ದಂಡು ಅದು. ಸಾರ್ವಜನಿಕ ಕೆಲಸಗಳನ್ನು ಮಾಡಬೇಕೆನ್ನುವವರಿಗೆ ಅದು ತುಂಬಾ ಸೂಕ್ತ ವೇದಿಕೆಯಾಗಿತ್ತು. ಅಂತೆಯೇ ಮಹಾಬಲೇಶ್ವರ ಭಟ್ಟರು ಸಹಜವಾಗಿ ಆ ಪಕ್ಷವನ್ನು ಸೇರಿದರು. ೪೩ ವರ್ಷಗಳಕಾಲ (೧೯೮೯ರವರೆಗೆ) ಅದೇ ಪಕ್ಷದಲ್ಲಿದ್ದು ದುಡಿದರು. ಸಕ್ರಿಯ ರಾಜಕಾರಣದಲ್ಲಿದ್ದೂ, ಅದು ಆಡಳಿತ ಪಕ್ಷವೇ ಆಗಿದ್ದೂ ಭಟ್ಟರ ಮನಸ್ಸು, ಕೈ, ಕಚ್ಚೆಗಳು ಕೊಳಕಾಗಲಿಲ್ಲ. ಅದು ಮನೆತನದ ಸಂಸ್ಕಾರದ ಫಲ. 'ದೇವರು ಕೊಟ್ಟಷ್ಟೇ ಸಾಕು' ಎಂಬ ಸಂತೃಪ್ತ ದೃಷ್ಟಿಯ ಫಲ. ಈ ನಿಷ್ಕಳಂಕತೆಯೇ ಭಟ್ಟರನ್ನು ಇನ್ನೂ ಜನಾನುರಾಗಿಯಾಗಿ ಉಳಿಸಿರುವುದು.

ಕೃಷಿ, ಸಮಾಜಸೇವೆ, ಸಾಹಿತ್ಯ - ಈ ತ್ರಿವೇಣಿ ಸಂಗಮದಲ್ಲಿ ಈಜುತ್ತಾ, ಆನಂದಿಸಿರುವ ಜೀವ-ತೊರೆಮನೆ ಮಹಾಬಲೇಶ್ವರ ಭಟ್ಟರದು. ಉದರಂಭರಣಕ್ಕಾಗಿ

ಕೃಷಿ, ಮನೋನೆಮ್ಮದಿಗಾಗಿ ಸಾಹಿತ್ಯಾಧ್ಯಯನ ಮತ್ತು ಸಾಹಿತ್ಯ ರಚನೆ - ಸುತ್ತಲಿನ ಜನಕ್ಕೆ ಒಂದಷ್ಟು ಸೇವೆ ಮಾಡಬೇಕೆಂಬ ತುಡಿತದಿಂದಾಗಿ ಸಾರ್ವಜನಿಕ ಸಂಘ-ಸಂಸ್ಥೆಗಳ ಕೆಲಸ, ಇದು ಭಟ್ಟರ ಸ್ವಯಂ ನಿರ್ಧಾರದ ಆಯ್ಕೆ; ಈ ಆಯ್ಕೆಗಾಗಿ ಭಟ್ಟರು ಎಂದೂ ಪರಿತಪಿಸಲಿಲ್ಲ. ಉಪಕಾರ ಪಡೆದುಕೊಂಡವರೇ ಕೃತಘ್ನರಾಗಿ ನಡೆದ ಸಂದರ್ಭಗಳು ಇವರ ಬದುಕಿನಲ್ಲಿ ಧಂಡಿಯಾಗಿ ಉಂಟು. ಆದರೆ ಅವನ್ನು ನುಂಗಿಕೊಂಡರು. ತಮ್ಮ ನಿತ್ಯದ ಗಾಯತ್ರಿ ಜಪ, ರಾಮನಾಮ ಸ್ಮರಣೆಗಳಲ್ಲಿ ಆ ನೋವುಗಳು ಅವರ ಅಂತಃಶಕ್ತಿಯನ್ನು ಘಾತಿಸದೆ ದೂರ ಉಳಿದವು ಎಂದೇ ಅವರು ನಂಬಿದ್ದಾರೆ.

ಭಟ್ಟರು ಎಲ್ಲಿದ್ದರೆ ಅಲ್ಲಿ ಕ್ರಿಯಾಶೀಲತೆ ಇರುತ್ತದೆ. ಜಡತ್ವವೆಂಬುದು ಅವರಿಗೆ ತಿಳಿಯದ ಸಂಗತಿ. ಅವರಿರುವ ಸ್ಥಳ- ಅದು ತಾಲ್ಲೂಕು ಸೊಸೈಟಿ, ಅಡಿಕೆ ಮಾರಾಟ ಸಂಘ, ಎ.ಪಿ.ಎಂ.ಸಿ. ಅವರದೇ ಆದ ಜಲಂಧರ ಪ್ರಕಟನಾಲಯ- ಹೀಗೆ ಯಾವುದೇ ಇರಬಹುದು. ಅಲ್ಲಿ ಆಪ್ತತೆಯಿಂದ ಕೂಡಿದ ಒಂದು ಗಾಂಭಿರ್ಯವಿರುತ್ತದೆ. ಉಪಯುಕ್ತ ವಿಚಾರವೊಂದರ ಚರ್ಚೆ ನಡೆಯುತ್ತಿರುತ್ತದೆ. ಯಾವುದೋ ಸಾಹಿತ್ಯಿಕ ಕಾರ್ಯಕ್ರಮವೊಂದನ್ನೂ ಹೇಗೆ ಹಮ್ಮಿಕೊಳ್ಳಬೇಕೆಂಬ ಚಿಂತನೆ ಅಲ್ಲಿ ಗರಿಗೆದರುತ್ತಿರುತ್ತದೆ. ನಡುವೆ ಆಗಾಗ ನಿಷ್ಕಲ್ಮಶವಾದ ಪುಷ್ಕಳ ನಗುವೂ ಹೊಮ್ಮುತ್ತದೆ. ಮೀಟಿಂಗಿನ ನಡುವೆ ಭಟ್ಟರು ರಭಸದಿಂದ ವಾದ ಮಾಡಬಹುದು ಆದರೆ ನಂತರ ಚಹಾ ಕುಡಿಯುವಾಗ ಅದೇ ಸ್ನೇಹ, ಅದೇ ತನ್ಮಯತೆ. ಈ ನಿರ್ಲಿಪ್ತತೆಯನ್ನು ಸಾಧಿಸಿಕೊಂಡವರು ಬಹಳಿಲ್ಲ.

ತಮ್ಮ ಸಾರ್ವಜನಿಕ ಕೆಲಸಗಳ ನಡುವೆಯೂ ಭಟ್ಟರು ತಮ್ಮ ಆತ್ಮ ತೃಪ್ತಿಗಾಗಿ ಸಾಕಷ್ಟು ಓದಿಕೊಂಡಿದ್ದಾರೆ. ಬರೆದೂ ಇದ್ದಾರೆ. ೧೩ ಪುಸ್ತಕಗಳನ್ನು ಈವರೆಗೆ ಪ್ರಕಟಿಸಿದ್ದಾರೆ. ಇದರಲ್ಲಿ ಮೂರು ಕಾದಂಬರಿಗಳಿವೆ. ಎರಡೆರಡು ಕಥಾ ಸಂಕಲನಗಳು, ಕವನ ಸಂಕಲನಗಳು ಇವೆ. ಈಗ ತಮ್ಮ ಆತ್ಮ ಕಥೆ ಬರೆಯುತ್ತಿದ್ದಾರೆ. ತಮ್ಮ ಜಲಂಧರ ಪ್ರಕಟನಾಲಯದ ಮೂಲಕ ಅನ್ಯ ಲೇಖಕರ ಕೃತಿಗಳನ್ನೂ ಹೊರತಂದಿದ್ದಾರೆ.

ಇಂಥ ಮಹಾಬಲೇಶ್ವರ ಭಟ್ಟರಿಗೆ ಈಗ ಎಪ್ಪತ್ತು ಎಂದರೆ ನಂಬಲಾಗುವುದಿಲ್ಲ. ಆದರೆ ಕಾಲ ನಮ್ಮನ್ನು ಸದಾ ಮೋಸಗೊಳಿಸುತ್ತಲೇ ಇರುತ್ತದೆ. ಹರೆಯದವರಂತೆ ಕಾಣುವ ಮಹಾಬಲೇಶ್ವರ ಭಟ್ಟರ ಮೂಲಕವೂ ಕಾಲ ನಮ್ಮ ಕಣ್ಣಿಗೆ ಮಣ್ಣೆರಚುತ್ತಿದೆ. ಯಾರು ಹೇಳುತ್ತಾರೆ ಅವರಿಗೆ ಇಷ್ಟು ವರ್ಷಗಳಾದುವೆಂದು ? ಕಳೆದ ೨೦ ವರ್ಷಗಳಿಂದ ನಾನು ಕಾಣುತ್ತಿರುವ ಅವರ ಮುಖದ ಮೇಲೆ ಒಂದೂ ಸಹಾ ಹೊಸ ಸುಕ್ಕು ಮೂಡಿದಂತಿಲ್ಲ. ನಡಿಗೆಯಲ್ಲಿ ಬಳಲಿಕೆ ಇಲ್ಲ. ಬೆನ್ನು ಇನಿತೂ ಬಾಗಿಲ್ಲ.

ಹಲ್ಲುಗಳ ಹೊಳಪು ಮಾಸಿಲ್ಲ. ಎಲ್ಲಿಂದ ಬಂತು ಈ ಆರೋಗ್ಯ ? ಅಂತರಂಗ ಬಹಿರಂಗ ಶುದ್ಧಿಗಳಿಲ್ಲದೆ, ದೈವದೊಲ್ಮೆ ಇಲ್ಲದೆ ಇಂಥ ನೆಮ್ಮದಿಯ ಬಾಳುವೆ ಸಾಧ್ಯವಿಲ್ಲ. ನಿರ್ಧಾರ ಪೂರ್ವಕವಾಗಿ ಭಟ್ಟರು ಮೊದಲಿನಿಂದಲೂ ಋಜು ಬಾಳ್ವೆಯ ಪಥವನ್ನು ಅನುಸರಿಸಿ ನಡೆದಿದ್ದಾರೆ. ಮನೆತನದ ಗೌರವಕ್ಕೆ ಚ್ಯುತಿ ತಾರದಂತೆ ಬದುಕಿದ್ದಾರೆ. ಸಮಕಾಲೀನ ಪರಿಸರದಲ್ಲಿ ಒಂದಷ್ಟು ಹೂಗಳರಳುವಂತೆ ಶ್ರಮಿಸಿದ್ದಾರೆ. ಸಾಗರ ತಾಲೂಕಿನ ಪ್ರಗತಿಯಲ್ಲಿ ಮಹಾಬಲೇಶ್ವರ ಭಟ್ಟರ ದುಡಿಮೆ ಸಾಕಷ್ಟಿದೆ, ತಾಯ್ನೆಲದ ಋಣವನ್ನು ಅವರು ನಿರ್ವಂಚನೆಯಿಂದ ತೀರಿಸಿದ್ದಾರೆ.

ಮಹಾಬಲೇಶ್ವರ ಭಟ್ಟರು ಮಹಾಪಂಡಿತರೇನಲ್ಲ. ಹಾಗೆಂದು ಅವರು ಎಲ್ಲಿಯೂ ಹೇಳಿಕೊಂಡಿಲ್ಲ, ವರ್ತಿಸಿಲ್ಲ. ಆದರೆ ಒಬ್ಬರ ವ್ಯಕ್ತಿತ್ವ ನಮಗೆ ಪ್ರಿಯವಾಗಲು ಅವರು ಪಂಡಿತರೇ ಆಗಬೇಕಾಗಿಲ್ಲ. ಎಷ್ಟೋ ಜನ ಪುಸ್ತಕ ಪಂಡಿತರ ಬದುಕನ್ನು ಸಮೀಪದಿಂದ ನೋಡಿದಾಗ ವಾಕರಿಕೆ ಬರುವಂತಿರುತ್ತದೆ. ವ್ಯಕ್ತಿ ತನ್ನ ಪ್ರಾಂಜಲತೆಯಿಂದ, ಸೇವೆಯಿಂದ ನಮಗೆ ಪ್ರಿಯನಾಗುತ್ತಾನೆ. ಭಟ್ಟರು ನಮಗೆ ಪ್ರಿಯರಾಗಿರುವುದೂ ಹಾಗೆಯೇ

'ಜೀವಂತು ಶರದಶ್ಶತಂ' ಎನ್ನುವುದು ನಮ್ಮ ಆರ್ಷೇಯ ಹಾರೈಕೆ. ಮಹಾಬಲೇಶ್ವರ ಭಟ್ಟರ ಬಗೆಗೆ ಇದನ್ನು ನಾವೆಲ್ಲ ತುಂಬ ಪ್ರೀತಿಯಿಂದ ಮನಸಾರೆ ಹಾರೈಸುತ್ತೇವೆ. ರಾಜ್ಯವ್ಯಾಪೀ ಪ್ರಭಾವ ಹೊಂದಿದ್ದರೂ ನಿಗರ್ವಿಯಾಗಿ ಎಲ್ಲರೊಡನೆ ಬೆರೆಯುತ್ತ ' ಎನಗಿಂತಕಿರಿಯರಿಲ್ಲ' ಎಂಬ ನಮ್ರತೆಯಲ್ಲಿ ಬದುಕುವ ಟಿ. ಮಹಾಬಲೇಶ್ವರ ಭಟ್ಟರ ಬದುಕನ್ನು ನೋಡಿ ಕಿರಿಯರು ತಿಳಿಯಬೇಕಾದ್ದು ಬಹಳಷ್ಟಿದೆ. ಅವರದು 'ಬೆಲ್ಲದಂತಹ ಬಾಳು' ಎತ್ತಕಡೆಯಿಂದ ಸವಿದರೂ ಸಿಹಿಯೇ !

# ಆದರ್ಶ ಸಂಯೋಜಕ

– ನೀ.ನಾ. ಮಧ್ಯಸ್ಥ

ಅವರ ವಯಸ್ಸು ೭೦ ವರ್ಷಗಳೆಂದರೆ ಕಂಡವರೂ ಯಾರೂ ಖಂಡಿತಾ ನಂಬುವುದಿಲ್ಲ. ಇನ್ನೂ ಮೂವತ್ತೆಂಟರ ಅಕ್ಕ-ಪಕ್ಕ ಎನ್ನುವವರೇ ಹೆಚ್ಚು. ಪತ್ರಿಕೆಗಳಲ್ಲಿ ಬರುತ್ತಿರುವ ಅವರ ಇತ್ತೀಚಿನ ಭಾವಚಿತ್ರಗಳೂ ಇದನ್ನೇ ಸಮರ್ಥಿಸುತ್ತವೆ. ಅವರ ಚಟುವಟಿಕೆಗಳ ಸುದ್ದಿಯೂ ಪುಷ್ಟೀಕರಿಸುತ್ತದೆ. ಸಾಹಿತ್ಯ, ಸಾಮಾಜಿಕ, ರಾಜಕೀಯ ಮುಂತಾದ ಹಲವಾರು ಕ್ಷೇತ್ರಗಳಲ್ಲಿ ಮುಂಚೂಣಿಯಲ್ಲಿದ್ದು, ಇತರರನ್ನು ತಮ್ಮೊಂದಿಗೆ ಮುನ್ನಡೆಸುವ ಅವರು ಆದರ್ಶ ಸಂಘಟಕ; ಮಾದರಿಯ ವ್ಯವಸ್ಥಾಪಕ; ನಿತ್ಯ ಚೈತನ್ಯದ ನವೋತ್ಸಾಹದ ಬತ್ತದ ಚಿಲುಮೆ, ಕನ್ನಡ ಸಾಹಿತ್ಯ ಲೋಕದಲ್ಲಿ ಅವರ ಲೇಖನಗಳನ್ನು ಭಾಷಣಗಳನ್ನು ಓದಿದವರು, ಕೇಳಿದವರು, ಅವರ ಹಿರಿತನವನ್ನು ಅವರ ಅನುಭವ ಕಂಡು ಗುರುತಿಸಿರುವುದು ನಿಜ. ಮುಖದಲ್ಲಿ ಒಂದೂ ಸುಕ್ಕಿಲ್ಲ. ಒಂದೇ ಒಂದು ಕೂದಲು ಹಣ್ಣಾಗಿಲ್ಲ. ಹಲ್ಲುಗಳಂತೂ ಗಟ್ಟಿಯಾಗಿವೆ. ಎತ್ತರದ ಆಳ್ತನ, ಗಂಭೀರವಾದ ನಡಿಗೆ, ಶಿಸ್ತುಬದ್ಧವಾದ ಉಡುಗೆ, ಕ್ಷಣವೂ ವ್ಯತ್ಯಾಸವಾಗದ ಸಮಯನಿಷ್ಠೆ, ಅವರು ನಡೆಸುವ ಕಾರ್ಯಕ್ರಮ ನಿಶ್ಚಿತ ಸಮಯಕ್ಕೆ ಒಂದು ನಿಮಿಷವೂ ತಡವಾಗದಂತೆ ಆರಂಭ. ಸಮಯದ ಶಿಸ್ತುಳ್ಳ ಕೆಲವರು ತಿಳಿಸುವಂತೆ ಆಮಂತ್ರಣ ಪತ್ರಿಕೆಯಲ್ಲಿ ೧೦ ನಿಮಿಷ ಮುಂಚಿತವಾಗಿ ಬನ್ನಿ ಎಂಬ ಸೂಚನೆ ಕೊಡದಿದ್ದರೂ ಆಮಂತ್ರಿತರು ಹಾಗೂ ಆಸಕ್ತ ಅಭಿಮಾನಿಗಳೂ ಹತ್ತಿಪ್ಪತ್ತು ನಿಮಿಷ ಮುಂಚೆಯೇ ಬಂದು ಆಸನಗಳಲ್ಲಿ ಆಸೀನರಾಗುತ್ತಾರೆ. ನಾಲ್ಕಾರು ಗಂಟೆಗಳ ಮೊದಲೇ ಸಭಾ ಭವನದ ಎಲ್ಲಾ ವ್ಯವಸ್ಥೆಗಳೂ ಆಗಿರುತ್ತವೆ. ಬರುವ ಅತಿಥಿಗಳು ಅದೆಷ್ಟೇ ಗಣ್ಯರಿರಲಿ, ದೂರದ ಊರಿನವರು ಸಂಜೆಯ ಕಾರ್ಯಕ್ರಮಕ್ಕೆ ಮುಂಜಾನೆಯೇ ಬಂದಿರುತ್ತಾರೆ, ಹತ್ತಿರದವರು ತಾವು ಮುಂಚಿತವಾಗಿ ಬಂದೇ ಬರುತ್ತಾರೆ, ಸಹಾಯಕರಿಗಿಂತ ಕೆಲಸಗಾರರರಿಗಿಂತ ತಿಳಿಸಿದ ಒಂದು ನಿಮಿಷ ಮೊದಲೇ ಹಾಜರಿದ್ದು, ಎಲ್ಲರ ನಂತರ ಹೊರಡುವ ಶ್ರೀ ಟಿ. ಮಹಾಬಲೇಶ್ವರ ಭಟ್ಟರ ಈ ಶಿಸ್ತು ಆದರ್ಶಪ್ರಾಯವಾಗಿ ಇತರ ವ್ಯಕ್ತಿ-ಸಂಸ್ಥೆ – ವ್ಯವಸ್ಥಾಪಕರುಗಳಿಗೆ ಅನುಕರಣೀಯವಾಗಿದೆ. ಈಚೆಗೆ ನಾಲ್ಕು ವರ್ಷಗಳಿಂದ ಸಾಗರದ ಕಾರ್ಯಕ್ರಮಗಳೆಲ್ಲವೂ ಅವನ್ನು ಯಾರೇ ನಡೆಸಲಿ

- ಈ ಶಿಸ್ತಿಗೆ ಬಹುಮಟ್ಟಿನಲ್ಲಿ ಒಳಪಟ್ಟಿವೆ. ನಮ್ಮಲ್ಲಿ ಅನೇಕರಿಗೆ ೨೦ಕ್ಕೆ ೭೦ರ ಸುಸ್ತು-ನಿಶ್ಶಕ್ತಿ ಬಂದಿದ್ದರೆ ಇವರು ನವಯುವಕರನ್ನು ತಮ್ಮ ಕಾರ್ಯೋತ್ಸಾಹದಿಂದ ಹೇಳದೆಯೆ ಹುರಿದುಂಬಿಸುತ್ತಾರೆ. ನಡೆದು ನಡೆಸುತ್ತಾರೆ. ಆಡದೆಯೇ ಮಾಡಿ ತೋರಿಸುತ್ತಾರೆ.

ಆತ್ಮೀಯರೆಲ್ಲರೂ ಕೇಳುವ-ಅಪರಿಚಿತರೆಲ್ಲರೂ ಅಚ್ಚರಿಪಡುವ-ಭಟ್ಟರ ಈ ಚಿರತಾರುಣ್ಯದ ಅದಮ್ಯ ನವನವೋತ್ಸಾಹಕ್ಕೆ ಕಾರಣವೇನು ? ಸರ್ವಜ್ಞನ ಹೇಳಿಕೆಯಂತೆ ಸ್ವರ್ಗಕ್ಕೆ ಕಿಚ್ಚು ಹಚ್ಚುವಂಥ ಎಲ್ಲ ಸಮೃದ್ಧಿಗಳು ಅವರಿಗೆ ಇವೆ. ಗೆಳೆಯರ-ಅಭಿಮಾನಿಗಳ ಬಳಗ ಇದೆ. ಇಷ್ಟೆಲ್ಲಾ ಇದ್ದವರು ಚಿಂತೆ-ಏಕಾಂತ-ಅಲಕ್ಷ್ಯ-ಅಸ್ವಸ್ಥ ಇತ್ಯಾದಿಯಾಗಿರುತ್ತಾರೆ. ಈ ಬಗ್ಗೆ ಭಟ್ಟರನ್ನೇ ಕೇಳಿದರೆ, ಎಂದಿನಂತೆ ಮುಗುಳುನಗೆಯೇ ಅವರ ಉತ್ತರ. ಆ ನಗೆ ಎಂದೂ ಮಾಸಿ ಮುಖ ಬೀಗಿಲ್ಲ; ಬಿಗಿಯಾಗಿಲ್ಲ; ಈ ನಗೆ ಹೂ ಎಂದೂ ಬಾಡದಿರಲಿ.

ಮೊನ್ನೆ ಅನಿರೀಕ್ಷಿತವಾಗಿ ಈ ಪ್ರಶ್ನೆಗೆ ಉತ್ತರ ಸಿಕ್ಕಿತು. ಅವರಿಗೆ ತಿಳಿಯದಂತೆ ಅವರೇ ಸುಳಿವು ನೀಡಿದ್ದಾರೆ. ಓದುಗರಲ್ಲಿ ಹಲವರು ಗಮನಿಸಿರಬಹುದು - ಸಂಯುಕ್ತ ಕರ್ನಾಟಕದಲ್ಲಿ ಅವರ ಅಂಕಣ ಬರೆಹ 'ಬೇವು-ಬೆಲ್ಲ' ಎಂಬ ಹೆಸರಿನಿಂದ ಪ್ರತೀ ಶನಿವಾರ ಪ್ರಕಟವಾಗುತ್ತದೆ. ಯುಗಾದಿಯ ಬೇವು ಬೆಲ್ಲವನ್ನು ಇವರು ಪ್ರತಿವಾರ ನೀಡುತ್ತಾರೆ. ನೋವು ನಲಿವುಗಳೆರಡನ್ನೂ ಅವರು ಪ್ರಸ್ತಾಪಿಸುತ್ತಾರೆ. ದಿನಾಂಕ ೭.೧೨.೯೬ರ ಬೇವು ಬೆಲ್ಲಕ್ಕೆ ಅವರು ಕೊಟ್ಟ ಶೀರ್ಷಿಕೆ - 'ಮಾನಸಿಕ ನೆಮ್ಮದಿಯೇ ಸುಖದ ದಾರಿ.' ನಿಜ; ಈ ನೆಮ್ಮದಿ ಹೇಗೆ ಸಾಧ್ಯ? ಅರ್ಜುನ ಶ್ರೀಕೃಷ್ಣನನ್ನು ಕೇಳಿದ ಪ್ರಶ್ನೆ ಇದು. ಉತ್ತರವಾಗಿ ಧರ್ಮಕ್ಷೇತ್ರ ಕುರುಕ್ಷೇತ್ರದಲ್ಲಿ ಹೊರಹೊಮ್ಮಿದುದು ಭಗವದ್ಗೀತೆಯಾಯಿತು. ಮನಸ್ಸಿನ ಸುಸ್ಥಿರತೆ ಇಲ್ಲದೆ ನೆಮ್ಮದಿ ಅಸಾಧ್ಯ. ಶಾಂತ ಸರೋವರದಲ್ಲಿ ಒಂದು ಅಲೆಯೂ ಏಳದ ಸ್ಥಿತ ಪ್ರಜ್ಞೆ ಪರಿಸ್ಥಿತಿ. ಎಂಥಹವರ ಜೀವನದಲ್ಲೂ ಇದು ಅಸಂಭವ. ಅದನ್ನು ಸಂಭವಗೊಳಿಸಿದ್ದಾರೆ - ಶ್ರೀ ಭಟ್ಟರು. ಎಲ್ಲರ ಮುಂದೆ ಈ ಆತ್ಮೀಯ ನಾಮ ನಿರ್ದೇಶನಕ್ಕೆ ಕ್ಷಮೆಕೋರುತ್ತೇನೆ. ಇದು ಈ ಭಾಗದಲ್ಲಿ ಅಂದರೆ ಈ ಪ್ರದೇಶದಲ್ಲಿ. ಕನ್ನಡ ಸಾಹಿತ್ಯರಂಗದಲ್ಲಿ ಎಲ್ಲರೂ ಗುರುತಿಸಬಹುದಾದ ಹೆಸರು. ಅವರದೇ ಒಂದು ವಾಕ್ಯ ಆ ಲೇಖನದಲ್ಲಿದೆ. 'ಸಂಪಾದನೆಯ ಜೊತೆಗೆ ಸ್ವಲ್ಪ ಬಿಡುವು ಮಾಡಿಕೊಂಡು ಸಾಮಾಜಿಕ, ಸಾಹಿತ್ಯಿಕ ಸಮಾರಂಭಗಳಲ್ಲಿ ಪಾಲ್ಗೊಳ್ಳಿ, ಮನಸ್ಸು ಹಗುರಾಗುತ್ತದೆ.' ಶ್ರೀ ಮಹಾಭಲೇಶ್ವರ ಭಟ್ಟರು ಬಾಳಿನುದ್ದಕ್ಕೂ ಹೀಗೆಯೇ ಇದ್ದಾರೆ. ಇರುತ್ತಾರೆ. ಈಗ ನಲವತ್ತು ವರ್ಷಗಳಿಂದ ನಾನು ಅವರನ್ನು ಹತ್ತಿರದಿಂದಲೇ ನೋಡುತ್ತಿದ್ದೇನೆ. ನನ್ನನ್ನೂ ಅವರು ತಮ್ಮ ದಾರಿಯಲ್ಲಿ ನಡೆಸಿದ್ದಾರೆ, ನಡೆಸುತ್ತಿದ್ದಾರೆ. ಆದರೆ ಅವರ ಆರ್ಥಿಕ, ಕೌಟುಂಬಿಕ, ಸಾಮಾಜಿಕ ಸ್ಥಾನ-ಮಾನ

ತಂದುಕೊಳ್ಳಲು ನನ್ನಿಂದ ಆಗಿಲ್ಲ. ಆ ದೃಷ್ಟಿಯಿಂದ ಅವರು ಅದೃಷ್ಟವಂತರು. ಅಜ್ಞಾತ ಕಾರಣವನ್ನು ಅದೃಷ್ಟವೆನ್ನುವ ದೌರ್ಬಲ್ಯ ಯಾರನ್ನೂ ಬಿಟ್ಟಿಲ್ಲ. ಸಕ್ಕರೆ ಹಾಕಿದಷ್ಟು ಸಿಹಿ ಆಗಲೇಬೇಕು.'ಅಕ್ಕರೆಯೇ ಸಕ್ಕರೆ' – ಈ ಹೆಸರಿನ ನಾಟಕವನ್ನೇನೋ ನಾನು ಬರೆದೆ. ಆದರೆ ಅಕ್ಕರೆಯ ಸಕ್ಕರೆ ಸಿಕ್ಕರೆ ತಾನೇ ? ಶ್ರೀ ಮಹಾಬಲೇಶ್ವರ ಭಟ್ಟರ ಸಂಸಾರ, ಪರಿವಾರ ಅಕ್ಕರೆಯ ಮಹಾಪೂರ. ಏನೇ ಕಶ್ಮಲವಿದ್ದರೂ ಹರಿದು ತಿಳಿಯಾಗುತ್ತದೆ. ಗುರಿಮುಟ್ಟುವ ವೇಗ-ಅದೇ ಕಾರ್ಯೋತ್ಸಾಹ ಇರುತ್ತದೆ.

'ಮಾನಸಿಕ ನೆಮ್ಮದಿಯೇ ಸುಖದ ದಾರಿ' ಎನ್ನುವುದಕ್ಕೆ ಐದಾರು ಸಾಮಾಜಿಕ ದೃಷ್ಟಾಂತಗಳು ಲೇಖನದಲ್ಲಿವೆ. ಇದು ಅವರ ಸಾಹಿತ್ಯ ಪರಿಪಕ್ವತೆಗೆ ನಿದರ್ಶನವೂ ಹೌದು. ಆಗರ್ಭ ಶ್ರೀಮಂತನೊಬ್ಬ ಅಪ್ಪನಿಗಿಂತ ತಾನು ಹೆಚ್ಚು ಶ್ರೀಮಂತನಾಗ ಬೇಕೆನ್ನುತ್ತಾನೆ. ಕಡುಬಡವನು ಪುಢಾರಿಯಾಗಿ ರಾಜಕೀಯದಲ್ಲಿ ಮಿಂಚುತ್ತಾನೆ. ಮತ್ತೊಬ್ಬ ಅಧಿಕಾರದಲ್ಲಿ (ಉದ್ಯೋಗದಲ್ಲಿ) ಮೇಲೇರುತ್ತಾ ಅತಿ ಸಂಪಾದನೆಗಾಗಿ ಲಂಚವನ್ನು ಬಾಚಿಕೊಳ್ಳುತ್ತಾನೆ. ಹಣ ಇದೆಯೆಂದು ಬಯಸಿದ್ದೆಲ್ಲಾ ತಿಂದೇ ಕಾಯಿಲೆ ತಂದುಕೊಳ್ಳುವವನಿದ್ದಾನೆ. ಮಗನ ಒಲವನ್ನರಿಯದೆ ಆತನನ್ನು ಐ.ಎ.ಎಸ್. ಮಾಡಿಸಬೇಕೆಂದು ಹೊರಟು, ಅನುತ್ತೀರ್ಣ ಮಗನ ಆತ್ಮಹತ್ಯೆಯಿಂದ ಇನ್ನೊಬ್ಬಕೊರಗುತ್ತಾನೆ. ದೊಡ್ಡ ವ್ಯಾಪಾರಿಯೊಬ್ಬ ತೆರಿಗೆ ವಂಚಿಸಿ, ಸೆರೆಮನೆ ಸೇರುತ್ತಾನೆ. ಇಲ್ಲಿ ಸಮೃದ್ಧ ಸಮಾಜದ ಒಂದೊಂದು ಬಗೆಯ ಪ್ರತಿಮೆಯನ್ನು ಓದುಗರ ಮುಂದಿಟ್ಟು ಶ್ರೀಭಟ್ಟರು ಬರೆದಿದ್ದಾರೆ. 'ಪ್ರತಿಯೊಬ್ಬರೂ ಜೀವಿಸುವುದು ಸುಖ ಸಂತೋಷಕ್ಕಾಗಿ, ಆದರೆ ನೀವು ಹಣವಂತರಾದರೂ ನೆಮ್ಮದಿಯಿಂದ ಬಾಳುತ್ತಿಲ್ಲ.'

ಸಂಸ್ಕೃತದಲ್ಲೊಂದು ಸುಭಾಷಿತ ಇದೆ –''ಸಂಸಾರ ವಿಷ ವೃಕ್ಷಸ್ಯ ದ್ವೇ ಫಲೇ ಹ್ಯಮೃತೋಪಮೇ'' ಸುಭಾಷಿತ ರಸಾಸ್ವಾದಃ ಸಂಗತಿಃ ಸುಜನೈಸ್ಸಹ'' (ಸಂಸಾರವೆಂಬ ವಿಷವೃಕ್ಷದಲ್ಲಿ ಅಮೃತದಂತಹ ಎರಡು ಫಲಗಳಿವೆ; ಸುಭಾಷಿತದ ರಸಾನುಭವ ಮತ್ತು ಸಜ್ಜನರ ಸಹವಾಸ)

ಸಾಮಾಜಿಕ ಸಾಹಿತ್ಯ ಸಮಾರಂಭಗಳಲ್ಲಿ ಪಾಲ್ಗೊಳ್ಳಿರೆಂಬ ಶ್ರೀ ಭಟ್ಟರ ಸಲಹೆ, ಈ ನುಡಿಮುತ್ತನ್ನು ಕುಂದಣದಲ್ಲಿ ಪೋಣಿಸಿದೆ. ಅವರು ನಡೆದ ನಡೆದು ನುಡಿದ – ಈ ಸುಖದ ಹಾದಿ ಕಲ್ಲುಮುಳ್ಳುಗಳನ್ನು ಮರೆಸಿ, ಹಣ್ಣು ಹೂವುಗಳನ್ನೇ ತೋರಿಸುತ್ತದೆ.

೧೯೭೭ರಲ್ಲಿ ಶ್ರೀ ಮಹಾಬಲೇಶ್ವರ ಭಟ್ಟರಿಗೆ ಐವತ್ತರ ಅಭಿನಂದನೆಯಾಗಿ 'ಮಹಾನಂದ' ವನ್ನು ಸಮ್ಮಾನದೊಂದಿಗೆ ನೀಡಿದ್ದೆವು. ಸಂಪಾದಕ ಮಂಡಲಿಯಲ್ಲಿದ್ದ ನಾನು 'ಕಲಾರಸಿಕ ಮಹಾನಂದ' ಎಂಬ ಲೇಖನವನ್ನು ಬರೆದಿದ್ದೆ. ಮಹಾನಂದ

ಎಂಬುದು ಮನೆಮಂದಿ ಅವರನ್ನು ಚಿಕ್ಕಂದಿನಲ್ಲಿ ಕರೆಯುತ್ತಿದ್ದ ಅಕ್ಕರೆಯ ಹೆಸರು. 'ಮಹಾನಂದ ಸ್ಟೋರ್ಸ್' ಈಗ ಆ ಹೆಸರಿನಿಂದ ಕರೆಯುವವರು ಇಲ್ಲದಿದ್ದರೂ, ಅವರ ಹರಕೆ ಬಾಳಿನುದ್ದಕ್ಕೂ ಭಟ್ಟರಿಗೆ ಮಹಾನಂದ ನೀಡಿದೆ. ಅವರು ಆ ಆನಂದವನ್ನು ನಮ್ಮ ಸಂಸ್ಕೃತಿಯ ಮೊದಲ ಪಾಠದಂತೆ ಎಲ್ಲರಿಗೂ ಹಂಚುತ್ತಿದ್ದಾರೆ. ಇದಕ್ಕೆ ಅವರ 'ಸಾಹಿತ್ಯ ಶಿಲ್ಪಿಗಳು' ಭಾಗ ೧-೨ ಮತ್ತು 'ಕನ್ನಡ ಕುಲದೀಪಕರು' ಕೃತಿಗಳು ನಿದರ್ಶನ. ಸಂಯುಕ್ತ ಕರ್ನಾಟಕದ ಅಂಕಣ ಲೇಖನ 'ಬೇವು ಬೆಲ್ಲ' ಹಾಗೂ ಜನವಾರ್ತೆಯ 'ನಿಮ್ಮೊಡನೆ' ಇವು ಅದೇ ಜಾಡಿನಲ್ಲಿ ಮುಂದುವರೆದಿವೆ.

ನಾಡಿಗೆ ಬೆಳಕನ್ನು ನೀಡುವ ಶರಾವತಿಯ ಮುಳುಗಡೆಯಲ್ಲಿ ಇವರ ಪಿತ್ರಾರ್ಜಿತ ಭೂಮಿಯೂ ಮುಳುಗಿದಾಗ, ಸಾಗರಕ್ಕೆ ಚಿಕ್ಕಂದಿನಲ್ಲೇ ಬಂದ ಶ್ರೀ ಭಟ್ಟರು ಸಾಹಿತ್ಯ ಸಮಾರಂಭಗಳ ರಸಧಾರೆಯನ್ನೇ ಹರಿಸತೊಡಗಿದರು. ಪ್ರತಿಷ್ಠಿತ ಸಾಹಿತಿಗಳನ್ನು ಬರಮಾಡಿಕೊಂಡು ಸನ್ಮಾನಿಸಿದರು. ಪ್ರತೀವರ್ಷ ದೂರದ ಊರುಗಳಿಗೂ ಸಾಹಿತ್ಯ ಸಮ್ಮೇಳನ ಸಮಾರಂಭಗಳಿಗೆ ತಪ್ಪದೇ ಹೋಗಿ ಹಿರಿಯ ಸಾಹಿತಿಗಳ ದರ್ಶನ - ಪರಿಚಯ- ಆತ್ಮೀಯತೆ - ಗೌರವಗಳನ್ನು ಗಳಿಸಿ, ದೊರೆತ ಸಾಹಿತ್ಯ ಪ್ರಕಾಶದ ಪ್ರಭಾವಲಯದಲ್ಲಿ ಸಾಹಿತ್ಯ ಸೃಷ್ಟಿ ಮಾಡಿದರು. ಕಥೆ, ಕವನ, ಜೀವನ ಚರಿತ್ರೆ - ಜೀವನ ಚಿತ್ರಣ - ಕಾದಂಬರಿ ಹೀಗೆ ಬಹುಮುಖವಾಗಿ ಅವರ ಲೇಖನ ವ್ಯವಸಾಯ ಫಲಿಸಿತು. ೧೯೪೭ರಷ್ಟು ಹಿಂದೆಯೇ ಅವರು 'ಜಲಂಧರ' ಪ್ರಕಟನಾಲಯವನ್ನು ಪ್ರಾರಂಭಿಸಿದ್ದು, ಅನೇಕ ಉದಯೋನ್ಮುಖ ಸಾಹಿತಿಗಳೂ ಮೈಛಳಿಬಿಟ್ಟು ಬರೆಯುವಂತಾಯಿತು. ಸಾಹಿತಿಗಳು, ಸಾಹಿತ್ಯಾಭಿಮಾನಿಗಳ ತಂಡವನ್ನೇ ಹುಟ್ಟುಹಾಕಿ ಜಿಲ್ಲಾ ಬರಹಗಾರ ಮಂಡಳಿಯ ಅಧ್ಯಕ್ಷರಾದರು. ಕನ್ನಡ ಪ್ರದೇಶದವರಿಗೆ ಸಾಹಿತ್ಯದ ರಸದೌತಣ ಉಣಬಡಿಸಿದರು. ಸಹೃದಯತೆಯ ಪರಿಚಯ ಮಾಡಿಕೊಟ್ಟು, ಸಮಾಜಕ್ಕೂ ತಮ್ಮ ಉತ್ತಮ ಸಂಸ್ಕಾರವನ್ನು ಪರೋಕ್ಷವಾಗಿ ರೂಪಿಸಿದರು. ಸಾಮಾಜಿಕ - ರಾಜಕೀಯ - ವ್ಯವಸಾಯ ಹಾಗೂ ಸಹಕಾರಿ ರಂಗದಲ್ಲಿ ಗಮನಾರ್ಹ ಅರ್ಹತೆಯನ್ನು ಗಳಿಸಿ, ಮುಖಂಡರಾದರು. ಇದಕ್ಕಿದ್ದಂತೆ, ಕೃಷಿರಂಗದಲ್ಲಿ ಹಾಗೂ ಗ್ರಾಮ -ಜೀವನದ ಒಲವಿನಿಂದ ಹತ್ತಿರದ ಹಳ್ಳಿ ಬೇದೂರಿನಲ್ಲಿ ಜಮೀನು ಮಾಡಿ - ಅಡಿಕೆತೋಟ ನಿರ್ಮಿಸಿದರು. ಮನೆಕಟ್ಟಿ ನೆಲೆಸಿದರು. ಮನೆ ಸುತ್ತ ಹೂವು - ಹಣ್ಣುಗಳ ಗಿಡಗಳನ್ನು ಅಂದವಾಗಿ ಬೆಳಸಿದರು. ಆದರೂ ಸಾಗರದ ಹಲವಾರು ಸಂಘ-ಸಂಸ್ಥೆಗಳ ಸಂಪರ್ಕ ಬಿಡಲಿಲ್ಲ. ಋಷಿ ತಪೋವನಕ್ಕೆ ಹಿಂದಿನವರು ಭೇಟಿಕೊಡುತ್ತಿದ್ದಂತೆ, ಸಾಗರಕ್ಕೆ ಬಂದವರಿಗೆಲ್ಲ ಭಟ್ಟರ ಬೇದೂರು ಮನೆ ಪ್ರೇಕ್ಷಣೀಯ. ಇಂದಿಗೂ ಅಲ್ಲಿನ ಆತಿಥ್ಯ ಅವಿಸ್ಮರಣೀಯ. ಆದರೆ ಅವರು ನಡೆಸುತ್ತಿದ್ದಂತಹ ಸಮಾರಂಭಗಳು ಕೆಲಕಾಲ ಇಲ್ಲವಾಗಿ, ಬಲ್ಲವರಿಗೆ ಶೂನ್ಯವೆನಿಸಿತು.

ಕನ್ನಡ ಸಾಹಿತ್ಯ ಪರಿಷತ್ತಿನ ತಾಲೂಕು ಪ್ರತಿನಿಧಿಯಾಗಿದ್ದರು. ಆ ಅವಕಾಶವನ್ನು ಬಿಟ್ಟುಕೊಟ್ಟರು (೧೯೭೬ರಲ್ಲಿ ಶಿವಮೊಗ್ಗದಲ್ಲಾದ ಅಖಿಲ ಭಾರತ ೪೯ನೇ ಕನ್ನಡ ಸಾಹಿತ್ಯ ಸಮ್ಮೇಳನ ಸ್ವಾಗತ ಸಮಿತಿಯ ಉಪಾಧ್ಯಕ್ಷರಾಗಿದ್ದರು). ಆ ಅವಕಾಶ (ತಾಲ್ಲೂಕು ಪ್ರತಿನಿಧಿತ್ವ) ಶ್ರೀನಿವಾಸ ಉಡುಪರ ಮೂಲಕ ನನಗೆ ಬಂತು, ಭಟ್ಟರನ್ನು ಬಿಟ್ಟು ಏನು ಮಾಡಲೂ ನನ್ನಿಂದಾಗದು ಎನ್ನಿಸಿತು. ಅದೇ ವೇಳೆಗೆ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ರಚನೆಯಾಯಿತು. (೧೮-೦೭-೧೯೮೩) ನಾನು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿಗೆ ತಾಲ್ಲೂಕು ಪ್ರತಿನಿಧಿಯಾಗಿ, ತಾಲ್ಲೂಕು ಪರಿಷತ್ತಿಗೆ ಕಾರ್ಯದರ್ಶಿಯಾದೆ. ಶ್ರೀ ಭಟ್ಟರನ್ನು, ಇಲ್ಲದ ಕೋಶಕ್ಕೆ ಕೋಶಾಧ್ಯಕ್ಷರನ್ನಾಗಿ ಹೆಸರಿಸಿದೆ. ಅವರ ಬೆಂಬಲದಿಂದಲೇ ನಾಟಕ ಸ್ಪರ್ಧೆ, ಕವಿ ಪರಮದೇವನ ಕುರಿತಾದ ರಾಜ್ಯಮಟ್ಟದ ಎರಡು ದಿನಗಳ ವಿಚಾರ ಸಂಕಿರಣ (೨೯,೩೦-೧೦-೧೯೮೩) ನಡೆಸಿದೆವು.

ಶ್ರೀ ಮಹಾಬಲೇಶ್ವರ ಭಟ್ಟರು ಜಮೀನು ಮನೆಗಳ ವ್ಯವಸ್ಥೆಯನ್ನು ಮಕ್ಕಳಿಗೆ ವಹಿಸಿ, ಮೊಮ್ಮಕ್ಕಳ ವಿದ್ಯಾಭ್ಯಾಸವೆಂಬ ನೆವದಿಂದ, ಸಾಗರದಲ್ಲಿ ಒಂದು ಮನೆಯನ್ನು ಕೊಂಡುಕೊಂಡು. (ಅದೇ ಈಗ ಸಾಗರ ತಾಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಾಲಯ) ನೆಲೆಸಿದರು. ಸಾಹಿತ್ಯ ಪರಿಷತ್ತಿನ ಹೊಸ ಕಾರ್ಯಕಾರಿ ಸಮಿತಿಯ ಆಯ್ಕೆ ನಡೆಯಬೇಕಾದ ೧೯೯೨ರ ಮೇ ತಿಂಗಳಲ್ಲಿ, ಶ್ರೀ ಭಟ್ಟರಿಗೇ ತಾಲೂಕು ಪ್ರತಿನಿಧಿತ್ವವನ್ನು ಒತ್ತಾಯಿಸಿ ಒಪ್ಪಿಸಿದೆ. ನಿಬಂಧನೆಯಂತೆ ಅಂದಿನಿಂದ ಅವರು ತಾಲೂಕು ಪರಿಷತ್ತಿನ ಅಧ್ಯಕ್ಷರು. ನನ್ನನ್ನು ಬಿಡದೇ ಕಾರ್ಯದರ್ಶಿಯನ್ನಾಗಿಸಿದರು. ಮೂರು ವರ್ಷದ ಬಳಿಕ ಅವರೇ ಸರ್ವಾನುಮತದ ಅಧ್ಯಕ್ಷರಾಗಿ, ನನ್ನ ಅಸಹಾಯಕತೆಯನ್ನು ಮನಗಂಡು, ಆದರೂ ತಪ್ಪಿಸಿಕೊಳ್ಳದಂತೆ ಕಾರ್ಯಕಾರಿ ಸಮಿತಿ ಸದಸ್ಯನನ್ನಾಗಿ ಮಾಡಿದ್ದಾರೆ. ಹೀಗೆ ಅವರ ಅಧ್ಯಕ್ಷತೆಯ ನಾಲ್ಕು ವರ್ಷಗಳಲ್ಲಿ ಸಾಗರ ತಾಲ್ಲೂಕಿನ ಜನತೆಗೆ ಅದ್ದೂರಿಯ ಕನ್ನಡ ಸಾಹಿತ್ಯ ಸಮಾರಾಧನೆ. ಇದು ಭಟ್ಟರ ಹೆಗ್ಗಳಿಕೆ. ೬೦ ಸಾವಿರ ರೂಪಾಯಿಗಳಿಗೂ ಹೆಚ್ಚಿನ ಕನ್ನಡ ಪುಸ್ತಕ ಪ್ರದರ್ಶನ- ಮಾರಾಟದ ರಾಜ್ಯಮಟ್ಟದ ದಾಖಲೆ ಇದಕ್ಕೊಂದು ಗರಿ!

ಅಚ್ಚುಕಟ್ಟಿನ ಭಟ್ಟರು ವೆಚ್ಚದ ಮುಖ ನೋಡುವವರಲ್ಲ. ಎಲ್ಲವೂ ಅತ್ಯುತ್ತಮವಾಗಿರಬೇಕು. ಅದಕ್ಕಾಗಿ ಶುಲ್ಕವಿಧಿಸಿ, ಸದಸ್ಯರ ಸಂಖ್ಯೆಯನ್ನು ಹೆಚ್ಚಿಸಿದ್ದಾರೆ. ಆಜೀವ ಸದಸ್ಯರನ್ನು ಮಾಡಿದ್ದಾರೆ. ದಾನಿಗಳು, ಪೋಷಕರೆಂಬ ಗೌರವ ನೀಡಿ, ಕನ್ನಡದ ತೇರನ್ನು ರಾಜ್ಯಕ್ಕೆ ಮಾದರಿಯಾಗುವಂತೆ ಅದ್ದೂರಿಯಾಗಿ ಓಡಿಸುತ್ತಿದ್ದಾರೆ. ಕನ್ನಡ ಪುಸ್ತಕಗಳ ಪ್ರದರ್ಶನ ಮಾರಾಟದ ಮೂಲಕ ಇತಿಹಾಸವನ್ನೇ ನಿರ್ಮಿಸಿದ್ದಾರೆ.

ಈ ಸಂಘಟನಾ ಚಾತುರ್ಯವನ್ನು ಎಲ್ಲರೂ ಕೊಂಡಾಡುತ್ತಾರೆ. ಮೂರು ವರ್ಷ ಅವರ ಜೊತೆಯಲ್ಲೇ ಅನೇಕ ಜನಸಾಮಾನ್ಯರ ಹಾಗೂ ಶ್ರೀಮಂತ ಮಾನ್ಯರ ಮನೆಗಳಿಗೆ ಹೋಗಿದ್ದೇನೆ. ಎಲ್ಲ ಕಡೆಯೂ ಮುಕ್ತ ಹಸ್ತದ ಸ್ವಾಗತ-ಸತ್ಕಾರ-ಅಭಿನಂದನೆ. ಉತ್ಸಾಹದ ಚಿಲುಮೆ. ಭಟ್ಟರು ಎಲ್ಲಿ ಹೋದರೂ ನಿರುತ್ಸಾಹವೆಂಬುದೇ ಇಲ್ಲ.

ಆದರೂ ಮಾಡಲಾರದ ಮುಂದಿಗೆ ಕೇಡು ಮಾತನಾಡುವ ನಾಲಿಗೆ ಇರುತ್ತದೆ.'ಭಟ್ಟರು ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದರು, ಮನೆಗೆ ಮಹಡಿಯೆಬ್ಬಿಸಿದರು, ಪುಸ್ತಕ ಮಾರಾಟ ಚೆನ್ನಾಗಿ ಆಯಿತು, ಕಾರುಕೊಂಡರು,' ಸಂಬಂಧವೇ ಇಲ್ಲದ ಅಬದ್ಧ ಕುಹಕ! ಅವರ ಸಾಗರದ ಸ್ವಂತ ಮನೆ ತಾಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಾಲಯ. ಪರಿಷತ್ತಿನಿಂದ ಬಹಳಷ್ಟು ಅನುದಾನ ಸರಕಾರಿ ಸರಬರಾಜಿನ ಹಾಗೆ ಬರುತ್ತದೆ. ಎಂಬ ಭ್ರಮೆ ಕೆಲವು ಅಜ್ಞರಿಗೆ. ಸರಕಾರಿ ಕೊಡುಗೆಯನ್ನು ಕಬಳಿಸುವ ಒಳಸಂಚನ್ನು ಅವರು ಎಲ್ಲೆಲ್ಲೂ ಕಾಣುತ್ತಾರೆ! ಅವರ ಅಜ್ಞಾನಕ್ಕೆ ಮರುಕ ಪಡೋಣ. ಶ್ರೀಭಟ್ಟರ ಮನೆಯ ದೂರವಾಣಿ ಸೌಲಭ್ಯ, ಕಾರಿನ ಅನುಕೂಲತೆ, ಕಾರ್ಯಕ್ರಮಗಳ ಸಾವಿರಾರು ರೂಪಾಯಿಗಳ ವೆಚ್ಚವನ್ನು ತಗ್ಗಿಸಿದೆ. ನಿಜಕ್ಕೂ ಪರಿಷತ್ತಿನ ಅದೆಷ್ಟೋ ವೆಚ್ಚವನ್ನು ಅವರು ಸ್ವತಃ ಭರಿಸಿದ್ದಾರೆ. ನಾನು ತಾಲ್ಲೂಕು ಪ್ರತಿನಿಧಿಯಾಗಿದ್ದಾಗ ರಾಜ್ಯಮಟ್ಟದ ದತ್ತಿನಿಧಿ ಕಾರ್ಯಕ್ರಮವೊಂದನ್ನು ನಡೆಸಿದ್ದೆ. ಕಾರ್ಯಕ್ರಮ ಆಗಿ ಎಷ್ಟೋ ತಿಂಗಳನಂತರ ಸಿಗುವ ೫೦೦ ರೂಪಾಯಿಗಳ ಅನುದಾನ ಯಾರ ಕಿಸೆಗೆ ( ಮುಂಚಿತವಾಗಿಯೇ ) ಹೋಯಿತು ? ಎಂದು ಪತ್ರಿಕೆಗಳಲ್ಲಿ ಪ್ರಶ್ನಿಸಿದವರಿದ್ದರು. ಇಂಥಾ ಅಪಸ್ವರಗಳನ್ನು ಅಲಕ್ಷಿಸುವುದೇ ಸೂಕ್ತ. ಕಾಮಾಲೆ ಕಣ್ಣಿಗೆ ಹಳದಿಯೇ ಕಾಣುವುದು. ಶ್ರೀ ಭಟ್ಟರು ಕ್ರಮಬದ್ಧವಾಗಿ ಎಲ್ಲರ ಮುಂದಿಡುವ ಲೆಕ್ಕ ಪತ್ರ ಎಂಥಹವರ ಕಣ್ಣಲ್ಲೂ ಸಮಾಧಾನ - ಮೆಚ್ಚುಗೆಯನ್ನು ಸೂಚಿಸುತ್ತದೆ. ದೂರವಾಣಿ- ಕಾರು-ಭಾರ ಪರಿಷತ್ತಿನ ಮೇಲೆ ಇರುವುದಿಲ್ಲ. ಜುಲೈ ೧೯೯೫ರಲ್ಲಿ ಸಾಗರ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿದ 'ಮೂರು ವರುಷಗಳು' ಕಿರು ಹೊತ್ತಿಗೆ, ತಾಲೂಕಿನ ಕವಿಗಳ ಕವನ ಸಂಕಲನ 'ಕಾವ್ಯ ಸಾಗರ' ಇವು ಶ್ರೀ ಮಹಾಬಲೇಶ್ವರ ಭಟ್ಟರ ಉದಾರ ವ್ಯಕ್ತಿತ್ವ ಅಪಾರ ಕರ್ತೃತ್ವಗಳಿಗೆ ಪ್ರತ್ಯಕ್ಷ ಪ್ರಮಾಣವಾಗಿದೆ.

'ಸಾಹಿತ್ಯ ಶಿಲ್ಪಿಗಳು ಭಾಗ ೧ ಮತ್ತು ೨ ' ಎಂಬ ಎರಡು ಪುಸ್ತಕಗಳಲ್ಲಿ ಶ್ರೀ ಮಹಾಬಲೇಶ್ವರ ಭಟ್ಟರು ಕನ್ನಡದ ೫೦ ಸಾಹಿತ್ಯ ನಿರ್ಮಾಪಕರನ್ನು ಪರಿಚಯಿಸಿದ್ದಾರೆ. 'ಪ್ರಪಂಚ' ವಾರ ಪತ್ರಿಕೆಯಲ್ಲಿ ಕನ್ನಡ ಕುಲದೀಪಕರು' ಎಂಬ ಲೇಖನಮಾಲೆ ಪ್ರಕಟವಾಗಿ, ಅದೇ ಹೆಸರಿನ ಪುಸ್ತಕವನ್ನು ಬೆಂಗಳೂರಿನ ಹೇಮಂತ

ಸಾಹಿತ್ಯದವರು, ಸಾಗರದಲ್ಲಿ ಶ್ರೀ ಭಟ್ಟರ ೫೦ನೇ ಹುಟ್ಟುಹಬ್ಬದ ಪ್ರಯುಕ್ತ ನಡೆದ ಸನ್ಮಾನ ಸಮಾರಂಭದಲ್ಲಿ ಪ್ರಕಟಿಸಿದ್ದಾರೆ. 'ಕವಿ ಕವಿಗೆ ಮುನಿವ' ನೆನ್ನುವುದು ಕನ್ನಡದಲ್ಲಷ್ಟೇ ಅಲ್ಲ; ಎಲ್ಲಾ ಭಾಷೆಗಳಲ್ಲೂ ಇದ್ದದ್ದೇ. ದೂರದ ಗಣ್ಯರನ್ನು ಗೌರವಿಸುವವರು ಹತ್ತಿರದವರನ್ನು ಪುರಸ್ಕರಿಸುವುದಿಲ್ಲ. ಆದರೆ, ಶ್ರೀ ಭಟ್ಟರು- ಪರಗುಣ ಪರಮಾಣೂನ್ ಪರ್ವತೀಕೃತ್ಯ ನಿತ್ಯಂ ನಿಜ ಹೃದಿವಿಕಸಂತಃ ಸಂತಿ ಸಂತಃ ಕಿಯಂತ ? '(ಇತರರ ಪರಮಾಣುವಿನಷ್ಟು ಸೂಕ್ಷ್ಮ ಗುಣಗಳನ್ನು ಪರ್ವತದಷ್ಟು ದೊಡ್ಡದಾಗಿ ಮಾಡಿ ತಮ್ಮ ದೊಡ್ಡ ಮನಸ್ಸಿನಲ್ಲಿ ಸಂತೋಷದಿಂದ ಅರಳುವ ಸಜ್ಜನರು ಎಷ್ಟುಮಂದಿ ಇದ್ದಾರೆ?) ಎಂಬ ಹೃದಯ ವೈಶಾಲ್ಯದ ಸಜ್ಜನರು. ಅವರು ಹೊಸದಾಗಿ ಬರೆದವರನ್ನು ಹುರಿದುಂಬಿಸುತ್ತಾರೆ. ನನ್ನ ಮೂರು ಪುಸ್ತಕಗಳನ್ನು ತಮ್ಮ ಜಲಂಧರ ಪ್ರಕಟನಾಲಯದಿಂದ ಪ್ರಕಟಿಸಿದ್ದಾರೆ. ಅವರ ಜಲಂಧರ ಪ್ರಕಟನಾಲಯದ ಮೂಲಕ ಮೊದಲ ಪುಸ್ತಕ ಪ್ರಕಟವಾದವರು ಈಗ ಶ್ರೇಷ್ಠ ಲೇಖಕರಾಗಿದ್ದಾರೆ. ಪ್ರಶಸ್ತಿ ಪಡೆದವರಿದ್ದಾರೆ. (ಉದಾ : ನಾ ಡಿಸೋಜ, ಶ್ರೀನಿವಾಸ ಉಡುಪ) ಹಲವರು ಸ್ಥಾನಮಾನಗಳನ್ನು ಪಡೆದ ಗಣ್ಯ ಲೇಖಕರಾಗಿದ್ದಾರೆ. ಪ್ರಸಿದ್ಧಿಗೆ ಕಾರಣಾಂತರದಿಂದ ಬರಲಾಗದವರನ್ನು ತಮ್ಮ ಲೇಖನಗಳ ಮೂಲಕ ಬೆಳಕಿಗೆ ತಂದು ಪರಿಚಯಿಸಿದ್ದಾರೆ.

ಕನ್ನಡದ ಮಂದಿಯನ್ನು ಅಭಿಮಾನ ಶೂನ್ಯರೆಂದು ಕೆಲ ಕನ್ನಡಾಭಿಮಾನಿಗಳು ಬರೆಯುವುದುಂಟು. ಕನ್ನಡಿಗರ ಔದಾರ್ಯವನ್ನು ದೌರ್ಬಲ್ಯವೆನ್ನುವವರೂ ಉಂಟು. ಕನ್ನಡಮನೆ ಮಾತಿನವರ ಪರಭಾಷಾ - ಪರ-ಸಂಸ್ಕೃತಿ ಮೋಹವನ್ನು ಮೂದಲಿಸುತ್ತಾರೆ. ಕನ್ನಡದ ಸಾಹಿತಿಗಳಲ್ಲೇ ತಮ್ಮದಲ್ಲದ ಸಾಹಿತ್ಯ ಪ್ರಕಾರದ ಬಗ್ಗೆ ಅಲಕ್ಷ್ಯಇದೆ. ಹಳೆಯ ಸಾಹಿತ್ಯದ ಬಗ್ಗೆ ಅಜ್ಞಾನದ ಅವಜ್ಞೆಯೂ ಇದೆ. ಶ್ರೀ ಮಹಾಬಲೇಶ್ವರ ಭಟ್ಟರಿಗೆ ಎಲ್ಲ ಬಗೆಯ ಸಾಹಿತ್ಯ ಪ್ರಕಾರಗಳೂ ಇಷ್ಟವೇ. ಪ್ರಾದೇಶಿಕ ಅಂತರವನ್ನು ಅವರು ಕಂಡವರಲ್ಲ. ಸಂಗೀತ, ಹರಿಕಥೆ, ಪ್ರವಚನ, ಗಮಕ, ನೃತ್ಯ, ನಾಟಕ ಯಕ್ಷಗಾನ ಎಲ್ಲವನ್ನೂ ಅವರು ಗೌರವಿಸುತ್ತಾರೆ. ವೇಳೆಯಿದ್ದರೆ ಸಹೃದಯರಾಗಿ ಭಾಗವಹಿಸುತ್ತಾರೆ. ಒಳ್ಳೆಯದಕ್ಕೆ ಆನಂದಿಸುತ್ತಾರೆ. ತಮಗೆ ಹಿಡಿಸದಿದ್ದದ್ದನ್ನು ಹಳಿಯುವುದಿಲ್ಲ. 'ಗುಣದೋಷೌಬುಧೋ ಗೃಹ್ಣನ್ ಇಂದು ಕ್ಷೇಡಾವಿವೇಶ್ವರಃ। ಶಿರಸಾ ಶ್ಲಾಘತೇ ಪೂರ್ವಂ ಪರಂ ಕಂಠೇ ನಿಯಚ್ಛತಿ ॥'' (ಗುಣದೋಷಗಳನ್ನು ಜ್ಞಾನಿಯು, ಚಂದ್ರನನ್ನು ಮತ್ತು ವಿಷವನ್ನು ಶಿವನು ಸ್ವೀಕರಿಸಿದಂತೆ ಸಮನಾಗಿ ತೆಗೆದುಕೊಳ್ಳುತ್ತಾನೆ. ಚಂದ್ರನಂತಹ ಗುಣವನ್ನು ತಲೆಯ ಮೇಲಿಟ್ಟು ಕೊಂಡಾಡುತ್ತಾನೆ. ವಿಷಯದಂತೆ ದೋಷವನ್ನು ತನ್ನ ಗಂಟಲಲ್ಲೇ ಇಟ್ಟುಕೊಳ್ಳುತ್ತಾನೆ. ಉಗುಳಿದರೆ ಲೋಕಕ್ಕೆ - ನುಂಗಿದರೆ ತನಗೆ ಹಾನಿಯಲ್ಲವೇ?) ತಾಳಗುಪ್ಪದಲ್ಲಿ ನಡೆಯುವ ಅಖಿಲ ಕರ್ನಾಟಕ ಸಮಗ್ರ ಯಕ್ಷಗಾನ ಸಮ್ಮೇಳನದ

ಸ್ವಾಗತ ಸಮಿತಿ ಕಾರ್ಯಾಧ್ಯಕ್ಷರು ಶ್ರೀ ಮಹಾಬಲೇಶ್ವರ ಭಟ್ಟರು. ಸಾಗರದಲ್ಲೇ ಇರುವ ಇತರ ಸಾಂಸ್ಕೃತಿಕ ಸಂಘಗಳಲ್ಲೂ ಅವರು ಭಾಗಿಗಳು. ೧೯೮೦ರಿಂದ ಮಲೆನಾಡು ಅಭಿವೃದ್ಧಿ ಪ್ರತಿಷ್ಠಾನದ ಉಪಾಧ್ಯಕ್ಷರು. ಈ ಸಂಸ್ಥೆಯ ಬೆಳ್ಳಿ ಹಬ್ಬದ ಕಾರ್ಯಾಧ್ಯಕ್ಷರಾಗಿ (೧೯೮೮) ಅವರ ನೇತೃತ್ವ ಉಲ್ಲೇಖನಾರ್ಹ.

ಮೂರು ಬಾರಿ ಸಾಗರ ಪುರಸಭೆಯ ಸದಸ್ಯರಾಗಿ, ಒಂಭತ್ತು ವರ್ಷ ನಗರಾಡಳಿತದಲ್ಲಿ ತೊಡಗಿಸಿಕೊಂಡಿದ್ದಾರೆ. ಸಾಗರ ತಾಲೂಕು ಕಾಂಗ್ರೆಸ್ಸಿನ ಪ್ರಧಾನ ಕಾರ್ಯದರ್ಶಿಯಾಗಿ, ಅಧ್ಯಕ್ಷರಾಗಿ ಐದು ವರ್ಷ, ಶಿವಮೊಗ್ಗ ಜಿಲ್ಲಾ ಕಾಂಗ್ರೆಸ್ಸಿನ ಉಪಾಧ್ಯಕ್ಷರಾಗಿ ಆರು ವರ್ಷ, ಪಕ್ಷ ನಿಷ್ಠೆಯಿಂದ ಒಟ್ಟು ೪೩ ವರ್ಷ ಸಕ್ರಿಯವಾಗಿ ದುಡಿದವರು. ಈಚೆಗೆ ಪಕ್ಷಾತೀತರು. ಮಲೆನಾಡು ಅಡಿಕೆ ಮಾರಾಟ ಸಹಕಾರ ಸಂಘದ ನಿರ್ದೇಶಕರಾಗಿ ಸತತ ೨೧ ವರ್ಷ, ಉಪಾಧ್ಯಕ್ಷರಾಗಿ ಆರುವರ್ಷ, ಸಾಗರ ತಾಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘದ ಅಧ್ಯಕ್ಷರಾಗಿ ಆರು ವರ್ಷ, ಸಾಗರ ಕೃಷಿ ಭೂ ಅಭಿವೃದ್ಧಿ ಬ್ಯಾಂಕಿನ ಅಧ್ಯಕ್ಷರಾಗಿ ಐದು ವರ್ಷ ಸೇವೆ ಸಲ್ಲಿಸಿದ ಶ್ರೀ ಭಟ್ಟರು ಭಾರತೀಯ ವಿದ್ಯಾಭವನ ಶಿವಮೊಗ್ಗ ಕೇಂದ್ರದ ಉಪಾಧ್ಯಕ್ಷರಾಗಿದ್ದಾರೆ. ಇನ್ನು ಅನೇಕ ಸಂಘ-ಸಂಸ್ಥೆಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿರುವ ಶ್ರೀ ಮಹಾಬಲೇಶ್ವರ ಭಟ್ಟರದು ಬಹುಮುಖ ವ್ಯಕ್ತಿತ್ವ. ಹೆಸರಿಗೆ ತಕ್ಕಂತೆ ಎಲ್ಲದರಲ್ಲಿಯೂ 'ಮಹಾಬಲದ ಈಶ್ವರರು.' ಹತ್ತು ಸಮಸ್ತರಿಗೆ ಹಿತವಾಗುವ ಯಾವುದೇ ಕಾರ್ಯದಲ್ಲಿಯೂ ಅವರು ಮುಂದಿರುತ್ತಾರೆ. ನಾನಾ ಕ್ಷೇತ್ರಗಳಲ್ಲಿ ವ್ಯಸ್ತರಾಗಿದ್ದರೂ, ಪ್ರತಿಕ್ಷಣವೂ ಪ್ರಸನ್ನ ಹೃದಯದ, ನಗುಮೊಗದ, ಬಂದವರನ್ನು ವಿರಾಮವಾಗಿ ಭೇದವಿಲ್ಲದೆ ಮಾತನಾಡಿಸುವ, ಕಾಲೋಚಿತವಾಗಿ ಸತ್ಕರಿಸುವ, ಯಾವ ಚಿಂತೆಯನ್ನೂ ಹಚ್ಚಿಕೊಳ್ಳದ ಆದರೆ ಎಲ್ಲರಿಗೂ ಬೇಕಾದ 'ಚಿಂತಾಮಣಿ' ಯಾಗಿದ್ದಾರೆ.

'ಒಬ್ಬ ವ್ಯಕ್ತಿ ೭೦ ವರ್ಷಗಳನ್ನು ಕಳೆಯುವುದು ಬಹಳ ಸುಲಭ. ಶಕ್ತಿ ಇದ್ದರೆ ನೂರಿಪ್ಪತ್ತು ವರ್ಷಗಳನ್ನು ಬೇಕಾದರೂ ಕಳೆಯಬಹುದು. ಆದರೆ, ಕಳೆದ ವರ್ಷಗಳು ಸಾರ್ಥಕವಾದ ಜೀವನವಾಗಬೇಕು. ಅದು ಇನ್ನೊಬ್ಬರಿಗೆ ಆದರ್ಶವಾಗಿರಬೇಕು. ಪಟ್ಟಶ್ರಮ, ನೊಂದಬೇನೆ, ಇನ್ನೊಬ್ಬರ ಬಾಯಿಂದ ಅಂತಃಕರಣದ ಮಾತುಗಳನ್ನು ಆಡಿಸುವಂತಾಗಬೇಕು.' ಇವು ಶ್ರೀ ಮಹಾಬಲೇಶ್ವರ ಭಟ್ಟರ ಮಾತುಗಳು. ೧೯೭೯ರಲ್ಲಿಯೇ ಹುಬ್ಬಳ್ಳಿಯ 'ಪ್ರಪಂಚ' ಪತ್ರಿಕೆಯಲ್ಲಿ ಪ್ರಕಟವಾದವು. ಡಾ. ಶಿವರಾಮ ಕಾರಂತರ ಬಗ್ಗೆ ಬರೆದುವು. ಡಾ. ಶಿವರಾಮ ಕಾರಂತರಿಗೆ ೧೯೭೮ರಲ್ಲಿ ಜ್ಞಾನಪೀಠ ಪ್ರಶಸ್ತಿ ಬಂದಾಗ, ಆ ವಿಚಾರವನ್ನು ಸೇರಿಸಿ 'ಕನ್ನಡ ಕುಲದೀಪಕರು' ಪುಸ್ತಕದಲ್ಲಿ ಪ್ರಕಟಿಸಿದ್ದಾರೆ. ಶ್ರೀ ಭಟ್ಟರ ಅಂತರಂಗವನ್ನು - ಧ್ಯೇಯೋದ್ದೇಶಗಳನ್ನು ಪರಿಚಯಿಸುವ ಪದಪುಂಜಗಳಿವು. ಒಂದೊಂದು ಪದವನ್ನೂ ಅನಾಯಾಸವಾಗಿ

ಆಯ್ದು ಪೋಣಿಸಿದ್ದಾರೆ. ಅದೇ ಪುಸ್ತಕದಲ್ಲಿ 'ಪ್ರಪಂಚ' ಪತ್ರಿಕೆ, ಶ್ರೀ ಭಟ್ಟರನ್ನು ಪರಿಚಯಿಸಿದ ಮಾತುಗಳೂ ಉಲ್ಲೇಖಾರ್ಹ. 'ಸಾಗರದ ಶ್ರೀ ಟಿ. ಮಹಾಬಲೇಶ್ವರ ಭಟ್ಟರು ಸುಸಂಸ್ಕೃತ ಹವ್ಯಾಸವುಳ್ಳ ಸಂಘ ಜೀವಿಗಳು, ಸಾಹಿತಿಗಳ ಸ್ನೇಹಿತರು, ಸಾರ್ವಜನಿಕ ಜೀವನ ಸುಂದರವಾಗಬೇಕೆನ್ನುವ ಹಂಬಲವುಳ್ಳವರು. ಒಳ್ಳೆಯದು ನೂರು ಮೈಲಿನ ಮೇಲಿದ್ದರೂ ಅದು ತಮ್ಮದೇ ಎನ್ನುವಂತೆ ಮುಂದೆ ಹೋಗಿ ಸ್ವಾಗತಿಸತಕ್ಕವರು. ಸಾರ್ವಜನಿಕ ಜೀವನದ ಇಂತಹ ಹುಚ್ಚು ಹಚ್ಚಿಕೊಂಡ ಜನರಿಂದಲೇ ಒಳ್ಳೆಯ ಕಾರ್ಯಗಳಿಗೆ ಚಾಲನೆ ದೊರೆಯುತ್ತಿದೆ. ಮಹಾಬಲೇಶ್ವರ ಭಟ್ಟರು ಕನ್ನಡ, ಕಾವ್ಯ, ಕರ್ನಾಟಕ ಎಂದು ಅವುಗಳ ಉತ್ಕರ್ಷಕ್ಕಾಗಿ ಸಾಗರ ಪ್ರಾಂತ್ಯದಲ್ಲೆಲ್ಲಾ ಒಳ್ಳೆಯ ವಾತಾವರಣವನ್ನು ನಿರ್ಮಿಸಿದ್ದಾರೆ. ತಮ್ಮ ಸದಭಿರುಚಿಯನ್ನು ಸುತ್ತಲೆಲ್ಲಾ ಹಬ್ಬಿಸಿ ಸಾಹಿತಿಗಳಿಗೆಲ್ಲ ಅವರು ಸಾಗರ ನಗರವನ್ನು ತಾಯಿಮನೆ ಎನಿಸುವಂತೆ ಮಾಡಿದ್ದಾರೆ. '(೨೬.೧೦.೬೯) ಅವರು ತಮ್ಮ ತಾಲೂಕಿನ ಜನರಿಗೆ ಒಬ್ಬ ಶಾಸಕನಿಗಿಂತಲೂ ಹೆಚ್ಚು ಕೆಲಸಮಾಡಿಕೊಟ್ಟಿದ್ದಾರೆ. ಭಟ್ಟರಲ್ಲಿ ಎಲ್ಲರನ್ನು ಸಂಗಡ ಕರೆದುಕೊಂಡು ಹೋಗುವ, ಹಿಡಿದುದನ್ನು ಬಿಡದೇ ಸಾಧಿಸುವ ಸಾಮರ್ಥ್ಯ ಇದೆ.' (೨೩.೬.೭೪) ಸಾಗರ ತಾಲೂಕು ಕನ್ನಡ ಸಾಹಿತ್ಯ ಪರಿಷತ್ತಿಗೆ ಸಾಗರಕ್ಕೆ ಅತ್ಯಗತ್ಯವಾದ ವಿಶಾಲ ಸಭಾಂಗಣವನ್ನೊಳಗೊಂಡ ಸ್ವಂತ ಕಟ್ಟಡವೊಂದನ್ನು ಶ್ರೀ ಭಟ್ಟರು ಸದ್ಯದಲ್ಲಿ ತಮ್ಮ ಅಧ್ಯಕ್ಷತೆಯ ಅವಧಿಯಲ್ಲಿಯೇ ಕಟ್ಟಿಸುವವರಿದ್ದಾರೆ. ಈ ಬಗ್ಗೆ ಉಚಿತ ನಿವೇಶನವೊಂದನ್ನು ಕೊಡುವಂತೆ, ಮಾನ್ಯ ಜಿಲ್ಲಾಧಿಕಾರಿಗಳವರು ಸಾಗರ ಪುರಸಭೆಗೆ ಸೂಚಿಸಿದ್ದಾರೆ.

ಶ್ರೀ ಭಟ್ಟರನ್ನು ಬಲ್ಲವರೆಲ್ಲರೂ ವ್ಯಕ್ತಪಡಿಸುವ ಅಭಿಪ್ರಾಯವನ್ನು 'ಪ್ರಪಂಚ' ಬರೆದಿದೆ. ನಾನು ಬರೆದರೆ, ಉಪಕೃತನು ಮಾಡಿದ ಮುಖಸ್ತುತಿ ಎಂದು ತಪ್ಪಾಗಿ ಭಾವಿಸಿದರೆ ? ಅದಕ್ಕೆ 'ಪ್ರಪಂಚ'ದ ಮಾತುಗಳನ್ನೇ ಆಯ್ದುಕೊಟ್ಟು ಅವರ ಎಪ್ಪತ್ತನೆ ಹುಟ್ಟು ಹಬ್ಬಕ್ಕೆ ಶುಭಕೋರುತ್ತೇನೆ. ಅವರೇ ಹೇಳಿದಂತೆ, ಅವರಿಗೆ-ಶಕ್ತಿಯಿದೆ; ನೂರಿಪ್ಪತ್ತು ವರ್ಷ ಬಾಳಲಿ. ಜನರಿಗೆ ಆಸಕ್ತಿಯಿದೆ. ಅವರು ಮಾರ್ಗದರ್ಶನ ಮಾಡಲಿ. ಜನ ಮನದ ಸಮ್ಮಾನ ಅನೇಕ ವರ್ಷಗಳಿಂದ ಅವರಿಗೆ ಸಲ್ಲುತ್ತಾ ಬಂದಿದೆ. ಒಟ್ಟು ಸಾಹಿತ್ಯವನ್ನು ಪುರಸ್ಕರಿಸುವ ಮಾದರಿಯಲ್ಲಿ ಅವರ ಸಾಹಿತ್ಯಸೇವೆಗೂ ಅತ್ಯುನ್ನತ ಪ್ರಶಸ್ತಿ, ಎಪ್ಪತ್ತರ ಸಮ್ಮಾನದ ಹೆಗ್ಗಳಿಕೆಯಾಗಲಿ. ಇದು ನನ್ನ ಹಾಗೂ ಎಲ್ಲರ ಹಾರ್ದಿಕ ಹಾರೈಕೆ.

# ನೂರು ಕಾಲ ಬಾಳಲಿ

– ಡಾ॥ ತೀ. ನಂ. ಶಂಕರನಾರಾಯಣ

ಸಾಗರದ ಶ್ರೀ ಟಿ. ಮಹಾಬಲೇಶ್ವರ ಭಟ್ಟರ ಬಗ್ಗೆ ನಾನು ಬಹಳ ಹಿಂದೆಯೇ ಕೇಳಿದ್ದೆ. ಅವರನ್ನು ಆಗಾಗ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಗಳಲ್ಲಿ, ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನಗಳಲ್ಲಿ ಹಾಗೂ ಇತರ ಸಾಂಸ್ಕೃತಿಕ ಸಮಾರಂಭಗಳಲ್ಲಿ ಭೇಟಿಯಾಗುತ್ತಿದ್ದೆ. ಆದರೆ ಅವರ ನಿಕಟ ಪರಿಚಯ ನನಗಾದುದು ಈಚಿನ ಮೂರು ವರ್ಷಗಳ ಕಾಲ ಶಿವಮೊಗ್ಗ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಸದಸ್ಯರುಗಳಾಗಿ ನಾವಿಬ್ಬರೂ ಒಟ್ಟಿಗೆ ಕೆಲಸ ಮಾಡಿದ ಸಂದರ್ಭದಲ್ಲಿ. ಆಗ ಶ್ರೀ ಬಳ್ಳಕೆರೆ ಹನುಮಂತಪ್ಪನವರು ಶಿವಮೊಗ್ಗ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದರು. ಆ ಸಂದರ್ಭಗಳಲ್ಲಿ ನಡೆಯುತ್ತಿದ್ದ ಸಭೆಗಳಲ್ಲಿ ಕಾರ್ಯಕ್ರಮಗಳನ್ನು ಯಾವ ರೀತಿಯಲ್ಲಿ ಯೋಜಿಸಬೇಕು ಎಂಬುದರ ಬಗ್ಗೆ ಚರ್ಚೆ ನಡೆಯುತ್ತಿತ್ತು. ಟಿ. ಮಹಾಬಲೇಶ್ವರ ಭಟ್ಟರು ತುಂಬಾ ಉಪಯುಕ್ತ ಸಲಹೆಗಳನ್ನು ನೀಡುತ್ತಿದ್ದುದು ಮಾತ್ರವಲ್ಲದೆ, ಅದನ್ನು ಕಾರ್ಯಗತಗೊಳಿಸಲು ಅಷ್ಟೇ ಉತ್ಸಾಹದಿಂದ ಮುಂದಾಗುತ್ತಿದ್ದರು. ಅವರ ವಿಚಾರಶೀಲತೆ, ಅದಮ್ಯವಾದ ಉತ್ಸಾಹ ಮತ್ತು ಅಪೂರ್ವವಾದ ಕರ್ತೃತ್ವ ಶಕ್ತಿ ಇವುಗಳನ್ನು ಕಣ್ಣಾರೆ ಕಂಡ ನನಗೆ ಅವರ ಬಗ್ಗೆ ಅಪಾರವಾದ ಗೌರವ ಮೂಡಿತು. ಅವರು ಸಾಗರ ತಾಲ್ಲೂಕಿನ ಕನ್ನಡ ಸಾಹಿತ್ಯಪರಿಷತ್ತಿನ ಅಧ್ಯಕ್ಷರಾಗಿದ್ದ ಕಾಲಾವಧಿಯಲ್ಲಿ ನಡೆದ ಸಾಹಿತ್ಯ ಮತ್ತು ಗಮಕ ಕಾರ್ಯಕ್ರಮಗಳು, ಸಾಹಿತಿಗಳಿಗೆ ಸನ್ಮಾನ, ವಿಚಾರಗೋಷ್ಠಿಗಳು, ಪ್ರಚಾರೋಪನ್ಯಾಸಗಳು ಮತ್ತಿತರ ಕಾರ್ಯಕ್ರಮಗಳ ವಿವರಗಳನ್ನೊಳಗೊಂಡ ಒಂದು ಪುಟ್ಟ ಪುಸ್ತಕವೇ ಈಚೆಗೆ ಪ್ರಕಟವಾಗಿದೆ. ಇದರಲ್ಲಿನ ವಿವರಗಳನ್ನೆಲ್ಲಾ ಓದುತ್ತಾ ಹೋದಂತೆಲ್ಲಾ ಇವರು ಒಂದು ತಾಲ್ಲೂಕಿನಲ್ಲಿ ಸಾಹಿತ್ಯ, ಸಾಂಸ್ಕೃತಿಕ ವಾತಾವರಣವನ್ನು ನಿರ್ಮಿಸುವುದರಲ್ಲಿ, ಉಳಿಸಿ ಬೆಳೆಸುವುದರಲ್ಲಿ ಎಂತಹ ಮಹತ್ವದ ಪಾತ್ರವನ್ನು ವಹಿಸಿದ್ದಾರೆ, ಪರಿಶ್ರಮಪಟ್ಟಿದ್ದಾರೆ ಎಂಬುದರ ಅರಿವಾಗುತ್ತದೆ ಅವರ ಬಗ್ಗೆ ಅಪಾರವಾದ ಗೌರವ ಭಾವ ಮೂಡುತ್ತದೆ. ಎಷ್ಟೋ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತುಗಳು ಮಾಡಬಹುದಾದ ಕೆಲಸವನ್ನು ಅವರು ತಾಲ್ಲೂಕು ಮಟ್ಟದಲ್ಲಿಯೇ ಮಾಡಿ ತೋರಿಸಿದ್ದಾರೆಂಬುದು ಆಶ್ಚರ್ಯವನ್ನುಂಟುಮಾಡುತ್ತದೆ.

ಈ ಮಟ್ಟದ ಸಾಧನೆಯನ್ನು ಮಾಡಬೇಕಾದರೆ ಕೇವಲ ಸಾಹಿತ್ಯಪ್ರೇಮ ಸಾಕಾಗುವುದಿಲ್ಲ; ಒಳ್ಳೆಯ ವ್ಯವಹಾರ ಜ್ಞಾನ, ಆಡಳಿತದ ಅನುಭವ, ಸಂಘಟನಾ ಚಾತುರ್ಯ, ಪ್ರೀತಿ ವಿಶ್ವಾಸಗಳಿಂದ ಜನರನ್ನು ಗೆಲ್ಲುವ ಗುಣ ಎಲ್ಲಾ ಬೇಕಾಗುತ್ತದೆ. ಇಂತಹ ಹಲವು ಹತ್ತುಗಳನ್ನು ಮೈಗೂಡಿಸಿಕೊಂಡಿರುವ ವಿಶಿಷ್ಟ ವ್ಯಕ್ತಿ ಇವರು.

ಇವರು ಜೀವನದಲ್ಲಿ ಸಾಗಿ ಬಂದ ರೀತಿಯನ್ನು ಗಮನಿಸಿದರೆ ಇವರು ಇಂಥ ವ್ಯಕ್ತಿತ್ವನ್ನು ಹೇಗೆ ಬೆಳಸಿಕೊಂಡರು ಎಂಬುದು ವ್ಯಕ್ತವಾಗುತ್ತದೆ. ಶ್ರೀ ಮಹಾಬಲೇಶ್ವರ ಭಟ್ಟರು ಸ್ವಾತಂತ್ರ್ಯ ಪೂರ್ವ ದಿನಗಳಲ್ಲಿ ತಮ್ಮ ವ್ಯಕ್ತಿತ್ವನ್ನು ರೂಪಿಸಿಕೊಂಡರು. ಎಸ್.ಎಸ್.ಎಲ್.ಸಿ. ಯನ್ನು ದಾಟಿ ಅವರ ವಿದ್ಯಾಭ್ಯಾಸ ಮುಂದುವರೆಯದಿದ್ದರೂಅವರು ಸ್ವಾತಂತ್ರ್ಯ ಚಳುವಳಿಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಗಾಂಧೀಜಿಯವರ ಆದರ್ಶಗಳಿಗೆ ಮನಸೋತರು. ನಾಲ್ಕು ದಶಕಗಳಿಗೂ ಹೆಚ್ಚಿನ ಕಾಲಾವಧಿಯಲ್ಲಿ ಅವರು ಕಾಂಗ್ರೆಸ್ಸಿನ ಸದಸ್ಯರಾಗಿಯೇ ಮುಂದುವರೆದು, ಈಚೆಗೆ ಸಕ್ರಿಯ ರಾಜಕಾರಣದಿಂದ ದೂರವಾಗಿದ್ದಾರೆ. ಪಕ್ಷಾಂತರ ಮಾಡುವುದೇ ಮೌಲ್ಯವಾಗಿರುವ ಇಂದಿನ ದಿನಗಳಲ್ಲಿ ಇವರು ಬಹು ದೀರ್ಘಕಾಲ ಒಂದೇ ಪಕ್ಷದಲ್ಲಿಯೇ ನಿಷ್ಠರಾಗಿ ಉಳಿದಿದ್ದರೆಂಬುದು ಆಶ್ಚರ್ಯದ ಸಂಗತಿ ಎನಿಸುತ್ತದೆ. ಈ ನಾಲ್ಕು ದಶಕಗಳ ಕಾಲಾವಧಿಯಲ್ಲಿ ಸಾಗರ ಪುರಸಭೆಯ ಸದಸ್ಯರಾಗಿ, ತಾಲ್ಲೂಕು ಕಾಂಗ್ರೆಸ್ ಪಕ್ಷದ ಪ್ರಧಾನ ಕಾರ್ಯದರ್ಶಿಯಾಗಿ, ಅಧ್ಯಕ್ಷರಾಗಿ, ಶಿವಮೊಗ್ಗ ಕಾಂಗ್ರೆಸ್ ಸಮಿತಿಯ ಉಪಾಧ್ಯಕ್ಷರಾಗಿ, ಶರಾವತಿ ನೀರು ಮುಳುಗಡೆ ಪುನರ್ವಸತಿ ರಾಜ್ಯ ಸಮಿತಿಯ ಸದಸ್ಯರಾಗಿ, ಮಲೆನಾಡು ಅಭಿವೃದ್ಧಿ ಪ್ರತಿಷ್ಠಾನದ ಉಪಾಧ್ಯಕ್ಷರಾಗಿ ಹಾಗೂ ಇನ್ನೂ ಹಲವಾರು ಅಧಿಕಾರದ ಜಾಗಗಳಲ್ಲಿದ್ದಾಗ ತಾಲ್ಲೂಕಿನ ಮತ್ತು ಜಿಲ್ಲೆಯ ಅಭಿವೃದ್ಧಿಗೆ ಪ್ರಾಮಾಣಿಕವಾಗಿ ದುಡಿದಿದ್ದಾರೆ. ಅವರಿ ಅಧಿಕಾರದಿಂದ ಬೀಗಲಿಲ್ಲ. ರಾಜಕೀಯದಲ್ಲಿ ಕೆಲಸ ಮಾಡುವುದು ವೈಯಕ್ತಿಕವಾಗಿ ಲಾಭ ಮಾಡಿಕೊಳ್ಳುವುದಕ್ಕಲ್ಲ; ಜನರಿಗೆ ನೆರವಾಗುವುದಕ್ಕಾಗಿ ,ಎಂಬ ಸ್ವಾತಂತ್ರ್ಯ ಪೂರ್ವದ ಆದರ್ಶವನ್ನು ಅವರು ಪಾಲಿಸುತ್ತಾ ಬಂದಿದ್ದಾರೆ. ಹೀಗಾಗಿ ಅವರು ಅಧಿಕಾರ ಬಿಟ್ಟಮೇಲೂ ಜನರ ಪ್ರೀತಿ ವಿಶ್ವಾಸಗಳನ್ನು ಉಳಿಸಿಕೊಂಡಿದ್ದಾರೆ.

ಇವರು ಸ್ವತಃ ಅಡಕೆ ಬೆಳೆಗಾರರಾಗಿದ್ದು, ಅದರಲ್ಲಿ ವಿಶೇಷ ಪ್ರಗತಿಯನ್ನು ಸಾಧಿಸಿದವರು. ತಮ್ಮ ತಾಲ್ಲೂಕಿನ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘದ ಅಧ್ಯಕ್ಷರಾಗಿ ಹಾಗೂ ಸಾಗರ ಕೃಷಿ ಭೂ ಅಭಿವೃದ್ಧಿ ಬ್ಯಾಂಕಿನ ಅಧ್ಯಕ್ಷರಾಗಿ ಸಾಗರ ತಾಲ್ಲೂಕಿನ ವ್ಯವಸಾಯ ಮತ್ತು ವಾಣಿಜ್ಯ ಕ್ಷೇತ್ರಕ್ಕೂ ಮೌಲಿಕ ಸೇವೆ ಸಲ್ಲಿಸಿದ್ದಾರೆ.

ಮಹಾಬಲೇಶ್ವರ ಭಟ್ಟರ ವ್ಯಕ್ತಿತ್ವಕ್ಕೆ ಗರಿ ಮೂಡಿಸಿರುವುದು ಸಾಹಿತ್ಯಕ್ಷೇತ್ರಕ್ಕೆ ಅವರು ಸಲ್ಲಿಸಿರುವ ಸೇವೆಯಿಂದ. ಅವರು ಸ್ವತಃ ಸಾಹಿತಿಗಳು, ಆಕಾಶವಾಣಿಯಲ್ಲಿ ಸಾಹಿತ್ಯ ಸಂಬಂಧವಾದ ಅನೇಕ ಕಾರ್ಯಕ್ರಮಗಳನ್ನು ನೀಡಿದ್ದಾರೆ. ಶಿವಮೊಗ್ಗದ ಜನವಾರ್ತೆ ಪತ್ರಿಕೆಯಲ್ಲಿ 'ನಿಮ್ಮೊಡನೆ' ಎಂಬ ಅಂಕಣದಲ್ಲಿ ಅನೇಕ ವಿಷಯಗಳನ್ನು ಕುರಿತು ಬರಹಗಳನ್ನು ಪ್ರಕಟಿಸುತ್ತಿದ್ದಾರೆ. ಹಾಗೆಯೇ ಬೆಂಗಳೂರಿನ ಸಂಯುಕ್ತ ಕರ್ನಾಟಕ ಪತ್ರಿಕೆಗೆ 'ಬೇವು ಬೆಲ್ಲ' ಎಂಬ ಅಂಕಣದಲ್ಲಿ ಬರೆಯುತ್ತಿದ್ದಾರೆ. ಹಾಗೂ ಓದುಗರ ಪ್ರಶಂಸೆಗೆ ಪಾತ್ರರಾಗಿದ್ದಾರೆ. ಇನ್ನೂರಕ್ಕೂ ಹೆಚ್ಚಿನ ಲೇಖನಗಳನ್ನು ದಿನಪತ್ರಿಕೆ, ವಾರಪತ್ರಿಕೆ ಹಾಗೂ ಮಾಸಪತ್ರಿಕೆಗಳಲ್ಲಿ ಪ್ರಕಟಿಸಿದ್ದಾರೆ. ಸಾಹಿತ್ಯ ಕೇವಲ ವಿದ್ವಾಂಸರಿಗೆ ಮಾತ್ರವಲ್ಲ, ಜನ ಸಾಮಾನ್ಯರಿಗೂ ತಲುಪಬೇಕು ಎಂಬ ಆಶಯ ಇವರದ್ದು. ಸ್ವತಃ ಕವಿಗಳೂ, ಕಾದಂಬರಿಕಾರರೂ ಆಗಿರುವ ಇವರ ನವೋದಯ ಕಾವ್ಯದ ಪ್ರಭಾವಕ್ಕೆ ಒಳಗಾಗಿ ಸುಂದರವಾದ ಕವಿತೆಗಳನ್ನು ಬರೆದಿದ್ದಾರೆ. ಪ್ರಕೃತಿಪ್ರೇಮ, ದೇಶಾಭಿಮಾನ, ಹಾಗೂ ಭಾಷಾಭಿಮಾನ, ಈ ಕವಿತೆಗಳಲ್ಲಿ ಎದ್ದು ಕಾಣುತ್ತದೆ. ಎರಡು ಭಾಗಗಳಲ್ಲಿ ಪ್ರಕಟವಾಗಿರುವ 'ಸಾಹಿತ್ಯ ಶಿಲ್ಪಿಗಳು' ಎಂಬ ಕೃತಿಗಳಲ್ಲಿಯೂ 'ಕನ್ನಡ ಕುಲ ದೀಪಕರು' ಎಂಬ ಕೃತಿಯಲ್ಲಿಯೂ, ತಾವು ನಿಕಟ ಸಂಪರ್ಕ ಹೊಂದಿದ್ದ ಅನೇಕ ಹಿರಿಯ ಸಾಹಿತಿಗಳ ಪರಿಚಯ ಮಾಡಿಕೊಟ್ಟಿದ್ದಾರೆ. ಇವರು ಬರೆದಿರುವ ಮೂರು ಕಾದಂಬರಿಗಳಲ್ಲಿ ಮುಖ್ಯವಾಗಿ ಸಾಮಾಜಿಕ ಅನ್ಯಾಯ, ಶೋಷಣೆಗಳ ವಿರುದ್ಧ ಪ್ರತಿಭಟನೆ ಹಾಗೂ ಮಾನವೀಯ ಮೌಲ್ಯಗಳ ಚಿತ್ರಣಕಂಡು ಬರುತ್ತದೆ. ಸದ್ಯ ಅಚ್ಚಿನಲ್ಲಿರುವ ಅವರ ಜೀವನ ಚರಿತ್ರೆ ಕುತೂಹಲಕರ ವಾಗಿರುವುದರಲ್ಲಿ ಸಂಶಯವಿಲ್ಲ.

ಸಾಗರದಿಂದ ಜೋಗಕ್ಕೆ ಹೋಗುವ ಹಾದಿಯಲ್ಲಿಲಾಲ್ ಬಹದ್ದೂರ್ ಕಾಲೇಜಿನ ಕಟ್ಟಡ ಎದ್ದು ಕಾಣುತ್ತದೆ. ವಿಶಾಲವಾದ ಪ್ರದೇಶದಲ್ಲಿಗಿಡಮರಗಳಿಂದ ಕೂಡಿದ, ಈ ಸುಂದರವಾದ ಪರಿಸರದಲ್ಲಿ ಎದ್ದು ನಿಂತಿರುವ ಈ ಕಾಲೇಜಿನ ಸುಂದರ ಕಟ್ಟಡ, ಸೊಗಸಾದ ಗ್ರಂಥಾಲಯ, ಪ್ರಯೋಗಾಲಯಗಳು, ಒಳ್ಳೆಯ ಅಧ್ಯಾಪಕರುಗಳಿಂದ ಹಾಗೂ ವಿದ್ಯಾರ್ಥಿಗಳಿಂದ ಕೂಡಿದೆ. ಇಂಥ ಕಾಲೇಜನ್ನು ಕಂಡಾಗ ಬಹಳ ಸಂತೋಷವಾಗುತ್ತದೆ. ಕುವೆಂಪು ವಿಶ್ವವಿದ್ಯಾಲಯದ ಹೆಮ್ಮೆಯ ಕಾಲೇಜುಗಳಲ್ಲಿ ಈ ಕಾಲೇಜು ಮುಖ್ಯವಾದುದು. ಇಂತಹ ಉನ್ನತ ಮಟ್ಟದ ಕಾಲೇಜನ್ನು ರೂಪಿಸಿದ ಪ್ರಮುಖರಲ್ಲಿ ಭಟ್ಟರೂ ಒಬ್ಬರು. ಅವರು ಇಂದಿಗೂ ಈ ಸಂಸ್ಥೆಯ ಉಪಾಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಶಿಕ್ಷಣದಲ್ಲಿ ಒಳ್ಳೆಯ ಗುಣಮಟ್ಟವನ್ನು ಉಳಿಸಿಕೊಂಡು ಬರಲು ನೆರವಾಗಿದ್ದಾರೆ. ನಾನು ಒಮ್ಮೆ ಕುವೆಂಪು ವಿಶ್ವವಿದ್ಯಾನಿಲಯದ ಅಫಿಲಿಯೇಷನ್ ಕಮಿಟಿಯ ಅಧ್ಯಕ್ಷನಾಗಿ ಆ ಕಾಲೇಜಿಗೆ

ಭೇಟಿ ನೀಡಿದಾಗ ಅವರು ನಮ್ಮನ್ನು ತುಂಬಾ ವಿಶ್ವಾಸದಿಂದ ಆದರಿಸಿದರು. ಕಾಲೇಜಿನ ವ್ಯವಸ್ಥೆ, ಶಿಸ್ತು ಇವುಗಳನ್ನು ನೋಡಿ ಸಂತೋಷವಾಯಿತು.

ಶ್ರೀ ಮಹಾಬಲೇಶ್ವರ ಭಟ್ಟರಿಗೆ ಎಪ್ಪತ್ತು ತುಂಬುತ್ತಿದೆ ಎಂದರೆ ನಂಬುವುದೇ ಕಷ್ಟ. ಅವರ ಅದಮ್ಯವಾದ ಉತ್ಸಾಹ ಕಿರಿಯರಿಗೆ ಸ್ಫೂರ್ತಿದಾಯಕ. ಇಂತಹ ಹಿರಿಯರ ಪರಿಚಯ ಹಾಗೂ ಒಡನಾಟ ನನಗೆ ಪ್ರಿಯವಾದುದು. ಇವರು ಇದೇ ಉತ್ಸಾಹದಿಂದ ಆರೋಗ್ಯದಿಂದ ಇನ್ನೂ ಹಲವಾರು ವರ್ಷಗಳು ಸಾಹಿತ್ಯ ಸೇವೆ ಮಾಡಲಿ, ನೂರು ಕಾಲ ಬಾಳಲಿ ಎಂದು ಆಶಿಸುತ್ತೇನೆ.

# ಶ್ರೀ ಮುಖದಲ್ಲಿ ಭಟ್ಟರು

**ಕೈ. ರಾ. ಸುಬ್ಬರಾವ್**

ಶ್ರೀ ಟಿ. ಮಹಾಬಲೇಶ್ವರ ಭಟ್ಟರಿಗೀಗ ಎಪ್ಪತ್ತರ ಹರಯ. ಹೌದು; ೭೦ರ ಮುಪ್ಪಲ್ಲ. ಭಟ್ಟರನ್ನು ಕಂಡ ಬಲ್ಲ ಯಾರಿಗೂ ಈ ಮಾತು ವಿಚಿತ್ರವಾಗಿ ಕಾಣದು. ಈ ಸಂದರ್ಭದಲ್ಲಿ ಭಟ್ಟರ ಎಪ್ಪತ್ತರ ಅಭಿನಂದನ ಗ್ರಂಥಕ್ಕೆ ಭಟ್ಟರ ಬಗ್ಗೆನಾನೂ ಬರೆಯಬೇಕೆಂದು ಅಭಿನಂದನಾ ಸಮಿತಿಯವರ ಅಪೇಕ್ಷೆ. ಆದರೆ ಭಟ್ಟರ ಬಗ್ಗೆ ಬರೆಯುವುದು ಸುಲಭವಲ್ಲವೆಂಬ ಅಳುಕು ನನಗೆ. ಏಕೆಂದರೆ ಈಗಿನ್ನೂ ಪ್ರಬುದ್ಧಮಾನಕ್ಕೆ ಬರುತ್ತಿರುವವರ ಬಗ್ಗೆ ಏನಾದರೂ ಹೇಳಬಹುದು. ಆದರೆ ನನ್ನ ವಯಸ್ಸಿನಷ್ಟು ಕಾಲ ಜನ ಸಂಪರ್ಕ ಹೊಂದಿ ಎಲ್ಲರಿಗೆ ಚಿರಪರಿಚಿತರಾಗಿರುವ ವ್ಯಕ್ತಿಯ ವ್ಯಕ್ತಿತ್ವದ ಬಗ್ಗೆ ಈಗಾಗಲೇ ಬರೆಯದೆ ಉಳಿದುದ್ದೇನು ? ಏನು ಹೇಳಿದರೂ ಚರ್ವಿತ ಚರ್ವಣವಾಗುವುದೆಂಬ ಅಳುಕು ನನಗೆ. ಈಗಾಗಲೇ ಭಟ್ಟರ 50ನೇ ವರ್ಷದ ಅಭಿನಂದನ ಗ್ರಂಥದಲ್ಲಿ ಅವರ ಬಹುಮುಖ ವ್ಯಕ್ತಿತ್ವ, ಸಾಧನೆ, ಸಿದ್ಧಿಗಳನ್ನು ಕುರಿತಂತೆ ನಾಡಿನ ಹಿರಿಕಿರಿಯರೆಲ್ಲರೂ ಸಾಕಷ್ಟು ಕೊಂಡಾಡಿದ್ದಾರೆ. ನಂತರ 20 ವರ್ಷಗಳು ಕಳೆದಿದೆ. ಈ ಎರಡು ದಶಕಗಳಲ್ಲಿ ಭಟ್ಟರ ವ್ಯಕ್ತಿತ್ವ ಇನ್ನೂ ಎತ್ತರಕ್ಕೆ ಏರಿದೆ ಎಂದು ಸೇರಿಸಿದರೆ ಸಾಕಾದೀತು. ಆದರೆ ಭಟ್ಟರ ಬಗ್ಗೆಯಾರು ಎಷ್ಟೇ ಹೇಳಿದರೂ, ಬರೆದರೂ ಅವರನ್ನು ಹತ್ತಿರದಿಂದ ಕಂಡವರಿಗೆ ಏನನ್ನೋ ಹೇಳದೆ ಉಳಿದಿರುವ ಕೊರತೆಯ ಅನುಭವ ಉಂಟಾಗುತ್ತದೆ ಎಂಬುದು ನನ್ನ ವೈಯಕ್ತಿಕ ಅನಿಸಿಕೆ. ಹೇಳಲಾಗದ, ಶಬ್ದಗಳ ಮಿತಿಗೆ ಸಿಗದ ಯಾವುದೋ ಭಾವನಾತ್ಮಕ ಸಂವೇದನೆ ಉಳಿದಿರುವ ಅನುಭವವಾಗುತ್ತದೆ. ಇಂತಹ ಅನುಭವ ನನಗೂ ಆಗಾಗ್ಗೆ ಆದುದ್ದುಂಟು. ಅಂತಹ ಭಾವನಾತ್ಮಕ ಸಂವೇದನೆಯನ್ನು ನಿರ್ದಿಷ್ಟ ಸನ್ನಿವೇಶದ ಮಾಧ್ಯಮದ ಮೂಲಕ ಹೇಳಿದರೆ ಭಟ್ಟರ ಬಗ್ಗೆ ಏನಾದರೂ ಹೇಳಿದ ಅಲ್ಪ ತೃಪ್ತಿಯಾದರೂ ದೊರೆತೀತು. ಅಂತಹ ಒಂದು ಅವಕಾಶ ನನಗೆ ಇತ್ತೀಚೆಗೆ ದೊರೆತ ಕಾರಣ ಈ ಲೇಖನಕ್ಕೆ ಒಂದು ಸ್ವರೂಪ ನೀಡಲು ಸಾಧ್ಯವಾಯಿತು.

ನಾನು ಸಾಗರ ತಾಲೂಕಿನ ಸಸರವಳ್ಳಿ ಗ್ರಾಮದ ಕೈತೋಟ ಎಂಬ ಪುಟ್ಟ ಹಳ್ಳಿಯಲ್ಲಿ ಮನೆಯೊಂದನ್ನು ಕಟ್ಟಿಸಿ (ಶ್ರೀಮುಖ) ಕಳೆದ ವರ್ಷ ಗೃಹ ಪ್ರವೇಶಮಾಡಿದ್ದೇನೆ. ಈ ಸಂದರ್ಭದಲ್ಲಿ ಧಾರ್ಮಿಕ ವಿಧಿಗಳ ಜೊತೆಗೆ ನಮ್ಮ

ತಾಲ್ಲೂಕಿನ ಸಾಹಿತಿ ಮಿತ್ರರ ಜೊತೆ ಒಂದು ದಿನ 'ಸಾಹಿತ್ಯ ಸಿಂಚನ' ಎಂಬ ಕಾರ್ಯಕ್ರಮ ರೂಪಿಸಿಕೊಂಡಿದ್ದೆನಾದರೂ ಕಾರಣಾಂತರದಿಂದ ಅದು ಆಗ ನಡೆಯಲಿಲ್ಲ. ಆಗಿನಿಂದಲೂ ನಮ್ಮ ತಾಲ್ಲೂಕಿನ ಸಾಹಿತಿ ಹಾಗೂ ಸಹೃದಯ ಮಿತ್ರರನ್ನು ನಮ್ಮ ಮನೆಗೆ ಒಂದುದಿನ ಬರಲು ಕರೆಯುತ್ತಿದ್ದೆನಾದರೂ ಕಾಲ ಕೂಡಿಬಂದುದ್ದು ಡಿಸೆಂಬರ್ ೧, ೧೯೯೬ನೇ ರವಿವಾರ. ನಮ್ಮ ತಾಲ್ಲೂಕಿನ ಸಾಹಿತ್ಯ ಸಂಸ್ಕೃತಿಗೆ ವಿಶಿಷ್ಟ ಕೊಡುಗೆ ನೀಡಿರುವ ತ್ರಿಮೂರ್ತಿಗಳಾದ ಶ್ರೀ ಟಿ. ಮಹಾಬಲೇಶ್ವರ ಭಟ್ಟರು, ಖ್ಯಾತಕಾದಂಬರಿಕಾರರಾದ ಶ್ರೀ ನಾ. ಡಿಸೋಜ ಹಾಗೂ ಶ್ರೀ ಶ್ರೀನಿವಾಸ ಉಡುಪರನ್ನು ಒಳಗೊಂಡಂತೆ ನನ್ನ ಕೆಲವು ತೀರ ಪರಿಚಿತ ಸಾಹಿತಿ ಮಿತ್ರರು ಹಾಗೂ ಸಾಹಿತ್ಯಾಸಕ್ತ ಸಹೃದಯ ಮಿತ್ರರನ್ನು ಕರೆಯಬೇಕೆಂಬ ಉದ್ದೇಶದಿಂದ ಒಂದು ಆತ್ಮೀಯ ಸರಳ ಸಮಾರಂಭವನ್ನು ಹಮ್ಮಿಕೊಂಡು 'ಸಾಹಿತಿ ಸಹೃದಯ, ಸಮಾಗಮ ಎಂದು ಕರೆದು ಕರೆಯೋಲೆ ಕಳಿಸಿದೆ. ಅಂದಿನ ನನ್ನ ಕಾರ್ಯಕ್ರಮದ ಪ್ರಕಾರ ಬೆಳಿಗ್ಗೆ ೧೧ರಿಂದ ಸಂಜೆ ೬ರವರೆಗೆ, ಸಾಹಿತಿ ಸಹೃದಯರೆಲ್ಲ ನಮ್ಮ ಮನೆಯಲ್ಲಿ ಸೇರಿ ಯಾವುದೇ ಶಿಷ್ಟಾಚಾರವಿಲ್ಲದೆ ಆತ್ಮೀಯವಾಗಿ ಕಳೆಯುವುದಾಗಿತ್ತು. ಇದರ ಜೊತೆಗೆ ಮತ್ತೊಂದು ಉದ್ದೇಶವೂ ನನ್ನದಾಗಿತ್ತು. ಮಹಾಬಲೇಶ್ವರ ಭಟ್ಟರು ಈಗ ೭೦ನೇ ವರ್ಷಕ್ಕೆ ಕಾಲಿರಿಸಿದ್ದಾರೆ. ನಮ್ಮ ಸಂಸ್ಕೃತಿ ಪರಂಪರೆಯನ್ನು ನೋಡಿದರೆ ಮನುಷ್ಯನ ಜೀವನದಲ್ಲಿ ೫೦,೬೦,೭೦,೮೦,೧೦೦ನೇ ವರ್ಷಗಳಿಗೆ ವಿಶೇಷ ಮಹತ್ವ ಕೊಟ್ಟಿರುವುದು ಕಾಣಬರುತ್ತದೆ. ೫೦ನೇ ವರ್ಷ ಬದುಕಿನ ಸುವರ್ಣ ಮಹೋತ್ಸವವಾದರೆ, ೬೦ಕ್ಕೆ ಷಷ್ಠಬ್ದಿ ಸಮಾರಂಭ (ಉಗ್ರರಥ ಶಾಂತಿ ಕಾರ್ಯ) ೭೦ಕ್ಕೆ ಭೀಮರಥ ಶಾಂತಿ ಕಾರ್ಯ, ೮೦-೮೫ಕ್ಕೆ ಸಹಸ್ರ ಚಂದ್ರದರ್ಶನ ಸಮಾರಂಭ, ೧೦೦ಕ್ಕೆ ಶತಮಾನೋತ್ಸವ ಎಂದು ಆಚರಿಸುವ ಪದ್ಧತಿ ಇದೆ. ಒಂದು ದೃಷ್ಟಿಯಲ್ಲಿ ಈ ಒಂದೊಂದು ದಶಕವೂ ವ್ಯಕ್ತಿಯ ಇಳಿವಯಸ್ಸು ಮತ್ತು ಅದರ ಪರಿಣಾಮವಾಗಿ ಶರೀರ ಮನಸ್ಸು ದುರ್ಬಲಗೊಳ್ಳುವ ಕಾಲವಾದರೆ, ಮತ್ತೊಂದು ದೃಷ್ಟಿಯಿಂದ ವ್ಯಕ್ತಿಯ ಪಕ್ವತೆ ಹಾಗೂ ಪರಿಪೂರ್ಣತೆಯ ಕಡೆ ಸಾಗುವುದರ ಸಂಕೇತ ಇಂತಹ ವಯೋಮಾನದಲ್ಲಿ ವ್ಯಕ್ತಿಗೆ ಮಾನಸಿಕ ಉಲ್ಲಾಸದ ವಾತಾವರಣ ಅತ್ಯಗತ್ಯ. ತನ್ಮೂಲಕ ಶಾರೀರಿಕ ಬಲವನ್ನು ವೃದ್ಧಿಗೊಳಿಸುವುದು - ನಮ್ಮ ಹಿಂದಿನವರು ಈ ಮನೋವೈಜ್ಞಾನಿಕ ಹಿನ್ನೆಲೆಯಲ್ಲಿಯೇ ೫೦ರ ನಂತರದ ಒಂದೊಂದು ದಶಕದಲ್ಲಿಯೂ ಒಂದೊಂದು ಧಾರ್ಮಿಕ ಕಾರ್ಯಕ್ರಮವನ್ನು ರೂಪಿಸಿದ್ದಾರಾದರೂ, ಅಂತಹ ಧಾರ್ಮಿಕ ಕಾರ್ಯಕ್ರಮದ ನೆಪದಲ್ಲಿ ಬಂಧು ಬಾಂಧವರು, ಇಷ್ಟಮಿತ್ರರೆಲ್ಲ ಒಂದೆಡೆ ಸೇರಿ ಆ ವ್ಯಕ್ತಿಗೆ ಶುಭ ಹಾರೈಸುವ ಒಂದು ಅವಕಾಶ ಕಲ್ಪಿಸಿದ್ದಾರೆ. ಈ ದೃಷ್ಟಿಯಿಂದ ಭಟ್ಟರ ಜೀವನದಲ್ಲಿ ೭೦-೫೦ ಎರಡೂ ಕೂಡಿ ಬಂದಿರುವ ವರ್ಷವಿದು. ಎಪ್ಪತ್ತೇನೋ ಸರಿ; ೫೦ ಏನು ಎನ್ನುವ ಕುತೂಹಲ ನಿಮಗಾಗಬಹುದು - ಇದು

ಭಟ್ಟರು ಹಾಗೂ ಪದ್ಮಾವತಮ್ಮ ಇವರ ಯಶಸ್ವಿ ಅನ್ಯೋನ್ಯ ದಾಂಪತ್ಯ ಜೀವನದ ೫೦ನೇ ವರ್ಷ (ಸುವರ್ಣೋತ್ಸವ). ಈ ದೃಷ್ಟಿಯಿಂದ ಭಟ್ಟರು ದಂಪತಿಗಳಿಗೆ ಆತ್ಮೀಯರಾದ ಸಾಹಿತಿ - ಸಹೃದಯರು ಒಂದೆಡೆ ಸೇರಿ ಶುಭ ಹಾರೈಸುವ ಒಂದು ಸರಳ ಸಮಾರಂಭವನ್ನು ಏರ್ಪಡಿಸಬೇಕೆಂಬ ಬಯಕೆ ನನ್ನಲ್ಲಿ ಉಂಟಾದುದ್ದರ ಪರಿಣಾಮವೇ ಡಿಸೆಂಬರ್ ೧ ರಂದು ನಮ್ಮ ಮನೆಯಲ್ಲಿ ಏರ್ಪಡಿಸಿದ ಸಾಹಿತಿ - ಸಹೃದಯ ಸಮಾಗಮ. ನಾನು ಭಟ್ಟರಿಗಾಗಲೀ ಅಥವಾ ಇತರ ಮಿತ್ರರಿಗಾಗಲೀ ಈ ವಿಚಾರವನ್ನು ಮೊದಲು ಬಹಿರಂಗಪಡಿಸಿರಲಿಲ್ಲ. ಅವರನ್ನು ಹಾಗೂ ಶ್ರೀ ನಾ.ಡಿಸೋಜಾ ಹಾಗೂ ಶ್ರೀನಿವಾಸ ಉಡುಪರನ್ನು ಭೇಟಿಯಾಗಿ ಅವರು ನಮ್ಮಲ್ಲಿಗೆ ಬರಬೇಕೆಂದೂ, ವಿಶೇಷ ಅತಿಥಿಗಳೆಂದು ಕರೆಯೋಲೆಯಲ್ಲಿ ನಮೂದಿಸುವುದಾಗಿ ಅನುಮತಿ ಪಡೆದೆ. ಈ ಮುಖ್ಯ ಅತಿಥಿಗಳೆಲ್ಲರೂ ದಂಪತಿಯುಕ್ತರಾಗಿ ಬರಲು ಆಗ್ರಹಿಸಿ, ನನ್ನ ಕಾರ್ಯಕ್ರಮದ ಪ್ರಕಾರ ಬೆಳಿಗ್ಗೆ ೧೧ ಗಂಟೆಯಿಂದ ಸಂಜೆ ೬ರವರೆಗೆ ಬಿಡುವು ಮಾಡಿಕೊಂಡು ಬರಬೇಕೆಂದು ಕೇಳಿಕೊಂಡೆ.

ಮುಖ್ಯ ಅತಿಥಿಗಳು ನಮ್ಮಲ್ಲಿಗೆ ಬರಲು ವಾಹನ ವ್ಯವಸ್ಥೆ ಮಾಡುತ್ತೇವೆಂದಾಗ ಭಟ್ಟರು ತಾವೇ ತಮ್ಮ ಸ್ವಂತ ಕಾರಿನಲ್ಲಿ ಬರುವುದಾಗಿ ಹೇಳಿದ್ದಲ್ಲದೆ ಉಳಿದ ಅತಿಥಿಗಳನ್ನು ಕರೆತರುವುದಾಗಿ ಹೇಳಿ ನನ್ನನ್ನು ಬೆರಗುಗೊಳಿಸಿದರು. ರವಿವಾರದ ದಿನ ೧೧ ಗಂಟೆಗೆ ಬರಬಹುದಾದ ಅತಿಥಿಗಳ ಸ್ವಾಗತಕ್ಕೆ ಸಿದ್ಧತೆ ಮಾಡಿಕೊಳ್ಳುತ್ತಿದ್ದಾಗ ೧೦-೪೫ಕ್ಕೆ ನಗುಮುಖದ ಶುಭ್ರ ಶ್ವೇತ ವಸ್ತ್ರಧಾರಿಗಳಾದ ಗಂಭೀರ ವ್ಯಕ್ತಿ ಶ್ರೀ ಭಟ್ಟರು ಉಳಿದವರೊಡನೆ ನಮ್ಮ ಮನೆ ಎದುರು ಬಂದಿಳಿದು. 'ನೀವು ತಿಳಿಸಿದ್ದು ೧೧ಕ್ಕೆ ಬರಲು, ೧೫ ನಿಮಿಷ ಮೊದಲೇ ಬಂದುಬಿಟ್ಟೆ' ಎಂದಾಗ ಮತ್ತೊಮ್ಮೆ ಅವರ ಸಮಯ ಪ್ರಜ್ಞೆಯನ್ನು ಕಂಡು ಅಚ್ಚರಿಗೊಳ್ಳುವ ಸರದಿ ನನ್ನದಾಯಿತು. ನಂತರ ನಮ್ಮ ಸಾಹಿತಿ ಸಹೃದಯ ಮಿತ್ರರು, ಬಂಧು ಮಿತ್ರರೂ, ನಮ್ಮೂರಿನ ಅಭಿಮಾನಿಗಳೆಲ್ಲ ಬಂದ ನಂತರ ಮಧ್ಯಾಹ್ನ ನಮ್ಮ ಗ್ರಾಮೀಣ ಊಟದ ಸವಿಯನ್ನುಣಿಸಲಾಯಿತು.

ಶ್ರೀಭಟ್ಟರು ಬಂದವರು ಸುಮ್ಮನೆ ಕೂಡದೆ ನಮ್ಮ ಮನೆಯ ಮೂಲೆ ಮೂಲೆಯನ್ನೂ ನೋಡಿ ಮೆಚ್ಚುಗೆಯ ಮಾತನ್ನಾಡಿದರು. ಅವರ ನುಡಿಯಲ್ಲಿ ಯಾವುದೇ ಕೃತಕತೆ ಕಾಣದೆ ಸಹಜತೆ ಎದ್ದು ಕಾಣುತ್ತಿತ್ತು. ಊಟದ ನಂತರ ಯಾವುದೇ ಶಿಷ್ಟಾಚಾರವಿಲ್ಲದ ಒಂದು ಅನೌಪಚಾರಿಕ ಸಮಾರಂಭ ನಡೆಸುವ ಉದ್ದೇಶ ನನ್ನದಾಗಿತ್ತು. ಅದೇ ರೀತಿ ಒಂದು ಪುಟ್ಟಸಭೆ ಸೇರಿತು. ಅಲ್ಲಿ ಶ್ರೀ ಮಹಾಬಲೇಶ್ವರ ಭಟ್ಟರನ್ನು ಕುರಿತು ನನ್ನ ಅಲ್ಪಮತಿಗೆ ತಿಳಿದ ನಾಲ್ಕು ಮಾತುಗಳನ್ನಾಡಿದೆ. ಹಾಗೆಯೇ ಇತರರನ್ನು ಕುರಿತು ಕೂಡಾ. ಪ್ರಸ್ತುತ ಇಲ್ಲಿ ಮಹಾಬಲೇಶ್ವರ ಭಟ್ಟರನ್ನು ಕುರಿತು ನನ್ನ ವಿಚಾರಗಳನ್ನು ಮಾತ್ರ ತಮ್ಮೆದುರು ಇಡುವ ಅವಕಾಶವನ್ನು ಬಳಸಿಕೊಳ್ಳುತ್ತೇನೆ.

ನನ್ನ ದೃಷ್ಟಿಯಲ್ಲಿ ನಮ್ಮ ಸಾಗರ ತಾಲ್ಲೂಕಿನ ಸಾಹಿತ್ಯ ಸಾಂಸ್ಕೃತಿಕ ಕ್ಷೇತ್ರಕ್ಕೆ ಸಂಬಂಧಿಸಿದಂತೆ ರಾಜ್ಯ, ರಾಷ್ಟ್ರ, ಅಂತರಾಷ್ಟ್ರೀಯ ಮಟ್ಟದವರೆಗೂ ಸಾಗರ ತಾಲ್ಲೂಕನ್ನು ಗುರುತಿಸುವಂತಹ ಕಾರ್ಯ ಮಾಡಿದ, ಮಾಡುತ್ತಿರುವ ಈಗಿನ ತಲೆಮಾರಿನವರಲ್ಲಿ ಶ್ರೀ ಕೆ.ವಿ. ಸುಬ್ಬಣ್ಣ (ಹೆಗ್ಗೋಡು), ನಾ. ಡಿಸೋಜ; ಮಹಾಬಲೇಶ್ವರ ಭಟ್ಟರು; ಕೆಳದಿಯ ಗುಂಡಾ ಜೋಯಿಸರು, ಶ್ರೀನಿವಾಸ ಉಡುಪರು ಪ್ರಾತಿನಿಧಿಕ ವ್ಯಕ್ತಿಗಳು. ಇವರ ಒಬ್ಬೊಬ್ಬರ ಕಾರ್ಯ ಕ್ಷೇತ್ರದಲ್ಲಿ ಬೇರೆ ಬೇರೆಯಾದರೂ ಆಯಾ ಕ್ಷೇತ್ರದಲ್ಲಿ ವಿಶಿಷ್ಟ ಸಾಧನೆ ಮಾಡುವ ಮೂಲಕ ಈ ಪ್ರಾಂತ್ಯಕ್ಕೆ ಗೌರವ ತಂದು ಕೊಟ್ಟಿದ್ದಾರೆ. ಪ್ರಸ್ತುತ ಶ್ರೀ ಮಹಾಬಲೇಶ್ವರ ಭಟ್ಟರನ್ನು ಕುರಿತಂತೆ ಮಾತ್ರ ಹೇಳುತ್ತೇನೆ. ಸಾಹಿತ್ಯಾಸಕ್ತರಲ್ಲಿ ಮೂರು ವರ್ಗದವರನ್ನು ಕಾಣಬಹುದು ೧) ಸ್ವತಃ ಸಾಹಿತ್ಯ ರಚನೆಯಲ್ಲಿ ತೊಡಗಿರುವ ಸಾಹಿತಿಗಳು ೨) ಸಾಹಿತ್ಯದಲ್ಲಿ ಆಸಕ್ತಿಯುಳ್ಳ ಸಹೃದಯರು ೩) ಸಾಹಿತ್ಯ ಪರಿಚಾರಕರು.

ಈ ಮೂರೂ ಗುಣಗಳ ಸಂಗಮ ಎಲ್ಲ ಸಾಹಿತ್ಯಾಸಕ್ತರಲ್ಲಿರುವುದು ಅಪರೂಪ. ಅಂತಹ ಅಪರೂಪದ ವ್ಯಕ್ತಿಗಳಲ್ಲಿ ಭಟ್ಟರು ಒಬ್ಬರೆಂಬುದು ನಿರ್ವಿವಾದ. ಇವುಗಳಲ್ಲಿಯೂ ನಾನು ಪ್ರಧಾನವಾಗಿ ಅವರನ್ನು ಗುತಿಸುವುದು ಸಾಹಿತ್ಯ ಪರಿಚಾರಕರನ್ನಾಗಿ. ಈ ಪರಿಚಾರಕರಾಗಿ ಕೆಲಸ ಮಾಡುವುದು ಸುಲಭದ ಕೆಲಸವಲ್ಲ. ಇವರು ಆಳಾಗಿ ದುಡಿಯಬೇಕಾಗುತ್ತದೆ; ಅರಸಾಗಿ ಆಳಬೇಕಾಗುತ್ತದೆ. ಭಟ್ಟರು ಈ ವಿಷಯದಲ್ಲಿ ಸವ್ಯಸಾಚಿಗಳು. ಈ ವಿಚಾರದಲ್ಲಿ ಅವರು ಮಹಾ-ಬಲರು. ಯಾವುದೇ ಕಾರ್ಯಕ್ರಮಗಳ ಯೋಚನೆ, ಯೋಜನೆ ಅತ್ಯಂತ ವ್ಯವಸ್ಥಿತವಾದ ಸಿದ್ಧತೆ; ಅಚ್ಚುಕಟ್ಟುತನ, ಸಮಯಪಾಲನೆ ಎಲ್ಲದರಲ್ಲಿ ಭಟ್ಟರ ವಿಶಿಷ್ಟ ಛಾಪನ್ನುಕಾಣಬಹುದು. ಅವರು ವ್ಯವಸ್ಥೆಗೊಳಿಸಿದ ಯಾವುದೇ ಕಾರ್ಯಕ್ರಮವಾಗಲೀ, ಸಮಾರಂಭವಾಗಲೀ ಅತಿಥಿಗಳ, ಪ್ರೇಕ್ಷಕರ ಮನಸ್ಸಿನಲ್ಲಿ ಶಾಶ್ವತವಾಗಿ ಪಡಿಮೂಡಿರುತ್ತದೆ. ಈಗ ಸುಮಾರು ೩೦ ವರ್ಷಗಳ ಹಿಂದೆ ಭಟ್ಟರ ನೇತೃತ್ವದಲ್ಲಿ ನಡೆದ ಒಂದು ಭವ್ಯ ಸಮಾರಂಭದ ನೆನಪು ನನ್ನ ಕಣ್ಣಿಗೆ ಕಟ್ಟಿದಂತಿದ್ದುದನ್ನು ಉದಾಹರಣೆಯಾಗಿ ಇಲ್ಲಿ ಉಲ್ಲೇಖಿಸುತ್ತೇನೆ.

೧೯೭೦ನೇ ಇಸವಿಯ ನವೆಂಬರ್ ೧ನೇ ದಿನಾಂಕದ ಸುಂದರ ಸಂಜೆ ಸಾಗರದ ಗಾಂಧೀ ಮೈದಾನದಲ್ಲಿ ಒಂದು ಭವ್ಯ ಸಮಾರಂಭ; ಮಹಾಕವಿ, ರಾಷ್ಟ್ರಕವಿ, ಜ್ಞಾನಪೀಠ ಪ್ರಶಸ್ತಿ ವಿಜೇತ ಕುವೆಂಪುರವರಿಗೆ ಸನ್ಮಾನ ಸಮಾರಂಭ. ಜ್ಞಾನಪೀಠ ಪ್ರಶಸ್ತಿ ವಿಜೇತ ಮಹಾಕವಿಗೆ ಮೊದಲ ಸನ್ಮಾನ ಶ್ರೀ ಭಟ್ಟರ ಮುಂದಾಳತ್ವದಲ್ಲಿ. ಅಂದು ಸಾಗರ ಹಾಗೂ ಸುತ್ತಮುತ್ತಲ ತಾಲ್ಲೂಕಿನ ಸಾಹಿತ್ಯಾಭಿಮಾನಿಗಳು ಕಿಕ್ಕಿರಿದು ತುಂಬಿದ್ದಲ್ಲದೆ ಮಹಾಕವಿಗೆ ಅಭಿಮಾನದಿಂದ ಸಮರ್ಪಿಸಿದ ಗಂಧದ ಹಾರಗಳಿಗೆ ಲೆಕ್ಕವಿಲ್ಲ. ತಮಗೆ ಅರ್ಪಿಸಿದ ಹಾರಗಳನ್ನೆಲ್ಲಾ ಶ್ರೀ ಕುವೆಂಪುರವರು ತಮ್ಮೆದುರು

ಇಡುತ್ತಾ ಬಂದಾಗ ಅವರು ಕಾಣದಷ್ಟು ೬-೮ ಅಡಿ ಎತ್ತರದ ರಾಶಿಯಾಗಿ ಬೆಳೆಯಿತು. ನಂತರ ಕುವೆಂಪುರವರು ಭಾವಪರವಶರಾಗಿ ಹಾಸ್ಯಭರಿತ ಮಾತಿನಲ್ಲಿ ಹೇಳಿದ್ದು ಹೀಗೆ 'ನೀವೇನೋ ಅಭಿಮಾನದಿಂದ ಶ್ರೀಗಂಧದ ಈ ಹಾರದ ರಾಶಿ ಅರ್ಪಿಸಿದ್ದೀರಿ. ಆದರೆ ಇವನ್ನೆಲ್ಲಾ ನಾನೇನಾದರೂ ಕಾರಿನಲ್ಲಿ ಹಾಕಿಕೊಂಡು ಹೊರಟರೆ ನಾನು ಗಂಧದ ಸಾಗಣೆ ಮಾಡುತ್ತಿದ್ದೇನೆಂದು ಪೋಲೀಸರು ಹಿಡಿದಾರು; 'ಎಂದು ಹಾಸ್ಯಭರಿತವಾಗಿ ಹೇಳಿದ ಮಾತು ನನ್ನ ಕಿವಿಯಲ್ಲಿ ಇನ್ನೂ ಪ್ರತಿಧ್ವನಿಸುತ್ತಿದೆ. ಅಂದಿನ ಆ ಸಮಾರಂಭದ ಕಾಲದಲ್ಲಿ ನಾನಿನ್ನೂ ಯುವಕನಾಗಿದ್ದು ಸೇರಿದ ಸಹಸ್ರ ಸಂಖ್ಯೆಯ ಪ್ರೇಕ್ಷಕರಲ್ಲಿ ನಾನೂ ಒಬ್ಬನಾಗಿದ್ದೆ . ಅಂದಿನ ಆ ಸಮಾರಂಭ ಇನ್ನೂ ನನ್ನ ಕಣ್ಣಿಗೆ ಕಟ್ಟಿದಂತಿದೆ. ಇಂತಹ ಸಮಾರಂಭಗಳನ್ನು ಏರ್ಪಡಿಸುವ ಸಾಮರ್ಥ್ಯ ಶ್ರೀ ಭಟ್ಟರಂತಹವರಿಗೆ ಮಾತ್ರ ಸಾಧ್ಯ ಎಂಬುದು ನನ್ನ ಈವರೆಗಿನ ಅನುಭವ. ಇದೊಂದು ಉದಾಹರಣೆ ಮಾತ್ರವಾಗಿದ್ದು ಇಂತಹ ಎಷ್ಟೋ ಸಮಾರಂಭಗಳು ಸಾಗರದಲ್ಲಿ ನಡೆದಿವೆ. ಕನ್ನಡದ ಹಿರಿಯ ಚೇತನಗಳಾದ ಶ್ರೀ ಶಿವರಾಮಕಾರಂತ; ವಿ.ಕೃ.ಗೋಕಾಕ್; ಬಸವರಾಜ ಕಟ್ಟೀಮನಿ; ರಂ.ಶ್ರೀ ಮುಗಳಿ; ದ.ರಾ.ಬೇಂದ್ರೆ; ವಿ. ಸೀತಾರಾಮಯ್ಯ, ಅ.ನ. ಕೃಷ್ಣರಾವ್; ಮಾಸ್ತಿ ವೆಂಕಟೇಶ ಅಯ್ಯಂಗಾರ್ ಮುಂತಾದ ಕನ್ನಡದ ದಿಗ್ಗಜಗಳನ್ನು ೧೯೬೦-೭೦ರ ದಶಕದಲ್ಲೇ ಕರೆಸಿ ಸಾಗರ ಜನತೆಗೆ ದರ್ಶನ ಮಾಡಿಸಿದ ಹಿರಿಮೆ ಶ್ರೀ ಭಟ್ಟರದು. ಈಗ ಈ ದಶಕದಲ್ಲಿ (೧೯೯೦) ಮತ್ತೊಮ್ಮೆ ಸಾಗರಕ್ಕೆ ಇಂತಹ ಗತವೈಭವ ಮರಳುತ್ತಿರುವುದು ಶ್ರೀ ಭಟ್ಟರಿಂದಲೇ.

ಸಾಗರದಲ್ಲಿ ಕನ್ನಡಾಭಿಮಾನಿಗಳ ಪಡೆಯನ್ನೇ ನಿರ್ಮಿಸಿ ಕನ್ನಡ ಡಿಂಡಿಮ ಬಾರಿಸಿದವರು ಭಟ್ಟರು. ಈ ನಡುವೆ ಅವರು ಬೇರೂರಿನ ನಿವಾಸಿಯಾದ ಸುಮಾರು ಒಂದು ದಶಕದ ಕಾಲ ಸಾಗರದಲ್ಲಿ ಸಾಹಿತ್ಯ ಚಟುವಟಿಕೆಗಳು ಸ್ಥಗಿತಗೊಂಡಿದ್ದವೆಂದರೆ ಭಟ್ಟರ ಸಾಧನೆಗೆ ಬೇರೆ ಕನ್ನಡಿ ಬೇಕೆ ? (ವ್ಯಕ್ತಿಯೊಬ್ಬರ ಕಾರ್ಯಕ್ಷಮತೆ ಹಾಗೂ ಅವಶ್ಯಕತೆ ಆತನ ಅನುಪಸ್ಥಿತಿಯಲ್ಲಿ ಮಾತ್ರ ವೇದ್ಯವಾಗುತ್ತದೆ). ಈ ನಡುವಿನ ಒಂದು ದಶಕದ ಶೂನ್ಯ ನನ್ನಂತವರಿಗೆ ಕಾಡುತ್ತಿತ್ತು, ಇದನ್ನು ನಾನು ಅನೇಕರೊಡನೆ ಹೇಳಿಯೂ ಇದ್ದೆ. ನಂತರ ಪುನಃ ೧೯೯೦ರ ದಶಕದಲ್ಲಿ ಭಟ್ಟರು ಮತ್ತೆ ಸಾಗರದ ಕಡೆ ಮುಖ ಮಾಡಿದಾಗ ಸಾಗರದ ಸಾಹಿತ್ಯಕ್ಷೇತ್ರದ ಅದೃಷ್ಟದ ಬಾಗಿಲು ತೆರೆಯಿತು. ೧೯೯೨ರಲ್ಲಿ ಸಾಗರ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು ಅಸ್ತಿತ್ವಕ್ಕೆ ಬಂದಾಗ ಅವರಿಗೆ ಕನ್ನಡದ ಸಾರಥ್ಯ ವಹಿಸಿದ್ದು ಸುದೈವ. ಇದರಿಂದಾಗಿ ಮತ್ತೆ ಸಾಗರದ ಸಾಹಿತ್ಯ ಲತೆ ಚಿಗುರೊಡೆದು ಹೂಬಿಟ್ಟು, ಪರಿಮಳ ಬೀರುತ್ತಿದೆ. ಹಲವಾರು ಅಪರೂಪದ ಕಾರ್ಯಕ್ರಮಗಳು ನಡೆಯುತ್ತಿವೆ, ಎಂದರೆ ಭಟ್ಟರು ನಡೆಸುತ್ತಿದ್ದಾರೆ. ಈವರೆಗಿನ ೪ ವರ್ಷಗಳ ಅವಧಿಯಲ್ಲಿ ಹಿರಿಯ ಸಾಹಿತಿಗಳ ಸಾಹಿತ್ಯಾವಲೋಕನಗಳು; ಪುಸ್ತಕ ಪ್ರಕಟಣೆಗಳು; ಪುಸ್ತಕ ಪ್ರದರ್ಶನ - ಮಾರಾಟ ಕಾರ್ಯಕ್ರಮಗಳು,

ಕವಿಗೋಷ್ಠಿಗಳು; ಕನ್ನಡಕ್ಕಾಗಿ ಕೈ ಎತ್ತಿದವರಿಗೆ ಸನ್ಮಾನ ಸಮಾರಂಭಗಳು, ಹೀಗೆ ಒಂದೆ ಎರಡೇ ಹಲವಾರು ನಿಟ್ಟಿನಲ್ಲಿ ಕಾರ್ಯಯೋಜನೆ, ಪ್ರಾಯೋಜನೆ, ನಿರ್ವಹಣೆಯ ಸೂತ್ರಧಾರಿಗಳು ಭಟ್ಟರು.

ಯಾವುದೇ ಕಾರ್ಯಕ್ರಮವಿರಲಿ ಭಟ್ಟರದೊಂದು ವಿಶೇಷವಾದ ಹಾಗೂ ಸಹಜವಾದ ಗುಣ ತಮ್ಮ ಜೊತೆಗಾರರಾದ ಕಾರ್ಯಕರ್ತರೆಲ್ಲರಿಗೆ ಅವಕಾಶ ಕಲ್ಪಿಸಿಕೊಡುವುದು. ವ್ಯಕ್ತಿಯಲ್ಲಿರುವ ಶಕ್ತಿಯನ್ನು ಗುರುತಿಸಿ ಪ್ರೋತ್ಸಾಹಿಸಿ, ಗೌರವಿಸಿ, ಬೆನ್ನು ತಟ್ಟುವುದು. ನನ್ನದೇ ಒಂದು ಉದಾಹರಣೆ ಹೇಳುವುದಾದರೆ ನಾನು ಕೆಲವು ಕವನ, ಲೇಖನ ಇತ್ಯಾದಿ ಬರೆದಿದ್ದೇನಾದರೂ ಹೇಳಿಕೊಳ್ಳುವಂತಹ ಕವಿಯೆಂಬ ಭ್ರಮೆ ನನಗಿಲ್ಲ. ಆದರೆ ಅದು ಹೇಗೋ ನನ್ನಲ್ಲಿರುವ ಕಾವ್ಯ ಸತ್ವವನ್ನು ಪತ್ತೆ ಮಾಡಿ ಈ ವರ್ಷ ನಡೆಸಿದ ಸಾಗರ ತಾಲ್ಲೂಕು ಕವಿ ಸಮ್ಮೇಳನದಲ್ಲಿ ಒಂದು ಕವನ ವಾಚಿಸಬೇಕೆಂದು (ನಾನು ಕೇಳದಿದ್ದರೂ) ಅವರಾಗಿಯೇ ಆಗ್ರಹಪೂರ್ವಕವಾಗಿ ಪತ್ರ ಬರೆದು ಅವಕಾಶ ನೀಡಿದ್ದಲ್ಲದೆ, ನಂತರ ನನ್ನ ಕವನದ ಬಗ್ಗೆ ಮೆಚ್ಚುಗೆಯ ಮಾತನ್ನು ನನಗೆ ತಿಳಿಸಿದರು. ಹಾಗೆಯೇ ನಮ್ಮ ಮನೆಗೆ ಅವರನ್ನು ಆಹ್ವಾನಿಸಿದ 'ಸಾಹಿತಿ ಸಹೃದಯ ಸಮಾರಂಭ' ಕಾರ್ಯಕ್ರಮದಲ್ಲಿ ಭಾಗವಹಿಸಿದ್ದಲ್ಲದೆ ನಮ್ಮ ಮನೆ ಹಾಗೂ ಅಂದಿನ ಕಾರ್ಯಕ್ರಮವನ್ನೇ ಒಂದು ವಿಷಯವನ್ನಾಗಿ ಮಾಡಿಕೊಂಡು ಸಂಯುಕ್ತ ಕರ್ನಾಟಕ ದಿನ ಪತ್ರಿಕೆಯ ೧೪-೧೨-೧೯೯೬ರ ಸಂಚಿಕೆಯಲ್ಲಿ 'ಬೇವು-ಬೆಲ್ಲ' ಎಂಬ ಅವರ ಅಂಕಣ ಬರಹದಲ್ಲಿ ಒಂದು ಲೇಖನವನ್ನೇ ಬರೆದಾಗ ನನಗಂತೂ ನನ್ನನ್ನೇ ನಂಬಲಾಗಲಿಲ್ಲ. ಇಂತಹ ಸನ್ನಿವೇಶಗಳಲ್ಲೆಲ್ಲಾ ನನಗೆ ಕಾಣುವುದು ಅವರ ಗುಣಗ್ರಹಣ ಶೀಲತೆ, ಪರರನ್ನು ಗುರುತಿಸಿ ಗೌರವಿಸುವ ಅವರ ಪರಿಪಕ್ವತೆ.

ಹೀಗೆ ಭಟ್ಟರ ಬಗ್ಗೆ ಬರೆಯುತ್ತಾ ಹೋದಷ್ಟು ವ್ಯಕ್ತಿತ್ವ ವಿಸ್ತಾರ ಮತ್ತು ಆಳವಿದೆ. ಆದರೆ ಅಭಿನಂದನ ಗ್ರಂಥ ಹಲವರ ಲೇಖನಗಳನ್ನೊಳಗೊಳ್ಳುವುದರಿಂದ ವಿಷಯ ಚರ್ವಿತ ಚರ್ವಣವಾಗಬಹುದೆಂಬ ಹಾಗೂ ಲೇಖನದ ವಿಸ್ತಾರದ ಭಯದಿಂದಾಗಿ ನನ್ನ ನೇರ ಅನುಭವ ಹಾಗೂ ಭಟ್ಟರು ನನ್ನಲ್ಲಿ ಉಂಟು ಮಾಡಿದ ಪ್ರಭಾವವನ್ನು ಮಾತ್ರ ಇಲ್ಲಿ ಉಲ್ಲೇಖಿಸುತ್ತಿದ್ದೇನೆ. ನನ್ನಂತೆ ಭಟ್ಟರಿಂದ ಪ್ರಭಾವಿತರಾದ ಒಂದು ಪಡೆಯೇ ಇದೆ.

ಭಟ್ಟರು ಮತ್ತು ಅವರ ಶ್ರೀಮತಿಯವರಿಗೆ ಇದೇ ರೀತಿ ಆಯುರಾರೋಗ್ಯಗಳು ಇದ್ದು ಅವರಿಗೆ ಸಹಸ್ರ ಚಂದ್ರ ದರ್ಶನವಾಗಲಿ, ನಂತರ ಶತಮಾನೋತ್ಸವ ಆಚರಿಸುವ ಸುವರ್ಣಾವಕಾಶ ನಮ್ಮದಾಗಲಿ ಎಂದು ಭಗವಂತನಲ್ಲಿ ಬೇಡುತ್ತೇನೆ.

# ವ್ಯಕ್ತಿಯ ಅಚ್ಚುಕಟ್ಟುತನ

**ಭುವನೇಶ್ವರಿ ಹೆಗಡೆ**

ಕೆಲವೇ ವರ್ಷಗಳ ಹಿಂದಿನ ಮಾತು. ನಾನು ಆಗಿನ ಸಾಗರದ ಮತ್ತಿಕೊಪ್ಪದ ನನ್ನಕ್ಕನ ಮನೆಯಲ್ಲಿದ್ದೆ. ಅಂದು ಅವರಮನೆಗೆ ಸಾಗರದಿಂದ ಓರ್ವ ಗಣ್ಯ ವ್ಯಕ್ತಿ ಬರುವ ಕಾರ್ಯಕ್ರಮವಿತ್ತು. ಮಲೆನಾಡಿನ ಅಡಿಕೆ ಭಾಗಾಯ್ತುದಾರರಲ್ಲಿ ಆಗೀಗ ನಡೆಯುವ ಇಂತಹ ಕೂಟಗಳನ್ನುನಾನು ಹುಟ್ಟಾ ಬಲ್ಲವಳು. ಸಾಮಾನ್ಯವಾಗಿ ಸಾಗರ, ಶಿರ್ಸಿ, ಸಿದ್ದಾಪುರದ ಹಳ್ಳಿಗಳಲ್ಲಿ ಅತಿಥಿಗಳ ಆಗಮನಕ್ಕೆ ಸಮಯದ ಮಿತಿ, ನಿರ್ದಿಷ್ಟ, ಉದ್ದೇಶ, ಯೋಜಿತ ಕಾರ್ಯಕ್ರಮಗಳು ಏನೂ ಇರುವುದಿಲ್ಲ. ಕಾಫಿ, ಎಲೆಯಡಿಕೆ ಕವಳಗಳ ಸ್ವಾದದೆಡೆಯಲ್ಲಿ ಕಾಲಾತೀತ, ಸೀಮಾತೀತ, ಹರಟೆ ಕಾಲಕ್ಷೇಪಗಳಿಂದಾಗಿ ನಾನು ಇಂಥ ಕೂಟಗಳಿಗೆ ಅಷ್ಟು ಮಹತ್ವ ನೀಡುತ್ತಿರಲಿಲ್ಲ. ನನ್ನ ಪಾಡಿಗೆ ನಾನಿರುತ್ತಿದ್ದೆ.

ಆದರೆ ದೂರವಾಣಿಯಲ್ಲಿ ತಿಳಿಸಿದ್ದಂತೆ ಸರಿಯಾಗಿ ೧೦ ಘಂಟೆಯೆಂದರೆ ೧೦ ಘಂಟೆಗೆ ಶುಭ್ರಶ್ವೇತ ವಸ್ತ್ರಧಾರಿ ಸರಳ ಆದರೆ ಖಚಿತ ಮುಖ ಮುದ್ರೆಯ ಎದ್ದು ಕಾಣುವ ಹಿರಿಯ ವ್ಯಕ್ತಿಯೊಬ್ಬರು ಕಾರಿನಲ್ಲಿ ಬಂದಿಳಿದರು. ಕೆಲವೇ ಕ್ಷಣಗಳಲ್ಲಿಯೇ ಅಲ್ಲಿನ ಇಡೀ ವಾತಾವರಣಕ್ಕೆ ಒಂದು ಬಗೆಯ ಶಿಸ್ತು ಹಾಗೂ ಲವಲವಿಕೆಯ ಸ್ಪರ್ಶ ಉಂಟಾದಂತೆ ಭಾಸವಾಯಿತು ಆದರೆ ಅವರೇ ಟಿ. ಮಹಾಬಲೇಶ್ವರ ಭಟ್ಟರು ಎಂದು ತಿಳಿಯುವುದರೊಳಗೇ ನಾನು ಅವರ ವ್ಯಕ್ತಿತ್ವದಿಂದ ಪ್ರಭಾವಿತಳಾಗಿ ಬಿಟ್ಟಿದ್ದೆ. ಅಂದಿನ ಹಾಗೂ ನಂತರದ ಪ್ರತಿ ಭೇಟಿಯಲ್ಲಿಯೂ ನನ್ನನ್ನು ವಿಸ್ಮಯಗೊಳಿಸಿದ್ದು - ಮಹಾಬಲೇಶ್ವರ ಭಟ್ಟರ ವೈಶಿಷ್ಟ್ಯಪೂರ್ಣ ನಡವಳಿಕೆ. ತಮ್ಮ ಮಾತು, ವಿಚಾರ, ಕ್ರಿಯೆ, ಕಾರ್ಯ ಎಲ್ಲದಕ್ಕೂ ಶಿಸ್ತಿನ ಚೌಕಟ್ಟನ್ನು ತೊಡಸಿಯೇ ವ್ಯವಹರಿಸುವ ಭಟ್ಟರು ಆತ್ಮೀಯತೆಗೆ ಧಕ್ಕೆ ತಾರದ ಧಾರಾಳಿಯೂ ಹೌದು.

ಮಹಾಬಲೇಶ್ವರ ಭಟ್ಟರ ವಿಶಾಲ ಲೋಕಾನುಭವ, ಅನೇಕ ಸಾಹಿತಿಗಳೊಡನಿರುವ ಸಂಪರ್ಕ, ಸಾಹಿತ್ಯಿಕ ಅಧ್ಯಯನ ಅಭಿವ್ಯಕ್ತಿ ಚಿಂತನೆಗಳ ಒಟ್ಟು ಮೊತ್ತವಾಗಿ ಹೊರ ಹೊಮ್ಮಿದ ಅವರ ಈ ವ್ಯಕ್ತಿತ್ವವೇ ಭಟ್ಟರ ಕುರಿತಾದ ನನ್ನಅಭಿಮಾನ ಆದರಗಳನ್ನು ಅಭಿವ್ಯಕ್ತಿಸಲು ಪ್ರೇರಣೆ ನೀಡಿದ್ದೆನ್ನಬಹುದು.

ನಿಜ, ಶಿಸ್ತು, ಸುಸಂಬದ್ಧತೆಯಿಂದಲೇ ಸಾಕಾರಗೊಂಡ ಒಂದು ಉನ್ನತ ವ್ಯಕ್ತಿತ್ವವನ್ನು ನೋಡಬೇಕೆಂದರೆ ನೀವು ಅವರ ಮನೆ ಇರುವ ಹಳ್ಳಿ ಬೇದೂರಿಗೆ ಹೋಗಬೇಕು. ಹೊರಗೆ ಅರಳಿನಿಂತ ಹೂವುಗಳಿಂದ ಹಿಡಿದು ಕ್ರಮಬದ್ಧವಾಗಿ ಜೋಡಿಸಿಟ್ಟ ಪುಸ್ತಕ ಭಂಡಾರದ ತನಕವೂ ಎದ್ದು ಕಾಣುವ ಅಚ್ಚುಕಟ್ಟುತನ, ಶುಭ್ರತೆ ಮತ್ತು ಜೀವನ ಪ್ರೀತಿ! ಇವರ ವ್ಯಕ್ತಿತ್ವದಿಂದ ನಿರ್ಜೀವ ವಸ್ತುಗಳೂ ಶಿಸ್ತಿಗೊಳಪಡುವ ಕಾಯಕಲ್ಪ ಪಡೆದವೇನೋ ಎನ್ನುವಂತಾಗುತ್ತದೆ. ಮನೆಯ ಚರಾಚರ ವಸ್ತು ಜೀವಿಗಳೆಲ್ಲವೂ ಭಟ್ಟರ ಈ ಶಿಸ್ತಿಗೆ ಒಗ್ಗಿಕೊಂಡಿವೆ. ಶಿಸ್ತಿನಿಂದ ಒಡಮೂಡಿ ಬರುವ ಸೊಗಸೇ ಅಂತಹುದು.

ಮಹಾಬಲೇಶ್ವರ ಭಟ್ಟರ ಈ ಖಚಿತ ಜೀವನ ದೃಷ್ಟಿಯೇ ಅವರ ಇಷ್ಟೆಲ್ಲಾ ಸಾಧನೆಗಳ ಅಡಿಪಾಯ ಎನ್ನಬಹುದು ನಾಡು ನುಡಿಗಾಗಿ ಸೇವೆ ಸಲ್ಲಿಸುವುದರಲ್ಲೇ ಜೀವನದ ಸಾರ್ಥಕ್ಯವನ್ನು ಕಂಡುಕೊಳ್ಳುವ ನಮ್ಮ ಒಂದು ತಲೆಮಾರಿನ ಧೀಮಂತ ವ್ಯಕ್ತಿಗಳ ಸಾರ ಸರ್ವಸ್ವವನ್ನು ಇಂದಿನ ಪೀಳಿಗೆಯವರ ಜೊತೆ ಬೆಸೆಯಬಲ್ಲ ಈ 'ಮಹಾಬಲ' ರಿಂದ ಇಂದಿನವರು ಕಲಿಯಬೇಕಾದುದು ಬಹಳ ಇದೆ. ಇಂದಿನ ತಲೆಮಾರಿನ ವೈಶಿಷ್ಟ್ಯಗಳಾದ ವ್ಯವಧಾನರಹಿತ ತಲ್ಲಣಗಳು, ಹಿಡಿದ ಕೆಲಸಗಳನ್ನು ಪೂರೈಸಲಾರದ ಅಸ್ಥಿರತೆ, ಮಹಾಬಲೇಶ್ವರ ಭಟ್ಟರ ಶಬ್ದಕೋಶದಲ್ಲಿ ದಾಖಲಾಗೇ ಇಲ್ಲ.

ಇದರ ಪರಿಣಾಮ ಅವರ ವ್ಯಕ್ತಿತ್ವದ ಮೇಲಷ್ಟೇ ಅಲ್ಲ; ಅವರು ಕಟ್ಟಿಬೆಳಸಿದ ಸಂಸ್ಥೆಗಳೆಲ್ಲದರಲ್ಲೂ ಕಾಣಬಹುದು. ಈ ಮಾತಿನ ಸತ್ಯತೆಯನ್ನು ಕಾಣಬೇಕಾದರೆ ಅವರು ಕಟ್ಟಿಬೆಳೆಸಿದ ಸಂಸ್ಥೆಗಳನ್ನೇ ಹೊಕ್ಕು ನೋಡಬೇಕು. ತಾನು ಬೆಳೆಯುವುದರ ಜೊತೆಗೇ ತಾನು ಕಟ್ಟಿದ ಸಂಸ್ಥೆಗಳಿಗೆ ಎಂಥ ಭದ್ರ ಅಡಿಪಾಯ ಹಾಕಿದ್ದಾರೆಂದರೆ ಅವರು ಹೊರಬಂದ ಬಳಿಕವೂ ಆ ಸಂಸ್ಥೆಯಲ್ಲಿ ಇವರು ಹುಟ್ಟು ಹಾಕಿದ ಆದರ್ಶ, ಸಂಪ್ರದಾಯಗಳು ಕಿಂಚಿದನುಮಾನವಿಲ್ಲದೆ ಮುಂದುವರೆದುಕೊಂಡು ಬಂದಿರುವುದು ಕಂಡುಬರುತ್ತದೆ. ಇದು ಅವರ ವ್ಯಕ್ತಿತ್ವದ ಛಾಪಿಗಿರುವ ಶಕ್ತಿ.

ನಮ್ಮಲ್ಲಿ ಸಾರ್ಥಕರೆನ್ನಿಸಿಕೊಳ್ಳುವ ಅನೇಕ ವ್ಯಕ್ತಿಗಳು ಟಿಸಿಲೊಡೆಯುವ ಟೊಂಗೆಗಳತ್ತಲೇ ಆಕರ್ಷಿತರಾಗಿ ಮೂಲ ಬೇರುಗಳನ್ನು ಅವಗಣಿಸುವುದು ಸಾಮಾನ್ಯ ಸಂಗತಿ. ಆದರೆ ಸಾಗರದ ಮಹಾಬಲೇಶ್ವರ ಭಟ್ಟರು ನಾನು ಮೊದಲು ಕೃಷಿಕ ನಂತರ ಉಳಿದವ – ಎಂದು ವಿನೀತನಾಗಿ ಸಾರುವಂತೆ ತೋರುತ್ತದೆ. ಮಲೆನಾಡಿನ ಸಂಸ್ಕೃತಿಯೊಡನೆ ಅವಿನಾಭಾವ ಸಂಬಂಧ ಹೊಂದಿದ ಅಡಿಕೆ ಕೃಷಿಯನ್ನು ಅದೇ ಶ್ರದ್ಧೆ, ಅದೇ ಒಲವಿನೊಂದಿಗೆ ಅನೂಚಾನವಾಗಿ ಮುಂದುವರಿಸಿಕೊಂಡು ಬರುತ್ತಲೇ

ಉಳಿದ ಸಾಧನೆಗಳನ್ನೂ ಗೈದಿರುವುದು, ಇವರ ಬದುಕಿನ ಬದ್ಧತೆಯ ಕುರಿತು ಮೆಚ್ಚುಗೆ ಮೂಡಿಸದಿರದು.

ಈ ಉನ್ನತ ವ್ಯಕ್ತಿತ್ವದ 'ಮಹಾವೃಕ್ಷ'ದಡಿಯಲ್ಲಿ ನಮ್ಮ ಯುವಜನಾಂಗ ಇವರ ಆದರ್ಶ, ಶಿಸ್ತು, ಸಾಧನೆಗಳನ್ನು ಮೈಗೂಡಿಸಿಕೊಂಡು ಬರುವಂತಾಗಲಿ. ಮಲೆನಾಡ ಪ್ರಾಂತ್ಯದ ಈ ಧೀಮಂತ ವ್ಯಕ್ತಿತ್ವಕ್ಕೆ ಸದಾ ಸಂತೋಷ ಸಮೃದ್ಧಿಯ ತುಂಬು ಬದುಕನ್ನು ಭಗವಂತನು ಕರುಣಿಸಲೆಂದು ಹಾರೈಸುತ್ತೇನೆ.

# ಹರಕೆ - ಹಾರೈಕೆ

- ಕೆ. ಆರ್. ಲಿಂಗಪ್ಪ

"ಕನ್ನಡ ಮೆನಿಪ್ಪಾ ನಾಡು ಚೆಲ್ವಾಯ್ತು" ಇದು ಕನ್ನಡದ ಹಿರಿಯ ಕವಿಯೊಬ್ಬರ ವಾಣಿ. ತೆಂಕಣ ಗಾಳಿ ಅದುವೇ ಕನ್ನಡದ ಗಾಳಿ. ಸ್ವಾಮಿ ವಿವೇಕಾನಂದರು ಈ ರೀತಿ ಹೇಳಿದ್ದಾರೆ. 'ಎ ಮದರ್ಸ್ ಹಾರ್ಟ್, ದಿ ಹೀರೋಸ್ ವಿಲ್, ದಿ ಬ್ರೀಜ್ ಆಫ್ ಸೌತ್ ಇಂಡಿಯಾ, ದೀಸ್ ಆರ್ ದಿ ಅನ್‌ಪ್ಯಾರಲಲ್ಡ್ ಗಿಫ್ಟ್ಸ್ ಆಫ್ ಗಾಡ್ ಟು ಮ್ಯಾನ್‌ಕೈಂಡ್.' ಈ ತೆಂಕಣದ ಗಾಳಿಯೇ ಕನ್ನಡದ ಗಾಳಿ, ಸಹ್ಯಾದ್ರಿಯ ಗಾಳಿ, ಕನ್ನಡದ ಮಲೆನಾಡಿನ ಗಾಳಿ. ಇದು ಕನ್ನಡ ನಾಡಿಗೆ ಭಗವಂತನ ಅನುಗ್ರಹದ ಕೊಡುಗೆ. ಅಲ್ಲಿಯ ಜನರ ಸಂಸ್ಕೃತಿ, ಸಂಭಾವ್ಯತೆ ಜಗತ್ತಿನ ಇನ್ನಾವ ಭಾಗದಲ್ಲೂ ಕಾಣೆವು. ಅದೇ ಅದರ ಹೆಗ್ಗಳಿಕೆ. ಇಂತಹ ಸಾರ ಸಂಸ್ಕೃತಿಯ ಸರ್ವಸ್ವವೇ ಮಲೆನಾಡಿನ ಶಿವಮೊಗ್ಗ ಜಿಲ್ಲೆಯ ಪ್ರಮುಖ ಪಟ್ಟಣ ಸಾಗರ. ಮಲೆನಾಡಿನ ಉಳಿದ ಪ್ರಾಂತ್ಯವೂ ಭವ್ಯವಾದುದೇ. ಈ ಸಾಗರದಲ್ಲಿ ಖಾದಿ ಜುಬ್ಬ, ಬಿಳಿಯ ಪಂಚೆ, ಹೆಚ್ಚು ಕಡಿಮೆಯಿಲ್ಲದ ಅಚ್ಚುಕಟ್ಟಾದ ಮೈಕಟ್ಟು, ಸದಾ ಮಂದ ಹಾಸ ಇರುವ ಮಾನವ ಮೂರ್ತಿಯೊಂದು ನಮ್ಮ ಕಣ್ಣ ಮುಂದೆ ಸುಳಿಯುತ್ತದೆ. ಸಾಗರವೆಂದರೆ ಅದೇ. ಅದೆಂದರೇ ಸಾಗರ. ದಟ್ಟ ಮಲೆನಾಡಿನ ಭವ್ಯ ಪರಂಪರೆ ಕನ್ನಡದ ಸೊಗಡನ್ನು ಹಾಗೂ ಸಾರ್ವಜನಿಕ ನಿಷ್ಕಾಮ ಜೀವನದ ಮೆರುಗನ್ನು ಮೈತುಂಬಾ ರೂಢಿಸಿಕೊಂಡು ತಮ್ಮ ಶುದ್ಧ ಹಸ್ತ ಹಾಗೂ ನಿರ್ಮಲ ಚಿತ್ತದಿಂದ ನಾಡು ನುಡಿಯ ಸೇವೆ ಸಲ್ಲಿಸುತ್ತಾ ಬಂದಿರುವ ಒಂದು ವ್ಯಕ್ತಿ ಸಾಗರದ ಯಾವುದೇ ಸಾರ್ವತ್ರಿಕ, ಸಾಹಿತ್ಯಿಕ, ಹಾಗೂ ಸಾಂಸ್ಕೃತಿಕ ವೇದಿಕೆಯಲ್ಲಿ ನಿಲ್ಲುತ್ತಾರೆ. ಜನರಿಗೆ ಇವರ ಇನಿಮಾತುಗಳನ್ನು ಕೇಳಲು ಕಾತರ, ತವಕ. ಮಕ್ಕಳಿಂದ ಮುದುಕರವರೆಗೆ ನೆಟ್ಟಕಣ್ಣು, ಬಿಟ್ಟಬಾಯಿ, ಅದಾವುದೋ ಭಾವನಾ ಲೋಕದಲ್ಲಿ ವಿಹಾರ. ತಮ್ಮ ಮಾತಿನ ಮೋಡಿಯಿಂದ ಮೈಮರೆಸಿ ಸುಮಧುರ ಆಕರ್ಷಣೀಯ ವ್ಯಕ್ತಿತ್ವದಿಂದ ಮನಸೋಲಿಸುವ ಮಲೆನಾಡ ಅಚ್ಚ ಸಂಸ್ಕೃತಿಯ ಪ್ರತೀಕ, ನುಡಿಗಾರುಡಿಗ ಹಾಗೂ ಮಲೆನಾಡಿನ ತೊರೆಮನೆ ಹಳ್ಳಿಯ ಬಳ್ಳಿಯಲ್ಲಿ ಬಿಟ್ಟ ಹೂವು, ಟಿ. ಮಹಾಬಲೇಶ್ವರ ಭಟ್ಟ.

ತಂದೆ ವಿಶ್ವನಾಥ ಭಟ್ಟರು-ತಾಯಿ ಶ್ರೀಮತಿ ವೆಂಕಮ್ಮ. ಕನ್ನಡದ ಮಲೆನಾಡ ನುಡಿ ಮುತ್ತಿನ ಮಾತುಗಾರ, ಸಾರ್ವಜನಿಕ ಸೇವಾ ಧುರೀಣ, ಪತ್ರಕರ್ತ, ಕವಿ, ಪತ್ರಿಕೆಯ ಅಂಕಣಕಾರ ಒಂದೇ, ಎರಡೇ-ಈ ಸಮಗ್ರತೆಯ ಜೀವನ ಚೇತನವನ್ನು ಶ್ರೀ ಮಹಾಬಲೇಶ್ವರ ಭಟ್ಟರನ್ನು ಕನ್ನಡ ನಾಡಿಗೆ ಕೊಟ್ಟ ವಿಶ್ವನಾಥ ಭಟ್ಟ ಹಾಗೂ ವೆಂಕಮ್ಮನವರಿಗೆ ಈ ನಾಡು ಚಿರಋಣಿ. ಶ್ರೀ ಭಟ್ಟರ ಮಾತು ರೀತಿಗಳಿಂದ ಪ್ರೈಮನಸ್ಸು ತುಂಬಿದರೆ ಶ್ರೀಮತಿ ಪದ್ಮಾವತಿಯವರ ಕೈ ಅಡುಗೆಯಿಂದಾಗಿ ಹೊಟ್ಟೆಯೂ ತುಂಬುತ್ತದೆ. ಶ್ರೀಯುತ ಭಟ್ಟರ ಜೀವನ ಸಂಗಾತಿಯಾಗಿ, ಅವರಿಗೆ ಬೆನ್ನೆಲುಬಾಗಿ ನಿಂತು ತನ್ನ ಅಖಂಡ ಶ್ರದ್ಧೆ ತ್ಯಾಗ, ದುಡಿಮೆಗಳಿಂದ ಮನೆತನವನ್ನು ಕಟ್ಟಿದ ಕೀರ್ತಿ ಶ್ರೀಯುತರ ಧರ್ಮಪತ್ನಿಗೇ ಸಲ್ಲಬೇಕು. ಬಹುಶಃ ಶ್ರೀಮತಿ ಪದ್ಮಾವತಿಯವರ ತಾಳಿಯ ಬಲವೇ ಶ್ರೀಯುತ ಮಹಾಬಲೇಶ್ವರ ಭಟ್ಟರು ನಾಡು ನುಡಿಯ ಸೇವೆಯಲ್ಲಿ ಈ ಎತ್ತರಕ್ಕೇರಲು ಕಾರಣವೆಂದರೂ ಅತಿಶಯೋಕ್ತಿಯೇನಲ್ಲ. ಇದೇ ಜೀವನದ ಧರ್ಮ ಹಾಗೂ ಮರ್ಮ.

ಬೀಸುವ ಕಲ್ಲಿನ ಹಾಡುಗಾರಳಾದ ಜಾನಪದ ತಾಯಿಯೋರ್ವಳು ತನ್ನ ಮಗ ಹೀಗಾಗಲು ಬಯಸುತ್ತಾಳೆ.

'ಆಚಾರಕರನಾಗು, ನೀತಿಗೆ ಪ್ರಭುವಾಗು,
ಮಾತಿನಲಿ ಚೂಡಾಮಣಿಯಾಗು; ನನಕಂದ
ಜ್ಯೋತಿಯೇ ಆಗು ಜಗಕೆಲ್ಲ''- ಜಾನಪದ

ಪಂಚಾಚಾರಗಳಲ್ಲಿ ಗಣಾಚಾರ ಹಾಗೂ ಭೃತ್ಯಾಚಾರಗಳು ಅತಿ ಮುಖ್ಯ. ಅದೇ ವೀರಾಚಾರ ಹಾಗೂ ವಿನಯಾಚಾರ. ವೀರನಾಗಿರು ಮತ್ತು ಅಷ್ಟೇ ವಿನಯಶಾಲಿಯಾಗಿರು. ವೀರತನವಿಲ್ಲದ ವಿನಯ ಹೇಡಿತನ, ವಿನಯವಿಲ್ಲದ ವೀರತನ ಕ್ರೂರತನ-ಇದೇ ಮಾನವ ಜೀವನದ ಜೀವ ಜೀವಾಳ. ಶ್ರೀ ಮಹಾಬಲೇಶ್ವರ ಭಟ್ಟರನ್ನು ಪಡೆದ ತಾಯಿ ಶ್ರೀಮತಿ ವೆಂಕಮ್ಮನವರು ತನ್ನ ಮಗ ಹೀಗಾಗಲೆಂದು ಬಯಸಿ ಆಶೀರ್ವದಿಸಿರುವ ಕಾರಣವೇ ಶ್ರೀ ಮಹಾಬಲೇಶ್ವರ ಭಟ್ಟರ ಈ ಎತ್ತರದ ವ್ಯಕ್ತಿತ್ವ ಹಾಗೂ ಚಿತ್ತರದ ಜೀವತ್ವ.

ಸಾಗರ ಪುರಸಭೆಯ ಸದಸ್ಯರಾಗಿ, ಕಾಂಗ್ರೆಸ್ ಪಕ್ಷದ ಪ್ರಧಾನ ಕಾರ್ಯದರ್ಶಿಯಾಗಿ, ಕನ್ನಡಸಂಘದ ಅಧ್ಯಕ್ಷರಾಗಿ, ಮಲೆನಾಡು ಅಭಿವೃದ್ಧಿ ಪ್ರತಿಷ್ಠಾನದ ಹರಿಕಾರರಾಗಿ, ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಹಾಲೀ ಅಧ್ಯಕ್ಷರಾಗಿ, ಪುಸ್ತಕ ಪ್ರಕಟನಕಾರರಾಗಿ ಅಲ್ಲಿನ ಎಲ್ಲಾ ಸಮಾಜ ಸಂಘಟನೆಗಳ ಮುಂಚೂಣಿಯಾಗಿ - ಹೀಗೆ ಒಂದೇ ಎರಡೇ - ಅನೇಕ ರೀತಿಯಲ್ಲಿ ಕನ್ನಡ ನಾಡು ನುಡಿಗೆ ಶ್ರೀ ಮಹಾಬಲೇಶ್ವರ ಭಟ್ಟರ ಸ್ಮರಣೀಯ ಸೇವೆ ಸಂದಿದೆ. ಇಂದಿಗೂ ಸಲ್ಲುತ್ತಿದೆ.

ನಾಡ ಜನತೆ ಕೃತಜ್ಞತೆಯಿಂದ ಶ್ರೀ ಮಹಾಬಲೇಶ್ವರ ಭಟ್ಟರನ್ನು ಸ್ಮರಿಸಿದ್ದಾರೆ. ಸನ್ಮಾನಿಸಿದ್ದಾರೆ. 'ಮಹಾನಂದ' ಎಂಬ ಅಭಿನಂದನ ಗ್ರಂಥ ಸಮರ್ಪಣೆಯ ಕೀರ್ತಿಗೂ ಶ್ರೀಯುತ ಭಟ್ಟರು ಅರ್ಹರು. 'ನನ್ನ ಬದುಕು' ಎಂಬ ಶೀರ್ಷಿಕೆಯ ಶ್ರೀ ಮಹಾಬಲೇಶ್ವರ ಭಟ್ಟರ ಜೀವನ ಚಿತ್ರಣ ಸದ್ಯದಲ್ಲೇ ಹೊರಬರಲಿದೆ. ನಾಡು ಮತ್ತು ನಾನೂ ಸಹಾ ಅದಕ್ಕಾಗಿಯೇ ಕಾಯುತ್ತಿದ್ದೇವೆ. ಕಾತುರದಿಂದಿದ್ದೇವೆ. ಜಗತ್ತಿನಲ್ಲಿ ಎಲ್ಲವೂ ನಶ್ವರ. ಶಾಶ್ವತವಾದುದೆಂದರೆ ಇಂತಹ ಶ್ರದ್ಧಾ ಜೀವಿಗಳ ಆದರ್ಶ ಜೀವನವೇ. ಶಾಂತಿ, ಸಮಾಧಾನ, ನೆಮ್ಮದಿ ಮತ್ತು ಸಂಸ್ಕೃತಿವಂತ ಜೀವನದ ಗುರಿ ಮುಟ್ಟಿರುವ ಶ್ರೀ ಭಟ್ಟರಿಗೆ ಈಗ ಎಪ್ಪತ್ತು ವಸಂತಗಳನ್ನು ಕಂಡಿರುವ ಶುಭ ಸನ್ನಿವೇಶ' ಬದುಕು ಜಟಕಾ ಬಂಡಿ - ವಿಧಿಯದರ ಸಾಹೇಬ' ಎಂಬ ಜೀವನದ ರಹಸ್ಯವನ್ನು ಶ್ರೀ ಮಹಾಬಲೇಶ್ವರ ಭಟ್ಟರು ಕಂಡುಂಡುವರು. ಜೀರ್ಣಿಸಿಕೊಂಡವರು. ಎಲ್ಲರೊಳಗೊಂದಾಗಿ ಬಾಳುತ್ತ ಎಪ್ಪತ್ತು ವರ್ಷದ ತುಂಬು ಜೀವನ ಸಾಗಿಸುವುದು ಇಂದಿನ ದಿನಗಳಲ್ಲಿ ಸಾಮಾನ್ಯದ ಮಾತಲ್ಲ. ಶ್ರೀಯುತರ ರಕ್ತವೇ ಹಾಗೆ. ಅದು ನಾಡು-ನುಡಿಗೆ ಮುಡಿಪಿಟ್ಟ ಜೀವನ. ''ಬೆಲೆಯಿಂದಕ್ಕುಮೆ ಕೃತಿ, ಗಾವಿಲ, ಭುವನದ ಭಾಗ್ಯದಿಂದಮಕ್ಕುಂ.'' ಇದು ಆರ್ಷೇಯ ಕವಿವಾಣಿ. ಯಾವುದೇ ಮಾನವ ಯತ್ನದಿಂದ ಒಬ್ಬ ಕವಿ ಹುಟ್ಟುವುದಿಲ್ಲ, ಒಂದು ಕೃತಿ ಮೂಡಿ ಬರುವುದಿಲ್ಲ, ಅದು ಭಗವಂತನ ಕೃಪೆಯಿಂದ ಜಗತ್ತಿನ ಪುಣ್ಯದಿಂದ ಮೂಡಿ ಬರುತ್ತದೆ. ಶ್ರೀ ಮಹಾಬಲೇಶ್ವರ ಭಟ್ಟರು ಶ್ರೇಷ್ಠ ನಾಡಕವಿಗಳಲ್ಲೊಬ್ಬರು. ಅವರ ಕವಿತೆಗಳು ಸಹಜ, ಸುಂದರ ಹಾಗೂ ಸುಭಗ. ಓದಿದರೂ ಮತ್ತೊಮ್ಮೆ ಓದಬೇಕೆನಿಸುತ್ತದೆ. ಇಂತಹ ಅನೇಕ ಮುಖದ ರಸಮೋಡಿಗಾರರು, ಉತ್ತಮ ಕವಿಗಳು ಶ್ರೀ ಮಹಾಬಲೇಶ್ವರ ಭಟ್ಟರು. ಜನಪದರು ಜೀವನದ ಕ್ರಮ ಹಾಗೂ ಗುರಿಯನ್ನು ಇಷ್ಟು ಸುಂದರವಾಗಿ ಹಾಡಿದ್ದಾರೆ.

'ಮಂದಿ ಮಕ್ಕಳೊಳಗೆ ಚಂದಾಗೆ ಹೊಂದಿರಬೇಕು;
ನಂದೀಯ ಶಿವನ ದಯೆಯಿಂದ; ಹೋಗಾಗ;
ಮಂದಿ ಬಾಯಾಗೆ ಇರಬೇಕ''

ಎಪ್ಪತ್ತು ವರ್ಷ ತುಂಬಿದ ಸತ್ಯಶುದ್ಧಕಾಯಕ ಜೀವಿ ಶ್ರೀಮಹಾಬಲೇಶ್ವರ ಭಟ್ಟರಿಗೆ ಇನ್ನೂ ಮೂವತ್ತು ವರ್ಷದ ಭಗವಂತನ ಆಯುಷ್ಯದ ಆಸರೆಯಿದೆ. ಅಷ್ಟನ್ನು ಭಗವಂತನು ಅವರಿಗೆ ಕರುಣಿಸಲಿ. ಅವರು ನೂರ್ಕಾಲ ಬಾಳಲಿ. 'ಶತಮಾನಂ ಭವತಿ ಶರಾಯುಹೋ' ಈ ಮಾತು ಅವರಿಗೆ ನಿತ್ಯ ಸತ್ಯವಾಗಲಿ. ಇದೇ ನನ್ನ ಎದೆಯಾಂತರಾಳದ ಹರಕೆ, ಹಾರೈಕೆ.

# ಮುಗ್ಧ ಮನಸಿನ ಸಹೃದಯರು

- ಎಸ್. ರೋಹಿಣಿ ಶರ್ಮ

ಅಂದದ ದೇಹಕ್ಕೊಪ್ಪುವ ಉದ್ದನಾದ ಬಿಳಿಯ ಪಂಚೆ, ಗರಿಗರಿ ಇಸ್ತ್ರಿ ಮಾಡಿದ ಶುಭ್ರವಾದ ಬಿಳಿಜುಬ್ಬಾ, ಒಪ್ಪ-ಓರಣವಾಗಿ ಬಾಚಿದ ತಲೆಗೂದಲು, ದಿನವಿಡೀ ಮಂದಸ್ಮಿತ ಸೂಸುವ ಮುಗ್ಧ ಮುಖ, ವರ್ಷವಿಡೀ ಕಾಲಿಗೆ ತಾಗಿರುವ ಕಪ್ಪನಾದ-ಪುಟ್ಟದಾದ ಚೂಪಾದ ಬೂಟುಗಳಿಂದ ಕೂಡಿ ಕೈಯಲ್ಲೊಂದು ಪುಸ್ತಕ-ಹಾಳೆ-ಕೈಚೀಲ ಹಿಡಿದುಕೊಂಡು ಆತ್ಮೀಯರೊಂದಿಗೊಡಗೂಡಿ ನಿಧಾನವಾಗಿ ಹೋಗುತ್ತಿರುವ ಬೇದೂರು ಮಹಾಬಲೇಶ್ವರ ಭಟ್ಟರನ್ನು ಸಾಗರ ಪೇಟೆ, ಮತ್ತು ಸುತ್ತಮುತ್ತಲ ಹತ್ತಾರು ಹಳ್ಳಿಗಳಲ್ಲಿ ನೋಡದವರೇ ಇಲ್ಲ; ಅಪರೂಪಕ್ಕಾದರೂ ನೋಡಿ, ಮಾತಾಡಿ, ವಿಚಾರ ವಿನಿಮಯ ಮಾಡಿಕೊಳ್ಳದವರೇ ಇಲ್ಲ. ಇವರನ್ನು ಸಾಹಿತಿಯಾಗಿ - ಕೃಷಿಕರಾಗಿ -ರಾಜಕಾರಣಿಯಾಗಿ, ಸಮಾಜ ಸೇವಕರಾಗಿ, ಸಹಕಾರ ಬಂಧುವಾಗಿ ಕಂಡವರು ಕಾಣುವವರು ಸಾವಿರಾರು ಆತ್ಮೀಯರು ಇದ್ದಾರೆ. ನಾನಂತೂ ಇವರನ್ನು ಎಲ್ಲಕ್ಕಿಂತ ಹೆಚ್ಚಾಗಿ ಒಬ್ಬ ನಿರಾಡಂಬರ ಸಹೃದಯರನ್ನಾಗಿ, ಯಾರಿಗೂ ಕಾಯಾ, ವಾಚಾ, ಮನಸಾ ನೋವುಂಟು ಮಾಡದ ಸದಾ ಮುಗುಳ್ನಗುತ್ತಿರುವ ಮುಗ್ಧ ಮನಸ್ಸಿನ ಸಂತಸ ಪ್ರತಿರೂಪವೆಂದೇ ಕಂಡಿದ್ದೇವೆ - ಕಾಣುತ್ತಿದ್ದೇನೆ.

ಭಟ್ಟರ ನೆನಪಿನ ಸುರುಳಿ ನನಗೆ ಸುಮಾರು ಮೂರು ದಶಕಗಳ ಹಿಂದಕ್ಕೊ ಸುತ್ತುತ್ತಿದೆ. ನನ್ನ ತಂದೆ ಅಂದರೆ ಭೀಮನಕೋಣೆ ಸಂಭಯ್ಯನ ವೆಂಕಟರಾವ್ ಅವರು ಮತ್ತು ಭಟ್ಟರು ಇಬ್ಬರೂ ಆತ್ಮೀಯ ಸ್ನೇಹಿತರು. ನಮ್ಮೂರಿಗೆ ಬಂದಾಗಲೆಲ್ಲ ಭಟ್ಟರು ನಮ್ಮ ಮನೆಗೆ ಬರಲೇ ಬೇಕು. ನಮ್ಮ ತಂದೆಯೂ ಶಿಕ್ಷಣ, ರಾಜಕೀಯ, ಕೃಷಿ ಮತ್ತು ಸೇವಾ ಸಹಕಾರ ಕ್ಷೇತ್ರಗಳಲ್ಲಿ ತಮ್ಮನ್ನು ಇಡಿಯಾಗಿ ತೊಡಗಿಸಿಕೊಂಡವರು. ಹಾಗಾಗಿ ಸುಮಾರು ೧೯೭೪-೭೫ರಲ್ಲಿ ಇರಬೇಕು- ಆಗ ಭಟ್ಟರು ಸಾಗರ ಕೃಷಿ ಭೂ ಅಭಿವೃದ್ಧಿ ಬ್ಯಾಂಕಿನ ಅಧ್ಯಕ್ಷರಾಗಿದ್ದರು. ಆಗ ನಮ್ಮ ತಂದೆಯೂ ಭೀಮನ ಕೋಣೆ ಕೃಷಿ ಭೂ ಅಭಿವೃದ್ಧಿ ಬ್ಯಾಂಕಿನ ಜೊತೆ ನಿಕಟ ಸಂಪರ್ಕವಿರಿಸಿಕೊಂಡಿದ್ದರು. ಮರುಪಾವತಿ, ರೈತರ, ಬ್ಯಾಂಕಿನಅಭಿವೃದ್ಧಿ ಇತ್ಯಾದಿಗಳ ಬಗ್ಗೆ ಆಗಾಗ್ಗೆ ಆಳವಾಗಿ ಮಾತನಾಡುತ್ತಿದ್ದರು. ರೈತರ ಮಗಳಾಗಿ ಹುಟ್ಟಿರುವ, ಕೃಷಿ, ಸಾಹಿತ್ಯದಲ್ಲಿ ಆಸಕ್ತಿ-ಅಭಿರುಚಿ-ಅರ್ಹತೆ ಇರುವ ನನಗೆ

ಅವರು ಅಂದು ಚರ್ಚಿಸುತ್ತಿದ್ದ ಸಂಗತಿಗಳೆಲ್ಲಾ ಇಂದಿಗೂ ಹಚ್ಚಹಸಿರು. ರೈತರು ಮಿತವಾಗಿ ಸಾಲಮಾಡಿ ಬದುಕಬೇಕೆಂಬುದು ಭಟ್ಟರ ವಾದವಾದರೆ, ಸರ್ಕಾರದ ಸವಲತ್ತುಸಿಗುವಾಗ ಬೇಕಾಗುವಷ್ಟು ಸಾಲ ಮಾಡಿಯಾದರೂ ರೈತರು ಜಮೀನನ್ನು ಅಭಿವೃದ್ಧಿ ಮಾಡಬೇಕೆಂಬುದು ನನ್ನ ತಂದೆಯವಾದ. ಒಟ್ಟಿನಲ್ಲಿ ತೆಗೆದುಕೊಂಡ ಸಾಲವನ್ನು ಮರುಪಾವತಿ ಮಾಡಬೇಕೆಂಬ ಒಮ್ಮತದ ಅಭಿಪ್ರಾಯ ಇಬ್ಬರಲ್ಲೂ ಇರುತ್ತಿತ್ತು. ಹೀಗೆ-ಎಲ್ಲೇಕಾಣಲಿ, ಎಲ್ಲಿಗೇ ಹೋಗಲಿ, ಪರಸ್ಪರ ಕಂಡಾಗ ಇಬ್ಬರ ಆತ್ಮೀಯತೆಯ ಮಾತು ಕತೆಗಳು ಇಂದಿಗೂ ನಡೆಯುತ್ತಿವೆ. ಇತ್ತೀಚೆಗಂತೂ ನಾನೂ ಅವರೊಟ್ಟಿಗೆ ಸೇರುವಂತಾದ ಮೇಲೆ (ಬರಹಗಾರ್ತಿಯಾದ ಮೇಲೆ) ಮತ್ತೂ ಮುಂದುವರೆದಿದೆ. ಹಾಗೇ ಮನೆಗೆ ಬಂದಾಗಲೆಲ್ಲ ಅವರ ನಡೆ-ನುಡಿ, ಕರಾರುವಕ್ಕಾದ ಭಂಗಿ, ಮೋಡಿ ಮಾಡುವ ಬಟ್ಟೆಯ ಬಳಿ ಬಣ್ಣ, ನಯವಾಗಿ ಮಾತನಾಡಿಸುವ ಆತ್ಮೀಯತೆ, ಮೋಹಕ ಮುಗುಳುನಗು, ಮನೆಮಂದಿಯ ಎಲ್ಲರೊಂದಿಗೂ ಬೆರೆಯುವ ಅಪರೂಪದ ಗುಣಕ್ಕೆ ನಾನು ಮಾರುಹೋಗಿದ್ದೇನೆ. ಅವರು ಮನೆಗೆ ಬಂದಾಗ ನಾವು ಕೊಡುವ ಪಾನೀಯವೇ ಆಗಲಿ, ತಿಂಡಿ-ತೀರ್ಥಗಳೇ ಆಗಲಿ ಸ್ವೀಕರಿಸಲಿ-ಯಾ-ಬಿಡಲಿ, ನಮಗೆ ಅವರು ಬಂದಿದ್ದಕ್ಕೆ ಸಂತೋಷವಾಗುತ್ತಿತ್ತು.

ಅಂದು ಬೆಂಗಳೂರಿನಲ್ಲಿ (೨೧-೬-೯೩) ಹವ್ಯಕ ಸಂಘಧ ಸುವರ್ಣ ಮಹೋತ್ಸವ ಸಮಾರಂಭ. ನನಗೂ ಕೂಡ ಆ ದಿನ ಸುವರ್ಣಾಕ್ಷರದಲ್ಲಿ ಬರೆದಿಡುವಂಥ ದಿನವೇ ಆಗಿತ್ತು. ಪ್ರಸಿದ್ಧ ಚೌಡಯ್ಯ ಸ್ಮಾರಕ ಸಭಾಂಗಣದಲ್ಲಿ ಕಿಕ್ಕಿರಿದ ಜನ ಸಮೂಹ, ಸುವ್ಯವಸ್ಥಿತ ಸಭಾಂಗಣದ ವೇದಿಕೆಯ ಮೇಲೆ ಕುಳಿತು ಧಾರ್ಮಿಕ ಗೋಷ್ಠಿಯಲ್ಲಿ 'ಧರ್ಮಾಚರಣೆಯಲ್ಲಿ ಸ್ತ್ರೀಯರ ಪಾತ್ರ' ಎಂಬ ವಿಷಯದ ಕುರಿತು ಉಪನ್ಯಾಸ ನೀಡಿದ್ದೆ. ಉಪನ್ಯಾಸ ತುಂಬಾ ಚೆನ್ನಾಗಿ ಬಂದಿದ್ದರಿಂದ ಎಲ್ಲರೂ ನನ್ನನ್ನು ಅಭಿನಂದಿಸಿದವರೇ. ಆದರೆ ಭಟ್ಟರ ಅಭಿನಂದನೆ ಹಾಗೂ ಆತ್ಮೀಯತೆ ನನಗೆ ಇನ್ನೂ ಕಣ್ಣಿಗೆ ಕಟ್ಟಿದಂತಿದೆ. ನಾನು ಸಾಗರಕ್ಕೆ ಹೋದಾಗ ಅಪರೂಪಕ್ಕೆಲ್ಲಾದರೂ ಭೇಟಿ ಆದರೂ ಸಾಹಿತ್ಯದ ಬಗ್ಗೆ ಹೆಚ್ಚು ವಿಚಾರ ವಿನಿಮಯ ಮಾಡುಷ್ಟು ಸಮಯ ಸಿಗುತ್ತಿರಲಿಲ್ಲ. ವೇದಿಕೆ ಮೇಲಿನ ನನ್ನ ಭಾಷಣ ಹಾಗೂ ತಮ್ಮ ಆತ್ಮೀಯ ಬಂಧುಗಳಾದ ವೆಂಕಟರಾಯರ ಮಗಳೆಂದು ತಿಳಿದು ಬಂದಾಗ ಅವರಿಗೆ ಆದ ಸಂತೋಷ ಅಷ್ಟಿಷ್ಟಲ್ಲವಂತೆ. ಪಕ್ಕದಲ್ಲೇ ಕುಳಿತವರಿಗೆ ಹೇಳಿದರಂತೆ 'ಅಂತೂ ನಮ್ಮ ಜಿಲ್ಲೆಯಲ್ಲಿ (ಶಿವಮೊಗ್ಗ) ಒಬ್ಬ ಸಮರ್ಥ ಮಹಿಳಾ ಲೇಖಕಿ ಉದಯಿಸಿದಂತಾಯಿತು' ಎಂದು ಹೇಳಿದ್ದಲ್ಲದೆ ನನ್ನನ್ನು ಅಂದು ಅಲ್ಲಿಯೇ ಬಹಳ ಕೊಂಡಾಡಿದರೂಕೂಡ. ಆನಂತರ ನಾನು ರಜೆಗೆ ಸಾಗರಕ್ಕೆಬಂದಾಗಲೆಲ್ಲ ಈಗ ಏನು ಬರೆಯುತ್ತಿದ್ದೀರಿ'? ಎಂದು ವಿಚಾರಿಸಿಕೊಳ್ಳುತ್ತಲೇ ನಾನು ಆ ಭೇಟಿಗೆ ಸ್ವಲ್ಪ

ಮೊದಲು ಬರೆದ ಲೇಖನಗಳ ಧನಾತ್ಮಕ ಅಂಶಗಳ ಬಗ್ಗೆ ಹೇಳುತ್ತಲೇ ಇರುತ್ತಾರೆ. ಆಗ ನನಗನ್ನಿಸುವುದು ನಿಜವಾಗಿಯೂ ಇಂಥ ಶ್ರೀಮಂತ ಸಹೃದಯ-ಹಿರಿಯರ ಅಗತ್ಯ ಕನ್ನಡ ಭಾಷೆಗೆ ಕನ್ನಡ ನಾಡಿಗೆ; ಹಿಂದಿಗಿಂತ - ಇಂದು ಹೆಚ್ಚಾಗಿ ಬೇಕಾಗಿದೆ.

ಭಟ್ಟರಿಗೆ ಎಪ್ಪತ್ತರ ಹುಟ್ಟುಹಬ್ಬಕ್ಕಾಗಿ ಅಭಿನಂದನ ಗ್ರಂಥ ಹೊರತರಲು ನಿರ್ಧರಿಸಿದ್ದೇವೆ ಎಂದೂ - ಅದಕ್ಕೆ ಒಂದು ಲೇಖನವನ್ನು ಬರೆದು ಕಳುಹಿಸಿ ಎಂದು ಸಂಚಾಲಕರು ಅಪೇಕ್ಷಿಸಿದ್ದರಿಂದ ನನಗೂ ಅವರ ಬಗ್ಗೆ ಬರೆಯಲು ಖುಷಿ ಎನಿಸಿತು. ಆಗ ನನ್ನ ಪತಿ ಕೂಡ ಅವರ ವಿದ್ಯಾರ್ಥಿ ಜೀವನದಲ್ಲಿ ನಡೆದ ಒಂದೆರಡು ಘಟನೆಗಳನ್ನು ನನ್ನಲ್ಲಿ ಹೇಳಿ ಭಟ್ಟರು ಅಜಾತ ಶತ್ರು, ಸ್ಥಿತ ಪ್ರಜ್ಞರು ಎಂದು ಅವರ ಉತ್ತಮ ಗುಣ, ನಡೆ-ನುಡಿಗಳನ್ನು ಹೇಳಿದರು. ಅಂಥ ಒಂದು ಸಂದರ್ಭ ಇಲ್ಲಿ ಪ್ರಸ್ತಾಪಿಸಿದ್ದೇನೆ.

ನನ್ನ ಪತಿ ಜಿ.ಟಿ. ಶ್ರೀಧರ ಶರ್ಮಾ ಅವರು ಕನ್ನಡದ ಸುಪ್ರಸಿದ್ಧ ನವ್ಯಕವಿ ಹಾಗೂ ದಾರ್ಶನಿಕ ಮೊಗೇರಿ ಗೋಪಾಲಕೃಷ್ಣ ಅಡಿಗರ ಖಾಸಾ ಶಿಷ್ಯರಲ್ಲಿ ಒಬ್ಬರು; ನಿಜ ಜೀವನದಲ್ಲಿ ಹಾಗೂ ಸಾಹಿತ್ಯದಲ್ಲೂ ಕೂಡ. ದಿ. ಅಡಿಗರು ಆಗ ಸಾಗರದ ಲಾಲ್ ಬಹದ್ದೂರ್ ಕಾಲೇಜಿನಲ್ಲಿ ಪ್ರಾಂಶುಪಾಲರಾಗಿದ್ದರು. ಅಂಥ ಅಡಿಗರಿಂದ ಇಂಗ್ಲೀಷ್ ಸಾಹಿತ್ಯ ಕಲಿತ ಅದೃಷ್ಟವಂತರು ನನ್ನ ಪತಿ. ಆಗ ಪರಿಸ್ಥಿತಿಯ ತೀವ್ರ ಒತ್ತಡದಿಂದಲೋ ಅಥವಾ ವಿಧಿಯ ಕೈವಾಡದಿಂದಲೋ ಅಡಿಗರು ಸಾಗರದ ಕಾಲೇಜನ್ನು ಬಿಟ್ಟು ಉಡುಪಿ ಕಾಲೇಜಿಗೆ ಹೋಗಲು ತೀರ್ಮಾನಿಸಿದರು. ಆಗ ಕಾಲೇಜಿನ ಆಡಳಿತ ಮಂಡಳಿಯವರ ಧೋರಣೆಯ ವಿರುದ್ಧವಿದ್ಯಾರ್ಥಿಗಳೆಲ್ಲಾ ಮುಷ್ಕರಕ್ಕೆ ಮುಂದಾಗಿ ಬಿಟ್ಟರು. ನಮ್ಮ ಭಟ್ಟರೂ ಆಗ ಕಾಲೇಜಿನ ಆಡಳಿತ ಮಂಡಳಿಯಲ್ಲಿದ್ದಿದ್ದರಿಂದ ಅವರಿಗೂ ಬಿಸಿ ಮುಟ್ಟಿಸಿಯೇ ಬಿಟ್ಟರು. ಮಾರುಕಟ್ಟೆಯ ರಸ್ತೆಯಲ್ಲಿ ಮಹಾಬಲೇಶ್ವರ ಭಟ್ಟರ ಅಂಗಡಿ ಮತ್ತು ಜಲಂಧರ ಪ್ರಕಟಣಾಲಯವಿತ್ತು. ಅಡಿಗಾಭಿಮಾನಿಗಳು ಆ ಅಂಗಡಿಗೂ ಹೋಗಿ ಅಡಿಗರ ಪರ ಭಟ್ಟರವಿರುದ್ಧ ಘೋಷಣೆಗಳನ್ನು ಕೂಗಿದರಂತೆ. ಅದರಲ್ಲೂ ಕೇಳಬೇಕೆ ? ಯುವಕರು, ಅಡಿಗರ ಕಟ್ಟಾ ಶಿಷ್ಯಾಭಿಮಾನಿಗಳೆಂದ ಮೇಲೆ - ಆರಕ್ಷಕರನ್ನು ಕರೆಸುವುದೊಂದೇ ಬಾಕಿಯಿತ್ತು. ಇಷ್ಟಾದರೂ ಸ್ವಲ್ಪವೂ ಎದೆಗುಂದದ ಭಟ್ಟರು ವಿದ್ಯಾರ್ಥಿ ನಾಯಕನೊಬ್ಬರನ್ನು ಕರೆದು, ಎಲ್ಲಾ ವಿಚಾರವನ್ನು ಸಮಾಧಾನ ಚಿತ್ತದಿಂದ, ಕೂಲಂಕಶವಾಗಿ ಕೇಳಿ, ಅಷ್ಟೇ ನಿಧಾನವಾಗಿ ಸಮಸ್ಯೆಯನ್ನು ವಿವರಿಸಿ ವಿದ್ಯಾರ್ಥಿಗಳನ್ನು ಶಾಂತಚಿತ್ತರನ್ನಾಗಿ ಕಳುಹಿಸಿದ್ದು ಅವರ ದೊಡ್ಡ ಗುಣಕ್ಕೆ ಉತ್ತಮ ಉದಾಹರಣೆಗೆ ಆ ಗುಂಪಿನ ಮುಖ್ಯ ಮುಖಂಡರೇ ಇವರಾಗಿದ್ದು (ನನ್ನ ಪತಿ) ಇವರಿಗೆ ಭಟ್ಟರನ್ನು ಕಂಡಾಗ ನೆನಪು ಮರುಕಳಿಸಿದರೂ ಭಟ್ಟರು ಮಾತ್ರಾ ಅದಾವುದನ್ನೂ ನೆನಪಿನಲ್ಲಿಟ್ಟುಕೊಳ್ಳದೆ ನಾನು ಕಂಡಾಗಲೆಲ್ಲಾ ಪ್ರೀತಿಯಿಂದ

ಮಾತನಾಡುತ್ತಾರೆ. ಆದ್ದರಿಂದ ನನ್ನ ಪತಿಯೂ ಕೂಡ ಈ ಸಂದರ್ಭದಲ್ಲಿ ಅವರನ್ನು ನೆನಪು ಮಾಡಿಕೊಂಡು ಅವರ ಸಜ್ಜನಿಕೆ ಬಗ್ಗೆ ಹೇಳಿದ್ದರಿಂದ ಭಟ್ಟರ ಬಗ್ಗೆ ಬರೆದಷ್ಟೂ ಇದೆ ಎನಿಸದಿರದು.

ಇತ್ತೀಚಿನ ಮತ್ತೊಂದು ಮುಖ್ಯ ಸಂಗತಿಯೆಂದರೆ ಭಟ್ಟರು ಅತಿಕಿರಿಯರನ್ನು ಹೇಗೆ ನಯ-ವಿನಯದಿಂದ ಕಾಣುತ್ತಾರೆಂಬುದಾಗಿದೆ. ನನ್ನಂತೆ ನನ್ನ ಮಗ ಚಿ. ಆರ್ಯಮಿತ್ರನಿಗೆ ಸಾಹಿತ್ಯ, ಪತ್ರಿಕೋದ್ಯಮದಲ್ಲಿ ಅತೀವ ಆಸಕ್ತಿ, ಅಭಿರುಚಿ, ಇದರ ಪೂರೈಕೆಗಾಗಿ ಸಾಗರದಲ್ಲೇ ಓದುತ್ತಿರುವ ಅವನನ್ನು ಸಾಗರದ ಕನ್ನಡ ಸಾಹಿತ್ಯ ಪರಿಷತ್ತಿಗೆ ಆಜೀವ ಚಂದಾದಾರರನ್ನಾಗಿ ಮಾಡಿದೆವು. ಆಗ ಅವನು ನಮ್ಮೊಟ್ಟಿಗಿರಲಿಲ್ಲ. ಮುಖತಃ ಪರಿಚಯಿಸಬೇಕಲ್ಲ. ಅನಂತರ ಅವರೇ ಖುದ್ದಾಗಿ ಒಂದುದಿನ ನನ್ನ ತಮ್ಮನ ಕನ್ನಡಕದ ಅಂಗಡಿ 'ಸಂಭಯ್ಯ ಆಪ್ಟಿಕಲ್ಸ್'ಗೆ ಬಂದು ನನ್ನ ಮಗನ ಪರಿಚಯ ಮಾಡಿಕೊಂಡು ಪರಿಷತ್ತಿನ ಕಾರ್ಯಕ್ರಮಗಳಿಗೆ ತಪ್ಪದೇ ಬರುತ್ತಿರು ಎಂದು ಬೆನ್ನು ಚಪ್ಪರಿಸಿ ಹೋದರಂತೆ. ಅಂತೆಯೇ ಸ್ವಲ್ಪ ದಿನಕ್ಕೆ ಪರಿಷತ್ತಿನಲ್ಲಿ ಕಾರ್ಯಕ್ರಮ ನಡೆದಾಗ ನನ್ನ ಮಗನೂ ಹೋಗಿದ್ದು ಆಗ ಪ್ರತಿಯೊಬ್ಬರಿಗೂ ನನ್ನ ಮಗನನ್ನು ಪರಿಚಯಿಸಿದ್ದನ್ನು ನೋಡಿ ನನ್ನಮಗನಿಗೆ ಅನ್ನಿಸಿದ್ದು ಅಂಥ ನಯ-ವಿನಯ ಬಹು ಅಪರೂಪ, ಇಂಥ ವ್ಯಕ್ತಿಯನ್ನು ಪರಿಚಯ ಮಾಡಿಸಿದ್ದಕ್ಕೆ ನನಗೆ ತುಂಬಾ ಖುಷಿಯಾಯಿತಮ್ಮ' ಎನ್ನುತ್ತಾನೆ.

ಸಾಗರ ತಾಲೂಕಿನ ಒಂದು ಮೂಲೆಯ ಹಳ್ಳಿತೊರೆಮನೆಯಲ್ಲಿ ವಿಶ್ವನಾಥ ಭಟ್ಟ ಮತ್ತು ವೆಂಕಮ್ಮ ಅವರಿಗೆ ಮಗನಾಗಿ ಹುಟ್ಟಿದ ಭಟ್ಟರು ಏಳು ಮಕ್ಕಳನ್ನು ಪಡೆದಿರುವ ತುಂಬು ಸಂಸಾರಿಗಳು. ರಾಜಕೀಯ, ಸಾಹಿತ್ಯ, ಶಿಕ್ಷಣ, ಸಹಕಾರ ಇತ್ಯಾದಿಗಳಲ್ಲಿ ನಾನಾ ವಿಧವಾಗಿ ತೊಡಗಿಸಿಕೊಂಡಿದ್ದರೂ ಸಾಹಿತ್ಯದ ಹೊರತಾಗಿ ಮತ್ತಾವುದನ್ನೂ ಅತಿಯಾಗಿ ಹಚ್ಚಿಕೊಂಡವರಲ್ಲ. ಸದಾ ಸಾಹಿತ್ಯ, ಸಾಹಿತಿಗಳ ಗುಂಗಿನಲ್ಲಿಯೇ ಇರುವ ಭಟ್ಟರಿಗೆ ಸಾಹಿತ್ಯವೆಂದರೆ ರಸದೌತಣ; ಸಾಹಿತಿಗಳೆಂದರೆ ದೇವತೆಗಳೇ ಸರಿ. ಅವರ ಪತ್ನಿ ಪದ್ಮಾವತಮ್ಮಳೂ ಕೂಡ ಅವರ ಸಾಹಿತ್ಯಕೃಷಿಗೆ ನೀರೆರೆದವರೇನೋ ಅಂದರೂ ತಪ್ಪಿಲ್ಲ. ಪತಿಯಂತೆ ಪತ್ನಿಯೂಕೂಡ ನಿರಾಡಂಬರಿ-ನಿರಹಂಕಾರಿ ಎಂದು ನನ್ನ ಗಮನಕ್ಕೆ ಬಂದ ಮೊದಲ ಅಂಶ.

ನಾನು ಹುಟ್ಟಿದ ಮನೆಯಿಂದ ಕೊಟ್ಟ ಮನೆತನಕ, ಪತಿಯಿಂದ ಮಗನತನಕ ಬೆಳೆಯುತ್ತಲೇ ಬಂದಿರುವ ನನ್ನ ಹಾಗೂ ಮಹಾಬಲೇಶ್ವರ ಭಟ್ಟರೊಂದಿಗಿನ ಆತ್ಮೀಯತೆ, ಪಿತೃವಾತ್ಸಲ್ಯ ಸದಾ ಸ್ಫೂರ್ತಿದಾಯಕ, ಅಷ್ಟೇ ಪ್ರೋತ್ಸಾಹದಾಯಕ.

# ಸೃಜನ ಶೀಲತೆ : ಒಂದು ಮುಖ

- ಬೇಡರೆಡ್ಡಿಹಳ್ಳಿ ಪಂಪಣ್ಣ

''ಅಚೀಚೆ ಹಾರಿದರೆ, ಕೈ ಕಾಲು ಒತ್ತಿದರೆ, ಮಂತ್ರಿಯೂ ಆಗಬಹುದಿತ್ತು. ಸಂತಸದ ಜೀವನ ತಣಿಸಬಹುದಿತ್ತು, ಅಂಗಳದ ತುಂಬೆಲ್ಲಾ ಕುಣಿಯಬಹುದಿತ್ತು ಆ ಹುಚ್ಚು ನನಗಿಲ್ಲ'' - ಶ್ರೀ ಮಹಾಬಲೇಶ್ವರ ಭಟ್ಟರು ತಮ್ಮದೇ ಕವನ ಒಂದರಲ್ಲಿ ಈ ನುಡಿಗಳನ್ನುಬರೆದು ಆ ಮೂಲಕ ತಮ್ಮ ಪ್ರಾಮಾಣಿಕತನ, ಅನಿಸಿಕೆಗಳನ್ನು ನಮ್ಮ ಮುಂದೆ ಬಿಚ್ಚಿಟ್ಟಿದ್ದಾರೆ; ಇದು ಕೇವಲ ರಾಜಕೀಯ ರಂಗಕ್ಕೆ ಮಾತ್ರವಲ್ಲ - ಸಮಾಜದ ಎಲ್ಲ ರಂಗಗಳಿಗೂ, ಅನ್ವಯಿಸುವಂತಹ ಅವರ ಅಂತರಾಳದಿಂದ ಹೊಮ್ಮಿಬಂದ ಮುತ್ತಿನಂತಹ ನುಡಿಗಳು. ನಿಸ್ವಾರ್ಥ ಸೇವೆ, ಸುಧೀರ್ಘ ದುಡಿಮೆ, ಅತಿಸುಖಿಕೆಳಸದ, ಪ್ರತಿಫಲಕ್ಕಾಗಿ ಕಾಯದ, ಸಮಾಜದ ಯಾವುದೇ ಕ್ಷೇತ್ರದಲ್ಲಿ ಸಕ್ರಿಯವಾಗಿ ಭಾಗವಹಿಸಿ, ಋಜುಮಾರ್ಗದಲ್ಲಿ ನಡೆಯುತ್ತಿರುವ, ಯಾವುದೇ ವ್ಯಕ್ತಿಗೆ ಮೇಲಿನ ಅನಿಸಿಕೆ ಸಹಜವೇ'' - ಅಧಿಕಾರದಲ್ಲಿರುವಾಗ - ಸ್ವಜನ ಪಕ್ಷಪಾತ, ಸ್ವಪ್ರತಿಷ್ಠೆ ಲಂಚಗುಳಿತನಗಳೆಂಬ ಅಡ್ಡದಾರಿಗಳಿಂದ ಮೇಲೆ ಬಂದು ಮೆರೆಯುತ್ತಿರುವವರನ್ನು ಕಂಡಾಗ, ನಿಷ್ಠೆಯಿಂದ, ನಿಸ್ವಾರ್ಥಭಾವನೆಯಿಂದ ದುಡಿಯುತ್ತಿರುವ ಯಾರೇ ವ್ಯಕ್ತಿಗೆ ನೈರಾಶ್ಯಭಾವನೆ ಉಂಟಾಗಿ, ಆ ವ್ಯಕ್ತಿ ಕ್ರಮೇಣ ಸೋಲಿನ ಅಂಚಿಗೆ ಸರಿಯುವುದು ಸಾಮಾನ್ಯ. ಆದರೆ, ಮನೋನಿಗ್ರಹ, ದೃಢಸಂಕಲ್ಪ, ಶ್ರದ್ಧೆ, ಸಮಾಜಕ್ಕೆ ಏನನ್ನಾದರೂ ಒಳಿತನ್ನು ಮಾಡಬೇಕೆಂಬ ಆತ್ಮ ವಿಶ್ವಾಸ, ಛಲ ಇರುವ ವ್ಯಕ್ತಿಗಳಲ್ಲಿ ಅಂತಹ ಯಾವ ಸ್ವಾರ್ಥ ಮನೋಭಾವವೂ ಸುಳಿಯದು. ಅವರು ತುಳಿಯುವ ದಾರಿಯೇ ರಾಜಮಾರ್ಗ-ಮನಸ್ಸು ಚೊಕ್ಕ ಚಿನ್ನ. ಇಂತಹ ವ್ಯಕ್ತಿಗಳು ಈ ಸಮಾಜದಲ್ಲಿ ಕೆಲವರಾದರೂ ಅಲ್ಲಲ್ಲಿ ಇರುವುದು ಈ ನಾಡಿನ ಪುಣ್ಯ. ಅಂತಹವರಲ್ಲೊಬ್ಬರು ಶ್ರೀ ಟಿ. ಮಹಾಬಲೇಶ್ವರ ಭಟ್ಟರು.

ಶ್ರೀ ಮಹಾಬಲೇಶ್ವರ ಭಟ್ಟರನ್ನು ನಾನು ಹತ್ತಿರದಲ್ಲಿ ಕಂಡು, ನೋಡಿದುದಕ್ಕಿಂತ, ಅವರ ಬಗ್ಗೆ ಅವರ ಅಭಿಮಾನಿಗಳಿಂದ, ಜನತೆಯಿಂದ, ಕೇಳಿ ತಿಳಿದುಕೊಂಡಿರುವುದೇ ಹೆಚ್ಚು. ಹಾಗೆಂದು ಅವರು ನನಗೆ ಅಪರಿಚಿತರೇನಲ್ಲ. ಮಾನ್ಯ ಭಟ್ಟರೊಂದಿಗಿನ ಗೌರವ ಪೂರ್ವಕವಾದ ನನ್ನ ಸ್ನೇಹ ಸುಮಾರು ೨೫ ವರ್ಷಗಳಷ್ಟು ಹಳೆಯದು. ಕೆಲವು ಸಾಹಿತ್ಯ ಸಮಾರಂಭಗಳಲ್ಲಿ ಶ್ರೀ ಭಟ್ಟರೊಂದಿಗೆ

ಭಾಗವಹಿಸಿ, ಅವರೊಡನೆ ಬೆರೆತು, ಅವರನ್ನೂ, ಅವರ ಸೃಜನಶೀಲವ್ಯಕ್ತಿತ್ವವನ್ನು ಹತ್ತಿರದಲ್ಲಿ ಕಂಡ ಭಾಗ್ಯ ನನ್ನದಾಗಿ, ನಾನು ಹೆಮ್ಮೆ ಪಟ್ಟಿದ್ದೇನೆ. ಶ್ರೀಯುತ ಭಟ್ಟರು, ಮೊದಲಿನಿಂದಲೂ ನನ್ನ ಸಾಹಿತ್ಯ ಕೃಷಿಗೆ, ತಮ್ಮ ಪ್ರೋತ್ಸಾಹದ ಸಲಿಲ ಧಾರೆಯನ್ನು ಹರಿಸಿ, ನನ್ನ ಸಾಹಿತ್ಯದ ಕುಡಿಯನ್ನು ಬೆಳೆಸಿ ಪೋಷಿಸುತ್ತಾ ಬಂದವರಾಗಿದ್ದಾರೆ. ನನಗೆ ಭಟ್ಟರ ಪರಿಚಯವಾದದ್ದು ೧೯೭೩ರಲ್ಲಿ. ಅವರು ಆ ವೇಳೆಗಾಗಲೇ ಸಮಾಜದ ವಿವಿಧ ರಂಗಗಳಲ್ಲಿ ಸಮರ್ಥವಾಗಿ, ಕೆಲಸಮಾಡಿ, ಬೆಳೆದು ಹೆಸರುಗಳಿಸಿ ಮೇಲೆ ಬಂದವರಾಗಿದ್ದರು. ಭಟ್ಟರಿಗೆ ಆಗಿನ್ನೂ ೪೫ರ ಆಚೀಚಿನ ಪ್ರಾಯ. ನಡುವಯಸ್ಸು, ವ್ಯಕ್ತಿ ಇನ್ನು ಪಕ್ವ ಆಗುವ ಕಾಲ. ಅಷ್ಟು ಹೊತ್ತಿಗೆ ಅವರು ತಮ್ಮ ಸಾಧನೆಗಳಿಂದ ಯಶಸ್ಸಿನ ಮೆಟ್ಟಲೇರಿ ಪ್ರಾಜ್ಞರ ಸಾಲಿನಲ್ಲಿದ್ದರು. ಅದಾದ ಈಚಿನ ಸುಮಾರು ೨೫ ವರ್ಷಗಳಲ್ಲಿ ಭಟ್ಟರು ಅರ್ಥಪೂರ್ಣವಾದ, ಪಕ್ವಫಲವಾಗಿ, ಇನ್ನೂ, ಯಶಸ್ಸಿನ ಶೃಂಗಚೇತನರಾಗಿ ಬೆಳೆದಿದ್ದಾರೆ.

ಶ್ರೀ ಮಹಾಬಲೇಶ್ವರ ಭಟ್ಟರ ಸೇವೆ ಬಹುಮುಖವಾದದ್ದು. ಸಾಮಾಜಿಕ, ರಾಜಕೀಯ, ಸಾಹಿತ್ಯ, ಹೀಗೆ ಅವರು ವಿವಿಧ ರಂಗಗಳಲ್ಲಿ ದುಡಿದು ತಮ್ಮ ಸೇವಾ ಸಜ್ಜನಿಕೆಯಿಂದ ಅಲ್ಲೆಲ್ಲಾ ಹೆಸರು ಮಾಡಿದವರು. ವಿನೀತ ಸೇವೆಯಲ್ಲಿ ವೈರುಧ್ಯಗಳು ಕಂಡುಬಂದಾಗ ಅವೆಲ್ಲವನ್ನೂ ದಿಟ್ಟತನದಿಂದ ಎದುರಿಸಿ, ಮೇಲೇರಿದವರು. ಅದಕ್ಕಾಗಿ ಅನೇಕ ವೇಳೆ ತಮ್ಮ ಸ್ಥಾನವನ್ನೇ ಬಿಟ್ಟುಹೊರ ಬರುವಂಥಹ ನಿಷ್ಠೂರರೂ ಕೂಡ. ಅವರೊಮ್ಮೆ ವಜ್ರದಷ್ಟು ಕಠಿಣರೆನಿಸಿದರೂ ಅಂತರಂಗದ, ಸ್ವಭಾವದಲ್ಲಿ ಸುಮಕೋಮಲರು. ಇವೆಲ್ಲವೂ ಸ್ವಾರ್ಥಕ್ಕಲ್ಲದ ಆದರೆ, ಸರ್ವರ ಹಿತಕ್ಕಾಗಿ ಹಿಡಿದ ಕೆಲಸದ ಸಾಧನೆಗಳಲ್ಲಿ ಕಂಡುಬರುವ ಅವರ ವಿಶಿಷ್ಟ ಸ್ವಭಾವಗಳಾಗಿವೆ.

ಶ್ರೀಯುತ ಭಟ್ಟರ ಜೀವನಸ್ತರಗಳನ್ನು ಅವಲೋಕಿಸಿದಾಗ, ಅವರ ಬಾಳಿನಲ್ಲೂ ಅನೇಕ ಏರಿಳಿತಗಳು ಕಂಡು ಬರುತ್ತವೆ. ಅವರೇನು ಬಾಯಲ್ಲಿ ಬೆಳ್ಳಿ ಚಮಚವನ್ನು ಇಟ್ಟುಕೊಂಡು, ಹುಟ್ಟಿಬಂದವರಲ್ಲ. ಛಲದಿಂದಲೇ ಹಂತಹಂತವಾಗಿ, ಮೇಲೇರುತ್ತಾಬಂದವರು. ತಾವಿಡುವ ಹೆಜ್ಜೆ ಹೆಜ್ಜೆಗಳಲ್ಲೂ ಒಂದು ಗುರಿಯನ್ನಿಟ್ಟುಕೊಂಡು ಬೆಳೆದು ಬಂದವರು. ಜೀವನೋಪಾಯಕ್ಕಾಗಿ ವ್ಯವಸಾಯ, ವ್ಯಾಪಾರ ವೃತ್ತಿಗಳನ್ನು ಕೈಗೊಂಡು, ಅವುಗಳಲ್ಲೂ ಸಾಕಷ್ಟುಅನುಭವಗಳನ್ನು ಪಡೆದುಕೊಂಡವರು. ಅನೇಕ ಸಾರ್ವಜನಿಕ ಸಂಸ್ಥೆಗಳಲ್ಲಿ, ವಿವಿಧ ಸ್ಥಾನಗಳಲ್ಲಿ ದುಡಿದು, ದುಡಿಯುತ್ತಿರುವ ಇವರು ರಾಜಕೀಯ ರಂಗಕ್ಕೂ ಪ್ರವೇಶಿಸಿ, ಅಲ್ಲಿಯೂ ಸಾಕಷ್ಟು ಕಾಲ ತಮ್ಮ ಪ್ರಾಮಾಣಿಕತನದಿಂದ, ದುಡಿದು, ಅದರ ಒಳ-ಹೊರಗುಗಳನ್ನು ಚೆನ್ನಾಗಿ ಅರಿತುಕೊಂಡವರು. ಹೀಗೆ ತಮ್ಮ ಸ್ವಸಾಮರ್ಥ್ಯದಿಂದ ದುಡಿಯುತ್ತಲೇ ಮೇಲೆ ಬಂದ ಭಟ್ಟರು, ತಮ್ಮ ಜಮೀನು, ಹೊಲಗದ್ದೆಗಳಿರುವ ಬೇದೂರಿನಲ್ಲಿ

ಹಸಿರು ವನರಾಜಿಗಳಿಂದ ಕೂಡಿದ, ಸುಂದರ ಹೂ ಬನಗಳಿಂದ ಶೋಭಿಸುವ, ಫಲಭರಿತ ವೃಕ್ಷಗಳ ಪ್ರಶಾಂತ ವಾತಾವರಣದಲ್ಲಿ ಅರಮನೆಯಂತಹ, ಮನೆಯನ್ನು ನಿರ್ಮಿಸಿಕೊಂಡು, ಕೃಷಿಯಲ್ಲೂ ಸಕ್ರಿಯವಾಗಿ ಪಾಲುಗೊಂಡಿದ್ದಾರೆ. ತಮ್ಮ ಕಾರ್ಯ ಚಟುವಟಿಕೆಗಳಿಗಾಗಿ, ಸಾಗರದಲ್ಲೂ ಒಂದು ಮನೆಮಾಡಿ, ಸಾರ್ವಜನಿಕ ಸೇವೆಯಲ್ಲೂ ನಿರತರಾಗಿದ್ದಾರೆ. ಅವರ ಮನೆಯ ಮಹಡಿಯ ಮೇಲೆಯೇ, ತಾವೇ ಅಧ್ಯಕ್ಷರಾಗಿರುವ, ಸಾಗರದ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಾಲಯವಿರುವುದು ಒಂದು ವಿಶೇಷ. ಭಟ್ಟರ ಪ್ರತಿಯೊಂದು ಕಾರ್ಯದಲ್ಲೂ ಸಹಕರಿಸುತ್ತಾ, ಅವರ ಬೇಕು-ಬೇಡಗಳಿಗೆಲ್ಲಾ ಸ್ಪಂದಿಸುತ್ತಾ, ದೊಡ್ಡ ಸಂಸಾರದ ಮನೆಯನ್ನು ಸಮರ್ಥವಾಗಿ ನಿಭಾಯಿಸುತ್ತಾ, ನಗುನಗುತ್ತಾ ನಲಿಯುತ್ತಿರುವ, ಅವರ ಸೌಭಾಗ್ಯವತಿ ಪದ್ಮಾವತಮ್ಮನವರು, ಭಟ್ಟರಿಗೆ 'ಸರ್ವಸ್ವ' ,ಮನೆಗೆ ಮಹಾಲಕ್ಷ್ಮಿ, ಜೊತೆಗೆ ಪ್ರೀತಿ ಮಮತೆಯನ್ನು ತೋರುವ ವಿನೀತ ಮಕ್ಕಳು - ಮೊಮ್ಮಕ್ಕಳು. ಸರಳ ಸುಂದರ ಸಂಸಾರದಲ್ಲಿ ಭಟ್ಟರಿಂದು ಸುಖೀ ಗೃಹಸ್ಥರು. ಸಾಕ್ಷಾತ್ ಅನ್ನಪೂರ್ಣೆಯು ನೆಲೆಸಿರುವಂತಹ ಈ ಗೃಹಗಳಿಗೆ ಬಂದು ಹೋಗದ ಗೆಳೆಯರಿಲ್ಲ. ಉಂಡು ಹೋಗದ ಸಾಹಿತಿಗಳಿಲ್ಲ, ನಾನೂ ಸಹಾ ಈ ಮನೆಗಳಿಗೆ ಹೋಗಿ, ಅವರ ಆದರ ಆತಿಥ್ಯ ಸುಭೋಜನಗಳ ಸವಿಯನ್ನು ಸವಿದು ಬಂದಿದ್ದೇನೆ.

ಅಚ್ಚುಕಟ್ಟು, ಒಪ್ಪ, ಓರಣ, ಶಿಸ್ತು, ಸಮಯಪ್ರಜ್ಞೆ ಇವು ಭಟ್ಟರೊಂದಿಗೆ ಹುಟ್ಟಿನಿಂದಲೂ ಮೈಗೂಡಿಕೊಂಡು ಬಂದಿರುವ ಗುಣವಿಶೇಷಗಳು. ಯಾವುದೇ ಕಾರ್ಯಕ್ರಮವನ್ನು ಭಟ್ಟರು ಹಮ್ಮಿಕೊಂಡಿದ್ದಾರೆಂದರೆ, ಇವೆಲ್ಲವೂ ಅಲ್ಲಿ ಮೇಳೈಸಿ, ಸಮಾರಂಭಕ್ಕೊಂದು ವಿಶೇಷ ಮೆರುಗನ್ನು ತರುತ್ತವೆ. ಗಾಳಿ ಬೀಸಿದಂತೆ ಅಸ್ತವ್ಯಸ್ತವಾಗಿ ಓಡುವ ಇಂದಿನ ತರಾತುರಿಯುಗದಲ್ಲಿ ಭಟ್ಟರೊಂದು ಅಪವಾದ, ಅಪರೂಪ. ಇವಕ್ಕೆಲ್ಲಾ ತಾಳ್ಮೆ ತುಂಬಾ ಬೇಕು. ಹತ್ತುಹಲವು ಸ್ವಭಾವದ ಸಂಗಡಿಗರನ್ನು ಸಂಘಟಿಸಿ, ಒಮ್ಮತಕ್ಕೆ ತಂದುಕೊಂಡು, ಕೆಲಸವನ್ನು ನಿಭಾಯಿಸಿಕೊಂಡು ಹೋಗುವಂತಹ ಜಾಣ್ಮೆ ಕುಶಲತೆ ಬೇಕು. ಹಿಡಿದ ಕೆಲಸವನ್ನು ಸಮರ್ಥವಾಗಿ ಮಾಡಿ ಮುಗಿಸುತ್ತೇನೆಂಬ ಛಲ, ಆತ್ಮ ವಿಶ್ವಾಸಗಳು ಬೇಕು. ಸಮಯ ಸಂದರ್ಭಗಳಲ್ಲಿ ಚತುರತೆ, ಚಾಕಚಕ್ಯತೆ ಬೇಕು. ಅಡೆ-ತಡೆಗಳನ್ನೆದುರಿಸುವ, ಧೈರ್ಯ, ಗುಂಡಿಗೆ ಬೇಕು. ಸುದೈವವಾಗಿ, ನಾ ಕಂಡಂತೆ ಭಟ್ಟರಲ್ಲಿ ಈ ಗುಣವಿಶೇಷಗಳೆಲ್ಲಾ ಮೇಳೈಸಿವೆ. ಹಾಗಾಗಿ, ಅವರಿಡುವ ಹೆಜ್ಜೆಯ ಗುರಿಗಳಲ್ಲಿ ಅವರಿಗೆ ಸೋಲು ಬಹು ಅಪರೂಪ.

ಶ್ರೀ ಮಹಾಬಲೇಶ್ವರ ಭಟ್ಟರ ಒಲವು ವಿಶೇಷವಾಗಿ ಸಾಹಿತ್ಯರಂಗಕ್ಕೆಂದು ನನ್ನ ಭಾವನೆ. ಕನ್ನಡಸಾಹಿತ್ಯ ಶಾರದೆಯ ಆರಾಧನೆಯೇ ಅವರ, ಜೀವ ಜೀವಾಳ. ಭಟ್ಟರು ೧೯೪೭ರಷ್ಟು ಹಿಂದೆಯೇ 'ಜಲಂಧರ' ಪ್ರಕಟನಾಲಯವೆಂಬ ಒಂದು ಪ್ರಕಾಶನ ಸಂಸ್ಥೆಯನ್ನು ಹುಟ್ಟುಹಾಕಿ, ಆ ಮೂಲಕ ನಾಡಿನ ಅನೇಕ ಸಾಹಿತಿಗಳ

ಕನ್ನಡ ಪುಸ್ತಕಗಳನ್ನು ಪ್ರಕಟಿಸಿ, ಅವರ ಪ್ರತಿಭೆಯನ್ನ ಹೊರತಂದು, ಅವರ ಖ್ಯಾತಿಗೆ ಪಾತ್ರರಾಗಿದ್ದಾರೆ. ಸಾಗರದಂತಹ ಸಣ್ಣ ಊರಿನಲ್ಲಿ ಕುಳಿತುಕೊಂಡು, ಈ ಮಹಾ ಸಾಹಸಕ್ಕೆ ಕೈ ಹಾಕಿ, ಅದರಲ್ಲಿ ಸಾಕಷ್ಟು ಕಷ್ಟ ನಷ್ಟಗಳನ್ನು ಅನುಭವಿಸಿಯೂ, ಕನ್ನಡ ಭಾಷಾ ಸರಸ್ವತಿಯನ್ನು ಬೆಳೆಸಿ, ಕನ್ನಡ ನಾಡಿನ ಮೂಲೆ-ಮೂಲೆಗಳಲ್ಲಿಯೂ, ಸಾಗರಕ್ಕೆ ಒಂದು ವಿಶೇಷ ಸ್ಥಾನವನ್ನು ತಂದುಕೊಟ್ಟಿದ್ದಾರೆ. ಜೊತೆಗೆ ಅನೇಕ ಕನ್ನಡ ಸಂಘ-ಸಂಸ್ಥೆಗಳನ್ನು ಕಟ್ಟಿ ಸಾಗರದ ಕನ್ನಡದ ಕಂಪನ್ನು ನಾಡಿಗೆಲ್ಲಕ್ಕೂಹರಡಿರುವ, ಈ ಕನ್ನಡ ಸೇನಾನಿಯ, ನಾಡು, ನುಡಿ ಸೇವೆ, ವಿಶಿಷ್ಠ ಹಾಗೂ ಅನನ್ಯವಾದುದಾಗಿದೆ. ಈ ರಂಗದಲ್ಲಿಯೂ ಅಪಾರ ಅನುಭವಗಳನ್ನು ಗಳಿಸಿಕೊಂಡ ಭಟ್ಟರು, ತಾವೂ ಸ್ವತಃ ಕವಿಗಳಾಗಿ, ಕಾದಂಬರಿಕಾರರಾಗಿ, ಕಥೆಗಾರರಾಗಿ,ಸುಮಾರು ೧೩ ಕೃತಿಗಳನ್ನು ಹೊರತಂದಿದ್ದಾರೆ. 'ಗುಲಾಬಿ-ತೋರಣ-ಹೂಮಾಲೆ-ಹೊಸೂರಿನ ಹಲವರು-ಸಾಹಿತ್ಯ ಶಿಲ್ಪಿಗಳು-ಕನ್ನಡಕುಲದೀಪಕರು- ಋತುಗಾನ-ಅಣ್ಣತಂಗಿ-ವ್ಯಾಘ್ರಮುಖಿ-ಮಾನವರಾಕ್ಷಸರು' - ಇತ್ಯಾದಿ ಇವರ ಲೇಖನಿಯಿಂದ ಮೂಡಿ ಬಂದ ಕೃತಿ ಕುಸುಮಗಳು. ಜೊತೆಗೆ ನೂರಾರು ಬಿಡಿ ಲೇಖನಗಳು ಸಮಾಜದ ಎಲ್ಲಾ ಮುಖಗಳನ್ನು ದರ್ಶಿಸಿ, ಪಡೆದ ಅನುಭವಗಳನ್ನು ಎರಕ ಹೊಯ್ದು, ಆ ಮೂಲಕ ಮನುಷ್ಯ ಮನುಷ್ಯನಲ್ಲಿ ಸ್ವಾಭಾವಿಕವಾಗಿ ಜನ್ಯವಾಗುವ ಪ್ರೀತಿ ಪ್ರೇಮಗಳ ಕೋಮಲ ಸಂಬಂಧಗಳನ್ನೂ, ವೈರ ವೈಷಮ್ಯಗಳ ಪಾರಮ್ಯದ ಘೋರಕಂದರಗಳನ್ನೂ, ಸರಸ, ರಸಿಕತೆ, ಹಾಸ್ಯರಸೋಜಗಳನ್ನೂ ತಮ್ಮ ಮೇಲಿನ ಕೃತಿ ಕೃತಿಗಳಲ್ಲಿ ತುಂಬಿ, ಕನ್ನಡ ತಾಯಿಯ ಉಡಿ ತುಂಬಿದ್ದಾರೆ. ಅನೇಕ ಖ್ಯಾತ ಸಾಹಿತಿಗಳು ಇಂದು ಅಮರರಾಗಿ ಹೋಗಿದ್ದರೂ, ಭಟ್ಟರು ತಮ್ಮ ಕೃತಿಗಳಲ್ಲಿ ಅವರನ್ನು ಸದಾ ಜೀವಂತವಾಗಿರಿಸಿ, ಮರೆಗುಳಿ ಸಮಾಜಕ್ಕೊಂದು ನೆನಪಿನ ನಂದಾದೀಪವನ್ನು ಹಚ್ಚಿ, ಅವರು ಸದಾ ಬೆಳಗುವಂತೆ ಮಾಡಿದ್ದಾರೆ. ಅವರ ಕೃತಿಗಳು ಸಮಾಜದ ವಿವಿಧ ಮುಖಗಳಿಗೆ ಹಿಡಿದ ಕೈಗನ್ನಡಿಗಳಾಗಿ ಎಲ್ಲವೂ ಪ್ರಸ್ತುತವಾಗಿ, ಚೊಕ್ಕವಾಗಿವೆ. ಭಟ್ಟರು ಇಂದು ನಾಡಿನ ಅನೇಕ ಪತ್ರಿಕೆಗಳಿಗೆ ಅಂಕಣಕಾರರಾಗಿ, ಉತ್ತಮ ವಿಮರ್ಶಕರಾಗಿ ಬೆಳೆದಿದ್ದಾರೆ. ನಾಡಿನ ಎಲ್ಲಾ ಖ್ಯಾತ ಹಾಗೂ ಹಿರಿಯ ಕಿರಿಯ ಸಾಹಿತಿಗಳೊಂದಿಗೆ ಬೆರೆತು, ಅವರೊಂದಿಗೆ ಸುಮಧುರ ಸಂಬಂಧವನ್ನಿಟ್ಟುಕೊಂಡಿದ್ದಾರೆ. ಅವರೆಲ್ಲರಿಗೂ ಭಟ್ಟರ ಮೇಲೆ ಒಳ್ಳೆಯ ಅಭಿಮಾನವಿದೆ, ಗೌರವವಿದೆ.

ಭಟ್ಟರ ಹಾಗೂ ಅವರ ಸಾಹಿತ್ಯಾಸಕ್ತ ಗೆಳೆಯವೃಂದದವರ ವಿಶೇಷ ಪರಿಶ್ರಮ ಉತ್ಸಾಹಗಳಿಂದ, ಸಾಗರಕ್ಕೆ ಬಂದು ಹೋದ ನಾಡಿನ ಖ್ಯಾತ ಕವಿಗಳು, ಸಾಹಿತಿಗಳು ಅದೆಷ್ಟೋ ಜನ. ಬೇಂದ್ರೆ, ಪುಟ್ಟಪ್ಪ, ಮಾಸ್ತಿ, ಶಿವರಾಮಕಾರಂತ, ಅನಂತಮೂರ್ತಿ, ಮುಗಳಿ, ವೀಸೀ, ಅನಕೃ, ಶ್ರೀರಂಗ, ಬೀಚಿ, ದೇಜಗೌ, ಅಡಿಗರು, ಸಾ.ಶಿ. ಮರುಳಯ್ಯ ಹೀಗೆಯೇ ಇವರ ಪಟ್ಟಿಬೆಳೆಯುತ್ತದೆ. ಇಂತಹ ಸಾಹಿತ್ಯ ದಿಗ್ಗಜಗಳನ್ನು

ಸಾಗರಕ್ಕೆ ಆದರಿಂದ ಬರಮಾಡಿಕೊಂಡು, ಅವರಿಗೆ ಆತಿಥ್ಯ ನೀಡಿ, ಸನ್ಮಾನಿಸಿ, ನೆನಪಿನ ಕಾಣಿಕೆಗಳನ್ನು ನೀಡಿ ಅವರಿಂದ ವಿದ್ವತ್ಪೂರ್ಣ ಭಾಷಣಗಳನ್ನು ಮಾಡಿಸಿ, ಸಾಗರ ಮತ್ತು ಈ ಪ್ರಾಂತ್ಯದ ಜನಮಾನಸದಲ್ಲಿ ಸದಾ ಹಸಿರಾಗಿರಿಸಿರುವ, ಈ ಭಟ್ಟರ ಸಾಧನೆಯೇನು ಸಾಮಾನ್ಯವೇ ? ಸಾಹಿತ್ಯರಂಗದಂತಹ, ಬಡಕ್ಷೇತ್ರದಲ್ಲಿ ಇವನ್ನೆಲ್ಲಾ ಹಮ್ಮಿಕೊಂಡು, ಭಟ್ಟರು ಹೇಗೆ ನಿಭಾಯಿಸಿದರೋ, ಅಂದಿನ ಅವರ ಕಷ್ಟ ನಷ್ಟಗಳೇನೋ ? ಇವನ್ನೆಲ್ಲಾ ಯೋಚಿಸಿದರೆ, ಸೋಜಿಗವೆನಿಸದಿರದು. ಇವರ ಕನ್ನಡ ಪ್ರೇಮ, ನಾಡಿನ ಬಗೆಗಿರುವ ಅಭಿಮಾನ, ನಿಜಕ್ಕೂ ಮೆಚ್ಚುವಂತಹುದಾಗಿದೆ. ಸಾಗರಕ್ಕೆ ಬರದಿರುವ ಸಾಹಿತಿಯ ಬದುಕು ಅಪೂರ್ಣವೇನೋ ಎನ್ನುವಷ್ಟು ಮಟ್ಟಿಗೆ ಸಾಗರದ ಸೆಳೆತ, ಸಾಗರದ ಸಾಹಿತ್ಯ ಸುಗಂಧ, ಎಲ್ಲೆಡೆ ಹಬ್ಬಿದೆ. ಇಲ್ಲಿ ಖ್ಯಾತ ಸಾಹಿತಿಗಳಾದ, ಶ್ರೀನಿವಾಸ ಉಡುಪರಿದ್ದಾರೆ. ನಾ.ಡಿಸೋಜಾರವರಿದ್ದಾರೆ. ಕೆ.ವಿ. ಸುಬ್ಬಣ್ಣನವರಿದ್ದಾರೆ, ಇನ್ನೂ ಅನೇಕ ಹಿರಿ-ಕಿರಿಯ ಸಾಹಿತಿಗಳಿದ್ದಾರೆ. ಇವರೆಲ್ಲರಿಗೂ ಹಿರಿಯರಾಗಿ, ಕಳಸಪ್ರಾಯರಾದ ಕನ್ನಡದ ಚುಕ್ಕಾಣಿಯೊಡನೆ ಲೆಖ್ಖನಿ ಹಿಡಿದು ನಿಂತ ಸಾಹಿತಿ 'ಮಹಾಬಲೇಶ್ವರ ಭಟ್ಟರೂ' ಇದ್ದಾರೆ.

ಕನ್ನಡ ಸಾಹಿತ್ಯ ಪರಿಷತ್ತು, ಸಾಗರ ತಾಲ್ಲೂಕು ಶಾಖೆಗೆ ಇಂದು ಸಮರ್ಥ ಅಧ್ಯಕ್ಷರಾಗಿರುವ, ಶ್ರೀ ಮಹಾಬಲೇಶ್ವರ ಭಟ್ಟರ ಸಾಹಿತ್ಯ ಬಳಗ ಬಹಳ ದೊಡ್ಡದು. ಇವರು ಬೆಳೆಸಿರುವ, ಬೆಳೆಸುತ್ತಿರುವ, ಅನೇಕ ಉದಯೋನ್ಮುಖ ಕಿರಿಯ ಸಾಹಿತಿಗಳ ಬಳಗವೇ ಇವರ ಸುತ್ತಮುತ್ತಲಿದೆ. ಅವರನ್ನು ತಿದ್ದಿ, ತೀಡಿ, ಪ್ರೋತ್ಸಾಹಿಸಿ ಅವರಲ್ಲಿರುವ ಸುಪ್ತಪ್ರತಿಭೆಯನ್ನು ಹೊರತಂದು ಸಾಹಿತ್ಯ ಲೋಕಕ್ಕೆ ಪರಿಚಯಿಸಿದ್ದಾರೆ. ಇಲ್ಲಿ ಅನೇಕ ಮೊಗ್ಗುಗಳು ಹೂವಾಗಿ, ಅರಳುತ್ತಿವೆ. ಇದಕ್ಕೆ ೧೯೯೪ರಲ್ಲಿ ಅವರೇ ಹೊರತಂದಿರುವ 'ಕಾವ್ಯ ಸಾಗರ'ವೆಂಬ ಕವನ ಸಂಕಲನವೇ ಸಾಕ್ಷಿಯಾಗಿದೆ. ಸಾಗರ ಪ್ರಾಂತ್ಯದ ಎಲ್ಲಾ, ಆದರೆ ವಿಶೇಷವಾಗಿ ಕಿರಿಯ ಪ್ರತಿಭೆಗಳನ್ನೇ ಗಮನವಿಟ್ಟುಕೊಂಡು ಅವರಿಂದ ಕವನಗಳನ್ನು ಬರೆಯಿಸಿ, ಅವನ್ನೆಲ್ಲಾ ಒಟ್ಟಾಗಿ ಸೇರಿಸಿ, ಇಂತಹ ತುಟ್ಟಿ ಕಾಲದಲ್ಲೂ ಅಂದವಾಗಿ - ಆಕರ್ಷಕವಾಗಿ ಪುಸ್ತಕರೂಪದಲ್ಲಿ ಪ್ರಕಟಿಸಿರುವುದು ಅವರ ಅಂತಹ ವಿಶಾಲ ಮನೋಭಾವಕ್ಕೊಂದು ಜೀವಂತ ನಿದರ್ಶನವಾಗಿದೆ. ಇದಕ್ಕಿಂತಲೂ ಬೇಕೆ ಬೇರೆ ಕನ್ನಡದ ಅಭಿಮಾನ ? ಕಿರು ಪ್ರತಿಭೆಗಳನ್ನು ಹೊರತಂದು, ಅವರಿಗೆ ಬೆಳಕು ನೀಡಿದ ಇದಕ್ಕಿಂತಲೂ ಬೇಕೆ ಬೇರೆ ಸನ್ಮಾನ ?- ಹಿಂದೆ ಸಾಗರದಲ್ಲಿದ್ದೆನಾದರೂ, ಸಾಗರ ಪ್ರಾಂತ್ಯದವನಲ್ಲದ, ಸಾಗರಕ್ಕೆ ಬಹುದೂರವಿರುವ ಬೆಂಗಳೂರಿನವನಾದ ನನ್ನನ್ನು ೨೫ ವರ್ಷಗಳ ಸಾಹಿತ್ಯಿಕ ಬಾಂಧವ್ಯವನ್ನು ಮರೆಯದೆ ನಾನು ಬರೆದಿರುವ ಎರಡು ಕವನ ಸಂಕಲನಗಳನ್ನು ಆದರದಿಂದ ಓದಿ, ಅವುಗಳಿಗೆ ತಮ್ಮ ಹಿತನುಡಿಗಳನ್ನೂ ವಿಮರ್ಶೆಯನ್ನೂ ನೀಡಿ,

ಸಾಗರಕ್ಕೆ ಕರೆಸಿಕೊಂಡು, ಆ ಎರಡು ಕೃತಿಗಳನ್ನು ದಿ. ೨೮.೭.೧೯೬೩ರಂದು ತಮ್ಮ ಸ್ವಹಸ್ತದಿಂದಲೇ ಬಿಡುಗಡೆಮಾಡಿ, ಪ್ರಶಂಸಿಸಿ, ಕೊನೆಗೆ ಆ ಪುಸ್ತಕಗಳನ್ನು ಮಾರಾಟ ಮಾಡುವಂತಹ ವ್ಯವಸ್ಥೆಯನ್ನೂ ಮಾಡಿ, ನನಗೆ ಅವರು ತೋರಿದ ಆದರ, ಪ್ರೀತಿ, ಕೊಟ್ಟ ಸ್ಥಾನ ಸಹೃದಯತೆಯನ್ನು ನಾನು ಹೇಗೆ ಮರೆಯಲಿ ? ತಮ್ಮೊಂದಿಗೆ ಇತರರೂ ಮೇಲೆ ಬರಬೇಕೆಂಬ ಅವರ ವಿಶಾಲಮನೋಭಾವವೇ ಭಟ್ಟರ ಹಿರಿಯಗುಣ. ಅಭಿಮಾನಕ್ಕೆ ಅಭಿರೂಪರಾದ ಭಟ್ಟರಿಗೆ, ತಾನು ಸೇರುವ ಬಳಗಕ್ಕಿಂತ ತನ್ನಲ್ಲಿ ಬಂದು ಸೇರುವ ಸ್ನೇಹಿತರ ಬಳಗವೇ ಹೆಚ್ಚು. ಒಟ್ಟಿನಲ್ಲಿ ಸಾಗರಪ್ರಾಂತ್ಯದ ಸಾಹಿತ್ಯ ಶಾರದೆಗೆ ನಿತ್ಯಾಲಂಕಾರ, ನಿತ್ಯೋತ್ಸವ.

೧೯೭೮ರಲ್ಲಿ ಭಟ್ಟರಿಗೆ ೫೦ರ ವಸಂತ. ಆಗ ನಾನು ಸಾಗರದಲ್ಲಿದ್ದೆ. ಅವರು ಸಮಾಜದ ಅನೇಕ ರಂಗಗಳಲ್ಲಿ ಉತ್ತಮ ಸೇವೆ ಸಲ್ಲಿಸಿದ್ದಕ್ಕಾಗಿ ಅವರನ್ನು ಗೌರವಿಸಿ, ಅವರ ೫೦ನೇ ಹುಟ್ಟು ಹಬ್ಬದ ಸವಿನೆನಪಿಗಾಗಿ, ಶ್ರೀನಿವಾಸ ಉಡುಪರ ಪ್ರಧಾನ ಸಂಪಾದಕತ್ವದಲ್ಲಿ ಹೊರತಂದ ‘ಮಹಾನಂದ’ ವೆಂಬ ಸಂಭಾವನಾ ಗ್ರಂಥವನ್ನು ಸಾಗರದ ಜನತೆ ಬಹಳ ಅಭಿಮಾನದಿಂದ ಅವರಿಗೆ ಅರ್ಪಿಸಿ, ತಮ್ಮ ಅಭಿಮಾನವನ್ನು ಅಭಿವ್ಯಕ್ತಗೊಳಿಸಿಕೊಂಡಿತು. ಕಾಲ ಚಕ್ರ ಉರುಳಿ ಮತ್ತೆ ೨೦ ವರ್ಷಗಳು ಸಂದು ಹೋದವು. ಅದರೊಂದಿಗೆ ಭಟ್ಟರೂ ಇನ್ನೂ ಪ್ರಬುದ್ಧವಾಗಿ ಬೆಳೆಯುತ್ತಾ ಬಂದರು. ಅವರ ಸೇವೆಯ ಪರಿಧಿಯೂ ವಿತಾನವಾಯಿತು. ಈಗ ಇವರು ೭೦ ವರ್ಷಗಳ ಹೊಸಿಲಲ್ಲಿದ್ದಾರೆ. ಇವರಿಗೆ ೭೦ ವರ್ಷಗಳೆಂದರೆ ಹತ್ತಿರದಿಂದ ನೋಡುವ ಯಾರಿಗೇ ಆಗಲೀ ನಂಬುವುದು ಕಷ್ಟವಾಗುತ್ತದೆ. ಎತ್ತರದ ನಿಲುವು, ರಾಜಠೀವಿ, ಗಂಭೀರ ಮುಖ ಮುದ್ರೆ ಅದರಲ್ಲಿ ಸದಾ ತುಳುಕುತ್ತಿರುವ ಮಂದಹಾಸ, ಸುಮಕೋಮಲವಾದ ಕಣ್ಣುಗಳಲ್ಲಿಸದಾಮಿನುಗುತ್ತಿರುವ ಪ್ರಕಾಶ, ಬಾಡದ, ಬತ್ತದ, ತನುಕಾಂತಿ, ಪುಟಿಯುತ್ತಿರುವ ನವೋತ್ಸಾಹ. ಇವುಗಳೆಲ್ಲದರಿಂದ ಭಟ್ಟರು ಇನ್ನೂ ೫೦ರಲ್ಲಿರಬಹುದೇನೋ ಎಂದೆನಿಸದಿರದು. ೭೦ ವರ್ಷ ಯಾರಿಗಾದರೂ ಆಗುತ್ತದೆ. ಅದು ಮುಖ್ಯವಲ್ಲ. ಆ ವಯಸ್ಸಿಗನುಗುಣವಾಗಿ, ಆ ವ್ಯಕ್ತಿಯ ಏರಿದ ಎತ್ತರದಲ್ಲಿ ತಾನು ಸಾಧಿಸಿದ ಸಾಧನೆಗಳು, ಗಳಿಸಿದ ಜನಪ್ರಿಯತೆ, ಬಹು ಮುಖ್ಯವೆನಿಸುತ್ತವೆ. ಶ್ರೀ ಮಹಾಬಲೇಶ್ವರ ಭಟ್ಟರಿಗೆ ೭೦ ವರ್ಷ ತುಂಬುತ್ತಿರುವ ಈ ಹುಟ್ಟುಹಬ್ಬದ ಸಂದರ್ಭದಲ್ಲಿ ಅದರ ಸವಿನೆನಪಿಗಾಗಿ ಹಾಗೂ ಅವರು ವಿವಿಧ ರಂಗಗಳಲ್ಲಿ ಸಲ್ಲಿಸಿರುವ ಸೇವೆಯನ್ನು ಗುರುತಿಸಿ, ಅವರನ್ನು ಅಭಿನಂದಿಸಲು, ಶ್ರೀಯುತರಾದ ಶ್ರೀ ತಿರುಮಲ ಮಾವಿನಕುಳಿ, ಪ್ರಕಾಶ್.ಆರ್. ಕಮ್ಮಾರ್‌ರವರ ನೇತೃತ್ವದಲ್ಲಿ ಭಟ್ಟರ ಅಪಾರ ಅಭಿಮಾನಿ ಬಳಗದವರು ಸೇರಿ, ಮಿತ್ರರೂ ಸೇರಿ, ಅವರಿಗೆ ಒಂದು ಅಭಿನಂದನ ಗ್ರಂಥವನ್ನು ಅರ್ಪಿಸುತ್ತಿರುವುದು ಒಂದು ಅಭಿಮಾನದ ಹಾಗೂ

ಸಂತೋಷದ ಸಂಗತಿ, - ಈ ಹಿರಿಯ ಚೇತನಕ್ಕೆ ಮುಂದೆ ನೂರು ವರ್ಷಗಳ ಆಯುಷ್ಯ ತುಂಬಿ, ಅವರ ಶತಮಾನದ ಹುಟ್ಟು ಹಬ್ಬವನ್ನೂ ಸಂಭ್ರಮದಿಂದ ಆಚರಿಸುವಂತಾಗಲಿ, ಅವರ ಸೇವೆಯು ಸಾರ್ಥಕವಾಗಿ ಸಾರ್ವತ್ರಿಕವಾಗಲಿ, ಶ್ರೀ ಮಹಾಬಲೇಶ್ವರ ಭಟ್ಟರಿಗೆ, ಹಾಗೂ ಅವರ ಕುಟುಂಬ ವರ್ಗಕ್ಕೆ ಭಗವಂತನು ಅಂತಹ ಆಯುರಾರೋಗ್ಯ ಭಾಗ್ಯಗಳನ್ನು ಕರುಣಿಸಲಿ. ಅವರ ಕೀರ್ತಿಯನ್ನು ಇನ್ನೂ ಹೆಚ್ಚಿಸಿ, ಅವರ ಬಾಳನ್ನು ಬಂಗಾರವಾಗಿರಿಸಲೆಂದು ಪ್ರಾರ್ಥಿಸಿ, ಹಾರೈಸುತ್ತೇನೆ.

# ಸಂಘಟನೆಯ ಹಿಂದಿನ ತಾತ್ವಿಕ ನೆಲೆಯಲ್ಲಿ ನಾನು ಕಂಡಂತೆ...

– ರಾಧಾಕೃಷ್ಣ, ಎಸ್.ಭಡ್ತಿ

೧೯೯೩ರ ನವೆಂಬರ್ ತಿಂಗಳಿನಲ್ಲಿನನ್ನ ಚೊಚ್ಚಲ ಕವನ ಸಂಕಲನ 'ಸ್ಪಂದನ'ವನ್ನು ಹೊರತರಬೇಕೆಂಬ ತರಾತುರಿಯಲ್ಲಿದ್ದೆ. ಪುಸ್ತಕ ಬಿಡುಗಡೆಗೆ ಯಾರನ್ನು ಕರೆಸುವುದು ಎಂದು ಯೋಚಿಸಿದೆ. ಸಾಗರದಂತಹ ಚಿಕ್ಕ, ಚೊಕ್ಕ ಪಟ್ಟಣದಲ್ಲಿ ಟಿ. ಮಹಾಬಲೇಶ್ವರ ಭಟ್ಟರಿಗಿಂತ ಸೂಕ್ತ ವ್ಯಕ್ತಿ ದೊರೆತಾರೇ ? ಸರಿ, ಅಂದೇ ಶ್ರೀ ಶ್ರೀನಿವಾಸ ಉಡುಪರೊಂದಿಗೆ ಭಟ್ಟರ ಮನೆ 'ಸುದರ್ಶನ'ಕ್ಕೆ ಹೋದೆ. ಆತ್ಮೀಯವಾಗಿ ಸ್ವಾಗತಿಸಿದ್ದಲ್ಲದೆ ಕನ್ನಡ ಸಾಹಿತ್ಯ ಪರಿಷತ್ತು ಹಮ್ಮಿಕೊಂಡಿದ್ದ ಕವಿ ಸಮ್ಮೇಳನದಲ್ಲಿ ಸ್ವತಃ ತಮ್ಮ ಅಧ್ಯಕ್ಷತೆಯಲ್ಲಿಯೇ ಪುಸ್ತಕ ಹೊರತರುವ ಭರವಸೆ ನೀಡಿದಾಗ ಭಟ್ಟರ ಬಗ್ಗೆ ಏನೇನೋ ಕಲ್ಪನೆಗಳನ್ನಿಟ್ಟುಕೊಂಡು ಹೆದರುತ್ತಾ ಹೋದ ನನಗೆ ನಿಜಕ್ಕೂ ಅವರ ಸರಳ ವ್ಯಕ್ತಿತ್ವ ತೀರಾ ಹತ್ತಿರವಾಗಿತ್ತು.

ಹೀಗೆ ಪರಿಚಿತರಾದ ಶ್ರೀ ಭಟ್ಟರು ಇಂದಿಗೂ ನನ್ನ ಸಾಹಿತ್ಯ ಹಾಗೂ ಸಾಹಿತ್ಯೇತರ ಚಟುವಟಿಕೆಗಳಲ್ಲಿ ಮಾರ್ಗದರ್ಶಕರಾಗಿ ನನ್ನನ್ನು ಬೆಂಬಲಿಸಿ ಬೆಳೆಸುತ್ತಿದ್ದಾರೆ. ಅಂತಹ ಹಿರಿಯರೋರ್ವರ ಕುರಿತಾಗಿ ಅದು ಅವರ ಎಪ್ಪತ್ತನೆಯ ಹುಟ್ಟುಹಬ್ಬದ ಸಂದರ್ಭದಲ್ಲಿ ನಾನು ನಾಲ್ಕು ಸಾಲು ಬರೆಯುವುದರಿಂದ ನನ್ನ ಗೌರವ ಇಮ್ಮಡಿಸುತ್ತದೆ - ಎಂದು ತಿಳಿಯುತ್ತೇನೆ. ಪ್ರಸ್ತುತ ಕಾರ್ಯ, ಕರ್ತವ್ಯ ಎನಿಸಿಕೊಳ್ಳಲೂ ಬಹುದು. ಈ ಸಂದರ್ಭದಲ್ಲಿ ಭಟ್ಟರಂತಹ ವ್ಯಕ್ತಿಯ ಕುರಿತಾಗಿ ಎಲ್ಲಿ ಔಚಿತ್ಯವನ್ನು ಮೀರುವುದೋ ಅಥವಾ ಅತಿ ಪ್ರಶಂಸೆ ಎಲ್ಲಿ ಇಣುಕು ಹಾಕುವುದೋ ಎಂಬ ಸಂಕುಚಿತತೆಯಿಂದಲೇ ಬರೆಯಲು ಆರಂಭಿಸುತ್ತೇನೆ.

ವೈವಿಧ್ಯಮಯ, ಸಾಂಸ್ಕೃತಿಕ, ರಾಜಕೀಯ ಹಾಗೂ ಸಾಹಿತ್ಯಕ ವ್ಯಕ್ತಿಗಳನೇಕರರನ್ನು ಹೊಂದಿದ ವಿಪುಲ ನೆಲ ಸಾಗರ. ಇಂತಹ ಪರಿವರ್ತಿತ ನಾಡಿನಲ್ಲಿ ಸಂಘಟನಾ ಚತುರತೆಯಿಂದ ತಮ್ಮದೇ ಆದ ತಾತ್ವಿಕ ನೆಲೆಯಲ್ಲಿ ಮಿಂಚಿಸಿದ 'ಏಕೈಕ ವ್ಯಕ್ತಿ ಶ್ರೀ ಟಿ. ಮಹಾಬಲೇಶ್ವರ ಭಟ್ಟರು.' 'ಆಧುನಿಕ ಕನ್ನಡ

ಸಾಹಿತ್ಯದಲ್ಲಿ ತಮ್ಮದೇ ಆದ ಸರಳ ಪ್ರಾತಿನಿಧಿಕ ಬರಹಗಳನ್ನು ದಾಖಲಿಸಿದ ಶ್ರೀ ಭಟ್ಟರು ಅಲ್ಲಿ ತಮ್ಮನ್ನು ತಾವು ಗುರುತಿಸಿಕೊಳ್ಳುವುದಕ್ಕಿಂತ ಹೆಚ್ಚಾಗಿ, ತಮ್ಮ ಸುದೀರ್ಘನಾದ, ನುಡಿಯ ಬಗೆಗಿನ ಉತ್ಕಟಾಭಿಮಾನ ಪೂರ್ವಕ ಸೇವೆಯಲ್ಲಿ ಸ್ಮರಣೀಯರಾಗುತ್ತಾರೆ. ಮೂಲತಃ ಶ್ರೀಮಂತ ಹವ್ಯಕ ಕುಟುಂಬಕ್ಕೆ ಸೇರಿದ ಅವರು ರೂಪುತಳೆದದ್ದೇ ಸ್ಥೂಲ ಮೌಲ್ಯಗಳ ಪ್ರತಿಪಾದನೆಯಿಂದ. ಹಾಗೆಂದು ತೀರಾ ಮೂಢನಂಬಿಕೆಗಳನ್ನು ಒಪ್ಪುತ್ತಾರೆಂದಲ್ಲ. ಸ್ವತಂತ್ರ ಭಾರತದಲ್ಲಿ ಬಹುಕಾಲ ಆಡಳಿತದಲ್ಲಿದ್ದ ಮೂಲ ಕಾಂಗ್ರೆಸ್ಸಿನ ಸಕ್ರಿಯ ಸದಸ್ಯರಾಗಿ ಮೊದಲಿನಿಂದಲೂ ದುಡಿದಿದ್ದರ ಪರಿಣಾಮವಾಗಿಯೂ ಅವರು ಆ ಮೌಲ್ಯಗಳನ್ನು ಒಪ್ಪುತ್ತಿರಬಹುದು. ಒಟ್ಟಾರೆ ಸಮಾಜದ ಸ್ವರೂಪದ ಕುರಿತಾದಂತಹ ವಿಶೇಷವಾಗಿ ರಾಜಕೀಯದಲ್ಲಿನ ಅಸಹನೆಯಿಂದಾಗಿಯೇ ಇರಬಹುದು. ತಮ್ಮ ನೆಚ್ಚಿನ ಇನ್ನೊಂದು ರಂಗ ಸಾಹಿತ್ಯಕ್ಕೆ ತಮ್ಮನ್ನು ತಾವು ಸಂಪೂರ್ಣವಾಗಿ ಒಪ್ಪಿಸಿಕೊಂಡವರು. ಆದರೆ ಇವರು ಎಲ್ಲಿಯೂ ಸಮೂಹ ವಿರೋಧಿಯಾಗಿ ನಿಲ್ಲದೆ ಒಂದು ರೀತಿಯ ಸಮಾಜವಾದಿ ಮೌಲ್ಯವೆನ್ನಲೂ ಬಾರದ ವ್ಯಕ್ತಿ ಪ್ರಧಾನ ವ್ಯವಸ್ಥೆಯೂ ಆಗದ ಎರಡನ್ನೂ ಜೀವನ ದೃಷ್ಟಿಯಿಂದ ಸೂಕ್ಷ್ಮರೀತಿಯಲ್ಲಿ ಸ್ವೀಕರಿಸಿ ಅಂತರಂಗೀಕರಿಸಿಕೊಂಡವರು. ಈ ಹಂತದಲ್ಲಿಯೇ ಅವರು ಶಿಸ್ತು, ಪ್ರಾಮಾಣಿಕ ಅಂತರಂಗ, ಒಳ-ಹೊರಗೆರಡರಲ್ಲಿನ ಸ್ವಚ್ಛತೆ, ಅಚ್ಚುಕಟ್ಟುತನ, ಎಂತಹ ಘನಕಾರ್ಯವನ್ನಾದರೂ ಸಮರ್ಥವಾಗಿ ಮುಗಿಸಬಲ್ಲ ಅಗಾಧ ಚೈತನ್ಯ ಪ್ರಭಾವ ಬೀರದೆ ಇರಲಾರದು.

ಹೀಗಾಗಿ ವ್ಯಕ್ತಿ ಕೇಂದ್ರಿತವಾಗಿದ್ದರೂ ಅದನ್ನು ಕೇವಲ ಕಾರ್ಯಸಾಧನೆ ಗೋಸ್ಕರವೇ ಬಳಸಿಕೊಂಡು ಸಂಘಟನೆಯ ಹಿಂದಿನ ಪ್ರಕಾರ ನೆಲೆಗಳನ್ನು ಮೀರಿದುದು ಶ್ರೀ ಭಟ್ಟರ ವ್ಯಕ್ತಿತ್ವ. ಈ ವಾದ ಅಸಹಜವೆನಿಸಲೂಬಹುದು. ಆದರೆ ನನಗನ್ನಿಸಿದವರ ಮಟ್ಟಿಕ್ಕೆ ತಮ್ಮ ಪ್ರಖರ ವೈಯಕ್ತಿಕತೆಗೆ ಹೊರತಾಗಿಯೇ ಸುತ್ತಲಿನ ವಾತಾವರಣವನ್ನು ನಿರ್ಮಿಸಿ, ಎಂತಹ ಸಮಸ್ಯೆಗಳನ್ನೂ ಎದುರಿಸಿ ಹಿಡಿದ ಕಾರ್ಯವನ್ನು ತಲೆಮುಟ್ಟಿಸುವ ಸ್ವಭಾವ ಅವರಲ್ಲಿದೆ. ಈ ವ್ಯಕ್ತಿಗತ ಹಾಗೂ ಸಾಮಾಜಿಕ ಭಾವನೆಗಳೆರಡು ವೈರುಧ್ಯಗಳನ್ನು ಅವರ ಕೃತಿಗಳನೇಕಗಳಲ್ಲಿ ಕಾಣಬಹುದಾಗಿದೆ. (ಉದಾ: ಹೊಸೂರಿನ ಹಲವರು, ಮಾನವ ರಾಕ್ಷಸರು ಇತ್ಯಾದಿ) ಈ ವಿಶಿಷ್ಟ ಐಕ್ಯತೆಯ ಕಾರಣಕ್ಕಾಗಿಯೇ ಭಟ್ಟರು ಸಾಹಿತ್ಯ ಹಾಗೂ ಸಾಮಾಜಿಕ ಕ್ಷೇತ್ರದಲ್ಲಿ ಪ್ರತಿಷ್ಠಿತರಾದರು. ಈ ರೀತಿಯ ಆಳದ ಅರಿವು ಅಂದರೆ ಸಾಮಾಜಿಕ ಸನ್ನಿವೇಶದಲ್ಲಿ ವ್ಯಕ್ತಿ ಮತ್ತು ಸಮಾಜದ ನಡುವಿನ ಸಾಮರಸ್ಯ ಶ್ರೀಯುತರ ಖಾಸಗೀತನವನ್ನು ನಾಶಮಾಡಿ ಸಮುದಾಯದೆಡೆಗೆ ಒಲೈಸಿದುದರಿಂದ ತಮ್ಮೆಲ್ಲಾ ಸಮಸ್ಯೆಗಳ ನಡುವೆಯೂ ಅವರು ಸಕ್ರಿಯ ಹಾಗೂ ಸೃಜನಶೀಲ

ರಾಜಕಾರಣಿಯಾಗಿ, ಪುಸ್ತಕ ಪ್ರಕಾಶಕರಾಗಿ, ಸಾಹಿತಿಗಳಾಗಿ, ಹೋರಾಟಗಾರರಾಗಿ, ಆಡಳಿತಗಾರರಾಗಿ, ಸಂಘಟಿಕರಾಗಿ ಕೊನೆಗೆ ಪತ್ರಿಕಾ ಕರ್ತರಾಗಿಯೂ ಕಾಣಿಸಿಕೊಳ್ಳುತ್ತಾರೆ. ಪ್ರಾಯಶಃ ಆಗಿನ ಸಮಕಾಲೀನ ಬದುಕಿನ ಆಯಾಮಗಳೇ ಕಾಳಜಿಯಾಗಿ ಪರಿವರ್ತಿತಗೊಂಡು ಮುಂದೆ ಪ್ರಭುದ್ಧ ಸಾಮಾಜಿಕ ವ್ಯಕ್ತಿತ್ವವನ್ನು ರೂಪುಗೊಳಿಸಿದೆ - ಎಂದುಕೊಳ್ಳುತ್ತೇನೆ. ಹಾಗೆ ನೋಡಿದರೆ ಅವರ ಸಾಹಿತ್ಯಕ್ಕಿಂತ – ಅವರ ಕಾಳಜಿಯುಕ್ತ ಪ್ರತ್ಯೇಕಗೊಂಡ ಸ್ವಂತಿಕೆಯ ಹಂಬಲದ ಅವರ ವ್ಯಕ್ತಿತ್ವವೇ ಹೆಚ್ಚಾಗಿ ಆದರಣೆಯನ್ನು ಪಡೆಯುತ್ತದೆ.

ಅವರ ಎಲ್ಲಾ ಸಾಹಿತ್ಯವನ್ನು ನಾನು ಓದಿರದಿದ್ದರೂ ಕೆಲವನ್ನು ಓದಿದಾಗ ಭಟ್ಟರು ಸಮಾಜ ನೀಡುವ ಯಾವ ಆಧಾರವನ್ನು ಅವಲಂಬಿಸದೇ ತಾನೇ ತನ್ನ ಗುರುವಾಗಿ, ದೂರದಿಂದ ನೋಡುವವರಿಗೆ ತೀರಾ ಗರ್ವಿಷ್ಠರಾಗಿ, ಒಂದು ರೀತಿಯ ಮಾತನಾಡಲೇ ಅಂಜಿಕೆಯಾಗುವಂಥಹ ವ್ಯಕ್ತಿಯಾಗಿ ಕಂಡು ಬಂದರೂ, ಅವರನ್ನು ಸಮೀಪಿಸಿದಾಗ ಇವೆಲ್ಲದರ ಬಗ್ಗೆ ಪಶ್ಚಾತ್ತಾಪ ಪಡುವಷ್ಟು ಮೃದುವಾಗಿ, ಸರ್ವ ಸಮಸ್ತವೂ ಬೆಳೆಯಬೇಕೆಂಬ ಏಕೀಕೃತ ಸ್ಥಿತಿಯಲ್ಲಿ ಕಂಡುಬರುತ್ತಾರೆ.

ಅವರ 'ಶಾಸಕನು ನಾನಲ್ಲ

ಆ ಹುಚ್ಚು ನನಗಿಲ್ಲ

ಗುಪ್ಪುಹಾರುವ ಕೆಲಸ

ನನಗೆ ಬೇಡ...''

– ಎಂಬ ಕವನವು ಕಾವ್ಯಾನುಭವಕ್ಕಿಂತ ಭಿನ್ನವಾಗಿ, ಪ್ರಸ್ತುತ ನಾರುತ್ತಿರುವ ರಾಜಕೀಯ ವ್ಯವಸ್ಥೆ ಅದರ ಹಿಂದಿನ ಆದರ್ಶವಾದದ ತೆಕ್ಕೆಯಲ್ಲಿರುವ ಉತ್ಸಾಹಭರಿತ ಯುವಕರಾಗಿ ಕಾಣಿಸಿಕೊಳ್ಳುತ್ತಾರೆ. ಅವರ 'ಹೂಮಾಲೆ' ಯಲ್ಲಿನ ಕವನಗಳು ಮಂದವಾಗಿದ್ದರೂ ಇಲ್ಲಿಯೂ ಸ್ಥಿತಿ-ಗತಿಗಳ ಬಗೆಗಿನ ಸಾತತ್ಯ ಪ್ರಕಟವಾಗುತ್ತದೆ. ಆದರೆ ತೀರಾ ಇತ್ತೀಚಿಗೆ ಇವೆಲ್ಲವೂ ಬತ್ತಿ ಹೋಗುತ್ತದೆ. ಎನ್ನುವುದಕ್ಕಿಂತಲೂ ಇತರ ಅನೇಕ ಬಿಡುವು ಇಲ್ಲದ ಕಾಯಕ ಕನ್ನಡಕ್ಕಾಗಿನ ಸೇವೆಯ ನಡುವೆ ನಿರ್ದಿಷ್ಟ ತಲೆಬರಹದಲ್ಲಿನ ಬರವಣಿಗೆ ಕಡಿಮೆಯಾದಂತೆ ಕಾಣಿಸುತ್ತದೆ. ಆದರೂ 'ಬೇವು-ಬೆಲ್ಲ' 'ನಿಮ್ಮೊಡನೆ', ಅಂಕಣಗಳಲ್ಲಿ ಅವರ ವಿಚಾರಲಹರಿ ಹರಿದು ಬರುತ್ತಲೇ ಇದೆ.

ಇನ್ನು ಅವರ ಕಾರ್ಯ ವೈಖರಿಯ ಬಗ್ಗೆಬರೆಯುವುದಿರಲಿ, ಒಮ್ಮೆ ಅವಲೋಕಿಸಲೂ ಅಸಮರ್ಥನಾಗುವಷ್ಟು ಚಿಕ್ಕವನಾಗಿದ್ದೇನೆ. ಆದರೆ ಒಂದು

ಸಮಾಧಾನದ ಅಷ್ಟೇ ಸಂತಸದ ವಿಚಾರವೆಂದರೆ ಮೌಲ್ಯವಿಲ್ಲದ ರಾಜಕಾರಣದಲ್ಲಿ ವೃಥಾ ತಮ್ಮ ಸೃಜನಶೀಲ ಸಾಮರ್ಥ್ಯವನ್ನು ಹರಣಮಾಡದೆ -ಸಾಹಿತ್ಯ ಹಾಗೂ ಸಾಂಸ್ಕೃತಿಕ ಸೇವಾರಂಗದಲ್ಲಿ ಅವರು ಸಂಪೂರ್ಣವಾಗಿ ತೊಡಗಿಸಿಕೊಂಡಿರುವುದು. ಏಕೆಂದರೆ ಇಂದಿನ ನಾರು ರಾಜಕಾರಣದಲ್ಲಿ ಹೂವಿನಂತಹ ಮನದ ನಿಷ್ಠೂರ ವ್ಯಕ್ತಿಯಾದ ಶ್ರೀ ಭಟ್ಟರ ಶಕ್ತಿ ಸಾಮರ್ಥ್ಯವನ್ನು ಅರಿತುಕೊಳ್ಳುವಷ್ಟು ತಾಳ್ಮೆಯೂ ಉಳಿದಿಲ್ಲ. ಆ ರೀತಿಯ ಅದೃಷ್ಟವನ್ನು ಸ್ಥಳೀಯ ರಾಜಕಾರಣಿಗಳು ಹೊಂದಿಲ್ಲ ಎಂದರೆ ಅತಿಶಯವಾಗಲಾರದು.

ಅದೇನೇ ಇರಲಿ, ಆ ಮನುಷ್ಯರ ಕ್ರಿಯಾಶೀಲತೆ ಪ್ರಕೃತಿವಾದಿ ಅಭಿವ್ಯಕ್ತಿಯ ವಿಧಾನ, ನವಜನಾಂಗವನ್ನು ರೂಪಿಸುವ ತಜ್ಞತೆ, ಅದರ ಹಿಂದಿನ ಕಳಕಳಿ, ದೇಶದರ್ಶನದಂತ ಸಮರ್ಪಣಭಾವ ವಾಸ್ತವಿಕತೆಯ ಸ್ಥೂಲ ಗ್ರಹಿಕೆಗಳನ್ನು, ತೀರಾ ಅಲ್ಪಸಮಯದಲ್ಲೇ ಸ್ವತಃ ಅನುಭವಿಸಿದ ಉತ್ಕಟವಾದ ಭಾವನೆ ನನಗಿದೆ. ನನ್ನ ಸಾಹಿತ್ಯವನ್ನು ಪ್ರೋತ್ಸಾಹಿಸುವಲ್ಲಿಯಾಗಲೀ, ನನ್ನದೇ ಪತ್ರಿಕೆಯಾದ 'ಅಭ್ಯಾಗತ'ವನ್ನು ಬೆಳೆಸುವಲ್ಲಿಯಾಗಲೀ ಅಥವಾ ನನ್ನ ಯಾವತ್ತೂ ಸಂಕೋಚ ಸ್ವಭಾವವನ್ನು ಹೋಗಲಾಡಿಸಿ ನೀನೂ ಸಹ ಒಬ್ಬ 'ಸಮರ್ಥ ಬರಹಗಾರ' ಎಂಬ ಮನೋಭಾವನೆಯನ್ನು ನನ್ನಲ್ಲಿ ಬೆಳೆಸುತ್ತಿರುವಲ್ಲಿಯಾಗಲೀ ಅವರು ನೀಡಿದ ಬೆಂಬಲದಿಂದಾಗಿ ಶ್ರೀ ಮಹಾಬಲೇಶ್ವರ ಭಟ್ಟರು ಪೂಜ್ಯನೀಯರಾಗುತ್ತಾರೆ. ಹಾಗೆಂದು ಅವರ ಬಗೆಗಿನ ಅಡ್ಡ ಮಾತುಗಳನ್ನೂ ಕೆಲವರ ಬಾಯಲ್ಲಿ ಕೇಳಿದ್ದೇನೆ. ಆದರೆ ಭಟ್ಟರನ್ನು ಅರಿತ ಯಾರೊಬ್ಬನೂ ಹಾಗೇ ಭಾವಿಸಿದರೆ ಅದು ಅವರ ಮನೋವಿಕಲತೆಯನ್ನು ತೋರಿಸುತ್ತದೆ. ಒಟ್ಟಿನಲ್ಲಿ ಮೊದಲೇ ಹೇಳಿದ ಸಂಘಟಿತ ನೆಲೆಯ ತಾತ್ವಿಕರಾಗಿ ಶ್ರೀ ಭಟ್ಟರನ್ನು ಕಂಡ ನಾನು, ಅವರು ನೂರ್ಕಾಲ ಬಾಳಿ ನಾನು, ನನ್ನಂತಹ ಯುವಕರ ದಾರಿ ದೀಪವಾಗಲಿ ಎಂದು ಕಾಣದ ದೇವರಲ್ಲಿ ಮೊರೆಯಿಟ್ಟು ವಿರಮಿಸುತ್ತೇನೆ.

# ಎಪ್ಪತ್ತರಲ್ಲೂ ಇಪ್ಪತ್ತರ ಚಟುವಟಿಕೆ

- ಶ್ರೀನಿವಾಸ ಉಡುಪ

೮.೯.೧೯೨೮ ಸುತ್ತಲೂ ದಟ್ಟಕಾಡು ಗಿಡಮರಗಳಿಂದಾವೃತವಾಗಿ, ತುಂಬು ಮಲೆನಾಡೆನಿಸಿದ ಸಾಗರ ಪ್ರಾಂತ್ಯದ ಪರಿಸರದಲ್ಲಿ ಹಸಿರು ಗದ್ದೆ, ತೋಟ, ತೆಂಗು, ಅಡಿಕೆ, ಬಾಳೆಗಳಿಂದ ಸುಶೋಭಿಸುತ್ತಿದ್ದ ತೊರೆಮನೆಗೆ ಅಂದು ಒಂದು ವಿಶೇಷ ದಿನ. ಸುಪ್ರಭಾತದ ಬಾಲ ಅರುಣನ ಕಿರಣ ಕಿರಣಗಳಲ್ಲೂ ಒಂದು ವಿನೂತನ ಕಾಂತಿ ಹೊಮ್ಮಿ, ಚೈತನ್ಯ ತುಂಬಿ, ಅರಳಿದ ಒಂದು ಸುದಿನ. ಆ ದಿನಗಳಲ್ಲಾಗಲೇ ಸಾಕಷ್ಟು ಹೆಸರು ಗಳಿಸಿದ್ದ ತೊರೆಮನೆಯ ವಿಶ್ವನಾಥ ಭಟ್ಟರು ಕೃಷಿ ಕೆಲಸಗಳ ನಿಮಿತ್ತ ಕುದುರೆಯ ಮೇಲೆ ಹೊರ ಹೋಗಿದ್ದವರು, ಬೇಗನೆ ಅಂದು ಮನೆಗೆ ಹಿಂದಿರುಗಿದರು. ಅವರ ಹೆಂಡತಿ ಶ್ರೀಮತಿ ವೆಂಕಮ್ಮನವರಿಗೆ ಆಗತಾನೆ ಹೆರಿಗೆ ನೋವು ಪ್ರಾರಂಭವಾಗಿತ್ತು. ಒಂದೇ ಕುಟುಂಬದಂತಿದ್ದ ಊರಿನ, ರೈತ ಕುಟುಂಬದ ಸಾಕಷ್ಟು ಜನ, ವಿಶೇಷವಾಗಿ, ಹೆಣ್ಣುಮಕ್ಕಳು ಭಟ್ಟರ ಮನೆಯ ಆವರಣದಲ್ಲಿ ಬಂದು ಸೇರುತ್ತಿದ್ದರು. ವೆಂಕಮ್ಮನವರ ಆತಂಕದ ಕ್ಷಣಗಳು ಕಳೆದು, ಒಂದು ಸುಂದರ ಸಂಭ್ರಮ ಸಂತೋಷದ ವಾತಾವರಣವುಂಟಾಗಿತ್ತು. 'ಪುತ್ರರತ್ನ'ವೊಂದು ಜಗತ್ತಿಗೆ ಉದಯವಾಗಿತ್ತು. ಸಧೃಡ ಮೈಕಟ್ಟಿನ, ಪುಟ್ಟಕಂಗಳಲ್ಲಿ ಕಾಂತಿಯನ್ನು ಸೂಸುತ್ತಿದ್ದ ಮುದ್ದಾದ ಕೂಸು ತೊಟ್ಟಿಲಲ್ಲಿಕಿಲ ಕಿಲ ನಗುತ್ತಿತ್ತು. ಸಂಪ್ರದಾಯದ ವಿಧಿ ವಿಧಾನಗಳು ಮನೆಯಲ್ಲಿ ಜರುಗಿದವು. ಮನೆಯವರೆಲ್ಲರ ಅಕ್ಕರೆ, ಬಂಧು-ಬಾಂಧವರ ಒಲುಮೆ, ಪ್ರೀತಿಗಳನ್ನು ಸವಿದು ವಿನಿಮಯಿಸಿಕೊಂಡ ಕೂಸು - ಬಾಲಕನಾಗಿ ಬೆಳೆಯಿತು. ಅಂದಿನ ಪರಿಸರದಲ್ಲೇ ಅವರಿಗೆ ಓದು ವಿದ್ಯಾಭ್ಯಾಸಗಳು ನಡೆದವು. ಈ ಮಧ್ಯೆ ಪಾರಂಪರಿಕವಾಗಿ ಬಂದ ಹೊಲ-ಗದ್ದೆ, ತೋಟ, ಮುಂತಾದ ಕೃಷಿ ಕೆಲಸಗಳಲ್ಲಿ ಸಾಕಷ್ಟು ಪರಿಶ್ರಮವನ್ನು ಪಡೆದು, ಹಳ್ಳಿಯಲ್ಲಿಬೆಳೆದರು. ಚಿಕ್ಕವಯಸ್ಸಿನಲ್ಲೇ ತಂದೆಯವರನ್ನು ಕಳೆದುಕೊಂಡ, ಮಹಾನಂದರ ಬಾಲ್ಯ ಅಷ್ಟೇನೂ ಸುಖಕರವಾದುದಾಗಿರಲಿಲ್ಲ. ಸೋದರಮಾವ, ಚಿಕ್ಕಮ್ಮನವರೊಂದಿಗೆ ಆಶ್ರಯಿಸಿ ಬೆಳೆದ ಹುಡುಗ ಮಹಾಬಲನಿಗೆ, ೧೯೪೮ರಲ್ಲಿ ಲಗ್ನವೂ ಆಗಿ, ಶ್ರೀಮತಿ ಪದ್ಮಾವತಮ್ಮನವರು, ಅನುಕೂಲೆಯಾಗಿ ಭಟ್ಟರ ಗೃಹಿಣಿಯಾಗಿ ಮನೆ ತುಂಬಿದರು.

ಪರಿಸರದ ಅನಾನುಕೂಲತೆಯಿಂದ, ಮಹಾಬಲೇಶ್ವರ ಭಟ್ಟರು ತೊರವುನೆಯನ್ನು ಬಿಟ್ಟು ಬರಬೇಕಾಯಿತು. ಜೀವನೋಪಾಯಕ್ಕೆ ಒಂದು ಮಾರ್ಗವನ್ನು ಹುಡುಕಬೇಕಿತ್ತು. ಇಂತಹ ಸಂದಿಗ್ಧ ಸಮಯದಲ್ಲಿ ಭಟ್ಟರಿಗೆ ನೆನಪಾದುದು - ಸಾಗರ. ಸಾಗರಕ್ಕೆ ಬಂದಿಳಿದ ಯುವಕ ಮಹಾಬಲರು, ಸಾಗರದ ಚಾಮರಾಜಪೇಟೆಯಲ್ಲಿ ಒಂದು ಸಣ್ಣ ಅಂಗಡಿಯನ್ನು ತೆರೆದು ವ್ಯಾಪಾರವನ್ನು ಪ್ರಾರಂಭಿಸಿದರು. ಅಷ್ಟು ಹೊತ್ತಿಗಾಗಲೇ ಭಟ್ಟರು ಸಾಕಷ್ಟು ಅನುಭವವನ್ನು ಗಳಿಸಿಕೊಂಡಿದ್ದರು. ಅವರ ಮನಸ್ಸು ಸಾರ್ವಜನಿಕ ರಂಗದ ಕಡೆಯೂ, ವಿಶೇಷವಾಗಿ ಸಾಹಿತ್ಯರಂಗದ ಕಡೆಯೂ ಎಳೆಯುತ್ತಿತ್ತು. ವ್ಯಾಪಾರ ಮಾಡುತ್ತಿದ್ದ ಭಟ್ಟರು, ಪುಸ್ತಕ ಮಾರಾಟದ ಕೆಲಸವನ್ನೂ ಮಾಡಲು ಪ್ರಾರಂಭಿಸಿದರು. ಮುಂದೆ ತಾವೇ 'ಜಲಂಧರ' ಪ್ರಕಟಣಾಲಯವನ್ನು ತೆರೆದು ಆ ಮೂಲಕ ಪುಸ್ತಕಗಳ ಪ್ರಕಾಶನವನ್ನೂ ಕೈಗೊಂಡರು. ಈ ಪ್ರಕಾಶನದಲ್ಲಿ ನಾಡಿನ ಅನೇಕ ಖ್ಯಾತ ನಾಮರ ಪುಸ್ತಕಗಳು ಪ್ರಕಟವಾಗಿ, ಸಾಗರದಲ್ಲಿ ಸಾಹಿತ್ಯ ಸಂಚಾಲನೆಯಾಗಿ ಅನೇಕ ಸಾಹಿತಿಗಳೂ, ಕವಿಗಳೂ ಸಾಗರಕ್ಕೆ ಬಂದು ಹೋಗುವ ಪರಂಪರೆ ಬೆಳೆದು ಬಂತು. ಮಹಾಬಲೇಶ್ವರ ಭಟ್ಟರೂ, ಸಾಹಿತಿಯೆನಿಸಿ, ಅನೇಕ ಕೃತಿಗಳನ್ನು ಹೊರತರಲು ಪ್ರಾರಂಭಿಸಿದರು. ಹೀಗಾಗಿ ಭಟ್ಟರು ಒಬ್ಬ ವ್ಯಾಪಾರಿಯಾಗಿ, ಪ್ರಕಾಶಕರಾಗಿ, ವಿಮರ್ಶಕರಾಗಿ, ಕವಿ-ಸಾಹಿತಿಯಾಗಿ, ಅನೇಕ ಗೆಳೆಯರ, ಸಾರ್ವಜನಿಕರ, ಪ್ರೀತಿ ವಿಶ್ವಾಸಗಳನ್ನು ಗಳಿಸಿ ಮೇಲೆ ಬಂದರು. ಈ ಜನಪ್ರಿಯತೆಯಿಂದಾಗಿ, ಸಾಗರದ ಪುರಸಭೆಗೆ ಆಯ್ಕೆಯಾಗಿ, ವಿವಿಧ ಪದವಿಗಳನ್ನು ಅಲಂಕರಿಸಿ, ಸಾರ್ವಜನಿಕರ ಸೇವೆಗೆ ಮುಂದಾದರು. ತಮಗೆ ದೊರೆತ ಕಾಲಾವಧಿಯಲ್ಲೇ ಅನೇಕ ಉತ್ತಮವಾದ ಕೆಲಸಗಳನ್ನು ರೂಪಿಸಿಕೊಂಡು, ಅವುಗಳನ್ನು ಸಮರ್ಪಕವಾಗಿ ನಿರ್ವಹಿಸಿದರು. ಯಾರ ಹಂಗಿಗೂ ಪ್ರಭಾವಕ್ಕೂ ಮಣಿಯದ ಭಟ್ಟರು ಈ ಕ್ಷೇತ್ರದಲ್ಲಿ ತುಂಬಾ ಜನಪ್ರಿಯತೆ, ಹೆಸರು ಗಳಿಸಿ, ಮುಂದೆ ರಾಜಕೀಯ ರಂಗಕ್ಕೂ ಕಾಲಿರಿಸಿದರು. ಸುದೀರ್ಘಕಾಲ ಕಾಂಗ್ರೆಸ್ ಪಕ್ಷದಲ್ಲಿದ್ದುಕೊಂಡು, ವಿವಿಧ ಹುದ್ದೆಗಳನ್ನು ಅಲಂಕರಿಸಿದ ಭಟ್ಟರು ಈ ರಂಗದಲ್ಲಿಯೂ ಅನೇಕ ಉತ್ತಮವಾದ ಜನೋಪಯೋಗಿ ಕೆಲಸಗಳನ್ನು ಕೈಗೊಂಡು ಸಮರ್ಥವಾಗಿ ನಿಭಾಯಿಸಿದರು. ಬಡವರ, ದೀನದಲಿತರ ಬಗ್ಗೆ, ವಿಶೇಷ ಕಳಕಳಿಯಿದ್ದ ಭಟ್ಟರು, ಅವರ ಏಳ್ಗೆಗಾಗಿಯೇ ಸದಾ ದುಡಿಯುತ್ತಾ ನಿಸ್ಪೃಹರೆನಿಸಿ, ಅವರ ಔನ್ನತ್ಯಕ್ಕೆ ಶ್ರಮಿಸಿದರು. ಜೊತೆಗೆ ಸಾಗರ ತಾಲ್ಲೂಕು ವ್ಯವಸಾಯೋತ್ಪನ್ನದ ಅಧ್ಯಕ್ಷಸ್ಥಾನ, ಶಿವಮೊಗ್ಗ ಮಲೆನಾಡು ಅಡಿಕೆ ಮಾರಾಟ ಸಹಕಾರ ಸಂಘದ ಉಪಾಧ್ಯಕ್ಷ ಸ್ಥಾನ, ಶಿವಮೊಗ್ಗ ಮಲೆನಾಡು ಅಡಿಕೆ ಮಾರಾಟ ಸಹಕಾರ ಸಂಘದ ಉಪಾಧ್ಯಕ್ಷ ಸ್ಥಾನ, ಇವುಗಳಲ್ಲಿಯೂ ಭಟ್ಟರು ಸಮರ್ಥವಾಗಿ ಕೆಲಸ ಕಾರ್ಯಗಳನ್ನು

ನಿರ್ವಹಿಸಿ, ಈ ಕ್ಷೇತ್ರಗಳಲ್ಲೂ ಹೆಸರು ಗಳಿಸಿದರು. ಹೀಗೆ ಭಟ್ಟರು ಭಾಗವಹಿಸಿದ ಸಂಘ, ಸಂಸ್ಥೆಗಳು ಅನೇಕ, ಅವರ ಕಾರ್ಯ ವ್ಯಾಪ್ತಿಯೂ ವಿಸ್ತಾರವಾದದ್ದು. ಯಾವುದೇ ಕ್ಷೇತ್ರದಲ್ಲಿರಲಿ, ಸಂಘ-ಸಂಸ್ಥೆಗಳಲ್ಲಿರಲಿ, ಭಟ್ಟರು ತಮ್ಮ ಕಾರ್ಯ ನಿಷ್ಠೆಗೇ ಪಕ್ಕಾದವರು. ವಶೀಲಿ ಪ್ರಭಾವ, ಆಸೆ, ಆಮಿಷಗಳಿಗೆ ಬಲಿಯಾಗದ ಭಟ್ಟರು ಅನೇಕ ಜನಹಿತಕಾರ್ಯಗಳನ್ನು ಮಾಡಿ, ಜನಪ್ರಿಯರಾದರಲ್ಲದೆ ಪುಟಕ್ಕಿಟ್ಟ ಚಿನ್ನವಾಗಿ ರೂಪುಗೊಂಡರು.

ಸಾಹಿತ್ಯದ ಕಡೆ ವಿಶೇಷ ಒಲವಿದ್ದ ಭಟ್ಟರು, ಜೊತೆ ಜೊತೆಯಲ್ಲೇ ಸಾಹಿತ್ಯ ಕ್ಷೇತ್ರದಲ್ಲೂ ವಿಶೇಷವಾಗಿ, ಪಾಲ್ಗೊಂಡರು. ಕನ್ನಡ ನಾಡು, ನುಡಿ, ದೇಶಾಭಿಮಾನದ ಕಳಕಳಿಯಿದ್ದ ಭಟ್ಟರಿಗೆ, ಈ ಸಾಹಿತ್ಯರಂಗದ ಕೆಳೆ ಒಂದು ಅವಿನಾಭಾವ ಸಂಬಂಧವಾಗಿ ಬೆಳೆಯಿತು. ಗೆಳೆಯರ, ಸಾಹಿತಿಗಳ ಬೆಂಬಲ, ಸಾರ್ವಜನಿಕರ ಸಹಕಾರ, ಇವುಗಳೆಲ್ಲವನ್ನೂ ಸ್ವಸಾಮರ್ಥ್ಯ, ಸ್ವಪ್ರತಿಭೆಯಿಂದ ಗಳಿಸಿಕೊಂಡ ಭಟ್ಟರಿಗೆ ಸಾಹಿತ್ಯ ಉಸಿರಾಯಿತು. ಸಾಹಿತ್ಯಸೇವೆ, ದೈವಾರಾಧನೆಯಾಯಿತು. ಅನೇಕ ಗೆಳೆಯರ ತಂಡಗಳನ್ನು ಕಟ್ಟಿಕೊಂಡು, ಭಟ್ಟರು ಅನೇಕ ಸಾಹಿತ್ಯ ಸಂಘ-ಸಂಸ್ಥೆಗಳನ್ನು ಹುಟ್ಟು ಹಾಕಿದರು. ನಾಟಕ, ಕಲೆ, ಸಾಹಿತ್ಯ, ಸಂಗೀತ, ಯಕ್ಷಗಾನ, ಕಾವ್ಯಗೋಷ್ಠಿಗಳು ಉಪನ್ಯಾಸ, ಸಭೆ ಸಮಾರಂಭಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದ ಭಟ್ಟರು, ಇದಕ್ಕಾಗಿ ಮನೆ ಸಮಸ್ಯೆ, ಊಟ-ನಿದ್ರೆಗಳನ್ನು ತೊರೆದು ದುಡಿದರು. ನಾಡಿನ ಉದ್ದಗಲಕ್ಕೂ ಓಡಾಡಿದರು. ಕನ್ನಡದ ನೆಲ, ಜಲ, ಭಾಷೆ, ಸಾಹಿತ್ಯ ಇವರ ದೀಕ್ಷೆಯಾಯಿತು. ಕನ್ನನಾಡ ತಾಯಿ, ಸಾಹಿತ್ಯ ಶಾರದೆ, ಇವರಿಗೆ ಒಲಿದು, ಕನ್ನಡ ನಾಡಿನ ಕಣ್ಮಣಿಯಾದರು.

ಮಹಾಬಲೇಶ್ವರ ಭಟ್ಟರಿಗೆ ಸಾಹಿತಿಗಳಲ್ಲಿ, ಕವಿಗಳಲ್ಲಿ, ಸ್ನೇಹಿತರಲ್ಲಿ ಎಲ್ಲಿಲ್ಲದ ಅಭಿಮಾನ. ನಾಡಿನ ಸರಿಸುಮಾರು ಎಲ್ಲಾ ಖ್ಯಾತ, ಹಿರಿಕಿರಿಯ ಸಾಹಿತಿಗಳೊಂದಿಗೆ ಮಧುರ ಸ್ನೇಹ ಸಂಬಂಧಗಳನ್ನಿರಿಸಿಕೊಂಡು, ಆ ಸ್ನೇಹ ವಿಶ್ವಾಸಗಳನ್ನು ಮತ್ತಷ್ಟುಹೆಚ್ಚಿಸಿಕೊಂಡು, ಬಂಧುಗಳೋಪಾದಿಯಲ್ಲಿ ಬಾಂಧವ್ಯಗಳನ್ನು ಬೆಳೆಸಿಕೊಂಡವರು. ಸರಳತೆ, ಸಜ್ಜನಿಕೆ, ವಿನಯ, ವಿವೇಕ, ನಿರಹಂಕಾರ, ನಿರ್ಮತ್ಸರಗಳಿಂದ ಸುಶೋಭಿತರಾದವರು. ಸಾಗರವನ್ನು ಸಾಹಿತ್ಯದ ನಂದನವನವನ್ನಾಗಿ ಮಾಡಿದವರು. ಈ ನಂದನವನಕ್ಕೆ ಆಕರ್ಷಿತರಾಗಿ ಬಂದ ಖ್ಯಾತ, ಪ್ರಖ್ಯಾತ ಹಿರಿ, ಕಿರಿಯ ಸಾಹಿತಿಗಳು ಅದೆಷ್ಟೋ, ಬಂದು ಹೋದ ಮಿತ್ರರ ಬಳಗವೆಷ್ಟೋ, ಸಾಹಿತಿಗಳಿಗೆ ಸಾಗರ ಬಹುಪ್ರಿಯ. ಸಾಗರದ ಸಾಹಿತ್ಯ ವೇದಿಕೆಯನ್ನೇರಿ, ಕಾರ್ಯಕ್ರಮಗಳಲ್ಲಿ ಭಾಗವಹಿಸಿಬಂದವರೆಂದರೆ, ಅದೇನೋ ಹೆಮ್ಮೆ, ಅಭಿಮಾನ, ಹೆಚ್ಚುಗಾರಿಕೆ. ಈ ನಂದನವನದ ಒಡೆಯನನ್ನು ಕಂಡರೆ

ಕಂಡು ಮಾತನಾಡಿದರೆ, ಅವರೊಂದಿಗೆ ಭಾವನೆಗಳನ್ನು ವಿನಿಮಯಿಸಿಕೊಂಡರೆ, ಅವರ ಆತ್ಮೀಯ ತೆಕ್ಕೆಯಲ್ಲಿ, ಹಸ್ತಲಾಘವದಲ್ಲಿ ಪಾಲ್ಗೊಂಡರೆ ಮನಸ್ಸಿಗೆ ನಿರಾಳ, ನೆಮ್ಮದಿ. ಡಾ. ಕೆ.ವಿ. ಪುಟ್ಟಪ್ಪನವರು, ದ.ರಾ. ಬೇಂದ್ರೆಯವರು, ಶಿವರಾಮ ಕಾರಂತರು, ವಿ.ಕೃ.ಗೋಕಾಕ್, ಮಾಸ್ತಿ ವೆಂಕಟೇಶ ಅಯ್ಯಂಗಾರ್, ವಿ.ಸೀಯವರು, ರಂ.ಶ್ರೀ. ಮುಗಳಿ, ಗೋಪಾಲಕೃಷ್ಣ ಅಡಿಗರು, ಸಾ.ಶಿ. ಮರುಳಯ್ಯನವರು, ಬೀ.ಚಿ. ಶ್ರೀರಂಗ, ಅ.ನ.ಕೃ, ಎಂ.ಪಿ.ಎಲ್. ಶಾಸ್ತ್ರೀ, ಕಮಕೋಡು ನರಸಿಂಹ ಶಾಸ್ತ್ರೀ ಬಿ.ಹೆಚ್. ಶ್ರೀಧರ್, ಕೋ.ಚನ್ನಬಸಪ್ಪ, ಜೊತೆಗೆ ಸ್ಥಳೀಯ ಪ್ರತಿಭೆಗಳಾದ - ಶ್ರೀನಿವಾಸ ಉಡುಪ, ನಾ.ಡಿಸೋಜ, ಹೀಗೆ ಬೆಳೆಯುತ್ತದೆ ಪಟ್ಟಿ. ಇಲ್ಲಿ ಕವಿಗೋಷ್ಠಿಗಳು ನಡೆದಿವೆ. ಉಪನ್ಯಾಸಗಳು, ವಿಚಾರ ಸಂಕಿರಣಗಳು, ಸಂಗೀತ, ನಾಟಕ, ಕಲೆ, ಪುಸ್ತಕ ಪ್ರದರ್ಶನಗಳು ನಡೆದಿವೆ. ಕಲೆ, ಸಾಹಿತ್ಯದ ಎಲ್ಲಾ ಪ್ರಕಾರಗಳಿಗೂ ಸಾಗರ ಸ್ಪಂದಿಸಿದೆ. ಆಗರವಾಗಿದೆ. ಸಾಹಿತ್ಯ ಶಾರದೆಗೆ ಇಲ್ಲಿ ನಿತ್ಯೋತ್ಸವ.

ಭಟ್ಟರನ್ನು ನಾನು ಆರಂಭದಿಂದಲೂ ಕಂಡಂತೆ, ಅವರು ಬಹು ಶಿಸ್ತಿನ ಸ್ವಭಾವದವರು, ಅಚ್ಚುಕಟ್ಟು, ಸುವ್ಯವಸ್ಥೆ, ಕಾಲ ಪ್ರಜ್ಞೆ, ಪ್ರಾಮಾಣಿಕ ಕಾರ್ಯ ಮಗ್ನತೆ, ಸಾಧಿಸುವೆನೆಂಬ ಛಲ, ಇವರಿಗೆ ರಕ್ತಗತವಾಗಿ ಮೂಡಿ ಬಂದಿದೆ. ಭಟ್ಟರು ಹಮ್ಮಿಕೊಳ್ಳುವ, ಯೋಜಿಸುವ, ಯಾವುದೇ ಕಾರ್ಯಕ್ರಮಗಳಾಗಲೀ, ಯಾವ ಸಭೆ ಸಮಾರಂಭಗಳಾಗಲೀ, ಅವುಗಳಲ್ಲಿ ಒಂದು ಪೂರ್ವ ಯೋಜಿತ ಗುರಿಯಿರುತ್ತದೆ, ಅರ್ಥವಿರುತ್ತದೆ. ಹೀಗಾಗಿ ಅವು ಸಾರ್ಥವಲ್ಲದೆ ವ್ಯರ್ಥವೆನಿಸುವುದಿಲ್ಲ. ಭಟ್ಟರು ಯೋಜಿಸುವ ಯಾವ ಸಭೆ ಸಮಾರಂಭಗಳಿಗೂ, ಹಣದ ಕೊರತೆಯಾಗುವುದಿಲ್ಲ. ಅವರ ಸಾರ್ವಜನಿಕರ, ಸ್ನೇಹಿತರ, ಸಾಹಿತಿಗಳ, ಸಾಹಿತ್ಯಾಭಿಮಾನಿಗಳ ಬಳಗ, ದೊಡ್ಡದು. ಅದಕ್ಕಿಂತ ಅವರು ಗಳಿಸಿರುವ ಪ್ರೀತಿ, ವಿಶ್ವಾಸ, ಆತ್ಮೀಯತೆ, ನಂಬಿಕೆ, ಇನ್ನೂ ದೊಡ್ಡವು. ಹಣ ಸಂಗ್ರಹಣೆಗಾಗಿ ಅವರೊಡನೆ ಹೋದಾಗ, ಅದು ಪಟ್ಟಣವಾಗಿರಲಿ, ಹಳ್ಳಿಯಾಗಿರಲಿ, ಜನರು ಎಂದೂ ಅವರನ್ನು ಕಡೆಗಣಿಸಿ, ಕೀಳಾಗಿ ಕಾಣುವುದಿಲ್ಲ. ಬದಲಾಗಿ, ಭಟ್ಟರು ನಮ್ಮೆಡೆಗೆ ಬಂದರಲ್ಲಾ ಎನ್ನುವುದೇ ಅವರ ಹೆಮ್ಮೆ. ಕೇಳಸಿಕೊಳ್ಳದೇ, ವಿಷಯ ತಿಳಿದು, ತಾವೇ ಮುಂದಾಗಿ, ನಿರೀಕ್ಷಿಸಿದ್ದುದಕ್ಕಿಂತ ಹೆಚ್ಚಾಗಿ ನೀಡಿದ ಹಣವೇ ಅಧಿಕ. ಭಟ್ಟರು ಮಾಡುವ ಕೆಲಸಗಳು, ಕಾರ್ಯಕ್ರಮಗಳು, ಸಾರ್ವಜನಿಕ ಹಿತದೃಷ್ಟಿಯುಳ್ಳದ್ದವು, ಅವರು ಹಿಡಿದ ಕಾರ್ಯಗಳನ್ನು ಮಾಡಿ ಸಾಧಿಸದೇ ಬಿಡುವುದಿಲ್ಲ. ಅವರ ಕಾರ್ಯಗಳಲ್ಲಿ ಎಂದೂ ಒಂದು ಸದುದ್ದೇಶವಿದೆ ಎಂಬ ನಂಬಿಕೆ ವಿಶ್ವಾಸ ಎಲ್ಲರಲ್ಲೂ ಬೇರೂರಿದೆ. ಭಟ್ಟರೂ ಅಷ್ಟೇ. ದೇಣಿಗೆ, ವಂತಿಗೆ ನೀಡಿದ ಸಾರ್ವಜನಿಕರ, ಸ್ನೇಹಿತರ, ಮನೋಮಟ್ಟಕ್ಕೆ ತೃಪ್ತಿಕರವಾಗಿ

ಕೆಲಸಮಾಡಿ ಸ್ಪಂದಿಸುವ ಅವರಮನೋಭಾವ, ಅಷ್ಟೇ ಪ್ರಾಮಾಣಿಕತನದಿಂದ ಕೂಡಿದುದಾಗಿರುತ್ತದೆ. ಅವರು ಹಮ್ಮಿಕೊಂಡ ಕಾರ್ಯಕ್ರಮಗಳಿಗೆ, ಸಭೆ ಸಮಾರಂಭಗಳಿಗೆ ಸದಾ ಜನರ ನೂಕು-ನುಗ್ಗಲು. ಇಂದಿನ ಕಾಲದಲ್ಲಿ ಹಣಕೊಟ್ಟು, ಆಮಂತ್ರಣ ನೀಡಿದರೂ ಬಾರದ ಜನ, ಭಟ್ಟರ ಇಂತಹ ಕಾರ್ಯಕ್ರಮಗಳಿಗೆ ಬಂದು ಸೇರುತ್ತಾರೆ. ಇದಕ್ಕೆ ಹೆಣ್ಣು ಗಂಡು ಹೊರತಲ್ಲ. ಮುದುಕರು, ಹುಡುಗರು ಎಂಬ ವಯೋಮಾನದ ಭೇದವಿಲ್ಲ. ಭಟ್ಟರಲ್ಲಿದ್ದಂತೆ ಅವರಲ್ಲೂ ಏನೋ ಒಂದು ಅದಮ್ಯ ಉತ್ಸಾಹ, ಸಂತಸ ಎದ್ದುಕಾಣುತ್ತಿರುತ್ತದೆ. ಇವರು ನಡೆಸುವ ಸಭೆ ಸಮಾರಂಭಗಳಲ್ಲಿ ಗದ್ದಲವಿಲ್ಲ, ದೊಂಬಿಯಿಲ್ಲ ಇರಿಸು-ಮುರಿಸಿಲ್ಲ. ಎಲ್ಲೆಲ್ಲೂ ಜನಗಳ ಶಾಂತ ಸಾಗರ. ಇಲ್ಲಿ ಪರಸ್ಪರ ಪ್ರೀತಿ, ವಿಶ್ವಾಸ, ಸೌಹಾರ್ದ, ಸಮಾಧಾನ, ನಂಬಿಕೆಗಳೆಂಬ ಗಂಧ ಸಾಂಬ್ರಾಣಿಗಳ ಪರಿಮಳವು ಅಲೆ ಅಲೆಯಾಗಿ ತೇಲುತ್ತದೆ. ಏನು ಆಕರ್ಷಣೆಯೋ, ಏನು ಮೋಡಿಯೋ ತಿಳಿಯದು. !

ಮಹಾಬಲೇಶ್ವರ ಭಟ್ಟರು ಯಾವುದೇ ಕೆಲಸವನ್ನು, ಕೈಗೊಂಡ ಮೇಲೆ ಅದನ್ನು ಮಾಡದೇ ಬಿಡರು ಎಂಬುದಕ್ಕೆ ಒಂದು ಘಟನೆ ನನ್ನ ನೆನಪಿಗೆ ಬರುತ್ತದೆ. ಬೆಂಗಳೂರು ವಿಶ್ವವಿದ್ಯಾನಿಲಯದ ತುಕೋಳರನ್ನು ಸಾಗರಕ್ಕೆ ಕರೆಸುವಾಗಿನ ಒಂದು ಸಂದರ್ಭ. ಭಟ್ಟರ ನೇತೃತ್ವದಲ್ಲಿ ಕಾರ್ಯಕ್ರಮಗಳ ಪ್ರಚಾರಗಳು ಬಿರುಸಿನಿಂದ ಸಾಗಿದ್ದವು. ಎಲ್ಲಾ ಸಿದ್ಧತೆಗಳು ಮುಗಿದು ನಾಳೆಯೇ ಅವರ ಕಾರ್ಯಕ್ರಮ. ಹಿಂದಿನ ರಾತ್ರಿ ನಾನು ಭಟ್ಟರನ್ನು ಭೇಟಿಯಾಗಲು ಹೋದೆ. ಭಟ್ಟರ ಮುಖಬಾಡಿತ್ತು. ಆದರೂ 'ಬನ್ನಿ ಉಡುಪರೇ' ಎಂದು ಸ್ವಾಗತಿಸಿದರು. ಅವರ ಮನಸ್ಸಿನಲ್ಲೇನೋ ಆತಂಕ, ಭೀತಿಯ ಛಾಯೆಯಿತ್ತು. ಗಂಟಲು ಕಟ್ಟಿದಂತಿತ್ತು. ನನಗೊಂದೂ ಅರ್ಥವಾಗಲಿಲ್ಲ. ಮೊದಲೇ ನಾನು ಗಡಿಬಿಡಿಯವನು, 'ಏನಾಯ್ತು ಭಟ್ಟರೇ' ಎಂದೆ, 'ಏನಿಲ್ಲ ಮಾನಪತ್ರ ಎಲ್ಲಾ ಸಿದ್ಧವಾಗಿದೆ. ಆದರೆ 'ಎಂದರು. ಏನೋ ಆಗಿದೆ ಎಂದು ನನಗನ್ನಿಸಿ ಗಾಬರಿಯಾದೆ, ಭಟ್ಟರು ಅವನತ ಮುಖಿಗಳಾಗಿ 'ತುಕೋಳರು ಬರುವುದಿಲ್ಲವಂತೆ - ತಂತಿ ಬಂದಿದೆ.' ಎಂದರು. ಭಟ್ಟರು ರೂಪಿಸಿದ ಯಾವ ಸಮಾರಂಭಗಳಲ್ಲೂ ಈ ರೀತಿ ನಡೆದಿರಲಿಲ್ಲ. ಅತಿಥಿಗಳೆಲ್ಲರೂ ಗೊತ್ತಾದ ದಿನ ಗೊತ್ತಾದ ಸಮಯಕ್ಕೆ ಬಂದು, ಸಮಾರಂಭಗಳಲ್ಲಿ ಭಾಗವಹಿಸಿ ಹೋಗುವುದಿತ್ತು. ಇದಕೆಂದೂ ಚ್ಯುತಿ ಬಂದಿರಲಿಲ್ಲ. ತಮ್ಮ ಸಂಸಾರ ವಲಯದಲ್ಲೂ, ಬಂಧು-ಬಳಗದಲ್ಲೂ ಯಾವೊಂದು ಸಮಸ್ಯೆಗಳು ಬಂದರೂ, ವಿಚಲಿತರಾಗದೇ, ಎಲ್ಲವನ್ನೂ ಸ್ಮೈರಿಸಿಕೊಂಡು ನಗು ಬೀರುತ್ತಿದ್ದ ಅವರ ಅಂದಿನ ಪರಿಸ್ಥಿತಿಯನ್ನು ಕಂಡು ನಿಜಕ್ಕೂ ನನ್ನ ಮನಸ್ಸಿಗೆ ನೋವಾಯಿತು. ತುಕೋಳರು ಭಾಗವಹಿಸಲು ಬಾರದ ವಿಷಯ, ಸಧ್ಯಯಾರಿಗೂ ಗೊತ್ತಾಗಿರಲಿಲ್ಲ. ಆಗ ನಾನು ಹೇಳಿದೆ - 'ಭಟ್ಟರೇ ನಿಮ್ಮದು

ಪ್ರಾಮಾಣಿಕ ಸೇವೆ, ದೇವರಿದ್ದಾನೆ. ಇನ್ನೊಂದು ಟೆಲಿಗ್ರಾಂ ಕೊಡಿ' ಎಂದೆ. ಜೊತೆಯಲ್ಲಿದ್ದ ದಿ. ಶ್ರೀ ಕೆ.ಹೆಚ್.ಎಸ್. ಸಾಗರ್‌ರವರೂ 'ಹಾಗೇ ಮಾಡಿ' ಎಂದರು ಭಟ್ಟರು ಕೂಡಲೇ ಒಪ್ಪಿಕೊಂಡರು. ಆಗ - ಈಗಿನಂತೆ ಎಸ್.ಟಿ.ಡಿ. ಸೌಲಭ್ಯವಿರಲಿಲ್ಲ. ಮೂವರೂ ಕೂಡಿ ಅಂಚೆ ಕಛೇರಿಗೆ ಹೋದೆವು. ರಿಪ್ಲೈ ಟೆಲಿಗ್ರಾಂ ಕೊಟ್ಟೆವು. ಉತ್ತರಕ್ಕಾಗಿ ಭಟ್ಟರ ಅಂಗಡಿಯಲ್ಲೇ ಮಧ್ಯರಾತ್ರಿಯವರೆಗೂ ಕಾದೆವು. ನಮ್ಮ ಅದೃಷ್ಟ, ತುಕೋಳರಿಂದ ಉತ್ತರಬಂದಿತು. 'ನಾನು ನಾಳೆ ಬರುತ್ತೇನೆ'. ನನ್ನೆಲ್ಲಾ ಕಾರ್ಯಕ್ರಮಗಳನ್ನು ರದ್ದುಗೊಳಿಸಿದ್ದೇನೆ.' ಆಗ ಭಟ್ಟರ ಮುಖ ಸಂತೋಷ ಸಮಾಧಾನದಿಂದ ಅರಳುತ್ತಿತ್ತು. ಅವರ ಆನಂದ ಹೇಳತೀರದು. ಇದೆಲ್ಲವೂ ಹೊರಗಡೆ ಗೊತ್ತಾಗದ ಹಾಗೆ ನಡೆದದ್ದು. ಅವರ ಬದುಕೇ ಹೀಗೆ, ಅವರನ್ನು ಅನಾರೋಗ್ಯಕಾಡಬಹುದು, ಯೌವ್ವನ ಅಣಕಿಸಬಹುದು, ಆದರೆ ಭಟ್ಟರ ಕನ್ನಡ ಕೆಲಸಕ್ಕೆಂದೂ ಧಕ್ಕೆಬಾರದು, ಬರಲಾರದು, ಅದು ನೇರ. ಅವರು ರೂಪಿಸಿದ ಕಾರ್ಯಕ್ರಮಗಳನ್ನು ಅಚ್ಚುಕಟ್ಟಾಗಿ, ಸಮರ್ಪಕವಾಗಿ ನಡದೇತೀರಬೇಕು. ಅವರು ಸಾಗರದಲ್ಲಿ ನಡೆಸಿರುವ ಸಭೆ ಸಮಾರಂಭಗಳ ಆಹ್ವಾನ ಪತ್ರಿಕೆಗಳಲ್ಲಿ ಅತಿಥಿಗಳೆಂದು ಹೆಸರಿಸಿದ ಸಾಹಿತಿಗಳು ಬಾರದೆ ಎಂದೂ ತಪ್ಪಿಲ್ಲ. ಮನೆಕೆಲಸ, ಪುಸ್ತಕದ ವ್ಯಾಪಾರ, ಕೃಷಿ ಕೆಲಸ, ನೆಂಟರ ಆಗಮನ, ಏನೇ ಇರಲಿ, ಇವರು ಮರೆತಾರು, ಆದರೆ, ಹಮ್ಮಿಕೊಂಡ ಇಂತಹ ಕಾರ್ಯಕ್ರಮಗಳಲ್ಲಿ ಏನೇ ತೊಡಕು ಬಂದರೂ ಅದನ್ನು ನಿಭಾಯಿಸಿಕೊಂಡು, ಪೂರ್ವ ಸಿದ್ಧತೆಯಂತೆ ಮಾಡಿ ಮುಗಿಸುತ್ತಾರೆ. ಇದು ಇವರ ಜಾಯಮಾನ. ಇದನ್ನು ನೋಡಿದರೆ ಇವರಿಗೆ ಯಾವುದೋ ಒಂದು ದೈವ ಪ್ರೇರಣೆಯೋ, ಅಗೋಚರ ಶಕ್ತಿಯ ನೆರವಿದೆಯೋ, ಎಂದೆನ್ನಿಸುತ್ತದೆ.

ಸಭೆ ಸಮಾರಂಭಗಳಲ್ಲಿ ಭಾಗವಹಿಸಿದಾಗ ಅವರು ಮಾಡುವ ಭಾಷಣಗಳು ವಿದ್ವತ್ಪೂರ್ಣ. ಅನಾವಶ್ಯಕವಾಗಿ ಹಿಗ್ಗದೆ, ವಿಷಯಾಂತರಿಸದೆ, ಸಮಯ ಪ್ರಜ್ಞೆಯಿಂದ ಚಿಕ್ಕದಾದರೂ ಚೊಕ್ಕದಾದ ಭಾಷಣ ಮಾಡುವ ಕಲೆ ಇವರಿಗೆ ಸಿದ್ಧಿಸಿದೆ. ಅವರು ವ್ಯಕ್ತಿ, ವಸ್ತು, ವಿಷಯಗಳ ಬಗ್ಗೆ ಅಧ್ಯಯನ ಮಾಡಿ, ಸಂಚಯಿಸಿಕೊಂಡ ಅಪಾರ ಜ್ಞಾನ, ಅನುಭವಕ್ಕೆ, ಪ್ರಚಲಿತ ವಿದ್ಯಮಾನಗಳನ್ನು ಸಮೀಕರಿಸಿಕೊಂಡು ಯಾವ ಉದ್ವೇಗ ಭಾವಾವೇಶಗಳಿಲ್ಲದೆ, ಶಾಂತ, ಸಮಾಧಾನ ಚಿತ್ತದಿಂದ,ಸಂದರ್ಭಕ್ಕೆ ತಕ್ಕಂತೆ, ಅರ್ಥಪೂರ್ಣವಾಗಿ, ಅಸ್ಖಲಿತವಾಗಿ, ಆಕರ್ಷಕವಾಗಿ ಮಾತನಾಡುವ ಕಲೆಯನ್ನು ಇವರು ಮೈಗೂಡಿಸಿಕೊಂಡಿದ್ದಾರೆ. ಯಾರ ಪ್ರಲೋಭನೆಗಾಗಲೀ, ಯಾರ ವಶೀಲಿ ಪ್ರಭಾವಕ್ಕಾಗಲೀ ಒಳಗಾಗದೆ ವಿಷಯಗಳನ್ನು ನೇರವಾಗಿ ಮಂಡಿಸುವುದು, ಪ್ರಾಮಾಣಿಕವಾಗಿ ಬಿಚ್ಚಿಡುವುದು ಇವರ ಗುಣಧರ್ಮ.

ಭಟ್ಟರು ಸ್ನೇಹ ಶೀಲರು, ಒಮ್ಮೆ ಕಂಡು ಅವರ ಪರಿಚಯವಾದರೆ ಸಾಕು, ಆನಂತರ ಅವರ ಸ್ನೇಹ ನಿರಂತರವಾಗಿ ಅವರೊಂದಿಗೆ ಬೆಸೆದುಕೊಳ್ಳುತ್ತದೆ.

ಹಿರಿಯರಿರಲಿ, ಕಿರಿಯರಿರಲಿ, ಸಾಹಿತಿಗಳಿರಲಿ, ಸಾರ್ವಜನಿಕರಿರಲಿ, ಎಲ್ಲರನ್ನೂ ಸಮಭಾವನೆಯಿಂದ ಕಾಣುವುದು ಅವರ ಹಿರಿಯಗುಣ. ಕಿರು ಪ್ರತಿಭೆಗಳನ್ನು ಬೆಳಕಿಗೆ ತಂದು, ಪ್ರೋತ್ಸಾಹಿಸುವುದು ಅವರ ಇನ್ನೊಂದು ದೊಡ್ಡಗುಣ. ಮೂವತ್ತೈದು ವರ್ಷಗಳ ಹಿಂದಿನ ಗೆಳೆಯರಾದ, ಮೈಸೂರಿನ ಹೆಚ್.ವಿ. ನಾಗರಾಜರ, ಇಪ್ಪತ್ತೈದು ವರ್ಷದ ಗೆಳೆಯರಾದ ಬೇಡರೆಡ್ಡಿಹಳ್ಳಿ ಪಂಪಣ್ಣನವರ, ಇವರಂತೆ – ಇನ್ನು ಅನೇಕ ಕಿರುಪ್ರತಿಭೆಗಳ ಸಾಹಿತ್ಯ ಕೃತಿಗಳನ್ನು ಆದರದಿಂದ ಓದಿ ಪ್ರಶಂಸಿದ್ದಾರೆ. ಬೆನ್ನು ತಟ್ಟಿಪ್ರೋತ್ಸಾಹಿಸಿದ್ದಾರೆ. ಮುನ್ನುಡಿಗಳನ್ನು ನೀಡಿ, ಬೆಳಗಿದ್ದಾರೆ. ಪುಸ್ತಕ ಬಿಡುಗಡೆ ಸಮಾರಂಭಗಳನ್ನು ಏರ್ಪಡಿಸಿ, ಗೌರವಿಸಿದ್ದಾರೆ. ಅವರು ಬರೆದ ಪುಸ್ತಕಗಳ ಮಾರಾಟಕ್ಕೆ ವ್ಯವಸ್ಥೆ ಮಾಡಿ ಸಹಕಾರ ನೀಡಿದ್ದಾರೆ. ಪತ್ರಿಕೆಗಳಲ್ಲಿ ಅಂಕಣ ಬರಹ ಲೇಖನಗಳನ್ನುಬರೆದು ವ್ಯಕ್ತಿ ಮತ್ತು ಅವರ ಕೃತಿಗಳ ಬಗ್ಗೆ ಪ್ರಾಮಾಣಿಕವಾಗಿ ತಮ್ಮ ಅನಿಸಿಕೆ ನೀಡಿ, ವಿಮರ್ಶಿಸಿ, ಬೆಳಕಿಗೆ ತಂದಿದ್ದಾರೆ. ಅವರಿದ್ದಲ್ಲಿ ಆತ್ಮೀಯ ವಾತಾವರಣ, ಆಕರ್ಷಕ ಒಡನಾಟ, ವಿಸ್ತಾರವಾದ ಅನುಭವದ ಬುತ್ತಿ. ಹಿತಮಿತವಾದ ಮಾತು, ಗರ್ವ ಅಹಂಕಾರಗಳಿಲ್ಲದ ನಡವಳಿಕೆ, ಎಲ್ಲರಲ್ಲೂ ಬೆರೆತು ಒಂದಾಗುವ ಮನೋಭಾವ, ನಿಷ್ಕಪಟ, ಹೃದಯ, ಕಂಡದ್ದನ್ನು ಕಂಡಂತೆ, ಹೇಳುವ ಅವರ ಜಾಯಮಾನ ಅಚ್ಚುಮೆಚ್ಚು, ಜೊತೆಗೆ, ಪರೋಪಕಾರಿ ಗುಣ. ಕನ್ನಡನಾಡು ನುಡಿ ಬಗ್ಗೆ ಸದಾ ಕಳಕಳಿ, ಎಷ್ಟೇ ದೊಡ್ಡವರಾದರೂ, ದೊಡ್ಡವರೆದುರಿಗೆ ಸಣ್ಣವರಾಗಿ ಉಳಿಯು ರೀತಿ, ಎಲ್ಲರಬಗೆಗೂ ಗೌರವ, ಕೆಲಸಗಳ ಬಗ್ಗೆಶ್ರದ್ಧೆ. ಅಚ್ಚುಕಟ್ಟು ಶಿಸ್ತು. ಹೃದಯ ವೈಶಾಲ್ಯತೆ, ಮೃದು ಮನಸ್ಸು ಇವುಗಳೆಲ್ಲದರಿಂದ ಭಟ್ಟರು ಆತ್ಮೀಯರಾಗುತ್ತಾರೆ. ಅವರ ಸ್ನೇಹಿತರ ಬಳಗ ದಿನ ದಿನಕ್ಕೂ ಹೆಚ್ಚುತ್ತಾ ಹೋಗುತ್ತದೆ. ಅವರ ಗೆಳೆಯರ ಗುಂಪು ದೊಡ್ಡದು. ಅದು 'ಕನ್ನಡ ಪಡೆ'. ಅದು ಅವರ ಹೃದಯವೈಶಾಲ್ಯತೆಯ ಆಕರ್ಷಣೆಯಿಂದ ತಾನಾಗಿ ಬೆಸೆದುಕೊಂಡಂತಹ ಬಳಗ. ಕೆಲವು ಆತ್ಮೀಯರು ಅನೇಕ ಕಾರಣಗಳಿಂದ ಅವರಿಂದ ದೂರವಾಗಿರಬಹುದು. ಆದರೆ ಭಟ್ಟರು ಅದನ್ನು ಮನಸ್ಸಿಗೆ ತಂದುಕೊಳ್ಳದೆ. ಅವರ ಗುಣ ವಿಶೇಷಗಳಿಗೆ ಸ್ಪಂದಿಸಿ, ಬೆಲೆಕೊಡುತ್ತಾರೆ. ಅವರ ಬರವಣಿಗೆ ಕೃತಿಗಳನ್ನು ಓದಿ ಗೌರವಿಸುತ್ತಾರೆ. ಇದೂ ಸಹ ಭಟ್ಟರ ಹಿರಿಗುಣ. ಕನ್ನಡದ ಪರವಾಗಿ ಬೇರೆ ಬೇರೆ ಕಡೆ ನಡೆಯುವ ಸಭೆ ಸಮಾರಂಭಗಳಲ್ಲೂ ಭಾಗವಹಿಸುತ್ತಾರೆ. ಸಹಕರಿಸುತ್ತಾರೆ. ಅವರೊಡನೆ ಕೂಡಿ ದುಡಿಯುತ್ತಾರೆ. ಭಟ್ಟರ ಈ ಬದುಕಿನ ವ್ಯಾಪ್ತಿ ಸಾಗರ, ಅದರ ಗ್ರಾಮಾಂತರಕ್ಕೆ ಮಾತ್ರವಲ್ಲ, ನಾಡಿನ ಉದ್ದಗಲಕ್ಕೂ ಹರಡಿಕೊಂಡಿದೆ. ಈ ಎಲ್ಲಾ ಗುಣ ವಿಶೇಷಗಳು ಮಹಾಬಲೇಶ್ವರ ಭಟ್ಟರ ಪಾರದರ್ಶಕ ವ್ಯಕ್ತಿತ್ವ, ಗುಣ, ಅವರ ನಿಸ್ವಾರ್ಥ ಮನೋಭಾವಕ್ಕೆ ಹಿಡಿದ ರನ್ನಗನ್ನಡಿಗಳಾಗಿವೆ.

ಭಟ್ಟರು ಸದಾ ಅಧ್ಯಯನ ಶೀಲರು. ಅವರಿಗೆ ಪುಸ್ತಕ ಪ್ರೀತಿ ಹೆಚ್ಚು, ಸದಾ ಜ್ಞಾನಾರ್ಜನೆಯ ಹಂಬಲ. ತಮ್ಮಂತೆಯೇ ಇತರರೂ ಪುಸ್ತಕಗಳನ್ನು ಓದಿ ಜ್ಞಾನ ಸಂಪಾದನೆ ಮಾಡಿಕೊಳ್ಳಲೆಂಬ ಅಭಿಲಾಷೆ. ಇದಕ್ಕಾಗಿ ಭಟ್ಟರು ಪ್ರತೀ ವರ್ಷವೂ ಒಂದಲ್ಲ ಒಂದು ಸಂದರ್ಭದಲ್ಲಿ ಪುಸ್ತಕ ಪ್ರದರ್ಶನ, ಮಾರಾಟದ ಕಾರ್ಯಕ್ರಮಗಳನ್ನು ಹಾಕಿಕೊಳ್ಳುತ್ತಾರೆ. ನಾಡಿನ ಮೂಲೆ ಮೂಲೆಗಳಲ್ಲಿರುವ ಪ್ರಕಾಶಕರಿಂದ, ಲೇಖಕರಿಂದ, ಪರಿಷತ್ತಿನಿಂದ ಪುಸ್ತಕಗಳನ್ನು ತರಿಸಿ, ಮಾರಾಟಕ್ಕಿಡುತ್ತಾರೆ. ಹೊತ್ತಿಗೆಗಳು ಸುಲಭವಾಗಿ ದೊರಕಲೆಂಬ ಸದುದ್ದೇಶದಿಂದ ಪುಸ್ತಕಗಳ ಮುಖ ಬೆಲೆಯ ಕೆಲವು ಹಂತಗಳಲ್ಲಿ ರಿಯಾಯಿತಿ ಕೊಡಿಸಿ, ಕೊಳ್ಳುವಂತೆ ಪ್ರೇರೇಪಿಸುತ್ತಾರೆ. ಇದರಿಂದಾಗಿ ಸುಲಭವಾಗಿ ಲಭ್ಯವಾಗದ ಒಳ್ಳೆಯ ಪುಸ್ತಕಗಳು ಮನೆಬಾಗಿಲಲ್ಲೇ ಲಭ್ಯವಾದಂತಾಗಿ ಕೊಳ್ಳುವ ಸಾರ್ವಜನಿಕರಲ್ಲಿ ಒಳ್ಳೆಯ ಉತ್ಸಾಹವನ್ನು ತರುತ್ತದೆ. ಹೀಗಾಗಿ, ಸಾಗರದಲ್ಲಿ ಸುತ್ತ-ಮುತ್ತಲ ಪ್ರಾಂತ್ಯದಲ್ಲಿಪುಸ್ತಕಗಳನ್ನು ಕೊಂಡು ಓದುವ ಒಂದು ಅಪೂರ್ವ ನೋಟ, ಪರಿಪಾಟ ಈಗಾಗಲೇ ಸ್ಪಷ್ಟವಾಗಿ ಕಂಡುಬಂದಿದೆ. ಏರ್ಪಡಿಸಿದ ಅಂತಹ ಪುಸ್ತಕ ಪ್ರದರ್ಶನದಲ್ಲಿ ಇದುವರೆವಿಗೂ ಸಾಗರದಲ್ಲಿ ಖರ್ಚಾದ ಪುಸ್ತಕಗಳು ಸಂಖ್ಯೆಯಲ್ಲಿ ಅಪಾರ. ಇದು ಸಣ್ಣ ಬಳಗದೊಂದಿಗೆ ಕೂಡಿ ಒಬ್ಬರು ಮಾಡುವ ಸಾಧಾರಣ ಕೆಲಸವಲ್ಲ. ಸರ್ಕಾರ ಮಾಡಬೇಕಾದ ಕೆಲಸ, ದೊಡ್ಡ ದೊಡ್ಡ ಸಂಘ-ಸಂಸ್ಥೆಗಳು, ಪ್ರಕಾಶಕರು, ಪರಿಷತ್ತುಗಳು ಮಾಡಬೇಕಾದ ಕೆಲಸ. ನಾಡಿನ ಮೂಲೆ ಮೂಲೆಗಳಿಂದ ಪ್ರಕಾಶಕರು, ಪರಿಷತ್ತು, ಲೇಖಕರು, ಅಭಿಮಾನವಿಟ್ಟು ಕಳುಹಿಸುವ ಮೂಟೆ ಮೂಟೆ ಪುಸ್ತಕಗಳನ್ನು ತಮ್ಮ ಸೀಮಿತ ಗೆಳೆಯರೊಂದಿಗೆ ಭಟ್ಟರೇ ಕೆಲವೊಮ್ಮೆ ಅಂಗಿ ಬಿಚ್ಚಿಹೊತ್ತು ಸಾಗಿಸಿ, ಜೋಡಿಸಿ, ನೇರ್ಪು ಮಾಡುವ ಅನೇಕ ಸಂದರ್ಭಗಳನ್ನುನಾನು ಕಂಡಿದ್ದೇನೆ. ನನ್ನ ಮನಸ್ಸುಮಿಡುಕಿದೆ. ಆದರೆ ಅವರ ನಿಸ್ವಾರ್ಥ, ನಿರ್ವ್ಯಾಜ ಸಾಹಿತ್ಯ ಶಾರದೆಯ ಸೇವೆಯನ್ನು ಕಂಡು ನನ್ನ ಮನಸ್ಸು ಹೆಮ್ಮೆಪಟ್ಟಿದೆ. ಮಾರಾಟವಾದ ನಂತರ, ಹಣಕ್ಕೆ ವ್ಯವಸ್ಥಿತವಾದ ಲೆಕ್ಕವನ್ನಿಟ್ಟು, ಉಳಿದಿರುವ ಪುಸ್ತಕಗಳನ್ನು ಮುತುವರ್ಜಿ ವಹಿಸಿ, ಅವರವರ ಪುಸ್ತಕಗಳನ್ನು ಅವರವರಿಗೆ ಕಳುಹಿಸಿ, ಪ್ರಾಮಾಣಿಕವಾಗಿ ಹಣ ಸಂದಾಯ ಮಾಡುವ, ಅವರ ಜವಾಬ್ದಾರಿಯುತ ಗುಣ- ನಿಜಕ್ಕೂ ದೊಡ್ಡದು, ಹಾಗೂ ಮೆಚ್ಚುವಂತಹುದಾಗಿದೆ. ಈ ನಿಸ್ವಾರ್ಥ ಸೇವೆ ಭಟ್ಟರಿಗೆ ಮೈಗೂಡಿ ಬಂದಿರುವ ಒಂದು ದೈವೀಕಲೆ ಎನ್ನಬಹುದಾಗಿದೆ.

ಯಾವುದೇ ಕಾರ್ಯಕ್ರಮ, ಸಭೆ ಸಮಾರಂಭಗಳನ್ನು ಅವುಗಳ ಸೀಮಿತ ಆರ್ಥಿಕ ಮಿತಿಯಲ್ಲಿ ಮಾಡಿ ಪೂರೈಸುವುದು ಇಂದಿನ ದಿನಮಾನಗಳಲ್ಲಿ ಬಹು ಕಷ್ಟ ಸಾಧ್ಯವಾದ ಕೆಲಸ. ಅಂದುಕೊಂಡಿದ್ದಕ್ಕಿಂತ ಖರ್ಚು ಹೆಚ್ಚೇ ಬರುತ್ತದೆ. ಇದನ್ನು

ಪ್ರಾಮಾಣಿಕವಾಗಿ ಯಾರು ಮಾಡಿದರೂ ಸರ್ವೇ ಸಾಮಾನ್ಯ. ಹಾಗೆಂದು ಸಮಾರಂಭದ ಯಶಸ್ವೀ ದೃಷ್ಟಿಯಿಂದ ಯಾವುದೇ ಚಿಕ್ಕ ಅಂಶವನ್ನೂ ಕೈಬಿಡಲಾಗದು. ಪೂರ್ವಯೋಜನೆಯಂತೆ ನಡೆಯಲೇಬೇಕು. ಆಗ ತೊಂದರೆಗಳು ಎದುರಾಗುತ್ತದೆ. ಅಂತಹ ಸಂದರ್ಭಗಳಲ್ಲೆಲ್ಲಾ ಭಟ್ಟರು ನೆರವಿಗೆ ಬರುತ್ತಾರೆ. ಸಾಹಿತಿಗಳನ್ನು, ಮುಖ್ಯ ಅತಿಥಿಗಳನ್ನು ಕರೆಸುವಾಗ ವ್ಯವಹರಿಸುವ ಸಂದರ್ಭ, ಪ್ರದರ್ಶನಕ್ಕಾಗಿ ಪುಸ್ತಕಗಳನ್ನು ತರಿಸಿ, ಹಿಂದಿರುಗಿಸುವಾಗ ವ್ಯವಹರಿಸುವ ಸಂದರ್ಭ, ಇನ್ನೂ ಅನೇಕ ಅಗತ್ಯಬಿದ್ದ ಸಂದರ್ಭಗಳಲ್ಲಿಭಟ್ಟರು ತಮ್ಮ ಸ್ವಂತ ದೂರವಾಣಿಯನ್ನೇ ಉಯೋಗಿಸುತ್ತಾರೆ. ಅತಿಥಿಗಳನ್ನು ಕರೆತಂದು ಅವರಿಗೆ ವಸತಿ ಸೌಕರ್ಯಗಳನ್ನು ಕಲ್ಪಿಸಿ, ಅಲ್ಲಿಂದ ಅವರನ್ನು ಸಮಾರಂಭಗಳಿಗೆ ಕರೆದು ತರುವ, ನಂತರದಲ್ಲಿ ಅವರ ವಸತಿ ಸ್ಥಳಗಳಿಗೆ ಬಿಟ್ಟುಬರುವ ಸೇವೆಯನ್ನುತಮ್ಮ ಸ್ವಂತ ಕಾರು ಉಪಯೋಗಿಸಿಕೊಂಡು ಇದನ್ನೆಲ್ಲಾ ನಿಭಾಯಿಸುತ್ತಾರೆ. ಏನೆಲ್ಲಾ ಕಾರ್ಯಗಳಿಗೂ, ನಾನಿದ್ದೇನೆ ಎಂದು ಭಟ್ಟರು ಆಸರೆಯಾಗಿ ನಿಲ್ಲುತ್ತಾರೆ. ಇಂತಹ ತುಟ್ಟಿ ದಿನಗಳಲ್ಲಿ ಯಾರೂ ಯಾಕೆ ಇಂತಹ ಜವಾಬ್ದಾರಿಗಳನ್ನು ತೆಗೆದುಕೊಳ್ಳುತ್ತಾರೆ ? ಇದರಿಂದ ಬರುವ ಲಾಭವೇನು ? ಎಂದು ಲೆಕ್ಕ ಹಾಕಿದರೆ, ಅಲ್ಲಿ ಭಟ್ಟರ ಔದಾರ್ಯ ಕಣ್ಣಿಗೆ ಕಟ್ಟುತ್ತದೆ. ನಾಡು - ನುಡಿಗಳ ಬಗ್ಗೆ ಕಾಳಜಿ, ಸಾಹಿತ್ಯದ ಮೇಲಿನ ಅಭಿಮಾನ, ಸಾಹಿತಿಗಳ ಮೇಲಿನ ವಿಶ್ವಾಸ, ನೆರವಿತ್ತು ಸಹಕರಿಸಿದ ಸಾರ್ವಜನಿಕ ಜವಾಬ್ದಾರಿ, ಅನೂಚಾನವಾಗಿ ನಡೆದುಕೊಂಡು ಬಂದಿರುವ ಸಾಗರದ ಘನತೆಯನ್ನು ಎತ್ತಿತೋರಿಸುವಲ್ಲಿನ ಅವರ ಹೆಮ್ಮೆ, ಇವೆಲ್ಲವೂ ನೋಡುಗನ, ಕೇಳುಗನ, ಎದೆಯಲ್ಲಿ ತುಂಬು ಅಭಿಮಾನವನ್ನುಉಕ್ಕಿಸುತ್ತದೆ. ಇಂದಿನ ವ್ಯಾವಹಾರಿಕ ಜಗತ್ತಿನಿಂದ ಕ್ಷಣ ಹೊರಬಂದು, ಆಳವಾಗಿ ಯೋಚಿಸಿದರೆ, ಮನಸ್ಸು ತುಂಬಿ ಬಂದು, ಅವರ ಬಗ್ಗೆ ಧನ್ಯತೆಯನ್ನು ಮೂಡಿಸುತ್ತದೆ.

ಈ ಮೊದಲೇ ಹೇಳಿದಂತೆ, ಅನೇಕ ಸುಪ್ರಸಿದ್ಧಸಾಹಿತಿಗಳು, ಗಣ್ಯರು, ಸಾಗರಕ್ಕೆಬಂದು ಹೋಗಿದ್ದಾರೆ. ಭಟ್ಟರ, ಭಟ್ಟರ ಬಳಗದಲ್ಲಿ, ಆತಿಥ್ಯ ಪಡೆದಿದ್ದಾರೆ. ಏರ್ಪಡಿಸಿದ ಸಭೆ ಸಮಾರಂಭಗಳಲ್ಲಿ ಭಾಗವಹಿಸಿದ್ದಾರೆ. ಅನೇಕರು ಸನ್ಮಾನ, ಮಾನಪತ್ರಗಳನ್ನು ಪಡೆದಿದ್ದಾರೆ. ಬಿರುದುಗಳನ್ನೂ ಕಿರುಕಾಣಿಕೆಗಳನ್ನೂ ಪಡೆದುಕೊಂಡಿದ್ದಾರೆ. ಅಪಾರ ವಿದ್ಯಾರ್ಜನೆಯಿಂದ ಅನುಭವಗಳಿಂದ ತಾವು ಸಂಪಾದಿಸಿದ ಜ್ಞಾನವನ್ನು, ಉಪನ್ಯಾಸಗಳ ಮೂಲಕ, ಭಾಷಣಗಳ ಮೂಲಕ, ಕವಿಗೋಷ್ಠಿಗಳ ಮೂಲಕ, ವಿಚಾರ ಸಂಕಿರಣಗಳ ಮೂಲಕ, ಈ ಪ್ರಾಂತ್ಯದ ಜನಗಳಿಗೆ ಧಾರೆ ಎರೆದಿದ್ದಾರೆ, ಆ ಬದಲು ಇಲ್ಲಿನ ಜನರ ಅಪಾರ ಪ್ರೀತಿ, ವಿಶ್ವಾಸದ ಹೊರೆಯನ್ನು ಹೊತ್ತು ಹೋಗಿದ್ದಾರೆ, ಸಂತೋಷಪಟ್ಟಿದ್ದಾರೆ. ಹೆಮ್ಮೆ

ಪಟ್ಟಿದ್ದಾರೆ. ತಮ್ಮೆಲ್ಲಾ ಬಿಗಿಬಿಗುಮಾನಗಳನ್ನು ಬದಿಗೊತ್ತಿ, ಮಕ್ಕಳಲ್ಲಿ ಮಕ್ಕಳಾಗಿ, ದೊಡ್ಡವರಲ್ಲಿ ಸಮವಾಗಿ ಸಲುಗೆಯಿಂದ ಮನಬಿಚ್ಚಿ ಮಾತನಾಡಿ, ಕುಟುಂಬದ ಬಳಗದಂತೆ, ತಮ್ಮೆಲ್ಲಾ ಆತ್ಮೀಯತೆಯನ್ನೆಲ್ಲಿ ಬಿಚ್ಚಿಟ್ಟು ಹೋಗಿದ್ದಾರೆ. ಮುಕ್ತವಾಗಿ ಪ್ರಶಂಸಿದ್ದಾರೆ. ಭಟ್ಟರು ಗಳಿಸಿಕೊಂಡಿರುವ ಸ್ನೇಹಸಂಬಂಧಗಳಿಗೆ, ತೋರಿರುವ ಆತ್ಮೀಯತೆಗೆ, ಈ ಕೆಳಗಿನ ಮಹನೀಯರುಗಳಾಡಿರುವ ನುಡಿಗಳು ಭಟ್ಟರ ಸೃಜನಶೀಲತೆಗೆ ನಿತ್ಯ ಸಾಕ್ಷಿಯಾಗಿವೆ.

'ನಿಮ್ಮ ಮನಸ್ಸುತುಂಬಾ ದೊಡ್ಡದಿದೆ, ಆದ್ದರಿಂದ ನೀವು ದೊಡ್ಡದಾಗಿ ಬೆಳೆಯುತ್ತಿದ್ದೀರಿ. ನೀವು ನನ್ನನ್ನು ಸನ್ಮಾನಿಸಬೇಕೆಂದು ತೀರ್ಮಾನಿಸಿರುವುದರಿಂದಲೇ ನನಗೆ ಸನ್ಮಾನ ಬಂದಿದೆ, ನಿಮ್ಮ ಬರವಣಿಗೆ ಒಳ್ಳೆಯದಾಗಿ ನಡೆಯಲಿ'

**( ಹೆಸರಾಂತ ಕವಿಗಳೂ, ಬರಹಗಾರರೂ ಆದ ಶ್ರೀಮಾನ್ ಡಿ.ವಿ.ಗುಂಡಪ್ಪ ೧೬.೧೦.೬೮ )**

'ನೀವು ಕಳೆದವಾರ ಬೆಂಗಳೂರಿಗೆ ಬಂದಿರುವುದಾಗಿ, ಶ್ರೀ ನಾಡಿಗೇರ ಕೃಷ್ಣರಾಯರು ತಿಳಿಸಿದರು. ಹಾಗೆಯೇ ರಾಮಮೂರ್ತಿಯವರೂ ಹೇಳಿದರು. ನಾನು ನಂಬಲಿಲ್ಲ. ಬೆಂಗಳೂರಿಗೆ ಬಂದಾಗಲೆಲ್ಲಾ ಮನೆಗೆ ಬರುತ್ತಿದ್ದಿರಿ, ಈ ಸಲ ಯಾಕೆ ಬರಲಿಲ್ಲ ? ನಾನು, ಈ ತಿಂಗಳ ಕೊನೆಯವಾರದಲ್ಲಿ ಹುಬ್ಬಳ್ಳಿ, ಧಾರವಾಡಕ್ಕೆ ಹೋಗುತ್ತೇನೆ. ಆ ಎರಡೂ ಕಡೆಯಿಂದ ನಾಲ್ಕುದಿನವಾಗಬಹುದು. ನಾಡಿಗೇರರು, ರಾಮಮೂರ್ತಿಗಳೂ ಬರುತ್ತಾರೆ. ಬೀಚಿ, ತ.ರಾ.ಸು ಬರಬಹುದು. ಸಾಧ್ಯವಾದರೆ ನೀವು ಬನ್ನಿ, ಎಲ್ಲರೂ ಕಲೆತು ಮಾತಾಡೋಣ, ನಿಮ್ಮ ಬರವಣಿಗೆ ಹೇಗೆ ಸಾಗಿದೆ?

**( ಪ್ರಸಿದ್ಧ ಕಾದಂಬರಿಕಾರರಾದ ಶ್ರೀ ಅ.ನ. ಕೃಷ್ಣರಾಯರು, ೯.೩.೬೮ )**

'ನೀವು ಹಿಂದೆ ಮಾತನಾಡಿದಂತೆ ದೇಶದ ಪರಿಸ್ಥಿತಿ ದಿನದಿನಕ್ಕೆ ಹದಗೆಡುತ್ತಿದೆ. ಸರ್ಕಾರಿ ಯಂತ್ರ ಉತ್ತಮವಾಗಿ ಕೆಲಸ ಮಾಡುತ್ತಿಲ್ಲ ಲಂಚದ ಮಾತು ಎಲ್ಲೆಡೆಗೂ ಕೇಳಿ ಬರುತ್ತದೆ. ಹೀಗಾದರೆ ನಾವು ಸ್ವಾತಂತ್ರ್ಯವನ್ನು ಉಳಿಸಿಕೊಳ್ಳುವುದು ಕಷ್ಟ. ನಮ್ಮ ಜನರಿಗೆ ಹಾಗೂ ಮುಖಂಡರಿಗೆ ನಾಡ ಪ್ರೇಮ, ದೇಶ ಪ್ರೇಮ ಕಡಿಮೆಯಾಗುತ್ತಿದೆ. ಇದಕ್ಕಾಗಿ ವ್ಯಥೆಯಾಗುತ್ತಿದೆ.

**( ಪತ್ರಿಕಾ ಪ್ರಪಂಚದ ಭೀಷ್ಮ ಶ್ರೀ ತೀ. ತಾ. ಶರ್ಮರು, ೨೧.೧೧.೬೮ )**

'ಟಿ. ಮಹಾಬಲೇಶ್ವರ ಭಟ್ಟರನ್ನು ನಾನು ಮೂವತ್ತು ವರ್ಷಗಳಿಂದ ಬಲ್ಲೆ. ನಾನು ಕಂಡ ವ್ಯಕ್ತಿಗಳಲ್ಲಿ ಅವರು ಅಚ್ಚಳಿಯದ ಸ್ನೇಹ ಉಳಿಸಿಕೊಂಡಿರುವ ಪ್ರಾಮಾಣಿಕ ವ್ಯಕ್ತಿಗಳು. ಪರಿಕಿತದಲ್ಲಿ. ಸಮಾನ ಬುದ್ಧಿಯುಳ್ಳವರು. ಇವರ ಸೇವಾ ಕ್ಷೇತ್ರವು

ಸಾರ್ವಜನಿಕವಾದುದು. ಸಂಕುಚಿತ ಭಾವನೆ ಇವರನ್ನೆಂದೂ ಸೋಕಿಲ್ಲ. ಸೇವೆಗೋಸ್ಕರ ಸೇವೆ ಮಾಡುತ್ತಿರುವ ಮಾನ್ಯರಾಗಿದ್ದಾರೆ. ಇವರ ಮಾತು, ಮಾಧುರ್ಯ, ಬರವಣಿಗೆ ಅಪ್ಯಾಯಮಾನ. ದೇಶ ಸೇವಾರಂಗದಲ್ಲಿ, ಸಾಹಿತ್ಯ ಕ್ಷೇತ್ರದಲ್ಲಿ ಇವರ ಸೇವೆಯು ಶ್ರದ್ಧೆಯು ಕೀರ್ತಿಯುತವಾಗಿದೆ.''

**( ಕರ್ನಾಟಕದ ಮಾಜಿ ಮುಖ್ಯ ಮಂತ್ರಿ ಶ್ರೀ ಕೆಂಗಲ್ ಹನುಮಂತಯ್ಯನವರು )**

''ಶ್ರೀ ಮಹಾಬಲೇಶ್ವರ ಭಟ್ಟರು ನಾನು ಕಂಡಂತೆಯೇ ಸುಮಾರು ನಲವತ್ತು ವರ್ಷಗಳ ಕಾಲ ನಮ್ಮ ಭಾಷೆಗಾಗಿ ದುಡಿದಿದ್ದಾರೆ. ತಮ್ಮ ಸುತ್ತಿನ ಕನ್ನಡ ಪ್ರೇಮಿಗಳನ್ನು ಸೇವೆಯಲ್ಲಿ ಸೇರಿಸಿ, ಜೊತೆಯಲ್ಲಿಸೇವೆ ಸಲ್ಲಿಸಿ ಧನ್ಯರಾಗಿದ್ದಾರೆ.'

**( ಡಾ. ಮಾಸ್ತಿ ವೆಂಕಟೇಶ ಅಯ್ಯಂಗಾರ್ )**

''ಸ್ವತಃ ಗಣ್ಯ ಸಾಹಿತಿಗಳಾಗಿರುವುದಲ್ಲದೆ, ಶ್ರೀ ಭಟ್ಟರು ಅನೇಕ ಸಾಹಿತ್ಯಿಕ ವಿದಗ್ಧತೆಯನ್ನು ಪ್ರೇರಿಸಿದ್ದಾರೆ. ಸಾಹಿತ್ಯದ ಕೃಷಿ ಮಾಡುವ ಸಂಸ್ಕೃತಿ ಅವರಲ್ಲಿ ಮನೆ ಮಾಡಿಕೊಂಡಿದೆ. ಹಲವಾರು ತರುಣರನ್ನು ಕರೆತಂದು, ಸಾಹಿತ್ಯದ ರಾಜಮಾರ್ಗವನ್ನು ಅವರಿಗೆ ತೋರಿಸಿ ನಡೆಯ ಹಚ್ಚಿದ್ದಾರೆ. ಇದೊಂದು ಮಹತ್ವದ ಕಾರ್ಯವೆಂದು ನಾನು ತಿಳಿದಿದ್ದೇನೆ.''

**( ಡಾ. ವಿನಾಯಕ ಕೃಷ್ಣ ಗೋಕಾಕ್ )**

''ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು ಕದಾಚನ' ಎನ್ನುವ ಗೀತಾ ವಾಕ್ಯವನ್ನು ತ್ರಿಕರಣಪೂರ್ವಕವಾಗಿ ಪಾಲಿಸುತ್ತಾಬಂದಿದ್ದಾರೆ ಭಟ್ಟರು. ಇಂತಹವರು ತಮ್ಮ ಸೇವೆಗೆ ಪ್ರತಿಫಲವಾಗಿ ಯಾವ ಸನ್ಮಾನವನ್ನೂ ನಿರೀಕ್ಷಿಸುವುದಿಲ್ಲ; ನಿಜ, ಆದರೆ ಇಂತಹ ನಿಸ್ಪೃಹ ಸೇವಾಪರರನ್ನು ಸನ್ಮಾನಿಸಿ, ಅವರಿಂದ ಜನತೆಗೆ, ನಾಡಿಗೆ, ನುಡಿಗೆ, ಆಗಿರುವ ಸೇವೆಯನ್ನು ಗಣನೆಗೆ ತಂದುಕೊಳ್ಳಬೇಕಾದುದು ಜನರ, ಮುಖ್ಯವಾಗಿ ಆಪ್ತರ, ಹಿತಚಿಂತಕರ ಹಾಗೂ ಅಭಿಮಾನಿಗಳ ಕರ್ತವ್ಯ''

**( ಜಿ. ನಾರಾಯಣ, ರಾಜ್ಯ ಕನ್ನಡ ಸಾಹಿತ್ಯ ಪರಿಷತ್ ಮಾಜಿ ಅಧ್ಯಕ್ಷರು )**

''ಹಲವು ಹತ್ತುಮುಖಗಳಿಂದ ನಾನಾಕ್ಷೇತ್ರಗಳಲ್ಲಿ, ಕಳೆದ ಮೂವತ್ತು ವರ್ಷಗಳಿಂದ ಶ್ರೀ ಟಿ. ಮಹಾಬಲೇಶ್ವರ ಭಟ್ಟರು ಮಾಡುತ್ತಾ ಬಂದಿರುವ, ಅವ್ಯಾಜ ಸೇವೆ ಇಂದು ಬಹುಜನವೇದ್ಯವಾಗಿದೆ. ಯಾವ ಪ್ರತಿಫಲಾಪೇಕ್ಷೆಯಿಲ್ಲದೆ, ರಚನಾತ್ಮಕ ರೂಪದಲ್ಲಿ ತ್ರಿಕರಣ ಸಾಕ್ಷಿಯಾಗಿ ಅವರು ಸಲ್ಲಿಸಿರುವ ಸೇವೆಗೆ ಆತ್ಮ ತೃಪ್ತಿಯೇ ಸಾಕೆಂದು ಅವರು ಭಾವಿಸುವುದು ಸಹಜ.''

**( ಹಂಪ ನಾಗರಾಜಯ್ಯ ರಾಜ್ಯ ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರು )**

''ಗೆಳೆಯ ಶ್ರೀ ಮಹಾಬಲೇಶ್ವರ ಭಟ್ಟರದು ಬಹುಮುಖಿ ಪ್ರತಿಭೆ, ನಿಷ್ಠಾವಂತ ರಾಜಕಾರಣಿ, ನಿಯತ್ತಿನ ವ್ಯಾಪಾರಿ, ನಿಷ್ಠುರ ಸತ್ಯವಾದಿ, ನಿರ್ಮಲ ಭಾವದ ಸರಳ ಅಭಿವ್ಯಕ್ತಿಯ ಸಹಜ ಶುದ್ಧ ಸಾಹಿತ್ಯ ಸೃಷ್ಟಿಯ ಕಲಾಬ್ರಹ್ಮ. ಕಥೆ, ಕಾದಂಬರಿಗಳ ಜೊತೆಗೆ ಕನ್ನಡ ಹಿರಿ ಕಿರಿಯ ಸಾಹಿತಿಗಳ, ಕವಿ ಕಲಾವಿದರ ಪರಿಚಯವನ್ನು ''ಪ್ರಪಂಚ'' ಪತ್ರಿಕೆಯ ಮೂಲಕ ನಿರಂತರವಾಗಿ ಮಾಡಿಕೊಟ್ಟು, ಪತ್ರಿಕೋದ್ಯಮಕ್ಕೆ ಹೊಸ ಆಯಾಮವನ್ನು ಒದಗಿಸಿಕೊಟ್ಟರು. ತನ್ಮೂಲಕ ನಾಡಿನ ಹೆಮ್ಮೆಯ ಸಂಪತ್ತೆನಿಸಿದ ಕವಿಗಳನ್ನೂ, ಸಾಹಿತಿಗಳನ್ನೂ ಜನ ಸಾಮಾನ್ಯರ ಮನೆಗಳಿಗೆ ಮನಗಳಿಗೆ ಮುಟ್ಟಿಸಿದರು.''

**( ಡಾ. ಸಾ.ಶಿ. ಮರುಳಯ್ಯನವರು ಅಧ್ಯಕ್ಷರು ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು )**

ಹೀಗೆ ಭಟ್ಟರ ಬಗ್ಗೆ ಅಭಿಮಾನಿಗಳ ಅನಿಸಿಕೆಯ ಮಹಾಪೂರವೇ ಹರಿದು ಬರುತ್ತದೆ.

೧೯೭೪ - ಭಟ್ಟರಿಗೆ ೫೦ನೇ ವರ್ಷದ ಹುಟ್ಟು ಹಬ್ಬ. ಸಾಗರದ ಜನತೆ ಈ ಸಂದರ್ಭದಲ್ಲಿ ಅವರನ್ನು ಸನ್ಮಾನಿಸಲು ಏರ್ಪಡಿಸಿದ ಸನ್ಮಾನ ಸಮಾರಂಭದಲ್ಲಿ ಅವರಿಗೆ ನೀಡಿದ ಸನ್ಮಾನ ಪತ್ರದಲ್ಲಿ ಅವರ ಬಗ್ಗೆ ಹೀಗೆ ಹೇಳಿದೆ. -

''ತಮ್ಮ ೫೦ ವರ್ಷಗಳ ಸಾರ್ಥಕ ಜೀವನದಲ್ಲಿ ಮೂವತ್ತು ವರ್ಷದಷ್ಟು ಅತಿ ಹೆಚ್ಚಿನ ಕಾಲವನ್ನು ಸಾರ್ವಜನಿಕ ಸೇವೆಗೂ ಸಾಹಿತ್ಯದ ಕೆಲಸಕ್ಕೂ ಮೀಸಲಾಗಿಟ್ಟು ಎಂತಹ ಕಷ್ಟ ನಿಷ್ಠೂರಗಳಿಗೆ ಅಂಜದೆ, ಅಳುಕದೆ, ಹಿರಿಯ ವ್ಯಕ್ತಿತ್ವವನ್ನು ಗಳಿಸಿಕೊಂಡ ತಮ್ಮ ಬದುಕು ಸಾರ್ಥಕವಾದುದು, ಗುರಿ ಹಿರಿಯದಾದುದು. ಕನ್ನಡದ ಕೆಲಸದ ಬಗ್ಗೆ ಹೊಸದಾರಿ ಹಿಡಿದು, ಈ ಭಾಗದ ಜನತೆಗೆ ಸಾಹಿತ್ಯದ ರಸದೌತಣವನ್ನು ಉಣಿಸಿದ್ದೀರಿ. ಸಾಹಿತ್ಯ ಹಾಗೂ ಸಾಮಾಜಿಕ ಪ್ರಜ್ಞೆ ಮೂಡಲು, ಮೂರು ವಿಶ್ವವಿದ್ಯಾನಿಲಯಗಳ ಪ್ರಸಾರಾಂಗದ ಮೂಲಕ ವಿದ್ವಾಂಸರನ್ನು ಕರೆಸಿ, ಸಾಹಿತ್ಯದ ದಾಸೋಹ ನಡೆಸಿದ್ದೀರಿ. ಕನ್ನಡದ ಪ್ರತಿಭಾವಂತ ಸಾಹಿತಿಗಳನ್ನು ಕರೆಸಿ ಸನ್ಮಾನಿಸಿದ್ದೀರಿ. ಈ ಭಾಗದಲ್ಲಿ ಬರಡಾದ ಕನ್ನಡಕ್ಕೆ ನವಚೈತನ್ಯ ತುಂಬಿದ್ದೀರಿ. ತಾವು ಯಾವುದೇ ಸಂಘ-ಸಂಸ್ಥೆಗಳಲ್ಲಿದ್ದರೂ - ಅದು ಬಂಗಾರ. ತಮ್ಮ ಜೀವನವೇ ಅಪರಂಜಿ, ಸಾರ್ವಜನಿಕ ಸಂಪನ್ನತೆಗೆ ತಾವೊಬ್ಬ ಅರ್ಥಪೂರ್ಣ ವ್ಯಕ್ತಿ.''

ಮಾನ ಪತ್ರ ಪಡೆದು ಗೌರವಕ್ಕೆ ಪಾತ್ರರಾದ ಶ್ರೀ ಮಹಾಬಲೇಶ್ವರ ಭಟ್ಟರು ಆಡಿದ ನುಡಿಗಳು -

''ನೀವು ಇಂದು, ಕನ್ನಡಮಾತನಾಡುವ ಜನ, ಅಲ್ಲಿನ ಬರಹಗಾರರಿಗೆ ಎಷ್ಟೊಂದು ಗೌರವ ಕೊಡಬಹುದೋ ಅಷ್ಟನ್ನು ಇಂದು ನನಗೆ ಕೊಟ್ಟಿದ್ದೀರಿ. ಇದು

ನಿಮ್ಮ ಗುಣವಿಶೇಷವೆಂದು ಭಾವಿಸಿದ್ದೇನೆ. ಇದಕ್ಕಾಗಿ ಈ ಒಂದು ಸನ್ಮಾನ ಸಮಿತಿಯ ಏಳು ಜನ ನನ್ನ ಆತ್ಮೀಯ ಮಿತ್ರರಿಗೂ, ನನ್ನನ್ನು ಮನುಷ್ಯನನ್ನಾಗಿ ಮಾಡಿದ ಸಾಗರ ತಾಲ್ಲೂಕಿನ ಮಹಾಜನತೆಗೂ, ಕನ್ನಡ ಭಾಷೆಯನ್ನು ನನ್ನ ಜೀವನದ ಉಸಿರಾಗಿ ಮಾಡಿದ ನನ್ನ ಗುರುಹಿರಿಯರಿಗೂ, ನಮಿಸುತ್ತೇನೆ.''

ಇದು ಶ್ರೀ ಭಟ್ಟರ ಅಂತಃಕರಣದಲ್ಲಿ ಉಂಟಾದ ಧನ್ಯತೆ, ವಿನಮ್ರ ಭಾವನೆಗಳನ್ನು ಅಭಿವ್ಯಕ್ತಿಗೊಳಿಸುತ್ತದೆ.

ಮಹಾಬಲೇಶ್ವರ ಭಟ್ಟರು, ತಾವೇ ಸ್ವತಃ ಕವಿ, ಸಾಹಿತಿಯಾಗಿದ್ದು, ತಮ್ಮಂತಹ ಇತರೆ ಹಿರಿ-ಕಿರಿಯ ಸಾಹಿತಿಗಳ ಬಗ್ಗೆ ವಿಶಾಲ ಮನೋಭಾವ, ಸಮಾನ ಅಭಿಮಾನ, ಅನಸೂಯತೆ, ಮುಂತಾದ ಸದ್ಭಾವನೆಗಳನ್ನು ಬೆಳೆಸಿಕೊಂಡವರು. ಕವಿಗಳು, ಸಾಹಿತಿಗಳು, ಬರೆದ ಕೃತಿಗಳನ್ನು ಸ್ವತಃ ತಾವೇ ಅಧ್ಯಯನ ಮಾಡುತ್ತಾ ಹೋದಾಗಲೆಲ್ಲಾ ತಮಗೆ ಮೆಚ್ಚುಗೆಯಾದ ಅಂಶಗಳನ್ನು ಮನನಮಾಡಿಕೊಂಡು ಆ ಮೂಲಕ ಕೃತಿಕಾರರ ವ್ಯಕ್ತಿತ್ವ, ಮನೋಭಾವ, ಪ್ರತಿಭೆ, ಪಾಂಡಿತ್ಯ, ವಿದ್ವತ್ತುಗಳನ್ನು ತಾವು ಕಂಡಂತೆ- ತಮ್ಮದೇ ಆದ ವಿನೂತನ ಶೈಲಿಯಲ್ಲಿ ಚಿತ್ರಿಸುವುದರಲ್ಲಿ ಭಟ್ಟರು ಪರಿಣಿತರಾಗಿದ್ದಾರೆ. ಪತ್ರಿಕಾ ಮಾಧ್ಯಮಗಳ ಮೂಲಕ, ಸಾಹಿತಿಗಳ ಬಗ್ಗೆ ತಾವೇ ಬರೆದು ಪ್ರಕಟಿಸಿರುವ ಕೃತಿಗಳ ಮೂಲಕ, ಅಂತಹ ಸಾಹಿತಿಗಳನ್ನು ಕನ್ನಡ ಸಾರಸ್ವತ ಲೋಕಕ್ಕೆ ಪರಿಚಯಿಸಿ, ಉಪಕರಿಸಿದ್ದಾರೆ. ಈ ನಿಟ್ಟಿನಲ್ಲಿ ಅವರ ''ಕನ್ನಡ ಕುಲದೀಪಕರು'', ''ಸಾಹಿತ್ಯ ಶಿಲ್ಪಿಗಳು ಭಾಗ-೧-೨'' ಕೃತಿಗಳು ತುಂಬಾ ಶ್ಲಾಘನೀಯವಾದವುಗಳಾಗಿವೆ.

ಭಟ್ಟರು ದಾಖಲಿಸಿರುವ ಅಂತಹ ಅನೇಕ ಪ್ರಸಿದ್ಧ ಹಿರಿ-ಕಿರಿಯ ಸಾಹಿತಿಗಳ ಪೈಕಿ ಕೆಲವರ ಬಗ್ಗೆ ಭಟ್ಟರು ಬರೆದಿರುವ ತಮ್ಮ ಅನಿಸಿಕೆಗಳನ್ನು ಇಲ್ಲಿ ಸಂಕ್ಷಿಪ್ತಗೊಳಿಸಿ ಹೇಳಿದೆ.

**ಡಾ. ಕೆ.ವಿ. ಪುಟ್ಟಪ್ಪ :** '' ಇವರು ಸಾಹಿತ್ಯದ ವಿಶ್ವರೂಪಿ. ವಾಲ್ಮೀಕಿ ಹಾಗೂ ವ್ಯಾಸರು, ಅನಿರೀಕ್ಷಿತವಾಗಿ ಕಣ್ಣು ಮುಚ್ಚಿದಾಗ, ಆ ಸ್ಥಾನವನ್ನು ಭರ್ತಿಮಾಡಲು ಕುವೆಂಪುರವರು ಜನ್ಮ ತಾಳಿದರು. ಸಾಹಿತ್ಯ ರಂಗದಲ್ಲಿ ಹೊಸರಂಗವಲ್ಲಿ ಹಾಕಿದರು. ಮಲೆನಾಡಿನ ಮಳೆಯಲ್ಲಿ ತೊಯ್ದರೂ, ಸಾಹಿತ್ಯ ರಚನೆಯಲ್ಲಿ ತೇಲಲಿಲ್ಲ. ಗುರು ಸ್ಥಾನದಲ್ಲಿ ನಿಂತು, ಮುಂದಿನ ಸ್ಥಾನದಲ್ಲಿ ನಿಂತು, ಮುಂದಿನ ಪೀಳಿಗೆಯನ್ನು ಸೃಷ್ಟಿಸಿ, ಮಹಾ ವಿಭೂತಿಯಾದರು. ''ಬಾರಿಸು ಕನ್ನಡ ಡಿಂಡಿಮವ, ಓ ಕರ್ನಾಟಕ ಹೃದಯಶಿವ'' ಎಂದು ಕನ್ನಡಡಿಂಡಿಮವನ್ನು ಬಾರಿಸಿ, ಕನ್ನಡಿಗರನ್ನು ಬಡಿದೆಬ್ಬಿಸಿದ್ದಾರೆ. ಸಾಹಿತ್ಯದ ಮಹಾ ತಪಸ್ಸಿನಿಂದ ಸಿದ್ಧಿಯನ್ನು ಪಡೆದ ಮಹಾ

ತಪಸ್ವಿ, ಅಧ್ಯಾಪಕ, ಪ್ರಾಧ್ಯಾಪಕ, ಪ್ರಾಂಶುಪಾಲ, ಕುಲಪತಿ-ಹೀಗೆ ಒಂದಲ್ಲ, ಎರಡಲ್ಲ ಕನ್ನಡ ನಾಡಿನಲ್ಲಿ ಕನ್ನಡ ಪುತ್ರನಿಗೆ ಅತ್ಯುನ್ನತ ಸ್ಥಾನ. ಅವರ ''ರಾಮಾಯಣ ದರ್ಶನಂ'' ಕೃತಿ, ಆನೆಮೇಲಿರುವ ಅಂಬಾರಿಯಲ್ಲಿ ಕುಳಿತು, ಮೆರೆಯಿತು. ಈ ಕವಿಗೆ ಸರಸ್ವತಿಯೇ ವಜ್ರಕುಂಡಲ. ಅವರ ಕಲ್ಪನೆಯೇ ವಿಂಧ್ಯಕಲ್ಪನೆ, ಅವರ ನೋಟವೇ ಭಗವಂತನ ನೋಟ, ಅವರ ಶ್ರವಣವೇ ಕನ್ನಡದ ಮಂತ್ರ.''

ಡಾ. ಶಿವರಾಮಕಾರಂತ : 'ಬಾಲ ಪ್ರಪಂಚದ ಬ್ರಹ್ಮರಾದ ಕಾರಂತರು, ಒಂದು ಸರ್ಕಾರ ಮಾಡಲಾಗದ ಕೆಲಸವನ್ನು ಕಾರಂತರೊಬ್ಬರೇ ಮಾಡಿದ್ದಾರೆ. ತೋರಿಸಿದ್ದಾರೆ. ನಾಟಕಕಾರರಾಗಿ, ಸಂಗೀತಗಾರರಾಗಿ, ಚಿತ್ರಗಾರರಾಗಿ, ನೃತ್ಯಗಾರರಾಗಿ, ಅಭಿನಯಗಾರರಾಗಿ, ಹತ್ತು ಅವತಾರಗಳನ್ನು ಎತ್ತಿ, ದೇಶದ ಜನತೆಯ ಮುಂದೆ, ಹುಚ್ಚು ಮನಸ್ಸಿನ ಹತ್ತು ಮುಖಗಳ ಮೂಲಕ ಕಾರಂತರು ಶ್ರೀಮಂತರಾಗಿದ್ದಾರೆ. ಒಮ್ಮೆ ಸಮೀಕ್ಷೆ ನಡೆಸಿ, ಶನೀಶ್ವರನ ನೆರಳಿನಲ್ಲಿ ಮಲಗಿ, ಚಿಗುರಿತ ಕನಸಿನಲ್ಲಿಯೇ 'ಮೂಕಜ್ಜಿಯ ಕನಸ'ನ್ನು ಕಂಡರು. 'ಮರಳಿ ಮಣ್ಣಿಗೆ' ಹೋಗುವ ಮುನ್ನ ಈ ಜಗತ್ತಿನ ಸೃಷ್ಟಿಕರ್ತರಾಗಿ, ಜನಜೀವನ ನೋಡಿದ್ದಾರೆ.''

ಡಾ. ದ.ರಾ.ಬೇಂದ್ರೆ : 'ಬೇಂದ್ರೆಯವರ ಮಾತಿಗೆ ಸಿಲುಕದ ಜನವಿಲ್ಲ. ಹಾಸ್ಯದ ಹೊನಲು, ದತ್ತಾತ್ರೇಯ ಉಪಾಸಕ, ಕಂತ ಶ್ರೀ ಕಂತ. ಜನತೆಯನ್ನು ಬಡಿದೆಬ್ಬಿಸುವ ಎಚ್ಚರದ ನುಡಿ, ಸೃಷ್ಟಿಯಲ್ಲಿ ಲಯವನ್ನೂ, ಲಯದಲ್ಲಿ ಸೃಷ್ಟಿಯನ್ನೂ ಸೃಷ್ಟಿಸುವ ಗಾರುಡಿಗತನ. ಬೇಂದ್ರೆಯವರ ಕಾವ್ಯ ಸಂಪತ್ತು, ಜಾನಪದ ಸಾಹಿತ್ಯದ ವಿಸ್ತಾರ, ಬೆಳವಣಿಗೆ, ಒಂದಕ್ಕೊಂದು ಹಸಿರನ್ನು ತಂದಿತು.

ವಿ.ಕೃ. ಗೋಕಾಕರು : 'ನವ್ಯ ಮಾರ್ಗವನ್ನಿಡಿದರೂ, ವಾಸ್ತವಿಕತನವನ್ನು ಕಳೆದುಕೊಳ್ಳದೆ ವ್ಯಕ್ತಿಯ ಹೃದಯಕ್ಕೆ ತಾಗುವಂತೆ ಇವರ ಬರವಣಿಗೆ. ಕವಿ, ಕಾದಂಬರಿಕಾರ, ವಿಮರ್ಶಕ, ಶಿಕ್ಷಣವೇತ್ತ ವಾಗ್ಮಿ, ವಿನಯ ಶೀಲ, ಸ್ನೇಹಪರ, ಪ್ರಸಿದ್ಧ ಪ್ರಾಚಾರ್ಯ ಇವೆಲ್ಲಾ ವಿಶಿಷ್ಟ ಗುಣಗಳು ಒಬ್ಬ ವ್ಯಕ್ತಿಯಲ್ಲಿಯೇ ಗುರುತಿಸುವುದು ಕಷ್ಟಕರ. ಅಂತಹ ವ್ಯಕ್ತಿತ್ವ, ಪಾಂಡಿತ್ಯ ಪ್ರತಿಭೆಯನ್ನು ಕವಿ ವಿನಾಯಕರು ತಮ್ಮಲ್ಲಿ ತೋರಿಸಿಕೊಟ್ಟಿದ್ದಾರೆ.''

ಡಾ. ಡಿ.ವಿ. ಗುಂಡಪ್ಪ : 'ಡಿ.ವಿ.ಜಿ.ಯವರಂತಹ ವ್ಯಕ್ತಿಆಗೊಮ್ಮೆ ಈಗೊಮ್ಮೆ ಭರತ ಖಂಡದಲ್ಲಿಕಾಣಿಸಿಕೊಳ್ಳಬಹುದು. ಎಲ್ಲರಿಗೂ ಸದಾಕಾಲವು ಕಾಣಿಸಿಕೊಳ್ಳುವುದಿಲ್ಲ. ಸಾಧ್ಯವೂ ಇಲ್ಲ. ಪರಿಪಕ್ವವಾದ ಜ್ಞಾನ ಗಂಗೆಯನ್ನು, ಪರಿಶುದ್ಧವಾದ ಆತ್ಮವನ್ನು, ಅಂತಃಕರಣದ ದೊಡ್ಡತನವನ್ನು, ನಾನು ಡಿ.ವಿ.ಜಿಯವರಲ್ಲಿಕಂಡೆ. ಅವರಿಗಿಂತ ದೊಡ್ಡವರು ನನಗೆ ಸಿಕ್ಕಿಲ್ಲ. ಅವರು ಜೀವಿಸಿರುವ ನಾಡಿನಲ್ಲಿ ನಾವು ಬದುಕಿರುವುದು ಒಂದು ದೊಡ್ಡ ಅದೃಷ್ಟ.''

ಡಾ. ಮಾಸ್ತಿ ವೆಂಕಟೇಶ ಅಯ್ಯಂಗಾರ್ : 'ಡಾ. ಮಸ್ತಿ ವೆಂಕಟೇಶ ಅಯ್ಯಂಗಾರರ ಮನಸ್ಸು ಬಹಳ ವಿಶಾಲ. ಅದು ಭಾರತದಷ್ಟೇ ವಿಶಾಲ. ಸರಳತೆ, ಸಜ್ಜನಿಕೆ, ನಯ-ವಿನಯ, ಸಂಸ್ಕೃತಿ, ಹೃದಯವಂತಿಕೆ ಇವೆಲ್ಲವೂ ಒಂದೇ ವ್ಯಕ್ತಿಯಲ್ಲಿನೋಡಲು ಅನುಭವಿಸಲು ಸಿಗಬಹುದಾದ ವಸ್ತು. ಮಾಸ್ತಿಯವರಷ್ಟು ನಯವಾಗಿ ಮಾತನಾಡಲು ಬರುತ್ತದೆಯೇ ? ಎಂದು ಯಾರನ್ನಾದರೂ ಕೇಳಿದರೆ ಅದು ಸಾಧ್ಯವಿಲ್ಲವೆಂಬ ಉತ್ತರವೇ ಬರಬಹುದು.''

ಅ.ನ.ಕೃಷ್ಣರಾಯರು : 'ಅ.ನ. ಕೃಷ್ಣರಾಯರ ಭಾಷಣವೆಂದರೆ, ಕಣ್ಣಿಗೂ ಕಿವಿಗೂ ಆನಂದ. ಮಾತು ನಿರರ್ಗಳ. ವಿಷಯ ಯಾವುದೇ ಇರಲಿ, ಅದಕ್ಕೆ ಆಧಾರ ಸಹಿತವಾದ ಪ್ರತಿಪಾದನೆ. ಪಂಪ, ರನ್ನ, ಜನ್ನ, ಕಾಳಿದಾಸ, ರಾಘವಾಂಕ, ಸರ್ವಜ್ಞ, ಬಸವೇಶ್ವರ, ರಾಮಕೃಷ್ಣಪರಮಹಂಸ, ಅಲ್ಲಮ ಪ್ರಭು, ಗಾಂಧಿ, ಬುದ್ಧ, ಅಲ್ಲ, ಏಸು - ಹೀಗೆ ಯಾರಾದರೂ ಸರಿಯೇ, ಪೂರ್ವ ಸಿದ್ಧತೆಯಿಲ್ಲದೆ ಪಟಾಕಿ ಸರ ಹಚ್ಚಿದಂತೆ ಪಟಪಟನೆ ಕೇಳುವ ಶ್ರೋತೃಗಳಿಗೆ ಅಚ್ಚರಿ. ಮಾತಿನ ಕೊನೆಯಲ್ಲಿ ಕರ್ನಾಟಕದ ಪರಂಪರೆಯ ಬಗ್ಗೆ ಪ್ರಸ್ತಾಪವಾಗಲೇ ಬೇಕು. ನಮ್ಮ ಸಂಸ್ಕೃತಿಯನ್ನು ಹೇಳಲೇ ಬೇಕು. ಧೈರ್ಯ, ಶೌರ್ಯ, ಸಾಹಸವನ್ನು ಕನ್ನಡಿಗರಿಗೆ ನೆನಪುಮಾಡಿ ಕೊಡಲೇ ಬೇಕು.''

ವಿ. ಸೀತಾರಾಮಯ್ಯ : 'ವಿ.ಸೀ. ಯವರ ಮಾತು ಲೋಕಪ್ರಿಯ. ಅವರ ಪುಸ್ತಕದ ಮುದ್ರಣದ ಅಂದ ಚೆಂದವೇ ಬಲು ಸೊಗಸು. ಸಂಪ್ರದಾಯಸ್ಥ ವಿ.ಸೀ. ಯವರಿಗೂ, ಸೊಗಸುಗಾರ ವಿ.ಸೀ. ಯವರಿಗೂ ನಿಕಟ ಸಂಬಂಧ. ಅವರು ನಾಡಿನ ಒಳಗೂ, ಹೊರಗೂ ಪ್ರಸಿದ್ಧರಾದ ಲೇಖಕರು. ನ್ಯಾಯ ಧರ್ಮಗಳ ತಕ್ಕಡಿಯನ್ನು ತೂಗುವ ಯಜಮಾನ, ಕಲೋಪಾಸಕ, ಸಾಹಿತ್ಯದ ಕಾವ್ಯಪ್ರಕಾರವನ್ನುಬೆಳಗಿದ ಕನ್ನಡ ರತ್ನ. ಅಂತಃ ಪ್ರಜ್ಞೆಗೆ ರನ್ನಗನ್ನಡಿಯನ್ನು ಹಿಡಿದ ಮೇಧಾವಿ.'

ಜಿ.ಪಿ. ರಾಜರತ್ನಂ: 'ತಮ್ಮ ಮಾತಿಗೂ ಕೆಲಸಕ್ಕೂ ಅತೀ ಸಂಬಂಧ ವನ್ನಿಟ್ಟುಕೊಂಡ ರಾಜರತ್ನಂರವರು, ನಾವು ಇನ್ನೊಬ್ಬರಿಗೆ ಉಪದೇಶಿಸುವ ವಿಚಾರದಲ್ಲಿ ಎಷ್ಟು ಜಾಗರೂಕರಾಗಿದ್ದರೂ ಸಾಲದು, ಉಪದೇಶ ಮಾಡಿದ ವಿಚಾರ, ನಮ್ಮ ನಿತ್ಯ ಜೀವನದಲ್ಲಿಆಚರಣೆಯಲ್ಲಿದ್ದು, ಆದರ್ಶ ಮಾರ್ಗದ್ಧಾಗಿರಬೇಕು. ಅದಿಲ್ಲದೆ ಪರೋಪದೇಶ ಪಾಂಡಿತ್ಯದಿಂದ ಯಾವ ಸಾಧನೆಯೂ ಆಗುವುದಿಲ್ಲ' ಎಂದು ನಂಬಿದ್ದಾರೆ. ರಾಜರತ್ನಂ ರವರ ಸಾಹಿತ್ಯದಲ್ಲಿ ಎಷ್ಟೊಂದು ಸ್ವಚ್ಛತೆಯಿದೆಯೋ ಅವರ ಜೀವನದ ಪ್ರತಿಯೊಂದು ಹೆಜ್ಜೆಯಲ್ಲಿಯೂ ಇದೆ.

ರಂ.ಶ್ರೀ. ಮುಗಳಿ : 'ಸಿರಿಗನ್ನಡದ ಶ್ರೇಷ್ಠ ಸಾಹಿತಿಗಳು, ವಿಚಾರವಂತರು, ವಿನಯಶೀಲರು, ಸದ್ದುಗದ್ದಲವಿಲ್ಲದೆಯೇ ತಮ್ಮ ಕೆಲಸವನ್ನು ಸ್ವಚ್ಛವಾಗಿ ಮಾಡುವ ಶ್ರದ್ಧಾವಂತರು. ಅಪ್ಪಟ ಅಪರಂಜಿಯಂತವರು. ಪ್ರಸನ್ನತೆ, ಶಾಂತತೆಗಳನ್ನು ತಮ್ಮ ಜೀವನದಲ್ಲಿ ಮೊದಲು ಅನುಷ್ಠಾನಕ್ಕೆ ತಂದು, ಅವುಗಳ ಮಹತ್ವವನ್ನು ತಮ್ಮ ಸುತ್ತ ಮುತ್ತಲಿರುವ ಹಿರಿ-ಕಿರಿಯರೆಲ್ಲರಿಗೂ ಮನದಟ್ಟಾಗುವಂತೆ ಮಾಡಿರುವುದು, ಮುಗಳಿಯವರ ಜೀವನದ ಮಹತ್ವದ ಸಾಧನೆಯಾಗಿದೆ.''

ಬೀ.ಚಿ. : ''ಆಧುನಿಕ ಕನ್ನಡ ಸಾಹಿತ್ಯದಲ್ಲಿನಗೆ ಬರಹಗಳ ಅಭಾವವಿದ್ದಾಗ, ಬೀ.ಚಿ. ಯ ಅವತಾರವಾಯಿತು. ಎಷ್ಟೋ ಜನರು ತಮ್ಮ ಹಲ್ಲುಗಳನ್ನು ಟೂತ್ ಬ್ರಶ್‌ಗೆ ಮಾತ್ರ ತೋರಿಸುತ್ತಿದ್ದ ಕಾಲದಲ್ಲಿ, ಒಬ್ಬರು - ಇನ್ನೊಬ್ಬರ ಹಲ್ಲುಗಳನ್ನು ನೋಡುವಷ್ಟು ಅವಕಾಶ ಸಿಕ್ಕಿತು. ಬೀ.ಚಿ.ಯವರ ಸಾಹಿತ್ಯದಿಂದ, ಆಕರ್ಷಕರಾದ ವ್ಯಕ್ತಿಗಳು, ಲೆಕ್ಕವಿಲ್ಲದಷ್ಟು. ಇದೊಂದು ಅದ್ಭುತ ಸಾಧನೆ. ಮಾತಿಗೆ ನಿಂತರೆ, ಮದುವೆ ಮನೆಯಲ್ಲಿ ಹೋಳಿಗೆ ಬಡಿಸುವುದರಿಂದ ಹಿಡಿದು ಕಮಲಮ್ಮ ಹೋರಿ ಕರುವಿಗೆ ಜನ್ಮವಿತ್ತ ತನಕ ಮಾತು, ಬೀ.ಚಿ. ಯವರ ಮಾತನ್ನು ಕೇಳಲು ಬಿಡದಷ್ಟು ನಗು, ನಗು, ನಗು.

ತ.ರಾ. ಸುಬ್ಬರಾಯರು : 'ಕಾದಂಬರಿ ಕ್ಷೇತ್ರದಲ್ಲಿ ತ.ರಾ.ಸು. ರವರ ಹೆಸರು ಎತ್ತರ, ಬಹು ಎತ್ತರ. ಮಾತಿಗೆ ನಿಂತರೂ ಕೂಡ - ಗುಡುಗು, ಸಿಡಿಲುಗಳ ಆರ್ಭಟ. ಸಭೆಯಲ್ಲಿದ್ದವರಿಂದ ಚಪ್ಪಾಳೆಯ ಸುರಿಮಳೆ. 'ಭಳಿರೇ', ಎಂಬ ಕೂಗು; ಸ್ವತಂತ್ರ ಸ್ವಭಾವದ ತ.ರಾ.ಸು.ಗೆ ಜೀ... ಹುಜೂರ್ ಎನ್ನುವುದು ಅವರ ಜಾಯಮಾನದಲ್ಲೇ ಎಂದೂ ಸುಳಿದಿಲ್ಲ. ವ್ಯಕ್ತಿ ಸ್ವಾತಂತ್ರ್ಯಕ್ಕಾಗಲೀ, ರಾಷ್ಟ್ರದ ಸ್ವಾತಂತ್ರ್ಯಕ್ಕಾಗಲೀ ಧಕ್ಕೆ ಬಂದಾಗ ಪುರುಷಸಿಂಹರಾಗುತ್ತಾರೆ. ಆರ್ಭಟಿಸುತ್ತಾರೆ.''

ಡಾ. ಸಾ.ಶಿ. ಮರುಳಯ್ಯ :'' ವಾಲ್ಮೀಕಿಯಿಂದ ಹಿಡಿದು, ಕುವೆಂಪು ತನಕ ಸಾಹಿತ್ಯವನ್ನು ವಿಮರ್ಶಿಸುವ ಪಾಂಡಿತ್ಯ. ಎಲ್ಲವನ್ನೂ ಎಲ್ಲರಿಗೂ ತಿಳಿಯುವಂತೆ ಹೇಳುವುದು ಮರುಳಯ್ಯನವರ ವೈಶಿಷ್ಟ್ಯ 'ವಿದ್ಯೆಗೆ ವಿನಯವೇ ಭೂಷಣ' ಎಂದು ತಿಳಿದವರಲ್ಲಿ ಇವರೊಬ್ಬರು. ತುಂಬು ಸ್ನೇಹಪರಜೀವಿ, ದಾಕ್ಷಿಣ್ಯ ಸ್ವಭಾವ ಹೆಚ್ಚು. ಇದರಿಂದ ಹಲವು ಬಾರಿ ತಮಗೆ ತೊಂದರೆ ತಂದು ಕೊಂಡದ್ದು ಉಂಟು. ಇದನ್ನೇ ಅವರ ದೌರ್ಬಲ್ಯವೆಂದು ತಿಳಿದವರೂ ಉಂಟು.''

ಡಾ. ಹಂಪ ನಾಗರಾಜಯ್ಯ : 'ಅವರ ಹೆಸರೇ ಹೇಳುವಂತೆ, ಒಳ್ಳೆಯ ಕೆಲಸಕ್ಕೆ ಸೌಮ್ಯ ಪುರುಷ. ತಮ್ಮ ವೈಯುಕ್ತಿಕ ಸ್ವಾಭಿಮಾನಕ್ಕಾಗಲೀ, ಕನ್ನಡ ಸ್ವಾಭಿಮಾನಕ್ಕಾಗಲೀ ಧಕ್ಕೆಬರುತ್ತದೆ ಎಂದರೆ ನಾಗರಾಜರಾಗುತ್ತಾರೆ. ಸರ್ಪವಾಗುತ್ತಾರೆ. ಎಲ್ಲಾ ಹಂತಗಳಲ್ಲೂ ಕನ್ನಡದ ಭಾಷೆಯನ್ನು ಆಡಳಿತ

ಭಾಷೆಯನ್ನಾಗಿ ಮಾಡದಿದ್ದರೆ ಕನ್ನಡ ರಾಜ್ಯೋತ್ಸವ ಆಚರಿಸುವುದು ಅರ್ಥವಿಲ್ಲದ್ದು - ಎಂದು ಗುಡುಗಿ, ಸರ್ಕಾರದಿಂದ ಭರವಸೆ ಪಡೆದುಕೊಂಡ ಭೂಪ. ಅಚ್ಚ ಕನ್ನಡಿಗ, ರಾಷ್ಟ್ರಪ್ರಿಯ, ತೀ.ನಂ. ಶ್ರೀಯವರ ಪರಮಶಿಷ್ಯ.''

ಡಾ. ಹಾ.ಮಾ.ನಾಯಕ : 'ಇವರು ಸಿದ್ಧಲೇಖಕರು. ಹೊಗಳಿಕೆ, ಪರಾಕ್, ಇದಾವುದೂ ಹಿಡಿಸದ ವ್ಯಕ್ತಿ. ಹಿಡಿದ ಕೆಲಸಗಳನ್ನು ಪಟ್ಟು ಹಿಡಿದು, ಮುಗಿಸುವ ಶ್ರದ್ಧೆ. ತನ್ನ ಕೆಲಸದ ಬಗ್ಗೆ ನಯ, ನಾಜೂಕು, ನುಣುಪು, ಇದೆಲ್ಲವನ್ನೂ ಕಂಡುಕೊಳ್ಳುವ ಪ್ರವೃತ್ತಿ. ಎಲೆಮರೆಯ ಕಾಯಿ, ವಿನಯಶೀಲ, ಸೌಮ್ಯಪುರುಷ. ಮಾತಿಗೆ ನಿಂತರೆ ಸರಾಗವಾಗಿ ಧುಮುಕುವ ನೀರಿನ ಓಘ, ಹಂತ ಹಂತವಾಗಿ ಮೇಲಕ್ಕೆ ಏರುತ್ತಾ ಬಂದ ಅದೃಷ್ಟವಂತ. ಕನ್ನಡ ಹಾಗೂ ಇಂಗ್ಲೀಷ್ ಎರಡೂ ಭಾಷೆಗಳಲ್ಲೂ ಪ್ರಭುತ್ವವನ್ನಿಟ್ಟುಕೊಂಡು ಮಾತನಾಡುವ ಛಲದ ಧೀರ. ಬೆಳ್ಳಗೆ, ಗುಂಡಾಗಿ, ಮುದ್ದಾಗಿ ಬೆಳೆದ ವ್ಯಕ್ತಿತ್ವ. ಯಾರೊಡನೆಯೂ ಜಗಳವಿಲ್ಲದೆ ವಿಶ್ವವಿದ್ಯಾನಿಲಯದ ಒಂದು ಭಾಗವಾಗಿ ದುಡಿದರೂ ದಣಿವು ಕಾಣದ ಜೀವ.''

ಶ್ರೀನಿವಾಸ ಉಡುಪ : 'ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ, ಸಾರ್ವಜನಿಕ ಸಮಾರಂಭಗಳಲ್ಲಿ ವಿಶೇಷ ಆಸಕ್ತಿ. ಮಾತನಾಡಲು ಬಾರದವರನ್ನು ಮಾತನಾಡಿಸುವ ಚಪಲ. ಕುಕ್ಕಿ, ಕೆಣಕಿ, ತಿವಿದು, ಜನರ ಮನಸ್ಸನ್ನು ತಮ್ಮ ಕಡೆಗೆ ಸೆಳೆಯುವ ತವಕ. ಎಂತಹವರನ್ನೂ ಕ್ಷಣಾರ್ಧದಲ್ಲಿ ತನ್ನವರನ್ನಾಗಿ ಮಾಡಿಕೊಳ್ಳುವ ಕುಶಾಗ್ರತೆ. ಸಿಟ್ಟುದೂರ, ಸ್ನೇಹ ಹತ್ತಿರ. ಜಡತ್ವ ಎನ್ನುವುದು ಇವರ ಜಾಯಮಾನಕ್ಕೆ ಗೊತ್ತಿಲ್ಲದ ವಿಷಯ. ಏನೂ; ಎಂದರೆ ಸಾಕು, ಇದ್ದೇನೆ ಎನ್ನುವ ಭರವಸೆ. ಜೀವನದ ಉದ್ದಕ್ಕೂ ಕರ್ತವ್ಯದ ಸರಮಾಲೆ. ಕೆಲವರಿಗೆ ಇನ್ನೊಬ್ಬರಿಂದ ಕೀರ್ತಿ ಬರುತ್ತದೆ. ಕೆಲವರು ತಾವಾಗಿಯೇ ಲಭಿಸಿಕೊಳ್ಳುತ್ತಾರೆ. ನಾಲ್ಕು ಎಂಟಾಗುತ್ತದೆ. ಎಂಟು ಹದಿನಾರಾಗುತ್ತದೆ. ಉಡುಪರ ಜೀವನ ಅಪ್ಪಟ ಚಿನ್ನ. ಅಷ್ಟೇ ಅಲ್ಲ ಶುದ್ಧ ಅಪರಂಜಿ. ಶ್ರೀನಿವಾಸ ಉಡುಪರು ಕತೆಗಾರರು. ಕಾದಂಬರಿಕಾರರು, ನಾಟಕಕಾರರು, ವಿಮರ್ಶಕರು, ಕವಿಗಳು, ಸಾಹಿತ್ಯದ ನಾನಾ ವಿಭಾಗಗಳಲ್ಲಿ ಎದ್ದು ಕಾಣುವ ವ್ಯಕ್ತಿ. ನಿತ್ಯಜೀವನದಲ್ಲಿ ತಾನು ಕಂಡಿದ್ದು, ಅನುಭವಿಸಿದ್ದು, ಇತರೆಯವರಿಂದ ಕೇಳಿದ್ದು, ನಾಡು ಸುತ್ತಿದ್ದು, ಚರ್ಚಿಸಿದ್ದು, ಗುಡ್ಡ, ಬೆಟ್ಟ, ಶಿಖರ, ಕಾಡು, ಅಡಿಕೆ ತೋಟ, ಹೊಲ, ರಸ್ತೆ, ನೀರು, ಭೂಮಿ, ದೇವಸ್ಥಾನ ಇದರಿಂದ ಹಿಡಿದು. ಆಧುನಿಕ ಜಗತ್ತಿನ ವೈಭವದವರೆಗೆ ಮಲೆನಾಡಿನ ಪ್ರಾಕೃತಿಕ ಸಿರಿ-ಸೊಬಗಿನವರಿಗೆ ಸಾಹಿತ್ಯ ಮೂಡಿಬಂದಿದೆ.''

ನಿರಂಜನ : 'ನಿರಂಜನರು ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿ, ಮಹಾಸಮರದಲ್ಲಿ ಭಾಗವಹಿಸಿ, ದೇಶದ ಸ್ವಾತಂತ್ರ್ಯಕ್ಕಾಗಿ, ತಮ್ಮ ಕರ್ತವ್ಯ

ಸೇವೆಯನ್ನು ಸಲ್ಲಿಸಿದ್ದಾರೆ. ಶ್ರಮಜೀವಿಗಳ ಹೋರಾಟದಲ್ಲಿ ಪ್ರಮುಖರಾಗಿ ಅವರ ಸಕಲ ಸುಖ ದುಃಖಗಳ ಅರಿವನ್ನು ಮಾಡಿಕೊಂಡಿರುವುದಲ್ಲದೆ, ತುರಂಗವಾಸವನ್ನು ಅನುಭವಿಸಿದ್ದಾರೆ. ಸಾಹಿತ್ಯದಲ್ಲಿ ಇವರು ಆರಿಸಿಕೊಂಡ ಸ್ವರೂಪಗಳು, ಸಣ್ಣಕತೆ, ವಿಮರ್ಶೆ, ಕಾದಂಬರಿ, ಇವುಗಳ ಮೂಲಕ ತಮ್ಮ ಸೇವೆಯನ್ನು ಸಲ್ಲಿಸಿದ್ದಾರೆ.''

ದೇ. ಜವರೇಗೌಡರು : 'ಜವರೇಗೌಡರು ಸದಾ ಹಸನ್ಮುಖಿ ಮಿತ್ರರನ್ನು ಕಂಡರೆ ಹೆಗಲ ಮೇಲೆ ಕೈಯಿರಿಸಿ, ಕುಶಲವಾರ್ತೆ ಕೇಳುವ ಕುಶಲಮತಿ. ದುಂಡು ದೇಹದ, ನಗುಮುಖದ ಮಾತುಗಾರ. ಒಮ್ಮೆ ಪರಿಚಯವಾದ ವ್ಯಕ್ತಿ ಸಾವಿರಾರು ವರ್ಷವಾದರೂ ಅಷ್ಟೇ, ಗುರುತಿಸುವುದು ಬಲು ಸುಲಭ. ನಿರಂಹಕಾರಿ, ಸೌಮ್ಯ ಪುರುಷ. ನಡೆ, ನುಡಿ, ಎಲ್ಲವೂ ಸಹಜ; ನಿತ್ಯ ಜೀವನದಲ್ಲಿ ಸದಾ ಚುರುಕು. ಬಿಡುವಾದಾಗಲೆಲ್ಲಾ ಸಿಕ್ಕಿದ ಗೆಳೆಯರೊಡನೆ ಪರಸ್ಪರ ಕಥಾ ಕಾಲಕ್ಷೇಪ. ಕನ್ನಡ ಡಿಂಡಿಮ ಬಾರಿಸಲು ನಗಾರಿಗೆ ಹೊಸ ಬಿಗು, ಹೊಸ ಹದ, ವಿಶ್ವ ವಿದ್ಯಾನಿಲಯದಲ್ಲಿ ಕನ್ನಡ ಕಹಳೆ ಊದಿದರೆ, ಇಡೀ ಕರ್ನಾಟಕ ಜನಕೋಟಿಯ ಕಿವಿಗೆ ಬೀಳಬೇಕೆಂಬ ಆಸೆ. ಇದಕ್ಕಾಗಿ ಕನ್ನಡವನ್ನು ಶಿಕ್ಷಣ ಮಾಧ್ಯಮವನ್ನಾಗಿ ಮಾಡಲು ಗುರುವಿನೊಡನೆ ಶ್ರಮ. ಮೊದಲು ಕನ್ನಡದ ಉಳಿವು. ಅದರ ಸ್ಥಾನ ಮಾನದ ರಚನೆ, ಇದೆಲ್ಲವೂ ಆಗಲೇ ಬೇಕೆಂಬ ಛಲ. ಚಾಮುಂಡಿಯಾಗಿ ಹಟ ಇದರಿಂದಾಗಿ ಕನ್ನಡ ಪ್ರಾಧ್ಯಾಪಕ ಸ್ಥಾನಕ್ಕೆ ಹೊಸಮೆರಗು. ದಕ್ಷತೆಯ ಪ್ರಾಣ ಸಂಚಾರ. ದಿಟ್ಟತನದ ನಿಲುವು.''

ನಾಡಿಗೇರ ಕೃಷ್ಣರಾಯರು : 'ಯಾರಾದರೂ ಏನಾದರೂ ಹೇಳಿದರೆ ಸಾಕು, ಅದಕ್ಕೊಂದು ಹಾಸ್ಯಲೇಪನ ಕೊಟ್ಟು, ಆ ಮಾತಿಗೆ ನಗು ಬರುವಂತೆ ಮಾಡುವುದು. ಹೆಸರಾಂತ ಸಾಹಿತಿ, ಹಾಸ್ಯ ಲೇಖಕ, ಶ್ರೀ ನಾಡಿಗೇರ ಕೃಷ್ಣರಾಯರ ಹುಟ್ಟು ಕಸುಬು. ಅವರನ್ನು ನೋಡಿದರೆ ಈ ಬಡವ್ಯಕ್ತಿ ಲೇಖಕ ಹೌದೇ ? ಎಂದು ಯಾರೇ ಆದರೂ ಪ್ರಶ್ನಿಸುತ್ತಾರೆ. ಬಡಕಲಾದ ದೇಹ, ಭಾರವಾದ ತಲೆ, ತಲೆಯ ಒಳಗಡೆ ಹಾಸ್ಯದ ಯೋಚನೆಯ ನೂಕುನುಗ್ಗಲು; ದಪ್ಪಗಿರುವ ಜನರು ವಿನೋದಕ್ಕೆ ಒಂದು ವಸ್ತುವೆನ್ನುತ್ತಾರೆ. ಹಾಗೆಯೇ ತೆಳುವಾದ, ಬಡಕಲು ಜನರೂ ಕೂಡಾ, ಹಾಸ್ಯಕ್ಕೆ ವಿನೋದಕ್ಕೆ ಒಂದು ವಸ್ತುವಾಗುತ್ತಾರೆ. ಇದಕ್ಕೆ ನಾಡಿಗೇರ ಕೃಷ್ಣರಾವ್ ಒಂದು ಜೀವಂತ ಸಾಕ್ಷಿ.'

ಬಸವರಾಜ ಕಟ್ಟೀಮನಿ : 'ಬಸವರಾಜ ಕಟ್ಟೀಮನಿ ಕನ್ನಡ ಸಾಹಿತ್ಯ ಲೋಕದಲ್ಲಿ ಅತ್ಯಂತ ಜನಪ್ರಿಯವಾದ ಹೆಸರು. ಈ ಹೆಸರಿನ ಸಂಗಡ, ಅವರ ಸಾಹಿತ್ಯವೂ ಕೂಡಾ ಅಷ್ಟೇ ಜನಪ್ರಿಯ. ಅವರ ಅದೃಷ್ಟವೂ ಅಷ್ಟೇ ಎತ್ತರ. ಕಷ್ಟ

ಕಾರ್ಪಣ್ಯದಿಂದ ಬೆಂದಜೀವಕ್ಕೆ, ಈಗ ಬಾಳಿನಲ್ಲಿಸ್ವಲ್ಪ ಸಮಾಧಾನ ಸಿಕ್ಕಿದೆ. ಸ್ನೇಹ, ದೊಡ್ಡವರು, ಚಿಕ್ಕವರು ಎಲ್ಲರಲ್ಲಿಯೂ ಒಂದೇ ಭಾವ. ಎಲ್ಲರೊಡನೆ ಬೆರೆಯುವ ಸಹೃದಯ. ಸತ್ಯಪ್ರಿಯತೆ, ಹಠ, ಸಾಹಸ, ಗುರಿಸಾಧನೆ- ಇವು ಅವರ ಜೀವನದುದ್ದಕ್ಕೂನಡೆದು ಬಂದ ದಾರಿ. ಈ ದಾರಿಯಲ್ಲಿಯೇ ಅವರು ಅರ್ಧ ಶತಮಾನವನ್ನು ಕಳೆದಿದ್ದಾರೆ. ಕಿವಿ ಮಂದವಾದರೂ, ಕಣ್ಣಿನ ನೋಟ ಬಹುದೂರ. ಏಳು ಸಮುದ್ರದಾಚೆಗೂ ಕಾಣುವ ಸೂಕ್ಷ್ಮ ದೃಷ್ಟಿ, ಹರಿತವಾದ ವಿಚಾರ ಪರತೆ, ಲೇಖನಿಯೂ ಅಷ್ಟೇ ಹರಿತ. ಅಷ್ಟೇ ತೀಕ್ಷ್ಣ

**ಹುಯಿಲುಗೋಳ ನಾರಾಯಣರಾವ್ :** 'ಇವರು ಬರೆದ ನಾಟಕ, ಕನ್ನಡದ ಹೆಸರಾಂತ ನಾಟಕ ಸಂಸ್ಥೆಗಳ ಮೂಲಕ, ರಂಗಭೂಮಿಯ ಮೇಲೆ ಒಂದು ಲಕ್ಷಕ್ಕೂಹೆಚ್ಚು ಜನರನ್ನು ಆನಂದಗೊಳಿಸಿದೆ. ಕಂಪನಿಗಳಿಗೂ ಹೇರಳವಾಗಿ ಹಣ ತಂದವು. ಆದರೆ ಈ ಹಣವನ್ನು ಶ್ರೀ ನಾರಾಯಣರಾಯರು, ಬಹುಪಾಲನ್ನು ಸಾಮಾಜಿಕ ಕೆಲಸ ಕಾರ್ಯಗಳಿಗೆ ವಿನಿಯೋಗಿಸಿದ್ದಾರೆ. ಜನ ಇಂದು ನಾರಾಯಣರಾಯರನ್ನು ಇದಕ್ಕಾಗಿ ನೆನೆಯುತ್ತಿಲ್ಲ. ಅವರನ್ನು ನೆನೆಯುವುದು 'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು' ಗೀತೆ ಧ್ವನಿವರ್ಧಕದಿಂದ ಕಿವಿಗೆ ಬಿದ್ದಾಗ ಮಾತ್ರಾ.'

**ಸೂರ್ಯನಾರಾಯಣ ಚಡಗ :** ಕಳೆದ ಮೂವತ್ತುವರ್ಷಗಳಿಂದ ನಿರಂತರ ಸಾಹಿತ್ಯ ಸೇವೆ. ಎಲ್ಲದರಲ್ಲೂಹೊಸತನ, ಆದರ್ಶ ಜೀವನದ ಪ್ರಭಾವ, ಸಾಮಾನ್ಯ ಕುಟುಂಬ ವರ್ಗದ ಚಿತ್ರಣ. ಬರವಣಿಗೆಯಲ್ಲಿ ಶೀಲತೆ, ಮಕ್ಕಳಿಂದ ವೃದ್ಧರ ತನಕ, ಮುತ್ತೈದೆಯರಿಂದ - ವಿಧವೆಯರತನಕ, ಎಲ್ಲರೂ ಓದ ಬಯಸುವ ಸಾಹಿತ್ಯ ಚಡಗರದ್ದು. ದೊಗಳೆ ಪಾಯಿಜಾಮದ, ಉದ್ದನೆಯ ಬಿಳಿಯ ವ್ಯಕ್ತಿ. ಸದಾ ಮಾತು, ಮಾತಿನಲ್ಲಿ ಮಾಧುರ್ಯ, ಸ್ನೇಹ ಪರತೆ, ಹಿಂದಿನ ಕಹಿ ಅನುಭವಗಳು ನೆನಪಾದಾಗಲೆಲ್ಲಾ ಹೊಸ ಹೆಜ್ಜೆಇಡುವಾಗ ಜಾಗರೂಕತೆ, ಜೀವನದಲ್ಲಿ ಕಹಿ ಮತ್ತುಸಿಹಿ ಎರಡರ ಅನುಭವ. ಆದ್ದರಿಂದ ಜೀವನದಲ್ಲಿ ಮುಂದಿನ ಆಸಕ್ತಿಗಾಗಿ ಕಾತುರ.'

ಹೀಗೆ ಭಟ್ಟರು, ನಾಡಿನ ಅನೇಕ ಸಾಹಿತಿಗಳ, ವ್ಯಕ್ತಿಗಳ ವ್ಯಕ್ತಿತ್ವ, ಹಾಗೂ ಕೃತಿಗಳನ್ನು ತುಂಬು ಆದರದಿಂದ ಕಂಡು, ಓದಿ ಅವರ ಅನುಭವ ಪಡೆದಿದ್ದಾರೆ. ಆತ್ಮೀಯತೆಗಳನ್ನು ಹಂಚಿಕೊಂಡಿದ್ದಾರೆ. ಸಂದರ್ಭ ಬಂದಾಗಲೆಲ್ಲಾ ಭಟ್ಟರು, ತಮ್ಮ ಅನುಭವ, ಅನಿಸಿಕೆಗಳನ್ನು ನಿರ್ಮಲ ಮನೋಭಾವದಿಂದ ಕನ್ನಡ ಸಾಹಿತ್ಯ ಲೋಕಕ್ಕೆ ಅನಾವರಣ ಮಾಡಿದ್ದಾರೆ. ದೊಡ್ಡವರ ದೊಡ್ಡ ಗುಣಗಳನ್ನು ಹೊಗಳಿ ತಾವು ದೊಡ್ಡವರಾಗಿದ್ದಾರೆ.

ಭಟ್ಟರು ೧೯೬೧ರಲ್ಲಿ ಪ್ರಕಟಿಸಿದ ತಮ್ಮ ಮೊಟ್ಟ ಮೊದಲನೇ ಕಾದಂಬರಿ 'ಅಣ್ಣ-ತಂಗಿ'ಯಲ್ಲಿವೇಶ್ಯೆಯರ, ಚೋರ ವೃತ್ತಿಯವರ, ನಾನಾ ಮುಖಗಳನ್ನು ಬಹಳ ಚೆನ್ನಾಗಿ ಚಿತ್ರಿಸಿದ್ದಾರೆ. ಅದರಲ್ಲಿನ ಅವರ ಪ್ರಾಮಾಣಿಕ ಅನಿಸಿಕೆಯು ಕೆಲವು ತುಣುಕುಗಳು ಈ ರೀತಿ ಇವೆ -

'ಭಾರತದ ಪ್ರತಿಯೊಂದು ಪಟ್ಟಣದಲ್ಲಿಯೂ, ಸೂಳೆಗೇರಿಗಳಿವೆ. ಅಲ್ಲಿ ಒದ್ದಾಡುತ್ತಿರುವ ಅಸಂಖ್ಯಾತ ಕ್ರಿಮಿಗಳು ನಮ್ಮ ಸಮಾಜವನ್ನು ಕಬಳಿಸುತ್ತಿವೆ. ಈ ಪ್ರದೇಶಗಳ ದೂಷಿತ ವಾತಾವರಣದಿಂದಾಗಿ, ಪ್ರತ್ಯೇಕ ಪರಿವಾರಗಳಲ್ಲಿಂದು ಬಗೆ ಬಗೆಯ ಗುಪ್ತ ರೋಗಗಳು ಹಬ್ಬಿಕೊಂಡಿವೆ. ಇಂದಿನ ಬಹಳಷ್ಟು ತರುಣರು ಒಂದಲ್ಲಾ ಒಂದು ಗುಪ್ತ ರೋಗಗಳಿಂದ ನರಳುತ್ತಿದ್ದಾರೆ.''

''ನಾರಿಯಲ್ಲಿ ಒಂದೇ ಒಂದು ಚಿಕ್ಕದೋಷವನ್ನು ಕಂಡರೂ ಅವಳನ್ನು ಸಮಾಜದಿಂದ ಹೊರಗೆ ದಬ್ಬಿ ಬಿಡುತ್ತೇವೆ. ಸಮಾಜ ಬಹಿಷ್ಕೃತಳಾದ ನಾರಿ ತನ್ನ ಉದರ ನಿರ್ವಹಣೆಗೆ ಅನ್ಯೋಪಾಯ ಕಾಣದೆ ವೇಶ್ಯೆಯಾಗುತ್ತಾಳೆ. ಒಬ್ಬರಲ್ಲ ಈ ಬಗೆಯ ಸಹಸ್ರಾರು ಬಾಲೆಯರು ಸಭ್ಯ ಸಮಾಜಲ್ಲಿತೆರೆಮರೆಯಲ್ಲಿ ಖೈದಿಗಳಾಗಿ ಕಣ್ಣೀರು ಸುರಿಸುತ್ತಿದ್ದಾರೆ. ಅವರೆಲ್ಲರೂ ಮುಕ್ತಿಯನ್ನು ಬಯಸುತ್ತಿದ್ದಾರೆ. ಆದರೆ ಅವರನ್ನು ಬಿಡುಗಡೆಗೊಳಿಸುವ ಧೀರರಿಲ್ಲ. ಅಸಹಾಯಕರಾದ ಅಬಲೆಯರು, ನರಕದಲ್ಲಿಬಿದ್ದು, ವಿಲಿ ವಿಲಿ ಒದ್ದಾಡುತ್ತಿದ್ದಾರೆ. ಈಬಗೆಯ ಜೀವನಕ್ಕೆ ಅವರ ಪರ ಜನರ ಸಹಕಾರವಿದೆ -ಎಂಬುದೇ ಅತ್ಯಂತ ಆಶ್ಚರ್ಯಕರವಾದ ಖೇದಕರವಾದ ಸಂಗತಿ.'

ಸಮಾಜದ ಚೋರ ವೃತ್ತಿಯ ಬಗ್ಗೆ ಭಟ್ಟರ ಅನಿಸಿಕೆ

'ಕಳ್ಳರ ಜೀವನ ಸುಧಾರಿಸಬೇಕೆಂಬ ಸದುದ್ದೇಶದಿಂದ,ಜೈಲುಗಳು ನಿರ್ಮಾಣವಾಗಿದೆ. ಕಳ್ಳಜೈಲಿಗೆ ಹೋಗಿ ಇನ್ನುಮುಂದೆ ಎಂದಿಗೂ ಕಳ್ಳತನ ಮಾಡಬಾರದು ಎಂಬ ಪಾಠ ಕಲಿತು ಬರಲೆಂದು, ಕಳ್ಳತನ ಮಾಡಿದವರನ್ನು ಸರಕಾರ ಜೈಲಿಗೆ ಕಳಿಸುತ್ತದೆ. ಆದರೆ ಅದರಿಂದಾಗುವ ಪರಿಣಾಮ ತದ್ವಿಪರೀತ. ನಿರಪರಾಧಿಯಂತಹ ಒಬ್ಬ ವ್ಯಕ್ತಿಯನ್ನು ಕೂಡಾ, ಜೈಲು ಕಳ್ಳನನ್ನಾಗಿ ಮಾಡುತ್ತದೆ. ಜೈಲು ಮತ್ತುಕಾನೂನುಗಳು ಕಳ್ಳತನವನ್ನು ನಿಲ್ಲಿಸಲಿಕ್ಕಾಗಿಯೇ ಇವೆಯಾದರೂ, ಅದರ ಪರಿಣಾಮ ವಿಪರೀತವಾಗುತ್ತಾ, ಆಗುತ್ತಾ, ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಕಳ್ಳರು ಹುಟ್ಟಿಕೊಳ್ಳುತ್ತಾರೆ.'

ಸುಮಾರು ೩೬ ವರ್ಷಗಳಷ್ಟು ಹಿಂದೆ ಅಂದಿನ ಸಾಮಾಜಿಕ ಚಿತ್ರಣವನ್ನು ನೋಡಿ ದಾಖಲಿಸಿದ ಭಟ್ಟರ ಅನಿಸಿಕೆ, ಇಂದು ಬದಲಾಗುತ್ತಿರುವ ಸಮಾಜದಲ್ಲಿ

ಬದಲಾಗಬೇಕಾದ ಸಾಮಾಜಿಕ ಅನಿಷ್ಟಗಳು ಬದಲಾಗದೆ, ಇನ್ನೂ ಬೃಹದಾಕಾರವಾಗಿ ಬೆಳೆಯುತ್ತಿರುವುದು ನಮ್ಮ ದೇಶದಬಹುದೊಡ್ಡ ದುರಂತವಾಗಿದೆ.

ಹೀಗೆ ಮಹಾಬಲೇಶ್ವರ ಭಟ್ಟರ ಬರವಣಿಗೆಗೆ ನಾನಾ ಮುಖ. ಅವರು ಯಾವುದನ್ನು ಬರೆದರೂ ಅದರಲ್ಲಿ ಸಾಮಾಜಿಕ ಕಳಕಳಿ ಇರುತ್ತದೆ. ನೊಂದ ಜನತೆಯ ಏಳಿಗೆಗಾಗಿ, ಸಾಮಾಜಿಕ ಬದಲಾವಣೆಯ ಆಶಾದೀಪ ಬೆಳಗುತ್ತಾರೆ. ವಿಶೇಷವಾಗಿ ಬಡವರ ಬಗೆಗ ಅನುಕಂಪ, ನಾಡು, ರಾಷ್ಟ್ರದ ಏಳಿಗೆಯ ಬಗ್ಗೆ ಕನಸು, ನಾಡು - ನುಡಿಗಾಗಿ ವಿಶೇಷ ಕಳಕಳಿ. ಸಾಹಿತ್ಯ ಕಲೆಗಳ ಬಗ್ಗೆ ಎದೆ ತುಂಬಿದ ಅಭಿಮಾನ. ಹಿರಿಯರಲ್ಲಿ ತುಂಬುಗೌರವ, ಕಿರಿಯರಿಗೆ ಅಭಿಮಾನ ಪೂರ್ವಕವಾದ ಪ್ರೋತ್ಸಾಹದ, ನುಡಿ ನಿಚ್ಚಣಿಕೆಗಳು.

ಭಟ್ಟರ ಎಪ್ಪತ್ತರ ವಯಸ್ಸಿನಲ್ಲೂ ಇಪ್ಪತ್ತರ ಚಟುವಟಿಕೆ ತುಂಬಿದೆ. ಅವರ ಉತ್ಸಾಹ ನನ್ನನ್ನೇ ಮೋಡಿ ಮಾಡಿದೆ. ನನ್ನ ಅವರ ಸ್ನೇಹ, ವಿಶ್ವಾಸ, ಮೂವತ್ತೈದು ವರ್ಷಗಳಷ್ಟು ಹಳೆಯದು. ಆ ವಿಶ್ವಾಸ ಕಡಿಯಲಾರದ್ದು, ಬಿಡಲಾರದ್ದು, ನಾನೂ ಭಟ್ಟರೂ ಒಟ್ಟಿಗೆ ಎಷ್ಟೋ ಪ್ರವಾಸ ಮಾಡಿದ್ದೇವೆ. ಮಾಗಿದ ಸ್ನೇಹ ಆತ್ಮೀಯತೆಗಳಿಂದ, ಮೈಮರೆತು ಮಾತನಾಡಿದ್ದೇವೆ. ಅವರ ಬೇದೂರಿನ ನಿಸರ್ಗದ ಮಧ್ಯೆ ಇರುವ ಮನೆಗೆ ಅನೇಕಸಲ ಹೋಗಿ ಬಂದಿದ್ದೇನೆ. ಇಲ್ಲಿ ಭಟ್ಟರು ಕಟ್ಟಿಸಿರುವ ಮನೆ- ಅರಮನೆಯಂತಿದೆ. ತೆಂಗು ಅಡಿಕೆ ಬಾಳೆಗಳ ಮಧ್ಯದಲ್ಲಿ ಅದರ ನೆಲೆಸುತ್ತ ಹಸಿರು ತುಂಬಿದ ಸುಂದರ ಫಲ-ಪುಷ್ಪಗಳ ರಾಶಿ. ಆನಂದವನವಾಗಿದೆ. ಭಟ್ಟರ ಮನೆಯ ಉಪನಯನ, ಮದುವೆ, ಕಾರ್ಯಗಳಲ್ಲಿ ಅವರು ಸಾಹಿತಿಗಳನ್ನು ಕರೆಸಿಕೊಂಡು ನೀಡುವ ಔತಣಗಳಲ್ಲಿ ಎಲ್ಲದರಲ್ಲೂ ಭಾಗವಹಿಸಿದ್ದೇನೆ. ಸಂತೋಷವನ್ನು ಪಡೆದಿದ್ದೇನೆ. ಅವರಮನೆ ಮಂದಿಯೆಲ್ಲಾನನಗೆ ಆತ್ಮೀಯರಾಗಿದ್ದಾರೆ. ಅವರ ಮಕ್ಕಳಿಗೆ ಪಾಠ ಹೇಳಿದ್ದೇನೆ. ಇಷ್ಟು ಸುಧೀರ್ಘ ವರ್ಷಗಳ ಬಿಡದ ಒಡನಾಟದಲ್ಲೂ ಅವರ ಆತ್ಮೀಯತೆಯಲ್ಲಿ ವ್ಯತ್ಯಾಸವಿಲ್ಲ. ಒಂದೇ ರೀತಿ, ಒಂದೇ ನೀತಿ. ಅಭಿಮಾನಿಗಳಲ್ಲಿ ಆತ್ಮೀಯತೆ ಇದ್ದರೂ, ಭಟ್ಟರು ಯಾರ ಮನೆಗೂ ಸುಮ್ಮ ಸುಮ್ಮನೆ ಹೋಗುವ ಜಾಯಮಾನದವರಲ್ಲ. ಅವರು ಮನೆಗೆ ಬಂದರೆಂದರೆ, ಏನೋ ಒಂದು ಶುಭ ಸಮಾಚಾರವನ್ನು ತಂದಿರುತ್ತಾರೆಂದೇ ನನ್ನ ಭಾವನೆ. ಅನುಭವ. ನನಗೆ ಪ್ರಶಸ್ತಿಗಳು ಬಂದಾಗಲೆಲ್ಲಾ ಭಟ್ಟರು ನನ್ನ ಮನೆಗೇ ಧಾವಿಸಿ ಬರುತ್ತಾರೆ. ತುಂಬು ಹೃದಯದಿಂದ ಆಶೀರ್ವದಿಸುತ್ತಾರೆ. ಅದೇ ಶಿಸ್ತು, ಅದೇ ನಗು, ಅದೇ ಭಾವ. ಅವರ ಬದುಕು ಬರಹ ಎರಡೂ ನನ್ನ ಮೇಲೆ ಪ್ರಭಾವ ಬೀರಿವೆ. ಕನಿಷ್ಠ ವಾರಕ್ಕೊಮ್ಮೆಯಾದರೂ, ಭಟ್ಟರನ್ನು ಕಾಣದಿದ್ದರೆ ಏನೋ ಕಾತರ, ಚಡಪಡಿಕೆ. ಮತ್ತೆ ಅವರನ್ನು ನೋಡಿದಾಗ, ನೋಡಿ ಮಾತನಾಡಿದಾಗ ಎಲ್ಲವೂ ಶಾಂತ-ಸಮಾಧಾನ.

'ಗುಲಾಬಿ', 'ಹೂಮಾಲೆ' 'ತೋರಣ' 'ಹೊಸೂರಿನ ಹಲವರು','ಮೈಸೂರಿನ ಉಕ್ಕಿನ ಮನುಷ್ಯ', ಸಾಹಿತ್ಯ ಶಿಲ್ಪಿಗಳು ಭಾಗ ೧-೨', 'ಋತುಗಾನ', 'ಅಣ್ಣತಂಗಿ', 'ಕನ್ನಡ ಕುಲದೀಪಕರು' ಮುಂತಾದ ಸುಮಾರು ಹದಿಮೂರು ಕೃತಿಗಳನ್ನು ಭಟ್ಟರು ಬರೆದಿದ್ದಾರೆ. ಜೊತೆಗೆ ಅನೇಕಪತ್ರಿಕಾ ಲೇಖನಗಳು, ಅಂಕಣ ಬರಹಗಳು, ನಾಡಿನ ಪತ್ರಿಕೆಗಳಿಗೆ, ಆಕಾಶವಾಣಿ ಕಾರ್ಯಕ್ರಮಗಳಿಗೆ ಬರೆಯುವ ಬಿಡಿ ಲೇಖನಗಳು ಅಸಂಖ್ಯ.

ಮಹಾಬಲೇಶ್ವರ ಭಟ್ಟರು ತಾವು ಏರಿದ ಎಪ್ಪತ್ತರ ಎತ್ತರದಲ್ಲಿ ಬರೆದಿರುವ ಸಾಹಿತ್ಯಕೃತಿಗಳು ಕಡಿಮೆಯಿರಬಹುದು. ಆದರೆ ಅವರು ಬರೆದಿರುವುದೆಲ್ಲಾ ಚೊಕ್ಕ ಚಿನ್ನ. ಸರ್ವಕಾಲಕ್ಕೂ ಸಮೀಕರಿಸಿಕೊಂಡು ನಿಲ್ಲಬಲ್ಲ ಕೃತಿ ಕುಸುಮಗಳು. ಬರೀ ಸಂಖ್ಯೆಯಲ್ಲಿ ಬರೆದಿದ್ದೆಲ್ಲವೂ ಸಾಹಿತ್ಯವಾಗದು. ಬಿ.ಎಂ.ಶ್ರೀ ಯವರು ಬರೆದದ್ದು ಕಡಿಮೆ. ಆದರೆ ಬರೆದದ್ದೆಲ್ಲಾ ಶ್ರೇಷ್ಠ ಸಾಹಿತ್ಯ. ಆದರೆ ಅವರು ಸಾಹಿತ್ಯ ಲೋಕದಲ್ಲಿ ಏರಿದ ಎತ್ತರಉನ್ನತವಾದುದು. ಅವರು ಬರವಣಿಗೆಗಿಂತ ಹೆಚ್ಚಾಗಿ, ಕನ್ನಡ ನಾಡು - ನುಡಿಗಾಗಿ ಶ್ರಮಿಸಿದರು. ನಾಡಿನಾದ್ಯಂತ ತಿರುಗಾಡಿ, ಕನ್ನಡದ ಡಿಂಡಿಮವನ್ನು ಬಾರಿಸಿ ಕನ್ನಡ ಸಾಹಿತ್ಯ,, ಭಾಷೆ, ಬಾವುಟಗಳನ್ನು ಬಾನಿಗೆತ್ತಿದರು. 'ಕನ್ನಡದಕಣ್ವ'ರೆನಿಸಿ ಆಧುನಿಕ ಕನ್ನಡಸಾಹಿತ್ಯದ ಧ್ರುವತಾರೆಯಾಗಿ ಮಿನುಗಿದರು.

ಭಟ್ಟರಿಗೆ ಸಮಯ ದೊರೆಯುವುದೇ ಕಡಿಮೆ. ದೊರೆತ ಸಮಯವೆಲ್ಲಾ ಕನ್ನಡದ ಕೈಂಕರ್ಯಕ್ಕೇ ಮೀಸಲು. ಇದಕ್ಕಾಗಿ ನಿರಂತರ ಓಡಾಟ, ಜೊತೆಗೆ ಸಾಹಿತ್ಯ ಸಮಾರಂಭಗಳು, ಪರಿಷತ್ತಿನ ಕೆಲಸಗಳು, ಒಂದೇ, ಎರಡೇ ? ನಿರಂತರ ಹೋರಾಟದ ಬದುಕು.

ಮಹಾಬಲೇಶ್ವರ ಭಟ್ಟರದು ಇಂದು ತುಂಬು ಆನಂದದ ಸಂಸಾರ. ಭಟ್ಟರ ಗುಣ, ಸ್ವಭಾವಗಳಿಗೆ ಸ್ಪಂದಿಸಿ, ನಡೆಯುವ ಸುಸಂಸ್ಕೃತ ಪತ್ನಿ ಪದ್ಮಾವತಮ್ಮ. ನಾಲ್ಕು ಹೆಣ್ಣು, ಮೂರು ಗಂಡು ಮಕ್ಕಳು, ಎಲ್ಲರಿಗೂ ಮದುವೆಗಳಾಗಿ, ಸುಖವಾಗಿದ್ದಾರೆ. ಮನೆಯಲ್ಲಿ ಮೊಮ್ಮಕ್ಕಳ ಕಿಲ ಕಿಲ ನಗೆಗಳ ಕಿರುಹಣತೆಗಳು. ಭಟ್ಟರು ಈಗ ಸಾಗರದಲ್ಲೂ ಒಂದು ಮನೆ ಮಾಡಿ ಸಂಸಾರ ಹೂಡಿದ್ದಾರೆ. ಕೃಷಿ ಕೆಲಸಗಳ ಉಸ್ತುವಾರಿಗಾಗಿ ಆಗಾಗ್ಯೆ ಬೇದೂರಿಗೆ ಹೋಗಿ ಬರುತ್ತಾರೆ.

ಶ್ರೀಯುತ ಭಟ್ಟರಿಗೆ ಈಗ ಎಪ್ಪತ್ತು. ಮೊನ್ನೆ ಮೊನ್ನೆ ತಾನೇ ಅವರ ಜಂನೇ ಜಯಂತಿಯನ್ನು ಆಚರಿಸಿದ ನೆನಪು ಇನ್ನೂ ಹಸಿರಾಗಿದೆ. ಎಷ್ಟು ಬೇಗ ಅವರು ೭೦ರ ಅಂಚಿಗೆ ಬಂದರು! ಸಾಮಾನ್ಯವಾಗಿ ೭೦ರ ವಯಸ್ಸು, ಮೂರು ಕಾಲುಗಳ ಮಂದ ನಡಿಗೆಗೆ ನಾಂದಿ. ದೃಷ್ಟಿ, ಶ್ರವಣತೆಗಳಲ್ಲಿ ಸತ್ವಕುಸಿದು, ಇಟ್ಟ ಹೆಜ್ಜೆಗಳಲ್ಲಿ

ಕಿರುಕಂಪನ. ಚೈತ್ರ ಕಳೆದ ನಂತರದ ಹಂತದಲ್ಲಿ ಹಸಿರೆಲೆಯ ಕಸುವಿಳಿದು ಅಂಚುಗಳಲ್ಲಿ ಹಳದಿಯ ಅವಿರ್ಭಾವ! ಯಾರೂ ಭಟ್ಟರಿಗೆ ಎಪ್ಪತ್ತು ಎಂದು ಸುಲಭವಾಗಿ ಹೇಳಲಾಗುವುದಿಲ್ಲ. ಅವರಿಗಿನ್ನೂ ಮೂರು ಕಾಲುಗಳಾಗಿಲ್ಲ. ದೃಷ್ಟಿ ಶ್ರವಣತೆಯಲ್ಲಿ ಸತ್ವ ಕುಸಿದಿಲ್ಲ. ಕಂಪನ ಮೊದಲೇ ಇಲ್ಲ. ಕೆಂಬಣ್ಣದಲ್ಲಿ ಈಗ ತಾನೇ ಅದ್ದಿ ತೆಗೆದಂತಹ, ಸುಂದರ, ಸಧೃಡ ಶರೀರ. ಮೊಗದಲ್ಲಿ ಮಾಸದ ಚೆಲವು ಅಲ್ಲಿ ಅದೇ ಮಲ್ಲಿಗೆಯ ಮಂದಹಾಸ. ಕಾಂತಿ ಸೂಸುತ್ತಿರುವ ಕಣ್ಣುಗಳಲ್ಲಿ ಬಾಡದೇ ಅರಳುತ್ತಿರುವ ಹೊಸ ಹೊಸ ಕನಸುಗಳು! ಅಜಾನುಬಾಹು ಶರೀರದಲ್ಲಿ ಪುಟಿಯುತ್ತಿರುವ ಲವಲವಿಕೆ – ಚೈತ್ರ ಚೈತನ್ಯ.

ಭಟ್ಟರು ಇಂದು ಸಾಗರ ತಾಲ್ಲೂಕು ಕನ್ನಡಸಾಹಿತ್ಯ ಪರಿಷತ್ತಿನ ಅಧ್ಯಕ್ಷರು. ಸಮರ್ಥತೆಗೆ ಸಮಾನವಾದ ಸ್ಥಾನ. ಅವರು ಈ ಕಿರು ಅವಧಿಯಲ್ಲಿ ಈಗಾಗಲೇ ಕನ್ನಡದ ಬಗ್ಗೆ ಸಾಕಷ್ಟು ಒಳ್ಳೆಯ ಕೆಲಸಗಳನ್ನು ಮಾಡಿ, ಒಳ್ಳೆಯ ಹೆಸರು ಗಳಿಸಿದ್ದಾರೆ. ಗೆಳೆಯರ ಬಳಗದೊಂದಿಗೆ ಸದಾ ಚಟುವಟಿಕೆಯಿಂದ ಓಡಾಡುವ ಭಟ್ಟರು ಇಂದು ಕನ್ನಡದ ಕಟ್ಟಾಕಣ್ಮಣಿ.

ಇಂತಹ ಮಹಾಬಲೇಶ್ವರ ಭಟ್ಟರಿಗೆ ದೇವರು ಶತಮಾನಕ್ಕೂ ಮೀರಿ ಆಯುಸ್ಸು ನೀಡಲಿ. ಕನ್ನಡ ತಾಯಿ ಧನ್ಯಳಾಗಲಿ – ಇದು ನನ್ನ ಆಶಯ.

**ಆಕರ ಗ್ರಂಥಗಳು :**

೧. ಮಹಾನಂದ : ಮಹಾಬಲೇಶ್ವರ ಭಟ್ಟರ ಸಂಭಾವನಾಗ್ರಂಥ ೧೯೭೮
೨. ಕನ್ನಡ ಕುಲದೀಪಕರು : ಲೇ. ಟಿ. ಮಹಾಬಲೇಶ್ವರ ಭಟ್ಟ
೩. ಸಾಹಿತ್ಯ ಶಿಲ್ಪಿಗಳು : ಲೇ. ಟಿ. ಮಹಾಬಲೇಶ್ವರ ಭಟ್ಟ
೪. ಅಣ್ಣತಂಗಿ : ಲೇ. ಟಿ. ಮಹಾಬಲೇಶ್ವರ ಭಟ್ಟ
೫. ನೆನಪುಗಳು : ಲೇ. ಟಿ. ಮಹಾಬಲೇಶ್ವರ ಭಟ್ಟ

# ಬಹುಮುಖ ವ್ಯಕ್ತಿತ್ವ

- ಡಿ. ನಾಗೇಂದ್ರಪ್ಪ

ನೀಳಮುಖ, ಕೆಂಪು ಮೈ ಬಣ್ಣ, ಸದಾ ಓರಣವಾದ ಬೈತಲೆ, ಹಸನ್ಮುಖಿ, ಅಡಿಯಿಂದ ಮುಡಿಯವರೆಗೆ ಶುದ್ಧ ಶುಭ್ರ ಖಾದಿ. ಕಪ್ಪು ಷೂ, ಸದಾ ಚಟುವಟಿಕೆಯಲ್ಲಿ ತೊಡಗಿಸಿಕೊಂಡವರು. ಹಾಕುವ ಬಟ್ಟೆ. ಎಸಗುವ ಕರ್ಮಗಳಲ್ಲಿ ಒಂದು ಬಗೆಯ ವಿಶೇಷ ಶಿಸ್ತು. ಅಚ್ಚು ಕಟ್ಟುತನವನ್ನೇ ಮೈಗೂಡಿಸಿಕೊಂಡ ವ್ಯಕ್ತಿತ್ವ. ಧರಿಸುವ ಬಟ್ಟೆಗಳು ಎಷ್ಟು ಶುಭ್ರ, ಸ್ವಚ್ಛವೋ ಅವರ ಆಂತರಿಕ ವ್ಯಕ್ತಿತ್ವ ಕೂಡ. ಅವರಲ್ಲಿ ಬೆಳೆದು ಬಂದ ಶಿಸ್ತು ಮತ್ತು ಸ್ವಚ್ಛತೆಯ ಜೊತೆ ಅವರೊಡನೆ ಸ್ಪರ್ಧಿಸುವುದು ಕಠಿಣ. ಅನ್ಯರಿಗೆ ಇದನ್ನು ಪಾಲಿಸಿಕೊಂಡು ಬರುವುದು ಕಷ್ಟ ಸಾಧ್ಯ. ರಾಜಕೀಯ, ಸಾಹಿತ್ಯ, ಕೃಷಿ, ವಾಣಿಜ್ಯೋದ್ಯಮ, ಹೀಗೆ ಹಲವು ಹತ್ತರಲ್ಲಿ ತಮ್ಮನ್ನು ತೊಡಗಿಸಿಕೊಂಡವರು. ಎಲ್ಲದರಲ್ಲೂ ತಮ್ಮ ಶಿಸ್ತಿನ ಮುದ್ರೆ ಒತ್ತಿದವರು, ಇವರೇ ಸಾಗರದ ಟಿ. ಮಹಾಬಲೇಶ್ವರ ಭಟ್ಟರು.

ಭಟ್ಟರ ಜೊತೆ ನನ್ನ ನೇರ ಸಂಬಂಧ ಐದು-ಆರು ವರ್ಷಗಳ ಹಿಂದಿನದು. ಆದರೆ ಪರೋಕ್ಷಸಂಬಂಧಕ್ಕೆ ಎರಡು ದಶಕಗಳ ಹಳಮೆ ಇದೆ. ನನ್ನ ನೆರೆಯ ತಾಲ್ಲೂಕಾದ ಸಾಗರದಲ್ಲಿಸಾಹಿತ್ಯ ಚಟುವಟಿಕೆಗಳನ್ನು ಗಮನಿಸುತ್ತಿದ್ದ ನನಗೆ ಅದರ ಹಿಂದಿನ ಶಕ್ತಿ ಭಟ್ಟರು, ಎಂಬುದನ್ನು ತಿಳಿದುಕೊಂಡಿದ್ದವನು. ಮೊದಲ ನೋಟದಲ್ಲಿಭಟ್ಟರನ್ನು ರಾಜಕೀಯ ವ್ಯಕ್ತಿಯೆಂದೇ ತಿಳಿದಿದ್ದ ನಾನು, ನಂತರದಲ್ಲಿ ಶ್ರೀಯುತರ ಬಹುಮುಖ ವ್ಯಕ್ತಿತ್ವನ್ನು ಗುರುತಿಸಿದ್ದೆ. ೧೯೯೨ರಲ್ಲಿಸಾಗರದ ಕಾಲೇಜಿನಲ್ಲಿಉಪನ್ಯಾಸಕನಾದ ನಾನು ತಾಲ್ಲೂಕು ಕ.ಸಾ.ಪ. ದ ಸಲಹಾ ಸಮಿತಿ ಸದಸ್ಯನಾದೆ. ಅಂದಿನಿಂದ ಭಟ್ಟರ ನನ್ನ ಸಂಪರ್ಕ-ಗಾಢವಾಗುತ್ತಾ, ಸಾಹಿತ್ಯ ಚಟುವಟಿಕೆ ಮುಖಾಂತರ ಆತ್ಮೀಯತೆ, ಬೆಸೆಯುತ್ತ ಬಂದಿದೆ.

ಭಟ್ಟರು ಹಾಸ್ಯ ಮಿಶ್ರಿತ ಗಂಭೀರ ಸ್ವಭಾವದವರು. ವಿನಯದ ಜೊತೆ ಸಜ್ಜನಿಕೆಯನ್ನು ಮೈಗೂಡಿಸಿಕೊಂಡವರು. ಸಮಯ ಬಂದರೆ ಕಠೋರತೆಯೂ ತಲೆ ಹಾಕೀತು. ಅವರ ಮುಂದಾಳತ್ವದಲ್ಲಿ ನಡೆಯುವ ಯಾವುದೇ ಕಾರ್ಯದಲ್ಲಿ ಅಚ್ಚುಕಟ್ಟುತನದ್ದೇ ಮುಂದಾಳತ್ವ. ವೇದಿಕೆಯಲ್ಲಿ ಬ್ಯಾನರ್ ಕಟ್ಟುವುದರಿಂದ ಹಿಡಿದು ಕುರ್ಚಿ ಜೋಡಿಸುವವವರೆಗೂ ಅವರದೇ ಕೈವಾಡ.

ಸಮಯ ಪ್ರಜ್ಞೆ ಅವರ ಮತ್ತೊಂದು ಗುಣ ವಿಶೇಷ ಯಾವುದೇ ಕೆಲಸವಿರಲಿ, ಪ್ರವಾಸವಿರಲಿ, ನಿಗದಿತ ಸಮಯಕ್ಕೆ ಹಾಜರು. ಯಾವುದೇ ಸಮಾರಂಭವಾಗಲಿ, ಐದು ನಿಮಿಷ ಹಿಂದೆ ಮುಂದೆ ಆದದ್ದೇ ದೊಡ್ಡ ಉದಾಹರಣೆ. ಸಮಾರಂಭಕ್ಕೆ ಅತಿಥಿಗಳು ಬರುವುದು ತಡವಾದಾಗಲೂ ಕಾಯದೆ ಕಾರ್ಯಕ್ರಮ ಪ್ರಾರಂಭಿಸಿದ ಉದಾಹರಣೆಗಳಿವೆ. ಆಮಂತ್ರಣ ಪತ್ರಿಕೆಯಲ್ಲಿ ಅಚ್ಚುಹಾಕಿಸಿದ ಸಮಯಕ್ಕೂ, ಕಾರ್ಯಕ್ರಮ ನಡೆಸುವ ಸಮಯಕ್ಕೂ ಯಾವುದೇ ಸಂಬಂಧವಿರದ ಈ ಕಾಲದಲ್ಲಿ ಭಟ್ಟರ ನೇತೃತ್ವದಲ್ಲಿನಡೆಯುವ ಕಾರ್ಯಕ್ರಮಗಳು ಅಪವಾದ.

ಭಟ್ಟರಿಗೀಗ ೭೦. ಹಾಗಂತ ಕಂದಾಚಾರಕ್ಕೆ ಕಟ್ಟುಬಿದ್ದವರಲ್ಲ. ಅನುಭವದ ಹಿರಿಮೆಯ ಜೊತೆ ವೈಚಾರಿಕತೆಯನ್ನು ಮೈಗೂಡಿಸಿಕೊಂಡವರು. ಹೊಸ ರೀತಿಯಲ್ಲಿ ಆಲೋಚಿಸುವುದು, ಹೊಸದಾಗಿ ಏನನ್ನಾದರೂ ಮಾಡುವುದು ಅವರಲ್ಲಿರುವ ಮತ್ತೊಂದು ವಿಶೇಷ ಗುಣ. ಸಂಪ್ರದಾಯಕ್ಕೆ ಕಟ್ಟೂ ಬೀಳದ, ಶರಣೂ ಹೊಡೆಯದ ಪ್ರವೃತ್ತಿ. 'ಸಾಹಿತ್ಯ ಸಾಗರ' ಕವನ ಸಂಕಲನದ ಬಿಡುಗಡೆಯ ಸಂದರ್ಭದಲ್ಲಿ ಅವರು ಹೇಳಿದ್ದು ಹೀಗೆ – 'ನೋಡಿ, ಎಲ್ಲರ ಹಾಗೆ ಹತ್ತು ಪುಸ್ತಕಗಳನ್ನು ಬಣ್ಣದ ಕಾಗದಲ್ಲಿ ಸುತ್ತಿ ಟೇಪು ಕಟ್ಟಿಟ್ಟು ಬಿಡುಗಡೆಗೊಳಿಸುವುದು ಏನು ಚಂದ ? ಯಾವುದಾದರೂ ಹೊಸ ರೀತಿಯಲ್ಲಿಪುಸ್ತಕ ಬಿಡುಗಡೆಗೆ ಗೊಳಿಸಬೇಕ್ರಿ.' ಈ ಬಗ್ಗೆ ಅನೇಕರ ಸಲಹೆಯನ್ನು ಕೇಳಿದರು. ಯಾರ ಸಲಹೆಯೂ ಅವರಿಗೆ ಹಿಡಿಸಲಿಲ್ಲವೋ ಏನೋ, ಪುಸ್ತಕ ಬಿಡುಗಡೆಗೆ ಎರಡು ದಿನ ಮುಂಚೆ, ತಮ್ಮದೇ ಆದ ರೀತಿಯಲ್ಲಿ ಅರ್ಧರಾತ್ರಿಯವರೆಗೂ ಕೂತು ಮಾಡಿದ ಹೊಸ ವ್ಯವಸ್ಥೆಯನ್ನು ನಮ್ಮ ಮುಂದಿಟ್ಟು ರಿಹರ್ಸಲ್ ಮಾಡಿ ತೋರಿಸಿ, ನಮ್ಮ ಒಪ್ಪಿಗೆ ಕೇಳಿದರು. ನಮಗೆ ತಿಳಿಯದೆ ನಾವು ಒಪ್ಪಿಗೆ ಕೊಟ್ಟುಬಿಟ್ಟಿದ್ದೆವು.

ಉದಾರತೆ, ಭಟ್ಟರಲ್ಲಿ ಮೈವೆತ್ತಿಕೊಂಡು ಬಂದ ಮತ್ತೊಂದು ಗುಣ. ಅವರಲ್ಲಿ ಈ ವಿಶೇಷ ಗುಣ ಬೆಳೆಯುವುದಕ್ಕೆ ಕಾರಣವೂ ಇದೆ. ಭಟ್ಟರು ಹುಟ್ಟಿದ್ದು ಬೆಳ್ಳಿ ಚಮಚವನ್ನು ಬಾಯಲ್ಲಿಟ್ಟುಕೊಂಡಲ್ಲ. ಕಡು ಬಡತನದಲ್ಲಿ, ಕನಿಷ್ಟ ಸ್ಥಿತಿಯಿಂದ ಗರಿಷ್ಠ ಸ್ಥಿತಿಗೇರಿದ ಕಾಯಕ ಜೀವಿ. ಅನೇಕ ರಂಗಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರೂ, ಕೃಷಿಯೇ ಇವರ ಮುಖ್ಯ ಕಸುಬು. ಏಕಾಂಗಿಯಾಗಿ ಈ ಕ್ಷೇತ್ರದಲ್ಲಿ ಸಾಧಿಸಿದ ಸಾಧನೆ ಬೆರುಗೊಳಿಸುವಂಥದ್ದು. ಮೊರಡಿ ಕಡಿದು ಮಹಲು ಕಟ್ಟಿದವರು. ಬಂಜರನ್ನು ಹಸಿರನ್ನಾಗಿಸಿದವರು. ಇವರ ಹೊಲಗದ್ದೆ,ತೋಟಗಳನ್ನು ನೋಡಿದವರಿಗೆ ಅನಿಸುವುದು ಹೀಗೆ. ಭಟ್ಟರ ಶಿಸ್ತು, ಸ್ವಚ್ಛತೆ ಇಲ್ಲಿಯೂ ಕೆಲಸ ಮಾಡಿದೆ ಎಂಬುದು. ಆತಿಥ್ಯಕ್ಕೆ ಮಲೆನಾಡು ಪ್ರಸಿದ್ಧಿ, ಆದರೆ ಇತ್ತೀಚಿಗೆ ಈ ಮಾತು ಪೂರ್ಣ ಸತ್ಯವಲ್ಲ. ಭಟ್ಟರು ಮಾತ್ರಾ ಹಳೆಯ ಸಂಪ್ರದಾಯವನ್ನೇ ಬೆಳಸಿಕೊಂಡು ಬಂದಿದ್ದಾರೆ. ಭಟ್ಟರ ಸಾಹಿತ್ಯ ಊಳಿಗಕ್ಕೆಬಂದ ಯಾವ ಸಾಹಿತಿ ಇರಲಿ, ಕಲಾವಿದರಿರಲಿ, ಭಟ್ಟರ ಆತಿಥ್ಯ ನಡೆಯಲೇಬೇಕು. ಇದಕ್ಕೆ ತುಂಬು ಸಹಕಾರ

ಅವರ ಪತ್ನಿ ಪದ್ಮಾವತಮ್ಮನವರದು. ದಾಸೋಹದ ಸಂದರ್ಭದಲ್ಲಿ ಮದುವೆಯ ಸಂಭ್ರಮ, ಕುಟುಂಬದ ಸದಸ್ಯರೆಲ್ಲರ ದುಡಿಮೆ.

ಭಟ್ಟರು ಕೇವಲ ಕೃಷಿಕರಾಗಿ ಬದುಕಿದ್ದರೆ, ಹತ್ತರಲ್ಲಿ ಒಬ್ಬರಾಗಿರುತ್ತಿದ್ದರು. ಸೀಮಿತ ಪರಿಧಿಯಲ್ಲಿ ಅವರ ಬದುಕು ಸಾಗುತ್ತಿತ್ತು. ಅವರೆ ಭಟ್ಟರ ಹೆಸರು ರಾಜ್ಯ ವ್ಯಾಪಿ ಹರಡಿರುವುದು ಅವರು ಮಾಡುತ್ತಿರುವ ಸಾಹಿತ್ಯ ಪರಿಚಾರಿಕೆಯಿಂದ, ಸ್ವತಃ ಸಾಹಿತಿಗಳಾದುದರಿಂದ, ಸಾಹಿತಿಗಳ ನಿಕಟಸಂಪರ್ಕ ಬೆಳೆಸಿಕೊಂಡಿರುವುದರಿಂದ. ಭಟ್ಟರು ಸಾಹಿತ್ಯಾಭಿರುಚಿಯನ್ನು ವಿದ್ಯಾರ್ಥಿ ದೆಸೆಯಿಂದಲೇ ಬೆಳಸಿಕೊಂಡವರು. ೧೯೪೭ರಲ್ಲಿಯೇ 'ಜಲಂಧರ' ಪ್ರಕಟನಾಲಯ ಪ್ರಾರಂಭಿಸಿ, ಪುಸ್ತಕ ಮಾರಾಟ ಮಳಿಗೆ ತೆಗೆದರು. ಅಂದಿನಿಂದ ಆರಂಭವಾದ ಸಾಹಿತ್ಯಾಸಕ್ತಿ, ಸಾಹಿತಿಗಳ ಒಡನಾಟ, ಸಾಹಿತ್ಯ ಸಂಪರ್ಕವನ್ನು, ನಿರಂತರವಾಗಿ ಇಂದಿನವರೆಗೂ ಬೆಳಸಿಕೊಂಡು ಬಂದಿದ್ದಾರೆ. ಪ್ರಕಟಣಾಲಯದಿಂದ ಸಾಹಿತಿಗಳ ಒಡನಾಟ ಬೆಳೆಯಿತು. ಸಾಗರ ಜಗತ್ಪ್ರಸಿದ್ಧ ಜೋಗದ ಹತ್ತಿರವಿರುವುದರಿಂದ, ಅಲ್ಲಿಗೆ ಭೇಟಿಕೊಡುವ ಸಾಹಿತಿಗಳ ಪರಿಚಯವಾಯಿತು. ಪರಿಚಯ ಸ್ನೇಹವಾಗಿ ಬಲಿಯಿತು. ಇದರ ಫಲವೆಂದರೆ, ಪ್ರವಾಸಕ್ಕೆ ಬಂದ ಸಾಹಿತಿಗಳಿಂದ ಸಾಗರದಲ್ಲಿ ಉಪನ್ಯಾಸಗಳನ್ನೇರ್ಪಡಿಸುವುದು. ಹೀಗೆ ಹಿರಿಯ ಕಿರಿಯ ಸಾಹಿತಿಗಳನ್ನು ಈ ಪ್ರಾಂತ್ಯಕ್ಕೆ ಪರಿಚಯಿಸಿದರು. ೧೯೬೮ರಲ್ಲಿಯೇ ಕನ್ನಡ ಸಂಘವನ್ನು ಬಲಿಸಿ, ಅದರ ಅಧ್ಯಕ್ಷರಾಗಿ ಸುಮಾರು ೮ ವರ್ಷಗಳ ಕಾಲ ಅದರ ಸಾರಥ್ಯವಹಿಸಿದರು. ಸಾಗರ ತಾಲೂಕು ಕನ್ನಡಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಅಂದಿನಿಂದ ಇಂದಿನವರೆಗೂ ನಿರಂತರವಾಗಿ ಮುನ್ನಡೆಸಿಕೊಂಡು ಬರುತ್ತಿದ್ದಾರೆ. ಭಟ್ಟರು ಪರಿಷತ್ತಿನ ಸಂಬಂಧ ಕಳಚಿಕೊಂಡರೆ ಪರಿಷತ್ತು ಬಡವಾಗಬಹುದು ಎಂಬುದನ್ನು ಅವರ ವೈರಿಗಳೂ ಒಪ್ಪುತ್ತಾರೆ.

ಭಟ್ಟರು ಸಾಗರದಲ್ಲಿ ಕನ್ನಡಸಂಘ, ಕನ್ನಡ ಸಾಹಿತ್ಯ ಪರಿಷತ್ತಿನ ಸಾರಥ್ಯ ವಹಿಸಿಕೊಂಡು ಅದನ್ನುಸ್ಥಾವರಗೊಳಿಸಲಿಲ್ಲ, ಜಂಗಮವನ್ನಾಗಿಸಿದರು. ಸಾಹಿತ್ಯಾಸಕ್ತರನ್ನು ಬೆಳೆಸಿದರು. ಮನೆಮನೆಗೂ ಹೋಗಿ ಪರಿಷತ್ತಿಗೆ ಸದಸ್ಯರನ್ನಾಗಿಸಿದರು. ಆಂದೋಲನದ ರೀತಿಯಲ್ಲಿ ಈ ಪ್ರಾಂತ್ಯದಲ್ಲಿ ಪ್ರವಾಸಮಾಡಿ ಆಜೀವ ಸದಸ್ಯತ್ವದಿಂದ ಸಾಹಿತ್ಯ ಪರಿಷತ್ತಿನ ಕಣಜ ತುಂಬಿದರು. ಜಿಲ್ಲಾ ಸಾಹಿತ್ಯಸಮ್ಮೇಳನ ಏರ್ಪಡಿಸಿ ಸೈ ಎನಿಸಿಕೊಂಡರು. ಕವಿಗೋಷ್ಠಿ, ವಿಚಾರ ಸಂಕಿರಣಗಳು, ಉಪನ್ಯಾಸ ಮಾಲೆ, ಸಾಹಿತ್ಯ ಪ್ರಸಾರ, ಪುಸ್ತಕ ಪ್ರಕಟಣೆ, ಬಿಡುಗಡೆ, ಪ್ರದರ್ಶನ, ಮಾರಾಟ ಮುಂತಾದ ಹಲವು ಹತ್ತುಸಾಹಿತ್ಯ ಪರಿಚಾರಿಕೆಯಲ್ಲಿ ತಮ್ಮನ್ನು ತೊಡಗಿಸಿಕೊಂಡವರು.

ಸ್ಥಳೀಯ ಸಂಪನ್ಮೂಲದಿಂದ ತಾಲ್ಲೂಕು ಸಾಹಿತ್ಯ ಪರಿಷತ್ತು ತನ್ನ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಅನುಮತಿ ಸಿಕ್ಕ ಮೇಲೆ ಸಾಗರ ತಾಲ್ಲೂಕು ಪರಿಷತ್ತಿಗೆ ಗರಿ ಮೂಡಿದೆ. ಮಲೆನಾಡಿನ ಮಡಿಲಲ್ಲಿರುವ ಸಾಗರ ಹಾಗೂ ಸುತ್ತ ಮುತ್ತಲಿನ ಜನ ಬುದ್ಧಿ ಜೀವಿಗಳು, ಹಾಗೂ ಸಾಹಿತ್ಯ ಪ್ರೇಮಿಗಳು. ಇಂತಹ ಸುಸಂಸ್ಕೃತ ನಾಡಿನ ಜನಗಳ ಆರ್ಥಿಕ ಸಹಕಾರದಿಂದ ಭಟ್ಟರು ಪರಿಷತ್ತನ್ನು ಆರ್ಥಿಕವಾಗಿ ಸದೃಢಗೊಳಿಸಿದರು. ಆರೋಗ್ಯವಂತ ಮಗು ಸದಾ ಚಟುವಟಿಕೆಯಿಂದಿರುವಂತೆ, ಸಂಪನ್ಮೂಲ ರೂಢಿಸಿಕೊಂಡ ಪರಿಷತ್ತು, ನಿರಂತರ ಚಟುವಟಿಕೆಗಳಿಂದ ಸಾಹಿತ್ಯಾಸಕ್ತರನ್ನು ತೃಪ್ತಿಗೊಳಿಸಿದೆ. ಈ ಯಶಸ್ಸಿನ ಹಿಂದೆ ಭಟ್ಟರ ಸುಮಾರು ೫೦ ವರ್ಷಗಳ ಅನುಭವವಿದೆ. ಇವರ ಅಧ್ಯಕ್ಷಾವಧಿಯಲ್ಲಿ ಪರಿಷತ್ತುಹಮ್ಮಿಕೊಂಡ ಕಾರ್ಯಕ್ರಮಗಳು ಇಡೀ ರಾಜ್ಯಕ್ಕೇ ಮಾದರಿಯಾಗಿ ಮೂಡಿ ಬಂದ ಕಾಲವೆಂದರೆ, ೧೯೯೨ ರಿಂದೀಚಿಗೆ. ೧೯೯೨ರಲ್ಲಿ ಪ್ರಜಾಪ್ರಭುತ್ವ ಮಾದರಿಯಲ್ಲಿ ಆಯ್ಕೆಗೊಂಡ ಕಾರ್ಯಕಾರಿ ಸಮಿತಿಯ ಅಧ್ಯಕ್ಷತೆಯ ಹೊಣೆ ಹೊತ್ತವರು ಶ್ರೀ ಮಹಾಬಲೇಶ್ವರ ಭಟ್ಟರು. ಈ ಅವಧಿಯಲ್ಲಿತಾ.ಕ.ಸಾ.ಪ. ಸ್ವತಂತ್ರವಾಗಿ, ಹಾಗೂ ಇತರ ಸಂಘ ಸಂಸ್ಥೆಗಳ ನೆರವಿನೊಂದಿಗೆ ನೆಡೆಸಿದ ಸಾಹಿತ್ಯ ಚಟುವಟಿಕೆಗಳು ನೆನಪಿನಾಳದಲ್ಲಿ ನೆಲೆನಿಲ್ಲುವಂಥವು. ಇವುಗಳಲ್ಲಿ ಕಳಸ ಪ್ರಾಯವಾದ ಕಾರ್ಯಕ್ರಮವೆಂದರೆ. 'ಇಕ್ಕೇರಿ ' ಸಂಗೀತ ನೃತ್ಯ ಮಹೋತ್ಸವ' ರಾಷ್ಟ್ರದ ಪ್ರತಿಷ್ಠಿತ ಸಂಸ್ಥೆಗಳೊಡನೆ ಒಂದು ತಾಲ್ಲೂಕು ಮಟ್ಟದ ಪರಿಷತ್ತು ಸಹಯೋಗ ಹೊಂದಿ ನಾಲ್ಕುದಿನಗಳವರೆಗೆ ಯಶಸ್ವಿಯಾಗಿ ಕಾರ್ಯಕ್ರಮ ನಡೆಸಿತು - ಎಂದರೆ, ಸುಲಭದ ಮಾತಲ್ಲ. ಎರಡನೆಯದು ಪುಸ್ತಕ ಪ್ರದರ್ಶನ ಮತ್ತು ಮಾರಾಟ. ಸಂಪ್ರದಾಯದಂತೆ ಕನ್ನಡ ಧ್ವಜ ಹಾರಿಸಿ, ಭಾಷಣ ಬಿಗಿದು, ಸಿಹಿ ತಿಂದು ಮುಗಿಸುವ ಡಂಬಾಚಾರದ ರಾಜ್ಯೋತ್ಸವ ಆಚರಿಸದೆ, ನಿಜವಾದ ಸಾಹಿತ್ಯ ಸೇವೆಗೆ ತೊಡಗಿಸಿಕೊಂಡಿದ್ದು. ರಾಜ್ಯದಾದ್ಯಂತ ಇರುವ ಪ್ರಮುಖ ಪ್ರಕಾಶನದಿಂದ ಪುಸ್ತಕಗಳನ್ನು ಸಂಗ್ರಹಿಸಿ, ಸೂಕ್ತ ಪ್ರಚಾರ ನೀಡಿ, ಮಾರಾಟ ಮಾಡಿದ್ದು. ೧೯೯೪ರಲ್ಲಿ ೪೦,೩೦೦ ರೂ.ಗಳ ದಾಖಲೆ ಮಾರಾಟದ ವಿಷಯವನ್ನು ಅಂದಿನ ಅಧ್ಯಕ್ಷರಾದ ಗೊ.ರು.ಚ. ಅವರಿಗೆ ದೂರವಾಣಿಯಲ್ಲಿ ಭಟ್ಟರು ತಿಳಿಸಿದಾಗ ಗೊ.ರು.ಚ. 'ತಮಾಷೆ ಮಾಡಬೇಡಿ'. ಎಂದರಂತೆ. ಇದರ ಹಿಂದಿನ ಶಕ್ತಿ ಮಹಾಬಲೇಶ್ವರ ಭಟ್ಟರು ಎಂದು ಬೇರೆ ಹೇಳಬೇಕೆ ?

ಮೂರನೆಯದಾಗಿ ಈ ಅವಧಿಯಲ್ಲಿ ಪರಿಷತ್ತು ಮಾಡಿದ ಇನ್ನೊಂದು ಶಿಖರ ಪ್ರಾಯವಾದ ಕೆಲಸವೆಂದರೆ 'ಕಾವ್ಯಸಾಗರ' ಕವನ ಸಂಕಲನವನ್ನು ಪ್ರಕಟಿಸಿದ್ದು. ಈ ಮಹತ್ಕಾರ್ಯದಲ್ಲಿ ನನ್ನನ್ನು ಸಂಪಾದಕನನ್ನಾಗಿ ಕಾರ್ಯನಿರ್ವಹಿಸಲು ಅವಕಾಶ ನೀಡಿದರು. ಇದು ಭಟ್ಟರು ನನ್ನ ಮೇಲೆ ಇಟ್ಟಿರುವ ವಿಶ್ವಾಸದ ದ್ಯೋತಕ ಎಂದು

ತೀಳಿದುಕೊಂಡಿದ್ದೇನೆ. ತಾಲೂಕಿನ ಹಿರಿಯ ಕಿರಿಯ ಕವಿಗಳ ಕವನಗಳನ್ನು ಸಂಗ್ರಹಿಸಿ ಒಂದು ಸಂಕಲನ ಹೊರತರುವ ಭಟ್ಟರ ಬಹುದಿನಗಳ ಕನಸು ಒಂದು ಕಾರ್ಯಕಾರಿ ಸಮಿತಿಯಲ್ಲಿ ನನಸಾಯಿತು. ಆದರೆ ಹಣ ? ಅದರಲ್ಲೂ ಸದಸ್ಯತ್ವದಿಂದ ಬಂದ ಹಣವನ್ನು ಪ್ರಕಟಣೆಗೆ ಖರ್ಚುಮಾಡಬಾರದೆಂಬುದು ಭಟ್ಟರ ತೀರ್ಮಾನ. ನನಗೆ ಸಂಶಯ 'ಸಾರ್ ಪ್ರಕಟಣೆಗೆ ಕನಿಷ್ಠ ೧೫ ರಿಂದ ೨೦ ಸಾವಿರ ರೂ.ಗಳಾದರೂ ಬೇಕು. ಇಷ್ಟು ದೊಡ್ಡ ಮೊತ್ತದ ಹಣ ಸಂಗ್ರಹ ಸುಲಭದ ಮಾತಲ್ಲ' ಎಂದು ಆತಂಕ ವ್ಯಕ್ತಪಡಿಸಿದೆ. ಅದಕ್ಕೆ ಭಟ್ಟರು - 'ಅದು ಹೇಗೋ ಆಗುತ್ತದೆ, ಮೊದಲು ಸಂಪಾದನ ಕಾರ್ಯ ಪ್ರಾರಂಭಿಸಿರಿ.' ಎಂದು ಸುಲಭವಾಗಿ ಹೇಳಿಬಿಟ್ಟರು. ಸಂಪಾದನ ಕಾರ್ಯ ಪ್ರಗತಿಯಲ್ಲಿತ್ತು. ಒಂದು ದಿನ ಭಟ್ಟರು ನನ್ನ ಮನೆಗೆ ಬಂದು, ನಾಳೆ ಬೆಳಿಗ್ಗೆ ಪುಸ್ತಕ ಪ್ರಕಟಣೆಗೆ ಹಣ ಸಂಗ್ರಹಕ್ಕೆ ಹೋಗೋಣ ಸಿದ್ಧವಾಗಿರಿ, ಎಂದು ಹೇಳಿ ಹೋದರು. ಭಟ್ಟರು ಹೋದ ಮೇಲೆ ನಾನು ಲೆಕ್ಕಾಚಾರ ಹಾಕುತ್ತಾ ಕುಳಿತೆ. ಇಂಥ ಕೆಲಸಕ್ಕೆ, ಅದೂ ಸಾಹಿತ್ಯಾಸಕ್ತರನ್ನು ಹುಡುಕಿ, ಬಹಳ ಎಂದರೆ ಒಬ್ಬರಿಂದ ನೂರು ರೂ. ಚಂದಾ ಸಂಗ್ರಹಿಸಬಹುದು. ಒಂದು ನೂರು ಜನರನ್ನು ಸಂಪರ್ಕಿಸಿ, ಅಷ್ಟೂ ಗಟ್ಟಿಯಾದಲ್ಲಿ ೧೦ ಸಾವಿರ, ಇವರಂತೆ ಸುಮಾರು ೨೦೦ ಜನರನ್ನು ಸಂಪರ್ಕಿಸಬೇಕು. ಇದಕ್ಕೆ ಕನಿಷ್ಠ ಎಂಟು, ಹತ್ತು ದಿನಗಳಾದರೂ ಬೇಕು - ಎಂದು ಏನೇನೋ ಆಲೋಚಿಸಿದ್ದೆ.

ಮಾರನೆಯ ದಿನ ಹಣ ಸಂಗ್ರಹಣೆಗೆ ಸಾಗರ ಬಿಟ್ಟಾಗ ೮.೩೦, ವಾಪಸ್ಸು ಬಂದಾಗ ೧.೦೦ ಗಂಟೆ, ಹಣ ಸಂಗ್ರಹಣೆ ಸುಮಾರು ೧೨ ಸಾವಿರಕ್ಕೂಹೆಚ್ಚು. ಇದು ಭಟ್ಟರ ಪವಾಡ. ದಾನಿಗಳು ಭಟ್ಟರನ್ನು ನಂಬಿ ಸಾವಿರಗಟ್ಟಲೇ ಕೊಟ್ಟರು. ನಂಬಿಕೆಯನ್ನು ಭಟ್ಟರು ಹುಸಿಗೊಳಿಸಲಿಲ್ಲ. 'ಕಾವ್ಯ ಸಾಗರ' ಭಟ್ಟರ ಇಚ್ಛೆಯಂತೆ ಅವಧಿ ಪೂರ್ವದಲ್ಲಿ ನಿರೀಕ್ಷೆಗಿಂತ ಉತ್ತಮವಾಗಿ ಬಿಡುಗಡೆಯಾಯಿತು. ಜಿ.ಎಸ್.ಎಸ್.ರವರ ಮುನ್ನುಡಿ, ಗೊ.ರು.ಚ. ಅವರ ಹಿನ್ನುಡಿ, ಕಲಾವಿದ ಶ್ರೀ ಚಂದ್ರನಾಥ ಅವರ ಆಕರ್ಷಕ ಮುಖ ಪುಟದೊಂದಿಗೆ, 'ಕಾವ್ಯಸಾಗರ' ಹೊರಬಂದಾಗ ಭಟ್ಟರ ಮುಖದಲ್ಲಿ ಏನನ್ನೋ ಸಾಧಿಸಿದ ಹಿರಿಮೆ ಮೆರೆಯುತ್ತಿತ್ತು.

ಟಿ. ಮಹಾಬಲೇಶ್ವರ ಭಟ್ಟರು ಹಲವು ಕೃತಿಗಳನ್ನು ಸಾಹಿತ್ಯಲೋಕಕ್ಕೆ ನೀಡಿದ್ದಾರೆ. ಈ ಕೃತಿಗಳನ್ನು ಸಾಹಿತ್ಯದ ಎಲ್ಲಾ ಪ್ರಕಾರಗಳನ್ನು ಬಳಸಿ ರಚಿಸಿದ್ದಾರೆ. ಅಪೂರ್ವ ಸಾಹಿತ್ಯ ಗ್ರಂಥಗಳ, ಸಾಹಿತಿಗಳ ಭಾವಚಿತ್ರಗಳ ಸಂಗ್ರಹಗಳನ್ನು ಸಂಗ್ರಹಿಸಿದ್ದಾರೆ. ಒಮ್ಮೊಮ್ಮೆ ಅವುಗಳನ್ನು ಮೊಗಚಿ ಹಾಕುತ್ತ ಗತಕಾಲದ ಸಾಹಿತ್ಯ ಪರಿಚಾರಿಕೆಯನ್ನು ಸ್ಮರಿಸಿಕೊಂಡು ಆನಂದ ತುಂದಿಲರಾಗುತ್ತಾರೆ. ಭಟ್ಟರು ಶ್ರೇಷ್ಠ ಸಾಹಿತಿಗಳ ಸಾಲಿಗೆ ಸೇರದಿರಬಹುದು, ಆದರೆ ಶ್ರೇಷ್ಠ ಸಾಹಿತ್ಯ ಪ್ರೇಮಿಗಳಂತೂ ಹೌದು.

# ಸಾರ್ವಜನಿಕ ಸೇವಕ

- ಪ್ರೇಮಾಭಟ್

ಬಹಳ ವರ್ಷಗಳ ಹಿಂದೆ, ಸುಮಾರು ಮೂವತ್ತು ವರ್ಷಗಳಾಗಿರಬಹುದು, ನಾವು ಮಲ್ಲೇಶ್ವರದಲ್ಲಿ ಸಣ್ಣ ಬಾಡಿಗೆ ಮನೆಯೊಂದರಲ್ಲಿದ್ದಾಗ ಮಾನ್ಯಶ್ರೀ ಮಹಾಬಲೇಶ್ವರ ಭಟ್ಟರು, ನನ್ನದೊಂದು ಕೃತಿಯನ್ನು ತಮ್ಮ 'ಜಲಂಧರ' ಪ್ರಕಾಶನದಲ್ಲಿ ಹೊರತರುವ ಉದ್ದೇಶ ಹೊತ್ತು ಬಂದಿದ್ದರು. ಅಲ್ಲಿಂದಾಚೆಗೆ ಅವರನ್ನು ನೋಡುವ ಅವಕಾಶ ಸಿಕ್ಕಿದ್ದು, ಹೆಚ್ಚೆಂದರೆ ಒಂದೆರಡು ಬಾರಿ ಸಭೆ ಸಮಾರಂಭಗಳಲ್ಲಿ. ಈಗ ಅವರಿಗೆ ೭೦ ವರ್ಷ. ೭೦ ವರ್ಷಕ್ಕೆ ಪಾದಾರ್ಪಣ ಮಾಡುತ್ತಿರುವ ಇವರಿಗೆ ಅಭಿನಂದನ ಗ್ರಂಥ ಅರ್ಪಿಸುತ್ತಿರುವುದು ಸಂತೋಷದ ವಿಷಯ. ಇವರನ್ನು ಮೊನ್ನೆ ಮೊನ್ನೆ ಕಳೆದ ವರ್ಷ ನೋಡುವ ಅವಕಾಶ ಸಿಕ್ಕಿತ್ತು. ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಕಾರಿ ಸಮಿತಿ ಸಭೆ ಶಿವಮೊಗ್ಗದಲ್ಲಿ ನಡೆದ ಸಂದರ್ಭ. ಅಲ್ಲಿಗೆ ಅವರು ಬಂದಿದ್ದರು.

ಮೂವತ್ತು ವರ್ಷದ ಹಿಂದೆ ಅವರ ಮುಖದಲ್ಲಿ ಲಾಸ್ಯವಾಡುತ್ತಿದ್ದ ತಿಳಿನಗು ಈ ಇಳಿ ವಯಸ್ಸಲ್ಲೂ ಮಾಸಿಲ್ಲ ಎಂದಾಗ, ಅವರ ಆರೋಗ್ಯದ ರಹಸ್ಯ ಇದರಲ್ಲೇ ಅಡಗಿದೆ ಎನಿಸಿತು. ಆಗಿನ ಆ ಲವಲವಿಕೆ ಈಗಲೂ ಅವರಲ್ಲಿದೆ, ಎನ್ನುವುದಕ್ಕೆ, ಅವರ ಶುಭ್ರವಾದ ಮಡಿ ಮಡಿ ಉಡುಗೆ, ಅದನ್ನು ಧರಿಸುವಲ್ಲಿ ಅವರಿಗಿರುವ ಶಿಸ್ತು, ಎಷ್ಟುಹೊತ್ತಾದರೂ ಸುಕ್ಕುಗಟ್ಟದಂತೆ ಕಾಪಾಡಿಕೊಳ್ಳುವುದರಲ್ಲಿ ಎಚ್ಚರ, ಕಂಡಾಗ ಅಚ್ಚರಿ. ನಮ್ಮಲ್ಲಿ ಎಷ್ಟೋ ಮಂದಿಗೆ ೫೦ರ ಅಂಚನ್ನು ಸಮೀಪಿಸಿದೊಡನೆ ಚಡಪಡಿಕೆ ಪ್ರಾರಂಭವಾಗುತ್ತದೆ. ತಾವಾಗೇ ಮುಪ್ಪನ್ನು ಆಹ್ವಾನಿಸುತ್ತಾರೆ. ಸದಾ ಕ್ರಿಯಾಶೀಲರಾದವರಿಗೆ ಮುಪ್ಪು ಎಂಬುದೇ ಇರುವುದಿಲ್ಲ. ಅದು ಅವರ ಹತ್ತಿರವೂ ಸುಳಿಯುವುದಿಲ್ಲ. ಭಟ್ಟರದು ಸದಾ ಚಟುವಟಿಕೆಯಲ್ಲಿರುವ ಸ್ವಭಾವ ಎಂದು ಅವರಕಾರ್ಯ ಚಟುವಟಿಕೆಯ ಪಟ್ಟಿಯನ್ನು ಗಮನಿಸಿದಾಗ ಅರ್ಥವಾಗುತ್ತದೆ. ಆದ್ದರಿಂದಲೇ ಈ ಇಳಿ ವಯಸ್ಸಿನಲ್ಲೂ ಅವರ ಮುಖ ಸುಕ್ಕುಗಟ್ಟಿಲ್ಲ.

ಶ್ರೀ ಮಹಾಬಲೇಶ್ವರ ಭಟ್ಟರು ಸಾಹಿತ್ಯಿಕವಾಗಿ, ರಾಜಕೀಯವಾಗಿ, ತಮ್ಮನ್ನು ದುಡಿಸಿಕೊಂಡವರು. ಸಮಾಜ ಸೇವೆಯಲ್ಲಿ ವಿವಿಧ ಕ್ಷೇತ್ರದ ಅನುಭವ. ಬಹುಜನರೊಡನಾಟದಿಂದ ದಟ್ಟವಾದ ಅನುಭವ. ಇದೇ ಅವರಿಗೆ ಸಾಹಿತಿಯಾಗಲು

ಬೀಜಾಂಕುರವಾಗಿರಬಹುದು. ಎಷ್ಟೇ ಅಧ್ಯಯನ ಮಾಡಿರಲಿ ಅನುಭವದ ಆಳ ಹರವು ಇಲ್ಲದೆ ಹೋದರೆ, ಸಾಹಿತ್ಯ ಸತ್ವರಹಿತ ಬದುಕು ಎನಿಸಿಕೊಳ್ಳುತ್ತದೆ. ಅವರ ವಿಸ್ತಾರವಾದ ಅನುಭವದಲ್ಲಿ ಅಗೆದಷ್ಟು ಸಿಕ್ಕಿದ ದ್ರವ್ಯಗಳು ಕೃತಿಗಳಾದುವು. ಬದುಕನ್ನು ಸುಂದರ ಅಚ್ಚುಕಟ್ಟಿನೊಳಗೆ ರೂಪಿಸಿಕೊಂಡಿದ್ದರಿಂದ ನೆಮ್ಮದಿಯ ಜೀವನ. ಇದರಿಂದಲೇ ಇರಬಹುದು ಕಟ್ಟಿಟ್ಟಿದ್ದಕ್ಕಿಂತ ಕೊಟ್ಟಿದ್ದು ಬಹಳ. ಕೇಳಿದ್ದೇನೆ ಹೆರವರ ಬಾಯಿಂದ ಉದಾರಿಗಳೆಂಬ ಸೊಲ್ಲನ್ನು. ಅವರ ಮನೆಗೆ ಹೋಗುವ ಅವಕಾಶ ನನಗೆ ಸಿಕ್ಕಿಲ್ಲ. ಹತ್ತಿರದಿಂದ ಕಂಡಿದ್ದೇನೆ, ಮಾತನಾಡಿದ್ದೇನೆ. ಅವರ ಸಜ್ಜನಿಕೆಯನ್ನು ನೋಡಿದ್ದೇನೆ ಎಂದೇ, ಅವರಿಗೆ ಅರ್ಪಿಸಲಿರುವ ಅಭಿನಂದನ ಗ್ರಂಥಕ್ಕೆ ನನ್ನೆರಡು ನುಡಿಯನ್ನು ಸೇರಿಸಿದ್ದೇನೆ.

ಭಟ್ಟರು ಹುಟ್ಟಿದ್ದು ತೊರೆಮನೆಯಲ್ಲಿ. ಹೆಣ್ಣು ಮಕ್ಕಳಾದರೆ ಹುಟ್ಟಿದ ಮನೆಯನ್ನು ತೊರೆಯದೆ ವಿಧಿಯಿಲ್ಲ. ಒಂದು ಅರ್ಥದಲ್ಲಿ ಭಟ್ಟರು ಮನೆತೊರೆದು ಜಗತ್ತಿಗೆ ತಮ್ಮನ್ನು ಹಂಚಿಕೊಂಡರು. ಅವರು ಸಮಾಜ ಸೇವಾಕರ್ತರಾಗಿ ದುಡಿದದ್ದನ್ನು ಅವಲೋಕಿಸಿದಾಗ ತಿಳಿಯುತ್ತದೆ. ಅವರದ್ದು ಗಮನಾರ್ಹವಾದ ಸೇವೆ. ಅಖಿಲ ಭಾರತ ಕಾಂಗ್ರೆಸ್ ಪಕ್ಷದ ಪ್ರಾಥಮಿಕ ಹಾಗೂ ಸಕ್ರಿಯ ಸದಸ್ಯರಾಗಿ ೪೩ ವರ್ಷಗಳ ಕಾಲ. ಅದರಲ್ಲೂ ಒಂದೇ ಪಕ್ಷದಲ್ಲಿ ಸೇವೆಸಲ್ಲಿಸುವುದು ಸುಲಭದ ಮಾತೇನೂ ಅಲ್ಲ. ಉತ್ಸಾಹ ಒಂದೇ ಇದ್ದರೆ ಸಾಲದು, ಕ್ರಿಯಾಶೀಲತೆ, ಪ್ರಾಮಾಣಿಕತೆ, ಶ್ರದ್ಧೆ ಎಲ್ಲವೂ ಇದ್ದಾಗ ಮಾತ್ರ ಸಾಧ್ಯ. ಹಾಗೇ ಸಾಗರ ಪುರಸಭೆಯ ಸದಸ್ಯರಾಗಿ ಒಂಭತ್ತು ವರ್ಷಕಾಲ ಸೇವೆ ಸಲ್ಲಿಸಿದ್ದಾರೆ. ಸಾಗರ ತಾಲೂಕು ಕಾಂಗ್ರೆಸ್ ಪಕ್ಷದ ಪ್ರಧಾನ ಕಾರ್ಯದರ್ಶಿಯಾಗಿ, ಶಿವಮೊಗ್ಗ ಜಿಲ್ಲಾ ಕಾಂಗ್ರೆಸ್ ಸಮಿತಿ ಸದಸ್ಯರಾಗಿ ಕೆಲಸ ಮಾಡಿದ್ದಾರೆ. ರಾಜ್ಯ ಮಟ್ಟದ ಸಮಿತಿ, ಶರಾವತಿ ನೀರು ಮುಳುಗಡೆ ಪುನರ್ವಸತಿ ಸಮಿತಿಗೆ, ರಾಜ್ಯ ಸರ್ಕಾರದ ಪ್ರತಿನಿಧಿಯಾಗಿ ಆರು ವರ್ಷಗಳ ಕಾಲ ಸೇವೆ ಸಲ್ಲಿಸಿದ್ದಾರೆ. ಸಾಗರ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘದ ಅಧ್ಯಕ್ಷರಾಗಿ, ಮತ್ತು ಕೃಷಿ ಭೂ ಅಭಿವೃದ್ಧಿ ಬ್ಯಾಂಕಿನ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದ್ದಾರೆ. ಮಲೆನಾಡು ಅಭಿವೃದ್ಧಿ ಬ್ಯಾಂಕಿನ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದ್ದಾರೆ, ಮಲೆನಾಡು ಅಭಿವೃದ್ಧಿ ಪ್ರತಿಷ್ಠಾನದ ಉಪಾಧ್ಯಕ್ಷರಾಗಿ ಈಗಲೂ ಕಾರ್ಯ ನಿರ್ವಹಿಸುತ್ತಿದ್ದಾರೆ ಎಂದರೆ ಭಟ್ಟರ ಉತ್ಸಾಹ ಮಾತ್ರವಲ್ಲ; ಅವರ ದೇಶಪ್ರೇಮ ಎಷ್ಟುದೊಡ್ಡದು ಎಂದು ಯಾರಿಗಾದರೂ ಅನ್ನಿಸಲೇ ಬೇಕು.

ಸಾಹಿತ್ಯ ಕ್ಷೇತ್ರಕ್ಕೂ ಅವರು ಕೊಟ್ಟ ದೇಣಿಗೆ ಅಪಾರ. ಕೇವಲ ಸಾಹಿತ್ಯ ಕೃಷಿಯಲ್ಲಷ್ಟೇ ತಮ್ಮನ್ನು ತೊಡಗಿಸಿಕೊಳ್ಳದೇ, ಕಲೆ, ಸಾಹಿತ್ಯ, ಸಂಸ್ಕೃತಿ, ನಾಟಕ, ಸಂಗೀತ ಇವುಗಳ ಅಭಿವೃದ್ಧಿಗಾಗಿ ಹಾಗೂ ಅದರ ವಿಕಾಸಕ್ಕಾಗಿ ಸ್ಥಾಪನೆಯಾದ

'ಕನ್ನಡ ಸಂಘ'ದ ಅಧ್ಯಕ್ಷರಾಗಿ ದೀರ್ಘಕಾಲ ಸೇವೆ ಸಲ್ಲಿಸಿದ್ದಾರೆ. ಬಹುಮುಖ ಪ್ರತಿಭೆಯುಳ್ಳ ಶ್ರೀಯುತ ಭಟ್ಟರು ಸರಳ ಸಜ್ಜನಿಕೆಯ ವ್ಯಕ್ತಿ.

'ಜಗದ ಕಲ್ಯಾಣದೊಳಗಾತ್ಮ ಕಲ್ಯಾಣವನು ಜಗದ ಬೀದಿಗಳೊಳು ನಿಜಾತ್ಮಯಾತ್ರೆಯನು' ಜಗದ ಜೀವಿತದಿ ನಿಜ ಜೀವಿತದ ಪೂರ್ತಿಯನು, ಬಗೆಹರಿಯಲರಿತವನೆ ಸುಖಿ' – ಮಂಕುತಿಮ್ಮ. ಭಟ್ಟರನ್ನು ನೋಡಿದಾಗ ಡಿ.ವಿ.ಜಿ. ಯವರ ಪದ್ಯದ ಈ ಸಾಲುಗಳು ನೆನಪಿಗೆ ಬರುತ್ತವೆ. ಶ್ರೀಯುತ. ಟಿ. ಮಹಾಬಲೇಶ್ವರ ಭಟ್ಟರು ನೂರ್ಕಾಲ ಬಾಳಲಿ, ಅವರ ಜೀವನೋತ್ಸಾಹ ಕುಂದದಿರಲಿ ಅಭಿನಂದಿಸಲ್ಪಡುತ್ತಿರುವ ಶ್ರೀ ಭಟ್ಟರಿಗೆ ನಮ್ಮ ಶುಭ ಹಾರೈಕೆ.

# ನಿರಾಡಂಬರ – ಸರಳ ಸಜ್ಜನ

**ಡಾ॥ ಹಂಪ ನಾಗರಾಜಯ್ಯ**

ಬೇದೂರಿನ ಟಿ. ಮಹಾಬಲೇಶ್ವರ ಭಟ್ಟರು ನನ್ನ ಹಳೆಯ ಗೆಳೆಯರು. ಅವರ ಸ್ನೇಹ ಭಾಗ್ಯದ ಪರಿ ಪದರಗಳನ್ನು ಪರಿಭಾವಿಸುತ್ತ ಹೊರಟರೆ ಕೆಲವು ಅಧ್ಯಾಯಗಳು ಅರಳಿ ನಿಲ್ಲುತ್ತವೆ. ಈ ಲೇಖನ ಬರೆಯುತ್ತಿರುವ ಕ್ಷಣಗಳಲ್ಲಿ ನೆನಪಿನಂಗಳಕ್ಕೆ ನುಗ್ಗಿ ಬರುವ ಹಿಗ್ಗಿನ ಬುಗ್ಗೆಯಿಂದ ಕೆಲವು ಹನಿಗಳನ್ನು ಸಂಪಾದಿಸುತ್ತೇನೆ.

ದಾವಣಗೆರೆಯ ಧ.ರ.ಮ. ಕಾಲೇಜಿನಿಂದ ವರ್ಗವಾಗಿ ಬಂದು ಶಿವಮೊಗ್ಗೆಯ ಸಹ್ಯಾದ್ರಿ ಕಾಲೇಜಿನಲ್ಲಿ ನಾನು 1963-64 ರಲ್ಲಿ ಅಧ್ಯಾಪಕನಾದೆ. ಆಗ ಅನೇಕ ಸ್ಥಳೀಯ ಸಭೆ ಸಮಾರಂಭಗಳಲ್ಲಿ ಮುಖ್ಯ ಅತಿಥಿಯಾಗಿ ಭಾಗವಹಿಸುವ ಅವಕಾಶವನ್ನು ಅಲ್ಲಿನ ಸಹೃದಯ ಸಂಘಟಕರು ಕಲ್ಪಿಸಿಕೊಟ್ಟರು. ಈ ಬಗೆಯ ರೀತಿ ರಿವಾಜುಗಳ ಸುಳಿಯಲ್ಲಿ ಸಿಕ್ಕಿಹಾಕಿಕೊಂಡ ನನಗೆ ಅನಾಯಾಸವಾಗಿ ಮಹಾಬಲೇಶ್ವರಭಟ್ಟರ ಪರಿಚಯವಾಯಿತು. ಅವರು ಪಕ್ಕಾಸ್ನೇಹ ಜೀವಿ. ಬಹು ಸರಳವಾಗಿ ನೀರಿನಂತೆ ಎಲ್ಲರೊಂದಿಗೆ ಬೆರೆಯುವ ಸ್ವಭಾವದವರು. ಮಡಿವಂತಿಕೆ, ಬಿಗುಮಾನ, ಆರೋಪಿತ ಶ್ರೀ ಮದ್ಗಾಂಭೀರ್ಯ-ಇವುಗಳು ಯಾವುವೂ ಇಲ್ಲದ ನಿರಾಂಡಬರ ನಡತೆಯವರು.

ಈ ಕಾರಣಗಳಿಂದಾಗಿ ಅವರ ಸಖ್ಯ ಸಲೀಸಾಗಿ ಸಿದ್ಧಿಸಿತು. ಆಗೊಮ್ಮೆ ಈಗೊಮ್ಮೆ ಭೆಟ್ಟಿಯಾಗುತ್ತಿದ್ದ ಭಟ್ಟರ ಗೆಳೆತನವು, ದಿನದಿಂದ ದಿನಕ್ಕೆಕೆನೆಕಟ್ಟಿತು. ನನಗೆ ಶಿವಮೊಗ್ಗದಿಂದ ೧೯೬೪ರಲ್ಲಿವರ್ಗವಾಯಿತು. ರಾಜಧಾನಿ ಬೆಂಗಳೂರು ಸೇರಿದೆ. ಆದರೆ ನಮ್ಮಿಬ್ಬರ ಸ್ನೇಹ ವಿಚ್ಛೇದನಗೊಳ್ಳಲಿಲ್ಲ, ಅದು ಇನ್ನಷ್ಟು ಬಿಗಿಯಾಗುವ ಪ್ರಸಂಗಗಳೂ ನಡೆದುವು. ಈ ನಡುವೆ ನಾನು ೧೯೬೬ರಲ್ಲಿಕನ್ನಡ ಸಾಹಿತ್ಯ ಪರಿಷತ್ತಿನ (ಕ.ಸಾ.ಪ) ಗೌರವ ಕಾರ್ಯದರ್ಶಿಯಾಗಿ ನೇಮಕಗೊಂಡೆ. ಅದರ ನಿಮಿತ್ತದಿಂದಾಗಿ ನಮ್ಮಿಬ್ಬರ ಒಡನಾಟ ಇನ್ನಷ್ಟುಗಟ್ಟಿಗೊಂಡು ನಿಕಟವಾಯಿತು. ಬೆಂಗಳೂರಿಗೆ ಬಂದರೆ ಭಟ್ಟರು ನನ್ನನ್ನುಕಂಡು, ಉಭಯಕುಶಲೋಪರಿ ಸಾಂಪ್ರತ ಕುರಿತು ಮಾತಾಡಿಯೇ ಹೋಗುತ್ತಿದ್ದರು. ಇದು ಅವರ ಚಾಳಿ; ಒಮ್ಮೆ ತಮ್ಮವರೆಂದು ತಿಳಿದವರನ್ನುಅವರು ಎಂದಿಗೂ ಮರೆಯುವುದಿಲ್ಲ. ಉದಾಸೀನ ಮಾಡುವುದಿಲ್ಲ.

ಇಲ್ಲಿಂದ ಮುಂದಿನ ಬೆಳವಣಿಗೆ ಇನ್ನೂ ರೋಚಕವಾಗಿದೆ. ೧೯೭೮ರಲ್ಲಿ ನಾನು ಕ.ಸಾ.ಪ. ಅಧ್ಯಕ್ಷನಾಗಿ ಅವಿರೋಧವಾಗಿ ಆಯ್ಕೆ ಆದೆ. ರಾಜ್ಯಪಾಲರು, ಮುಖ್ಯಮಂತ್ರಿಗಳು ಆದಿಯಾಗಿ ನೂರಾರು ಅಗವ್ಯರೂ, ಅಭಿಮಾನಿಗಳೂ, ಮಿತ್ರವೃಂದದವರೂ ತಂತಿಕಳಿಸಿದರು, ಪತ್ರ ಬರೆದರು, ಖುದ್ದಾಗಿ ಬಂದು ಕೈಕುಲಿಕಿ ಅಭಿನಂದಿಸಿದರು. ಹೀಗೆ ತಮ್ಮ ಸಂತೋಷವನ್ನೂ, ಪೂರ್ಣ ಸಹಕಾರವನ್ನೂ ತಿಳಿಸಿ ಪತ್ರ ಬರೆದ ಆತ್ಮೀಯ ಸಮುದಾಯದಲ್ಲಿ ಮಹಾಬಲೇಶ್ವರ ಭಟ್ಟರು ಪ್ರಥಮಿಗರು ಆದ್ಯರು. ಅವರ ಕಾಗದದ ಒಕ್ಕಣೆಯಲ್ಲಿ ಉಕ್ಕಿ ಹರಿಯುವ ಸಹಜ ಸಲಿಲ ಅಕ್ಕರೆಯಿತ್ತು. ನಾನು ಕ.ಸಾ.ಪ. ವತಿಯಿಂದ ಹಮ್ಮಿಕೊಂಡ ಎಷ್ಟೋ ಕಾರ್ಯಕ್ರಮಗಳ ಯಶಸ್ಸಿಗೆ, ಸಾಗರ ತಾಲೂಕಿನ ವ್ಯಾಪ್ತಿಯಲ್ಲಿ, ಸಹಾಯ ಮಾಡಿದ ಗಣ್ಯರಲ್ಲಿಗಣ್ಯರು ಮಹಾಬಲೇಶ್ವರ ಭಟ್ಟರು.

ನಮ್ಮ ಈ ಅಹೇತುಕ ಮೈತ್ರಿ ಹೀಗೆಯೇ ಅಖಂಡವಾಗಿ ದಾಂಗುಡಿಯಿಟ್ಟಿತು. ಅವರು ಒಳ್ಳೆಯ ಸಾಹಿತಿಯೂ ಹೌದು. ಕಥೆ, ಕವನ, ಕಾದಂಬರಿ, ಜೀವನ ಚರಿತ್ರೆ, ವ್ಯಕ್ತಿಚಿತ್ರ ಬರೆದಿದ್ದಾರೆ. 'ಕನ್ನಡ ಕುಲದೀಪಕರು' ಎಂಬ ಪುಸ್ತಕದಲ್ಲಿನನ್ನನ್ನು ಕುರಿತು ಕಿರುಪರಿಚಯಾತ್ಮಕವಾಗಿರುವ ಪ್ರಭಾವಶಾಲಿ ಲೇಖನ ಸಹ ಬರೆದಿದ್ದಾರೆ. ನನ್ನನ್ನು ಸಭೆ ಸಮಾರಂಭಗಳಲ್ಲಿ ಪರಿಚಯಿಸುವವರು ಎಷ್ಟೋ ಕಡೆ 'ಟಿ. ಮಹಾಬಲೇಶ್ವರ ಭಟ್ಟರು ಹಂ.ಪ.ನಾ. ಅವರನ್ನು ಕುರಿತು ಹೀಗೆ ಹೇಳಿದ್ದಾರೆ.' ಎಂದು ಕೆಳಗಿನ ಅವರ ಸಾಲುಗಳನ್ನು ಉದಾಹರಿಸಿದ್ದಾರೆ.' (ಹಂಪ ನಾಗರಾಜಯ್ಯ) ಅವರ ಹೆಸರೇ ಹೇಳುವಂತೆ, ಒಳ್ಳೆಯ ಕೆಲಸಕ್ಕೆ ಸೌಮ್ಯಪುರುಷರು. ತಮ್ಮ ವೈಯಕ್ತಿಕ ಸ್ವಾಭಿಮಾನಕ್ಕಾಗಲೀ, ಕನ್ನಡದ ಸ್ವಾಭಿಮಾನಕ್ಕಾಗಲೀ ಧಕ್ಕೆಬರುತ್ತದೆ. ಎಂದರೆ ನಾಗರಾಜರಾಗುತ್ತಾರೆ, ಸರ್ಪವಾಗುತ್ತಾರೆ. ಎಲ್ಲಹಂತಗಳಲ್ಲೂ ಕನ್ನಡದ ಭಾಷೆಯನ್ನ ಆಡಳಿತ ಭಾಷೆಯಾಗಿ ಮಾಡದಿದ್ದರೆ, ಕನ್ನಡ ರಾಜ್ಯೋತ್ಸವ ಆಚರಿಸುವುದು ಅರ್ಥವಿಲ್ಲದ್ದು ಎಂದು ಗುಡುಗಿ ಸರ್ಕಾರದಿಂದ ಭರವಸೆ ಪಡೆದುಕೊಂಡ ಭೂಪ, ಅಚ್ಚಕನ್ನಡಿಗ, ರಾಷ್ಟ್ರಪ್ರಿಯ, ತೀ.ನಂ.ಶ್ರೀಯವರ ಪರಮಶಿಷ್ಯ' (ಕನ್ನಡಕುಲದೀಪಕರು, ೧೯೭೮ ಪು. ೭೮). ತಮಗೆ ಇಷ್ಟರಾದವರ ವಿಚಾರವಾಗಿ ಸಾರ್ವಜನಿಕವಾಗಿ ಪ್ರಶಂಸೆ ಮಾಡಲೂ, ಬಹಿರಂಗವಾಗಿ ಮೆಚ್ಚುಗೆ ವ್ಯಕ್ತಪಡಿಸಲೂ ಅವರು ಹಿಂದೆಗೆಯುವವರಲ್ಲ.

'ತುರಂಗ ಭಾರತ' ಎಂಬ ಷಟ್ಪದಿ ಕಾವ್ಯವನ್ನು ಬರೆದ ದೊಡ್ಡ ಕವಿ ಪರಮದೇವ. ಆತನಿಗೆ ನ್ಯಾಯವಾಗಿ ಸಿಗಬೇಕಾದ ಪುರಸ್ಕಾರ, ಪ್ರಚಾರ, ವಿಮರ್ಶೆ ಸಿಕ್ಕಿಲ್ಲ. ಕನ್ನಡಸಾಹಿತ್ಯ ಚರಿತ್ರೆಯಲ್ಲಿ ಆತನಿಗೆ ಆಗಿರುವ ಅನ್ಯಾಯವನ್ನುಸರಿಪಡಿಸಬೇಕೆಂಬ ಇರಾದೆಯಿಂದ ನಾನು ಸಾಗರದಲ್ಲಿ ಒಂದು ಕಾರ್ಯಕ್ರಮವನ್ನು ಹಮ್ಮಿಕೊಂಡೆ. ಇದಕ್ಕೆ ಪರೋಕ್ಷವಾದ ಪ್ರಚೋದನೆ ದೊರೆತದ್ದು ಸ್ವಾರಸ್ಯವೆ. ೧೯೮೦ರ ಡಿಸೆಂಬರು

ತಿಂಗಳು ೨೦ ಮತ್ತು ೨೧ರಂದು ಶಿವಮೊಗ್ಗ ಜಿಲ್ಲಾ ಸಾಹಿತ್ಯ ಸಮ್ಮೇಳನವನ್ನು ಸಾಗರದಲ್ಲಿ ನಡೆಸಿದೆವು. ಆ ಸಮ್ಮೇಳನದ ಮಂಟಪಕ್ಕೆ "ಪರಮಕವಿ ಮಂಟಪ" ಎಂದು ಹೆಸರಿಡಲಾಯಿತು ಎಸ್.ವಿ. ಪರಮೇಶ್ವರ ಭಟ್ಟರ ಅಧ್ಯಕ್ಷತೆಯಲ್ಲಿ ನಡೆದ ಆ ಜಿಲ್ಲಾ ಸಮ್ಮೇಳನ ಚೆನ್ನಾಗಿ, ಅರ್ಥಪೂರ್ಣವಾಗಿ ಕೈಗೂಡಲು ಇಡೀ ಸಾಗರ ತಾಲೂಕಿನ ಸಾಹಿತ್ಯ ಪ್ರೇಮಿಗಳು ಶ್ರಮಿಸಿದರು. ಆಗ ನನ್ನ ನೆರವಿಗೆ ಟೊಂಕ ಕಟ್ಟಿ ನಿಂತರವರಲ್ಲಿ ಮಹಾಬಲೇಶ್ವರ ಭಟ್ಟರಿಗೆ ಅಗ್ರತಾಂಬೂಲ. ಅನಂತರ ೧೯೮೩ರಲ್ಲಿ ಅಕ್ಟೋಬರ್ ೨೯ ಮತ್ತು ೩೦ರಂದು ತುರಂಗ ಭಾರತ ಕುರಿತು ರಾಜ್ಯ ಮಟ್ಟದ ವಿಚಾರ ಸಂಕಿರಣವನ್ನು ಜಿಲ್ಲಾ ಮತ್ತು ಕೇಂದ್ರ ಕ.ಸಾ.ಪ. ವತಿಯಿಂದ ಏರ್ಪಡಿಸಲಾಯಿತು. ಜಿಲ್ಲಾ ಕ.ಸಾ.ಪ. ಅಧ್ಯಕ್ಷ, ಕನ್ನಡದ ವಾಸುದೇವಾಚಾರ್, ಸಾಗರದ ಆಗಿನ ಶಾಸಕ ಎಲ್.ಟಿ. ತಿಮ್ಮಪ್ಪ ಹೆಗಡೆ, ತಾಲ್ಲೂಕ್ ಕ.ಸಾ.ಪ. ಅಧ್ಯಕ್ಷ ಕೆ.ಗೋಪಾಲಕೃಷ್ಣರಾಯ, ಸಂಚಾಲಕರಾದ ನಾ.ಸಾ. ಮಧ್ಯಸ್ಥ, ನೆಚ್ಚಿನ ನೇಹಿಗ ಮಹಾಬಲೇಶ್ವರ ಭಟ್ಟ, ನನ್ನ ಪ್ರೀತಿಯ ವಿದ್ಯಾರ್ಥಿ ಎಂ.ಎಸ್. ತಿಮ್ಮಪ್ಪ, ಗೆಳೆಯ ಸಾಹಿತಿ ಶ್ರೀನಿವಾಸ ಉಡುಪ, ಆತ್ಮೀಯ ಗಮಕರತ್ನ ಹೊಸಬಾಳೆ ಸೀತಾರಾಮರಾಯ - ಮೊದಲಾದ ಹಿರಿಯ - ಕಿರಿಯರೆಲ್ಲ ಸೇರಿ ನನ್ನ ಪರವಾಗಿ ದುಡಿದರು; ಅಕ್ಷರಶಃ ಸಾಂಸ್ಕೃತಿಕ ರಾಯಭಾರಿಗಳಂತೆ ಶ್ರಮಿಸಿದರು.

ಅವರುಗಳು ಅಂದು ನಡೆಸಿಕೊಟ್ಟ ಕಾರ್ಯಕ್ರಮದ ವಿವರಗಳೆಲ್ಲ ಇಂದೂ ನನ್ನ ಸ್ಮೃತಿ ಪಟಲದಲ್ಲಿ ತೇಲಿ ಬರುತ್ತವೆ. ಕೇಡಲಸರದ ಶ್ರೀ ಸಿದ್ಧಿವಿನಾಯಕ ದೇವಾಲಯದ ಮುಂದೆ ೨೯.೧೦.೮೩ರಂದು ಬೆಳಗ್ಗೆ ಸಾವಿರಾರು ಜನ ಸೇರಿದ್ದರು, ನನ್ನಿಂದ ಪರಮದೇವ ಕವಿಯ ಜ್ಯೋತಿಯನ್ನು ಬೆಳಗಿಸಿದರು, ನನ್ನನ್ನು ಹರಸಿದರು. ಕವಿಯ ಜ್ಯೋತಿ, ಭಾವಚಿತ್ರ, ತುರಂಗ ಭಾರತ ಕಾವ್ಯದ ತಾಳೆಗರಿ ಪತ್ರ-ಇವನ್ನೆಲ್ಲ ಸಾಲಂಕೃತ ವಾಹನದಲ್ಲಿಟ್ಟು ಮಂಗಳವಾದ್ಯ ಮರ್ಯಾದೆ ಸಹಿತ ಕೇಡಲಸರದಿಂದ ಹೊರಟೆವು. ದಾರಿಯಲ್ಲಿ ಭೀಮನಕೋಣೆ ಶ್ರೀ ಲಕ್ಷ್ಮೀ ನಾರಾಯಣ ಸ್ವಾಮಿಗೆ ಪೂಜೆ ಸಲ್ಲಿಸಿ, ಸಂಭ್ರಮ ಸಡಗರದಿಂದ ಸಾಗರ ತಲುಪಿದೆವು. ಭವ್ಯ ಹವ್ಯಕ ಸಮಾಜದವರ, ಇಡೀ ಸಾಗರ ತಾಲೂಕಿನ ಸಾಹಿತ್ಯಾಸಕ್ತ ಜನಸ್ತೋಮದ, ಮೇರೆ ಮೀರಿದ ಉತ್ಸಾಹ ಭಕ್ತಿಯನ್ನು ಕಂಡು ನಾನು ನಿಜಕ್ಕೂ ಅಂದು ಭಾವುಕನಾದೆ, ಭಾವಪರವಶನಾದೆ. ಇದೇ ಹುರುಪು, ಉಮೇದು ಇರುವಾಗ ನಾನು ಸಭೆಯಲ್ಲಿ, ಕೇಡಲಸರದ ಶ್ರೀ ಸಿದ್ಧಿವಿನಾಯಕ ಸ್ವಾಮಿಯ ಸನ್ನಧಿಯಲ್ಲಿ ನಿಂತು . " ಕಾವ್ಯಪ್ರೇಮಿಗಳಿಗೆ ಅಲಭ್ಯವಾಗಿರುವ ತುರಂಗ ಭಾರತ ಕಾವ್ಯದ ಪುನರ್ ಮುದ್ರಣವನ್ನು ಮಾಡಿ ಅತ್ಯಂತ ಕಡಿಮೆಬೆಲೆಗೆ ದೊರೆಯುವಂತೆ ಮಾಡುತ್ತೇನೆ" - ಎಂದು ಆಶ್ವಾಸನೆ ಕೊಟ್ಟೆ. ಇಂತಹ ದೊಡ್ಡ ಭರವಸೆ ನೀಡುವುದು ಸುಲಭ, ಈಡೇರಿಸುವುದು ಕಡು ಕಷ್ಟ - ಎಂಬುದು ಆಮೇಲೆ ಅರಿವಾಯಿತು. ಆದರೂ ನನ್ನ ಉಡದ ಪಟ್ಟನ್ನು ಬಿಡಲಿಲ್ಲ.

ಸರ್ಕಾರದಿಂದ ಸಹಾಯಧನ ಪಡೆದೆ. ಪರಮದೇವ ಕವಿಯ ತುರಂಗ ಭಾರತವನ್ನು ಮರು ಮುದ್ರಣ ಮಾಡಿ ಹೊರತಂದೆ, ನನ್ನ ಮಾತನ್ನು ಉಳಿಸಿಕೊಂಡೆ. ಅಷ್ಟೇ ಅಲ್ಲದೆ, ಇನ್ನೂರು ರೂಪಾಯಿ ಬೆಲೆ ಇಡಬೇಕಾದ ಬೃಹತ್ ಗಾತ್ರದ ಈ ಕಾವ್ಯಕ್ಕೆಕೇವಲ ಐದು ರೂಪಾಯಿ ಬೆಲೆ ಇಟ್ಟು ಅತಿ ಸುಲಭ ಬೆಲೆಯಲ್ಲಿ ಓದುಗರಿಗೆ ದೊರಕುವಂತೆ ಮಾಡಿದೆ. 'ಗದುಗಿನ ಭಾರತವನ್ನು ಕೆಂಗಲ್ ಹನುಂತಯ್ಯನವರು ಎರಡು ರೂಪಾಯಿಗೆ ಸಿಗುವಂತೆ ಪುಣ್ಯಕಾರ್ಯ ಮಾಡಿದ್ದರು, ಈಗ ಹಂಪನಾ ಅವರು ಪರಮದೇವನ ತುರಂಗ ಭಾರತವನ್ನು ಐದು ರೂಪಾಯಿಗೆ ಸಿಗುವಂತೆ ಶ್ರೇಷ್ಠಕೆಲಸ ಮಾಡಿದರು' ಎಂದು ಇದನ್ನು ಶ್ಲಾಘಿಸಿ ನೂರಾರು ಪತ್ರಗಳು ಬಂದವು. ಈ ಬಗೆಯ ಸುಯೋಗ್ಯ ಸಾಹಿತ್ಯ ಕೈಂಕರ್ಯ ಕೈಗೂಡಲು ಕಾರಣರಾದವರು ಸಾಗರದವರು, ಮಹಾಬಲೇಶ್ವರ ಭಟ್ಟ ಮೊದಲಾದ ಸಾಹಿತ್ಯಾಸಕ್ತರು. ಇವರನ್ನು ನಾನು ಹೇಗೆ ತಾನೇ ಮರೆಯಲಿ ?

ಮಹಾಬಲೇಶ್ವರ ಭಟ್ಟರಿಗೆ ಐವತ್ತುತುಂಬಿದಾಗ ಸಾಗರದಲ್ಲಿಒಂದು ಗೌರವ ಸಮಾರಂಭ ನಡೆಯಿತು. ನನ್ನ ಸ್ನೇಹಿತ ದಿವಂಗತ ಪ.ಸು. ಭಟ್ಟ ಮತ್ತುನಾನು ಅಂದಿನ ಸಂತೋಷ ಕಾರ್ಯಕ್ರಮದ ಮುಖ್ಯ ಅತಿಥಿಗಳು. ಸುಮಾರು ಎರಡು ಸಾವಿರ ಜನ ಸೇರಿದ್ದರು. ಭಟ್ಟರ ವಿಚಾರವಾಗಿ ಆ ಜನ ತಮ್ಮ ಪ್ರೀತ್ಯಾದರಗಳನ್ನೂ ಅಭಿಮಾನ ಮಹಾಪೂರವನ್ನೂ ಪ್ರಕಟಿಸಿದರು. ಒಂದು ಲಾರಿ ತುಂಬುವಷ್ಟು ಹೂ ಹಾರದ ಶ್ರೀಗಂಧದ ಪುಷ್ಪರಾಶಿಯಲ್ಲಿ, ಕುಳ್ಳನಾದ ನಾನೇ ಏನು, ಎತ್ತರದ ಆಳಾದ ಮಹಾಬಲೇಶ್ವರ ಭಟ್ಟರೂ ಸಭೆಯಲ್ಲಿಕುಳಿತ ಜನಕ್ಕೆ ಕಾಣಿಸದಂತಾಗಿತ್ತು. ಇದು ಅವರ ಸಂಪಾದಿಸಿದ ಜನಾದರಣೆ, ದೊಡ್ಡಆಸ್ತಿ, ತವನಿಧಿ.

ಭಟ್ಟರು ತಮ್ಮ ಹುಟ್ಟೂರೆನಿಸಿದ ಬೇದೂರು ಬಯಲಲ್ಲಿಹೊಸದೊಂದು ಗ್ರಂಥಾಲಯವನ್ನು ತೆರೆದರು. ಅದಕ್ಕೆಕ.ಸಾ.ಪ. ವತಿಯಿಂದ ಅನೇಕ ಅಮೂಲ್ಯ ಗ್ರಂಥಗಳನ್ನುಕೊಡಿಸಿದರು. ಆ ಎಲ್ಲ ಸಡಗರದ ಕ್ಷಣಗಳಲ್ಲೂ ನನ್ನ ಹಾಜರಾತಿ ಅನಿವಾರ್ಯವೆನಿಸಿದರು. ಅವರ ಮಡದಿ ಮಕ್ಕಳು ತಮ್ಮ ತಿಳುವಳಿಕೆಯಿಂದ, ಸುಸಂಸ್ಕೃತ ನಡವಳಿಕೆಯಿಂದ ನನ್ನ ಆತ್ಮೀಯ ಬಂಧುಗಳೆನಿಸಿದ್ದಾರೆ. ಅವರಕುಟುಂಬದಲ್ಲಿ ಅನುಭವಿಸಿದ ಅಕುಟಿಲವೂ ಅಕೃತಕವೂ ಆದ ನಿರ್ಮಲಾಂತಃ ಕರಣದ ಆತಿಥ್ಯವನ್ನು, ವಾತ್ಸಲ್ಯವನ್ನುಬಹುಕಾಲ ನೆನೆಯುತ್ತೇನೆ.

ಯೋಗಾಯೋಗವು ಸಹ ಹೇಗೆ ಮೇಲಿಂದ ಮೇಲೆ ಒದಗಿ ಬಂದಿತೆಂಬುದನ್ನು ಇಲ್ಲಿಹೇಳಬೇಕು. ಡಾ. ಕಮಲಾಹಂಪನಾ ತಮ್ಮ ಪಿ.ಹೆಚ್.ಡಿ. ಡಾಕ್ಟರೇಟ್ ಮಹಾ ಪ್ರಬಂಧಕ್ಕೆ ಆರಿಸಿಕೊಂಡ ವಿಷಯ ''ಪರಮದೇವ ಕವಿಯ ತುರಂಗ ಭಾರತ ಒಂದು ಅಧ್ಯಯನ' ಎಂಬುದಾಗಿತ್ತು; ಡಾ. ಹಾ.ಮಾ. ನಾಯಕ ಇದಕ್ಕೆಮಾರ್ಗದರ್ಶಕರು.

ಪರಮದೇವ ಕವಿಯ ವಿಚಾರವಾಗಿ ಮಾಹಿತಿ ಸಂಗ್ರಹಕ್ಕಾಗಿ ಪ್ರೊ. ಕಮಲಾ ಹಂಪನಾ ಮತ್ತು ಮಗಳು - ಕವಯಿತ್ರಿ ಎಚ್.ಎಸ್. ಆರತಿ, ಬೇದೂರು, ಸಾಗರ, ಕೇಡಲಸರ, ಭೀಮನಕೋಣೆ ಮೊದಲಾದ ಕಡೆ ಸುತ್ತಾಡಬೇಕಾಯಿತು. ಈಕ್ಷೇತ್ರ ಕಾರ್ಯದಲ್ಲಿ ಕೂಡ ಮಹಾಬಲೇಶ್ವರ ಭಟ್ಟರೂ, ಸಂಸಾರದವರೂ ನೆರವಾದರು.

ಪ್ರಾ. ಕಮಲಾ ಹಂಪನಾ ಈ ಮಹಾ ಪ್ರಬಂಧವನ್ನು ಸಿದ್ಧಪಡಿಸಿ, ಮೈಸೂರು ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಿದರು. ಡಾಕ್ಟರೇಟ್ ಪಡೆದರು, ಕಮಲಾ ಹಂಪನಾ ಎಂಬುದರ ಜನತೆಗೆ ಡಾ॥ ಕಮಲಾ ಹಂಪನಾ ಆದರು. ಅನಂತರ ಅವರ ಮಹಾಪ್ರಬಂಧ 'ತುರಂಗ ಭಾರತ : ಒಂದು ಅಧ್ಯಯನ' ಎಂಬುದು ಅಚ್ಚೂ ಆಯಿತು. ಈಗ ಆ ಥೀಸೀಸ್ ಬಿಡುಗಡೆ ಕಾರ್ಯಕ್ರಮವನ್ನು ಬೇರೆಕಡೆ ಮಾಡಕೂಡದೆಂದೂ, ಸಾಗರದಲ್ಲೇ ಆಗತಕ್ಕದ್ದೆಂದೂ ಮಿತ್ರವರ್ಯ ಮಹಾಬಲೇಶ್ವರ ಭಟ್ಟರು ಕಟ್ಟಪ್ಪಣೆ ಮಾಡಿದ್ದಾರೆ! ಆ ಪುಸ್ತಕ ಬಿಡುಗಡೆ ಸಮಾರಂಭ ಮತ್ತು ಒಂದು ವಿಚಾರ ಸಂಕಿರಣಕ್ಕೆ ರೂವಾರಿಯಾಗಿ ಈಗಾಗಲೇ ಈ ಕಾರ್ಯ ಮಾಡಿದ್ದಾರೆ.

ಈ ತೆರನಾಗಿ ನಮ್ಮ ಆತ್ಮೀಯತೆ ಜನ್ಮಾಂತರದ ಸಂಬಂಧವೆಂಬಂತೆ ಬೆಳೆಯುತ್ತಲೇ ಇದೆ. ಈ ಸ್ನೇಹ ಭಾಗ್ಯವಲ್ಲರಿಯು ಅಕ್ಷತವಾಗಿ, ಅಕ್ಷಯವಾಗಿ ಹೀಗೆಯೇ ವರ್ಷಗಳ ಹೆಗಲೇರಿ ದಾಂಗುಡಿಯಿಡುತ್ತಿರಲಿ ಎಂಬುದು ನನ್ನಪ್ರಾರ್ಥನೆ. ಭಟ್ಟರು, ಅವರ ಕುಟುಂಬದವರು ಆರೋಗ್ಯಭಾಗ್ಯದಿಂದ ಬಾಳುತ್ತ ಸಾಗರದ ಆ ಭಾಗದಲ್ಲಿ ಸಾಹಿತ್ಯದ ಅಲೆಗಳು ತರಂಗ ತಾಡಿತವಾಗುವಂತೆ ಮಾಡುತ್ತಿರಲಿ ಎಂಬುದು ನನ್ನ ಹಾರೈಕೆ.

# ಸಜ್ಜನಿಕೆಯ ಸಾಕಾರ ಮೂರ್ತಿ

– ಗೋಪಾಲ ಕೃಷ್ಣ ಹೆಗಡೆ ಕೇರಿಮನೆ

ಸಾಹಿತ್ಯ ಸಂಗೀತ, ನೃತ್ಯ, ಶಿಲ್ಪ ಮುಂತಾದ ಲಲಿತ ಕಲೆಗಳು, ಎಲ್ಲರಿಗೂ ಒಲಿದು ಬರುವುದಿಲ್ಲ. ಅವು ಎಲ್ಲರನ್ನು ಆಕರ್ಷಿಸುತ್ತವೆ. ಆದರೆ ಕೆಲವೇ ಕೆಲವರಿಗೆ ಮಾತ್ರ ಒಲಿದು ಬಂದಿರುತ್ತದೆ. ಸಾಹಿತ್ಯ ಸರಸ್ವತಿಯ ಕೃಪೆಗೆ ಪಾತ್ರರಾಗಿರುವ ಅಂಥ ಕೆಲವರಲ್ಲಿ ಸಾಗರದ ಟಿ. ಮಹಾಬಲೇಶ್ವರ ಭಟ್ಟರು ಒಬ್ಬರು. ಸಾಹಿತ್ಯ ಶ್ರೀ ಅವರಿಗೆ ಒಲಿದಿದ್ದಾಳೆ. ತನ್ನ ಪೂರ್ಣಾಶೀರ್ವಾದ ನೀಡಿದ್ದಾಳೆ. ಅಂತೆಯೇ ಅವರ ಮಾತೆಲ್ಲಾಮುತ್ತು. ಬರವಣಿಗೆಯೆಲ್ಲಾ ಬಂಗಾರ. ಸಾಹಿತ್ಯೋಪಾಸನೆಯ ಕಠಿಣತಮ ಮಾರ್ಗದಲ್ಲಿ ಶ್ರೀ ಭಟ್ಟರು ಇಂದಿನವರೆಗೂ, ಬಹುದೂರ ನಡೆದು ಬಂದಿದ್ದಾರೆ. ಕನ್ನಡಿಗರ ಹೃದಯ ಮಂದಿರದಲ್ಲಿ ಶಾಶ್ವತವಾಗಿ ನೆಲೆಸಿದ್ದಾರೆ.

ಶಿವಮೊಗ್ಗ ಜಿಲ್ಲೆ ಸಾಗರ ತಾಲೂಕಿನ ತೊರೆಮನೆಯಲ್ಲಿ ೧೯೨೮ರಲ್ಲಿ ಜನಿಸಿ, ಮಲೆನಾಡಿನ ಮೈಸಿರಿಯೊಂದಿಗೆ ಬೆಳೆದು ವಿದ್ಯಾಭ್ಯಾಸ ಮುಗಿಸಿ, ೧೯ರ ಹರೆಯದಲ್ಲಿಯೇ ಸ್ವಂತ ಪುಸ್ತಕ ಪ್ರಕಾಶನ ಸಂಸ್ಥೆ ಆರಂಭಿಸಿದ ಸಾಹಸಿ ಶ್ರೀ ಮಹಾಬಲೇಶ್ವರ ಭಟ್ಟರು. ಪುಸ್ತಕ ಪ್ರಕಾಶನ ಸಂಸ್ಥೆ ಕಟ್ಟಿ ಬೆಳೆಸುವುದೆಂದರೆ ಅದೆಷ್ಟು ಕಷ್ಟಸಾಧ್ಯವಾದ ಸಂಗತಿಯೆಂಬುದನ್ನು ಬಲ್ಲವರೇ ಬಲ್ಲರು. ಸಾಹಿತ್ಯ ಪ್ರೇಮ, ಅಚಲವಾದ ನಿಷ್ಠೆ, ಧೀರ ಮನೋಬಲದಿಂದ ಶ್ರೀ ಭಟ್ಟರು ಸಾಹಸದ ಕಾರ್ಯವನ್ನೇ ಆಯ್ದುಕೊಂಡವರು. ಅವರ ಈ ಛಲ, ಹೋರಾಟದ ಪ್ರವೃತ್ತಿಯೇ ಅವರ ಮುಂದಿನ ಜೀವನದ ಯಶಸ್ಸಿಗೆ ನಾಂದಿಯಾಯಿತು. ೧೯೪೯ರಲ್ಲಿ ಸಾಹಿತ್ಯ ಪರಿಷತ್ತಿನ ಕವಿಗೋಷ್ಠಿಯಲ್ಲಿ ಭಾಗವಹಿಸುವುದರ ಮೂಲಕ ಸಾಹಿತ್ಯವೇದಿಕೆಯೇರಿದ ಶ್ರೀಯುತರ ಅಲ್ಲಿಂದ ಮುಂದೆಂದೂ ಒಮ್ಮೆಯೂ ಹಿಂದಿರುಗಿ ನೋಡಲಿಲ್ಲ. ಮುಂದೆ ಮುಂದೆ ಸಾಗಿದರು. ಎಡರು–ತೊಡರು ಕಷ್ಟ ನಷ್ಟಗಳ ಗಣನೆಯಿಲ್ಲದೆ ಸಾಹಿತ್ಯದ ಹರಿಕಾರರಾಗಿ ಸಾಹಿತ್ಯ ಸರಸ್ವತಿಯ ವಿನಮ್ರ ಸೇವಕನಂತೆ ಒಂಟಿ ಪಯಣಿಗರಾಗಿ ಸಾಹಿತ್ಯ ಸರಸ್ವತಿಯ ವಿನಮ್ರ ಸೇವಕನಂತೆ ಒಂಟಿ ಪಯಣಿಗರಾಗಿ ಮುನ್ನಡೆದರು.

ಸುಸಂಸ್ಕೃತವಾದ ನಿರಾಡಂಬರ ಬದುಕು ಅವರದು. ಸರಸ ಸಜ್ಜನಿಕೆಯು ಶ್ರೀ ಭಟ್ಟರ ಹುಟ್ಟುಗುಣ. ಅಹಮಿಕೆಯ ಲವಲೇಶವನ್ನೂ ನಾವವರ ಜೀವನ ಕ್ರಮದಲ್ಲಿ

ಕಾಣಲಾರೆವು. ಎಂತಹ ದುರ್ಧರ ಪ್ರಸಂಗದಲ್ಲಿಯೂ ನೋವಿನ ಗೆರೆಗಳನ್ನು ಅವರ ಮುಖದಲ್ಲಿ ಗುರುತಿಸುವುದು ಅಸಾಧ್ಯ. ಕಷ್ಟ ಸುಖಗಳನ್ನು ಏಕಪ್ರಕಾರವಾಗಿ ಸ್ವೀಕರಿಸುವ ಸ್ಥಿತ ಪ್ರಜ್ಞರು. ಅವರು. ಅವರ ಸುಸಂಸ್ಕೃತವಾದ ಮನಸ್ಸೇ ಅವರ ಬರವಣಿಗೆಯಲ್ಲಿಯೂ ಪ್ರತಿಫಲಿಸಿದೆ. ಶ್ರೀ ಭಟ್ಟರ ಬರವಣಿಗೆಯಾದರೋ ಬಹುರೂಪಿ. ಅವರ ಅಪಾರ ಜೀವನಾನುಭವದ ನಿಚ್ಚಳವಾದ ಬೆಳಕು ಅವರ ಬರವಣಿಗೆಯಲ್ಲಿಯೂ ಮೂಡಿ ಬಂದಿದೆ. ಜನ ಜೀವನದ ನಾಡಿ ಮಿಡಿತ ಬಲ್ಲ ಶ್ರೀ ಭಟ್ಟರು ಕುಶಲ ಕತೆಗಾರರು. ಆಕರ್ಷಕ ಶೈಲಿ ಅವರದು. 'ಗುಲಾಬಿ' 'ತೋರಣ' ಕೃತಿಗಳ ಮೂಲಕ, 'ಅಣ್ಣತಂಗಿ'ಯೇ ಮೊದಲಾದ ಕಾದಂಬರಿಗಳ ಮೂಲಕ ಶ್ರೀಭಟ್ಟರು ಕನ್ನಡದ ಯಶಸ್ವೀ ಗದ್ಯ ಲೇಖಕರಲ್ಲಿ ಒಬ್ಬರೆನ್ನುವುದು ಖಚಿತವಾಗಿದೆ. ಅವರು ಸೂಕ್ಷ್ಮ ಸಂವೇದನಾ ಶೀಲ ಕವನಗಳ 'ಹೂಮಾಲೆ' ಕಟ್ಟಿದ್ದಾರೆ. ಮಲೆನಾಡಿನ ಅನನ್ಯ ಮುಗ್ಧ ಸೌಂದರ್ಯರಾಶಿಯ ಮಧ್ಯೆ ನಿಂತು 'ಋತುಗಾನ' ಹಾಡಿದ್ದಾರೆ. ಭಟ್ಟರದು ಮೂಲತಃ ಕವಿಹೃದಯ. ಭಾವಜೀವಿ ಅವರು. ಹಾಗಾಗಿಯೇ ಇತರರ ಕಷ್ಟ ಸುಖಗಳಿಗೆ, ನೋವು ನಲಿವುಗಳಿಗೆ ಮೃದು ಮನಸ್ಸಿನ ಅವರು ಬಹುಬೇಗ ಸ್ಪಂದಿಸುವರು. ಸಾಹಿತಿಗಳನೇಕರ ನಿಕಟ ಪರಿಚಯ ಸಂಪರ್ಕ ಇಟ್ಟುಕೊಂಡಿರುವ ಶ್ರೀಯುತರು ಸಾಹಿತಿಗಳನ್ನು ಪರಿಚಯಿಸುವ 'ಸಾಹಿತ್ಯ ಶಿಲ್ಪಿಗಳು' 'ಕನ್ನಡ ಕುಲದೀಪಕರು'ಗಳಂತಹ ಮಹತ್ವದ ಕೃತಿಗಳನ್ನು ರಚಿಸಿದ್ದಾರೆ. ನಾಡಿನ ಪ್ರಮುಖ ಪತ್ರಿಕೆಗಳಲ್ಲಿ ಅಂಕಣಕಾರರಾಗಿ, ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆಯುವುದರ ಮೂಲಕ ಆಕಾಶವಾಣಿ ಭಾಷಣಗಳಿಂದ ಕನ್ನಡ ಸಾರಸ್ವತ ಲೋಕದಲ್ಲಿ ಮಿಗಿಲಾದ ಸ್ಥಾನವನ್ನೂ ಅಪಾರ ಸಂಖ್ಯೆಯ ಅಭಿಮಾನಿಗಳನ್ನೂ ಶ್ರೀ ಭಟ್ಟರು ಗಳಿಸಿಕೊಂಡಿದ್ದಾರೆ.

ಶ್ರೀ ಮಹಾಬಲೇಶ್ವರ ಭಟ್ಟರದು ಬಹುಮುಖವಾದ ಪ್ರತಿಭೆ. ಜೀವನದ ವಿವಿಧ ರಂಗಗಳಲ್ಲಿ ಅವರು ಅಚ್ಚಳಿಯದ ಹೆಜ್ಜೆಗುರುತುಗಳನ್ನು ಮೂಡಿಸಿದ್ದಾರೆ. ರಾಜಕೀಯ ವಲಯದಲ್ಲಿ, ಸಾಮಾಜಿಕ ಕ್ಷೇತ್ರದಲ್ಲಿ, ಸಾಂಸ್ಕೃತಿಕ ರಂಗದಲ್ಲಿ, ಸಹಕಾರ - ಸಂಘಸಂಸ್ಥೆಗಳಲ್ಲಿ ಅವರು ಸಾಕಷ್ಟು ಉಪಯುಕ್ತ ಕೆಲಸಮಾಡಿದ್ದಾರೆ. ಸಾಗರ ತಾಲ್ಲೂಕು ಕಾಂಗ್ರೆಸ್ ಅಧ್ಯಕ್ಷರಾಗಿ, ಶಿವಮೊಗ್ಗ ಜಿಲ್ಲಾ ಕಾಂಗ್ರೆಸ್ ಸಮಿತಿ ಸದಸ್ಯರಾಗಿ, ಉಪಾಧ್ಯಕ್ಷರಾಗಿ ಕರ್ತವ್ಯ ನಿರ್ವಹಿಸಿದ್ದಾರೆ. ನಮ್ಮದು 'ಭೂಪತಿಯು ಕವಿಯಾಗಿ; ಕವಿ ಚಮೂಪತಿಯಾಗಿ' ಮೆರೆದಿರುವ ನಾಡು. ಭಟ್ಟರು ರಾಜಕೀಯದಲ್ಲಿದ್ದೂ ಕವಿಯಾದರು. ಕವಿಗಳಾಗಿಯೂ ವಿವಿಧ ರಂಗಗಳ ಕರ್ಣಧಾರತ್ವ ವಹಿಸಿ ಯಶಸ್ವಿಯಾದವರು. ಅವರು ಪ್ರಮುಖ ಸಹಕಾರಿ ಧುರೀಣರು ಸಾಗರ ತಾ. ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ, ಸಾಗರ ಕೃಷಿ ಭೂ ಅಭಿವೃದ್ಧಿ ಬ್ಯಾಂಕಿನ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ. ಮಲೆನಾಡು ಅಭಿವೃದ್ಧಿ

ಪ್ರತಿಷ್ಠಾನದ ಉಪಾಧ್ಯಕ್ಷರಾಗಿ ಇಂದಿಗೂ ಕಾರ್ಯನಿರ್ವಹಿಸುತ್ತಲಿದ್ದಾರೆ. ಸಾಂಸ್ಕೃತಿಕ ಸಂಘ ಕಟ್ಟಿಬಲಪಡಿಸಿ ಅದರ ಸೂತ್ರದಾರರಾಗಿ ಸಾಂಸ್ಕೃತಿಕ ಚಟುವಟಿಕೆಗಳ ಮೂಲಕ ಜನಾನುರಾಗ ಗಳಿಸುವಲ್ಲಿಯೂ ಶ್ರೀಯುತರು ಯಶಸ್ವಿಯಾಗಿದ್ದಾರೆ. 'ಕನ್ನಡ ಸಂಘದ' ಅಧ್ಯಕ್ಷರಾಗಿ, ಇತ್ತೀಚೆಗೆ ಸಾಗರ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ, ಕನ್ನಡ ನಾಡು ನುಡಿಗೆ ಅನುಪಮವಾದ ತಮ್ಮ ಸೇವೆಯನ್ನು ಶ್ರೀಯತರು ಸಲ್ಲಿಸುತ್ತಲಿದ್ದಾರೆ. ಅನೇಕ ಸಾಮಾಜಿಕ ಕಾರ್ಯಕ್ರಮವಾಗುವ ಬಗೆಯಲ್ಲಿ ತಮ್ಮ ಕೈಲಾದ ನಿಸ್ಪೃಹ ಸೇವೆ ಸಲ್ಲಿಸುತ್ತಿರುವ ಶ್ರೀಯುತ ಟಿ. ಮಹಾಬಲೇಶ್ವರ ಭಟ್ಟರು ನಿಜವಾದ ಅರ್ಥದ ವಿಶ್ವಮಾನವತಾವಾದಿ.

ಶ್ರೀಯತ ಟಿ. ಮಹಾಬಲೇಶ್ವರ ಭಟ್ಟರು ಏಳು ದಶಕಗಳ ಏಳು-ಬೀಳುಗಳಲ್ಲಿ ಸಾಕಷ್ಟುಪರಿಪಕ್ವತೆ ಪಡೆದಿದ್ದಾರೆ. ಶಿಸ್ತಿನ ಜೀವನಕ್ರಮ, ಅಚ್ಚುಕಟ್ಟಾದ ಜೀವನ ಶೈಲಿ, ಕರ್ತವ್ಯ ತತ್ಪರ, ಕಾರ್ಯಶೀಲ ಜೀವನ ಮಾರ್ಗದಿಂದಾಗಿ ಶ್ರೀ ಭಟ್ಟರು ವಿಶಿಷ್ಟವಾದ ವ್ಯಕ್ತಿತ್ವವನ್ನು ರೂಪಿಸಿಕೊಂಡಿದ್ದಾರೆ. ಆಲಸ್ಯವೆನ್ನುವುದು ಅವರ ಬಳಿ ಎಲ್ಲಿಯೂ ಸುಳಿಯದು. ಅವರೊಂದಿಗೆ ಮಾತು ಕತೆಯಲ್ಲಿ ವೇಳೆ ಸರಿದುದರ ಅರಿವಾಗುವುದಿಲ್ಲ. ಅವರ ಅಂತರಂಗ ಬೇರಲ್ಲ - ಬಹಿರಂಗ ಬೇರಲ್ಲ. ಮುಚ್ಚು ಮರೆಗೆ ಅವರಲ್ಲಿ ಅವಕಾಶವೇ ಇಲ್ಲ. ಬೇದೂರಿನ ಅಡಿಕೆ ತೋಟದಾಚಿನ ಮನೆಯಿರಲಿ, ಸಾಗರದ ಪೇಟೆಯ ಮನೆಯಿರಲಿ - ಎಲ್ಲೆಂದರಲ್ಲಿ ಶ್ರೀ ಭಟ್ಟರು ಲಭ್ಯ. ಅವರ ಈ ಇಳಿವಯಸ್ಸಿನಲ್ಲಿಯೂ ಅಷ್ಟೊಂದು ಚುರುಕು-ಚಟುವಟಿಕೆ. ಒಂದು ನಿಮಿಷವನ್ನೂ ವ್ಯರ್ಥವಾಗಿ ಕಳೆಯದ ಲವಲವಿಕೆ. ಅವರ ಈ ಜೀವನೋತ್ಸಾಹವೇ ಅವರ ಯಶಸ್ಸಿಗೆ ಕಾರಣವಿರಬೇಕು.

ನೆಮ್ಮದಿ ತುಂಬಿದ ತುಂಬು ಸಂಸಾರ. ಮಡದಿ ಮಕ್ಕಳು, ಮೊಮ್ಮಕ್ಕಳು, ಆಪ್ತರು, ಬಂಧು ಮಿತ್ರರುಗಳ ಬಳಗ. ಸಾಹಿತ್ಯದ ಸಿರಿಗಂಧದ ಆಹ್ಲಾದಕರ ಪರಿಸರ. ನಿಜಕ್ಕೂ ಶ್ರೀಭಟ್ಟರದು ಆದರ್ಶ ಬದುಕು. ಶ್ರೀ ಮಹಾಬಲೇಶ್ವರ ಭಟ್ಟರಿಗೆ ದೇವರು ಆಯುರಾರೋಗ್ಯ ಭಾಗ್ಯವನ್ನಿತ್ತು ಅನುಗ್ರಹಿಸಲೆಂಬುದೇ ಅವರ ಅಭಿಮಾನಿಗಳೆಲ್ಲರ ಹಾರೈಕೆ.

# ಸಾಹಿತ್ಯ ಪ್ರಚಾರಕ

- ನಾ.ಡಿಸೋಜ

ನನಗೂ ಶ್ರೀ ಮಹಾಬಲೇಶ್ವರ ಭಟ್ಟರಿಗೂ ಕೇವಲ ಹತ್ತು ವರ್ಷಗಳ ಅಂತರ. ಅಂತೆಯೇ ನಾನು ಅವರನ್ನು ಕಳೆದ ಸುಮಾರು ನಲವತ್ತೈದು ವರ್ಷಗಳಿಂದ ನೋಡುತ್ತಿದ್ದೇನೆ. ಇಂದಿನ ಪೋಲೀಸ್ ಠಾಣೆಯ ಈ ಮಗ್ಗುಲಲ್ಲಿ, ಜೆ.ಸಿ. ರಸ್ತೆಗೆ ಅಭಿಮುಖವಾಗಿ ಅವರ ಅಂಗಡಿ'ಮಹಾನಂದ ಸ್ಟೋರ್ರ್ಸ್'. ಅಂಗಡಿಗೆ ಮೂರು-ನಾಲ್ಕು ನಾಮಫಲಕಗಳು ತೂಗುಬಿದ್ದ ನೆನಪು. ಮಹಾನಂದ ಸ್ಟೋರ್ರ್ಸ್, ಜಲಂಧರ ಪ್ರಕಟನಾಲಯ, ಬರಹಗಾರ ಮಂಡಳಿ ಹೀಗೆ. ಅಂಗಡಿ ಮುಂದೆ ಮೂರುಕಡೆ ಮರದ ಗೂಟ ನೆಟ್ಟು ನಿರ್ಮಿಸಿದ ಒಂದು ಅಂಗಳ. ಈ ಅಂಗಡಿಗೆ ನಾನು ನಿತ್ಯದ ಗಿರಾಕಿ. ಕಾರಣವೇನೆಂದರೆ ನಮ್ಮ ಮನೆ ವಿದ್ಯುತ್ ಮಂಡಲಿಯ (ಆಗ ಅದು ಮೈಸೂರು ಸರ್ಕಾರದ ವಿದ್ಯುತ್ ಇಲಾಖಾ ಕಾಲೋನಿ) ಬಳಿ. ನನ್ನ ಅಣ್ಣ, ಭಟ್ಟರು ತುಂಬಾ ಸ್ನೇಹಿತರು. ನಮ್ಮ ಮನೆಯಲ್ಲಿ ಎಲ್ಲ ಸಾಮಾನುಗಳನ್ನು ನಾನು ಕೊಳ್ಳುತ್ತಿದ್ದುದು ಮಹಾನಂದ ಸ್ಟೋರ್ಸಿನಲ್ಲಿ. ಹೀಗಾಗಿ ಉಪ್ಪಿಗೆ, ಅಕ್ಕಿಗೆ, ಮೆಣಸಿನಕಾಯಿಗೆ ನಾನು ನಿತ್ಯ ಈ ಅಂಗಡಿಗೆ ಹೋಗುವವ. ಈ ಅಂಗಡಿಯಲ್ಲಿ ನನಗೆ ಇನ್ನೊಂದು ಆಕರ್ಷಣೆಯೂ ಇತ್ತು. ಅದು ಅಲ್ಲಿನ ಬೀರುವಿನಲ್ಲಿ ಇರಿಸಿದ ಪುಸ್ತಕಗಳು.

ಭಟ್ಟರ ಸುವ್ಯವಸ್ಥೆಯನ್ನು, ಅಚ್ಚುಕಟ್ಟುತನವನ್ನು ನಾನು ಅಂದೇ ಕಂಡವ. ಅಂಗಡಿಯೊಳಗೆ ಕಾಲಿಡುತ್ತಿರಲು ಎಡಗಡೆ ಮೂರು-ನಾಲ್ಕು ಪುಸ್ತಕದ ಬೀರುಗಳು. ಬಲಗಡೆಗೆ ಭಟ್ಟರು ಕುಳಿತುಕೊಳ್ಳುವ ಕುರ್ಚಿ. ಅವರ ಮುಂದೆ ಪೆಪ್ಪರಮೆಂಟು, ಚಾಕಲೇಟುಗಳು, ಗಾಜಿನ ಬಾಟಲಿಗಳು, ಅವರ ಹಿಂದೆ ಮತ್ತೆ ಪುಸ್ತಕದ ಬೀರುಗಳು, ಅನಂತರ ದಿನಸಿ ಇತ್ಯಾದಿ ಸಾಮಾನುಗಳ ಚೀಲ, ಪೆಟ್ಟಿಗೆಗಳು.

ನಾನು ಹೋದಾಗಲೆಲ್ಲ, ಕಡಿಮೆ ಎಂದರೆ, ಅರ್ಧಗಂಟೆ ಅಲ್ಲಿರುತ್ತಿದೆ. ಬೀರುವಿನಲ್ಲಿ ಜೋಡಿಸಿ ಇರಿಸಿದ ಒಂದೊಂದೇ ಪುಸ್ತಕದ ಹೆಸರನ್ನು ಓದುತ್ತಿದ್ದೆ. ಕೆಲವು ಪುಸ್ತಕಗಳ ಮುಖಪುಟ ಪೂರ್ತಿ ಹೊರಗೆ ಕಾಣಲೆಂದು ಪುಸ್ತಕಗಳನ್ನು ಬೀರುವಿನಲ್ಲಿ ಇರಿಸುವುದು ಭಟ್ಟರ ರೂಢಿ. 'ಅಮರನಾದ್ಯೆ ತಂದೆ', 'ಎನ್.ಜಿ.ಓ'

(ಅತ್ರೇಯ ಅವರ ನಾಟಕ) 'ಗುಲಾಬಿ', 'ಹೊಸೂರಿನ ಹಲವರು', 'ತೋರಣ' ಮುಂತಾದ ಪುಸ್ತಕಗಳನ್ನು ನಾನಲ್ಲಿ ನೋಡಿದ್ದೆ. ಹೀಗೆಯೇ ಅ.ನ.ಕೃ, ತ.ರಾ.ಸು, ಕಾರಂತ, ಗೋಕಾಕರ ಕೃತಿಗಳನ್ನುಕೂಡ. ಭಟ್ಟರ ಬಲಭಾಗದಲ್ಲಿ ಸಣ್ಣದೊಂದು ಟೀಪಾಯಿ. ಅದರಮೇಲೆ ಚಿತ್ರಗುಪ್ತ, ಜನಪ್ರಗತಿ, ಪ್ರಜಾಮತ ಮೊದಲಾದ ಪತ್ರಿಕೆಗಳು. ಇವುಗಳನ್ನೆಲ್ಲಾ ಕೇವಲ ದೂರದಿಂದ ನೋಡುವುದಷ್ಟೇ ನನ್ನ ಕೆಲಸ. ನನ್ನ ಅಣ್ಣ ಸಾಹಿತ್ಯಾಭಿಮಾನಿಯಾಗಿದ್ದು, ಪುಸ್ತಕೊಳ್ಳುವ ಹವ್ಯಾಸ ಆತನಿಗೂ ಇದ್ದುದರಿಂದ ಭಟ್ಟರ ಅಂಗಡಿಯ ಮೊಹರೆ ಒತ್ತಿಸಿಕೊಂಡ ಕಾದಂಬರಿಗಳು ನಮ್ಮ ಮನೆಗೂ ಬರುತ್ತಿದ್ದವು. ನಾನು ಭಟ್ಟರ ಅಂಗಡಿಗೆ ಹೋದಾಗಲೇ ಅಲ್ಲಿಗೆ ಸುಬ್ಬಣ್ಣ, ರಾಮಪ್ಪ ಇನ್ನೂಕೆಲವರು ಬರುತ್ತಿದ್ದ ಮಸಕು ನೆನಪು. ಆಗೆಲ್ಲಾ - ಸಾಹಿತ್ಯದ ಬಗ್ಗೆ ಮಾತುಕತೆಯೂ ಅಲ್ಲಿ ನಡೆಯುತ್ತಿತ್ತು. ನನ್ನ ಹದಿಮೂರು-ಹದಿನಾಲ್ಕನೇ ವಯಸ್ಸಿಗೇನೆ ಸಾಹಿತ್ಯದತ್ತ ಗಮನ ಸೆಳೆಯುವಲ್ಲಿ ಈ ಮಹಾನಂದ ಸ್ಟೋರ್ಸ್‌ನ ಕಾಣಿಕೆಯೂ ಇದೆ.

ಅಲ್ಲಿಯೇ, ಸ್ವಲ್ಪ ಮುಂದೆ ಭಟ್ಟರ ಮನೆ. ಭಟ್ಟರು ಅಂದು ಸಾಗರದಲ್ಲಿ ಸಾಕಷ್ಟು ಸಾಹಿತ್ಯಿಕ ಕಾರ್ಯಕ್ರಗಳನ್ನು ಕೂಡಾ ಹಮ್ಮಿಕೊಳ್ಳುತ್ತಿದ್ದರು. ಸಾಗರದಲ್ಲಿ ಅಂದು ನಾಟಕ ಚಟುವಟಿಕೆಗಳು ಹೆಚ್ಚು. ಸಾಗರದಲ್ಲಿರುವ ಯಾವುದೇ ಮಹಡಿಯತ್ತ ಕಣ್ಣು ಹಾಯಿಸಿದರೂ ಅಲ್ಲೊಂದು ಕಲಾಸಂಘದ ಫಲಕ ಕಾಣಿಸುವಂಥಹ ಸ್ಥಿತಿ. ಜೊತೆಗೆ ಸಾಹಿತ್ಯದ ಚಟುವಟಿಕೆಗಳೂ ಕೂಡ ಅಧಿಕವಾಗಿದ್ದವು. ಅಂದು ಬಸ್ಸುಗಳು ಹೆಚ್ಚಾಗಿ ಇರಲಿಲ್ಲ. ಬೆಂಗಳೂರು, ಮೈಸೂರು, ಶಿವಮೊಗ್ಗದಿಂದ ಬರುವವರೆಲ್ಲಾ ರೈಲಿನಲ್ಲಿಯೇ ಬರುತ್ತಿದ್ದರು. ಸಾಗರಕ್ಕೆರೈಲು ಬಂತೆಂದರೆ, ಇಂದಿನ ಜೆ.ಸಿ. ರಸ್ತೆಯಲ್ಲಿ ಜನವೋ ಜನ. ಕೂಲಿಯವರ ತಳ್ಳುಗಾಡಿಗಳು. ಹೀಗೆ ಸಾಗರಕ್ಕೆ ಬಂದವರಲ್ಲಿ ನಾನು ಗಮನಿಸಿದ್ದು ಅರ್ಚಿಕ ವೆಂಕಟೇಶ, ಅ.ನ.ಕೃ, ತ.ರಾ.ಸು, ವಿ.ಸೀ. ಗೊರೂರು, ದೇವುಡು-ಮೊದಲಾದವರನ್ನು. ಇವರ ಜತೆ ಭಟ್ಟರೂ ಇರುತ್ತಿದ್ದುದು ನನಗೊಂದು ಅಚ್ಚರಿ. ಇವರನ್ನೆಲ್ಲ ತಮ್ಮ ಮನೆಯಲ್ಲಿಯೇ ಇರಿಸಿಕೊಂಡು ಅಂದಿನ ಕಾರ್ಯಕ್ರಮಗಳನ್ನು ನಡೆಸುತ್ತಿದ್ದರು ಭಟ್ಟರು. ಕೆಲ ಕಾರ್ಯಕ್ರಮಗಳು ಪುರಸಭೆಯ ಒಳಗೆ ನಡೆದರೆ, ಕೆಲವು ಹೊರಗೂ ನಡೆಯುತ್ತಿದ್ದವು. ಪುರಸಭೆಯ ಮುಂಬದಿಯಲ್ಲಿ ಹಿಂದೆ ಗಾಂಧೀ ಪ್ರತಿಮೆ, ಕೈ ತೋಟ ಇರಲಿಲ್ಲ. ಪುರಸಭೆಯ ಮುಂದಿನ ಜಗಲಿಯೇ ವೇದಿಕೆಯಾಗಿ, ಜನ-ನಾವು-ಈಗ ಗಾಂಧೀ ಪ್ರತಿಮೆ ಇರುವಲ್ಲಿ ಕೂರುತ್ತಿದ್ದೆವು. ರಸ್ತೆಯ ತನಕ ಜನ ಸೇರುತ್ತಿದ್ದರು. ಇಂತಹ ಹಲವು ಕಾರ್ಯಕ್ರಮಗಳನ್ನು ಭಟ್ಟರು ನಡೆಸಿದ ನೆನಪು. ಸಾಹಿತ್ಯದ ವಿದ್ಯಾರ್ಥಿಯಾದ ನನಗೆ ಈ ಕಾರ್ಯಕ್ರಮಗಳಿಂದ ಆದ ಉಪಯೋಗ, ಪ್ರಯೋಜನ ಹೆಚ್ಚು. ನಾನು

ದೂರ ನಿಂತು ಈ ಬರಹಗಾರರನ್ನು ನೋಡಿದ್ದು, ಇವರ ಮಾತು ಕೇಳಿದ್ದು, ಇವರ ಚಿಂತನೆಗಳು ನನ್ನಮೇಲೆ ಮಾಡಿದ ಪರಿಣಾಮ-ಇವೆಲ್ಲವುಗಳ ಬೆಲೆ ಕಟ್ಟಲು ಸಾಧ್ಯವಾಗಲಿಕ್ಕಿಲ್ಲ.

೧೯೫೩ರಲ್ಲಿ ನಾನು ಹೆಚ್ಚಿನ ವಿದ್ಯಾಭ್ಯಾಸಕ್ಕೆಂದು ಶಿವಮೊಗ್ಗಕ್ಕೆಹೋದೆ. ಅನಂತರದ ಒಂದೆರಡು ವರ್ಷಗಳಲ್ಲಿನನ್ನ ಅಣ್ಣನಿಗೆ ಮೈಸೂರಿಗೆ ವರ್ಗವಾಗಿ, ನಾನೂ ಮೈಸೂರು ಸೇರಿದೆ. ೧೯೬೯ರಲ್ಲಿ ಉದ್ಯೋಗಿಯಾಗಿ ನಾನು ಶರಾವತಿ ಯೋಜನಾ ಪ್ರದೇಶಕ್ಕೆ ಬಂದಾಗ ಸಾಗರದಲ್ಲಿ ಸಾಕಷ್ಟು ಬದಲಾವಣೆಗಳಾಗಿದ್ದವು. ಮಹಾಬಲೇಶ್ವರ ಭಟ್ಟರು ತಮ್ಮ ಅಂಗಡಿಯನ್ನು ಮಾರ್ಕೆಟ್ ರಸ್ತೆಗೆ ಬದಲಾಯಿಸಿದ್ದರು. ಇಲ್ಲಿಯೂ ಕೂಡ ಅದೇ ಹಿಂದಿನ ವ್ಯವಸ್ಥೆ. ಬೀರುವಿನಲ್ಲಿ ಪುಸ್ತಕಗಳು, ತೂಗು ಹಾಕಿದ ಪತ್ರಿಕೆಗಳು.

ಈಗ ನಾನೂ ಭಟ್ಟರು ಸ್ನೇಹಿತರು. ಸಮಾನ ಅಭಿರುಚಿಯುಳ್ಳವರು. ಕನ್ನಡ ಸಂಘ, ಜಿಲ್ಲಾ ಬರಹಗಾರರ ಮಂಡಲಿಗಳ ಸ್ಥಾಪನೆ ಮಾಡಿದ್ದು ಈ ಸಂದರ್ಭದಲ್ಲಿಯೇ. ಭಟ್ಟರು ಅವರ ಪ್ರಕಾಶನದ ಮೂಲಕ ನನ್ನ ಮೊದಲ ಕಾದಂಬರಿ 'ಬಂಟೆ ಬೆಂಕಿ'ಯನ್ನು ಪ್ರಕಟಿಸಿದರು. ಅವರ ಪ್ರಕಾಶನದ ಮೂಲಕ ಹಲವಾರು ಲೇಖಕರು ಬೆಳಕಿಗೆ ಬಂದರು.

ಇದೀಗ ಭಟ್ಟರು- ಸಾಗರ ತಾಲೂಕು ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು ಕೂಡ. ಸಾಹಿತ್ಯ ಕ್ಷೇತ್ರ ಕೇವಲ ಲೇಖಕರಿಂದ, ಪ್ರಕಾಶಕರಿಂದ ಓದುಗರಿಂದ ಮಾತ್ರ ಬೆಳೆಯುವುದಿಲ್ಲ, ಅದಕ್ಕೆ ಸಾಹಿತ್ಯ ಪ್ರಚಾರಕರೂ ಬೇಕು. ಈ ಪ್ರದೇಶದಲ್ಲಿ ಕಳೆದ ನಲವತ್ತು, ನಲವತ್ತೈದು ವರ್ಷಗಳಿಂದ ಜನರಲ್ಲಿ ಸಾಹಿತ್ಯಾಭಿರುಚಿ, ಭಾಷಾಪ್ರೇಮ ಜೀವಂತವಾಗಿದ್ದರೆ ಅದಕ್ಕೆ ಶ್ರೀ ಭಟ್ಟರು ಕಾರಣ-ಎಂಬುದನ್ನು ಒಪ್ಪಿಕೊಳ್ಳುತ್ತಾರೆ.

ಭಟ್ಟರು ಇಲ್ಲಿ ಜಿಲ್ಲಾ ಬರಹಗಾರರ ಸಮ್ಮೇಳನ ನಡೆಸಿದ್ದಾರೆ. ಸಾಹಿತ್ಯ ಸಮ್ಮೇಳನ ಮಾಡಿದ್ದಾರೆ. ಕುವೆಂಪು ಸನ್ಮಾನ, ಗೋಕಾಕ, ಮುಗಳಿಯವರಿಗೆ ಸನ್ಮಾನ, ವಸಂತ ಸಾಹಿತ್ಯೋತ್ಸವ, ಹೀಗೆ ಹಲವಾರು ಕಾರ್ಯಕ್ರಮಗಳು ಇಲ್ಲಿ ನಡೆದಿವೆ.. ಕನ್ನಡ ಸಾಹಿತ್ಯಕ್ಷೇತ್ರದ ಎಲ್ಲ ದಿಗ್ಗಜಗಳೂ ಇಲ್ಲಿಗೆ ಬಂದಿದ್ದಾರೆ. ಇದೆಲ್ಲದರ ಹಿಂದೆ ಭಟ್ಟರ ದೂರದೃಷ್ಟಿ, ವ್ಯವಸ್ಥೆ, ಅಚ್ಚುಕಟ್ಟುತನ, ಶ್ರಮ ಇದ್ದೇ ಇರುತ್ತದೆ. ಆಲದ ಮರದ ಕೆಳಗೆ ಏನೂ ಬೆಳೆಯುವುದಿಲ್ಲ ಎನ್ನುತ್ತಾರೆ. ಆದರೆ ಭಟ್ಟರು ಹಲವಾರು ಜನ ಕಿರಿಯ ಯುವಕರನ್ನು ಹೆಕ್ಕಿಕೊಂಡು ಅವರನ್ನುಬೆಳೆಸಿದ್ದಾರೆ. ಅವರಿಂದ ಕೆಲಸ ಮಾಡಿಸಿಕೊಂಡಿದ್ದಾರೆ.

ಸಾಹಿತ್ಯ ಪರಿಷತ್ತು ನಡೆಸಿಕೊಂಡು ಬರುತ್ತಿರುವ ಪುಸ್ತಕ ಮಾರಾಟ ಒಂದು ಸ್ವಾಗತಾರ್ಹ ಕೆಲಸ. ಜನ ಈ ಮಳಿಗೆಗೆ ದಂಡುಗಟ್ಟಿಕೊಂಡು ಬರುವುದನ್ನು

ನೋಡಿದರೆ ಲೇಖಕರು ನಿರಾಶರಾಗಬೇಕಾಗಿಲ್ಲ ಅನಿಸುತ್ತದೆ. ಐದು-ಆರುದಿನಗಳಲ್ಲಿ, ಅರವತ್ತು-ಎಪ್ಪತ್ತು ಸಾವಿರ ರೂಪಾಯಿಗಳ ಪುಸ್ತಕದ ಮಾರಾಟವಾಗುವುದು ಆಚ್ಚರಿಯ ಹಾಗೂ ಸಂತಸದ ವಿಷಯ. ಜನರ ಬಳಿಗೇನೆ ಪುಸ್ತಕ ತರುವುದರ ಮೂಲಕ ಜನರಲ್ಲಿಗುಪ್ತವಾಗಿದ್ದ ಸಾಹಿತ್ಯಪ್ರೇಮಕ್ಕೆಚಾಲನೆಯನ್ನು ಕೊಟ್ಟ ಭಟ್ಟರ ಪ್ರಯತ್ನ, ಯಾರೂ ಮೆಚ್ಚುವಂತಹದು.

ಭಟ್ಟರು ಅವರ ಉಡುಪಿನಲ್ಲಿ ಎಷ್ಟೊಂದು ಶುಭ್ರರೋ, ಅವರು ಹಮ್ಮಿಕೊಳ್ಳುವ ಕಾರ್ಯಕ್ರಮಗಳಲ್ಲಿಕೂಡ. ಸಂಪ್ರದಾಯವನ್ನು ಮೀರದ ಆಹ್ವಾನ ಪತ್ರಿಕೆಗಳು, ಸಭಾವ್ಯವಸ್ಥೆ, ಅಲ್ಲಿಯ ಬೇಕು-ಬೇಡಗಳನ್ನು ಹದಿನೈದು ದಿನಗಳಿರುವಾಗಲೇ ಪಟ್ಟಿಮಾಡಿಕೊಂಡು, ಎಲ್ಲದರಕಡೆ ಗಮನ ಹರಿಸುವ ಅವರಮುಂಜಾಗ್ರತೆ, ವೇಳೆಗೆ ಸರಿಯಾಗಿ ಕಾರ್ಯಕ್ರಮ ಆರಂಭಿಸಿ ನಡೆಸಿಕೊಂಡು ಹೋಗುವ ಅವರ ಸಮಯ ಪ್ರಜ್ಞೆ, ಸಮಾರಂಭ ಮುಕ್ತಾಯವಾದ ಮೇಲೂ ಅದರ ಸುದ್ದಿ-ಭಾವಚಿತ್ರಗಳು ಪತ್ರಿಕೆಗಳಲ್ಲಿ ಬರುವಂತೆ ನೋಡಿಕೊಳ್ಳುವ ಅವರ ಕುಶಲತೆ - ಇವೆಲ್ಲ ಭಟ್ಟರಿಗೆ ಮಾತ್ರ ಮೀಸಲು. ಇದನ್ನುಬೇರೆ ಯಾರೂ ಅನುಕರಣೆ ಮಾಡಲಾರರು.

'ಕಟ್ಟೆಯ ಕಲ್ಲುಕಟ್ಟೆಗೇ' - ಅನ್ನುವ ಹಾಗೆ ಭಟ್ಟರು ರಾಜಕೀಯವನ್ನು ಬಿಟ್ಟು ಸಾಹಿತ್ಯಕ್ಕೆ ಹಿಂತಿರುಗಿ ಬಂದದ್ದು ಸಾಗರ ಪ್ರಾಂತ್ಯಕ್ಕೆ ಒಳಿತಾಗಿದೆ. ಭಟ್ಟರು ನಮ್ಮೆಲ್ಲರ ಜತೆ ಮತ್ತೂ ಕೆಲಕಾಲ ಇರಲಿ ಎಂದು ಹಾರೈಸುತ್ತೇನೆ.

# ಸಾಹಿತ್ಯ ಕೃಷಿ ತಜ್ಞ

- ಹೊಸಬಾಳೆ ಸೀತಾರಾಮ ರಾವ್

ಎಲ್ಲ ಬಲ್ಲವರಿಲ್ಲ,ಬಲ್ಲವರು ಬಹಳಿಲ್ಲ।

ಬಲ್ಲಿದರಿದ್ದುಬಲವಿಲ್ಲ ಸಾಹಿತ್ಯ।

ವೆಲ್ಲ(ವ)ರಿಗಿಲ್ಲ ಸರ್ವಜ್ಞ॥

ಇದು ಸರ್ವಜ್ಞ ಕವಿಯ ಅನುಭವದ ಮಾತು. 'ಎಲ್ಲವನ್ನೂ ತಿಳಿದವನು (ಸರ್ವಜ್ಞ) ಇಲ್ಲ. ಅನುಭವಿಗಳೂ ಸಾಕಷ್ಟಿಲ್ಲ. ಇದ್ದರೂ ಕೆಲವರಿಗೆ ಯಾವಶಕ್ತಿಯೂ ಇಲ್ಲ. ಸಾಹಿತ್ಯವು ಎಲ್ಲರಿಗೆ ಇಲ್ಲ. ಕೆಲವೇ ಜನರು ಸಾಹಿತ್ಯಾಸಕ್ತರಾಗಿರುತ್ತಾರೆ.' ಎಂದು ಅದರ ಅರ್ಥ. ಸಾಹಿತ್ಯವೆಂದರೆ ರಸಾವಹವಾದ ಕಾವ್ಯ, ಕತೆ, ನಾಟಕ ಮುಂತಾದ ಅನೇಕ ಪ್ರಕಾರಗಳ ಬರವಣಿಗೆ ಎನ್ನಬಹುದು. ಸಾಮಗ್ರಿ, ಸಲಕರಣೆ ಎಂದೂ ಅದರ ಮತ್ತೊಂದು ಅರ್ಥ.. ಕಾವ್ಯ, ಸಾಹಿತ್ಯಾಸಕ್ತರಾಗಿದ್ದು, ತಮ್ಮ ಸುತ್ತಣ ಸಾಮಗ್ರಿಗಳನ್ನು ಸರಿಯಾಗಿ ಬಳಸಿಕೊಂಡು ಜೀವನವನ್ನು ಸಮೃದ್ಧವಾಗಿ ಮಾಡಿಕೊಳ್ಳುವವರು ಕೆಲವೇ ಜನರು - ಎಂದು ಈ ಪದ್ಯದ ಕೊನೆಯ ಸಾಲಿನ ತಾತ್ಪರ್ಯ. ಅಂತಹ ಕೆಲವೇ ಕೆಲವು ಜನರಲ್ಲಿ ಸಾಗರದ ಶ್ರೀ ಟಿ. ಮಹಾಬಲೇಶ್ವರ ಭಟ್ಟರನ್ನು ಹೆಸರಿಸಬಹುದು.

ಸುಮಾರು ೩೫-೪೦ ವರ್ಷಗಳಿಂದ ನಾನು ಮಹಾಬಲೇಶ್ವರ ಭಟ್ಟರನ್ನು ಬಲ್ಲೆ. ಸಾಗರದಲ್ಲಿಒಂದು ಸಣ್ಣ ಅಂಗಡಿಯನ್ನಿಟ್ಟುಕೊಂಡು, (ಕನ್ನಡ) ಪುಸ್ತಕ ವಿಭಾಗವನ್ನುಹೊಂದಿಸಿಕೊಂಡು ಸಾಹಿತಿಗಳ, ಸಾಹಿತ್ಯಾಸಕ್ತರ, ಕಲಾವಿದರ ಸಂಪರ್ಕವನ್ನಿಟ್ಟುಕೊಂಡಿದ್ದು ಈಗಲೂ ನನ್ನ ನೆನಪಿನಲ್ಲಿದೆ. ಭಟ್ಟರುಹುಟ್ಟಿದ್ದು ಮಲೆನಾಡಿನ, ಸಾಗರ ತಾಲೂಕಿನ ಒಂದು ಸಣ್ಣ ಹಳ್ಳಿಯಲ್ಲಿ. ಹಳ್ಳಿಗಳಲ್ಲಿ ವಿದ್ಯಾಭ್ಯಾಸಕ್ಕೆ ಆಗ ಶಾಲೆಗಳೇ ಇಲ್ಲದಕಾಲ. ಹೇಗೋ ಕಷ್ಟಪಟ್ಟು ವಿದ್ಯಾಭ್ಯಾಸವನ್ನು ಮಾಡಿ ಮೆಟ್ರಿಕ್ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಬಾಲ್ಯದಿಂದಲೂ ಅವರಿಗೆ ಸಾಹಿತ್ಯಾಸಕ್ತಿ ಹಾಗೂ ಎಲ್ಲಾ ಬಗೆಯ ಲಲಿತ ಕಲೆಗಳಲ್ಲೂ ಸಂಗೀತ, ನೃತ್ಯ, ಯಕ್ಷಗಾನ, ನಾಟಕ, ಗಮಕ, ಛಾಯಾಚಿತ್ರ ಅಭಿರುಚಿಯನ್ನು ಬೆಳೆಸಿಕೊಂಡರು. ಅದರ ಪರಿಣಾಮವಾಗಿ ತಮ್ಮ ೨೫ನೇ ವಯಸ್ಸಿಗೆ ನಾಡಿನ

ಬಹುತೇಕ ಎಲ್ಲ ಹಿರಿ-ಕಿರಿಯ ಸಾಹಿತಿಗಳ, ಕಲಾವಂತರ ಸ್ನೇಹವನ್ನು ಸಂಪಾದಿಸಿಕೊಂಡರು. ಹಾಗೂ ಅವರೊಡನೆ ನಿಕಟ ಸಂಪರ್ಕವನ್ನೂ ಇಟ್ಟುಕೊಂಡರು. ಅಲ್ಲದೆ ಆಗಿನ ಕಾಂಗ್ರೆಸ್ ಪಕ್ಷದಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದುದರಿಂದ ರಾಜ್ಯದ ಆಗಿನ ಮುಖ್ಯಮಂತ್ರಿಗಳಾಗಿದ್ದ ಕೆಂಗಲ್ ಹನುಮಂತಯ್ಯನವರು, ಹಿರಿಯ ರಾಜಕಾರಣಿ ಶ್ರೀ ಬದರಿನಾರಾಯಣ ಅಯ್ಯಂಗಾರ್ ಮೊದಲಾದವರ ವಿಶ್ವಾಸ ಗೌರವಗಳನ್ನು ಪಡೆದರು – ಹಾಗೆಯೇ ಸಾಗರದಲ್ಲಿ ಆಸಕ್ತರನ್ನು ಸೇರಿಸಿ, 'ಕನ್ನಡ ಸಂಘ'ವನ್ನು ಸ್ಥಾಪಿಸಿದರು. ಅದರ ಆಶ್ರಯದಲ್ಲಿ ಎಲ್ಲ ಪ್ರಕಾರದ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸಿ, ಹಿರಿಯ ಸಾಹಿತಿಗಳನ್ನು ಆಮಂತ್ರಿಸಿ, ಸಂಮಾನಿಸಿ, ಉಪನ್ಯಾಸಗಳನ್ನು ವ್ಯವಸ್ಥೆ ಮಾಡುತ್ತಿದ್ದರು. ಮಾಸ್ತಿ ವೆಂಕಟೇಶ ಅಯ್ಯಂಗಾರ್, ದ.ರಾ.ಬೇಂದ್ರೆ, ಅ.ನ.ಕೃಷ್ಣರಾಯರು, ಶಿವಮೂರ್ತಿ ಶಾಸ್ತ್ರಿಗಳು, ಶಿವರಾಮಕಾರಂತ, ವಿ.ಕೃ.ಗೋಕಾಕ, ವಿ. ಸೀತಾರಾಮಯ್ಯ, ಬಿ.ಹೆಚ್. ಶ್ರೀಧರ ಇನ್ನೂ ಅನೇಕ ಹಿರಿಯ ಸಾಹಿತಿಗಳು ಸಾಗರಕ್ಕೆ ಆಗಮಿಸಿ, ಸಾಗರದ ಜನತೆಯನ್ನು ತಮ್ಮ ಉಪನ್ಯಾಸಗಳಿಂದ ತಣಿಸಿ ಹೋದರು. ಈ ಎಲ್ಲ ಕಾರ್ಯ ಕ್ರಮಗಳಿಗೂ ನಾನು ಹೋಗಿ ಹಿರಿಯ ಸಾಹಿತಿಗಳ ಭಾಷಣಗಳನ್ನು ಕೇಳಿದ್ದೇನೆ. ಸಂತಸಪಟ್ಟಿದ್ದೇನೆ. ೧೯೭೦ ರ ನವೆಂಬರ್ ೧ ರಾಜ್ಯೋತ್ಸವ ದಿನದಂದು ರಾಷ್ಟ್ರಕವಿ ಕುವೆಂಪು ಅವರನ್ನು ಆಮಂತ್ರಿಸಿ, ಬರಮಾಡಿಕೊಂಡು, ಅವರಿಗೆ ಅತ್ಯಂತ ಹಾರ್ದಿಕ ಸನ್ಮಾನ ಕಾರ್ಯಕ್ರಮವನ್ನು ಏರ್ಪಡಿಸಿದ್ದು, ಸಾಗರದ ಇತಿಹಾಸದಲ್ಲಿ ಒಂದು ಚಿರಸ್ಮರಣೀಯ ದಿನ. ಆ ದಿನ ಆಗಮಿಸಿದ ಅತಿಥಿ ಮಹಾನುಭಾವರೂ ಅಂತಹವರೇ. ಕರ್ನಾಟಕ ವಿಶ್ವ ವಿದ್ಯಾನಿಲಯದ ಉಪ ಕುಲಪತಿಗಳಾಗಿದ್ದ (ವೈಸ್ ಛಾನ್ಸಲರ್) ಶ್ರೀ ಎ.ಎಸ್. ಅಡಕೆ, ಬೆಂಗಳೂರು ವಿಶ್ವವಿದ್ಯಾನಿಲಯದ ಕುಲಪತಿಗಳಾಗಿದ್ದ, ಶ್ರೀ ಟಿ.ಕೆ. ತುಕೋಳ್ ಹಾಗೂ ನಾಡಿನ ಅನೇಕ ಹಿರಿ-ಕಿರಿಯ ಸಾಹಿತಿಗಳು ಆಗಮಿಸಿದ್ದರು. ಇಬ್ಬರು ಪ್ರವೃತ್ತ ಕುಲಪತಿಗಳ ಮಧ್ಯೆ ನಿವೃತ್ತ ಕುಲಪತಿಗಳು ಶ್ರೀ ಕುವೆಂಪು ಅವರು ಉಪಸ್ಥಿತರಾಗಿದ್ದು, ಕವಿ-ಸಾಹಿತಿ ಶ್ರೀ ಎಸ್.ವಿ. ಪರಮೇಶ್ವರ ಭಟ್ಟರ ಅಭಿನಂದನಾ ಭಾಷಣವು ಎಲ್ಲರನ್ನೂ ತಲೆದೂಗಿಸಿತ್ತು. ತಮಗೆ ಸಾರ್ವಜನಿಕರು, ಸಂಘ-ಸಂಸ್ಥೆಯವರು ಹಾಕಿದ ಶ್ರೀಗಂಧದ ಹಾರಗಳ ರಾಶಿಯನ್ನು ನೋಡಿ ಶ್ರೀ ಕುವೆಂಪುರವರು ಸಂತೋಷಾಶ್ಚರ್ಯಗಳನ್ನು ವ್ಯಕ್ತಪಡಿಸುತ್ತಾ 'ಸಾಗರವು ಸಿರಿಗಂಧದಾಗರವು' ಎಂದು ಸಿಧಾನವಾಗಿ ತಮ್ಮ ಭಾಷಣವನ್ನು ಪ್ರಾರಂಭಿಸಿ, ತಮ್ಮ ಮೇರು ಕೃತಿ 'ಶ್ರೀ ರಾಮಾಯಣದರ್ಶನಂ' ಅದರಲ್ಲಿ ಅಂತರ್ಗತವಾದ ಕೆಲವು ಗೂಢ ವಿಷಯಗಳನ್ನು ಸರಳಗೊಳಿಸಿ ಹೇಳಿ, ತಮಗಿತ್ತ ಸನ್ಮಾನಕ್ಕೆ ಸಾಗರದ ಜನತೆಗೆ, ಶ್ರೀ ಮಹಾಬಲೇಶ್ವರ ಭಟ್ಟರಿಗೆ ಅಭಿನಂದನೆಗಳನ್ನು ಸಲ್ಲಿಸಿದರು. ಸಾಗರದ ಗಾಂಧೀಮೈದಾನದಲ್ಲಿ ಆ ದಿನ ಸೇರಿದ್ದ ಅಪಾರಜನಸ್ತೋಮ ಎಂತಹವರನ್ನೂ ದಂಗುಬಡಿಸುವಂತಿತ್ತು.

ನಂತರ, ನಾನು ಮೈಸೂರಿನ'ಉದಯರವಿ'ಯಲ್ಲಿ ಶ್ರೀ ಕುವೆಂಪುರವರನ್ನು ಭೇಟಿ ಮಾಡಿದ ಸಂದರ್ಭದಲ್ಲಿ, ಸಾಗರದ ಕಾರ್ಯಕ್ರಮದ ಬಗ್ಗೆ, ಶ್ರೀ ಮಹಾಬಲೇಶ್ವರ ಭಟ್ಟರ ಬಗ್ಗೆ ಶ್ರೀ ಕುವೆಂಪುರವರು ಬಹಳವಾಗಿ ಪ್ರಶಂಸೆಯನ್ನು ಮಾಡಿದರು. ಶ್ರೀ ಭಟ್ಟರ ಕಾರ್ಯದಕ್ಷತೆಗೆ ಇದು ಒಂದು ಉದಾಹರಣೆ.

ಶ್ರೀಯುತರು ಕೆಲವು ವರ್ಷಗಳಿಂದ, ಸಾಗರ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದು ಸಾಗರದಲ್ಲಿ ಪ್ರತೀ ವರ್ಷ ಹತ್ತಾರು ಕಾರ್ಯಕ್ರಮಗಳನ್ನು ಕನ್ನಡ ಪುಸ್ತಕ-ಪ್ರದರ್ಶನ ಹಾಗೂ ಮಾರಾಟ ಇವುಗಳನ್ನು ವ್ಯವಸ್ಥಿತವಾಗಿ ನಡೆಸಿಕೊಂಡು ಬರುತ್ತಿದ್ದಾರೆ. ತಾಲ್ಲೂಕಿನ ಹಾಗೂ ಅಕ್ಕಪಕ್ಕದ ತಾಲ್ಲೂಕುಗಳ ಸಾಹಿತ್ಯಾಸಕ್ತರನ್ನು ಸಂಘಟಿಸಿ, ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ವ್ಯವಸ್ಥೆ ಮಾಡುವುದು, ಅವರಿಗೆ ಕಷ್ಟವಾದ ಕೆಲಸವಾಗಿ ತೋರುವುದಿಲ್ಲ. ಬೇರೆಯವರಿಗೆ ಮಾತ್ರ ಅದು ತುಂಬಾ ಕಷ್ಟವಾದ ಕೆಲಸ. ಅಲ್ಲದೆ ಸಾಹಿತಿಗಳನ್ನು ತಮ್ಮ ಹಳ್ಳಿಗೆ-ಬೇದೂರಿನ ತಮ್ಮ ಮನೆಗೂ ಆಮಂತ್ರಿಸಿ ತಮ್ಮ ಕೃಷಿಕಾಮಗಾರಿಗಳನ್ನು ತೋರಿಸಿ ಅವರನ್ನು ಸಂತೋಷಪಡಿಸುತ್ತಾರೆ. ಇದು ತಮಗೆ ಅತ್ಯಂತ ತೃಪ್ತಿಯನ್ನು ಕೊಡುತ್ತದೆ, ಎಂದು ಶ್ರೀಭಟ್ಟರು ಹೇಳುತ್ತಾರೆ.

ಗೊರೂರು ರಾಮಸ್ವಾಮಿ ಅಯ್ಯಂಗಾರ್, ಶ್ರೀ ಎಂ. ಪಿ.ಎಲ್ ಶಾಸ್ತ್ರೀ, ವಿದ್ವಾನ್ ಎಸ್.ರಂಗನಾಥ ಶರ್ಮ, ಶ್ರೀ ನಿಟ್ಟೂರು ಶ್ರೀನಿವಾಸರಾವ್, ಡಾ. ಪು.ತಿ. ನರಸಿಂಹಾಚಾರ್, ಶ್ರೀ ಬನ್ನಂಜೆ ಗೋವಿಂದಾಚಾರ್ಯ, ಡಾ. ಯು. ಆರ್. ಅನಂತಮೂರ್ತಿ ಮೊದಲಾದ ಅನೇಕ ಗಣ್ಯ ಮಹನೀಯರು ಅವರ ಮನೆಯಲ್ಲಿ ಆತಿಥ್ಯವನ್ನು ಸ್ವೀಕರಿಸಿ, ಬಹಳವಾಗಿ ಸಂತಸಪಟ್ಟಿದ್ದಾರೆ. ಅಲ್ಲದೆ, ಕನ್ನಡಸಾಹಿತ್ಯ ಪರಿಷತ್ತಿನವರು ನಡೆಸುತ್ತಿರುವ ಸಾಹಿತ್ಯ ಸಮ್ಮೇಳನಕ್ಕೆ ಶ್ರೀ ಭಟ್ಟರು ಸಾಧಾರಣವಾಗಿ ಹೋಗಿಯೇ ಹೋಗುತ್ತಾರೆ. ಅಲ್ಲಿ ಹಿರಿ-ಕಿರಿಯ ಸಾಹಿತಿಗಳ ಸ್ನೇಹ ಸಂಪರ್ಕವನ್ನು ಉಳಿಸಿಕೊಂಡು, ಗಳಿಸಿಕೊಂಡು ಹಿಂದಿರುಗುತ್ತಾರೆ. ಅವರ ಸಹೃದಯತೆಗೆ ಇದೂ ಒಂದು ಸಾಕ್ಷಿ

ಶ್ರೀ ಭಟ್ಟರ ಸಾಹಿತ್ಯ ಕೃಷಿಯೂ ಅಷ್ಟೇ ಚೆನ್ನಾಗಿದೆ. ಬಾಲ್ಯದಿಂದಲೇ ಶ್ರೀಯುತರು ಅನೇಕ ಕವಿತೆಗಳನ್ನು, ಕಥಾಸಂಕಲನಗಳನ್ನು, ಜೀವನ ಚರಿತ್ರೆಗಳನ್ನು ಕಾದಂಬರಿಗಳನ್ನು ಬರೆದು ಪ್ರಕಟಿಸಿದ್ದಾರೆ. ಈಗಲೂ ಅವರು ಪತ್ರಿಕೆಗೆ ಲೇಖನಗಳನ್ನೂ, ಅಂಕಣಗಳನ್ನೂ ಬರೆಯುತ್ತಲಿದ್ದಾರೆ. ಸರಳವಾದ, ಸಹಜವಾದ ಅವರ ಬರವಣಿಗೆ ಎಲ್ಲರಿಗೂ ಮುದನೀಡುತ್ತದೆ.

ನಾಟಕ, ಕಾದಂಬರಿ, ಕವಿತೆ, ಯಕ್ಷಗಾನ, ಸಂಗೀತ, ಗಮಕ, ಚಿತ್ರಕಲೆ ಮೊದಲಾದ ಲಲಿತಕಲೆಗಳಲ್ಲಿ ಆಸಕ್ತರಾದವರಿಗೆ, ಅವರು ಆಯಾ ಕಲಾ ಪ್ರಕಾರಗಳಲ್ಲಿ

ಮುಂದುವರೆಯಲು ಹುರಿದುಂಬಿಸಿ, ಅವರ ಬಗ್ಗೆ ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆದು ಪ್ರಕಟಿಸಿ, ಪ್ರೋತ್ಸಾಹಿಸುತ್ತಾರೆ. ಇದು ಅವರಲ್ಲಿ ಕಾಣಬಹುದಾದ ಮತ್ತೊಂದು ದೊಡ್ಡ ಗುಣ.

'ಗೋಸೇವೆ'-'ಭೂಸೇವೆ' - 'ಸಜ್ಜನ ಸೇವೆ' - ಹೀಗೆ ಮೂರು ರೀತಿಯಲ್ಲಿ ಸೇವೆ ಮಾಡಿ ಜೀವನವನ್ನು ಸಾರ್ಥಕ ಪಡಿಸಿಕೊಳ್ಳಬೇಕೆಂದು ಅನುಭವಿಗಳಾದ ಹಿರಿಯರು ಹೇಳುತ್ತಾರೆ. ಶ್ರೀಯುತರ ಬೇದೂರಿನ ಮನೆಗೆ ಹೋದರೆ, ನಾವು ಈ ಮೂರು ಸೇವೆಗಳನ್ನು ಪ್ರತ್ಯಕ್ಷವಾಗಿ ನೋಡಬಹುದು. ಮನೆಯ ಎದುರುಗಡೆ ಯಾವಾಗಲೂ ಹೂಗಳಿಂದ ತುಂಬಿದ ಉಪವನ, ಪಕ್ಕದಲ್ಲಿ ಸುಂದರವಾದ ಅಡಿಕೆ ತೋಟ. ಹಿಂಬದಿ ಒಳ್ಳೆಯ ಗೋಶಾಲೆ. ಮನೆಯ ಮುಂಭಾಗದ ಜಗುಲಿಯಲ್ಲಿ ಹಿರಿಯ ಸಾಹಿತಿಗಳ ಭಾವಚಿತ್ರಗಳು. ವ್ಯವಸ್ಥಿತವಾಗಿ ಜೋಡಿಸಲ್ಪಟ್ಟ ಪುಸ್ತಕಗಳ ಕಪಾಟುಗಳು. ಇವು ದಿನನಿತ್ಯ ಕಾಣುವ ದೃಶ್ಯ. ಹೀಗೆ ಕೃಷಿ ಸಾಹಿತ್ಯ, ಸಾಹಿತ್ಯಕೃಷಿ, ಸಜ್ಜನ ಸಾಂಗತ್ಯ - ಈ ತರಹದ ಸೇವೆಯನ್ನು ಮಾಡಿ ಜೀವನವನ್ನು ಸಾರ್ಥಕ ಪಡಿಸಿಕೊಂಡಿದ್ದಾರೆ.

ಶ್ರೀ ಭಟ್ಟರ ಸೇವಾ ಕ್ಷೇತ್ರ ಬಹಳ ವಿಸ್ತಾರವಾದುದು. ರಾಜಕೀಯ, (ಈಗ ರಾಜಕೀಯದಲ್ಲಿಲ್ಲ) ಸಾಹಿತ್ಯ, ಕೃಷಿ, ಸಹಕಾರ, ವಿದ್ಯಾಸಂಸ್ಥೆ ಇನ್ನೂ ಹಲವು ಹತ್ತು ಕ್ಷೇತ್ರಗಳಲ್ಲಿ ಸೇವೆ ಮಾಡಿ ಸಹೃದಯರಿಂದ ಸೈ ಎನ್ನಿಸಿಕೊಂಡಿದ್ದಾರೆ.

ಈ ಎಲ್ಲಾ ಕೆಲಸಗಳಲ್ಲಿ, ಸಮಾರಂಭವನ್ನು ಏರ್ಪಡಿಸುವಲ್ಲಿ ಸಮಯ ಪ್ರಜ್ಞೆ, ತಾರತಮ್ಯ ಜ್ಞಾನ, ಅತಿಥಿ ಮಹನೀಯರಿಗೆ ಯಥಾ ಯೋಗ್ಯ ಗೌರವ ಸತ್ಕಾರ ಮೊದಲಾದವುಗಳನ್ನು ಶ್ರೀ ಭಟ್ಟರು ಬಾಲ್ಯದಿಂದಲೇ ಮೈಗೂಡಿಸಿಕೊಂಡು ಬಂದಿದ್ದಾರೆ. ನಡೆ-ನುಡಿಗಳಲ್ಲಿ, ಉಡುಪಿನಲ್ಲಿ, ಎಲ್ಲದರಲ್ಲೂ ಶಿಸ್ತಿಗೆ, ಅಚ್ಚುಕಟ್ಟು ತನಕ್ಕೆ ಪ್ರಾಶಸ್ತ್ಯ ನೀಡಿದವರೆಂದು ಈ ಭಾಗದಲ್ಲಿಯೇ ಹೆಸರಾದವರು ಇವರು. ನಾನು ನಾಡಿನ ಸುಮಾರು ಎಲ್ಲ ಜಿಲ್ಲೆಗಳಲ್ಲಿಯೂ ಪ್ರವಾಸ ಮಾಡಿದ್ದೇನೆ. ಆದರೆ ಶ್ರೀ ಭಟ್ಟರಂತಹವರು ಬೆರಳೆಣಿಕೆಯಷ್ಟು ಇರಬಹುದೇನೋ. ಆ ದೃಷ್ಟಿಯಲ್ಲಿ ಶ್ರೀಯುತರು ಮಲೆನಾಡಿನ ಭಾಗಕ್ಕೆ ಒಂದು ಅತ್ಯಮೂಲ್ಯ ಆಸ್ತಿ.

ಇವರು ಆಸ್ತಿಕರು, ಭಾರತೀಯ ಸಂಸ್ಕೃತಿಯನ್ನು ಒಪ್ಪಿಕೊಂಡವರು. ಮಕ್ಕಳು, ಮೊಮ್ಮಕ್ಕಳು ಇರುವ ತುಂಬು ಸಂಸಾರ ಇವರದು. ದೇವರ ಪೂಜೆ - ಪುರಸ್ಕಾರ, ದೇವತಾ ಕಾರ್ಯಗಳನ್ನು ಶ್ರದ್ಧೆಯಿಂದ ಮಾಡುತ್ತಾರೆ. ಬಂದವರಿಗೆ ಆದರದಿಂದ ಸತ್ಕರಿಸುತ್ತಾರೆ.

ಎಲ್ಲರಂತೆ ಶ್ರೀ ಭಟ್ಟರು ಜೀವನದಲ್ಲಿ ಏರು-ಪೇರುಗಳನ್ನು, ಸುಖ-ದುಃಖ ಗಳನ್ನು ಅನುಭವಿಸಿದವರು. 'ಬದುಕು ಸೊಗ ಹದದಿಂದ' - ಎಂದು ಡಿ.ವಿ.ಜಿ.ಯವರು 'ಕಗ್ಗ'ದಲ್ಲಿ ಹೇಳುತ್ತಾರೆ . ಹಾಗೆ ಒಂದು ಹದಕ್ಕೆ ತಂದುಕೊಂಡು ಸಂತುಷ್ಟ

ಸಮೃದ್ಧ ಜೀವನವನ್ನು ಇವರು ನಡೆಸುತ್ತಿದ್ದಾರೆ. ಡಿ.ವಿ.ಜಿ. ಯವರ ಮತ್ತೊಂದು ನುಡಿ'ಗೌರವಿಸು ಜೀವನವ-ಗೌರವಿಸು ಚೇತನವ' - ಶ್ರೀಯುತರು ಗೌರವವನ್ನು ನೀಡಿ, ವಿಶ್ವಾಸ - ಗೌರವಗಳನ್ನು ಪಡೆಯುತ್ತಾರೆ. ಇವರ ಹಿತ-ಮಿತ ಮಾತು, ಕಾರ್ಯ ತತ್ಪರತೆ, ಕಾರ್ಯಕ್ಷಮತೆ - ದಕ್ಷತೆ ಇವೆಲ್ಲವೂ ಬೇರೆಯವರಿಗೆ ಮಾರ್ಗದರ್ಶಕವಾಗಿವೆ.

ಶ್ರೀ ಮಹಾಬಲೇಶ್ವರ ಭಟ್ಟರ ವಯಸ್ಸು ೭೦ರ ಸಮೀಪ ಎಂದರೆ ಯಾರು ನಂಬುವಂತಿಲ್ಲ. ೬೦ರ ಎಡ-ಬಲ ಎನ್ನುವಂತೆ ತೋರುತ್ತಾನೆ. ಇವರು ದೇಹಾರೋಗ್ಯವನ್ನು ಹಾಗೆಯೇ ಕಾಪಾಡಿಕೊಂಡು ಬಂದಿದ್ದಾರೆ. ದಿನನಿತ್ಯವೂ ದೈನಂದಿನ ಕೆಲಸಗಳ ನಂತರ. - ಓದುವುದು, ಬರೆಯುವುದು ಇವನ್ನು ಮಾಡುತ್ತಾರೆ. ಹಾಗೂ ಸಾರ್ವಜನಿಕ ಕೆಲಸಗಳಿಗೆ ತಮ್ಮಿಂದ ಆಗುವ ಸಹಾಯ- ಸಹಕಾರಗಳನ್ನು ನೀಡುತ್ತಾರೆ.

ಈ ವಯಸ್ಸಿನಲ್ಲಿಯೂ ಅವರ ಚುರುಕುತನ, ಕ್ರಿಯಾಶೀಲತೆ, ಶಿಸ್ತು ಎಲ್ಲವೂ ಯುವಕರನ್ನು ನಾಚಿಸುವಂತಿದೆ. ಈಗಲೂ ತಮ್ಮ ಊರಿನಲ್ಲಿ ಕೃಷಿಕಾಮಗಾರಿಯನ್ನು ನೋಡಿಕೊಂಡು, ಮಕ್ಕಳಿಗೆ ಮಾರ್ಗದರ್ಶನ ಮಾಡಿ, ತಾವೂ ಸಾಹಿತ್ಯ ಕೃಷಿಯಲ್ಲಿ ತೊಡಗಿ ಅದರಲ್ಲಿ ಸಂತೃಪ್ತಿಯನ್ನು ಪಡೆಯುತ್ತಾರೆ. 'ಕಾವ್ಯ ಶಾಸ್ತ್ರವಿನೋದೇನಾ ಕಾಲೋ ಗಚ್ಛತಿ ಧೀಮತಾಮ್' ಬುದ್ಧಿವಂತರಿಗೆ (ಸಹೃದಯರಿಗೆ) ಕಾವ್ಯಾನಂದದಲ್ಲಿಯೇ ಕಾಲವು ಸಮೆಯುತ್ತದೆ. ಈ ಮಾತು ಶ್ರೀ ಭಟ್ಟರ ವಿಷಯದಲ್ಲಿ ಅತ್ಯಂತ ಸತ್ಯವಾಗಿದೆ.

'ಇಷ್ಟಸಂಗಾತಿ ಜನ, ಕಾವ್ಯಗೀತಗಳಿರಲು

ಕಷ್ಟವೇಂ ಬಾಳಲಿಕೆ ?''

'ಕಗ್ಗ'ದಲ್ಲಿ ಡಿ.ವಿ.ಜಿ. ಅವರ ಮತ್ತೊಂದು ನುಡಿ. ಒಳ್ಳೆಯ ಸ್ನೇಹಿತರನ್ನು ಪಡೆದು ಕಾವ್ಯ ಗೀತೆಗಳಿಂದ ಮನಸ್ಸನ್ನು ಹದದಲ್ಲಿಟ್ಟುಕೊಳ್ಳುವುದರಿಂದ ಜೀವವು ಕಷ್ಟವಾಗಲಾರದು. ಅದೇ ನೆಮ್ಮದಿಯ ಬಾಳು. ಇವರು ಇದನ್ನು ಅಳವಡಿಸಿಕೊಂಡು, ಈ ಗಡಿಬಿಡಿಯ ಕಾಲದಲ್ಲೂ ಸಂತೃಪ್ತಿಯಿಂದಿದ್ದಾರೆ. ಇದು ಅವರ ಹಿರಿತನ.

ಶ್ರೀ ಮಹಾಬಲೇಶ್ವರ ಭಟ್ಟರ ಸಾಹಿತ್ಯ ಕೃಷಿ ಸೇವೆ ಇನ್ನೂ ಬಹುಕಾಲ ನಡೆಯುವಂತಾಗಲಿ. ಅವರಿಂದ ಮಲೆನಾಡಿನ ಬಹುಭಾಗದ ಜನರಿಗೆ ಸಾಂಸ್ಕೃತಿಕ ಸ್ಫೂರ್ತಿ ವುಂಟಾಗಲಿ, ಉಳಿದವರ ಬಾಳು. ಹಸನಾಗಲಿ. ಶ್ರೀಯುತರಿಗೆ ಸರ್ವ ಶ್ರೇಯಸ್ಸು ಲಭಿಸಲಿ. ಇದೇ ನನ್ನ ಆಶಯ; ದೇವರಲ್ಲಿ ನನ್ನ ಬೇಡಿಕೆ.

ಮಲೆನಾಡ ಮಡಿಲ ತೊರೆಮನೆಹಳ್ಳಿಯಲಿ ಜನಿಸಿ
ಮಲೆನಾಡ ಪ್ರಕೃತಿ ಸಿರಿ ಸೌಂದರ್ಯವಂ ಸವಿದು
ಮಲೆನಾಡ ನೈಜ ಸಾಹಿತ್ಯಕೃಷಿಕಾರ್ಯಂಗಳಲಿ ಸದಾನಿರತರಾಗಿ॥
ಮಲೆನಾಡ ಸಾಗರಕೆ ಗಣ್ಯರಂ ಬರಮಾಡಿ
ಮಲೆನಾಡಿನಾತಿಥ್ಯಮಂ ನೀಡಿ ಗೌರವಿಪ
ಮಲೆನಾಡ ಸಾಹಿತಿ ಮಹಾಬಲೇಶ್ವರಭಟ್ಟರಿಂಗೆನ್ನ ನಮ್ರ ನಮನ ॥
ಚಿರ ಹಸಿರ ಪರಿಸರದಿ ಸಮರಸದ ಬಾಳು,
ದೈವ ಕೃಪೆ, ಯತ್ನದಿಂದದುವೆ ಕೇಳು
ಶ್ರೀಯುತರಿಗಾಯುರಾರೋಗ್ಯ ಭಾಗ್ಯವನು
ನೀಡೆನುತಲೀಶನಂ ಪ್ರಾರ್ಥಿಸುವೆನು.

# ಒಬ್ಬ ಸಹೃದಯ ಶ್ರೇಷ್ಠ

- ವೇಣುಗೋಪಾಲ ಸೊರಬ

ಶ್ರೀ. ಟಿ. ಮಹಾಬಲೇಶ್ವರ ಭಟ್ಟರು ಮಲೆನಾಡಿನ ಭಾಗದ ಸಹೃದಯ ಶ್ರೇಷ್ಠರು. ಸಾಹಿತ್ಯ ಅವರ ಒಡನಾಡಿ. ಸಾಹಿತಿಗಳ ಬಳಗದಲ್ಲಿ ಓಡಾಡಿ, ಅವರ ಪ್ರೀತಿ ವಿಶ್ವಾಸಗಳನ್ನು ಸಂಪಾದಿಸಿ, ಸಾಹಿತ್ಯ ಸೌರಭವನ್ನು ಹರಡುವುದರಲ್ಲಿ ಶ್ರೀಯುತರು ತಮ್ಮದೇ ಆದ ಸೇವೆ ಮಾಡಿದ್ದಾರೆ. ಇಂತಹ ಸಹೃದಯರು ಸಾಹಿತ್ಯ ಲಾಲನೆ, ಪೋಷಣೆ ಮಾಡುವುದರ ಜೊತೆಗೆ ಸ್ವತಃ ಸಾಹಿತ್ಯ ರಚನೆಯನ್ನೂ ಮಾಡಿಕೊಂಡು ಬಂದಿರುವುದು ಸ್ತುತ್ಯಾರ್ಹವಾದ ಕಾರ್ಯ.

ಶ್ರೀ ಭಟ್ಟರನ್ನು ನಾನು ಮೊದಲು ಭೇಟಿಯಾದದ್ದು ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲಿ. ನನಗೆ ಅವರನ್ನು ಪರಿಚಯಿಸಿದವರು ಕವಿಮಿತ್ರರಾದ ಶ್ರೀ ನಿಸಾರ್ ಅಹಮದ್. ಶ್ರೀ ನಿಸಾರ್ ಅಹಮದ್ ತಮ್ಮದೇ ಆದ ವಿಶಿಷ್ಟರೀತಿಯಲ್ಲಿ ಪರಿಚಯಿಸುತ್ತಾ, 'ನಮ್ಮನ್ನು ತಮ್ಮ ಮನೇಗೆಲ್ಲ ಕರೆದುಕೊಂಡು ಹೋಗಿ ಉಪಚಾರ ಮಾಡಿದಾರಪ್ಪ.' ಎಂದು ತುಂಬು ಕಂಠದಿಂದ ಹೊಗಳಿದರು. ಅವರ ಮಾತಿನ ಧಾಟಿ ಅತಿಶಯವೆನಿಸಿದರೂ, ಅವರು ಹೇಳಿದ್ದರಲ್ಲಿ ಯಾವ ಉತ್ಪ್ರೇಕ್ಷೆಯೂ ಕಂಡು ಬರಲಿಲ್ಲ, ಶ್ರೀ ಭಟ್ಟರ ಮುಖ ನೋಡಿದಾಗ.

ಮತ್ತೆ ನನಗೆ ಶ್ರೀ ಮಹಾಬಲೇಶ್ವರ ಭಟ್ಟರನ್ನು ಪ್ರತ್ಯಕ್ಷವಾಗಿ ಭೇಟಿ ಮಾಡುವ ಸಂದರ್ಭ ಒದಗಿದ್ದು ಸಾಗರದಲ್ಲಿ ನಡೆದ ಶಿವಮೊಗ್ಗ ಜಿಲ್ಲೆಯ ಎರಡನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ. ಸಮ್ಮೇಳನದ ಪ್ರಾರಂಭಕ್ಕೆ ಮೊದಲು, ಸಮ್ಮೇಳನಾಧ್ಯಕ್ಷ ಶ್ರೀ ಎಸ್.ವಿ. ಪರಮೇಶ್ವರ ಭಟ್ಟರ ಮೆರವಣಿಗೆ. ಊರಿನ ಪ್ರಮುಖ ಬೀದಿಗಳಲ್ಲಿಮೆರವಣಿಗೆ ಹೊರಟಿದ್ದು ಮಾಮ್‌ಕೋಸ್ ಕಟ್ಟಡದಿಂದ. ಮೆರವಣಿಗೆ ಹೊರಡುವುದಕ್ಕೆ ಮೊದಲು, ಶ್ರೀ ಬಸವರಾಜ ಕಟ್ಟೀಮನಿ, ಶ್ರೀ ಎಸ್.ವಿ. ಪರಮೇಶ್ವರ ಭಟ್ಟ ಇವರುಗಳ ಜತೆ, ಶ್ರೀ ಮಹಾಬಲೇಶ್ವರ ಭಟ್ಟರು ಅಲ್ಲಿ ಉಪಸ್ಥಿತರಿದ್ದರು. ಅವರು ತಮ್ಮ ಎಂದಿನ ಗಾಂಭೀರ್ಯ ಮತ್ತು ಮುಗುಳುನಗೆಯಿಂದ ಮಾತನಾಡಿಸಿದರು. ಅವರ ಮಾತಿನಲ್ಲಿನ ಮೃದುತ್ವಕ್ಕೆ ಅವರ ಕಣ್ಣಿನ ಹುಡುಕುನೋಟ ಅಪ್ಯಾಯಮಾನವಾಗಿತ್ತು. ಸಮ್ಮೇಳನದ ಎರಡೂ ದಿನ ಅವರು ಪ್ರತಿಯೊಬ್ಬರ ಬಗೆಗೂ ವಿಚಾರಿಸಿಕೊಳ್ಳುತ್ತಿದ್ದ ರೀತಿ ಹೃದ್ಯವಾಗಿತ್ತು.

ಶ್ರೀ ಮಹಾಬಲೇಶ್ವರ ಭಟ್ಟರು ಸಾಂಪ್ರದಾಯಿಕ ಪರಿಸರದಲ್ಲಿ ಬೆಳೆದು ಬಂದವರಾದರೂ ವಿಶಾಲ ಮನೋಭಾವವುಳ್ಳವರು. ಅವರು ಬೆಳಸಿರುವ ಸಂಬಂಧಗಳಿಂದ ಇದು ವ್ಯಕ್ತವಾಗುತ್ತದೆ. ಒಪ್ಪ ಓರಣಗಳಿಗೆ ಹೆಸರಾದ ಶ್ರೀ ಭಟ್ಟರ ನೇರ ನಿಲುವು, ಆಕರ್ಷಕ ರೂಪ, ಚಿಂತನ ಪರ ಧ್ಯೇಯ ಧೋರಣೆಗಳು ಹಲವರ ಪಾಲಿಗೆ ಅವರನ್ನು ಒಬ್ಬ ಆದರ್ಶ ವ್ಯಕ್ತಿಯಾಗಿ ಮಾಡಿದ್ದರೆ ಆಶ್ಚರ್ಯವಿಲ್ಲ. ಶ್ರೀ ಭಟ್ಟರು ಸ್ವಾತಂತ್ರ್ಯ ಪೂರ್ವದ ತ್ಯಾಗ, ಸೇವಾ ಮನೋಭಾವ, ಆದರ್ಶಮಯ ಕಲ್ಪನೆಗಳಿಗೆ, ಧ್ಯೇಯೋದ್ದೇಶಗಳಿಗೆ ಕೊಟ್ಟುಕೊಂಡವರು. ಆ ಕಾರಣಕ್ಕಾಗಿಯೇ, ಸಾರ್ವಜನಿಕ ಜೀವನದಲ್ಲಿ ಇಂದು ಕಾಣೆಯಾಗುತ್ತಿರುವ ಶುಚಿ-ಶುಭ್ರತೆಗಳು ಇಂಥವರಲ್ಲಿ ಕಂಡು ಬರುತ್ತಿರುವುದು ಸಹಜವೇ ಆಗಿದೆ.

ಶ್ರೀ ಮಹಾಬಲೇಶ್ವರ ಭಟ್ಟರ ಬಾಗದ ನಿಲುವು, ಮೃದುವಾದ ಮಾತು, ಹೊಳೆಯುವ ಕಣ್ಣುಗಳು ಯಾರನ್ನೇ ಆಗಲಿ ಆಕರ್ಷಿಸದೇ ಇರದು. ಅವರು ತೊಡುವ ಬಟ್ಟೆಗಳೂ ಕೂಡ ಅವರ ಸಾತ್ವಿಕ ಸ್ವಭಾವಕ್ಕೆ ಹಿಡಿದ ಕನ್ನಡಿಯಾಗಿದೆ. ಈಗೀಗ ಅಪರೂಪವಾಗುತ್ತಿರುವ ಮುಚ್ಚುಕಾಲರಿನ ಕೋಟು, ಕಚ್ಚೆಪಂಚೆ-ಇವುಗಳು ಅವರನ್ನು ಹಳೆಯ, ಸಂದು ಹೋದ ಪ್ರಪಂಚವೊಂದಕ್ಕೆ ಬೆಸೆದ ಕೊಂಡಿಯನ್ನಾಗಿಸಿವೆ.

ರಾಜಕೀಯವಾಗಿ, ಸಾಮಾಜಿಕವಾಗಿ ಹಲವು ಕ್ಷೇತ್ರಗಳಲ್ಲಿ ಸೇವೆ ಮಾಡಿರುವ ಶ್ರೀ ಭಟ್ಟರು ಉತ್ತಮ ರಸಿಕರು; ಕಲಾಭಿಜ್ಞರು. ಅವರೊಬ್ಬ ಬರಹಗಾರರೂ ಆಗಿರುವುದು ಅವರ ವ್ಯಕ್ತಿತ್ವದ ಮತ್ತೊಂದು ಸಾಧನಾ ಮುಖವನ್ನು ಪ್ರಸ್ತುತಪಡಿಸುತ್ತದೆ.

ಬಹಳ ಹಿಂದೆಯೇ ಅವರು ಕತೆ ಕಾದಂಬರಿಗಳನ್ನು ಬರೆದಿದ್ದಾರೆ. ಶ್ರೀಯುತರ ಈ ಸೃಜನಾತ್ಮಕ ಕೃತಿಗಳು ಮರು ಮುದ್ರಣಗೊಂಡಲ್ಲಿ ಇಂದಿನ ಸಂದರ್ಭದಲ್ಲಿ ಅವುಗಳ ಮೌಲ್ಯೀಕರಣ ನಡೆಸುವುದಕ್ಕೆ ಸಹಾಯವಾಗುತ್ತದೆ. ಭಾವುಕತೆಯೇ ಬರಹದ ಜೀವಾಳ ಎಂಬ ಅಂಶ ಪ್ರಭಾವಕಾರಿಯಾಗಿದ್ದ ಕಾಲದಲ್ಲಿ, ಶ್ರೀ ಭಟ್ಟರು ಬರೆದದ್ದು ಹೇಗೆ ತನ್ನ ವೈಯಕ್ತಿಕ ಛಾಪು ಪಡೆದಿದೆ ಎಂಬ ಅಂಶ ಕುತೂಹಲ ಕೆರಳಿಸುವಂತದ್ದು. ಅ.ನ.ಕೃ, ಕಾರಂತರು ಇಂತಹ ಅಗ್ರಪಂಕ್ತಿಯ ಬರಹಗಾರರೊಡನೆ ಉತ್ತಮ ಸಂಬಂಧವನ್ನುಬೆಳೆಸಿಕೊಂಡು ಬಂದ ಶ್ರೀ ಭಟ್ಟರು, ಇಂದಿನ ತಲೆಮಾರಿನ ಲೇಖಕವರ್ಗದವರ ಮಧ್ಯೆಯೂ ತಮ್ಮದೇ ಆದ ವೈಶಿಷ್ಟ್ಯತೆಯನ್ನು ಉಳಿಸಿ ಕೊಳ್ಳಬಲ್ಲರು ಎಂದು ಹೇಳಬಹುದು.

ಲೆಕ್ಕ ಇಡುವುದಕ್ಕೆ ಎಪ್ಪತ್ತು ಒಂದು ಮಾನ ಅಷ್ಟೆ. ಇಂದಿಗೂ ಉತ್ಸಾಹದ ಬುಗ್ಗೆಯಾಗಿರುವ ಶ್ರೀ ಮಹಾಬಲೇಶ್ವರ ಭಟ್ಟರು ಸಾಗರ ಪ್ರಾಂತ್ಯದಲ್ಲಿ ಇನ್ನಷ್ಟುಉತ್ತಮ ಕೆಲಸಗಳನ್ನು ಸಾಧಿಸಲಿ, ತಮ್ಮಕಾರ್ಯಕ್ಷಮತೆಯಿಂದ ತರುಣಪೀಳಿಗೆಗೆ ಮಾರ್ಗದರ್ಶಕರಾಗಲಿ.

(ದಿವಂಗತ ವೇಣುಗೋಪಾಲ ಸೊರಬರವರು 'ಆದರ್ಶ' ಮಾಸಪತ್ರಿಕೆಗೆ ಈ ಹಿಂದೆ ಬರೆದ ಲೇಖನ)

# ಎಪ್ಪತ್ತರಲ್ಲಿ ನಾನು ಕಂಡಂತೆ

- ಕೆಳದಿ ಗುಂಡಾಜೋಯಿಸ್

ಶಿವಮೊಗ್ಗ ಜಿಲ್ಲೆಗೆ ಅಂತರ ರಾಷ್ಟ್ರೀಯವಾಗಿ ನಾನಾ ರೀತಿಯಲ್ಲಿ ವಿಶಿಷ್ಟ ಸ್ಥಾನವಿದೆ. ಆಗ್ನೇಯ ಏಷ್ಯಾದಲ್ಲಿಯೇ ಪ್ರಮುಖಸ್ಥಾನ ಪಡೆದ ಜೋಗದ ವಿದ್ಯುದಾಗಾರ, ವಿಶ್ವವಿಖ್ಯಾತ ಜಲಪಾತ, ಶ್ರೀಗಂಧದ ಶ್ರೇಷ್ಠ ಕುಸುರಿನ ಕಲಾ ಸಾಂಸ್ಕೃತಿಕ ಸಂಪತ್ತುಗಳು, ಭತ್ತ-ಅಡಿಕೆ ಮುಂತಾಗಿ ಈ ಜಿಲ್ಲೆ ತನ್ನದೇ ಆದ ವೈಶಿಷ್ಟ್ಯತೆಯನ್ನು ಪಡೆದಿದೆ. ಕೆಳದಿ ಶಿವಪ್ಪನಾಯಕನಿಂದ ಆರಂಭಗೊಂಡ ಭೂಸುಧಾರಣಾ ಕ್ರಾಂತಿಯು ಕಾಗೋಡು ಸತ್ಯಾಗ್ರಹದವರೆಗೂ ಇತಿಹಾಸವನ್ನು ನಿರ್ಮಿಸಿದೆ. ಕೆಳದಿ ಇತಿಹಾಸವು ಅಂತರ ರಾಷ್ಟ್ರೀಯ ಖ್ಯಾತಿ ಪಡೆದಿದೆ. ವಿಶೇಷವಾಗಿ ಈ ಪರಿಸರ ಸಂಗತಿಗಳು ಸಾಗರ ತಾಲ್ಲೂಕಿನಲ್ಲಿ ಒಳಗೊಂಡಿರುವುದು ಒಂದು ಹೆಗ್ಗಳಿಕೆಯಾಗಿದೆ. ಕ್ರಿ.ಶ. ೧೬೨೩ರಲ್ಲಿ ಪ್ರವಾಸ ಮಾಡಿದ ಇಟಲಿಯ ಪ್ರವಾಸಿ ಪಿಯತ್ರೋಡೆಲ್ಲಾ ವೆಲ್ಲಿಯು ಸಾಗರ ತಾಲೂಕಿನ ಸುಂದರ ಸಾಂಸ್ಕೃತಿಕ ಪರಿಸರವನ್ನು ಕಣ್ಣಾರೆ ಕಂಡು ವಿವಿಧ ರೀತಿಯಲ್ಲಿ ಬಣ್ಣಿಸಿದ್ದಾನೆ. ಅವುಗಳಲ್ಲಿದೀಪಾವಳಿಯನ್ನು ಕುರಿತು ಅವನ ಮಾತಿನಲ್ಲಿಯೇ ಕೇಳಿ -

"This night an infinite numbef of torches and candles were lighted not only in all temples, but also in all streets, houses and shops, which made a kind of splendour over all the city. In each of the temples was its idol, which in some was a serpent, and they had adorned the outward porches not only with lights, but also with certain contrivances of paper on which were painted men on horse back, elephants, people fighting and other odd figures behind which paper lights were placed in certain little porches, like those which we make in our sepulchres these with other gray ornaments of silk hung round about made a sufficiently pretty show. ಈ ರೀತಿಯ ಚಿತ್ರಕಲೆಗಳನ್ನೊಳಗೊಂಡ ಮಾದರಿಯನ್ನು ಕೆಳದಿ ಇತಿಹಾಸ ಸಂಶೋಧನಾಲಯದಲ್ಲಿ ಅವಲೋಕಿಸಬಹುದು. In the great temple not only the inside, in the middle where of is a very high and stender cupola; but also all the outer walls and all those

round abot the piazza which lies before it, as also the houses in the adjacent sides, were all full of lights. The concourse of people of allsorts and degrees, both men and women, was very great and they appreared to go about visiting all the temples."

ಇಂತಹ ಸುಂದರ ಹಾಗೂ ಸುಖೀರಾಜ್ಯದ ಮಲೆನಾಡಿನ ಪರಿಸರಗಳು ಈ ಕಾಲದಲ್ಲಿನೋಡಲು ಸಾಧ್ಯವೇ ?

ನಾಡು ನುಡಿಗಳ ರಕ್ಷಣೆಗೆ ವಿಶೇಷ ಪ್ರಾಧಾನ್ಯವಿತ್ತ ಕೆಳದಿ ಅರಸರು, ಕವಿಗಳಿಗೂ, ಕಲೆಗಾರರಿಗೂ ಆಶ್ರಯದಾತರಾಗಿದ್ದರು, ಮಾತ್ರವಲ್ಲದೆ ಸ್ವತಃ ವಿದ್ವಾಂಸರೂ ಕವಿಗಳೂ ಪಂಡಿತರೂ ಆಗಿದ್ದರು. ಇಕ್ಕೇರಿಯಲ್ಲಿದ್ದ ಅರಮನೆಯಲ್ಲಿ ತಿರುಮಲಭಟ್ಟನು ಶಿವಗೀತೆಯನ್ನು ರಚಿಸಿದ್ದಾನೆ. ಸಾಗರ ಹಾಗೂ ಕೆಳದಿಯಲ್ಲಿದ್ದ ಲಿಂಗಣ್ಣ ಕವಿಯು 'ಕೆಳದಿ ನೃಪ ವಿಜಯ' ರಚಿಸಿದ್ದಾನೆ. ಈ ರಾಜಾಶ್ರಯದಲ್ಲಿ ಪ್ರಕಟವಾದ ಕೃತಿಗಳ ವಿವರಗಳನ್ನು ಡಾ. ಸಾ.ಶಿ. ಮರುಳಯ್ಯನವರ 'ಕೆಳದಿ ಅರಸರು ಮತ್ತು ಕನ್ನಡ ಸಾಹಿತ್ಯ' ಪ್ರಬಂಧದಲ್ಲಿ ಅವಲೋಕಿಸಬಹುದು. ಇಂತಹ ಮಾದರಿಯನ್ನನುಸರಿಸಿ ವಿದ್ವಾಂಸರಿಗೆ ಪ್ರೋತ್ಸಾಹ ನೀಡಿ ಸಾಹಿತ್ಯ ರಚನೆ ಕೈಗೊಂಡುದಲ್ಲದೆ ಸ್ವತಹ ತಾವೂ ಸಾಹಿತಿಗಳಾಗಿ ಕರ್ನಾಟಕದಲ್ಲಿ ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕಿಗೇ ಮಾದರಿಯಾಗಿರುವ ಶ್ರೀಟಿ. ಮಹಾಬಲೇಶ್ವರ ಭಟ್ಟರ ಸಾಹಿತ್ಯೋಪಾಸನೆ ಜ್ವಲಂತ ಸಾಕ್ಷಿಗಳಲ್ಲೊಂದೆನಿಸಿದೆ.

ಅದೊಂದು ಕಾಲ. ಶ್ರೀ ಟಿ. ಮಹಾಬಲೇಶ್ವರ ಭಟ್ಟರು ಈಗಿನ ಪೋಲೀಸ್ ಸ್ಟೇಷನ್ ಸಮೀಪದಲ್ಲಿರುವ ಒಂದು ಬೃಹತ್ ವೃಕ್ಷದ ಎದುರು ಭಾಗದಲ್ಲಿ ಜಿನಸಿ ಹಾಗೂ ಗ್ರಂಥಗಳ ಮಾರಾಟದ ಚಿಕ್ಕ ಅಂಗಡಿಯೊಂದನ್ನು ನಡೆಸುತ್ತಿದ್ದರು. ಅಂಗಡಿ ಎನ್ನುವುದಕ್ಕಿಂತ ಸಾಹಿತಿಗಳನ್ನು ಕಲೆಹಾಕುವ ತಾಣವೆಂದೇ ಹೆಸರು ಪಡೆದು ಪ್ರಮುಖ ಕೇಂದ್ರಬಿಂದುವಾಗಿತ್ತು. ಖ್ಯಾತ ಸಾಹಿತಿಗಳಾದ ಶ್ರೀನಿವಾಸ ಉಡುಪ, ನಾ. ಡಿಸೋಜ, ದಿ. ಕೆ. ಎಸ್. ಹೆಚ್. ಸಾಗರ್ ಮುಂತಾದ ಸಾಹಿತಿಗಳ ಒಕ್ಕೂಟವೊಂದು ರಚನಾತ್ಮಕ ಕಾರ್ಯಗಳನ್ನು ರೂಪಿಸಿ, ಶ್ರೀ ಟಿ. ಮಹಾಬಲೇಶ್ವರ ಭಟ್ಟರಮಾರ್ಗದರ್ಶನದಲ್ಲಿ ಕೈಗೊಳ್ಳಲು ಇಲ್ಲಿ ಸೇರುತ್ತಿದ್ದರು. ಸಾಹಿತಿಗಳಾದಿಯಾಗಿ ಉಚ್ಛ ಅಧಿಕಾರಿಗಳು ಸಾಗರಕ್ಕೆ ಬಂದಲ್ಲಿ ಪ್ರಥಮ ಭೇಟಿ, ಟಿ. ಮಹಾಬಲೇಶ್ವರ ಭಟ್ಟರದ್ದಾಗಿತ್ತು. ಇವರಿಂದ ಅಧಿಕಾರಿಗಳು ಎರವಲಾಗಿ ಕೊಂಡೊಯ್ದ ಸಾಹಿತ್ಯ ಹಾಗೂ ಪುಸ್ತಕಗಳಂತೂ ಲೆಕ್ಕಕ್ಕೆ ಬಾರದಂತಿವೆ. ನಮ್ಮ ಚಿಕ್ಕಪ್ಪಂದಿರಾದ ಬೆಂಗಳೂರಿನ ದಿ. ಬ.ನ. ಸುಂದರರಾಯರು ಜೋಗ ವಿದ್ಯುದಾಗಾರದಲ್ಲಿ ಹಿರಿಯ ಲೇಖಪಾಲಕರಾಗಿದ್ದರು. ಕರ್ನಾಟಕದಲ್ಲಿಯೇ ಖ್ಯಾತ ಸಾಹಿತಿಗಳಾಗಿದ್ದ ಸುಂದರರಾಯರು ಮಹಾಬಲೇಶ್ವರ

ಭಟ್ಟರ ಅಚ್ಚು ಮೆಚ್ಚಿನ ಆಪ್ತರಾಗಿದ್ದಷ್ಟೇ ಅಲ್ಲದೆ, ಇವರಿಬ್ಬರಿಂದ ಕರ್ನಾಟಕದ ಖ್ಯಾತ ಸಾಹಿತಿಗಳೆಲ್ಲರೂ ಸಾಗರಕ್ಕೆ ಧಾವಿಸುವಂತಾಯಿತು. ಇವರಿಬ್ಬರನ್ನು ಕಂಡು ಕರುಬುವವರನ್ನೂ ಗಮನಿಸಿದ್ದೆನು. ಇದೇ ಕಾಲದಲ್ಲಿ ಮಹಾಬಲೇಶ್ವರ ಭಟ್ಟರು ಪ್ರಕಟಿಸಿದ 'ಸಾಹಿತ್ಯ ಶಿಲ್ಪಿಗಳು' ಕೃತಿ, ಸಾಹಿತಿಗಳನ್ನು ಪರಿಚಯಿಸುವಲ್ಲಿ ರಾಜ್ಯದಲ್ಲಿಯೇ ಪ್ರಥಮ ಹೊತ್ತಿಗೆಯೆನ್ನಬಹುದು. ಸುಂದರರಾಯರ ಪ್ರೋತ್ಸಾಹದಿಂದ ಉಂಟಾದ ನನ್ನ ಸಾಹಿತ್ಯ ಚಟುವಟಿಕೆಗಳು ಮಹಾಬಲೇಶ್ವರರ ಭಾಂದವ್ಯಕ್ಕೆ ನಾಂದಿಯಾಗಿ ಸಂಶೋಧನಾ ರೂಪದಲ್ಲಿ ಕಾರ್ಯ ಪ್ರವೃತ್ತನನ್ನಾಗಿಸಿತು.

ಅರಳುವ ಪ್ರತಿಭೆಗಳನ್ನುಗುರುತಿಸಿ ಪ್ರೋತ್ಸಾಹಿಸುವಲ್ಲಿ ಮಹಾಬಲೇಶ್ವರ ಭಟ್ಟರು ಅಂತಃಕರಣದ ಕಳಕಳಿಯೊಂದಿಗೆ ಪಳಗಿದವರಾಗಿದ್ದಾರೆ. ನನ್ನಷ್ಟೇ ನನ್ನ ಮಗ ಟಿ. ಡಾ॥ ವೆಂಕಟೇಶನಿಗೂ ಸದಾ ಬೆಂಬಲಿಸುತ್ತಾ ಪ್ರೋತ್ಸಾಹ ನೀಡುತ್ತಿದ್ದಾರೆ. ನಾನು ಬೆಂಗಳೂರಿನಲ್ಲಿ ಭೇಟಿಯಾಗುವ ಸಾಹಿತಿಗಳೆಲ್ಲರೂ ಮೊಟ್ಟಮೊದಲು ಮಹಾಬಲೇಶ್ವರ ಭಟ್ಟರ ಯೋಗಕ್ಷೇಮ ಹಾಗೂ ಸಾಹಿತ್ಯ ಚಟುವಟಿಕೆಗಳನ್ನು ವಿಚಾರಿಸಿಕೊಂಡೇ ಮುಂದುವರೆಯುತ್ತಿದ್ದುದು ಅವರ ಕೀರ್ತಿ ರಾಜಧಾನಿಯೆಲ್ಲೆಡೆಯಿರುವುದು ವ್ಯಕ್ತಪಡುತ್ತದೆ. ಸಾಗರ ತಾಲ್ಲೂಕಿನ ಸಾಹಿತಿಗಳೆಲ್ಲರನ್ನೂ ಒಗ್ಗೂಡಿಸಿ, ತನ್ಮೂಲಕ ವೈವಿಧ್ಯಮಯ ಕಾವ್ಯ-ಸಾಹಿತ್ಯಗಳನ್ನು ಹೊರತಂದ ಪ್ರಥಮ ಶ್ರೇಯಸ್ಸು ಶ್ರೀ. ಟಿ. ಮಹಾಬಲೇಶ್ವರ ಭಟ್ಟರದು - ಎಂದರೆ ಅತಿಶಯೋಕ್ತಿಯಾಗಲಾರದು. ಅಂತೆಯೇ ತಾಲೂಕಿನ ಜನತೆಗೆ ಸಾಹಿತ್ಯದ ರಸದೌತಣವನ್ನು ಉಣಿಸಿ, ವಿಶ್ವಕವಿ ಕುವೆಂಪು, ಖ್ಯಾತ ವಿದ್ವಾಂಸರಾದ ಗೋಕಾಕ, ಶಿವರಾಮಕಾರಂತ, ಅಡಿಗರು, ಮಾಸ್ತಿ, ವೀ.ಸೀ ಮುಂತಾದ ದಿಗ್ಗಜ ಸಾಹಿತಿಗಳನ್ನು ಸಾಗರದ ಜನತೆಗೆ ಪರಿಚಯಿಸಿದ ಕೀರ್ತಿ ಮಹಾಬಲೇಶ್ವರ ಭಟ್ಟರಿಗೆ ಸಲ್ಲುತ್ತದೆ. ಪುರಸಭೆಯಲ್ಲಿ ಹಾಸ್ಯ ಸಾಹಿತಿ ನಾಡಿಗೇರ ಕೃಷ್ಣರಾಯರ ಹಾಸ್ಯ ರಸಾಯನವನ್ನು ಸವಿದ ನನಗೆ ಈಗಲೂ ಅದು ಕಣ್ಣಿಗೆ ಗೋಚರಿಸುವಂತಿದೆ.

ಹಲವಾರು ಕ್ಲಿಷ್ಟ ಸಮಸ್ಯೆಗಳಿಂದ ನೊಂದ ಮಹಾಬಲೇಶ್ವರ ಭಟ್ಟರು ಬೇಸರಗೊಂಡು ತಮ್ಮ ಊರಾದ ಬೇದೂರು ಹಳ್ಳಿಯಲ್ಲಿ ಸಾಹಿತ್ಯ ಚಟುವಟಿಕೆಗಳನ್ನ ತೊರೆದು ನೆಲೆ ನಿಲ್ಲುವಂತಾಯಿತು. ಇವರು ಸಾಹಿತ್ಯವನ್ನು ಬಿಟ್ಟರೂ, ಸಾಹಿತ್ಯ ಅವರನ್ನು ಬಿಡದೇ ಸದಾ ಕಾಡುತ್ತಿತ್ತು. ಶ್ರೀ ನಿಟ್ಟೂರು ಶ್ರೀನಿವಾಸರಾಯ ಹಾಗೂ ಪು.ತಿ.ನ.ರವರು ಬೇದೂರಿಗೇ ಹೋಗಿ ಶ್ರೀಯುತರನ್ನು ಸಾಹಿತ್ಯ ಚಟುವಟಿ ಬಡಿದೆಬ್ಬಿಸಿದರು. ಮಾನ್ಯ ಶ್ರೀ ಧರ್ಮಸ್ಥಳದ ಧರ್ಮಾಧಿಕಾರಿ ಶ್ರೀ ಡಿ. ವೀರೇ ಹೆಗ್ಗಡೆಯವರು ಕೆಳದಿ - ಇಕ್ಕೇರಿಗೆ ಭೇಟಿ ನೀಡಿದಾಗ, ಶ್ರೀ ಮಹಾಬಲೇಶ್ವ ಭಟ್ಟರಲ್ಲಿರುವ ಖಿನ್ನತೆಯನ್ನು ನಾನು ಶ್ರೀ ಹೆಗ್ಗಡೆಯವರೊಂದಿ ಪ್ರಸ್ತಾಪಿಸಬೇಕಾಯಿತು; ಅವರೀರ್ವರ ಭೇಟಿಯೂ ಒಂದು ರೀತಿಯಲ್ಲಿ

ಫಲಕಾರಿಯಾದಂತಾಯಿತು. ತಾಲ್ಲೂಕಿನ ಸಾಹಿತ್ಯ ಚಟುವಟಿಕೆಗೆ ಇವರ ಸ್ಥಾನ[illegible] ತುಂಬಲು ಯಾರೂ ಮುಂದೆ ಬಾರದಿರುವುದನ್ನು ಮನಗಂಡು, ಎಚ್ಚರಗೊಂ[illegible] ಮಹಾಬಲೇಶ್ವರ ಭಟ್ಟರು ದೇಹ ಮುಪ್ಪಾಗಿದ್ದರೂ, ಮಾನಸಿಕ ಚೇತನಗಳಿಂದ 'ಏಳಿ; ಎದ್ದೇಳಿ; ಗುರಿಯನ್ನು ಸಾಧಿಸಿ; ' ಎಂಬ ವಿವೇಕಾನಂದರ ವಾಣಿಯಂತೆ ಸಾವರಿಸಿಕೊಂಡು ಸಾಗರವನ್ನು ಸಾಹಿತ್ಯ ಕ್ಷೇತ್ರದಲ್ಲಿ ಮನ್ನಡೆಸಲು ಸಜ್ಜಾದರು. ಸಾಗರ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಕೇವಲ ಒಂದೆರಡು ವರ್ಷಗಳಲ್ಲಿಯೇ ಕರ್ನಾಟಕದಲ್ಲಿಯೇ ಅಪೂರ್ವ ರೀತಿಯಲ್ಲಿ ಸಾಧಿಸಿದ ಪ್ರಗತಿಯು ಸಾಹಿತಿಗಳ, ಜನತೆಯ ಕಣ್ಮುಂದೆ ಇರುವುದನ್ನು ಗಮನಿಸಬಹುದಾಗಿದೆ.

ಶ್ರೀ ಟಿ. ಮಹಾ[illegible]ರ ಭಟ್ಟರು ಮನಸ್ಸು ಮಾಡಿದ್ದಲ್ಲಿ ಯಾವುದಾದರೂ ರಾಜಕೀಯ ಪಕ್ಷದಲ್ಲಿ [illegible]ಟ್ಟ ಹೊತ್ತಿಗೆ ಖ್ಯಾತನಾಮರಾಗುತ್ತಿದ್ದರು. ಇದಕ್ಕೆ ಎಡಗೊಡದೇ ಬದುಕಿ[illegible]ಚ್ಚುಕಟ್ಟುತನ ಕಾಪಾಡಿಕೊಂಡು ಶ್ರದ್ಧಾಭಕ್ತಿಯಿಂದ ಸಾಹಿತ್ಯ ಸೇವೆಯಲ್ಲಿ[illegible]ಮಗ್ನರಾಗಿದ್ದು ಬಹು ವಿನಮ್ರರಾಗಿ ರಚನಾತ್ಮಕ ಕ್ರಿಯಾಶೀಲರಾಗಿರುವ ಶ್ರೀ ಟಿ. ಮಹಾಬಲೇಶ್ವರ ಭಟ್ಟರು ಸಾಹಿತ್ಯ ಸಾಗರವಾಗಿ ಪ್ರಾತಃ ಸ್ಮರಣೀಯರಾಗಿದ್ದಾರೆ. ಅವರು ನೂರ್ಕಾಲ ಬಾಳುವುದರ ಜೊತೆಗೆ ಸಾಗರ ತಾಲೂಕಿನ ಸಾಹಿತ್ಯ ಪ್ರಭೆಯು ದಕ್ಷಿಣಭಾರತದಲ್ಲಿಯೇ ಪ್ರಜ್ವಲಿಸಿ 'ಸಾಹಿತ್ಯಸಾಗರ' ಎಂಬ ಶಿರೋನಾಮೆಯನ್ನು ಪಡೆಯಲೆಂದೂ ಹಾರೈಸುವೆನು.

# ಸಾಗರದಲ್ಲೊಬ್ಬ - ಸಾಗರ

-ಟಿ.ಎಲ್. ಸುಬ್ರಹ್ಮಣ್ಯ ಅಡಿಗ

ಸಾಗರ ಎಂದ ಕೂಡಲೇ ಕಣ್ಣ ಮುಂದೆ ನಿಲ್ಲುವುದು ವಿಸ್ತಾರವಾದ ಜಲನಿಧಿ. ಇಂತಹ ಜಲನಿಧಿಯ ಅಂತರಂಗದ, ಆಳದ ಪರಿಚಯ ನಿಗೂಢ. ಬಾಹ್ಯರಂಗದ ದೃಶ್ಯ ಕಾಣಬಹುದಷ್ಟೆ. ಬಾಹ್ಯರಂಗದ ನೋಟ ಸಂತೋಷ ಉಂಟುಮಾಡಿದರೆ - ಅಂತರಂಗದ ಒಳ ಹೊಕ್ಕು ನೋಡಬೇಕೆನ್ನಿಸುತ್ತದೆ. ಇದು ಸಹೃದಯತೆಯ ಸಹಜ ಗುಣ. ಸೌಜನ್ಯದ ಭಾವ ಸಾಗರಕ್ಕೆ ಹತ್ತಿರ ಮಾಡುತ್ತದೆ.

ಹಿಂದೂ ಸಾಗರ, ಶಾಂತಿಸಾಗರ, ಅಟ್ಲಾಂಟಿಕ್ ಸಾಗರ, ಮೈಸೂರಲ್ಲಿ ಕೃಷ್ಣರಾಜ ಸಾಗರ, ಇವನ್ನೆಲ್ಲಾ ಹೆಸರಿಸಿದಂತೇ ಕರ್ನಾಟಕ ರಾಜ್ಯದ ಶಿವಮೊಗ್ಗ ಜಿಲ್ಲೆಯಲ್ಲಿ ಒಂದು ಸಾಗರ ಇದೆ. ನಗರದ ಶಿವಪ್ಪನಾಯ್ಕ, ಕೆಳದಿ ಅರಸರ ಕಾಲದಲ್ಲಿ ಸಾಗರ ಸೀಮೆಯಂತಲೇ ರೂಢಿಯಲ್ಲಿತ್ತು. ಸಾಗರ ಪ್ರಾಂತ್ಯ ಅಥವಾ ಸಾಗರ ಸೀಮೆ ಎಂದಾಕ್ಷಣ ಅಂದಿನ ರಾಜಕೀಯ, ಸಂಸ್ಕೃತಿ, ಶಾಂತಿ ಮನಸ್ಸಿನಲ್ಲಿ ಮೂಡಿ ಬರುತ್ತದೆ.

ಈ ವಿಸ್ತಾರವಾದ ಸಾಗರ ಸೀಮೆಯಲ್ಲಿ ತೊರೆಮನೆ ಎಂಬ ಊರಲ್ಲಿ ೧೯೨೮ರಲ್ಲಿ ಜನಿಸಿದ ಶ್ರೀ ಟಿ. ಮಹಾಬಲೇಶ್ವರ ಭಟ್ಟರು ಸಾಗರವಾಗಿಯೇ ಬೆಳೆದರು. ಇವರ ವ್ಯಕ್ತಿತ್ವವನ್ನೇ ಸಾಗರಕ್ಕೆ ಹೋಲಿಸಿದಾಗ ಸಾಗರವೇ ಕಣ್ಣ ಮಂದೆ ನಿಲ್ಲುತ್ತದೆ.

ಸಾಗರ ಸೀಮೆಯ ಬೇದೂರು ಗ್ರಾಮದಲ್ಲಿ ಶ್ರೀ ಮಹಾಬಲೇಶ್ವರ ಭಟ್ಟರು ಮಲೆನಾಡಿನ ಒಬ್ಬ ಗಣ್ಯವ್ಯಕ್ತಿಯಾಗಿ ಬೆಳೆದರು; ಹಾಗೇ ಕನ್ನಡ ನಾಡಿನ ಶಕ್ತಿಯಾಗಿ ಬೆಳಗಿದರು. ಇವರು ವ್ಯಕ್ತಿತ್ವವನ್ನು ಅರ್ಥಮಾಡಿಕೊಳ್ಳುವಾಗ ಭಟ್ಟರು ಸೇವೆ ಮಾಡಿದ ಮೂರು ಕ್ಷೇತ್ರವನ್ನು ಗಣನೆಗೆ ತೆಗೆದುಕೊಳ್ಳಬೇಕು.

ಮೊದಲನೆಯದಾಗಿ ಇವರು ಸಾಮಾಜಿಕ ಕ್ಷೇತ್ರದಲ್ಲಿ ದುಡಿದರು. ಎರಡನೆಯದಾಗಿ ರಾಜಕೀಯ ಕ್ಷೇತ್ರದಲ್ಲಿ ದುಡಿದರು. ಮೂರನೆಯದಾಗಿ ಸಾಹಿತ್ಯ ಕ್ಷೇತ್ರದಲ್ಲಿ ದುಡಿದರು. ಈ ಮೂರು ಕ್ಷೇತ್ರಗಳಲ್ಲಿ ನಿಸ್ವಾರ್ಥತೆಯಿಂದ, ತ್ಯಾಗಶೀಲ ಬುದ್ಧಿಯಿಂದ ಸೇವೆ ಮಾಡಿ ಜನಪ್ರಿಯರಾಗಿದ್ದಾರೆ; ಜನಾನುರಾಗಿಯಾಗಿ ಹೊಗಳಿಸಿಕೊಳ್ಳುತ್ತಿದ್ದಾರೆ.

ಸಾಮಾಜಿಕವಾಗಿ ಸಾಗರ ಪುರಸಭೆಗೆ ಸದಸ್ಯರಾಗಿ ಒಂಭತ್ತು ವರ್ಷ ಸೇವೆ ಮಾಡಿದ್ದಾರೆ. ಶರಾವತಿ ಮುಳುಗಡೆ ಪುನರ್ವಸತಿ ಸಮಿತಿಗೆ ಪ್ರತಿನಿಧಿಯಾಗಿ ಅವರು ೯ ವರ್ಷ ದುಡಿದಿದ್ದಾರೆ. ಸಾಗರ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘದ ಅಧ್ಯಕ್ಷರಾಗಿ ಕೆಲಸ ಮಾಡಿದ್ದಾರೆ. ಸಾಗರ ಕೃಷಿ ಭೂ ಅಭಿವೃದ್ಧಿ ಬ್ಯಾಂಕಿನ ಅಧ್ಯಕ್ಷರಾಗಿ ಸೇವೆ ಮಾಡಿದ್ದಾರೆ. ಮಲೆನಾಡಿನ ಅಭಿವೃದ್ಧಿ ಪ್ರತಿಷ್ಠಾನದ ಉಪಾಧ್ಯಕ್ಷರಾಗಿದ್ದಾರೆ. ಮಲೆನಾಡು ಅಡಿಕೆ ಮಾರಾಟದ ಸಹಕಾರ ಸಂಘದ ನಿರ್ದೇಶಕರಾಗಿ, ಉಪಾಧ್ಯಕ್ಷರಾಗಿ ದುಡಿದಿದ್ದಾರೆ. ಜಿಲ್ಲಾ ಬರಹಗಾರರ ಮಂಡಳಿ, ಲಾಲ್ ಬಹದ್ದೂರ್ ಶಾಸ್ತ್ರಿ ಕಾಲೇಜಿನ ಸಮಿತಿ ಡೈರೆಕ್ಟರಾಗಿ, ಸಾಗರ ತಾಲೂಕಿನ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಕೆಲಸ ಮಾಡಿದ್ದಾರೆ. ಈ ಸಾಮಾಜಿಕ ಕೆಲಸಗಳಲ್ಲಿ ನಿಷ್ಠಾವಂತರಾಗಿ ಸೇವೆ ಮಾಡಿದ ಶ್ರೀ ಮಹಾಬಲೇಶ್ವರ ಭಟ್ಟರು ರಾಜಕೀಯದಲ್ಲೂ ಒಳ್ಳೇ ಸ್ಥಾನ-ಮಾನ ಗಳಿಸಿದ್ದಾರೆ.

ರಾಜಕೀಯವಾಗಿ ಸಾಗರ ತಾಲೂಕು ಕಾಂಗ್ರೆಸ್ ಪಕ್ಷದ ಪ್ರಧಾನ ಕಾರ್ಯದರ್ಶಿಯಾಗಿದ್ದರು. ನಂತರ ಶಿವಮೊಗ್ಗ ಜಿಲ್ಲಾ ಕಾಂಗ್ರೆಸ್ ಸಮಿತಿ ಉಪಾಧ್ಯಕ್ಷರಾಗಿ ಕೆಲಸ ಮಾಡಿದರು. ಇವರು ನಿಷ್ಠಾವಂತ ರಾಜಕಾರಣಿಯಾಗಿದ್ದರೆನ್ನುವುದಕ್ಕೆ, ಪಕ್ಷಾಂತರಿಯಾಗುವ ಕೀಳು ಗುಣ ಇವರಲ್ಲಿರಲಿಲ್ಲ.

ಸಾಹಿತ್ಯ ಕ್ಷೇತ್ರದಲ್ಲಿ ಸ್ವತಹ ಬರಹಗಾರರಾಗಿ - ಕಥೆ, ಕವನ, ಕಾದಂಬರಿ, ಜೀವನ ಚರಿತ್ರೆ, ವೈಚಾರಿಕ ಲೇಖನ ಬರೆದು ಪ್ರಕಟಿಸಿದ್ದಾರೆ. ಈ ವರೆಗೆ ಹದಿಮೂರು ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಜಲಂಧರ ಪ್ರಕಟಣಾಲಯವೆಂಬ ಪ್ರಕಾಶನ ತೆರೆದು ಹಲವು ಉತ್ತಮ ಗ್ರಂಥಗಳನ್ನು, ಕಾದಂಬರಿಗಳನ್ನು ಪ್ರಕಟಣೆ ಮಾಡಿದ್ದಾರೆ. ನಾಡಿನ ದೊಡ್ಡ ಸಣ್ಣ ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆದು ಪ್ರಕಟಣೆ ಪಡಿಸಿದ್ದಾರೆ. ಬರಹಗಾರರಾಗಿದ್ದಲ್ಲದೆ ಸಂಯುಕ್ತ ಕರ್ನಾಟಕಕ್ಕೆ 'ಬೇವು ಬೆಲ್ಲ' - ಜನವಾರ್ತೆಗೆ 'ನಿಮ್ಮೊಡನೆ' ಅಂಕಣ ಬರಹಗಾರರಾಗಿದ್ದಾರೆ. ಕಲೆ, ಸಾಹಿತ್ಯ, ಸಂಸ್ಕೃತಿ, ನಾಟಕ, ಸಂಗೀತ, ಇವುಗಳ ಅಭಿವೃದ್ಧಿ, ವಿಕಾಸಕ್ಕಾಗಿ ಕನ್ನಡ ಸಂಘದ ಅಧ್ಯಕ್ಷರಾಗಿ ತುಂಬಾ ವರ್ಷ ಸೇವೆ ಮಾಡಿದ್ದರು.

ಇಂತಹ ಮಹಾಬಲೇಶ್ವರ ಭಟ್ಟರಿಗೆ ೧೯೭೮ ರಲ್ಲಿ ಇವರ ಸೇವೆಯ ನೆನಪಿಗಾಗಿ 'ಮಹಾನಂದ' ಗ್ರಂಥ ಪ್ರಕಟಣೆಯಾಯಿತು. ಇವರ ಅಭಿಮಾನಿಗಳು, ಮಿತ್ರರು ಐವತ್ತರ ಹೊಸ್ತಿಲಲ್ಲಿ ಕಾಲಿರಿಸಿದ ಭಟ್ಟರಿಗೆ ಅಭಿಮಾನದಿಂದ ಹರಸಿದ ನುಡಿ ಸಂಚಯ.

ಈಗ ಮಹಾಬಲೇಶ್ವರ ಭಟ್ಟರು ಎಪ್ಪತ್ತಕ್ಕೆ ಕಾಲಿರಿಸುತ್ತಿದ್ದಾರೆ. ಅಂದು ಮಹಾನಂದ ಅರ್ಪಿತವಾದರೆ ಇಂದು ಮಹಾನಂದಾದೀಪ ಇವರಿಗೆ ಅರ್ಪಿತ.

"ಸೂರ್ಯ ಹುಟ್ಟುವಾಗಲೂ ಬಾನಿಗೆ ರಂಗೇರಿಸುತ್ತಾನೆ; ಪಡುವಣಕ್ಕೆ ಜಾರುವಾಗಲೂ ಕೆಂಪೇರಿಸುತ್ತಾನೆ. ಮೂಡಣದಲ್ಲಿ ಕಾಂತಿ, ಪಡುವಣದಲ್ಲಿ ಶಾಂತಿ" - ಈ ಎರಡೂ ಬಣ್ಣ ಮಹಾಬಲೇಶ್ವರ ಭಟ್ಟರ ಮುಖದಲ್ಲಿ ಸದಾ ಮಂದಸ್ಮಿತ ಹೊಮ್ಮುತ್ತಿದೆ. ತುಂಬಿದ ಸಾಗರದ ಮಡಿಲಲ್ಲಿ ಏನೇನು ಅಪೂರ್ವ ಮುತ್ತುರತ್ನಗಳು, ಅಡಗಿದೆಯೋ ಅವೆಲ್ಲಾ ನಿಗೂಢ. ಇವರೂ ಸಾಗರದಲ್ಲೊಬ್ಬ ಸಾಗರ - ನನ್ನ ಆತ್ಮೀಯ ನೆನಪುಗಳು.

ಸಾಗರಕ್ಕೆ ದೂರವಿದ್ದರೂ
ಮಹಾಬಲೇಶ್ವರ ಭಟ್ಟರ ನೆನಸಿಕೊಂಡೆ
ಉಬ್ಬರದಬ್ಬರವಿಲ್ಲದ ಸಾಗರ
ಇವರನ್ನು ನನ್ನೆದೆಯಲ್ಲೇ ಕಂಡೆ

ಸಾಗರದಲ್ಲೇ ಮುಳುಗದ ದೊಡ್ಡ ಬಂಡೆ
ಅಪೂರ್ವ ಮುತ್ತು - ರತ್ನಗಳ ತುಂಬಿ ಕೊಂಡೇ
ಎಪ್ಪತ್ತರ ಗಡಿ ದಾಟಿದೆಯಲ್ಲ
ಯಾವ ಬಂಡೆಗೂ ಶಕ್ತಿ-ಚೈತನ್ಯ ಇಂವ ಕೊಡಬಲ್ಲ

ಕನ್ನಡದ ತುಂಬಿದ ಕೊಡ
ಶರಾವತಿ ಹರಿದಳು, ಬೆಳಕಾಗಿ,
ಮಹಾಬಲೇಶ್ವರ ಆತ್ಮೀಯ ಮೋಡಿಗಾರ
ಜನರೊಳು ಬೆರೆತನು ಸಾಗರವಾಗಿ

ಸಾಗರದಲ್ಲೊಬ್ಬ ಇವನೇ ಸಾಗರ
ಸರಳ ಸ್ವಭಾವ ನಿರಾಡಂಬರನಾಗಿ
ಮಹಾಬಲೇಶ್ವರ
ನಾಡಿನ ಸೇವೆಗೆ ನಿಂತ-ಜನಾನುರಾಗಿ

# ಬಹುಮುಖ ಪ್ರತಿಭೆಯ -
# ಶುಭ್ರಚಾರಿತ್ರ್ಯದ ವ್ಯಕ್ತಿ

**- ಟಿ.ಕೆ. ಮಹಮೂದ್**

ಸಾಹಿತಿ, ರಾಜಕಾರಣಿ, ಪತ್ರಕರ್ತ ಮತ್ತು ಸಾಮಾಜಿಕ ಕಾರ್ಯಕರ್ತರಾದ ಶ್ರೀ ಟಿ. ಮಹಾಬಲೇಶ್ವರ ಭಟ್ಟರೊಡನೆ ಇಪ್ಪತ್ತೈದು ವರ್ಷಗಳ ಧೀರ್ಘ ಸ್ನೇಹ ಸಂಬಂಧ ನನ್ನದು. ಸಾಗರ ಪ್ರಾಂತ್ಯದ ಸಾರ್ವಜನಿಕ ಚಟುವಟಿಕೆಗಳು ಭಟ್ಟರಿಲ್ಲದೆ ಮುಂದೆ ಚಲಿಸುವುದಿಲ್ಲ - ಎಂಬಷ್ಟು ಮಟ್ಟಿಗೆ ಸಾರ್ವಜನಿಕ ಜೀವನದ ಎಲ್ಲಾ ಕ್ಷೇತ್ರಗಳಲ್ಲೂ ಅವರ ಸಕ್ರಿಯ ಪಾತ್ರ. ತುಂಬು ವಿಚಾರದ, ತುಂಬಿದ ಸಂಸ್ಕೃತಿಯ ಮಹಾಬಲೇಶ್ವರ ಭಟ್ಟರು ಸಹಕಾರ, ಶಿಕ್ಷಣ, ಸಾಹಿತ್ಯ, ಪತ್ರಿಕೋದ್ಯಮ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಅನುಪಮ ಸೇವೆ ಸಲ್ಲಿಸುತ್ತಾ ಬಂದವರು. ಅವರೊಬ್ಬ ತತ್ವನಿಷ್ಠ ರಾಜಕಾರಣಿ. ನಲವತ್ತು ವರ್ಷಗಳ ಕಾಲ ತಮ್ಮ ಶ್ರಮನೀಡಿ ಕಾಂಗ್ರೆಸ್ಸನ್ನು ಬೆಳೆಸಲು ಅವರು ದುಡಿದವರಲ್ಲದೆ ಅಧಿಕಾರ ರೂಢ ಪಕ್ಷವಾಗಿಯೇ ಬೆಳೆದು ಬಂದ ಕಾಂಗ್ರೆಸ್ಸಿನಿಂದ ರಾಜಕೀಯ ಲಾಭ ಪಡೆದು ಬೆಳೆಯಬೇಕೆಂಬ ಆಕಾಂಕ್ಷೆ ಅವರಲ್ಲಿ ಇದ್ದೇ ಇರಲಿಲ್ಲ. ಸಾರ್ವಜನಿಕ ಕ್ಷೇತ್ರಕ್ಕೆ ಅವರು ನಿಜವಾಗಿಯೂ ಒಂದು ಆಸ್ತಿ. ಕನ್ನಡ ಸಾಹಿತ್ಯ ಪರಿಷತ್ತಿನ ಒಂದು ತಾಲ್ಲೂಕು ಸಮಿತಿಯ ಅಧ್ಯಕ್ಷರಾಗಿ ಯಾವ ಜಿಲ್ಲಾ ಸಮಿತಿಗಳೂ ಮಾಡಿರದಷ್ಟು ಸಾಹಿತ್ಯಿಕ ಚಟುವಟಿಕೆಗಳನ್ನು ಮಾಡಿ ಅಪರೂಪದ ದಾಖಲೆಯನ್ನು ಅವರು ನಿರ್ಮಿಸಿದ್ದಾರೆ. ನಿರಂತರ ಚಟುವಟಿಕೆಯ ಶ್ರೀ ಮಹಾಬಲೇಶ್ವರ ಭಟ್ಟರು ಈ ಎಲ್ಲ ಹೊಣೆಗಾರಿಕೆಗಳೊಡನೆ ಸ್ವಂತ ಪ್ರಕಾಶನ ಸಂಸ್ಥೆಯನ್ನು ನಡೆಸಿಕೊಳ್ಳುತ್ತಾ ತೋಟ-ಗದ್ದೆಗಳ ಕೆಲಸದಲ್ಲಿ ನಿಗಾ ವಹಿಸುತ್ತಾ ಏಳು ಮಕ್ಕಳುಳ್ಳ ದೊಡ್ಡ ಸಂಸಾರದಲ್ಲಿ ಎಲ್ಲ ಕೆಲಸಗಳನ್ನೂ ನಿಭಾಯಿಸುತ್ತಾ ಬಂದಿರುವುದು ಅವರ ಸಾಧನೆಗೆ ಸಿದ್ಧಿಗೊಂದು ನಿದರ್ಶನ.

ರಾಜಕಾರಣಿಗಳ ಬಗ್ಗೆ ಕೆಲ ಸಾಹಿತ್ಯಕರು ಮೂಗು ಮುರಿಯುವುದುಂಟು. ವಾಸ್ತವವಾಗಿ ಲೋಕ ಶಾಹಿ ವ್ಯವಸ್ಥೆಯಲ್ಲಿ ಸಾಹಿತ್ಯ ರಾಜಕೀಯದಿಂದ ದೂರ ಇಲ್ಲ ಬೇಕೆಂಬುದೇ ಶುದ್ಧಾಂಗ ತಪ್ಪು. ಒಂದರ ಅನುಭವ ಇನ್ನೊಂದಕ್ಕೆ ಪೂರಕವಾದಾಗ ಸಾಹಿತ್ಯ ರಾಜಕಾರಣಕ್ಕೆ ಮಾರ್ಗದರ್ಶನ ಮಾಡಬೇಕಾದ ಜವಾಬ್ದಾರಿ

ಅರಿತುಕೊಂಡಾಗ ಹಾಗೂ ರಾಜಕಾರಣ ಸಾಹಿತ್ಯ ಮತ್ತು ಅದರ ಚಟುವಟಿಕೆಗಳಿಗೆ ಪೋಷಕವಾಗಿ ಬೆಳೆದು ಬಂದಾಗಲೇ ಪ್ರಜಾಶಾಹಿ ಸರಿದಾರಿಯಲ್ಲಿ ಪ್ರಗತಿಪರ ಹೆಜ್ಜೆ ಇಡುವುದು ಹೆಚ್ಚು ಸಾಧ್ಯವಾಗುತ್ತದೆ. ಶ್ರೀ ಮಹಾಬಲೇಶ್ವರ ಭಟ್ಟರು ತಮ್ಮ ಸಾಧನೆಗಳಲ್ಲಿ ಒಂದಕ್ಕೊಂದನ್ನು ಪೂರಕಗೊಳಿಸಿ ಸಾಹಿತ್ಯ ರಾಜಕೀಯದಲ್ಲಿ ಅಪ್ಪಿಸಿಲ್ಲದಂತೆ ಮತ್ತು ರಾಜಕೀಯ ಸಾಹಿತ್ಯಿಕ ವಾತಾವರಣವನ್ನು ಕಲುಷಿತಗೊಳಿಸದಂತೆ ಎರಡು ಗಾಲಿಯ ರಥದ ಸಾರಥ್ಯವನ್ನವರು ಪ್ರಶಂಸನೀಯ ರೀತಿಯಲ್ಲಿ ನಿರ್ವಹಿಸುತ್ತಾಬಂದಿದ್ದಾರೆ.

ಈ ಎಲ್ಲ ಚಟುವಟಿಕೆಗಳ ನಡುವೆ ಅವರು ಅಂಕಣಕಾರರಾಗಿ, ಹವ್ಯಾಸಿ ಲೇಖಕರಾಗಿ ನಿರಂತರ ಬರವಣಿಗೆಯೊಡನೆ ಬೆಳೆದು ಬಂದಿದ್ದಾರೆ. ಎತ್ತರದ ನಿಲುವಿನ ಶುಭ್ರ ಖಾದಿಧಾರಿ. ಶ್ರೀ ಮಹಾಬಲೇಶ್ವರ ಭಟ್ಟರು ತಮ್ಮ ನಾಲ್ಕು ದಶಕಗಳಿಗೂ ಮಿಕ್ಕಿದ ಸಾರ್ವಜನಿಕ ಜೀವನದಲ್ಲಿ ತಾವು ತೊಡುವ ಖಾದಿಯಷ್ಟೇ ಪರಿಶುದ್ಧವಾಗಿ, ಶುಭ್ರವಾಗಿ ತಮ್ಮ ವ್ಯಕ್ತಿತ್ವನ್ನು ರೂಪಿಸಿಕೊಂಡು ಎಲ್ಲರ ಮೆಚ್ಚುಗೆಗೆ ಪಾತ್ರರಾದವರು. ಕನ್ನಡ ಸಾಹಿತ್ಯದಲ್ಲಿ ಅವರು ಎಲ್ಲಾ ಕ್ಷೇತ್ರಗಳಲ್ಲೂ ಕೈಯಾಡಿಸಿದ್ದಾರೆ. ಕತೆಗಾರರಾಗಿ, ಕಾದಂಬರಿಕಾರರಾಗಿ, ಕವಿಯಾಗಿ, ವ್ಯಕ್ತಿ ಚಿತ್ರ -ಸಂಪಾದಕ, ಮುದ್ರಕ - ಹೀಗೆ ವಿವಿಧ ಮುಖ ಸೇವೆಯಲ್ಲಿ ಅರ್ಧ ಶತಮಾನದಷ್ಟು ಸಾಹಿತ್ಯಕ- ಸಾಂಸ್ಕೃತಿಕ ರಂಗದಲ್ಲಿ ತಮ್ಮ ಬಹುಮುಖ ಪ್ರತಿಭೆಯನ್ನು ಮೆರೆದಿದ್ದಾರೆ.

ಶಿವಮೊಗ್ಗ ಜಿಲ್ಲೆಯ ಸಾರ್ವಜನಿಕ ರಂಗದಲ್ಲಿ ವಿವಿಧ ಕ್ಷೇತ್ರಗಳಲ್ಲಿ ದುಡಿಯುತ್ತ ಬಂದಿರುವ ಶ್ರೀ ಮಹಾಬಲೇಶ್ವರ ಭಟ್ಟರು ಇದೀಗ ಎಪ್ಪತ್ತರ ಗಡಿ ಸಮೀಪಿಸುತ್ತಿದ್ದರೂ ತಮ್ಮ ಎಂದಿನ ಲವಲವಿಕೆಗಳಿಂದ ಚಿರಯುವಕರಾಗಿದ್ದಾರೆ. ಅವರೆಂದೂ ದಣಿದವರಂತೆ ಕಂಡದ್ದೇ ಇಲ್ಲ. ಸ್ನೇಹ ಜೀವಿಯಾಗಿರುವ ಪ್ರಿಯ ಮಹಾಬಲೇಶ್ವರ ಭಟ್ಟರನ್ನು ಅವರ ಎಪ್ಪತ್ತನೇ ಹುಟ್ಟುಹಬ್ಬದ ಸಂದರ್ಭದಲ್ಲಿ ಸನ್ಮಾನಿಸಲು, ಅವರ ಸಾರ್ವಜನಿಕ ಸೇವೆಯನ್ನು ಗೌರವಿಸಲು, ಅವರ ಮಹತ್ ಸಾಧನೆಗಳಿಗೆ ಸಾರ್ವಜನಿಕ ಮಾನ್ಯತೆ ನೀಡಲು ಸಮಾರಂಭವೊಂದನ್ನು ನಡೆಸಿ ಅಭಿನಂದನ ಗ್ರಂಥ ಅರ್ಪಿಸಲು ಅವರ ಅಭಿಮಾನಿಗಳು ಕೈಗೊಂಡಿರುವ ತೀರ್ಮಾನ ನಿಜಕ್ಕೂ ಶ್ಲಾಘನೀಯ. ಈ ಕೆಲಸ ಜಿಲ್ಲಾಮಟ್ಟದಲ್ಲಿ ರಾಜ್ಯಮಟ್ಟದಲ್ಲೂ ನಡೆಯುವಂತಾಗಬೇಕು. ಅದಕ್ಕೆ ಶ್ರೀ ಮಹಾಬಲೇಶ್ವರ ಭಟ್ಟರು ಎಲ್ಲಾರೀತಿಯಲ್ಲೂ ಅರ್ಹರು. ಆ ಕೆಲಸವೂ ಶೀಘ್ರ ನಡೆಯುಂತಾಗಲಿ ಎಂಬ ಹಾರೈಕೆಯೊಡನೆ, ಆತ್ಮೀಯ ಮಹಾಬಲೇಶ್ವರ ಭಟ್ಟರಿಗೆ ನೂರು ವರ್ಷಗಳ ತುಂಬು ಆಯುಷ್ಯವನ್ನು, ಆರೋಗ್ಯವನ್ನು ಈ ಸಂದರ್ಭದಲ್ಲಿ ಕೋರುತ್ತಿದ್ದೇನೆ.

# ಬಿಂದುವಿನ ಬಂಧು

– ಟಿಂ.ಎಂ. ಸುಬ್ಬರಾಯ

ನಲವತ್ತು ವರ್ಷಗಳ ಹಿಂದೆ; ಮಹಾಬಲೇಶ್ವರ ಭಟ್ಟರ ಆಗಿನ ವಯಸ್ಸಿನ ಅರ್ಧದಷ್ಟು ವಯಸ್ಸಿನವನು ನಾನು. ಆಗ, ಸಾಗರದ ಮುನಿಸಿಪಲ್ ಹೈಸ್ಕೂಲಿನ ವಿದ್ಯಾರ್ಥಿ. ಬ್ರಾಹ್ಮಣರ ಹಾಸ್ಟೆಲ್‌ನಲ್ಲಿ ಊಟ-ವಸತಿ. ಸ್ಕೂಲ್ ಮುಗಿದೊಡನೆಯೇ ಪುಸ್ತಕದ ಚೀಲ ಹಾಸ್ಟೆಲ್‌ನ ರೂಮಿನಲ್ಲಿಟ್ಟು ಬಸ್‌ಸ್ಟ್ಯಾಂಡ್‌ನ ರಸ್ತೆಯಲ್ಲಿ ಹೆಜ್ಜೆ ಹಾಕುವುದು - ಬಸ್ ಸ್ಟ್ಯಾಂಡ್‌ಗಲ್ಲ; ಈಗ ಪೋಲೀಸ್ ಸ್ಟೇಶನ್ ಉಂಟಲ್ಲಾ.. ಅದರ ಪಕ್ಕದಲ್ಲಿ, ಮಾವಿನ ಕುಳಿಯವರ ಮನೆಗೆ ತಾಗಿದಂತೆ ಇದ್ದ ಪುಸ್ತಕದ ಅಂಗಡಿಯಿತ್ತು. ಆ ಅಂಗಡಿಯ ಎದುರು ಹೋಗಿ ನಿಲ್ಲುವುದು. ಸಾಲಾಗಿ ತೂಗು ಹಾಕಿದ ವಾರ, ಮಾಸಿಕ ಪತ್ರಿಕೆಗಳ ಬೆಲೆಯನ್ನು ಮುಂಚಿನ ದಿನ, ಅದರ ಮುಂಚಿನ ದಿನ ಕೇಳಿ ತಿಳಿದಿದ್ದರೂ, ಅವುಗಳಲ್ಲಿ ಒಂದನ್ನಾದರೂ ಕೊಳ್ಳುವಷ್ಟು ಹಣ ಜೇಬಿನಲ್ಲಿ ಇಲ್ಲ ಎಂದು ತಿಳಿದಿದ್ದರೂ, ಅವನ್ನು ನೋಡುತ್ತಾ ಬೆಲೆ ವಿಚಾರಿಸುವುದು, ಅವನ್ನು ಮೆಲ್ಲನೆ ಮುಟ್ಟಿ ನೋಡುವುದು, ಹಾಗೆಯೇ ಒಂದೊಂದೇ ಹಾಳೆ ತಿರುವಿ ಹಾಕುವುದು. ಖುಷಿ ಪಟ್ಟು ಮರಳುವುದು.

ಮತ್ತೆ ಮರುದಿನ ... ಅದರಮರುದಿನ.... ಹೀಗೆ ದಿನ - ದಿನ... 'ಕರ್ಮವೀರ ಬಂದಿದೆಯೆ ? 'ಕಸ್ತೂರಿ ಉಂಟಾ ? 'ಮೊನ್ನೆ ... ಭಾನುವಾರದ ತಾಯಿನಾಡು ಇದೆಯಾ ?' ಇರುವುದನ್ನು ಮುಟ್ಟಿ ನೋಡುತ್ತಾ, ಇಲ್ಲದುವನ್ನು ವಿಚಾರಿಸುತ್ತಿದ್ದೆ.

ಅಂಗಡಿಯ ಮಾಲೀಕರು - ಮಹಾಬಲೇಶ್ವರ ಭಟ್ಟರು ಮುಟ್ಟಬೇಡ ಎಂದು ಯಾವೊತ್ತೂ ಗದರಿದ್ದಿಲ್ಲ 'ಕೇಳುತ್ತಿದ್ದೀಯಲ್ಲಾ.. ಕೊಳ್ಳುತ್ತೀಯಾ ?' ಎಂದು ಕೇಳಿದ್ದಿಲ್ಲ. 'ಕೇಳಿದಿಯಲ್ಲಾ ಕೊಂಡು ಹೋಗು' ಎಂದು ದಬಾಯಿಸಿದ್ದಿಲ್ಲ. 'ಇಲ್ಲ... ಬಂದಿಲ್ಲ... 'ನಾಳೆ ಬರುತ್ತದೆ.' ಇಲ್ಲ... ಖರ್ಚಾಗಿದೆ...' ಚುಟುಕಿನ ಉತ್ತರ. ಅದೂ ತುಂಬಾ ಸೌಜನ್ಯದ, ಸೌಮ್ಯದ ಉತ್ತರ.

ತೂಗು ಹಾಕಿದ ಪತ್ರಿಕೆಗಳನ್ನು ನೋಡುತ್ತಾ, ತಡವುತ್ತಾ, ಆನಂದಿಸುತ್ತಿದ್ದ ನನ್ನನ್ನು ಒಂದು ದಿನ 'ಅದು ಹಿಂದಿನ ವಾರದ್ದು... ಹೊಸದು ಇಲ್ಲಿದೆ ನೋಡು ಬಾ...' ಎಂದು ಅಂಗಡಿಯೊಳಗೆ ಅಂಗಡಿ ಮಾಲೀಕರು ಶ್ರೀ ಮಹಾಬಲೇಶ್ವರ

ಭಟ್ಟರು ಆಮಂತ್ರಿಸಿದ್ದು - ಓಹ್! ಇಂದಿಗೂ... ನಾಲ್ಕು ದಶಕಗಳ ನಂತರವೂ ಮೆಲುಕು ಹಾಕುತ್ತಿರುವ ಮಧುರ ನೆನಪು; ಸಿಹಿ ಅನುಭವ. ಪತ್ರಿಕೆಯ ಆಕರ್ಷಣೆಯ ಸ್ಥಾನದಲ್ಲಿ. ವ್ಯಕ್ತಿ ಘಟ್ಟಿಯಾಗಿದ್ದರು. ನಾನು ಮಹಾಬಲೇಶ್ವರ ಭಟ್ಟರ ಅಂಗಡಿಯೊಳಗೆ ಪ್ರವೇಶಿಸಿದ್ದೆ; ಶ್ರೀ ಮಹಾಬಲೇಶ್ವರ ಭಟ್ಟರ ವ್ಯಕ್ತಿತ್ವ ನನ್ನೊಳಗೆ ಪ್ರವೇಶಿಸಿತು. ನನ್ನ ೧೯ನೆಯ ವಯಸ್ಸಿನಲ್ಲಿ, ಬಹಳಷ್ಟು ಬದಲಾವಣೆ; ಸ್ಥಾನಾಂತರ, ಸ್ಥಳಾಂತರ, ರೂಪಾಂತರ, ಸ್ಥಿತ್ಯಂತರ ಕೂಡ. ಪುಸ್ತಕದಂಗಡಿ ಮಾಲಿಕ ಮಹಾಬಲೇಶ್ವರ ಭಟ್ಟರ ಬದುಕಿನಲ್ಲಿಯೂ ಬಹು ಮುಖದ ಬದಲಾವಣೆ; ಕವಿಯಾಗಿ, ಸಾಹಿತಿಯಾಗಿ, ಪುರಸಭಾ ಸದಸ್ಯರಾಗಿ, ರಾಜಕಾರಣಿಯಾಗಿ, ಶರಾವತಿ ಮುಳುಗಡೆ ಸಂತ್ರಪ್ತರ ಪುನರ್ವಸತಿ ಸಮಿತಿ ಪ್ರತಿನಿಧಿಯಾಗಿ, ಮಲೆನಾಡು ಅಡಿಕೆ ಮಾರಾಟ ಸಹಕಾರ ಸಂಘದ ಆಡಳಿತ ಮಂಡಳಿ ನಿರ್ದೇಶಕರಾಗಿ, ಸಮಾಜ ಸೇವಾ ಧುರೀಣರಾಗಿ ವಿವಿಧ ರಂಗಗಳಲ್ಲಿ ಕ್ರಿಯಾಶೀಲತೆ ತೋರುತ್ತಿದ್ದ ಕಾಲ. ಆಗ ನಾನು ಶಿವಮೊಗ್ಗೆಯ ಸಹ್ಯಾದ್ರಿ ಕಾಲೇಜಿನಲ್ಲಿ ಬಿ.ಎ. ವಿದ್ಯಾರ್ಥಿ. ಗೆಳೆಯ ಮಾ.ರಾ. ಶೇಷಗಿರಿ, ಗುರು ಸಾ.ಶಿ.ಮರುಳಯ್ಯ, ಹಂಪ ನಾಗರಾಜಯ್ಯ, ಪಿ.ಲಂಕೇಶ್ ಮೊದಲಾದವರ ಉತ್ತೇಜನದಿಂದ ಕೆಲವು ಕತೆಗಳನ್ನೂ ಬರೆದು, ಅಚ್ಚಾಗಿದ್ದನ್ನು ಕಂಡುಖುಷಿ ಅನುಭವಿಸುತ್ತಿದ್ದೆ. ಸಾಗರಕ್ಕೆ ಒಮ್ಮೆ ಹೋಗಿದ್ದಾಗ-ಗೆಳೆಯ ಮಾ.ರಾ. ಶೇಷಗಿರಿ, ಸ್ಥಳಾಂತರ ಹೊಂದಿದ್ದ ಭಟ್ಟರ ಅಂಗಡಿಗೆ ನನ್ನ ಕರೆದೊಯ್ದು. ನನಗೆ ಭಟ್ಟರ ಪರಿಚಯ ಮಾಡಿಸುವ ಅಗತ್ಯವಿರಲಿಲ್ಲ. ಗೆಳೆಯ ನನ್ನನ್ನು ಮಹಾಬಲೇಶ್ವರ ಭಟ್ಟರಿಗೆ ಪರಿಚಯ ಮಾಡಿಸಿದ. 'ಗೊತ್ತು ನೋಡಿದ್ದೇನೆ'. ಎಂದ ಭಟ್ಟರು ಪರಿಚಯದ ಅಗತ್ಯವಿಲ್ಲ ಎಂಬುದನ್ನು ಸ್ಪಷ್ಟವಾಗಿ ಹೇಳಿ ಸಾಹಿತ್ಯದ ಬಗ್ಗೆ ಒಲವು ಉಳಿಸಿಕೊಂಡಿದ್ದೀಯಲ್ಲಾ.. ತುಂಬಾ ಸಂತೋಷ...' ನಿನ್ನ ಬರಹಗಳನ್ನು ನೋಡುತ್ತಿದ್ದೇನೆ. ಇನ್ನೂ ಬರೆ...ಚೆನ್ನಾಗಿ ಬರೆ... ಹೆಚ್ಚಾಗಿ' ಎಂದರು.

'ಮಹಾನಂದ' ದಿಂದ ಹೊರಟಾಗ ನನ್ನಲ್ಲಿ ತುಂಬಿಕೊಂಡಿದ್ದು ಮಹಾದಾನಂದ'...

ಆನಂತರದ ವರ್ಷಗಳಲ್ಲಿ ಅವರ ಭೇಟಿ ಅದೆಷ್ಟು ಬಾರಿಯೋ ... ಕೆಲವೊಮ್ಮೆ ಅಚಾನಕವಾಗಿ ... ಇನ್ನು ಕೆಲವು ಬಾರಿ ಅನಿರೀಕ್ಷಿತವಾಗಿ ಯಾವ ಭೇಟಿಯೂ ಪೂರ್ವ ನಿಯೋಜಿತವಾದುವಲ್ಲ; ಪೂರ್ವ ಸೂಚಿತ, ನಿಶ್ಚಿತವಾದವೂ ಅಲ್ಲ. ಪ್ರತಿ ಬಾರಿ ಭೇಟಿಯಾದಾಗಲೆಲ್ಲಾ. 'ಒಳಗೆ ಬಾ... ಚೆನ್ನಾಗಿ ಬರೆ.. ಹೆಚ್ಚಾಗಿ' ಅಂದಿದ್ದ ಮಾತುಗಳ ನೆನಪಿನ ಮರುಕಳಿಕೆ ನನ್ನಲ್ಲಿ.

ಸಾಗರದಲ್ಲಿ ನಡೆದ ಸಾಹಿತ್ಯಸಮ್ಮೇಳನದಲ್ಲಿ ಹವ್ಯಕ ಸಮ್ಮೇಳನದಲ್ಲಿ ನಾನು ಬಿಗಿದ ಭಾಷಣಗಳಿಗೆ ಬೀಗಿದ್ದು ಮಹಾಬಲೇಶ್ವರ ಭಟ್ಟರು 'ಪರವಾಗಿಲ್ಲ... ಚೆನ್ನಾಗಿ ಮಾತನಾಡಿದೆ' ಎಂದು ಭುಜ ತಟ್ಟಿದಾಗಲೇ.

ಪ್ರಾಸ ಪ್ರಯೋಗದ ರೋಗಕ್ಕೆ ಸಿಲುಕಿದ್ದ ಒಂದು ಕಾಲದಲ್ಲಿ

'ಹೊರಗೆ ಥಳಕು, ಒಳಗೆ ಹುಳುಕು

ಮನವೆಲ್ಲಾ ಬರೀ ಕೊಳಕು

ನನ್ನದು...ಏಕಪ್ಪಾ ಈ ಬದುಕು ...?

ಹೊರಗೂ ಥಳಕು, ಒಳಗೂ ಬೆಳಕು

ಹೆಚ್ಚು ಇದಕು

ಇನ್ನೇನು ಬೇಕು ...?

ಮಹಾನಂದರ ನೋಡಿ, ಒಡನಾಡಿ

ಹೊಸದಾಗಿ ಸಾಗಬೇಕು

ಈ ನನ್ನ ಬದುಕು.'

ಎಂದು ಬರೆದು, ಅಚ್ಚಾದಾಗ ಮುಚ್ಚಿಟ್ಟುಕೊಂಡು ಖುಷಿಪಟ್ಟದ್ದುಂಟು.

ನನ್ನ ಮನದೊಳಗೆ ಯಾವೊತ್ತೋ ಪ್ರವೇಶಿಸಿದ್ದ ಮಹಾಬಲೇಶ್ವರ ಭಟ್ಟರು ನನ್ನನ್ನು ಕಂಡಾಗಲೆಲ್ಲಾ ತಮ್ಮ ಮನೆಗೆ ಕರೆದಿದ್ದಾರೆ; ಕರೆಯುತ್ತಲೇ ಇದ್ದಾರೆ. ಬಂಧುವಾಗಿ, ಅದರ ಬಂಧನವೂ ಸೇರಿಕೊಂಡು ಆ ಕರೆಗೆ ಇನ್ನಷ್ಟು ಒತ್ತು ಬಂದಿದೆ. ''ಶಿರಸಿಯಲ್ಲಿ ಸ್ವಲ್ಪ ಕೆಲಸವಿತ್ತು. ಬಂದಿದ್ದೆ. ಹಾಗೆಯೇ ನಿನ್ನ ನೆನಪಾಯ್ತು. ಮನೆ ನನಗೆ ಗೊತ್ತಿರಲಿಲ್ಲ. ಇವರಿಗೆ ಗೊತ್ತಿತ್ತಲ್ಲಾ... ಕರೆದುಕೊಂಡು ಬಂದೆ.'' ಎನ್ನುತ್ತಾ ಒಂದು ಮುಂಜಾನೆ, ಮಹಾಬಲೇಶ್ವರ ಭಟ್ಟರು ನನ್ನ ಪರಿಚಿತರೊಬ್ಬರೊಡಗೂಡಿ ನಮ್ಮ ಮನೆಯಲ್ಲಿ ಹಾಜರ್.. ಆದಾಗ... ಸಾಗರಕ್ಕೆಹೋದಾಗ ಬಿಡುವಿದ್ದೂ, ಭಟ್ಟರಮನೆಗೊತ್ತಿದ್ದೂ, ಒತ್ತಾಯದ ಆಮಂತ್ರಣವಿದ್ದೂ ಅವರ ಮನೆಗೆ ಹೋಗಲು ಹಿಂದೇಟು ಹಾಕುತ್ತಿರುವ, ಸಂಕೋಚಿಸುತ್ತಿರುವ ನಾನು ತೀರಾ...ತೀರಾ...ಕುಬ್ಜ. !

ಮೊದಲ ನೋಟಕ್ಕೆಮಹಾಬಲೇಶ್ವರ ಭಟ್ಟರು ತುಂಬು ಗಾಂಭಿರ್ಯದ ವ್ಯಕ್ತಿಯಾಗಿ ಕಾಣುತ್ತಾರೆ. ನಿಕಟರಾದಂತೆ, ಮಾತಿನ ಮಾಧುರ್ಯದಿಂದ ಮೋಡಿ ಹಾಕುತ್ತಾರೆ. ಸೌಜನ್ಯದ ಸುಧೆ ಹರಿಸುತ್ತಾರೆ. ಸ್ನಿಗ್ಧತೆಯ ಅಚ್ಚೊತ್ತುತ್ತಾರೆ. ಸ್ನೇಹ ಎಂಬುದರ ವ್ಯಾಖ್ಯೆಯಾಗಿ ನಿಲ್ಲುತ್ತಾರೆ. ಅವರದು ಶ್ರೀಮದ್ಗಾಂಭೀರ್ಯವಲ್ಲ. ಗಾಂಭೀರ್ಯದ ಶ್ರೀಮಂತಿಕೆ. ಭಟ್ಟರು ಕಾಯಾ-ಸುಂದರಶೀಲ, ವಾಚಾ-ಮೃದುಭಾಷಿ, ಮನಸಾ-ಸಹೃದಯವಂತ, ಪರೋತ್ಕರ್ಷ ಸಹಿಷ್ಣು. ಕಾಯಾ-ವಾಚಾ-ಮನಸಾ ಭಟ್ಟರದು ಸಾಗರ ಸದೃಶ ವ್ಯಕ್ತಿತ್ವ-ಮಹತ್ವ.

ವಯೋಮಾನ, ಬೌದ್ಧಿಕಮಾನ, ಸ್ಥಾನ-ಮಾನ, ಸಾಹಿತ್ಯಮಾನ ಎಲ್ಲದರಲ್ಲೂ ಭಟ್ಟರಿಗೂ ನನಗೂ ಗಜ-ಅಜ ಅಂತರ. ಆದರೆ, ಎಂದೂ ಇವೊಂದನ್ನು ಅವರ ಸ್ವಭಾವದಲ್ಲಿ, ವರ್ತನೆಯಲ್ಲಿನಾನು ಕಂಡುದಿಲ್ಲ; ಅನುಭವಿಸಿದುದಿಲ್ಲ. ನಮ್ಮ ಕುಟುಂಬದೊಂದಿಗೆ ಅವರ ನೆಂಟಸ್ತಿಕೆ ಬೆಳೆಯುವ ಮೊದಲೇ ಮೊಳೆತದ್ದು - ನನ್ನ - ಅವರ ನೆಂಟಸ್ತಿಕೆ - ಬಂಧುತ್ವ. ನನ್ನಲ್ಲಿ ಸಾಹಿತ್ಯದೊಲವಿನ ಬಿಂದುವನ್ನು ಚಿಮುಕಿಸಿದ ಮಹಾನ್ ಬಂಧು- ಶ್ರೀಮಹಾಬಲೇಶ್ವರ ಭಟ್ಟರು.

# ಸಾಹಿತ್ಯ ಪ್ರೇಮಿ

**- ಡಾ॥ ಕಮಲಾ ಹಂ.ಪ.ನಾ.**

ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕಿನ ಬೇದೂರಿನ ಶ್ರೀ ಮಹಾಬಲೇಶ್ವರ ಭಟ್ಟರನ್ನು ಯಾರು ತಾನೇ ತಿಳಿಯರು ? ತಮ್ಮ ಅನೇಕ ಸಾಹಿತ್ಯಕ, ಸಾಂಸ್ಕೃತಿಕ, ರಾಜಕೀಯ ಹಾಗೂ ಸಾಂಘಿಕ ಚಟುವಟಿಕೆಗಳಿಂದ ಆ ಪ್ರದೇಶದಲ್ಲಿ ಹೆಚ್ಚಿನ ಪ್ರಭಾವಶಾಲಿಯಾದವರು. ಅವರು ತಮ್ಮ ಉತ್ತಮ ಅಭಿರುಚಿಯ ನಡೆ- ನುಡಿಯಿಂದ ಆ ಜಿಲ್ಲೆಯಅನೇಕ ಜನರಿಗೆ ಆದರ್ಶ ಪ್ರಾಯರಾಗಿರುವವರು.

ಇಂಥ ಹಿರಿಯ ವ್ಯಕ್ತಿತ್ವವುಳ್ಳ ಶ್ರೀ ಟಿ. ಮಹಾಬಲೇಶ್ವರ ಭಟ್ಟರನ್ನು ಡಾ. ಹಂಪನಾ ಅವರಜೊತೆಯಲ್ಲಿ, ಈ ಮೊದಲು ನಾನು ಎರಡು ಮೂರು ಬಾರಿ, ಸಾಹಿತ್ಯಕ ಕಾರ್ಯಕ್ರಮಗಳಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನಗಳಲ್ಲಿ ಕಾಣುವ, ಕಂಡು ಮಾತನಾಡಿಸುವ ಸುಯೋಗ ಲಭಿಸಿತ್ತು. ಭಟ್ಟರಿಗೆ ಐವತ್ತುವರುಷಗಳು ತುಂಬಿದಾಗ ಅವರಸಾರ್ಥಕ ಬದುಕಿನಿಂದ ಸಂತೃಪ್ತಿಗೊಂಡ ಜನತೆ ಅವರಿಗೆ 'ಮಹಾನಂದ' ಎನ್ನುವ ಅಭಿನಂದನ ಗ್ರಂಥವನ್ನು ಅರ್ಪಿಸಿ ಗೌರವಿಸಿತು. ಆ ಸಮಾರಂಭದಲ್ಲಿ ಭಾಗವಹಿಸಿದ್ದ ಡಾ. ಹಂ.ಪ.ನಾ. ಸಮಾರಂಭ ಮುಗಿಸಿ ಬಂದ ನಂತರ ಬಾಯಿ ತುಂಬಿ, ಹೃದಯ ತುಂಬಿ ಕಣ್ಮನಗಳಿಗೆ ಕಟ್ಟುವಂತೆ ವರ್ಣಿಸಿದ್ದು ನನ್ನ ಕಿವಿಗಳಲ್ಲಿ ಇಂದೂ ಮೊಳಗುತ್ತಿದೆ.

ಅಂಥ ಮಹಾಬಲೇಶ್ವರ ಭಟ್ಟರನ್ನು ತೀರ ಸಮೀಪದಿಂದ ಕಾಣುವ, ಅವರಮನೆಯಲ್ಲಿಯೇ ತಂಗಿದ್ದು, ಅವರ, ಅವರ ಕುಟುಂಬ ವರ್ಗದವರ ಆತಿಥ್ಯ ಪಡೆಯುವ ಸುಯೋಗ ನನಗೆ ಇತ್ತೀಚೆಗೆ ದೊರೆಯಿತು. ಆ ಸಂಗತಿಯನ್ನು ಮುಂದೆ ಕೃತಜ್ಞತೆಯಿಂದ ತಿಳಿಸುವವಳಿದ್ದೇನೆ.

ತನ್ನ ಮನೆ ಪಂಡಿತರ ತವರುಮನೆ ಎನ್ನಿಸುವ ಹಂಬಲ ಹೊತ್ತವರು. ಸಾಹಿತಿಗಳನ್ನು ಕಂಡರೆ ಅತೀವ ಆದರ. ಕನ್ನಡ ನಾಡಿನ ಬಹುಮಟ್ಟಿನ ಪ್ರಸಿದ್ಧ ಸಾಹಿತಿಗಳೆಲ್ಲಾ ಇವರ ಪರಿಚಯ ಹಾಗೂ ಸ್ನೇಹ ವ್ಯಾಪ್ತಿಯಲ್ಲಿ ಬಂದಿದ್ದಾರೆ. ಗಣ್ಯ ಸಾಹಿತಿಗಳನ್ನು ಸಾಗರಕ್ಕೆ ಬರಮಾಡಿಕೊಂಡು ಸನ್ಮಾನ ಸಮಾರಂಭ ಏರ್ಪಡಿಸುವುದೆಂದರೆ ಭಟ್ಟರಿಗೆ ಎಲ್ಲಿಲ್ಲದ ಸಡಗರ. ಮನೆಯ ಮಕ್ಕಳ ಮದುವೆಗೆ

ಸಂಭ್ರಮಿಸಿ ಓಡಾಡುವಂತೆ ಸಾಹಿತ್ಯ, ಸಂಸ್ಕೃತಿ ಸಂಬಂಧವಾದ ಸಭೆ ಸಮಾರಂಭಗಳಲ್ಲೂ ತನ್ಮಯರಾಗಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ಅವರ ಸಾಹಿತ್ಯ ಪ್ರೇಮ ಅಷ್ಟು ಆಳವಾಗಿ ಅಂತರಂಗದಲ್ಲಿ ಬೇರು ಬಿಟ್ಟಿದೆ.

ತಾವಿರುವ ಪರಿಸರದಲ್ಲಿ ಸಾಹಿತ್ಯಕ ವಾತಾವರಣ ಮೂಡಿಸಲು ಕಳೆದ ನಾಲ್ಕುವರೆ ದಶಕಗಳ ಕಾಲ ತ್ರಿಕರಣ ಪೂರ್ವಕವಾಗಿ ದುಡಿದಿದ್ದಾರೆ. ಈ ಹೇಳಿಕೆಯಲ್ಲಿ ಯಾವ ಉತ್ಪ್ರೇಕ್ಷೆಯೂ ಇಲ್ಲ. ಲೇಖಕರಲ್ಲಿ ಸಾಮಾನ್ಯವಾಗಿ ಅಮತ್ಸರತ್ವ ಕಡಿಮೆ - ಎಂದೇ ಹೇಳಬಹುದು. ಆದರೆ ಭಟ್ಟರು ಇದಕ್ಕೆ ಹೊರತು ಹಾಗೂ ಅಪವಾದವಾಗಿದ್ದಾರೆ. ಹಿರಿಯ-ಕಿರಿಯ-ಸಮಕಾಲೀನ ಲೇಖಕರನ್ನೆಲ್ಲಾ ಅವರು ಪ್ರೀತಿಸಿದ್ದಾರೆ. ವಿಶ್ವಾಸದಿಂದ ಕಂಡಿದ್ದಾರೆ, ಆದರದಿಂದ ನಡೆಸಿಕೊಂಡಿದ್ದಾರೆ. ಸರಸ್ವತಿ-ಲಕ್ಷ್ಮಿ ಇಬ್ಬರೂ ಒಂದೇ ಕಡೆ ನೆಲಸುವುದು ಅಪರೂಪ ಎನ್ನುವ ಸಾಮಾನ್ಯ ಹೇಳಿಕೆ ಇದೆ. ಆದರೆ ಇವರಿಬ್ಬರೂ ಭಟ್ಟರಲ್ಲಿ ಯಾವ ಭೇದ ಭಾವವೂ ಇಲ್ಲದೆ ನೆಲೆಸಿದ್ದಾರೆ. ಸಂಪಾದಿಸಿದುದನ್ನು ಸಾಂಸ್ಕೃತಿಕ ಚಟುವಟಿಕೆಗಳಿಗೆ ವಿನಿಯೋಗಿಸುವುದು ಅವರಿಗೆ ತುಂಬಾ ಖುಷಿಕೊಡುವ ಸಂಗತಿ.

ಕುಟುಂಬದ ಉಳಿದ ಸದಸ್ಯರೂ ಭಟ್ಟರ ಭಾವನೆಗೆ ನೀರೆರೆದು ಪೋಷಿಸುವ ಪೂರಕ ವ್ಯಕ್ತಿಗಳಾಗಿದ್ದಾರೆ. ಮಡದಿ, ಮಕ್ಕಳು, ಸೊಸೆಯಂದಿರು - ಎಲ್ಲರ ಸಂಸ್ಕಾರವೂ ಈ ಬಗೆಯ ಪ್ರವೃತ್ತಿಗಳನ್ನೇ ಬೆಳೆಸಿಕೊಂಡಿರುವುದನ್ನು ನಾನು ಕಣ್ಣಾರೆ ಕಂಡು ಸಂತೋಷಪಟ್ಟಿದ್ದೇನೆ. ವೈಯಕ್ತಿಕವಾಗಿ ನಾನು ಇತ್ತೀಚೆಗೆ ಈ ಕುಟುಂಬದವರೊಂದಿಗೆ ಅನುಭವಿಸಿದ ಸೌಹಾರ್ದ ಸುಖವನ್ನು, ಪಡೆದ ಸಹಕಾರವನ್ನು ಈ ಸಂಬಂಧದಲ್ಲಿ ಕೃತಜ್ಞತೆಯಿಂದ ಇಲ್ಲಿ ದಾಖಲಿಸಲು ಇಚ್ಛಿಸುತ್ತೇನೆ.

ನಾನು ಮೈಸೂರು ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿ ಪಿ.ಹೆಚ್.ಡಿ. ಪದವಿಯನ್ನು ಪಡೆದ ನಿಬಂಧದ ವಿಷಯ ಪರಮದೇವ ಕವಿಯ 'ತುರಂಗ ಭಾರತ - ಒಂದು ಅಧ್ಯಯನ' ಎಂಬುದಾಗಿತ್ತು. ಪರಮದೇವ ಕವಿ ಸುಸಂಸ್ಕೃತರೂ, ಕಷ್ಟ ಸಹಿಷ್ಣುಗಳೂ, ಮೇಧಾವಿಗಳೂ, ಸಾಹಿತ್ಯವತ್ಸಲರೂ ಆದವರು. ಹವ್ಯಕ ಸಮಾಜದ ಮುಡಿಯ ಮಾಣಿಕ್ಯ. ಇವರು ಶಿವಮೊಗ್ಗ ಜಿಲ್ಲೆ, ಸಾಗರ ತಾಲೂಕಿನ ಸುಳಗೋಡಿನವರು. ಸುಳಗೋಡಿನಲ್ಲಿ ಈ ಕವಿ ತನ್ನ ಎಳವೆಯನ್ನು ಕಳೆದು, ಯೌವ್ವನ ಪ್ರಾರಂಭದ ಕೆಲವು ವರ್ಷಗಳನ್ನು ಸವೆಸಿ, ಅನಂತರ ಸಾಗರದ ಸಮೀಪಕ್ಕೆ ಬಂದವರು. ಪೌರೋಹಿತ್ಯ, ಅರ್ಚಕ, ಉಪಾಧ್ಯಾಯ, ಜ್ಯೋತಿಷ್ಯ, ಔಷಧೋಪಚಾರ, ಯಕ್ಷಗಾನ ಭಾಗವತ ಹಾಗೂ ಗಮಕಿಯಾಗಿ ಬಹುಮುಖ [illegible]ಂದ ಜೀವನ ಕಂಡವರು ಮತ್ತು ಉಂಡವರು.

ಇಂಥ ಒಬ್ಬ ಹಿರಿಯ ಕವಿಯು ಬದುಕಿ ಬಾಳಿದ, ಬರೆದ ಪ್ರದೇಶವೆಲ್ಲಾ ಮಹಾಬಲೇಶ್ವರ ಭಟ್ಟರಿಗೆ ಪರಿಚಿತ ಪ್ರದೇಶವೇ ಆಗಿತ್ತು. ಆದ್ದರಿಂದ ಭಟ್ಟರ ಸಹಕಾರದೊಂದಿಗೆ ಭೀಮನಕೋಣೆ, ಇಕ್ಕೇರಿ, ಚಿಪ್ಪಳಿ,ಕೇಡಲಸರ, ಮುಂತಾದ ಸ್ಥಳಗಳನ್ನು ಕವಿಯ ವಂಶಸ್ಥರಲ್ಲಿ ಜೀವಿಸಿರುವ ಕೆಲವರನ್ನಾದರೂ ಪ್ರತ್ಯಕ್ಷವಾಗಿ ಕಂಡು ನೇರ ಪರಿಚಯವನ್ನು ಪಡೆಯಲು ಸಾಧ್ಯವಾಯಿತು. ಈ ಕಾರ್ಯದಲ್ಲಿ ಸಾಗರಕ್ಕೆ ನಾನು ನನ್ನ ಕಿರಿಯ ಮಗಳು ಚಿ. ಆರತಿ. ಹೆಚ್.ಎನ್. ಹೋದಾಗ ಭಟ್ಟರೂ ಅವರ ಇಡೀ ಸಂಸಾರದವರೂ ತೋರಿದ ಉತ್ಸಾಹ, ನೀಡಿದ ಸಹಕಾರ ಹಾಗೂ ಅವ್ಯಾಜ ಅಂತಃಕರಣ ಸದಾ ಹಸಿರಾಗಿ ಇರುತ್ತದೆ.

ಪರಮದೇವ ಕವಿ ಪೂಜಿಸುತ್ತಿದ್ದ ದೇವಾಲಯಗಳ ಮೇಲ್ವಿಚಾರಕರಿಗೆ, ಕವಿಯ ವಂಶದ ಹಿರಿಯರಿಗೆ ನಾವು ಬರುವ ವಿಷಯವನ್ನು ಭಟ್ಟರು ಮೊದಲೇ ತಿಳಿಸಿ ವ್ಯವಸ್ಥೆಗೊಳಿಸಿದ್ದರು. ಯಾವ ಯಾವ ಸ್ಥಳಗಳಿಗೆ ಎಷ್ಟು ಹೊತ್ತಿಗೆ ಹೋಗಬೇಕು? ಯಾರು ಯಾರನ್ನು ಕಾಣಬೇಕು, ಎನ್ನುವ ಪೂರ್ವ ಸಿದ್ಧತೆಯೆಲ್ಲಾ ಮೊದಲೇ ನಡೆದಿತ್ತು. ಇವರ ಈ ವ್ಯವಸ್ಥೆಯಿಂದ ನನ್ನ ಸಂಶೋಧನೆಗೆ ಬೇಕಾದ ಕೆಲವು ಮಾಹಿತಿಗಳನ್ನು ವ್ಯವಸ್ಥಿತವಾಗಿ ಸಂಗ್ರಹಿಸಲು ಸಾಧ್ಯವಾಯಿತು. ಕವಿಯ ವಂಶದವರಾದ ಶ್ರೀ ಪರಮೇಶ್ವರಯ್ಯನವರು ತೋರಿಸಿದ, ಕವಿ ಬಳಸುತ್ತಿದ್ದ ಕಂಠ, ವ್ಯಾಸಪೀಠ, ಆತ ಬರೆದಿರುವ ಹಾಗೂ ಪ್ರತಿಮಾಡಿರುವ ಕೆಲವು ಓಲೆಗರಿ ಪ್ರತಿಗಳನ್ನು ನೋಡಲಾಯಿತು. ನಾವು ಹೋದಕಡೆಯೆಲ್ಲೆಲ್ಲಾ ಜನತೆ ಭಟ್ಟರನ್ನುಕಂಡರೀತಿ, ನಡೆಸಿಕೊಂಡ ಬಗೆ, ತುಂಬಾ ಅಪ್ಯಾಯಮಾನವಾಗಿತ್ತು; ಗೌರವಯುತವಾಗಿತ್ತು. ಇಲ್ಲೆಲ್ಲಾ ನಾನು ಭಟ್ಟರ ಜನಪ್ರಿಯತೆಯನ್ನು, ಜನಾದರಣೀಯ ರೀತಿಯನ್ನು ಗುರುತಿಸಿ ಸಂತೋಷಗೊಂಡೆ.

ಇಂಥ ಸಹೃದಯ-ಸಜ್ಜನರಿಗೆ ಸಲ್ಲುವ ಎಪ್ಪತ್ತು ವರ್ಷಗಳ ಅಭಿನಂದನ ಸಮಾರಂಭ ಇನ್ನೂ ಹೆಚ್ಚಿನ ಶಕ್ತಿಯನ್ನು,ಚೈತನ್ಯವನ್ನು ದೊರಕಿಸಿಕೊಡುತ್ತದೆ. ತನ್ಮೂಲಕ ಜನತೆ, ಸಮಾಜ ಅವರ ಉಪಕಾರವನ್ನು ಪಡೆಯುತ್ತದೆ. ಇಂಥವರಿಗೆ ತೋರುವ ಗೌರವ ಕೆರೆಯ ನೀರನ್ನು ಕೆರೆಗೆ ಚೆಲ್ಲಿದಂತೆ ಅಲ್ಲವೇ !

# ಅವರಿವರೊಡನೆ - ಇವರು

**- ಕೆ. ಜಗನ್ನಾಥ ಶಾಸ್ತ್ರಿ**

''ಆ ನೋ ಭದ್ರಾಃ ಕ್ರತವೋಯಂತು ವಿಶ್ವತಃ' - ಪ್ರಾಚೀನ ಋಷಿಗಳು ತಪಸ್ಸಿಗೆ ಕುಳಿತು, ಚಿಂತನೆಯನ್ನು ಪ್ರಾರಂಭಿಸುವ ಮುನ್ನ, ಸಚ್ಚಿದಾನಂದ ಸ್ವರೂಪನಾದ ಭಗವಂತನನ್ನು ಹೀಗೆ ಪ್ರಾರ್ಥಿಸುತ್ತಿದ್ದರು. ಅಂತರಂಗ ಬಹಿರಂಗಗಳು ಒಂದಾಗಿರಲಿ - ಎಂಬುದಕ್ಕಾಗಿ ಅವರು ಮಾಡುತ್ತಿದ್ದ ಪ್ರಾರ್ಥನೆ ಇದು.

ವ್ಯಕ್ತಿಗೆ ಎರಡು ರಂಗಗಳಿವೆ. ಒಂದು ಅಂತರಂಗ, ಮತ್ತೊಂದು ಬಹಿರಂಗ. ಈ ಎರಡೂ ರಂಗಗಳೂ ಒಂದಾದಾಗ ಮಾತ್ರ ವ್ಯಕ್ತಿಗೆ ಪರಿಪೂರ್ಣತೆ ಬರುತ್ತದೆ. ಇದನ್ನು ಪರಿಪೂರ್ಣ ವ್ಯಕ್ತಿತ್ವ ಎನ್ನುತ್ತಾರೆ. ಇಂತಹ ಪರಿಪೂರ್ಣ ವ್ಯಕ್ತಿತ್ವ ಪಡೆದವರನ್ನು ಸಹೃದಯರು, ಸಜ್ಜನರು - ಎನ್ನುತ್ತಾರೆ. ಇಂತಹ ಬೆರಳೆಣಿಕೆಯ ಸಹೃದಯರಲ್ಲಿ ಶ್ರೀ ಮಹಾಬಲೇಶ್ವರ ಭಟ್ಟರೂ ಒಬ್ಬರು.

ಶ್ರೀ ಟಿ. ಮಹಾಬಲೇಶ್ವರ ಭಟ್ಟರು ಬರೆದಿರುವ 'ಕನ್ನಡ ಕುಲದೀಪಕರು' ಎಂಬಪುಸ್ತಕದಲ್ಲಿರುವ ವ್ಯಕ್ತಿ ಪರಿಚಯದ ಲೇಖನಗಳನ್ನು ಓದಿದಾಗ, ಅವರ ಅಂತರಂಗದ ತುಡಿತಕ್ಕೆ ಬಹಿರಂಗ ಹೇಗೆ ಏಕತಾನವಾಗುತ್ತಿತ್ತು - ಎಂಬುದು ಸ್ಪಷ್ಟವಾಗುತ್ತದೆ. ಈ ಪುಸ್ತಕದಲ್ಲಿ ಅವರು, ಇಪ್ಪತ್ತೈದು ಜನ ಸಾಹಿತ್ಯ ಕ್ಷೇತ್ರದ ವಿವಿಧ ಪ್ರಾಕಾರಗಳ ವ್ಯಕ್ತಿಗಳನ್ನು ಪರಿಚಯ ಮಾಡಿಕೊಡುತ್ತಾರೆ. ಈ ಇಪ್ಪತ್ತೈದು ಜನರಿಗೂ ಅವರದೆ ಆದ ವೈಯಕ್ತಿಕ ಹಾಗೂ ಸಾಹಿತ್ಯಿಕ ಮೌಲ್ಯಗಳಿವೆ. ಶ್ರೀ ಭಟ್ಟರು ಅವರನ್ನೆಲ್ಲಾ ಆಯಾ ಪ್ರಾಕಾರಗಳ ಅಳತೆಗೋಲಿನಿಂದಲೇ ಅಳೆದಿದ್ದಾರೆ.

ಶ್ರೀ ಭಟ್ಟರ ಲೇಖನ ವೈವಿಧ್ಯತೆಯ ರಸಾನುಭವಕ್ಕಾಗಿ, ಇಲ್ಲಿ ನಾಲ್ಕಾರು ಮಾದರಿಗಳ ರುಚಿಯನ್ನು ಸವಿಯೋಣ. ಮುಂದಿನ ಶತಮಾನದಲ್ಲಿ 'ಶ್ರೀ ಶಿವರಾಮ ಕಾರಂತರು ಎಂದರೇನು ?' ಎಂಬ ಪ್ರಶ್ನೆಗೆ - ಅದೊಂದು ಸಮಗ್ರ ವಿಶ್ವಕೋಶದ ಹೆಸರು' ಎಂದು ಯಾರಾದರೂ ಹೇಳಿದರೆ, ಅದು ಪ್ರಾಯಶಃ ಅಜ್ಞಾನದ ಮಾತು ಎಂದಾಗಲೀ, ಉತ್ಪ್ರೇಕ್ಷೆ ಎಂದಾಗಲೀ ಆಗಲಾರದು. ಕಾರಣ, ಶ್ರೀ ಶಿವರಾಮ ಕಾರಂತರದ್ದು ವಿಶ್ವೋನ್ನತ, ವಿಶ್ವವಿಶಾಲ, ವಿಶ್ವ ವೈವಿಧ್ಯ ವ್ಯಕ್ತಿತ್ವ. ಇವರನ್ನು ಶ್ರೀ ಭಟ್ಟರ ಚಿಂತನ ಕ್ಯಾಮರಾ ಕೇವಲ ನಾಲ್ಕು ಪುಟಗಳಲ್ಲಿ ಕ್ಲಿಕ್ಕಿಸಿದೆ.

ಶ್ರೀ ಕಾರಂತರದ್ದು ಸಾರ್ಥಕವಾದ ಬಾಳು- ಎಂದು ಹೇಳಲು ಶ್ರೀ ಭಟ್ಟರ ಈ ವಾಕ್ಯಗಳೇ ಸಾಕ್ಷಿ - “ ಒಬ್ಬ ವ್ಯಕ್ತಿ ಎಪ್ಪತ್ತಾರು ವರ್ಷಗಳನ್ನು ಕಳೆಯುವುದು ಸುಲಭ. ಶಕ್ತಿ ಇದ್ದರೆ ನೂರಿಪ್ಪತ್ತು ವರ್ಷಗಳನ್ನು ಬೇಕಿದ್ದರೂ ಕಳೆಯಬಹುದು. ಆದರೆ ಕಳೆದ ವರ್ಷಗಳು ಸಾರ್ಥಕವಾದ ಜೀವನವಾಗಬೇಕು. ಅದು ಇನ್ನೊಬ್ಬರಿಗೆ ಆದರ್ಶವಾಗಿರಬೇಕು. ಪಟ್ಟಶ್ರಮ ನೊಂದ ಬೇನೆ ಇನ್ನೊಬ್ಬರ ಬಾಯಿಂದ ಅಂತಃ ಕರಣದ ಮಾತುಗಳನ್ನು ಆಡಿಸುವಂತಾಗಬೇಕು. ಇದನ್ನು ಕಾರಂತರು ಸಾಧಿಸಿ, ಎಪ್ಪತ್ತಾರು ವರ್ಷದ ಮೈಲಿಯ ಮೈಲಿಗಲ್ಲಾಗಿ ನಿಂತಿದ್ದಾರೆ. ಎಂತಹ ಕಷ್ಟಕರ ಸಂದಿಗ್ಧ ಪರಿಸ್ಥಿತಿಯಲ್ಲೂ ಸಾಧನೆಯ ಸಿದ್ಧಿಯ ಕಡೆ ಸಾಗಿದರೆ ಮನುಷ್ಯನಾಗಿ ಬಾಳಲು ಸಾಧ್ಯ- ಎಂಬುದನ್ನು ನಮಗಿಂದು ತೋರಿಸಿಕೊಟ್ಟಿದ್ದಾರೆ.’ ಈ ಮಾತುಗಳು ಶ್ರೀಕಾರಂತರ ಬಹಿರಂಗವನ್ನು ಚೆನ್ನಾಗಿ ಪರಿಚಯಮಾಡಿಕೊಡುತ್ತದೆ.

‘ಶ್ರೀ ಕಾರಂತರು ಬಹಳ ನಿಷ್ಠುರವಾದಿಗಳು. ಕೆನ್ನೆಗೆ ಛಟೀರನೆ ಹೊಡೆದಂತೆ ಉತ್ತರಕೊಡುತ್ತಾರೆ. ಅವರದ್ದು ಬಹು ಗಡಸು ಮುಖ; ಮಂದಹಾಸ ದುರ್ಲಭ.’ - ಎಂದೆಲ್ಲಾ ಶ್ರೀ ಕಾರಂತರ ಮಾತಿನ ಧಾಟಿಯ ಬಗ್ಗೆ, ಅವರ ಮುಖಭಾವದ ಬಗ್ಗೆ ಜನ ಹೇಳುವುದುಂಟು. ಇದು ಸ್ವಲ್ಪ ಮಟ್ಟಿಗೆ ನಿಜವೂ ಹೌದು. ಹುಲಿ ಆರ್ಭಟಿಸುತ್ತದೆ; ಸಿಂಹ ಘರ್ಜಿಸುತ್ತದೆ; ಸರ್ಪ ಬುಸುಗುಟ್ಟುತ್ತದೆ. ನಿಜ. ಇದು ಈ ಪ್ರಾಣಿಗಳ ಸಹಜ ಗುಣ ಅಲ್ಲ; ಸಹಜ ಪ್ರತಿಕ್ರಿಯೆ. ಪರಿಸ್ಥಿತಿ ಅವನ್ನು ಹಾಗೆ ಪ್ರತಿಕ್ರಯಿಸುವಂತೆ ಒತ್ತಡ ಹೇರುತ್ತದೆ. ಶ್ರೀ ಮಹಾಬಲೇಶ್ವರ ಭಟ್ಟರು ಪ್ರಕೃತಿಯ ಈ ರಹಸ್ಯವನ್ನು ಬಲ್ಲವರು. ಶ್ರೀ ಕಾರಂತರಲ್ಲಿರುವ ನಿಷ್ಠೂರತೆ ಅವರ ಹುಟ್ಟುಗುಣ ಅಲ್ಲ; ಪ್ರತಿಕ್ರಿಯೆ - ಎನ್ನುವುದನ್ನು ಅರ್ಥಮಾಡಿಕೊಂಡ ಶ್ರೀ ಭಟ್ಟರು, ಇದನ್ನು ಜನರಿಗೆ ತಿಳಿಸಬೇಕು - ಎಂಬ ಅಭೀಪ್ಸೆಯಿಂದ, ಒಮ್ಮೆ ಶ್ರೀ ಕಾರಂತರನ್ನು ವ್ಯಕ್ತಿಶಃ ಭೇಟಿ ಮಾಡಿ, ಅವರಿಂದಲೇ ಬಾಯಿ ಬಿಡಿಸಿದ್ದಾರೆ. ‘ನನ್ನ ಸಿಟ್ಟಿಗೆ, ನನ್ನ ದುಃಖ, ನನ್ನ ಬೇನೆ, ಹಸಿವು, ತೃಷೆ ಕಾರಣ. ಅದಕ್ಕೆ ನನ್ನ ಮತ್ತು ನನ್ನವರ ಮೇಲಿನ ಅನುತಾಪವೇ ಕಾರಣ’, ಸಾಮಾನ್ಯರಿಂದ ಅರಿಯಲಾಗದ ರಹಸ್ಯವನ್ನು ಶ್ರೀ ಭಟ್ಟರು ಭೇದಿಸಿ, ಯಶಸ್ವಿಯಾಗಿದ್ದಾರೆ.

ಶ್ರೀ ಕುವೆಂಪುರವರದ್ದು ವಿಶ್ವಮಾನವ ವ್ಯಕ್ತಿತ್ವ. ಅವರೆತ್ತರಕ್ಕೆ ಶ್ರೀ ಮಹಾಬಲೇಶ್ವರ ಭಟ್ಟರೂ ಏರಿ, ಅವರನ್ನು ಆಪಾದ ಮಸ್ತಕ ನೋಡಿದ್ದಾರೆ. ಅವರ ವಿದ್ಯಾಭ್ಯಾಸ, ಜೀವನ, ಸಾಹಿತ್ಯಕ ವ್ಯವಸಾಯ-ಎಲ್ಲವನ್ನೂ ಕನ್ನಡಿಯಲ್ಲಿನ ಪಡಿ ನೆರಳಿನಂತೆ ಸಂಕ್ಷಿಪ್ತವಾಗಿ, ಆದರೆ ಸಮಗ್ರವಾಗಿ, ಪರಿಚಯಮಾಡಿಕೊಟ್ಟ ಇವರ ಲೇಖನಿ ಕೊನೆಗೆ ಹೀಗೆ ಹೇಳುತ್ತದೆ.‘ ಕನ್ನಡಿಗರಿಂದ ಸೈ ಎನಿಸಿಕೊಂಡ ಮಹಾಧೀರ, ಅಜಾನುಬಾಹು, ನಿಂತರೆ ಚಲಿಸಿದರೆ ರವೀಂದ್ರರಿಗೆ ಹೋಲುವ ಶರೀರ, ನಡೆ-ನುಡಿ

ಎಲ್ಲವೂ ಸತ್ಯ. ಅವರ ಜೀವನವೇ ಮಹಾತಪಸ್ಸು, ಇದು ಮಹಾಕವಿಯ ಲಕ್ಷಣ... ಅವರ ಕಲ್ಪನೆಯೇ ವಿಂಧ್ಯ ಕಲ್ಪನೆ. ಅವರ ನೋಟವೇ ಭಗವಂತನ ನೋಟ. ಅವರ ಶ್ರವಣವೇ ಕನ್ನಡ ಮಂತ್ರ. ಅವರು ಸಾಹಿತ್ಯದ ವಿಶ್ವರೂಪಿ.'

ಕನ್ನಡಸಾಹಿತ್ಯದ ಮಹಾನ್ ಗಾರುಡಿಗರು - ಶ್ರೀ ದ.ರಾ.ಬೇಂದ್ರೆಯವರು. ಅವರು ಹೆಸರನ್ನು ಕೇಳಿದರೆ ಸಾಕು, ಕನ್ನಡಿಗರ ಮನ ರಿಂಗಣಗುಣಿತದಿಂದ ಲಾಸ್ಯವಾಡಲಾರಂಭಿಸುತ್ತದೆ; ಅವರ ಕಾವ್ಯಘನಾಘನವನ್ನುಕಂಡಾಗ ಕನ್ನಡಿಗರ ಹೃದಯಮಯೂರಿ ಗರಿಗೆದರಿ ಕಿಂಕಿಣಿ ಕುಣಿತ ಕುಣಿಯಲಾರಂಭಿಸುತ್ತದೆ. ಶ್ರೀ ದ.ರಾ.ಬೇಂದ್ರೆಯವರೇ ಒಮ್ಮೆ ಹೇಳಿದಂತೆ - 'ದೊಡ್ಡವರೊಡನೆ ದೊಡ್ಡವರಾಗಿಯೂ- ಚಿಕ್ಕವರೊಡನೆ ಚಿಕ್ಕವರಾಗಿಯೂ, ಎಲ್ಲರೊಡನೆ ಸದಾ ಸಂತಸದಿಂದ ಕಾಲ ಕಳೆಯುವ ಮಹಾಮಾಂತ್ರಿಕತನ, ಶ್ರೀ ಬೇಂದ್ರೆಯವರ ಹುಟ್ಟುಗುಣದ ಮಹಾಲಕ್ಷಣ... ಕವಿವರ್ಯರಾಗಿ, ಕನ್ನಡದ ಆಚಾರ್ಯರಾಗಿ, ಭಾರತೀಯ ಸ್ವಾತಂತ್ರ್ಯ ಸಂಗ್ರಾಮದ ಧರ್ಮ ಯೋಧರಾಗಿ, ಅರವಿಂದರ ಭಕ್ತರಾಗಿ, ಮಾತೆಯ ಶಿಷ್ಯರಾಗಿ, ದತ್ತಾತ್ರೇಯನ ಉಪಾಸಕರಾಗಿ, ಜ್ಞಾನ ಆನಂದದ ಅನುಸಂಧಾನ ಜೀವನವನ್ನು ಮೀಸಲಾಗಿಟ್ಟವರು.'

'ಬಾರಿಸು ಕನ್ನಡ ಡಿಂಡಿಮವ' ಎಂದು ಬರೆದವರು, ಶ್ರೀಕುವೆಂಪುರವರು. ಕನ್ನಡ ಡಿಂಡಿಮವನ್ನು ನಿಜವಾಗಿಯೂ ಬಾರಿಸಿದವರು, ಕನ್ನಡಿಗರ ಹೃದಯ ಶಿವನನ್ನು ಎಚ್ಚರಗೊಳಿಸಿದವರು, ಶ್ರೀ ಅ.ನ.ಕೃಷ್ಣರಾಯರು. ಕನ್ನಡಜಾಗೃತಿಯೊಂದಿಗೆ ಸದಾ ಜಾಗ್ರತವಾಗಿರುವ ಹೆಸರು. ಶ್ರೀ ಅ.ನ.ಕೃ ರವರದ್ದು. ಇದರೊಂದಿಗೆ ಕನ್ನಡದಲ್ಲಿ 'ಕಾದಂಬರಿ' ಎಂಬ ಸಾಹಿತ್ಯ ಪ್ರಕಾರವನ್ನು ಜನಪ್ರಿಯಗೊಳಿಸಿದ ಪ್ರಕಾರ ಪ್ರವರ್ತಕರೂ, ಹೌದು. ಶ್ರೀ ಮಹಾಬಲೇಶ್ವರ ಭಟ್ಟರಿಗೆ ಈ ಪ್ರಕಾರ ಪರಿಚಿತವಾದದ್ದೇ - ಏಕೆಂದರೆ ಅವರು ಸ್ವತಃ ಕಾದಂಬರಿಕಾರರು. ಅಲ್ಲದೆ ಶ್ರೀ ಅ.ನ.ಕೃ.ರವರೂ ಶ್ರೀ ಭಟ್ಟರೂ ಕ್ಷೀರಸ್ಯ ಶರ್ಕರಸ್ಯ ಸ್ನೇಹಿತರು. ಇಲ್ಲಿ ಗೆಳೆತನದ ಸಲಿಗೆಯಿಂದಲೇ ಶ್ರೀ ಅ.ನ.ಕೃ.ರವರನ್ನು ಪರಿಚಯಮಾಡಿಕೊಡುತ್ತಾ, ಶ್ರೀ ಭಟ್ಟರು, ಕನ್ನಡದ ಬಗ್ಗೆ ಶ್ರೀ ಅ.ನ.ಕೃ.ರವರ ಅಂತರಂಗದ ಖಚಿತ ಅಭಿಪ್ರಾಯವೇನಾಗಿತ್ತು, ಎಂಬುದನ್ನು ಸ್ಪಷ್ಟವಾಗಿ ಹೇಳುತ್ತಾರೆ' - ಅ.ನ.ಕೃ.ರವರ ಭಾಷಣವೆಂದರೆ ಕಣ್ಣಿಗೂ ಕಿವಿಗೂ ಆನಂದ; ಮಾತು ನಿರರ್ಗಳ. ವಿಷಯ ಯಾವುದೇ ಇರಲಿ, ಅದಕ್ಕೆ ಆಧಾರ ಸಹಿತ ಪ್ರತಿಪಾದನೆ... ಮಾತಿನ ಕೊನೆಯಲ್ಲಿ ಕರ್ನಾಟಕ ಪರಂಪರೆಯು ಬಗ್ಗೆ ಪ್ರಸ್ತಾಪವಾಗಲೇಬೇಕು; ನಮ್ಮ ಸಂಸ್ಕೃತಿಯನ್ನು ಹೇಳಲೇ ಬೇಕು. ಧೈರ್ಯ, ಕಾರ್ಯ, ಸಾಹಸಗಳನ್ನು ಕನ್ನಡಿಗರಿಗೆ ನೆನಪು ಮಾಡಿಕೊಡಲೇಬೇಕು.'

ಪ್ರಗತಿಶೀಲ ಸಾಹಿತ್ಯದ ಬಗ್ಗೆ ಅ.ನ.ಕೃ.ರವರ ಸ್ಥಾಯಿತ್ವವನ್ನು ಚಿರಗೊಳಿಸುತ್ತಾ ಶ್ರೀ ಮಹಾಬಲೇಶ್ವರ ಭಟ್ಟರು ಹೀಗೆ ಹೇಳುತ್ತಾರೆ.' ಪ್ರಗತಿ ಶೀಲ ಸಾಹಿತ್ಯದ

ಹುಟ್ಟು ಹೋರಾಟದಲ್ಲಿ ಅ.ನ.ಕೃ.ರವರಿಗೆ ಸಿಂಹಪಾಲು ಸೇರಲೇಬೇಕು. ರಾಮ, ಕೃಷ್ಣರ ಚರಿತ್ರೆಯನ್ನು ಓದಿ ಕಣ್ಣಿಗೆ ಒತ್ತಿಕೊಳ್ಳುತ್ತಾ ಇದ್ದ ಕಾಲದಲ್ಲಿ, ನಿತ್ಯವೂ ಕಣ್ಣಲ್ಲಿ ನೋಡಿ, ಜೀವನದಲ್ಲಿ ಕ್ಷಣ ಕ್ಷಣಕ್ಕೂ ಅನುಭವಿಸುವ ವಿಷಯಗಳ ಬಗ್ಗೆ ಓದುಗರ ಮನಸೆಳೆದು ಪ್ರಗತಿಶೀಲ ಪಂಥವನ್ನುಬೆಳೆಸಿದರು.' ಹೀಗೆ ಶ್ರೀ ಮಹಾಬಲೇಶ್ವರ ಭಟ್ಟರು ತಮ್ಮ ಬರೆಹದ ಮೂಲಕ, ಶ್ರೀ ಅ.ನ.ಕೃ.ರವರು ಕಾದಂಬರಿಗಳನ್ನು ಬರೆದದ್ದು, ಕೇವಲ ಹಣ ಸಂಪಾದನೆಗಾಗಿ ಅಲ್ಲ. ಜನ ಸಾಮಾನ್ಯರ ನೋವು- ನಲಿವುಗಳನ್ನೂ, ಸಮಾಜದ ಕುಂದು - ಕೊರತೆಗಳನ್ನೂ, ಸಾಮಾನ್ಯ ಜನರಿಗೆ ಮನದಟ್ಟು ಮಾಡಿಕೊಡುವುದಕ್ಕಾಗಿ ಎಂಬುದೂ, ಕನ್ನಡ ಸಾಹಿತ್ಯ ನಿಂತ ನೀರಲ್ಲ. ಅದು ತನ್ನೊಡಲಿಗೆ ಬಂದು ಸೇರುವ ಎಲ್ಲ ಪ್ರಕಾರಗಳ ಜಲವಾಹಿನಿಗಳನ್ನೂ ಒಳಗೊಂಡು ಮುನ್ನುಗ್ಗುವ ಮಹಾ ಪ್ರವಾಹ ಎಂಬ ಅರಿವನ್ನು ಜನರಲ್ಲಿ ಮೂಡಿಸಬೇಕು ಎಂಬುದೂ ಆಗಿತ್ತು ಎಂಬ ಅಂಶವನ್ನು ಸ್ಪಷ್ಟಗೊಳಿಸಿದ್ದಾರೆ. ಶ್ರೀ ಅ.ನ.ಕೃ.ರವರಲ್ಲಿದ್ದ ಖಂಡಿತ ಪ್ರವೃತ್ತಿಯನ್ನು ಪರಿಚಯ ಮಾಡಿಕೊಡುತ್ತಾ, ಲೇಖಕರು, ಕನ್ನಡ ಸಾಹಿತ್ಯಪರಿಷತ್ತಿಗೂ, ಅ.ನ.ಕೃ.ರವರಿಗೂ ಎಣ್ಣೆ-ಸೀಗೆಕಾಯಿ ಇದ್ದ ಹಾಗೆ. ಪರಿಷತ್ತು ಮಾಡಬೇಕಾದ ಕೆಲಸ ಮಾಡದೆ, ಮಂತ್ರಿಗಳ, ಸರ್ಕಾರಿ ಅಧಿಕಾರಿಗಳ ಮುಂದೆ ಬೆನ್ನುಬಾಗಿ ಕೈ ಮುಗಿದು ನಿಂತಿದೆ. ಇದು ಹೇಡಿತನ- ಎಂದು ಅ.ನ.ಕೃ. ಅಭಿಪ್ರಾಯ' - ಎಂದು ಹೇಳಿದ್ದಾರೆ. ಕೊನೆಯಲ್ಲಿ ಶ್ರೀ ಭಟ್ಟರು ಬರೆಯುವ - 'ಅನಕೃ ಹುಟ್ಟುವಾಗಲೇ ಕನ್ನಡಿಗ' ಎಂಬ ಮಾತು ಬಹಳ ಮಾರ್ಮಿಕವಾದದ್ದು; ಮೌಲಿಕವಾದದ್ದು.

ಶ್ರೀ ಡಿ.ವಿ.ಗುಂಡಪ್ಪನವರು ವಿದ್ವತ್ತಿನ, ಸಜ್ಜನಿಕೆಯ, ಸರಳತೆಯ ಅಪರಾವತಾರ. ಅವರ ಸಾಹಿತ್ಯ ಕೆಲವರಿಗೆ 'ಕಗ್ಗ'ವೂ ಹೌದು, ಕೆಲವರಿಗೆ 'ಸ್ವರ್ಗ'ವೂ ಹೌದು. ಈ ಕಗ್ಗ ಪಿತನ ಅಗ್ಗತನವನ್ನು ಶ್ರೀ ಮಹಾಬಲೇಶ್ವರ ಭಟ್ಟರು ಅವರೊಡನೆ ಮಾಡಿದ ಸಂಭಾಷಣೆಯಲ್ಲಿ ಪಾರದರ್ಶಿಕೆಯಾಗಿ ಪಡಿನೆಳಲಿಸಿ, ಓದುಗ ಅವರೊಡನೆಯೇ ಇದ್ದು ತಾನೂ ಅದರಲ್ಲಿ ಭಾಗಿಯಾಗಿರುವೆನೋ ಎಂಬಂತಹ ಭಾವವನ್ನು ಉಂಟುಮಾಡುವ ರೀತಿಯಲ್ಲಿ ಬರೆದಿದ್ದಾರೆ. ಶ್ರೀ ಡಿ.ವಿ.ಜಿ.ಯವರ ಸಾಹಿತ್ಯ ನೀತಿ ಪ್ರಧಾನ ಸಾಹಿತ್ಯ. ಅವರೊಬ್ಬ ಅಭಿನವ ಸರ್ವಜ್ಞ. ಈ ಭಾವವನ್ನು ಶ್ರೀ ಮಹಾಬಲೇಶ್ವರ ಭಟ್ಟರು ಹೀಗೆ ಹೇಳಿದ್ದಾರೆ. 'ಮನುಷ್ಯನ ಜೀವ ಮಾನದಲ್ಲಿ ಉಲ್ಲಾಸವನ್ನು ತುಂಬಿ, ಸತ್ವವನ್ನು ಅಭಿವೃದ್ಧಿಪಡಿಸುವ ಶಕ್ತಿ ಸಾಹಿತ್ಯಕ್ಕೆ ಉಂಟೆಂದು ಅವರ ನಂಬಿಕೆ...ಅಂತಃಕರಣದ ದೊಡ್ಡತನವನ್ನ ನಾನು ಡಿ.ವಿ.ಜಿಯವರಲ್ಲಿ ಕಂಡೆ. ಅವರು ಜೀವಿಸಿರುವ ನಾಡಿನಲ್ಲಿ ನಾವು ಬದುಕಿರುವುದು ಒಂದು ದೊಡ್ಡ ಅದೃಷ್ಟ.'

'ಮಾಸ್ತಿ ಕನ್ನಡದ ಆಸ್ತಿ' -ಇದು ಕನ್ನಡಿಗರ ಹೆಮ್ಮೆಯಮಾತು. ಈ ಮಾತಿಗೆ ಪಾತ್ರರಾಗಿರುವವರು ಶ್ರೀ ಮಾಸ್ತಿ ವೆಕಂಟೇಶ ಅಯ್ಯಂಗಾರ್‌ರವರು. 'ಆಸ್ತಿ' -

ಎಷ್ಟು ಮೌಲಿಕವಾದದ್ದೋ, ಸರ್ವಜನಾದರಣೀಯವಾದದ್ದೋ ಹಾಗೆ ಶ್ರೀ ಮಾಸ್ತಿಯವರ ವ್ಯಕ್ತಿತ್ವವೂ ಭೂಮಿ ತೂಕವುಳ್ಳದ್ದು, ವಿಶ್ವ ಜನಾದರಣೀಯವಾದದ್ದು. ಇವರ ಮಹಾನ್ ವ್ಯಕ್ತಿತ್ವವನ್ನು ಶ್ರೀ ಮಹಾಬಲೇಶ್ವರ ಭಟ್ಟರು ಅಷ್ಟೇ ತೂಕದ ಮಾತುಗಳಿಂದ ಪರಿಚಯ ಮಾಡಿಕೊಟ್ಟಿದ್ದಾರೆ. 'ಡಾ. ಮಾಸ್ತಿ ವೆಂಕಟೇಶ ಅಯ್ಯಂಗಾರರ ಮನಸ್ಸು ಬಹಳ ವಿಶಾಲ, ಅದು ಭಾರತದಷ್ಟೇ ವಿಶಾಲ. ಸರಳತೆ, ಸಜ್ಜನಿಕೆ, ನಯ, ವಿನಯ, ಸಂಸ್ಕೃತಿ, ಹೃದಯವಂತಿಕೆ - ಇವೆಲ್ಲವೂ ಒಂದೇ ವ್ಯಕ್ತಿಯಲ್ಲಿ ನೋಡಲು, ಅನುಭವಿಸಲು ಸಿಗಬಹುದಾದ ವಸ್ತು. ಮಾಸ್ತಿಯವರಷ್ಟು ಮಾತನಾಡಲು ಬರುತ್ತದೆಯೇ ಎಂದು ಯಾರನ್ನಾದರೂ ಕೇಳಿದರೆ, ಅದು ಸಾಧ್ಯವಿಲ್ಲವೆಂದೇ ಉತ್ತರ ಬರಬಹುದು. ' ಇದು ಶ್ರೀಭಟ್ಟರು ಮಾಸ್ತಿಯವರ ಬಗ್ಗೆ ಹೇಳಿರುವ ಮಾತು. ಈಗ ಹೇಳಿ, ಶ್ರೀ ಭಟ್ಟರು ಉಳಿಸಿರುವ ವಿಷಯ ಯಾವುದು ? ಯಶೋದೆಗೆ ಶ್ರೀ ಕೃಷ್ಣ ಬಾಯಲ್ಲೇ ವಿಶ್ವನ್ನು ತೋರಿಸಿದನಂತೆ. ಹೌದೋ ಅಲ್ಲವೋ ಆದರೆ ಶ್ರೀ ಮಹಾಬಲೇಶ್ವರ ಭಟ್ಟರು ಮಾತ್ರ ತಮ್ಮ ವಚನಕ್ಯಾಮರಾದಲ್ಲಿ ಮಾಸ್ತಿಯವರ ಮಹಾನ್‌ವ್ಯಕ್ತಿತ್ವನ್ನೇಅಡಗಿಸಿ, ಚಿತ್ರೀಕರಿಸಿದ್ದಾರೆ. ನೀವು ಶ್ರೀ ಮಾಸ್ತಿಯವರನ್ನು ವ್ಯಕ್ತಿಶಃ ನೋಡಿಲ್ಲವೇ ? ಹಾಗಾದರೆ ಶ್ರೀ ಮಹಾಬಲೇಶ್ವರ ಭಟ್ಟರ ವಚನ ಪೋಟೋ ಇಲ್ಲಿದೆ, ನೋಡಿ - '' ಕೋಟು, ಕಚ್ಚೆಪಂಜೆ, ಕಪ್ಪುಟೋಪಿ, ಹಣೆಯಲ್ಲಿ ನಾಮ, ಕೈಯಲ್ಲಿ ಛತ್ರಿ, ಕಾಲಲ್ಲಿ ತೆಳುವಾದ, ನಾಜೂಕಾದ ಚಪ್ಪಲಿ, ಇದು ಮಾಸ್ತಿಯವರ ನಿತ್ಯಜೀವದಲ್ಲಿರುವ ಉಡುಪು.' ಇದು ಶ್ರೀ ಮಾಸ್ತಿಯವರ ಬಹಿರಂಗವಾಯಿತು. ಶ್ರೀ ಮಹಾಬಲ್ಲೇಶ್ವರ ಭಟ್ಟರಿಗೆ ತೃಪ್ತಿಯಿಲ್ಲ. ಅವರ ಅಂತರಂಗವನ್ನೂ ನೋಡಬೇಕೆಂಬ ಚಪಲ. ಪರಕಾಯ ಪ್ರವೇಶಮಾಡಿ, ಶ್ರೀ ಮಾಸ್ತಿಯವರ ಅಂತರಂಗವನ್ನು ಪ್ರವೇಶಿಸಿ, ಅಲ್ಲಿಅವರು ಕಂಡುದನ್ನು ಹೀಗೆ ಹೇಳಿದ್ದಾರೆ. 'ಮಾಸ್ತಿಯವರಿಗೆ ಮಲೆನಾಡಿನಲ್ಲಿ ಕೆಲಸ. ಪಶ್ಚಿಮ ವಾಹಿನಿಯಲ್ಲಿಮದುವೆ... ದೇವರಲ್ಲಿ ನಂಬಿಕೆ. ನಂಬಿದ ದೇವರಲ್ಲಿ ತೃಪ್ತಿ...ದೈವ ಉಂಟು; ದೇವರುಂಟು ಎಂಬ ಸಿದ್ಧಾಂತ. ಜೀವನ ಕುಗ್ಗಿದಾಗ, ಹಿಗ್ಗಿದಾಗ ಒಂದೇ ಭಾವ, ಒಂದೇ ದೃಷ್ಟಿ.'

ಶ್ರೀ ದೇ. ಜವರೇಗೌಡರು ದಿಟ್ಟ ಮನಸ್ಸಿನ ಗಟ್ಟಿಕುಳ. ಪರಿಸ್ಥಿತಿ ಎಷ್ಟೇ ಜಗ್ಗಿದರೂ, ಕುಗ್ಗದೇ ಮುನ್ನುಗ್ಗುವ ಪ್ರವೃತ್ತಿ. ಕುರಿಗಾಯಿ ಗೌಡನ ಮಗ ಏನು ಸಾಧಿಸಿಯಾನು? ಎಂದು ಆಡಿಕೊಳ್ಳುತ್ತಿದ್ದವರೇ .. ಓಹೋ! ಇವನು ಏನೂ ಸಾಧಿಸಿಯಾನು'. ಎಂದು ಮೂಗಿನ ಮೇಲೆ ಬೆರಳಿಟ್ಟು ಹೇಳುವಂತಹ ಸಾಧಕ ಪ್ರವೃತ್ತಿ ಅವರದ್ದು. ಇಂಥಹವರನ್ನು ಪರಿಚಯ ಮಾಡಿಕೊಡುವುದು ಕಷ್ಟದ ಕೆಲಸ. ಏಕೆಂದರೆ, ಅವರ ಅಂತರಂಗದ ಆಳ- ಅಗಲಗಳು ನಿಗೂಢವಾಗಿರುತ್ತವೆ. ಇವುಗಳ ನೆಲೆ ಥಕ್ಕನೇ ಸಿಗುವುದಿಲ್ಲ. ಶ್ರೀ ಮಹಾಬಲೇಶ್ವರ ಭಟ್ಟರು ಇಲ್ಲಿಯೂ ಈಸಿ

ಜಯಿಸಿದ್ದಾರೆ. ಶ್ರೀ ಜವರೇ ಗೌಡರನ್ನು ವ್ಯಕ್ತಿಶ : ನೋಡದವರು ಶ್ರೀ ಭಟ್ಟರು ಚಿತ್ರಿಸಿರುವ ಈ ವಚನ ಚಿತ್ರವನ್ನು ನೋಡಿದರೆ, ಸಾಕು. ಬನ್ನಿ ಆ ಚಿತ್ರವನ್ನು ನಾವೂ ನೋಡೋಣ – 'ಜವರೇ ಗೌಡರು ಸದಾ ಹಸನ್ಮುಖಿ, ಮಿತ್ರರನ್ನುಕಂಡರೆ ಹೆಗಲಮೇಲೆ ಕೈಯಿರಿಸಿ, ಕುಶಲವಾರ್ತೆ ಕೇಳುವ ಕುಶಲಮತಿ. ದುಂಡುಮುಖದ, ನಗುಮೊಗದ, ಮಾತುಗಾರ.. ನಿರಹಂಕಾರಿ; ಸೌಮ್ಯ ಪುರುಷ. ನಡೆ-ನುಡಿ – ಎಲ್ಲವೂ ಸಹಜ. ನಿತ್ಯ ಜೀವನದಲ್ಲಿ ಸದಾ ಚುರುಕು.'

'ಕನ್ನಡದ ಉಭಯ ಭಾಷಾ ಗಾರುಡಿಗ' – ಎಂಬ ಮೆಚ್ಚಿಗೆಯ ನುಡಿಗೆ ಪಾತ್ರರಾಗಿದ್ದವರು, ಶ್ರೀ ವಿ.ಸೀತಾರಾಮಯ್ಯನವರು. ಇವರಿಗೆ ಕನ್ನಡದಷ್ಟೇ ಇಂಗ್ಲೀಷ್ ಭಾಷೆಯೂ ಸಹಾ ಕರತಲಾಮಕ; ನಿರರ್ಗಳ. ಇವರು ಕನ್ನಡ ಪ್ರಾಚೀನ ಕವಿಗಳ ಬಗ್ಗೆ, ಕನ್ನಡದಲ್ಲಿಮಾತನ್ನು ಪ್ರಾರಂಭಿಸಿ, ಇಂಗ್ಲೀಷ್‌ನಲ್ಲಿ ಮುಂದುವರಿದಾಗ; ಇವರು ಕನ್ನಡದಲ್ಲಿಯೇ ಮಾತನಾಡುತ್ತಿದ್ದಾರೆ – ಎನ್ನುವ ಭ್ರಮೆ ಶ್ರೋತೃಗಳಿಗೆ ಉಂಟಾಗುತ್ತಿತ್ತು; ಮಾತನಾಡುತ್ತಾ, ಅವರು ಯಾವಾಗಲೋ ಕನ್ನಡಕ್ಕೆಬಂದು ಬಿಡುತ್ತಿದ್ದರು. ಇದು ಶೋತೃಗಳಿಗೆ ಗೊತ್ತಾಗುತ್ತಲೇ ಇರಲಿಲ್ಲ. ಇಂತಹ ಭಾಷಾ ಗಾರುಡಿಗತನ ಶ್ರೀ ವಿ. ಸೀ, ಯವರಲ್ಲಿತ್ತು. ಶ್ರೀ ಮಹಾಬಲೇಶ್ವರ ಭಟ್ಟರು ಇವರನ್ನೂ ಬಿಟ್ಟಿಲ್ಲ. ಇವರ ಬಗ್ಗೆ ಶ್ರೀ ಮಹಾಬಲೇಶ್ವರ ಭಟ್ಟರು ಹೇಳು ಮಾತು ಹೀಗಿವೆ.' ವಿ.ಸೀ. ಯವರು ಮಾತು ಲೋಕ ಪ್ರಿಯ. ಅವರ ಪುಸ್ತಕದ ಮುದ್ರಣದ ಅಂದ ಚೆಂದವೇ ಬಹು ಸೊಗಸು...ಇವರದು ಕವಿ ಹೃದಯ; ಭಕ್ತ ಕವಿಯ ಅಂತರಂಗ, ಹೃದಯ ಸಂಪತ್ತು ಸೂಕ್ಷ್ಮ ದೃಷ್ಟಿ.. ಅವರೊಬ್ಬ ರೂಪಾರಾಧಕರು. ಅವರವ್ಯಕ್ತಿತ್ವವನ್ನು ಸಾಮಾನ್ಯವಾಗಿ ನಾವು ಅಳೆಯುವುದು ಕಷ್ಟಕರ.' ಶ್ರೀ ವಿ.ಸೀ ಯವರು ಬಹಿರಂಗದಲ್ಲಿ ಹೇಗೆ ಶಿಸ್ತಿನವರೋ ಹಾಗೇ ಮನೆಯೊಳಗಿನ ಒಪ್ಪ-ಓರಣದಲ್ಲಿಯೂ ಶಿಸ್ತಿನವರು. ಶ್ರೀಭಟ್ಟರು ಕಂಡ ಅವರ ಮನೆಯೊಳಗಿನ ಶಿಸ್ತು ಹೀಗಿದೆ. – 'ಚಿಕ್ಕದಾದ ಮನೆ. ನಿರಾಡಂಬರ. ಸರಳ ಸೌಜನ್ಯದ ಪ್ರತೀಕ. ಚಾಪೆ, ಕುರ್ಚಿ ಎಲ್ಲ ತರಹದ ಆಸನ. ಕೋಟು,ರುಮಾಲು, ಕಳಚಿಡಲು ಪ್ರತ್ಯೇಕ ಸ್ಥಳ. ಸಂಪ್ರದಾಯ ಶರಣ.'

ಚಟುವಟಿಕೆ ಮಾನವನ ಸಹಜ ಪ್ರವೃತ್ತಿಗಳಲ್ಲೊಂದು. ಒಮ್ಮೆ ಮನಸ್ಸು ಚಟುವಟಿಕೆಯನ್ನು ಬಯಸುತ್ತದೆ; ಆದರೆ ದೇಹ ಅದನ್ನು ತಿರಸ್ಕರಿಸುತ್ತದೆ. ಮತ್ತೊಮ್ಮೆ ದೇಹ ಚಟುವಟಿಕೆಯನ್ನುಬಯಸುತ್ತದೆ. ಆಗ ಮನಸ್ಸು ಅದನ್ನು ತಿರಸ್ಕರಿಸುತ್ತದೆ. ಇದು ಎಲ್ಲರ ಅನುಭವ. ಆದರೆ ಸಾಗರದ ಶ್ರೀ ಶ್ರೀನಿವಾಸ ಉಡುಪರಲ್ಲಿ ಮಾತ್ರಾ ಇದಕ್ಕೆ ವಿರುದ್ಧ ಪ್ರವೃತ್ತಿ. ಇವರ ಮನಸ್ಸು ಮತ್ತುದೇಹ ಸದಾ ಚಟುವಟಿಕೆಯಿಂದಲೇ ಇರುತ್ತದೆ. ನಿದ್ರೆಯಲ್ಲಿದ್ದಾಗ ಹೊರತು ಪಡಿಸಿ, ಓಗಿರುವುದರಿಂದಲೇ ಇವರು ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿಯೂ ಲೇಖನಿಯನ್ನಿಟ್ಟು

ಸೈ ಎನ್ನಿಸಿಕೊಂಡಿದ್ದಾರೆ. ತಿಂಗಳಿಗೊಂದು ಕಾದಂಬರಿ, ವಾರಕ್ಕೊಂದು ನಾಟಕ, ದಿನಕ್ಕೊಂದು ಕಥೆ ಬರೆದವರು. ಬರೆದುದೆಲ್ಲವೂ ಪ್ರಕಟವಾದವು, ಇವರೊಡನಿದ್ದರೆ, ಇವರ ಬಹಿರಂಗ ಯಾವುದು ? ಅಂತರಂಗ ಯಾವುದು ? ಎಂದು ಬೇರ್ಪಡಿಸಲಾಗದಷ್ಟು,ನಡೆನುಡಿಯಲ್ಲಿ ಶುದ್ಧ ಸಾಗರದಲ್ಲಿ ಏನೇ ಸಾಹಿತ್ಯಕವಾಗಿ ನಡೆದರೂ ಅಲ್ಲಿ ಶ್ರೀ ಉಡುಪರು ಇದ್ದೇ ಇರುತ್ತಾರೆ. ಶ್ರೀ ಉಡುಪರೂ - ಶ್ರೀಮಹಾಬಲೇಶ್ವರ ಭಟ್ಟರೂ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ, ಅವರಿಲ್ಲದೆ ಇವರಿಲ್ಲ; ಇವರಿಲ್ಲದೆ ಅವರಿಲ್ಲ. ಇಷ್ಟು ಆತ್ಮೀಯತೆ ಇರುವವರ ಬಗ್ಗೆ ಪರಿಚಯ ಲೇಖನ ಬರೆಯುವುದು ಬಹಳಕಷ್ಟ. ಒಂದು ಮಾತು ಹೆಚ್ಚು ಬರೆದರೆ ಹೊಗಳಿಕೆಯಾಗುತ್ತದೆ; ಒಂದು ಮಾತು ಕಡಿಮೆಯಾದರೆ ಕೊರತೆಯಾಗುತ್ತದೆ. ಶ್ರೀಮಹಾಬಲೇಶ್ವರ ಭಟ್ಟರು ಸಂತುಲನ ಮನಸ್ಸಿನವರು. ಅವರ ಲೇಖನಿ ಇಲ್ಲಿ ಸಹಜವಾಗಿಯೇ ಮುಂದುವರೆದಿದೆ. ಶ್ರೀ ಉಡುಪರ ಬಗ್ಗೆ ಇದ್ದದ್ದನ್ನು ಇದ್ದ ಹಾಗೆಯೇ ಹೇಳಿದ್ದಾರೆ. - 'ಉಡುಪರ ಜೀವನ ಅಪ್ಪಟ ಚಿನ್ನ. ಅಷ್ಟೇ ಅಲ್ಲ ಅಪರಂಜಿ'. ಶ್ರೀ ಉಡುಪರದ್ದು ಚಟುವಟಿಕೆ ಪ್ರವೃತ್ತಿ ಎಂದೆನಲ್ಲವೇ ? ಶ್ರೀ ಮಹಾಬಲೇಶ್ವರ ಭಟ್ಟರ ಮಾತಿನಲ್ಲಿ ಕೇಳಿ... ಮಾತನಾಡಲು ಬಾರದವನನ್ನು ಮಾತನಾಡಿಸುವ ಚಪಲ. ಕುಕ್ಕಿ, ಕೆಣಕಿ, ತಿವಿದು, ಜನರ ಮನಸ್ಸನ್ನು ತಮ್ಮ ಕಡೆಗೆ ಸೆಳೆಯುವ ತವಕ. ಎಂಥವರನ್ನೂ ಕ್ಷಣಾರ್ಧದಲ್ಲಿ ತನ್ನವರನ್ನಾಗಿ ಮಾಡಿಕೊಳ್ಳುವ ಕುಶಾಗ್ರತೆ, ಸಿಟ್ಟುದೂರ; ಸ್ನೇಹ ಹತ್ತಿರ, ಜಡತ್ವ ಎನ್ನುವುದು ಇವರ ಜಾಯಮಾನಕ್ಕೇ ಗೊತ್ತಿಲ್ಲದ ವಿಷಯ.' ಶ್ರೀ ಉಡುಪರ ಸಾಹಿತ್ಯ ಕೃಷಿಯ ಬಗ್ಗೆ ಹೇಳುತ್ತಾ.' ದೇವಸ್ಥಾನದಿಂದ ಹಿಡಿದು. ಆಧುನಿಕ ಜಗತ್ತಿನ ವೈಭವದವರೆಗೆ; ಪ್ರಕೃತಿಯ ಸಿರಿ ಸೊಬಗಿನವರೆಗೆ ಸಾಹಿತ್ಯ ಮೂಡಿ ಬಂದಿದೆ.' - ಎನ್ನುತ್ತಾರೆ.

'ವಾಗ್ವಾಹಿನಿಯ ವರ ಪುತ್ರ' ನೆಂದೇ ಆತ್ಮೀಯರಿಂದ ಬೆನ್ನು ತಟ್ಟಿಸಿಕೊಂಡಿರುವ, ಕನ್ನಡದ ಧೀಮಂತ ಸಾಹಿತಿ, ಶ್ರೀ ಸಾ.ಶಿ. ಮರುಳಯ್ಯನವರು. ಇವರನ್ನು ಶ್ರೀ ಮಹಾಬಲೇಶ್ವರ ಭಟ್ಟರು ಓದುಗರಿಗೆ ಪರಿಚಯ ಮಾಡಿಕೊಡುವ ಧಾಟಿಯನ್ನು ನೋಡಿ.' ಕಪ್ಪು ಬಣ್ಣ ದುಂಡು ಮುಖ, ಮಾತನಾಡಲು ನಿಂತರೆ ಕಾಲವನ್ನೇ ಮರೆಸುವ ವಾಚಾಳಿ. ಮಾತಿನಿಂದ ಜನರನ್ನು ಸೆರೆಹಿಡಿಯುವ ಮಹಾಕುಶಲತೆ. ವಾಲ್ಮೀಕಿಯಿಂದ ಹಿಡಿದು ಕುವೆಂಪು ತನಕ ಸಾಹಿತ್ಯವನ್ನು ವಿಮರ್ಶಿಸುವ ಪಾಂಡಿತ್ಯ. ಎಲ್ಲವನ್ನೂ ಎಲ್ಲರಿಗೂ ತಿಳಿಯುವಂತೆ ಹೇಳುವುದು ಮರುಳಯ್ಯನವರ ವೈಶಿಷ್ಟ್ಯ.' ಹೀಗೆ ಪ್ರಾರಂಭಿಸಿದ ಶ್ರೀ ಭಟ್ಟರು ಮುಂದೆ ಮುಂದೆ ಶ್ರೀ ಸಾ.ಶಿ.ಮ. ರವರ ವಿನಯ ಸಂಪನ್ನ ಪ್ರವೃತ್ತಿಯನ್ನು, ಅವರ ಸಾಹಿತ್ಯಕ ಹೆಗ್ಗಳಿಕೆಯನ್ನು, ಗೃಹ ಜೀವನದ ಸಮರಸತೆಯನ್ನು ಮನ ಮುಟ್ಟುವಂತೆ ಚಿತ್ರಿಸಿದ್ದಾರೆ.

ಇಲ್ಲಿ ಶ್ರೀ ಮಹಾಬಲೇಶ್ವರ ಭಟ್ಟರು ಹೇಳಿರುವ ವ್ಯಕ್ತಿ ಪರಿಚಯದ ನಾಲ್ಕಾರು ಉದಾಹರಣೆಗಳನ್ನು ಮಾತ್ರಬರೆದಿದ್ದೇನೆ. ಅವರು ಹೇಳಿರುವ ಎಲ್ಲ ವ್ಯಕ್ತಿಗಳ ಪರಿಚಯದ ವೈಶಿಷ್ಟ್ಯವನ್ನು ಬರೆಯುತ್ತಾಹೋದರೆ, ಅದೇ ಒಂದು ಗ್ರಂಥವಾಗುತ್ತದೆ. ಅವರು ಈ ಪುಸ್ತಕದಲ್ಲಿ ಹೇಳಿರವವರನ್ನೆಲ್ಲಾ 'ಕನ್ನಡ ಕುಲದೀಪಕರು' ಎಂದು ಕರೆದು, ಅವರವರ ಜೀವನ ಪರಿಚಯದೊಂದಿಗೆ, ಕಾವ್ಯ-ಕೃತಿಗಳ ಪರಿಚಯವನ್ನು ಮಾಡಿಕೊಟ್ಟಿದ್ದಾರೆ. ಎಲ್ಲವೂ ಸಂಕ್ಷಿಪ್ತ. ಆದರೆ ಸಮಗ್ರ. ಇವರು ಪ್ರತಿಯೊಬ್ಬ ಕುಲದೀಪಕನ ಕೃತಿ- ಕಾವ್ಯವನ್ನು ಹೆಸರಿಸುವ ಮುನ್ನ ಆ ಕೃತಿಯ ಅಥವಾ ಕಾವ್ಯದ ಸಮಗ್ರ ಸಾರವನ್ನು ಪ್ರತಿಬಿಂಬಿಸುವಂತಹ ವಿಶೇಷಣವನ್ನು, ಆಯಾ ಸಾಹಿತಿಗೆ ತಕ್ಕ ಲೇಖನ ಶೈಲಿಯನ್ನು ಬಳಸಿ, ತಮ್ಮ ಕೌಶಲವನ್ನು ಮೆರೆಸಿದ್ದಾರೆ. ಇಲ್ಲಿನ ಇವರ ಭಾಷೆ ಸರಳ, ಸಮಂಜಸ. ಅವರ ಅಭಿವ್ಯಕ್ತಿ ಪರಿಪಕ್ವವಾದದ್ದು. ಪರಿಪೂರ್ಣವಾದದ್ದು. ಪರಿಮಿತವಾದದ್ದು. ಅವರ ಲೇಖನಿ ಎಲ್ಲಿಯೂ ಅಥ-ಇತಿಗಳನ್ನು ಮೀರಿಲ್ಲ. ಇದರಿಂದ ಸ್ಪಷ್ಟಗೊಳ್ಳುವ ಮತ್ತೊಂದು ಅಂಶವೆಂದರೆ ಜೀವನ ಚರಿತ್ರೆಯನ್ನು ಬರೆಯುವುದಕ್ಕೂ, ಪರಿಚಯಾತ್ಮಕ ಲೇಖನ ಬರೆಯುವುದಕ್ಕೂ ಅಜ-ಗಜಾಂತರ ವ್ಯತ್ಯಾಸವಿದೆ - ಎಂಬುದು ಮತ್ತು ಪರಿಚಯಾತ್ಮಕ ಲೇಖನವೂ ಒಂದು ಕಲೆ; ಅದು ಗದ್ಯ ಪ್ರಕಾರದಲ್ಲಿತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿದೆ ಎಂಬುದು.

ಕನ್ನಡ ಕುಲದೀಪಕರ ಸರ್ವಾಂಗ ಸುಂದರ ಚಿತ್ರಣವನ್ನು ಕನ್ನಡ ನಾಡಿಗಿತ್ತ ಶ್ರೀ ಮಹಾಬಲೇಶ್ವರ ಭಟ್ಟರು ಮಾನ್ಯರೂ ಹೌದು; ಧನ್ಯರೂ ಹೌದು. ಅನುಕರಣೀಯರೂ ಹೌದು; ನಮಸ್ಕರಣೀಯರೂ ಹೌದು. ಪರಿಚಯದ ಕೊನೆಯಲ್ಲಿ ಅವರು ಬರೆದಿರುವ ವಾಕ್ಯಗಳು ಭರತವಾಕ್ಯಗಳೂ ಹೌದು; ಭದ್ರ ವಾಕ್ಯಗಳೂ ಹೌದು. ಅವರ ಬಾಳು ಶಿವ ಸುಂದರ, ಮತ್ತು ಮಂಗಳ.

# ಸಾಗರದಲ್ಲಿ ಸಾಹಿತ್ಯ ಶಕ್ತಿಯಾಗಿ ಅರಳಿದವರು

– ಪ್ರೊ. ವಸಂತಕುಷ್ಟಗಿ

ಕನ್ನಡವನ್ನು ಕಟ್ಟಿದ ಪರುಷದ ಕೈಗಳಲ್ಲಿ ಶ್ರೀ ಟಿ. ಮಹಾಬಲೇಶ್ವರ ಭಟ್ಟರದು ಅಪರೂಪದ ಕೈ. ಅವರು ಮುಟ್ಟಿದ ಕನ್ನಡ ನೆಲವೆಲ್ಲ ಚೈತನ್ಯ ಪೂರ್ಣ ಅಪರಂಜಿ. ಅಪ್ಪಟ ಗಾಂಧೀವಾದಿಯಾಗಿರುವ ಅವರು ನಿರಾಡಂಬರತೆಗೆ ಸಾಕ್ಷಿ ಸ್ವರೂಪ. ಸತ್ಯ ಅಹಿಂಸೆ ಕಾರ್ಯ ತತ್ಪರತೆಗೆ ಕಾಮಕಸ್ತೂರಿ. ನಸುನಗೆಯಿಂದ ತುಂಬಿದ ಅವರವ್ಯಕ್ತಿತ್ವವೂ ಶುಭ್ರ ಖಾದಿಯಾಗಿಯೇ ಇದ್ದು ಇನ್ನೂ ಇಂದಿಗೆ ಗೌರವದ ಸುವಾಸನೆಯನ್ನು ತುಂಬುತ್ತಿರುವ ಮಹಾಬಲ ಅವರು. 'ಸ್ವಾತಂತ್ರ್ಯ' ಎಂಬ ಪದ ಕೇಳಿದೊಡನೆ, ಹೃದಯ ಮಿಡಿದು ೧೯೪೭ರ ಹಿಂದಿನ ಭಾರತದಲ್ಲಿಯ ಸ್ವಾತಂತ್ರ್ಯದ ಚಳುವಳಿ ಹಾಗೂ ೧೯೫೭ರ ವರೆಗೆ ಇದ್ದ ಶುಭ್ರ ಕಾಂಗ್ರೆಸ್ಸಿನ ವಾತಾವರಣ ನೆನಪಿಗೆ ಬರುವ ಅವಕಾಶ. ಆ ಪರಿಸದಲ್ಲಿಯ ಎಲ್ಲ ಒಳಿತುಗಳನ್ನು ಬಾಳಿಸಿಕೊಂಡ ಮಹಾಬಲೇಶ್ವರ ಭಟ್ಟರು ಒಬ್ಬ ಒಳ್ಳೆಯ ರಾಜಕಾರಣಿಯಾಗಿ ಆ ಹೆಸರಿಗೆ ಹೂವು ಮುಡಿಸಿದ್ದಾರೆ. ಇನ್ನೂ ಮುಡಿಸುತ್ತಿದ್ದಾರೆ. ಅಧಿಕಾರ ಲಾಲಸೆಯಿಲ್ಲದೆ ಕೇವಲ ಸೇವಾ ಭಾವದ ಸ್ವಯಂ ಸೇವಕರಾಗಿ ರಾಷ್ಟ್ರದ ಹಿತ ಚಿಂತಕರಾಗಿದ್ದಾರೆ.

ಒಬ್ಬ ರಾಜಕಾರಣಿಯು, ರಾಜರ್ಷಿ ಜನಕನಂತೆ, ಪಂಡಿತ ಜವಹರಲಾಲ ನೆಹರೂ ಅವರಂತೆ, ಡಾ. ಎಸ್.ರಾಧಾಕೃಷ್ಣನ್ ಅವರಂತೆ, ಅಟಲ ಬಿಹಾರಿ ವಾಜಪೇಯಿ ಅವರಂತೆ ವಿಶಾಲ ಹೃದಯದವರಾಗಿ ವಿಶ್ವವೇ ನನ್ನಮನೆ ಎಂದು ಆಲಂಗಿಸಿಕೊಳ್ಳಬೇಕಾದರೆ ಅವರಿಗೆ ಸಾಹಿತ್ಯ ಧರ್ಮವು ಕರತಲಾಮಲಕ ವಾಗಿರಬೇಕು. ಹಾಗೂ ಸ್ವತಃ ಲೇಖಕರಾಗಿದ್ದರಂತೂ ಸುವರ್ಣಕ್ಕೆ ಸುಗಂಧದ ಜೋಡು ಇದ್ದಂತೆ. ಈ ಹಿನ್ನೆಲೆಯಲ್ಲಿ ತನ್ನದೇ ಆಗಿರುವ ಪರಿಸರದಲ್ಲಿ ಟಿ. ಮಹಾಬಲೇಶ್ವರ ಭಟ್ಟರು ತಮ್ಮ ತಪಸ್ಸಿನ ಸಿದ್ಧಿಯಲ್ಲಿಸಾಹಿತ್ಯ ಶಕ್ತಿಯಾಗಿ ಅರಳಿದ್ದಾರೆ. ಆದ್ದರಿಂದ ಸಾಗರದ ಮುಖಾಂತರ ಅವರ ಕನ್ನಡ ಸಾಹಿತ್ಯಸೇವೆ, ಕರ್ನಾಟಕದ ಸಾಹಿತ್ಯ ಮತ್ತು ಸಂಸ್ಕೃತಿಯ ಇತಿಹಾಸದಲ್ಲಿಮಾಸದೇ ಉಳಿಯುವಂತಹದು. ಏಕೆಂದರೆ ಅವರೊಬ್ಬ ಉತ್ತಮ ರಾಜಕಾರಣಿಯೂ ಆಗಿದ್ದು ಲೇಖಕರಾಗಿರುವುದರಿಂದ ಒಳ್ಳೆಯ ಸಂಘಟಕರಾಗಿ ಸಂಜೀವಿನಿ

ಶಕ್ತಿಯಾಗಿರುವುದರಿಂದ ಅವರ ಸಾಧನೆಗಳೆಲ್ಲ ವ್ಯಷ್ಟಿಗೆ ಸೀಮಿತವಾಗಿ, ಕುಸಿದು ಹೋಗದೆ ಇತಿಹಾಸದಲ್ಲಿ ಸಮಷ್ಟಿಗೆ ಸ್ಫೂರ್ತಿಯಾಗಿ ನಿಲ್ಲುವಂತಹದು.

ಟಿ. ಮಹಾಬಲೇಶ್ವರ ಭಟ್ಟರ ಜೀವನದ ಗೆಲುವಿಗೆ ಅವರಲ್ಲಿ ನಾನು ಕಂಡದ್ದು ಅವರಲ್ಲಿರುವ ಸಹಕಾರಿ ಮನೋವೃತ್ತಿ. ಅದರ ಬಲದಿಂದಾಗಿ ಅವರು ಮಲೆನಾಡಿನ ತುಂಬಾ ವ್ಯವಸಾಯ ಮಾರಾಟ ಸಹಕಾರ ಸಂಘಗಳಲ್ಲಿ, ಮಲೆನಾಡು ಅಭಿವೃದ್ಧಿ ಪ್ರತಿಷ್ಠಾನದಲ್ಲಿ, ಶರಾವತಿ ಪುನರ್‌ವಸತಿ ಕಾರ್ಯದಲ್ಲಿ ಅಸದಳವಾದ ನಿಸ್ವಾರ್ಥ ಸೇವೆಯನ್ನು ಮಾಡಿ ಆ ಮಣ್ಣಿನ ಕಣಕಣಕ್ಕೂ ಅವರು ತಮ್ಮ ಬೆವರಿನ ತುಂಗೆಯನ್ನು ಹರಿಸಿ, ಸಾಮಾನ್ಯರ ಬದುಕನ್ನು ಸಂದರಗೊಳಿಸಿದ್ದಾರೆ.

ಇಂತಹ ಸಹಕಾರಿ ಮನೋಭಾವನೆಯು ಅವರಲ್ಲಿರುವುದರಿಂದಲೇ ಸಾಗರ ತಾಲೂಕು ಕನ್ನಡ ಸಾಹಿತ್ಯಸಾಗರವಾಗಿ ಒಂದು ರಾಜ್ಯದ ಕೇಂದ್ರವು ಮಾಡುವಷ್ಟು ಕನ್ನಡದ ಕೆಲಸವನ್ನು ಮಾಡುತ್ತಾ ಬಂದಿದ್ದು, ಬಹು ಮೌಲಿಕವಾದ ಚಳುವಳಿಗಳನ್ನು ನೀಡಿದೆ, ಪ್ರಕಾಶನಗಳನ್ನು ತಂದಿದೆ. ಒಳಗೆ ಮುದುಡಿ ಹೋಗುತ್ತಿದ್ದ ಪ್ರತಿಭೆಗಳನ್ನೆಲ್ಲ ಅರಳಿಸಿ ನಾಡಗೌರವವನ್ನು ಪಡೆದುಕೊಳ್ಳುವಂತೆ ಮಾಡಿದೆ. ಇದರ ಕೀರ್ತಿಯು ಟಿ. ಮಹಾಬಲೇಶ್ವರ ಭಟ್ಟರ ಪದರಿಗೆ ಸಲ್ಲುತ್ತದೆ. ಆ ಪದರಿನ ಸುವಾಸನೆ ಬಯಲು ನಾಡಿನ ಮೇಲೂ ಹಾಯ್ದು ಕಲಬುರ್ಗಿಯ ಕಲ್ಲರಳಿನಲ್ಲಿಯೂ ಅದರ ಮಘ-ಮಘಸೇರಿ ಬೀದರಿನ ಔರಾದಕ್ಕೂ ಮುಟ್ಟಿ ಹಾಗೆ ಮಲ್ಪೆಗೆ ತಟ್ಟಿ ಉತ್ತರ ಧ್ರುವದಿಂದ ದಕ್ಷಿಣ ಧ್ರುವಕ್ಕೂ ಸಾಹಿತ್ಯಕ ವಾತಾವರಣವನ್ನು ನಿರ್ಮಾಣ ಮಾಡುವಲ್ಲಿ ಸ್ಫೂರ್ತಿಯ ಸೆಲೆಯಾಗಿದೆ.

ಇಂಥಈ ವ್ಯಕ್ತಿಯ ಪರಿಚಯವನ್ನು ನಮ್ಮ ಗುರುಗಳಾದ ಪೂಜ್ಯ ತವಗ ಭೀಮಸೇನರಾಯರು ಬೆಂಗಳೂರಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಕಟ್ಟಡದಲ್ಲಿ ಹಲವಾರು ಸಲ ಪರಿಚಯ ಮಾಡಿಸಿದ್ದರು. ಅಲ್ಲದೆ ಸಾಹಿತ್ಯ ಸಮ್ಮೇಳನಗಳಲ್ಲಿ ಈ ವಿನಯದ ಮೂರ್ತಿಯ ಸಂಪರ್ಕ ಆಗಾಗ ಬಂದದ್ದುಂಟು. ಆದರೆ ಇತ್ತೀಚಿನ ದಿನಗಳಲ್ಲಿ ಅವರ ಸಾಹಿತ್ಯ ಮತ್ತು ಬದುಕುಗಳ ಬಗ್ಗೆ ಹಿರಿಯ ಮಿತ್ರ ಶ್ರೀ ಶ್ರೀನಿವಾಸ ಉಡುಪರ ಉಪಕಾರದಿಂದಾಗಿ ತೀರ ಪ್ರಭಾವಿತವಾಯಿತು. ಅವರ ಕೈ ಕನ್ನಡವನ್ನು ಕಟ್ಟುತ್ತಿರುವ ಚೈತನ್ಯಮಯ ಪರುಷದ ಕೈ, ರನ್ನಗನ್ನಡದ ಕಡಗದ ಕೈ ಎಂದು ಅರ್ಥವಾಯಿತು. ಅವರ ಮನಸ್ಸು ಕನ್ನಡದ ಕಲ್ಪವೃಕ್ಷವೆಂದೂ, ಅವರ ಪ್ರೀತಿಯು ಕನ್ನಡದ ಕಾಮಧೇನು ಎಂದು ಮನನವಾಯಿತು. ಎಲ್ಲಕ್ಕೂ ಹೆಚ್ಚಾಗಿ ಮಹಾಬಲೇಶ್ವರ ಶಕ್ತಿಗೆ 'ಸಾಗರ' ಎಂಬುದು ಸಾರ್ಥಕವಾಯಿತು.

ಈ ಸಾಗರಕ್ಕೆ ಈಗ ಸತ್ಯದ ಸಂಪೂರ್ಣದರ್ಶನ. ಇನ್ನು ಮುಂದೆ ನೂರಕ್ಕೂ ಮೀರಿ ಸಾವಿರದ ಸಾವಿರದ ಅನಂತ ವಸಂತಗಳು ಸಾರ್ಥಕವಾಗಲೆಂಬ ಹಾರೈಕೆ ನನ್ನದು. ಈ ನನ್ನ ಹಾರೈಕೆ ಈ ಸಾಗರದ ಮೂಲಕ ನಾರಾಯಣನಿಗೆ ಸಮರ್ಪಿತ.

# ಭಟ್ಟರಿಗೆ ನಮಸ್ಕಾರ

- ವಿಲಿಯಂ

ಡಾ. ಹಾ.ಮಾ. ನಾಯಕರ ಸುಂದರ ಮಾತೊಂದಿದೆ- 'ಕನ್ನಡಕ್ಕಾಗಿ ಕೆಲಸ ಮಾಡುವ ಎಲ್ಲರೂ ನಮ್ಮ ಪ್ರೀತಿ ಗೌರವಗಳಿಗೆ ಪಾತ್ರರು. ಅವರನ್ನು ನಮ್ಮ ಶಕ್ತಿಗೆ ಅನುಸಾರವಾಗಿ ಸತ್ಕರಿಸುವುದು ನಮಗೆ ಯಾವಾಗಲೂ ಒಂದು ಪ್ರಿಯವಾದ ಕರ್ತವ್ಯ. ಏಕೆಂದರೆ ನಮ್ಮ ಜಾತಿ ಕನ್ನಡ, ನಮ್ಮ ಮತ ಕನ್ನಡ, ನಮ್ಮ ಧರ್ಮ ಕನ್ನಡ - ' ಈ ಮಾತಿನ ಚೌಕಟ್ಟಿನೊಳಗೆ ಶ್ರೀ ಟಿ. ಮಹಾಬಲೇಶ್ವರಭಟ್ಟರನ್ನು ಇಟ್ಟು ನೋಡುವುದು ಒಂದು ಪ್ರೀತಿಯ ಕೆಲಸ.

ಸಾಗರ ಪ್ರಾಂತ್ಯದಲ್ಲಾಗುತ್ತಿದ್ದ, ಮತ್ತು ಆಗುತ್ತಿರುವ ಸಾಹಿತ್ಯಿಕ ಚಟುವಟಿಕೆಗಳ ಸುಗ್ಗಿಯ ಮೊತ್ತದಲ್ಲಿ ಭಟ್ಟರದು ಸಿಂಹಪಾಲು. ಲಾಗಾಯ್ತಿನಿಂದ ಸಾಹಿತಿಗಳ ಸಂಪರ್ಕ ಸ್ನೇಹವನ್ನು ಇಟ್ಟುಕೊಂಡಿರುವ ಭಟ್ಟರು ಅದನ್ನು ಕೇವಲ ತನ್ನ ಒಂದು ಖಾಸಗಿ ಸ್ನೇಹ ಸಂತೋಷಕ್ಕಾಗಿಯೋ ಇಲ್ಲವೇ ಸ್ನೇಹ ಹವ್ಯಾಸಕ್ಕಾಗಿಯೋ ಅದನ್ನು ತನ್ನಲ್ಲಿ ತಾನು ಇಟ್ಟುಕೊಳ್ಳದೇ ಆ ಸ್ನೇಹವನ್ನು ಸಾಗರದ ಸಾಹಿತ್ಯ ಪ್ರಿಯರಿಗೆ ಉಣ ಬಡಿಸಿದ್ದು ಭಟ್ಟರ ಹೆಗ್ಗಳಿಕೆ. ವಿವಿಧ ಕಾರ್ಯಕ್ರಮಗಳ ಸಲುವಾಗಿ ಬಂದ ಸಾಹಿತಿಗಳನ್ನು ಮನೆಗೆ ಕರೆದುಕೊಂಡು ಹೋಗಿ ಸತ್ಕರಿಸುವುದು ಒಂದು ರೀತಿಯಾದರೆ ಮನೆಗೆ ಬರುವ ಸಾಹಿತಿ ಮಿತ್ರರನ್ನು ಹಾಗೆಯೇ ಹೋಗ ಬಿಡದೆ ಅವರನ್ನು ಸಾರ್ವತ್ರಿಕ ಸಭೆ ಸಮಾರಂಭಗಳಲ್ಲಿ ಉಪಯೋಗಿಸಿಕೊಳ್ಳುವುದು ಮತ್ತೊಂದು ರೀತಿ. ಭಟ್ಟರು ಈ ಎರಡನೇ ಸಾಲಿಗೆ ಸೇರಿದವರು. ಭಟ್ಟರಿಂದಾಗಿಯೇ ಸಾಗರ ಕಂಡ ಸಾಹಿತಿಗಳ ಸಂಖ್ಯೆ ಅಪಾರ, ಅಷ್ಟೇ ವಿಶಿಷ್ಟ ಸಹಾ. ಭಟ್ಟರ ಪ್ರಯತ್ನ ಇಲ್ಲದಿದ್ದರೆ ಕುವೆಂಪು, ಬೇಂದ್ರೆ, ಮಾಸ್ತಿ, ಕಾರಂತ, ಗೋಕಾಕ್, ರಂ.ಶ್ರೀ. ಮುಗಳಿ, ಅ.ನ.ಕೃ - ಇಂತಹ ಹತ್ತಾರು ದಿಗ್ಗಜರನ್ನು ನೋಡುವ ಅವಕಾಶ ಸಾಗರಕ್ಕೆ ಇರುತ್ತಿರಲಿಲ್ಲವೇನೋ ? ಸಾಗರದ ಸಾಹಿತ್ಯಿಕ ಚಟುವಟಿಕೆಗಳ ಬದುಕಿನಲ್ಲಿ ಭಟ್ಟರಿಗೆ ಅಗ್ರಸ್ಥಾನ ಎನ್ನುವುದರಲ್ಲಿ ಎರಡು ಮಾತಿಲ್ಲ.

ಸುಮಾರು ೪೫ ವರ್ಷಗಳಿಂದಲೂ ಕನ್ನಡದ ಕೆಲಸ ಮಾಡುತ್ತಾ ಬಂದಿರುವ ಭಟ್ಟರು ಮಾಡಿರುವ ಸಾಹಿತ್ಯ ಕೃಷಿ ಕಡಿಮೆ ಎನಿಸುವುದು ಸಹಜ. ಇದಕ್ಕೆ ಕಾರಣವಿಲ್ಲದಿಲ್ಲ. ಭಟ್ಟರು ಮೊದಲಿನಿಂದಲೂ ತಮ್ಮ ಹೃದಯದೊಳಗೆ ಪುಟ್ಟ

ಕವಿಯೊಬ್ಬನನ್ನು ಸಾಕಿಕೊಂಡು ಬಂದವರು. ಆದರೆ ಈ ಕವಿಗೆ ಸತತವಾದ ಆರೈಕೆ ಹಾಗೂ ಆತನನ್ನು ಕ್ರಿಯಾತ್ಮಕವಾಗಿ ದುಡಿಸಿಕೊಳ್ಳಲು ಭಟ್ಟರಿಗೆ ಸಂದರ್ಭಗಳ ಒತ್ತಡದಿಂದ ಸಾಧ್ಯವಾಗಲಿಲ್ಲ ಅನಿಸುತ್ತೆ. ಇದಕ್ಕೆ ಮೂಲ ಕಾರಣ ಭಟ್ಟರು, ತೀವ್ರವಾಗಿ ತಮ್ಮನ್ನು ತಾವು ಸಹಕಾರಿ ಮತ್ತು ರಾಜಕೀಯ ಕ್ಷೇತ್ರದಲ್ಲಿ ತೊಡಗಿಸಿಕೊಂಡದ್ದು. ಈ ಸಾರ್ವಜನಿಕ ಕೆಲಸ ಕಾರ್ಯಗಳ ಜಂಜಾಟ, ತಿಕ್ಕಾಟ ತಿರುವುಗಳು ಭಟ್ಟರೊಳಗಿನ ಕವಿಗೆ ಹೆಚ್ಚಾಗಿ ಅಭಿವ್ಯಕ್ತಿಗೊಳ್ಳಲು ಸಾಧ್ಯವಾಗಲಿಲ್ಲ ಅನಿಸುತ್ತೆ. ಸಾಹಿತ್ಯಿಕ ಸಂಘಟನೆ ಚಟುವಟಿಕೆಗಳಲ್ಲಿ ತಮ್ಮನ್ನು ತಾವು ತೀವ್ರವಾಗಿ ತೊಡಗಿಸಿಕೊಂಡವರ ಅನುಭವ ಇದಕ್ಕಿಂತ ಬೇರೆಯಾಗಲು ಸಾಧ್ಯವಿಲ್ಲ. ಕಾವ್ಯ ಕರ್ಮಕ್ಕೇನೆ ತೀವ್ರವಾಗಿ ಅಂಟಿಕೊಂಡವರು ಸಾಹಿತ್ಯಿಕ ಸಂಘ-ಸಂಸ್ಥೆ ಸಂಘಟನೆಗಳಿಗೆ ತೊಡಗುವವರ ಅನುಭವ ಒಂದಾದರೆ ಹತ್ತು ಹಲವು ಸಾಹಿತ್ಯಿಕ ಕಾರ್ಯಕ್ರಮಗಳನ್ನು ನೆಡೆಸಿಕೊಂಡು ಸಂಗಡ ಸಾಹಿತ್ಯ ರಚಿಸುವವರ ಅನುಭವ ಬೇರೆಯಾಗಿರುತ್ತದೆ. ಹೀಗಾಗಿ ಭಟ್ಟರೊಳಗಿನ ಪುಟ್ಟ ಕವಿಗೆ ಸಮಯ ಸಿಗಲಿಲ್ಲ, ದುಡಿಮೆ ಸಾಕಾಗಲಿಲ್ಲ. ಆದರೆ ಈ ಕವಿ ಬೇಸರ ಪಡುವ ಅಗತ್ಯವಿಲ್ಲ. ಏಕೆಂದರೆ ಕಾವ್ಯದ ಬಳ್ಳಿಗಳು, ಅಕ್ಷರದ ಬಳ್ಳಿಗಳು ಬೆಳೆಯಲು ಹರಡಲು ಸಾಹಿತ್ಯಿಕ ಚಪ್ಪರಗಳು ಬೇಕು. ಈ ಚಪ್ಪರಗಳನ್ನು ಭಟ್ಟರು ಸತತವಾಗಿ ಕಾಪಾಡಿಕೊಂಡು ಬಂದಿದ್ದಾರೆ.

ನನಗೆ ತಿಳಿದಂತೆ ಭಟ್ಟರಿಗೆ ಕೈತುಂಬ ಕಾಲೇಜ್ ಶಿಕ್ಷಣವಾಗಲಿ, ಹೇಳಿಕೊಳ್ಳಲು ಡಿಗ್ರಿಗಳಾಗಲಿ ಇಲ್ಲ. ದೂರದ ಹಳ್ಳಿಯೊಂದರ ಮೂಲೆಯಿಂದ ಬಂದವರು, ಸಾಲದ್ದಕ್ಕೆ ಮುಳುಗಡೆಯಿಂದ ಮೇಲೆದ್ದವರು. ಇವ್ಯಾವುದನ್ನೂ ತಮ್ಮ ಸಾರ್ವಜನಿಕ ಬದುಕಿಗೆ ಕೊರತೆ ಅಂತ ಮಾಡಿಕೊಳ್ಳಲೇ ಇಲ್ಲ. ಇವರು ಸಂಪಾದಿಸಿಕೊಂಡಿರುವ ಅನುಭವ ಹಾಗೂ ಗೌರವಗಳ ಗರಿಗಳನ್ನು ನೋಡಿದರೆ ಆಶ್ಚರ್ಯ, ಸಂತೋಷ ಮತ್ತುಹೆಮ್ಮೆ ಎನಿಸುತ್ತದೆ. ಯಾವುದೇ ಒಂದು ಘನ-ಸಮಾರಂಭದ ಚೌಕಟ್ಟಿಗೆ ಇವರು ಸೂಕ್ತವೆನಿಸುತ್ತಾರೆ. ಇದೇನು ಕಡಿಮೆ ಸಾಧನೆಯಲ್ಲ. ಸತತವಾದ ಶ್ರಮ ಇದರ ಹಿಂದೆ ಇದೆ. ಬದುಕಿನ ಶಾಲೆಯಿಂದ ದಕ್ಕಿಸಿಕೊಂಡ ಬಾಳ ಬುತ್ತಿ ಇದು. ಕಾರ್ಯಕ್ರಮಗಳನ್ನು ನಡೆಸುವುದರಲ್ಲಿ ನಮ್ಮ ಭಟ್ಟರ ಶೈಲಿಯೇ ಒಂದು ಮಾದರಿ. ಎಂತಹ ದೊಡ್ಡ ಸಾಹಿತಿಯೇ ಆಗಲಿ ಅವರು ಹಿಂದೆ-ಮುಂದೆ ನೋಡದೆ ಭಟ್ಟರಿದ್ದಲ್ಲಿಗೆ ಬಂದು ಹೋಗುತ್ತಾರೆ. ಹೀಗಾಗಿಯೇ ಸಾಗರ ಹತ್ತುಹಲವು ಸಾಹಿತಿ ದಿಗ್ಗಜರನ್ನು ಕಂಡಿದ್ದು. ನಮಗೆಲ್ಲಾ ಇವರ ಮೇಲೆ ಇರುವ ಗೌರವಕ್ಕೂ ಇದೂ ಒಂದು ಕಾರಣ.

ಇಂದು ಭಟ್ಟರು ತಮ್ಮ ೭೦ನೆಯ ಹುಟ್ಟು ಹಬ್ಬದ ಹೊಸಿಲಲ್ಲಿ ಇದ್ದಾರೆ. ಭಟ್ಟರಿಗೆ ೭೦ ಆಗಿದೆ ಎಂಬುದನ್ನು ನಂಬುವುದು ಸಾಧ್ಯವಿಲ್ಲ. ಭಟ್ಟರೊಳಗಿನ ಸೃಜನಶೀಲತೆಗೆ, ಕ್ರಿಯಾಶೀಲತೆಗೆ, ಆ ಪುಟ್ಟ ಕವಿಗೆ ಖಂಡಿತಾ ಇನ್ನು ಎಪ್ಪತ್ತಾಗಲಿಲ್ಲ.

ಇವರ ಶಿಸ್ತು, ಶೈಲಿ, ಹಾಗೂ ಖಾದಿ ಇನ್ನೂ ಸುಕ್ಕಾಗಲಿಲ್ಲ. ಸುಕ್ಕಾಗಲು ಬಿಡುವುದಿಲ್ಲ ಭಟ್ಟರು. ಹಾಗೆಯೇ ಸದಾ ಗರಿಗರಿಯಾಗಿರಲೆಂದೇ ನಮ್ಮ ಹಾರೈಕೆಯೂ ಹೌದು.

ನಮಗೆಲ್ಲರಿಗೆ ಹಿರಿಯರು, ಗೌರವ ವಿಶ್ವಾಸಕ್ಕೆ ಪಾತ್ರರೂ ಆದ ಈ ತರುಣ ತೊರೆಮನೆ ಮಹಾಬಲೇಶ್ವರ ಭಟ್ಟರಿಗೆ ಶುಭ ಹಾರೈಸುವುದು ನಮ್ಮ ಹಕ್ಕು ಮತ್ತು ಕರ್ತವ್ಯ. ಡಾ. ಹಾ.ಮಾ.ನಾ ಹೇಳಿದಂತೆ ಪ್ರೀತಿಸುವುದು, ಗೌರವಿಸುವುದು ಮತ್ತು ನಮ್ಮ ಶಕ್ತಿಗೆ ಅನುಸಾರವಾಗಿ ಸತ್ಕರಿಸುವುದು ನಮ್ಮ ಆದ್ಯ ಕರ್ತವ್ಯ. ಏಕೆಂದರೆ ನಮ್ಮ ಭಟ್ಟರು ಕನ್ನಡದ ಕೆಲಸ ಮಾಡುತ್ತಿದ್ದಾರೆ. ಇವರು ಕನ್ನಡದ ಜಾತಿಯವರು, ಕನ್ನಡ ಮತದವರು ಹಾಗೂ ಕನ್ನಡ ಧರ್ಮದವರು.

# ಸಂಘಟನೆಯ ಹರಿಕಾರ

– ವಿದ್ವಾನ್ ವಿ.ಎನ್. ಭಟ್ಟ

ಸದಾ ಉದ್ಯಮಶೀಲತೆ, ಸಾಹಸ ಪ್ರವೃತ್ತಿ, ಮುನ್ನುಗ್ಗುವ ಧೈರ್ಯ, ಸಕಾಲಿಕ ಬುದ್ಧಿ, ಸಂಘಟನಾಶಕ್ತಿ, ಹಿಡಿದ ಕಾರ್ಯವನ್ನು ಸಾಧಿಸಿಯೇ ತೀರುವೆನೆಂಬ ಛಲ. ಈ ಆರುಗುಣಗಳು ಯಾರಲ್ಲಿ ಇರುತ್ತದೋ ಅಂಥಹವರಿಗೆ ಭಗವಂತನ ಸಹಾಯ ಒದಗಿಬರುವುದಂತೆ. ಶ್ರೀ ಮಹಾಬಲೇಶ್ವರ ಭಟ್ಟರಲ್ಲಿ ಈ ಆರೂ ಗುಣಗಳೂ ಮೇಳೈಸಿರುವುದನ್ನು ಗುರುತಿಸಬಹುದು.

ಅವರೊಬ್ಬ ಕನ್ನಡದ ಸೇನಾನಿ. 'ಕನ್ನಡಕ್ಕಾಗಿ ಕೈ ಎತ್ತು, ನಿನ್ನ ಕೈ ಕಲ್ಪವೃಕ್ಷವಾಗುವುದು; ಕನ್ನಡಕ್ಕಾಗಿ ಕೊರಳೆತ್ತು, ನಿನ್ನ ಕೊರಳು ಪಾಂಚಜನ್ಯ ವಾಗುವುದು;' ಎನ್ನುವ ಕವಿ ಕುವೆಂಪು ವಾಣಿಯಂತೆ ಸದಾ ಕನ್ನಡಕ್ಕಾಗಿ ಕೈ ಎತ್ತಿದ, ಕೊರಳೆತ್ತಿದ, ಹಿರಿಯ ಚೇತನವದು.

ಸಾಗರವನ್ನು - ಸಾಹಿತ್ಯ ಚಟುವಟಿಕೆಯ ಆಗರವನ್ನಾಗಿ ಮಾಡಿದ ಶ್ರೀಯುತರು, ಕನ್ನಡದ ಸರ್ವ ಶ್ರೇಷ್ಠ ಸಾಹಿತಿಗಳಾದ ಅ.ನ.ಕೃ. ಬೇಂದ್ರೆ, ವಿ.ಸೀ. ಗೋಕಾಕ, ಕುವೆಂಪು, ದೇ.ಜ.ಗೌ. ಅನಂತ ಮೂರ್ತಿ, ಹಂಪನಾ ಮುಂತಾದ ಹತ್ತು ಹಲವು ಸಾಹಿತಿಗಳನ್ನು ತಮ್ಮ ಪ್ರಾಂತ್ಯದವರಿಗೆ ಪರಿಚಯಿಸಿ ಅವರನ್ನು ಸತ್ಕರಿಸಿ, ಸನ್ಮಾನಿಸಿ ಸಂತೋಷ ಪಟ್ಟವರು. 'ಎನಗಿಂತ ಕಿರಿಯರಿಲ್ಲ; ಸಾಹಿತಿಗಳಿಗಿಂತ ಹಿರಿಯರಿಲ್ಲ.' ಎಂಬ ವಿನೀತ ಭಾವ ಹೊಂದಿ ಸಾಹಿತಿಗಳ ಅಲ್ಪಗುಣವನ್ನುಕಲ್ಪವಾಗಿಸಿ, ಬಿಂದುವನ್ನು ಸಿಂಧುವಾಗಿಸಿ, ಸ್ವಂತ ಮನೆಯಲ್ಲಿಯೇ ಊಟೋಪಚಾರ, ಆತಿಥ್ಯ ನೀಡಿ ಹಿಗ್ಗುವ ಉದಾರ ಮನೋಭಾವ ಶ್ರೀ ಭಟ್ಟರದು.

ಪರಿವರ್ತನ ಶೀಲವಾದ ಈ ಪ್ರಪಂಚದಲ್ಲಿ ಅನೇಕ ಜನ ಹುಟ್ಟುತ್ತಾರೆ, ಸಾಯುತ್ತಾರೆ. ಆದರೆ ಯಾರ ಹುಟ್ಟಿನಿಂದ ಕುಟುಂಬದ, ಗ್ರಾಮದ, ದೇಶದ, ಕೀರ್ತಿ ಜಗದಗಲ ಯುಗದಗಲವಾಗಿ ಹರಡುತ್ತದೋ ಅವರ ಹುಟ್ಟೇ ನಿಜವಾದ ಹುಟ್ಟು. ಶ್ರೀ ಟಿ. ಮಹಾಬಲೇಶ್ವರ ಭಟ್ಟರ ಹುಟ್ಟು ಅಂತಹುದು. ಅವರ ಜನ್ಮ ಮತ್ತು ಹುಟ್ಟು ಬೆಳವಣಿಗೆಗಳನ್ನು ಪರಾಂಬರಿಸಿದಾಗ ಅವರೊಬ್ಬ ಪುಣ್ಯ ಪ್ರಸವರೆಂಬುದು ಗೋಚರಿಸದಿರದು. ಕಡು-ಬಡ ಕುಟುಂಬದಲ್ಲಿ ಜನಿಸಿ, ಅನ್ಯರ ಮನೆಯಲ್ಲಿ ಒಬ್ಬ

ವ್ಯಕ್ತಿ- ಕವಿಯಾಗಿ, ಲೇಖಕರಾಗಿ, ಕಾದಂಬರಿಕಾರರಾಗಿ, ಹಲವಾರು ಸಂಘ-ಸಂಸ್ಥೆಗಳ ಜನಕರಾಗಿ, ಸಮಾಜ ಸಂಘಟನಾ ಚತುರರಾಗಿ, ಸಹಕಾರಧುರೀಣರಾಗಿ, ಆದರ್ಶ ಕೃಷಿಕರಾಗಿ, ಚತುರ ರಾಜಕಾರಣಿಗಳಾಗಿ, ಹತ್ತು ಹಲವು ಸಂಸ್ಥೆಗಳಲ್ಲಿ ಕಾರ್ಯದರ್ಶಿಯಾಗಿ, ಅಧ್ಯಕ್ಷರಾಗಿ - ದಕ್ಷತೆಯಿಂದ ಕಾರ್ಯ ನಿರ್ವಹಿಸಿದರೆಂದರೆ ಅದೊಂದು ಪವಾಡವೇ ಸರಿ. ಅವರು ಯಾವ ರಂಗಕ್ಕೆ ಇಳಿದರೂ ಆ ರಂಗ ರಂಗು-ರಂಗು. 'ನಿಮ್ಮ ಮುಡಿಗೆ ಹೂವ ತಹೆನಲ್ಲದೆ: ಹುಲ್ಲ ತರೆನು' ಎಂಬ ಅಕ್ಕಮಹಾದೇವಿಯ ವಚನದಂತೆ ಅಡಿಯಿಟ್ಟ ಕ್ಷೇತ್ರವನ್ನು ಅವರು ಶ್ರೀಮಂತಗೊಳಿಸಿದ್ದಾರೆ. ಒಂದೊಂದು ಕ್ಷೇತ್ರದಲ್ಲೂ ಸಿದ್ಧಿ-ಪ್ರಸಿದ್ಧಿಯನ್ನು ಗಳಿಸಿದ್ದಾರೆ.

ಮಹಾಕವಿ ಪಂಪನ ಈ ನುಡಿ ಶ್ರೀ ಭಟ್ಟರನ್ನೇ ಕುರಿತು ಬರೆದಂತಿದೆ.

'ಕದಳೀ ಗರ್ಭಶ್ಯಾಮಂ;

ಮೃದುಕುಟಿಲ ಶಿರೋರುಹಂ, ಸರೋರುಹ, ವದನಂ;

ಮೃದು ಮಧ್ಯಮ ತನು,

ಹಿತ-ಮಿತ-ವಚನ-ರಚನಾ-ಚತುರಂ.'

ಠಾಕುಠೀಕಾದ ಶುಭ್ರ ವೇಷಭೂಷಣ, ಅಜಾನುಬಾಹು ವ್ಯಕ್ತಿತ್ವ, ಹಿತ-ಮಿತ-ಸ್ಮಿತವಾಣಿ, ಪ್ರಸನ್ನವಾದ ನಗು ಮುಖ, ಶಿಸ್ತು ಬದ್ಧ ಜೀವನ, ಹೀಗೆ ಅವರಲ್ಲಿ ಕಂಡುಬರುವ ಒಂದೊಂದೂ ಅನುಕರಣೀಯ ಹಾಗೂ ಅನುಸರಣೀಯ. 'ಹೆಸರಿನ ಹಿರಿಮೆ ಉಸುರಿಗನ್ನಯ' ಎಂಬ ಕವಿ ಕುವೆಂಪುರವರ ವಾಣಿಯಂತೆ ಅವರು ಎಲ್ಲೇ ಇದ್ದರೂ ಮಹಾ-ಬಲರೇ ಸರಿ. ಅಂತೆಯೇ ಅವರಿಂದು ಒಂದು ಪೂರ್ಣ ಬದುಕಿನ ಸಂಕೇತ.

'ಸಾನಂದಂ ಸದನಂ, ಸುತಾಶ್ಚಸುಧಿಯಃ ಕಾಂತಾ ಮನೋಹಾರಿಣೀ

ಸನ್ಮಿತ್ರಂ, ಸುಧನಂ, ಸ್ವಯೋಷಿತಿ ರತಿಶ್ಚಾ ಜ್ಞಾಂಪರಾಃ ಸೇವಕಾಃ।

ಆತಿಥ್ಯಂ, ಶಿವಪೂಜನಂ, ಪ್ರತಿದಿನಂ ಮಿಷ್ಟಾನ್ನಪಾನಂ ಗೃಹೇ

ಸಾಧೋಃ ಸಂಗಮುಪಾಸತೇ ಹಿ ಸತತಂ, ಧನ್ಯೋ ಗೃಹಾಸ್ಥಾಶ್ರಮಃ॥

ಅಂದರೆ - ನಗು-ನಗುವ ಮನೆ, ವಿದ್ಯಾವಂತ ಮಕ್ಕಳು, ಮೆಚ್ಚಿನ ಮಡದಿ, ಸನ್ಮಿತ್ರರ ಭಾಗ್ಯ, ಭಗವಂತನ ಅನುಗ್ರಹದಿಂದ ಬಂದ ಐಶ್ವರ್ಯ ಆಜ್ಞಾಪಾಲಕರಾದ ಸೇವಕರು, ನಿತ್ಯವೂ ಅತಿಥಿ ಸತ್ಕಾರ, ಇಷ್ಟವಾದ ತುಷ್ಟಿ ನೀಡುವ ಮೃಷ್ಟಾನ್ನ

ಭೋಜನ, ನಿರಂತರವಾಗಿ ಮನೆಗೆ ಸಾಧು ಸಜ್ಜನರ ಆಗಮನ- ಇವೆಲ್ಲವೂ ಇರುವ ಗೃಹಸ್ಥಾಶ್ರಮವು ಧನ್ಯ-ಧನ್ಯ. ಅಂತಹ ಧನ್ಯತೆಯ ಸಂಕೇತವಾದ ಗೃಹಸ್ಥಾಶ್ರಮ ಭಟ್ಟರದು.

ಈ ೭೦ರ ಹರೆಯದಲ್ಲೂ ೨೦ರ ಉತ್ಸಾಹವನ್ನು ಕಾಯ್ದುಕೊಂಡು ಬಂದಿರುವ, ಭಟ್ಟರ ಶಾರೀರಿಕ ಸೌಷ್ಠವದ ರಹಸ್ಯ, ಅವರ ಪತ್ನಿ ಪದ್ಮಾವತಿ ಎಂಬಲ್ಲಿ ಸಂದೇಹವಿಲ್ಲ. 'ಶಿವಃ ಶಕ್ತ್ಯಾಯುಕ್ತಃ ಯದಿ ಭವತಿ ಶಕ್ತಃ ಪ್ರಭವಿತುಂ' ಎಂಬ ಶಂಕರಾಚಾರ್ಯರ ವಾಣಿಯಂತೆ ಶಿವನಿಗೂ ಶಕ್ತಿ (ಪಾರ್ವತಿ)ಯಿಲ್ಲದಿದ್ದರೆ 'ಶಕ್ತಿ' ಬರುವುದಿಲ್ಲವಂತೆ. ಸಾಧ್ವೀಮಣಿ ಪದ್ಮಾವತಿ, ಭಟ್ಟರ ಪಾಲಿಗೆ ಶಕ್ತಿಯೇ ಆಗಿದ್ದಾರೆ. 'ಸೀತೆಯ ನೀತಿ - ರಾಮನ ಖ್ಯಾತಿ' ಎಂಬ ಮಾತು ಸರ್ವವಿದಿತ.

ವೇದದಲ್ಲಿ ಒಂದು ಮಾತು ಬರುತ್ತದೆ;

'ಪಶ್ಯೇಮಶರದಃ ಶತಂ; ಜೀವೇಮಶರದಃ ಶತಂ।

ನಂದಾಮ ಶರದಃ ಶತಂ; ಮೋದಾಮ ಶರದಃ ಶತಂ।

ಶೃಣವಾಮ ಶರದಃ ಶತಂ; ಪ್ರಬ್ರವಾಮ ಶರದಃ ಶತಂ ॥'

ಅಂದರೆ - ಚೆನ್ನಾಗಿ ನೋಡುತ್ತಾ, ಚೆನ್ನಾಗಿ ಕೇಳುತ್ತಾ (ಕಿವುಡರಾಗದೇ) ಚೆನ್ನಾಗಿ ನಗುತ್ತಾ, ನಗಿಸುತ್ತಾ, ಚೆನ್ನಾಗಿ ಮಾತನಾಡುತ್ತಾ ನೂರುಕಾಲ ಬಾಳೋಣ; ಈ ವೇದ ವಾಣಿ ಶ್ರೀ ಮಹಾಬಲೇಶ್ವರ ಭಟ್ಟ ದಂಪತಿಗಳ ವಿಷಯದಲ್ಲಿ ಸಾರ್ಥಕವಾಗಲಿ. ನಾಡು-ನುಡಿ- ಸಮಾಜ ಸೇವೆ ಸಲ್ಲಿಸುತ್ತಾ ಅವರು ನಮ್ಮೊಂದಿಗೆ ನೂರುಕಾಲ ಚೆನ್ನಾಗಿ ಬಾಳಲಿ. ಅವರ ಮಾರ್ಗದರ್ಶನ ಸದಾ ನಮಗೆ ಸಿಗುತ್ತಿರಲಿ ಎಂದು ಹಾರೈಸೋಣ.

# ಮಮಕಾರದ ವ್ಯಕ್ತಿ

– ಬಿ. ಪಿ. ಶಿವಾನಂದರಾವ್

ಸುಮಾರು ೪೦ ವರ್ಷಗಳ ಹಿಂದಿನ ದೃಶ್ಯವಿದು; ನಾನು ನಮ್ಮ ದೊಡ್ಡಪ್ಪ ದಿ. ಬೈಂದೂರ ಶ್ರೀನಿವಾಸರಾಯರ ಮನೆಯಲ್ಲಿದ್ದೆ. ಆಗ ನನಗೆ ೧೮ರ ಹರೆಯ. ಕಲಿಯುವ ಹಂಬಲ; ಬಡತನದ ದಳ್ಳುರಿ; ಸಾಂಸ್ಕೃತಿಕ ಬದುಕಿನತ್ತ ಓಲಾಡುವ ಚಪಲ; ಇಂಥಹದ್ದೇ ದಿನಗಳಲ್ಲಿ ಸಾಗರದಲ್ಲಿದ್ದ ಶ್ರೀ ಮಹಾಬಲೇಶ್ವರ ಭಟ್ಟರ ಸ್ಟೇಶನರಿ ಅಂಗಡಿಯು ಆ ಕಾಲದಲ್ಲಿ ಈಗಿನ ಪೋಲೀಸ್ ಸ್ಟೇಶನ್ನಿನ ಪಕ್ಕದಲ್ಲಿತ್ತು. ಮನೆ ಚಾಮರಾಜ ಪೇಟೆಯಲ್ಲಿತ್ತು. ಸುಮಾರು ಒಂದೂವರೆ ಫರ್ಲಾಂಗ್ ದೂರ. ಈ ವ್ಯಕ್ತಿ ನಾನಿದ್ದ ಪಕ್ಕದ್ದೇ ಮನೆಯಲ್ಲವೇ ? – ಸದಾ ಬಿರುಸಿನ ಚಟುವಟಿಕೆಯಿಂದ ಓಡಾಡುತ್ತಾರೆ. ತ.ರಾ.ಸು., ಅ.ನ.,ಕೃ. ಕಟ್ಟೀಮನಿ; ಪುರಾಣಿಕ, ರಾಮಮೂರ್ತಿಯಂತಹ ಸುಪ್ರಸಿದ್ಧ ಆ ಕಾಲದ ಪ್ರಗತಿ ಪಂಥದ ಸಾಹಿತ್ಯ ರೂವಾರಿಗಳೆಲ್ಲಾ ಶ್ರೀ ಭಟ್ಟರ ಮನೆಯಲ್ಲಿ ಬೈಠಕ್; ಊಟೋಪಚಾರ–ವಾಗ್ದಾನ–ವಾಗ್ವೈಖರಿ; ವಾಗ್ವಿಲಾಸದಲ್ಲಿ ಖುಷಿ ಪಡುವ – ಪಡಿಸುವ ಸುಂದರದಿನಗಳವು. ಪುರಭವನದಲ್ಲೋ, ಗಾಂಧೀ ಮಂದಿರದಲ್ಲೋ ಮಹಾನ್ ಸಾಹಿತ್ಯ ಪ್ರಭೃತಿಗಳ ಭಾಷಣ. ಆ ಪೂರ್ಣ ಸಂಯೋಜನಾ ಶಿಲ್ಪಿ ಶ್ರೀ ಮಹಾಬಲೇಶ್ವರ ಭಟ್ಟರೇ. ಆಗ ನಾನು ಚಡ್ಡಿ ಧರಿಸುವ ಪೋರ; ಭಟ್ಟರು ಹೊಸದಾಗಿ ಮದುವೆಯಾದ ಹುಮ್ಮಸ್ಸಲ್ಲಿ ಹಾರುವ ಹಕ್ಕಿ. ಆಗ ನಾನು ಕಂಡ ಭಟ್ಟರ ಗಾತ್ರ ಗೋತ್ರಕ್ಕೂ ಈಗ ಕಾಣುತ್ತಿರುವ ಅದೇ ಗುಣಾಂಶಗಳಿಗೂ ತೂಗಿದರೆ; ವಾಹ್ ! ಆತ್ಯಾಶ್ಚರ್ಯ; ಎಂದರೆ; ಅದೇ ತುಸು ದೊಡ್ಡ ಉದ್ದನೆಯ ಚೂಪು ಮೂಗು; ಸುಂದರ ಕೋಲು ಮುಖ; ಬಿಳಿ ಪಂಚೆ; ಜುಬ್ಬಾ, ಸುಪುಷ್ಠ ದೇಹ, ಬಿಳೀ ವರ್ಣ; ದಟ್ಟ ಕೂದಲರಾಶಿ; ಯಾರೂ ಪಕ್ಕನೆ ಕಂಡರೆ ಶಬ್ದ ಆಡಲಿಕ್ಕೇ ಯೋಚಿಸಿ, ಆಡಬೇಕೆನ್ನುವ ಗಾಂಭೀರ್ಯದ ನಿಲುವು; ಆಗ–ಈಗ ? ಹ್ಞು ! ವ್ಯತ್ಯಾಸವಿಲ್ಲ.

ನನ್ನ ಪ್ರಿಯ ಜನರರಲ್ಲಿ ಒಬ್ಬರಾಗಿರುವ ಶ್ರೀ ಮಹಾಬಲೇಶ್ವರ ಭಟ್ಟರು ಸತ್ಯಾಂಶವೆಂದರೆ ಮಾತಿನಲ್ಲಿ ಮೃದುತ್ವ, ವಿಚಾರ ಗಾಂಭೀರ್ಯದಲ್ಲೂ ಪ್ರಗತಿ ಧೋರಣೆ; ಕಹಿ ಗುಳಿಗೆಗೆ ಸಿಹಿ ಲೇಪನವಿದ್ದಂತೆ ಆಗಾಗ ಕಹಿ ಪ್ರಸಂಗದಲ್ಲೂ ಮಿದುಹಾಸ್ಯ; ಸಾಹಿತ್ಯ ಸಂಸ್ಕೃತಿ–ಕಲೆ– ಪರಂಪರೆ– ಧರ್ಮ–ದೇವರು; ಈ

ವಿಚಾರದಲ್ಲಿ ಭಟ್ಟರು ತೋರುವ ಶ್ರದ್ಧಾವಂತಿಕೆ; ಆಗ ಹೇಗೋ ? ಈಗಲೂ ಯಥಾವತ್. ಅದೇ ಕಾರ್ಯತತ್ಪರತೆ; ಅದೇ ಕಾರ್ಯಕೌಶಲ್ಯ; ಅದೇ ಪ್ರೀತಿ - ಹೀಗೆ; ಇಷ್ಟೆಲ್ಲಾ ಅನುಭವಶೀಲತೆ, ಗುಣ, ಗಂಭೀರವದನ ಮಹಾಬಲೇಶ್ವರ ಭಟ್ಟರಲ್ಲಿ ಮಿಳಿತಗೊಂಡಿರುವುದು ಬಹಳ ಆಶ್ಚರ್ಯಾನಂದ ಎನಿಸುತ್ತದೆ. ಪ್ರಾಯಶಃ ಭಟ್ಟರಿಗೆ ಕನ್ನಡ ಸಾಹಿತ್ಯ ಕ್ಷೇತ್ರದ ಪ್ರತಿಭಾವಂತ ಲೇಖಕರೆಲ್ಲರ ಸ್ನೇಹ ಸೌಭಾಗ್ಯ ಸಾಗರದ ಜಲರಾಶಿಯಂತೆ ಲಭಿಸಿದೆ. ಭಟ್ಟರು ನಿಜವಾದ ಅರ್ಥದಲ್ಲಿ ಅಜಾತ ಶತ್ರು. ೧೯೬೯-೭೦ ಹೊತ್ತಿನಲ್ಲಿ ಸಾಹಿತ್ಯ ರಸಋಷಿ ಕುವೆಂಪುಗೆ ಸನ್ಮಾನ ನೀಡುವ ದಿಸೆಯಲ್ಲಿ ಆಗ ಸಾಗರದಲ್ಲಿಆರೆಂಟು ತಿಂಗಳು ನಡೆದಷ್ಟು ಸಾಹಿತ್ಯ ಚಟುವಟಿಕೆ-ನ ಭೂತೋ-ನ ಭವಿಷ್ಯತಿ ಅನ್ನುವಷ್ಟು ಅಸಾಮಾನ್ಯ, ಅಪರೂಪದ, ಅಗಾಧ ಕ್ರಿಯೆ, ಅಖಂಡ ಆನಂದ, ಸಂಭ್ರಮದ ದಿನಗಳವು.

ಇಂದು ನಮ್ಮ ನಾಡಿನಲ್ಲಿ ಸಾಹಿತ್ಯ-ಸಂಸ್ಕೃತಿ-ಕಲೆ-ಪರಂಪರಾಗತ ಮೌಲ್ಯಗಳಲ್ಲಿನಾವು ತೋರುತ್ತಿರುವ ಪ್ರೀತಿ ನಶಿಸುತ್ತಿದೆ. ವೈಜ್ಞಾನಿಕವಾಗಿ ಪ್ರಗತಿ ಸಾಧಿಸುತ್ತಿದ್ದೇವೆಂಬ ಭ್ರಮೆಯಲ್ಲಿ ಸಾಂಸ್ಕೃತಿಕವಾಗಿ, ಕಲಾತ್ಮಕವಾಗಿ ನಾವು ಅಧಃ ಪತನದತ್ತ ಸಾಗುತ್ತ ದರಿದ್ರರಾಗುತ್ತಿದ್ದೇವೆಂಬ ಅಂಶ ಮಾತ್ರಾ ಖೇದಕರ ಎಂತನ್ನಲೇಬೇಕಾಗಿದೆ. ಅಂತರಂಗದ ಶುದ್ಧಿಗಾಗಿ, ಶಾಂತಿಗಾಗಿ, ನೈರ್ಮಲ್ಯಕ್ಕಾಗಿ, ನಾವು ನಿರಾಸಕ್ತರಾಗುತ್ತ, ಭೋಗವಸ್ತುಗಳ, ಯಂತ್ರಗಳ ಮಧ್ಯೆ ಬದುಕನ್ನ ಕಳೆಯುತ್ತಿರುವುದನ್ನು ಎತ್ತರದಿಂದ ವಿವೇಚಿಸಿದಲ್ಲಿ ನಾವು ಎಡವಿದ ನೆನಪು ಆಗುತ್ತದೆ. ನೋವಾಗುತ್ತದೆ. ಹಾಗಾಗದಂತೆ ಜನತೆಯ ಹೃದಯ ಶ್ರೀಮಂತಿಕೆ ಬೆಳೆಸಲು ಆಗಾಗ ಸಾಹಿತ್ಯವು ಅವರ ಬದುಕನ್ನು ಶುದ್ಧೀಕರಿಸುವ ಕೈಂಕರ್ಯವನ್ನು ನಿಧಾನಗತಿಯಲ್ಲಾದರೂ ನಡೆಸಬೇಕಾದರೆ ನಿಜಕ್ಕೂ ಶ್ರೀ ಮಹಾಬಲೇಶ್ವರ ಭಟ್ಟರಂತಹ ಸಜ್ಜನರ ಮೂಲಕ ಸಾಧ್ಯವಾಯಿತು - ಸಾಧ್ಯವಾದೀತು-ಸಾಧ್ಯವಾಗಬೇಕು ಎನಿಸುತ್ತದೆ. ಸೋಲಿಗೆ ವಿರಸಕ್ಕೆ - ಭೀತಿಗೆ - ಅಪಮಾನಕ್ಕೆ - ನಷ್ಟಕ್ಕೆ, ದೇಹಾಲಸ್ಯಕ್ಕೆ ಭಯಭೀತರಾಗದೆ ಮೌನವಾಗಿ ಮುನ್ನಡೆದಿದ್ದಾರೆ. (ಭಟ್ಟರು ಮೌನವಾಗಿ ವಿವೇಚಿಸಿಕಾರ್ಯಕ್ಕೆ ನುಗ್ಗುವವರು ಅರ್ಥಾತ್ ಸಾಗರದ ಸಾಹಿತ್ಯ-ಸಂಸ್ಕೃತಿ ತಪಸ್ವಿ ಎಂಬುದೂ ಇವರಿಗೆ ಅನ್ವರ್ಥಕ ನಾಮವಾಗುತ್ತದೆ)

ಬಹುಶಃ ಈ ಶತಮಾನದ ಉತ್ತರಾರ್ಧದಲ್ಲಿ ಅದರಲ್ಲೂ ಎಂಭತ್ತರ ದಶಕದ ನಂತರ ಮಲೆನಾಡಿನ ಗರ್ಭಗುಡಿ 'ಸಾಗರ'ದಲ್ಲಿಕನ್ನಡದ ಸಾಹಿತ್ಯಕ-ಸಾಂಸ್ಕೃತಿಕ ಚಟುವಟಿಕೆಗಳು ಆಶಿಸಿದ್ದಷ್ಟು ನಡೆಯದಿರಲು ಜನಜೀವನದ ದುರ್ಬರದೆಸೆಗಳೂ ನಿರುತ್ಸಾಹಗಳೂ ಕಾರಣವೆಂದರೆ ತಪ್ಪೇನಿಲ್ಲ. ಇಂದು 'ಕನ್ನಡ' ಕಟ್ಟುವವವರಿಗಿಂತ - ಕಟ್ಟುವವರೇ ಹೆಚ್ಚಾಗಿದ್ದಾರೆ. ಇಷ್ಟಾದರೂ ಸಾಂಸ್ಕೃತಿಕ ತಪಸ್ವಿ ಶ್ರೀ ಮಹಾಬಲೇಶ್ವರ ಭಟ್ಟರ ಕ್ರಿಯಾಶೀಲ ವ್ಯಕ್ತಿತ್ವಕ್ಕೆ ಅಡ್ಡಿ, ಆತಂಕಗಳ ಭಯ

ತಟ್ಟಲಿಲ್ಲ. ಎದೆಗುಂದದ ಈ ಸಾಹಸಿಯು ಕೈಗೆ ಸಿಕ್ಕಷ್ಟೇ ಕೆಲವು ಉತ್ಸಾಹೀ ಜನರನ್ನು 'ಸಂಘ'ದಲ್ಲಿ ಕಟ್ಟಿಹಾಕಿ ಮೃದು ಮಾತಿನಿಂದ ದುಡಿಸಿಕೊಂಡಿದ್ದರಿಂದಲೇ ಕನ್ನಡ ಸಾಹಿತ್ಯದ ಪ್ರಸಂಗದಲ್ಲಿ - ಅನೇಕಾನೇಕ ಪ್ರಶಂಸನೀಯ ಚಟುವಟಿಕೆಗಳು ಅನೂಚಾನವಾಗಿ ನಡೆದವು. ಈ ದೀರ್ಘೇತಿಹಾಸದಲ್ಲಿ 'ಕುವೆಂಪು ಸನ್ಮಾನ' ಒಂದು ಅನುಪಮ ಸಾಧನೆ. ಈಸಾಧನೆಯ ಸಿದ್ಧಿಗಾಗಿ ದುಡಿದವರಲ್ಲಿ ಸನ್ಮಿತ್ರರಾದ ಶ್ರೀ ನಾ.ಡಿಸೋಜಾ ಹಾಗೂ ಶ್ರೀ ಶ್ರೀನಿವಾಸ ಉಡುಪರು ಮುಖ್ಯರಲ್ಲಿದ್ದ ಪ್ರಭೃತಿಗಳು. ಐವತ್ತು - ಅರವತ್ತರ ಕಾಲದಲ್ಲಿ ಸಾಗರದಲ್ಲಿ 'ಜಲಂಧರ ಪ್ರಕಟನಾಲಯ' - ಸಿದ್ಧಾರ್ಥದಲ್ಲೂ ಪುಸ್ತಕ ಸಾಗರವೇ ಆಗಿತ್ತು. ಲೇಖಕರ ಬೀಡು ಭಟ್ಟರ ಅಂಗಡಿಯೇ ಆಗಿತ್ತು. ಕಾರ್ಯಕ್ರಮದ ಹುಟ್ಟಿಗೆ ಸುಂದರ ತಾಣವೂ, ಜನ್ಮ ಸ್ಥಳವೂ ಆಗುತ್ತಿತ್ತು. ಸಮಾರಂಭಕ್ಕೆ ಉತ್ತೇಜಿತ ತಾಣವೂ ಭಟ್ಟರ ಅಂಗಡಿಯೇ. ಮಹಾಬಲೇಶ್ವರ ಭಟ್ಟರಿಗೆ ಅಂಗಡಿಯ ವ್ಯಾಪಾರಕ್ಕಿಂತ - ಸಾಹಿತ್ಯ - ಸಂಸ್ಕೃತಿಯ ಬಗೆಗಿನ ಚಿಂತನ-ಮಂಥನಗಳೇ ಹೆಚ್ಚಾಗಿದ್ದುದನ್ನು ನಾನೇ ಸ್ವತಃ ಕಂಡು ಬೆರಗಾಗಿದ್ದಿದೆ. ಬರೆದ ಕೆಲವೇ ಪುಸ್ತಕಗಳಲ್ಲೂ ಮಲೆನಾಡಿನ ಸಂಸ್ಕೃತಿ-ಜನ ಜೀವನದ ಹಲವು ಮುಖಗಳ ನೈಜ ದರ್ಶನ ಬಿಂಬಿಸಿದ್ದು, ನೀತಿ-ರೀತಿಯ ಚೌಕಟ್ಟಿನ ಒಳಗೇ ಚೆನ್ನಾಗಿ ಪ್ರಕಾಶಿಸಿದ್ದಿದೆ. ಅವೆಲ್ಲ ವಿಮರ್ಶಕರ ಅವಕೃಪೆಗೆ ಒಳಗಾದರೂ, ಓದುಗರ ಮನಸ್ಸನ್ನು ತಟ್ಟನೆ, ಗೆದ್ದಿದೆ.

ನಾಡು ನುಡಿಯ ಪವಿತ್ರಕೈಂಕರ್ಯ ನಡೆಸುವ ಮಹಾನ್ ಪಥದಲ್ಲಿ ಶ್ರೀ ಮಹಾಬಲೇಶ್ವರ ಭಟ್ಟರ ಇದುವರೆಗಿನ ಸಾಧನೆ; ಗಣನೀಯ, ಅನನ್ಯ, ಸ್ನೇಹಮಯ, ಸಹೃದಯ ಶೀಲತೆ, ಸವಿನುಡಿ; ಭಟ್ಟರ ಈ ಮೂರು ಆಸ್ತಿ - ಉಳಿದವರ ಒಲವನ್ನು ಗೆಲ್ಲುವ ತಾರಕಮಂತ್ರ ಎಂದರೆ ಅತಿಶಯೋಕ್ತಿ ಎನಿಸದು. ಹಲವಾರು ಸಂಘ-ಸಂಸ್ಥೆಗಳು ಕನ್ನಡದ ಹೆಸರಿನಲ್ಲಿ ಹುಟ್ಟಿಹರಿದು, ಕೊನೆಗೂ ಹರಿದು ಹೋದದ್ದಿದೆ. ಆದರೆ ಭಟ್ಟರು ಕಟ್ಟಿದ ಸಂಸ್ಥೆ ಈಗಲೂ ಜೀವಂತ; ಅವುಗಳ ಕಾರ್ಯಕ್ರಮ ಅನವರತ. ಇವರ ಕುಟುಂಬವೂ ವಸುದೈವ ಕುಟುಂಬದಂತೆ - ವಿಶಾಲ.

ಈಗ ಎಪ್ಪತ್ತರ ಹೊಸ್ತಿಲಲ್ಲಿದ್ದಾರೆ; ಮಹಾಬಲೇಶ್ವರ ಭಟ್ಟರು ಎಂಬ ಸಿಹಿ ಸುದ್ದಿಯ ಪತ್ರ ಓದಿ ನಿಬ್ಬೆರಗಾದೆ- ಎಲಾ ಇವರಾ! ಇಪ್ಪತ್ತರ ಹುರುಪು, ನವೋಲ್ಲಾಸದ ಕಾರಂಜಿಯಂತಿದ್ದಾರೆ ನಮ್ಮ ಭಟ್ಟರು ಎಂದು ನನ್ನ ಮನಸ್ಸು ನಿಜಕ್ಕೂ ಪುಳಕಗೊಂಡಿತು. ಕನ್ನಡದ ಕೆಲಸ ಇಂಥಾ ಸಜ್ಜನರಿಂದ ಕೆಲಕಾಲ ಅನುಚಾನವಾಗಿ ನಡೆಯುತ್ತಿರ ಬೇಕಾದರೆ ಶ್ರೀ ಭಟ್ಟರಂತಹ ನಿಷ್ಕಾಮ ಕರ್ಮಯೋಗಿಗಳ ಅಗತ್ಯ ನಿಜಕ್ಕೂ ತುಂಬು ಇದೆ. ಆ ಭಾಗ್ಯ ಎಲ್ಲರಿಗೂ ಅಲಭ್ಯ ಎಂಬುದು ಐವತ್ತೆಂಟರ ಪ್ರಾಯದ ನನ್ನ ಅನುಭವ. ಶ್ರೀ ಮಹಾಬಲೇಶ್ವರ ಭಟ್ಟರ ಅಭಿಮಾನಿ ಬಳಗ 'ಸಾಗರ' ದಂತೆಯೇ

ವಿಶಾಲ ಆಳ ವ್ಯಾಪ್ತಿಯುಳ್ಳದ್ದು. ಅವರೀಗ ಶ್ರೀ ಭಟ್ಟರ ಎಪ್ಪತ್ತರ ಹುಟ್ಟು ಹಬ್ಬದ ಆಚರಣೆಯ ಸಂಭ್ರಮೋತ್ಸಾಹದಲ್ಲಿದ್ದಾರೆ. ಅಭಿನಂದನ ಗ್ರಂಥ ಪ್ರಕಟಿಸಲಿದ್ದಾರೆ. ಆ ಸರ್ವ ಶಕ್ತ ಪರಮಾತ್ಮ ಶ್ರೀ ಭಟ್ಟರಿಗೆ ಆಯುರಾರೋಗ್ಯ ಈಗಿದ್ದಷ್ಟೇ ಚೈತನ್ಯ ಹುಮ್ಮಸ್ಸನ್ನು ನೀಡುತ್ತಾ ಕಾಪಾಡಲೆಂದು ಹಾರ್ದಿಕವಾಗಿ ಹಾರೈಸುತ್ತೇನೆ.

ಕೊನೆಯದಾಗಿ ಶ್ರೀ ಮಹಾಬಲೇಶ್ವರ ಭಟ್ಟರಂತಹ ಸಾತ್ವಿಕ ಸುವಿಚಾರಿ ವ್ಯಕ್ತಿಯನ್ನು ನೆನೆಸಿದಾಗ ಸುಪ್ರಸಿದ್ಧ ವಿದ್ವಾಂಸ H.W. Longfellow ನ ವ್ಯಾಖ್ಯೆಯೊಂದು ಸ್ಮರಣೆಯಾಗುತ್ತದೆ.

"Leaves of great men all remind us
How to make our life sublime
and departing leave behind us
foot prints on the sands of Time."

ಈ ಸುವ್ಯಾಖ್ಯೆಯು ನನ್ನ ಆಪ್ತರೂ, ಹಿರಿಯರೂ, ಸಜ್ಜನರೂ ಆದ ಶ್ರೀ ಮಹಾಬಲೇಶ್ವರ ಭಟ್ಟರನ್ನು ಸಾಂಕೇತಿಕಾರ್ಥದಲ್ಲಿ ನೆನೆಸಿದಲ್ಲಿ ಸುಯೋಗ್ಯ ಹಾರೈಕೆಯಾದೀತೆನ್ನುವ ಹಾಗೂ ಶ್ರೀ ಭಟ್ಟರಿಗೆ ಮುಂದೆಯೂ ಶುಭೇಚ್ಛೆಯೊಂದಿಗೆ ಈ ಕಿರುಲೇಖನಕ್ಕೆ ವಿರಾಮ ಬಯಸುತ್ತೇನೆ.

# ನಾನು ಕಂಡಂತೆ

- ಎನ್. ಹುಚ್ಚಪ್ಪ ಮಾಸ್ತರ

ಶ್ರೀ ಟಿ. ಮಹಾಬಲೇಶ್ವರ ಭಟ್ಟರನ್ನು ನಾನು ಕಳೆದ ೪೫ ವರ್ಷಗಳಿಂದ ನೋಡುತ್ತಿದ್ದೇನೆ. ಸಾಗರದಲ್ಲಿ ಸಾವಿರಾರು ಯುವಕರಿಗೆ, ಸಾಹಿತ್ಯಾಸಕ್ತರಿಗೆ ಸಾಹಿತ್ಯದ ರಸದೌತಣವನ್ನು ಉಣಬಡಿಸಿದ ಮಹಾನುಭಾವರು.

ನಾನು ಮಾಧ್ಯಮಿಕ ಶಾಲೆಯಲ್ಲಿ ಓದುತ್ತಿದ್ದಾಗ ಭಟ್ಟರು ೧೯೪೭ರಲ್ಲಿ ಜಲಂಧರ ಪ್ರಕಟನಾಲಯ ಮತ್ತು ಸಾಹಿತ್ಯ ಕೃತಿಗಳ ಪುಸ್ತಕ ಮಳಿಗೆಯನ್ನು ಈಗಿರುವ ಸಾಗರ ತಾಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘದ ಕಛೇರಿಯ ಕಟ್ಟಡದಲ್ಲಿ ಪ್ರಾರಂಭಿಸಿದರು. ಕುಗ್ವೆಯಿಂದ ಸಾಗರಕ್ಕೆ ಪ್ರತಿದಿವಸ ಶಾಲೆಗೆ ಓಡಾಡುತ್ತಿದ್ದೆ. ನಾನು ಹತ್ತು ವರ್ಷದ ಹುಡುಗ ನನ್ನಲ್ಲಿ ಸಾಹಿತ್ಯಾಸಕ್ತಿ ಇನ್ನೂ ಮೂಡಿರಲಿಲ್ಲ. ಶಾಲೆಯ ಬಿಡುವಿನ ಸಮಯದಲ್ಲಿ ಇವರ ಪುಸ್ತಕ ಮಳಿಗೆಯ ಹತ್ತಿರ ಹೋಗಿ ರಸ್ತೆಯಲ್ಲಿ ನಿಂತು ಕುತೂಹಲದಿಂದ ನೋಡುತ್ತಿದ್ದೆ. ಪುಸ್ತಕಗಳನ್ನು ನೋಡುವುದೇ ನನಗೊಂದು ಆನಂದದ ವಿಷಯವಾಗಿತ್ತು. ಹತ್ತಿರ ಹೋಗಲು ಧೈರ್ಯವಿರಲಿಲ್ಲ. ಭಟ್ಟರನ್ನು ಮಾತನಾಡಿಸುವುದಂತೂ ದೂರವೇ. ಭಟ್ಟರು ಶುಭ್ರವಾದ ಶ್ವೇತ ವಸ್ತ್ರಧಾರಿಯಾಗಿ ಅಂಗಡಿಯಲ್ಲಿ ಕುಳಿತಿರುತ್ತಿದ್ದರು. ಆ ಕಾಲದಲ್ಲಿ ಪುಸ್ತಕ ವ್ಯಾಪಾರ ಹೆಚ್ಚಾಗಿ ಇರಲಿಲ್ಲ. ಜನರಲ್ಲಿ ಇನ್ನೂ ಪುಸ್ತಕ ಕೊಂಡು ಒದುವ ಹವ್ಯಾಸ ಬೆಳೆದಿರಲಿಲ್ಲ. ಪುಸ್ತಕಗಳನ್ನು ಅಚ್ಚುಕಟ್ಟಾಗಿ ಜೋಡಿಸಿರುತ್ತಿದ್ದ ಮಳಿಗೆ ಸಾಗರದಲ್ಲಿಯೇ ತುಂಬಾ ವಿಶಿಷ್ಟವಾಗಿ ಕಾಣುತ್ತಿತ್ತು. ನಾನಂತೂ ಅನೇಕ ವರ್ಷಗಳವರೆಗೆ ಬೆರಗುಗಣ್ಣಿನಿಂದ ನೋಡುತ್ತಿದ್ದೆ.

ಪ್ರೌಢ ಶಾಲೆಗೆ ಬಂದನಂತರ ನನಗೆ ಸಾಹಿತ್ಯ ಓದುವ ಹವ್ಯಾಸ ಬೆಳೆಯಿತು. ಆಗ ನಾ.ಡಿಸೋಜಾರವರ ಪರಿಚಯವಾಯಿತು. ಡಿಸೋಜರವರು ಅವರ ಅಣ್ಣನವರ ಮನೆಯಲ್ಲಿದ್ದು, ವಿದ್ಯಾಭ್ಯಾಸ ಮಾಡುತ್ತಿದ್ದರು. ಇವರ ಮನೆಯ ಪಕ್ಕದಲ್ಲಿ ನನ್ನ ಸ್ನೇಹಿತ ನರಹರಿಯ ಮನೆಯಲ್ಲಿದ್ದು ನಾನು ಶಾಲೆಗೆ ಹೋಗುತ್ತಿದ್ದೆ. ಇವರಿಬ್ಬರ ಸಂಪರ್ಕದಿಂದ ಹಳ್ಳಿಯ ಹುಡುಗನಾದ ನನಗೆ ಸಾಹಿತ್ಯ ಕೃತಿಗಳನ್ನು ಓದುವ ಹವ್ಯಾಸ ಬೆಳೆಯಿತು. ಆಕಾಲದಲ್ಲಿ, ಅ.ನ.ಕೃ, ತ.ರಾ.ಸು, ಬೀಚಿ, ರಾಮಮೂರ್ತಿ ಇವರ ಕಾದಂಬರಿಗಳು ತುಂಬಾ ಜನಪ್ರಿಯವಾಗಿದ್ದವು. ಭಟ್ಟರು ಆವಾಗಲೇ

ಸಾಗರಕ್ಕೆ ನಾಡಿನ ಪ್ರಸಿದ್ಧ ಸಾಹಿತಿಗಳನ್ನು ಕರೆಯಿಸಿ ಉಪನ್ಯಾಸ ಮಾಡಿಸುತ್ತಿದ್ದರು. ಆಗ ಪುರಸಭೆಯ ಒಳ ಸಭಾಂಗಣದಲ್ಲಿ ಉಪನ್ಯಾಸಗಳು ಜರುಗುತ್ತಿದ್ದವು. ಇವರು ನಡೆಸುತ್ತಿದ್ದ ಎಲ್ಲಾ ಕಾರ್ಯಕ್ರಮಗಳಿಗೂ ಸಭಾಂಗಣವು ಪ್ರೇಕ್ಷಕರಿಂದ ಕಿಕ್ಕಿರಿದು ತುಂಬಿರುತ್ತಿತ್ತು. ಒಮ್ಮೆ ಭಟ್ಟರು ಅ.ನ.ಕೃ. ರವರನ್ನು ಕರೆಯಿಸಿ ಉಪನ್ಯಾಸ ಮಾಡಿಸಿದರು. ಅ.ನ.ಕೃ. ರವರು ಮೂರುಗಂಟೆಗಳ ಕಾಲ ನಿರರ್ಗಳವಾಗಿ, ಅದ್ಭುತವಾಗಿ ಮಾತನಾಡಿದರು. ಆ ದಿವಸ ನೆರೆದ ಸಭಿಕರು ರೋಮಾಂಚಿತರಾದರು. ನನಗಂತೂ ಆ ದಿವಸದ ಸಭೆ ಇಂದಿಗೂ ಅವಿಸ್ಮರಣೀಯವಾಗಿದೆ.

ಸ್ವಾತಂತ್ರ್ಯಾ ನಂತರ ಶ್ರೀ ಟಿ. ಮಹಾಬಲೇಶ್ವರ ಭಟ್ಟರು ಕಾಂಗ್ರೆಸ್‌ನಲ್ಲಿಯೇ ಉಳಿದರು. ಆ ಪಕ್ಷದ ಸಾಮಾನ್ಯ ಕಾರ್ಯಕರ್ತರಾಗಿ, ತಾಲೂಕು ಕಾರ್ಯದರ್ಶಿ, ಅಧ್ಯಕ್ಷರಾಗಿ, ಜಿಲ್ಲಾ ಉಪಾಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ. ಭಟ್ಟರು ತಾಲ್ಲೂಕು ಕಾಂಗ್ರೆಸ್ ಅಧ್ಯಕ್ಷರಾಗಿದ್ದಾಗ ಉತ್ತಮ ಕೆಲಸ ಮಾಡಿದರು. ಪಕ್ಷವನ್ನು ತಾಲ್ಲೂಕಿನಾದ್ಯಂತ ಸಂಘಟಿಸಿದರು. ಸಾಗರದಲ್ಲಿರುವ ಈಗಿನ 'ಗಾಂಧೀಮಂದಿರ' ಭಟ್ಟರ ಶ್ರಮದಿಂದ ನಿರ್ಮಾಣವಾಯಿತು. ಆಗಿನ ಮುಖ್ಯಮಂತ್ರಿಗಳಾದ ಶ್ರೀ ಕೆಂಗಲ್ ಹನುಮಂತಯ್ಯನವರೊಡನೆ ನಿಕಟ ಸಂಪರ್ಕವನ್ನು ಹೊಂದಿದ್ದರು. ಭಟ್ಟರು ಕಾಂಗ್ರೆಸ್ ಪಕ್ಷದಲ್ಲಿದ್ದರೂ ಅವರು ಸೌಜನ್ಯ, ಶಿಸ್ತು, ಘನತೆ, ಗಾಂಭೀರ್ಯವನ್ನು ಎಂದೂ ಕಳೆದುಕೊಂಡವರಲ್ಲ. ಅವರು ವಿರೋಧ ಪಕ್ಷದವರನ್ನು ಕೂಡಾ ತುಂಬಾ ಗೌರವದಿಂದ ಕಾಣುತ್ತಿದ್ದರು. ನಾನು ಆಗ ಡಾ॥ರಾಮಮನೋಹರ ಲೋಹಿಯಾರವರ ಸಮಾಜವಾದಿ ಪಕ್ಷದ ಅಭಿಮಾನಿಯಾಗಿದ್ದೆ, ಮತ್ತು ಆ ಪಕ್ಷದ ತತ್ವ ಸಿದ್ಧಾಂತಗಳಿಗೆ ನಿಷ್ಠನಾಗಿದ್ದೆ. ಭಟ್ಟರು ಆಗ ಅಧಿಕಾರರೂಢ ಪಕ್ಷದ ಪ್ರಭಾವಿ ನಾಯಕರಾಗಿದ್ದರು. ನಾನು ಸರ್ಕಾರಿ ಸೇವೆಯಲ್ಲಿದ್ದರೂ ಕಾಂಗ್ರೆಸ್ ಪಕ್ಷದ ವಿರುದ್ಧವೇ ಕೆಲಸ ಮಾಡುತ್ತಿದ್ದೆ. ಭಟ್ಟರಿಗೂ ನನ್ನ ರಾಜಕೀಯ ಚಟುವಟಿಕೆಗಳು ಗೊತ್ತಿರುತ್ತಿದ್ದವು. ಆದರೆ ಭಟ್ಟರು ನನಗೆ ಯಾವುದೇ ರೀತಿಯ ಕಿರುಕುಳ ಕೊಟ್ಟವರಲ್ಲ. ರಾಜಕೀಯ ಸೇಡು, ದ್ವೇಷ, ಸಂಕುಚಿತ, ಕ್ಷುಲ್ಲಕ ಭಾವನೆಗಳನ್ನು ಎಂದೂ ಭಟ್ಟರು, ಯಾರಮೇಲೂ ತೋರಿಸಿದವರಲ್ಲ. ಈ ಕಾರಣಗಳಿಂದ ಇಂದಿಗೂ ಕೂಡ ಭಟ್ಟರ ಬಗ್ಗೆನನಗೆ ಅಪಾರ ಗೌರವ, ಅಭಿಮಾನ.

ರಾಜಕೀಯ ಕ್ಷೇತ್ರದಲ್ಲಿ ಭಟ್ಟರು ಎತ್ತರವಾದ ಸ್ಥಾನಕ್ಕೆ ಏರಲು ಆಗಲಿಲ್ಲ. ಅವರಲ್ಲಿರುವ ಸಾಹಿತ್ಯಾಸಕ್ತಿ ಭಟ್ಟರನ್ನು ಸಂಪೂರ್ಣವಾಗಿ ರಾಜಕೀಯದಲ್ಲಿ ತೊಡಗಿಸಿಕೊಳ್ಳಲು ಬಿಡಲಿಲ್ಲ. ಭಟ್ಟರನ್ನು ಸಾಹಿತ್ಯ ಕ್ಷೇತ್ರಕ್ಕೆ ಸದಾಕಾಲ ಜಗ್ಗಿ ಎಳೆಯುತ್ತಲೇ ಇತ್ತು.. ಹಾಗಾಗಿ ಕೆಲವು ಕಾಲ ರಾಜಕೀಯವನ್ನು ತೊರೆದು ಸಾಹಿತ್ಯ ಚಟುವಟಿಕೆಗಳಲ್ಲಿ ತೊಡಗುತ್ತಿದ್ದರು.

೧೯೬೮ರಲ್ಲಿ ಭಟ್ಟರು ಕನ್ನಡ ಸಂಘವನ್ನು ಸ್ಥಾಪಿಸಿದರು. ಈ ಸಂಘದ ಮೂಲಕ ಕನ್ನಡ ಸಾಹಿತ್ಯ ಸೌರಭವನ್ನು ತಾಲೂಕಿನಲ್ಲಿ ಹಂಚುವ ಕಾರ್ಯದಲ್ಲಿ ಮುಳುಗಿದರು. ಈ ಅವಧಿಯಲ್ಲಿ ರಾಜಕೀಯದಿಂದ ದೂರವಾದರು. ಸಾಹಿತ್ಯ ಚಟುವಟಿಕೆಗಳನ್ನು ಹೆಚ್ಚುಮಾಡಿದರು. ಕನ್ನಡ ಸಂಘದ ಅಧ್ಯಕ್ಷರಾದ ಎಂಟು ವರ್ಷಗಳಲ್ಲಿ ನಾಡಿನ ಉದ್ದಾಮ ಸಾಹಿತಿಗಳನ್ನು ಸಾಗರಕ್ಕೆ ಕರೆಯಿಸಿ ಸನ್ಮಾನಿಸಿದರು. ಕುವೆಂಪು ಸನ್ಮಾನ ಸಮಾರಂಭವಂತೂ ನ ಭೂತೋ ನ ಭವಿಷ್ಯತಿ. ಆಳೆತ್ತರದ ಶ್ರೀಗಂಧದ ಹಾರಗಳ ರಾಶಿಯಲ್ಲಿ ಕುವೆಂಪುರವನ್ನು ಮುಳುಗಿಸಿದರು. ಕುವೆಂಪುರವರು ನೆನಪಿನ ದೋಣಿಯಲ್ಲಿ ಸಾಗರದ ಸನ್ಮಾನ ಸಮಾರಂಭವನ್ನು ಸ್ಮರಿಸಿಕೊಂಡಿದ್ದಾರೆ.

೧೯೮೦ ಡಿಸೆಂಬರ್ ೨೦,೨೧ರಂದು ಎರಡು ದಿವಸ ಸಾಗರದಲ್ಲಿ ಶಿವಮೊಗ್ಗ ಜಿಲ್ಲಾ ದ್ವಿತೀಯ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಎಸ್.ವಿ. ಪರಮೇಶ್ವರ ಭಟ್ಟರ ಅಧ್ಯಕ್ಷತೆಯಲ್ಲಿ ಶ್ರೀಯುತ ಭಟ್ಟರು ಸಂಘಟಿಸಿದ್ದರು. ಆ ಸಮ್ಮೇಳನದ ವ್ಯವಸ್ಥೆ, ಪ್ರತಿಯೊಂದು ಕಾರ್ಯಕ್ರಮದ ಶಿಸ್ತು, ಅಚ್ಚುಕಟ್ಟುತನವನ್ನು ನೋಡಿ ತುಂಬಾ ಜನರು ಮೂಗಿನ ಮೇಲೆ ಬೆರಳಿಟ್ಟುಕೊಳ್ಳುವಂತಾಗಿತ್ತು. ಯಾವುದೇ ರಾಜ್ಯ ಸಮ್ಮೇಳನಕ್ಕೆ ಕಡಿಮೆಯಿರಲಿಲ್ಲ.

ಕಳೆದ ಐದು ದಶಕಗಳಿಂದ ಭಟ್ಟರು ಸಾಹಿತ್ಯಿಕವಾಗಿ ಸಾವಿರಾರು ಕಾರ್ಯಕ್ರಮಗಳನ್ನುನಡೆಸಿದ್ದಾರೆ. ಯಾವುದೇ ಕಾರ್ಯಕ್ರಮ ನಡೆಸಿದರೂ ಆ ಕಾರ್ಯಕ್ರಮದಲ್ಲಿ ಶಿಸ್ತು, ಅಚ್ಚುಕಟ್ಟುತನ ಎದ್ದು ಕಾಣುತ್ತವೆ. ಕರ್ನಾಟಕದ ಪ್ರಸಿದ್ಧ ಸಾಹಿತ್ಯಾಸಕ್ತಿಯ ಅಭಿರುಚಿಯನ್ನು ಮೂಡಿಸಿ, ಜನಸಾಗರಕ್ಕೆ ಸಾಹಿತ್ಯ ಸಂಸ್ಕಾರವನ್ನೇ ಧಾರೆಯೆರೆದಿದ್ದಾರೆ.

ಶ್ರೀ ಮಹಾಬಲೇಶ್ವರ ಭಟ್ಟರು ಸಹಕಾರಿ ಕ್ಷೇತ್ರದಲ್ಲಿಯೂ ಅತ್ಯಂತ ಪ್ರಾಮಾಣಿಕವಾಗಿ, ನಿಸ್ವಾರ್ಥತೆಯಿಂದ ದುಡಿದಿದ್ದಾರೆ. ಸಾಗರ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘದ ಅಧ್ಯಕ್ಷರಾಗಿ, ಮಲೆನಾಡು ಅಡಿಕೆ ಮಾರಾಟ ಸಹಕಾರ ಸಂಘದ ಜಿಲ್ಲಾ ಉಪಾಧ್ಯಕ್ಷರಾಗಿ, ಸಾಗರ ಕೃಷಿ ಭೂ ಅಭಿವೃದ್ಧಿ ಬ್ಯಾಂಕಿನ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ.

ಶ್ರೀ ಭಟ್ಟರು ರಾಜಕೀಯ, ಸಾಹಿತ್ಯ, ಸಾಮಾಜಿಕ ಸೇವೆ, ಸಹಕಾರ ಕ್ಷೇತ್ರಗಳಲ್ಲಿ ಅಪಾರವಾಗಿ ಸೇವೆಯನ್ನು ಕಳೆದ ಐವತ್ತು ವರ್ಷಗಳಿಂದ ನಿರಂತರವಾಗಿ ಮಾಡುತ್ತಲೇ ಇದ್ದಾರೆ. ಭಟ್ಟರು ಎಲ್ಲಿಯೇ ಇರಲಿ ಅಲ್ಲಿ ಶಿಸ್ತು ಮತ್ತು ಅಚ್ಚುಕಟ್ಟುತನದ ಹೊಸದೃಷ್ಟಿಗಳಿರುತ್ತವೆ. ಅವರ ನಡೆ, ನುಡಿ, ವೇಷ ಭೂಷಣಗಳೆಲ್ಲವೂ ಶಿಸ್ತುಮಯ. ಅಷ್ಟೇ ಏಕೆ ? ಅವರ ಇಡೀ ಜೀವನವೇ ಶಿಸ್ತು ಮತ್ತು ಅಚ್ಚುಕಟ್ಟುತನದಿಂದ ತುಂಬಿದೆ.

೧೯೯೨ ರಿಂದ ಸಂಪೂರ್ಣವಾಗಿ ರಾಜಕೀಯವನ್ನು ತೊರೆದು, ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಅನೇಕ ಸಾಹಿತ್ಯಿಕ ಕಾರ್ಯಕ್ರಮಗಳನ್ನು ನಡೆಸುತ್ತಿದ್ದಾರೆ.

ಶ್ರೀಯುತ ಭಟ್ಟರು ವಿವಿಧ ಕ್ಷೇತ್ರಗಳಲ್ಲಿ ಅಪಾರವಾಗಿ ಸೇವೆ ಸಲ್ಲಿಸಿ, ಸಾಗರದ ಮಹಾಜನತೆಯ ಪ್ರೀತಿ ವಿಶ್ವಾಸಗಳಿಗೆ ಪಾತ್ರರಾಗಿದ್ದಾರೆ. ದೇವರು ಅವರಿಗೆ ಆಯುರಾರೋಗ್ಯವನ್ನು ನೀಡಿ, ಅನೇಕ ವರ್ಷಗಳವರೆಗೆ ಇನ್ನೂ ಹೆಚ್ಚಿನ ರೀತಿಯಲ್ಲಿ, ನವ್ಯ ಮಾದರಿಯಲ್ಲಿ ಸಾಹಿತ್ಯ ಸೇವೆಯನ್ನು ಮಾಡುತ್ತಿರಲಿ ಎಂದು ಹಾರೈಸುತ್ತೇನೆ.

# ಉಪಕಾರದ ಮನುಷ್ಯ

– ಟಿ. ಎಂ. ಶೇಷಗಿರಿ

ಶ್ರೀ ಟಿ. ಮಹಾಬಲೇಶ್ವರ ಭಟ್ಟರ ಜೊತೆಗೆ ನನಗೆ ಎರಡು ರೀತಿಯ ಸಂಬಂಧಗಳಿವೆ. ಒಂದು ದೂರದ ಸಂಬಂಧ. ಮತ್ತೊಂದು ಹತ್ತಿರದ ಸಂಬಂಧ. ಕೌಟುಂಬಿಕ ಕಾರಣಗಳಿಂದ ಏರ್ಪಟ್ಟ ಸಂಬಂಧ ಎಷ್ಟು ದೂರದ್ದೆಂದರೆ ಅದೊಂದು ಸಂಬಂಧ ಹೌದೋ ? ಅಲ್ಲವೋ ? ಅನ್ನುವಷ್ಟು. ಈ ಸಂಬಂಧದಿಂದ ನಾನು ಮಹಾಬಲೇಶ್ವರ ಭಟ್ಟರಿಗೂ - ಮಹಾಬಲೇಶ್ವರ ಭಟ್ಟರು ನನಗೂ ಹತ್ತಿರವಾಗುವುದಿಲ್ಲ ಎಂಬುದು ನಿಜ. ಆದರೆ ಸಾಹಿತ್ಯಕ ಕಾರಣಗಳಿಂದ ಉಂಟಾದ ಸಂಬಂಧದಿಂದ ಮಹಾಬಲೇಶ್ವರ ಭಟ್ಟರು ನನಗೆ ಹತ್ತಿರದವರಾಗುತ್ತಾರೆ. ಹಾಗೆ ನೋಡಿದರೆ ಸಾಗರ ತಾಲ್ಲೂಕಿನ ಎಲ್ಲಾ ಸಾಹಿತ್ಯಾಸಕ್ತರೂ ಭಟ್ಟರ ಹತ್ತಿರದ ಸಂಬಂಧಿಗಳೇ, ಹತ್ತಿರದವರಾಗಲೇ ಬೇಕು. ತಾಲ್ಲೂಕು ಮಟ್ಟದ ಎಲ್ಲಾ ಸಾಹಿತಿಗಳ, ಸಾಹಿತ್ಯಾಸಕ್ತರ ಜವಾಬ್ದಾರಿಗಳನ್ನು ಅವರು ಹೊತ್ತಿದ್ದಾರೇನೋ ಎಂದು ನನಗನ್ನಿಸುತ್ತದೆ. ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಅವರು ಆ ಸ್ಥಾನದಲ್ಲಿರುವುದಂತೂ ನಿಜ. ಸ್ಥಾನದಲ್ಲಿರುವುದಷ್ಟೇ ಅಲ್ಲ, ಅವರ ಎಲ್ಲಾ ಜವಾಬ್ದಾರಿಗಳನ್ನೂ ಅರಿತುಕೊಂಡವರಾಗಿದ್ದಾರೆ. ಎಲ್ಲಾ ಸಾಹಿತ್ಯಾಸಕ್ತರ ಸಮಸ್ಯೆಗಳೊಂದಿಗೆ ಅವರು ಸ್ಪಂದಿಸುತ್ತಲೇ ಇರುತ್ತಾರೆ. ಎಲ್ಲರ ಸಮಸ್ಯೆಯೊಂದಿಗೆ ಅವರು ಜವಾಬ್ದಾರಿಯಿಂದ ಸ್ಪಂದಿಸುತ್ತಿರುವುದರಿಂದ, ಎಲ್ಲರೂ ಅವರ ಸ್ಥಾನದ ಸಮಸ್ಯೆಯೊಂದಿಗೆ ಸ್ಪಂದಿಸುವುದು ವಿವೇಕವಾಗುತ್ತದೆ. ಮಹಾಬಲೇಶ್ವರ ಭಟ್ಟರಂತಹ ಚಟುವಟಿಕೆಯುಳ್ಳವರನ್ನು ಅಧ್ಯಕ್ಷರಾಗಿ ಪಡೆದೂ ಇಲ್ಲಿನ ಸಾಹಿತ್ಯಾಸಕ್ತರು ಅವರ ಸಾಮರ್ಥ್ಯದ ಗರಿಷ್ಠ ಪ್ರಯೋಜನವನ್ನು ದೊರಕಿಸಿಕೊಳ್ಳಲಿಲ್ಲ-ಎಂದೇ ನನ್ನ ಭಾವನೆ. ಇತರರನ್ನು ಮಾತ್ರ ನಾನಿಲ್ಲಿ ಆಕ್ಷೇಪಿಸಲು ಹೊರಟಿಲ್ಲ; ಸ್ವತಃ ನನ್ನನ್ನೂ ಒಳಪಡಿಸಿಕೊಂಡು ನಾನೀ ಮಾತುಗಳನ್ನು ಹೇಳಲು ನನಗೆ ಸಂಕೋಚವೇನೂ ಇಲ್ಲ.

ಶ್ರೀ ಭಟ್ಟರು ಬರೆದ ಎಲ್ಲಾ ಸಾಹಿತ್ಯವನ್ನು ನಾನು ಓದಿಲ್ಲ. ಅದರಲ್ಲೂ ಅವರ ಸೃಜನಶೀಲ ಸಾಹಿತ್ಯ. ಕಥೆ-ಕಾದಂಬರಿ, ಕವನ ಸಂಕಲನ ಇವ್ಯಾವುದನ್ನೂ ನಾನು ಓದಿದವನಲ್ಲ. ಆದರೆ ಅವರ ಸಾಹಿತ್ಯದ ವಿವರಗಳ ಮೇಲಿಂದ ಅವರು

ಸೃಜನ ಶೀಲ ಸಾಹಿತ್ಯಕ್ಕಿಂತ, ಸೃಜನೇತರ ಸಾಹಿತ್ಯ (ಲೇಖನ, ಪ್ರಬಂಧ)ದಲ್ಲಿ ಹೆಚ್ಚುತೊಡಗಿದ್ದಾರೆಂದು ನನಗೆ ತೋರುತ್ತದೆ. ಸಾಹಿತ್ಯದ ಪ್ರಭೇದಗಳಲ್ಲಿ ಈಗ ಒಂದಕ್ಕಿಂತ ಒಂದು ಹೆಚ್ಚು ಅಥವಾ ಕಡಿಮೆ ಎಂಬುದಿಲ್ಲ. ಕಥೆ, ಕಾದಂಬರಿ, ಕಾವ್ಯ ಬರೆಯುವವರು ಮಾತ್ರಾ ನಿಜವಾದ ಬರಹಗಾರರೆಂಬ ಭಾವನೆ ಇದ್ದ ಕಾಲವೊಂದಿತ್ತು. ಕಾಲ ಬದಲಾದಂತೆ, ಸಾಹಿತ್ಯದ ಪರಿಕಲ್ಪನೆಗಳು ಬದಲಾಗಿ, ಸೃಜನೇತರ ಸಾಹಿತ್ಯದ ಮೂಲಕವೇ ಹಲವರು ಕನ್ನಡ ಸಾಹಿತ್ಯವನ್ನು ಸಮೃದ್ಧಗೊಳಿಸಿ ಪ್ರಸಿದ್ಧರಾದುದನ್ನುಕಾಣುತ್ತೇವೆ. ನಾನು ಮೊದಲೇ ಹೇಳಿದ್ದೇನೆ - ಶ್ರೀ ಭಟ್ಟರ 'ಕಾದಂಬರಿ-'ಕವನ ಸಂಕಲನ'-ನಾನು ಓದಿಲ್ಲ. ಕನ್ನಡದ ಸಾಹಿತ್ಯ ವಿಮರ್ಶೆ ಅವರ ಕೃತಿಗಳನ್ನು ಗುರುತಿಸಿದಂತೆ ಕಂಡು ಬರುವುದಿಲ್ಲವಾದ್ದರಿಂದ, ಭಟ್ಟರ ಕಾದಂಬರಿ, ಕವನ ಸಂಕಲನಗಳು ಅಷ್ಟೊಂದು ಮಹತ್ವದ ಕೃತಿಗಳೆಂದು ತಿಳಿಯಲು ಏಕೋ ನನಗೆ ಸಾಧ್ಯವಾಗುತ್ತಿಲ್ಲ. ಕನ್ನಡ ವಿಮರ್ಶೆ ಅವರ ಕೃತಿಗಳನ್ನು ಕೈಗೆತ್ತಿಕೊಳ್ಳದಿರುವುದಕ್ಕೆ ಬೇರೆ ಕಾರಣಗಳೂ ಇರಬಹುದು. ಭಟ್ಟರ ಕೃತಿಗಳಿಗೆ ಕನ್ನಡ ಸಾಹಿತ್ಯ ವಿಮರ್ಶೆ ನ್ಯಾಯ ಒದಗಿಸದೇ ಇದ್ದಿರಲೂ ಬಹುದು. ಹಾಗೆಂದು ವಿಮರ್ಶೆಯ ಕುರಿತಾಗಿ ಖಚಿತವಾಗಿ ಹೇಳಲು ನನಗೀಗ ಸಾಧ್ಯವಾಗುತ್ತಿಲ್ಲ. ಯಾಕೆಂದರೆ ಅದಕ್ಕಿಂತ ಮುಂಚೆ ಮಹಾಬಲೇಶ್ವರ ಭಟ್ಟರ ಕೃತಿಗಳನ್ನು ನಾನು ಓದಿರಬೇಕಾಗುತ್ತದೆ. ಅದೇನೇ ಇದ್ದರೂ, ಆ ದಿಕ್ಕಿನ ಅವರ ಪ್ರಯತ್ನವನ್ನಂತೂ ನಾನು ಮೆಚ್ಚುತ್ತೇನೆ. ಏಕೆಂದರೆ-ಸಾಹಿತ್ಯದಷ್ಟೇ ರಾಜಕಾರಣ, ಸಹಕಾರ ಕ್ಷೇತ್ರದಲ್ಲೂ ಅವರ ಸಾಧನೆಗಳಿವೆ. ರಾಜಕಾರಣದಲ್ಲಿ ತೊಡಗಿಕೊಂಡವರಿಗಂತೂ ಸಾಹಿತ್ಯದ ಗಂಧವೇ ಇಲ್ಲದಿರುವುದು ಸಾಮಾನ್ಯವಾಗಿದೆ. ರಾಜಕಾರಣದಲ್ಲಿ - ಸಹಕಾರ ಕ್ಷೇತ್ರದಲ್ಲಿ ಬದುಕಿನ ಇತರ ಜಂಜಡಗಳಲ್ಲಿ ತೊಡಗಿಕೊಂಡು ಸಾಹಿತ್ಯದಲ್ಲಿ ಕ್ರಿಯಾಶೀಲರಾಗುವವರು ತೀರಾ ಅಪರೂಪ. ಇಂಥಹ ಅಪರೂಪದ ವ್ಯಕ್ತಿತ್ವ ಶ್ರೀ ಮಹಾಬಲೇಶ್ವರ ಭಟ್ಟರೆಂದು ನನ್ನ ತಿಳುವಳಿಕೆ.

ಶ್ರೀ ಭಟ್ಟರ ಸೃಜನೇತರ ಸಾಹಿತ್ಯವನ್ನಾದರೂ, ನಾನು ಓದತೊಡಗಿದ್ದು ತೀರಾ ಇತ್ತೀಚಿಗೆ. 'ಸಂಯುಕ್ತ ಕರ್ನಾಟಕ'ದಲ್ಲಿ ಅವರೊಬ್ಬ ಅಂಕಣಕಾರರಾಗಿ ಬರೆಯುತ್ತಾರೆಂದು ತಿಳಿದಾಗ ಮೊದಲು ನನಗೆ ಆಶ್ಚರ್ಯವೇ ಆಗಿತ್ತು. ನಿಯಮಿತವಾಗಿ ಒಂದು ಅಂಕಣವನ್ನು ನಿರ್ವಹಿಸುವುದು ಸುಲಭದ ಮಾತಲ್ಲ. ಭಟ್ಟರಿಗೆ ಜೀವನದ ಅಪಾರ ಅನುಭವಗಳೇನೋ ಇರಬಹುದ; ಆದರೆ ಅದನ್ನೊಂದು ಸಾಹಿತ್ಯದಲ್ಲಿ ಸಾಂದ್ರಗೊಳಿಸಿ, ಆಕರ್ಷಕಗೊಳಿಸುವುದೂ ಒಂದು ಸಾಧನೆಯೇ. ಭಟ್ಟರಿಗೆ ಬರವಣಿಗೆಯ ಮೇಲೆ ಅಷ್ಟೊಂದು ಹಿಡಿತ ಇದೆಯೇ ? - ಎಂಬ ಅನುಮಾನ ಪೂರ್ವಾಗ್ರಹಗಳೂ ನನಗಿದ್ದವು. ಆಶ್ಚರ್ಯವೆಂದರೆ, ಈ ಅನುಮಾನಗಳೆಲ್ಲಾ ಕೆಲವೇ ದಿನಗಳಲ್ಲಿ ನನ್ನಿಂದ ದೂರವಾಗತೊಡಗಿದವು.

ಒಂದೊಂದೇ ಲೇಖನದ ಅವರ ಶೈಲಿ, ವಿಷಯವನ್ನು ಪ್ರಸ್ತಾಪಿಸುವ ಅವರ ವಿಧಾನ ನನಗೆ ಸಮಾಧಾನ ತರತೊಡಗಿತು. 'ದೊಡ್ಡವರ ಸಣ್ಣಮಾತುಗಳು' - ಎಂಬ ಅವರ ಬರಹ ನನಗಿಲ್ಲಿ ನೆನಪಾಗುತ್ತದೆ. ಆ ಬರಹದಲ್ಲಿ ವಿಷಯವೊಂದನ್ನು ನವಿರಾಗಿ, ಅಷ್ಟೇ ಗಂಭೀರವಾಗಿ ಪ್ರತಿಪಾದಿಸುವ ರೀತಿ ನೋಡಿ, ನನಗೆ ಡಾ. ಹಾ.ಮಾ.ನಾಯಕರ ನೆನಪಾಗತೊಡಗಿತು. ಅಂಕಣಕಾರರಾಗಿ ಹಾ.ಮಾ. ನಾಯಕರು ಒಂದು ಮಟ್ಟವನ್ನು ಸಾಧಿಸಿ ಅಪಾರ ಓದುಗರನ್ನು ಆಕರ್ಷಿಸಿದವರು. ಆ ಮಾದರಿಯಲ್ಲಿ ಭಟ್ಟರು ಸಾಗುತ್ತಿದ್ದಾರೆಂಬ ತೃಪ್ತಿ- ಭರವಸೆಗಳಿಂದ ನಾನು ಶ್ರೀ ಭಟ್ಟರ ಅಂಕಣದ ಖಾಯಂ ಓದುಗನಾದೆ. ಎಲ್ಲಾ ಬರಹಗಳೂ ಆದೇ ಮಟ್ಟದವು-ಎಂದೇನೂ ನಾನು ಹೇಳುತ್ತಿಲ್ಲ. ಯಾವುದೇ ಅಂಕಣಕಾರನ, ಎಲ್ಲಾ ಬರಹಗಳೂ ಉತ್ಕೃಷ್ಟವಾಗಿರಲು ಸಾಧ್ಯವಿಲ್ಲ. ಆ ಮಟ್ಟದಲ್ಲಿ ಮಹಾಬಲೇಶ್ವರ ಭಟ್ಟರು ಬರೆಯಬಲ್ಲರೆಂಬುದಷ್ಟೇ ನನಗೆ ಸಾಕು. ಅವರ ಬರವಣಿಗೆಯ ಬಗೆಗಿದ್ದ ಪೂರ್ವಾಗ್ರಹಗಳಿಂದ ನಾನು ಮುಕ್ತನಾದೆ.

ಒಮ್ಮೆ ನಾನು ಶ್ರೀ ಭಟ್ಟರೊಂದಿಗೆ ಮಾತನಾಡುತ್ತಿರುವಾಗ ನನ್ನ ಯಕ್ಷಗಾನ ಪ್ರಸಂಗ 'ಸಿಗಂದೂರು ಕ್ಷೇತ್ರ ಮಹಾತ್ಮೆ' ಯನ್ನು ಸಾಗರದಲ್ಲಿ ಪ್ರದರ್ಶನ ಮಾಡುವ ವಿಚಾರ ಪ್ರಸ್ತಾಪಿಸಬೇಕು ಎನಿಸಿತು. ಸಾಗರದಲ್ಲಿ ಅದರ ಪ್ರದರ್ಶನ ವ್ಯವಸ್ಥೆ ಸಾಧ್ಯವೇ ? - ಸಾಧ್ಯವಾದರೆ ಹೇಗೆ ಮಾಡಬೇಕು ? ಎಂಬ ನನ್ನ ಸಮಸ್ಯೆಯನ್ನು ಅವರ ಮುಂದೆ ಇಟ್ಟಿದ್ದೇ ತಡ 'ಗಜಾನನ ಮೋಟಾರು ಕಂಪನಿಯವರನ್ನು ಕಂಡು, ಮತ್ತೆ ಬೇರೆ ಬೇರೆಯವರನ್ನು ಹಿಡಿದು ವ್ಯವಸ್ಥೆ ಮಾಡೋಣ - ಅದಕ್ಕೇನು ? ಎಂಬ ಪ್ರೋತ್ಸಾಹದ ಮಾತುಗಳನ್ನು ಅವರು ನನ್ನೊಡನೆ ಹೇಳತೊಡಗಿದರು. ಅನಂತರ ಏನಾಯಿತು ? ಎಂಬುದು ಮುಖ್ಯವಲ್ಲ; ಏಕೆಂದರೆ, ಈ ಬಗ್ಗೆ ನಾನು ಭಟ್ಟರನ್ನು ಸಂಪರ್ಕಿಸಲು ಹೋಗಲೇ ಇಲ್ಲ. ಆದರೆ ಈಗಲೂ ನನಗೆ ಮುಖ್ಯವೆನಿಸುವುದು - ಅವರ ಪ್ರೋತ್ಸಾಹದ ನಡವಳಿಕೆಗಳೇ - ಸಾಹಿತ್ಯಾಸಕ್ತರು, ಕಲಾಸಕ್ತರು ಯಾರೇ ಆಗಲಿ, ಯಾವುದೇ ಸಮಸ್ಯೆಯನ್ನು ಅವರೊಡನಿಟ್ಟರೆ, ಅದು ನಿಜವಾಗಿ ಮಾಡಬಲ್ಲದಾಗಿದ್ದರೆ, ಭಟ್ಟರ ಪ್ರೋತ್ಸಾಹ, ಸಹಕಾರವಂತೂ ಗ್ಯಾರಂಟಿ. ಇಂತಹ ಎಷ್ಟೋ ಜನರಿಗೆ ಅವರು ಪ್ರೋತ್ಸಾಹದಾಯಕರಾದ ಸಂದರ್ಭಗಳು ನನಗೆ ತಿಳಿದಿವೆ.

ಶ್ರೀ ಭಟ್ಟರ ಬಗ್ಗೆ ಕೆಲವರು ಆರೋಪಿಸುವುದನ್ನು ನಾನು ನೋಡಿದ್ದೇನೆ. ಅಧಿಕಾರದಲ್ಲಿರುವವರು, ಸಾರ್ವಜನಿಕ ಸೇವೆಗೆ ತೊಡಗಿರುವವರು ಇಂಥಹ ಆರೋಪಗಳಿಗೆ ಗುರಿಯಾಗುವುದು ಕೆಲವೊಮ್ಮೆ ಅನಿವಾರ್ಯ. ಆರೋಪ ಮಾಡುವುದು ಯಾವಾಗಲೂ ಸುಲಭ. ಏನೂ ಕೆಲಸ ಮಾಡದೆ ಸುಮ್ಮನಿರುವವರನ್ನು ಆರೋಪಿಸಲು ಏನೂ ಇರುವುದಿಲ್ಲ. ಏನಾದರೂ ಮಾಡಲು ಹೊರಟವರು, ಮಾಡಿಯೂ ಆರೋಪಗಳಿಗೆ ಗುರಿಯಾಗುವುದು ವಿಪರ್ಯಾಸ. ಇಂಥಹ ಆರೋಪಗಳು ನಿಜವೇ? ಸುಳ್ಳೇ - ಎಂಬುದು ನನಗೆ ಮುಖ್ಯವಲ್ಲ. ಅದರಿಂದ

ನಮ್ಮ ಭಾಗದ ಸಾಹಿತ್ಯಕ್ಕೆ, ಸಮಾಜಕ್ಕೆ ಆಗುತ್ತಿರುವ, ಆಗಿರುವ ಸೇವೆ ಮಾತ್ರಮುಖ್ಯ ಎಂದು ನಾನು ಭಾವಿಸುತ್ತೇನೆ. ಭಟ್ಟರಂತೆ ಸಾಹಿತ್ಯದ ಸೇವೆಯಲ್ಲಿ ತೊಡಗಿರುವವರು ನಮ್ಮಲ್ಲಿ ಎಷ್ಟು ಜನರಿದ್ದಾರೆ? ನಮ್ಮ ಜನ ಸಾಹಿತ್ಯಕ್ಕೆ, ಸಮಾಜಕ್ಕೆ ಅವರಿಂದಾಗಿರುವ ಸೇವೆಯನ್ನು ಮರೆಯುತ್ತಾರೆ.

ಡಾ॥ ಯು.ಆರ್. ಅನಂತ ಮೂರ್ತಿಯವರು ಒಂದೆಡೆ ಹೇಳುತ್ತಾರೆ. 'ನಾನು ನೋಡುತ್ತಿದ್ದಂತೆ ಶ್ರೀ ಮಹಾಬಲೇಶ್ವರ ಭಟ್ಟರು ಒಂದೇ ರೀತಿಯ ಚಟುವಟಿಕೆಯಲ್ಲಿದ್ದವರು. ಸಾಹಿತ್ಯ ಸೇವೆ, ಆಸಕ್ತಿ ಸ್ವಲ್ಪವೂ ಕಡಿಮೆ ಯಾಗದಿರುವುದು ಇಲ್ಲಿನವರ ಭಾಗ್ಯ'

ಶ್ರೀ ಭಟ್ಟರ ತುಂಬು ಬದುಕು - ಮುಂದೆ ಇನ್ನಷ್ಟು ಪ್ರಜ್ವಲಿಸಲಿ ಎಂಬುದು ನನ್ನ ಹಾರೈಕೆ. ಆ ಬೆಳಕಿನಿಂದ ಇಲ್ಲಿನ ಸಾಹಿತ್ಯಾಸಕ್ತರ ಪಾಲಿಗೆ ಇನ್ನಷ್ಟುಪ್ರಯೋಜನ-ಪ್ರೋತ್ಸಾಹ ದೊರಕಲೆಂಬುದು ನನ್ನ ಅಪೇಕ್ಷೆ. ಬರವಣಿಗೆಯ ಮೂಲಕ ಅವರ ಸಾಹಿತ್ಯಾಭಿಮಾನಿ ಓದುಗ ವಲಯ ವಿಸ್ತಾರ ವಾಗಲೆಂದು ಆಶಿಸುತ್ತೇನೆ. 'ಸಂತೋಷಂ ಜನಯೇತ್ ಪ್ರಾಜ್ಞಃ' - ಪ್ರಾಜ್ಞರಾದವರು ಜನರಲ್ಲಿ ಸಂತೋಷವನ್ನು ಉಂಟಮಾಡುತ್ತಲೇ ಹೋಗುತ್ತಾರೆ. ಸಹಸ್ರ-ಸಹಸ್ರ ಜನರಿಗೆ ಸಂತಸ ತರುತ್ತಿರುವ (ಬರವಣಿಗೆಯ ಮೂಲಕ) ಸೇವೆಯಲ್ಲಿರುವ ಶ್ರೀ ಭಟ್ಟರನ್ನು ಜನ ಅಭಿನಂದಿಸಬೇಕಾದದ್ದು ಕರ್ತವ್ಯ. ರಾಜ್ಯೋತ್ಸವ ಪ್ರಶಸ್ತಿಯನ್ನು ನೀಡಿ ಸರ್ಕಾರ ಗೌರವಿಸಿದರೆ - ಅದು ತನ್ನ ಪಾಲಿನ ಕರ್ತವ್ಯವನ್ನು ನಿರ್ವಹಿಸಿದಂತಾಗುತ್ತದೆ. ಅದು ತನ್ನನ್ನೇ ತಾನು ಗೌರವಿಸಿಕೊಂಡಂತಾಗುತ್ತದೆ.- ಪ್ರಶಸ್ತಿಗೂ ಗೌರವ ಹೆಚ್ಚುತ್ತದೆ.

# ಸಮಭಾವದ ತೊರೆಮನೆ ಅಣ್ಣ

- ಡಾ॥ ಜಯಪ್ರಕಾಶ್ ಮಾವಿನಕುಳಿ

ಜೀವನ ಒಂದು ಪ್ರವಾಹ ಇದ್ದಹಾಗೆ. ಈ ಪ್ರವಾಹದಲ್ಲಿ ತುಂಬಾ ಜನರು ಸಿಗುತ್ತಾರೆ. ಒಂದಿನಿತು ಕಂಡು ಕೊನೆಗೆ ಇಲ್ಲವಾಗುತ್ತಾರೆ. ಆದರೆ ಕೆಲವರು ತಮ್ಮ ಅದ್ಭುತ ಪ್ರತಿಭೆಯಿಂದಲೋ, ಸಮ್ಯಸಾಚಿತನದಿಂದಲೋ, ಇನ್ನೂ ಇತರ ಗುಣಗಳಿಂದ ನಮ್ಮನ್ನು ಕಲಕಿ ಆಕರ್ಷಕವಾಗಿ ನಿಂತು ಬಿಡುತ್ತಾರೆ. ಕೌತುಕತೆಯಿಂದ ನಾವು ಅವರನ್ನ ಅನೇಕ ಸಾರಿ ಮೆಲಕು ಹಾಕಿ ಬಿಡಬೇಕಾಗುತ್ತದೆ.

ಇಂಥಾ ಕೌತುಕಕ್ಕೆ ಕಾರಣರಾದವರು - ನಮ್ಮ ತೊರೆಮನೆ ಅಣ್ಣ ಟಿ. ಮಹಾಬಲೇಶ್ವರ ಭಟ್ಟರು.

ತೊರೆಮನೆ ಎಂಬ ಊರು ನಮ್ಮ ಮುಳುಗಡೆಯಾದ ಮಾವಿನಕುಳಿಯ ಹಿಂಬದಿ ಊರು. ನಾಲ್ಕು ಕಿಲೋಮೀಟರ್ ಒಳಗೆ. ನಾವು ೧೯೪೪ರಲ್ಲಿ ಮುಳುಗಡೆಯಾಗಿ ಕರೂರು ಸೀಮೆಬಿಟ್ಟು ಬಂದ ಮೇಲೆ, ಅದೇ ಸಮಯಕ್ಕೆ ತಮ್ಮ ತಂದೆಯನ್ನು ಕಳೆದುಕೊಂಡು ತಬ್ಬಲಿಯಾದ ಇವರು ನಮ್ಮ ಜೊತೆಗೆ ಕರೂರು ಸೀಮೆಗೆ ವಿದಾಯ ಹೇಳಿದರು. ಆಗ ಇವರು ಪುಟ್ಟ ಬಾಲಕ. ಎಲ್ಲವನ್ನೂ ಕಳೆದುಕೊಂಡ ಪುಟ್ಟಹುಡುಗ,

ಅವರ ಸೋದರ ಮಾವನ ಮನೆ ಹುಲೀಮನೆ ಚಕ್ರಪಾಣಿರಾಯರದು. ಕೊನೆಗೆ ಹೆಣ್ಣುಕೊಟ್ಟಮನೆಯೂ ಅದೇ. ನಮ್ಮ ಮನೆತನದ ಪ್ರಾತಃಸ್ಮರಣೀಯರಲ್ಲಿ ಮುಖ್ಯರಾದ ದೊಡ್ಡ-ಅಪ್ಪ ಮಾವಿನಕುಳಿ ಚನ್ನಕೇಶವ ಭಟ್ಟರ ಮಾವನ ಮನೆಯೂ ಹುಲೀಮನೆ. ಹಿಂದಿನ ಸಂಬಂಧ ಏನೇನೋ ಇರಬಹುದು. ಹೀಗಾಗಿ ಅವರು ನಮ್ಮ ಬಂಧುಗಳಾದರು. ಬರಿಯ ಬಂಧುಗಳಾದರೆ ಬಹುಶಃ ಈ ಲೇಖನ ಬರೆಯುವ ಪ್ರಸಂಗವೇ ಬರುತ್ತಿರಲಿಲ್ಲವೇನೋ, ನಮ್ಮ ಮನೆಯ ಆಪ್ತರಲ್ಲಿ ಒಬ್ಬರಾದರು; ಸಮೀಪದವರಾದರು ನಮ್ಮ ಎಲ್ಲಾ ಹಿರಿಯರ ಬಾಯಲ್ಲಿ 'ತೊರೆಮನೆ ಮಾಬಲ'ರಾದರು ಹಿರಿಯರಿಗೇನೋ ಅವರು ಚಿಕ್ಕವರಾಗೇ ಕಂಡರೂ ಅವರು ಮಾತ್ರ ಏಕಾಂತದಲ್ಲಿ ದೃಢರಾಗಿ, ಸಮಚಿತ್ತ ಭಾವವನ್ನು ಬೆಳೆಸಿಕೊಳ್ಳುತ್ತಾ ಉದ್ದುದ್ದ ಬೆಳೆದಂತೆ ಬರುವುದೆಲ್ಲ ಇಂದೇ ಈ ಜನುಮದಲ್ಲೇ ಬರಲಿ' ಎಂಬ ತಾತ್ವಿಕ ಚಿಂತನೆಯನ್ನು ಆಳಕ್ಕೆ ಇಳಿಸಿಕೊಳ್ಳುತ್ತಾ ಬಂದರೆಂದೇ ನನ್ನ ಈವತ್ತಿನ ಅನಿಸಿಕೆ. ಇಲ್ಲದಿದ್ದರೇ ..

ಅವರಿಗೆ ಕೂರಲು ಮಾಡು ಇರಲಿಲ್ಲ. ನಿರ್ದಿಷ್ಟವಾದ ಉತ್ಪನ್ನ ಇರಲಿಲ್ಲ. ಹೀಗಿದ್ದರೆ ನಮ್ಮ ಆಧುನಿಕ ಯುವಕರು ಆಸೆಯನ್ನು ಕಳೆದುಕೊಂಡು ನಿಸ್ತೇಜರಾಗಿ, ಹೃದಯದ ಹುಮ್ಮಸ್ಸನ್ನು ಕಳೆದುಕೊಂಡು ದುರ್ವ್ಯಸನಗಳಿಗೆ ಬಲಿಯಾಗಿ ಬೀದಿಪಾಲಾಗುತ್ತಿದ್ದರೇನೋ ಅವರಿಗೆ ಇವತ್ತಿನ ಸಂದರ್ಭದಲ್ಲಿ ಬಳಸುವ ಮಹಾನ್ ವಿದ್ಯೆ ಇರಲಿಲ್ಲ; ಆದರೆ ತಮ್ಮ ಅನುಭವದ ಪಾಕದಲ್ಲಿ ಬಂದ ಅಮೃತವನ್ನು ಕುಡಿದು ಶಿಸ್ತನ್ನು ವಿನಯವನ್ನು, ಹಾಸ್ಯದ ನವುರನ್ನು, ಬರೆಯುವ ಪ್ರತಿಭೆಯನ್ನು, ಇನ್ನು ಏನೇನೋ ಒಳ್ಳೆಯಗುಣಗಳನ್ನು ಕಲಿತು ಊರಿನಲ್ಲಿ - ಪರಊರಿನಲ್ಲಿ ಹೆಸರು ಮಾಡಿದರು.

ಅವರು ಬರೆದರು - ಅನೇಕ ಸಾಹಿತ್ಯ ಕೃತಿಗಳನ್ನು ರಚಿಸಿದರು. ನನಗೆ ಇನ್ನೂ ನೆನಪಿಗೆ ಬರುವುದು 'ಅಣ್ಣ-ತಂಗಿ' ಎಂಬ ಅವರ ಕಾದಂಬರಿಯ ಪಾತ್ರಗಳ ಮನ ಕರಗುವ ಚಿತ್ರಣ. ಆ ಕಾಲದಲ್ಲಿ ನಾನಿನ್ನೂ ಪ್ರೌಢ ಶಾಲೆಯಲ್ಲಿ ಓದುತ್ತಿದ್ದಾಗ ಕಣ್ಣು ತುಂಬಿಸಿದ ಕಾದಂಬರಿ ಅದು. ಅವರು ಸಾಹಿತಿಗಳು ಎಂದು ಒಂದೇ ಕ್ಷೇತ್ರದಲ್ಲಿ ಅವರನ್ನು ಗುರುತಿಸುವಂತಿಲ್ಲ. ಹಾಗೆಂದ ಕೂಡಲೇ ಕೃಷಿಕರಾಗಿ, ಇಡೀ ತೋಟವನ್ನ ಕಾದಿಗೆ ಹಾರುತ್ತಾತೋರಿಸುತ್ತಾ ಹೋಗುತ್ತಾರೆ. ಕರೂರಿನಲ್ಲಿ ಕಳೆದುಕೊಂಡದ್ದನ್ನು ಇಲ್ಲಿ ಪಡೆದುಕೊಳ್ಳುವ ಹಂಬಲ ಅವರದ್ದು. ತೋಟಕ್ಕೆ ಕರೆದುಕೊಂಡು ಹೋಗಿ ದರೆಯ ಮೇಲೆ ಇರುವ ತೇಗದ ಮರವನ್ನು ತೋರಿಸುತ್ತಾ' ಇನ್ನು ೨೦-೩೦ ವರ್ಷದಲ್ಲಿ ಇದೇ ಚಿನ್ನವಾಗಬಹುದು ಎನ್ನುತ್ತಾರೆ. ಅವರಿಗೆ ಈ ವರುಷದ ಮೇಲೆ ಅಷ್ಟು ನಂಬಿಕೆ. ತೆಂಗಿನ ಮರ ನೆಡುವುದಕ್ಕಿಂತ ತೆಂಗಿನಕಾಯಿ ತೆಗೆದುಕೊಳ್ಳುವುದು ಸೋವಿ, ಕಬ್ಬು ನೆಡುವುದಕ್ಕಿಂತ ಬೆಲ್ಲದ ಡಬ್ಬಕೊಳ್ಳುವುದು ಉತ್ತಮ ಎಂಬ ನಮ್ಮ ಆಧುನಿಕ ಯುವ ಅರ್ಥಶಾಸ್ತ್ರಜ್ಞರ ಪಟ್ಟಿಯಲ್ಲಿ ಅವರಿಗೆ ನಂಬಿಕೆಇಲ್ಲ. ಅವರು ಭವಿಷ್ಯದಲ್ಲಿ ನಂಬಿಕೆ ಇಟ್ಟವರು. ಮುಂದೆ ಹೊಸಬದುಕು ಇದೆ. ಹೊಸಹಾದಿ ನಾವು ಕಂಡು ಹಿಡಿದುಕೊಳ್ಳಬೇಕು' ಎಂಬ ಅತೀವ ವಿಶ್ವಾಸ ಅವರದು. ಹಾಗಿಲ್ಲದಿದ್ದರೆ ಅವರು ಹೀಗಿರುತ್ತಿದ್ದರೆ ?

ಅವರ ಹತ್ತಿರ ಮಾತನಾಡುವುದು ನನಗಂತೂ ಲವಲವಿಕೆಯ ವಿಷಯ. ನವಿರಾದ ಹಾಸ್ಯ, ಗಂಭೀರ ವಿಚಾರ, ನಡೆಯಲ್ಲಿ ಶಿಸ್ತು, ನುಡಿಯಲ್ಲಿ ಜಾಣ್ಮೆ, ಮಂದಹಾಸ, ಇವಿಷ್ಟು ಯಾರನ್ನೂ ಮನಸೆಳೆಯಲು ಸಾಕು. ಹೀಗಾಗಿ ಅವರಿಗೆ ಸಾರ್ವಜನಿಕಕ್ಷೇತ್ರ ಕಹಿಯಾಗಲಿಲ್ಲ. ಇಲ್ಲದಿದ್ದರೆ ಸಾಗರದ ಚಾಮರಾಜಪೇಟೆಯಲ್ಲಿ ಒಂದು ಪುಟ್ಟ ಅಂಗಡಿ ಇಟ್ಟುಕೊಂಡಿದ್ದ ಬಾಲಕ, ಪುರಸಭಾ ಸದಸ್ಯರಾಗಿ ಜನಾನುರಾಗಿಯಾಗಿ, 'ಗೊತ್ತು ಅವರಲ್ಲವೇ' ? ಎನ್ನುವಷ್ಟು ಖ್ಯಾತವಾಗಬೇಕಾದರೆ...

ರಾಜಕೀಯದಲ್ಲಿ ಹೇಗೆ ಆಸಕ್ತಿಯೋ ಹಾಗೆ ಜೀವನದ ಹಲವು ವಿಷಯದಲ್ಲಿ ಅವರಿಗೆ ಅತೀವ ಆಸಕ್ತಿ. ಅದು ಬೇಕಾದರೆ ಬೆಳೆಸುವ ಹೂವು ವಿಚಾರ ಇರಲಿ, ಗುಲಾಬಿ ಹೂವಿನ ಉದ್ಯಾನವನವಿರಲಿ, ಮೊಲ ಸಾಕುವುದಿರಲಿ, ನಾಯಿ ಸಾಕುವುದಿರಲಿ, ಒಂದೇ.. ಎರಡೇ... ಹೇಳುತ್ತಾಹೋದರೆ ತುಂಬಾ ಹೇಳಬಹುದು.

ಪುಸ್ತಕ ಪ್ರಕಾಶನಕ್ಕಾಗಿ ಜಲಂಧರ ಪ್ರಕಟಣಾಲಯವನ್ನು ತೆರೆದರು. ಆ ಕಾಲದಲ್ಲಿ ಪುಸ್ತಕ ಪ್ರಕಟಮಾಡುವುದು ದುಸ್ತರ ಕೆಲಸವಿದ್ದಾಗ ಪುಸ್ತಕ ಪ್ರೀತಿ ಅವರನ್ನು ಪ್ರಕಾಶಕರನ್ನಾಗಿ ಮಾಡಿತು.

ಓಗೆ ಹಲವಾರು ಆನೆಯ ಬೆನ್ನೇರಿ ಹೋಗಿ, ಸವಾರಿ ಮಾಡಿ ಜೀವನದ ಸೊಗಸನ್ನು, ಹುರುಪನ್ನು ಇಟ್ಟುಕೊಂಡು ಈ ಪ್ರವಾಹದಲ್ಲಿ ಈಜಾಡಿದವರು. ಅವರಿಗೆ ೭೦ ತುಂಬಿದ ಈ ಘಳಿಗೆಯಲ್ಲಿ ಅವರು ನೂರು ಕಾಲ ಆರೋಗ್ಯವಾಗಿ ಬಾಳಲಿ ಎಂದು ಹಾರೈಸುತ್ತೇನೆ.

# ಧೀರ ವ್ಯಕ್ತಿತ್ವ

**– ವೈ.ಕೆ. ತಿಮ್ಮರಸಯ್ಯ**

ಸಾಗರಕ್ಕೆ ನಾನು ಒಂದು ಸಮಾರಂಭಕ್ಕೆ ಹೋಗಿದ್ದೆ. ಅದೊಂದು ಪುಸ್ತಕ ಬಿಡುಗಡೆಯ ಸಮಾರಂಭ, 'ಕವನ ಸಂಕಲನ' ಬರೆದವರು ತರುಣ ಕವಿ ಭಡ್ತಿ ಎಂಬುವರು. ಸಮಾರಂಭಕ್ಕೆ ನನ್ನ ಗೆಳೆಯರಾದ ಶ್ರೀ ಟಿ. ಮಹಾಬಲೇಶ್ವರ ಭಟ್ಟರು, ಸಾಗರದ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಗೌರವಾಸನದಲ್ಲಿದ್ದರು. ನಾನು ವೇದಿಕೆಯನ್ನೇರಿ ಆಸನಾರೂಢನಾದ ತಕ್ಷಣ, ಗೆಳೆಯ ಭಟ್ಟರು ನನ್ನತ್ತ ಹೊರಳಿ 'ಆರೋಗ್ಯವೇ ಅರಸರೇ' ? ಎಂದು ನನ್ನ ಯೋಗ ಕ್ಷೇಮವನ್ನು ಕೇಳಿದರು. ನಾನು ವೇದಿಕೆಯಲ್ಲಿ ಕೇವಲ ತಲೆದೂಗಲೇ, ಅಥವಾ ಹ್ಞೂ ಅನ್ನಲೇ ? ಸಮಾಧಾನವಿಲ್ಲದೆ, ಸಭೆ ಮುಗಿದ ನಂತರ ನಿಮ್ಮೊಡನೆ ಬಹಳ ಮಾತನಾಡುವುದಿದೆ' ಎಂದು ಬಿಡುಗಡೆಗೆ ಸಿದ್ಧವಾದ ನೂತನ ಕವನ ಸಂಗ್ರಹದ ಪುಸ್ತಕದಲ್ಲಿ ಕಣ್ಣು ಹಾಯಿಸಿ, ನನ್ನ ಮುಂದಿನ ಅಮೋಘ ಬಿಡುಗಡೆಯ ಭಾಷಣಕ್ಕೆ ಸಿದ್ಧವಾದೆ.

ಭಟ್ಟರ ಹೆಸರು ನಮ್ಮ ಕನ್ನಡ ನಾಡಿಗೆ ಚಿರಪರಿಚಿತ. ಅದರಲ್ಲೂ ವಿಶೇಷವಾಗಿ ಮಲೆನಾಡು ಸಾಗರ ಪ್ರಾಂತ್ಯದಲ್ಲಿ ಮತ್ತಷ್ಟೂ ಸ್ನೇಹಿತರ ಬಳಗ ನನಗೆ ಮೊದಲ ಪರಿಚಯ, ಅವರು ಸಾಗರದಲ್ಲಿ ಜಲಂಧರ ಪ್ರಕಾಶನ ಸಂಸ್ಥೆಯನ್ನು ಆರಂಭಿಸಿದ ತರುಣದಲ್ಲಿಯೇ 'ಕರ್ನಾಟಕದ ಸಾಹಿತ್ಯ ಶಿಲ್ಪಿಗಳು' ಎಂಬ ಗ್ರಂಥವನ್ನು ಪ್ರಕಟಿಸಿದಾಗ ಅವರು ನೇರವಾಗಿ ನನಗೆ ಪತ್ರ ಬರೆದು ನನ್ನ ಪರಿಚಯ ಕೇಳಿದ್ದರು. ನಾನು ಆಗಿನ್ನೂ ತರುಣ ಬರಹಗಾರನಾಗಿದ್ದ ಕಾರಣ ಹೆಸರು ಪ್ರಸಿದ್ಧಿಯಾಗಬೇಕೆಂಬ ಹುಚ್ಚು ಹಿಡಿದಿತ್ತು. ಸರಿ, ನಾನು ಇಂಥವನು, ಅಂಥವನಲ್ಲ, ಹೀಗೆ ಬರೆದಿದ್ದೇನೆ, ಹಾಡಿದ್ದೇನೆ, ಇತ್ಯಾದಿಗಳನ್ನೆಲ್ಲಾ ಸೇರಿಸಿ ನನ್ನ ನಾನುಕಂಡಂತೆ ಬರೆದು ಕಳಿಸಿಕೊಟ್ಟೆ. ಭಟ್ಟರು ಲೇಖನ ಬಂದಿದೆ, ಎಂದು ಸ್ವೀಕೃತಿ ಪತ್ರ ಹಾಕಿ, ಮುದ್ರಣವಾದ ನಂತರ ನಿಮಗೂ ಒಂದು ಗೌರವ (ಸಂಭಾವನೆ) ಪ್ರತಿಕೊಡುವುದಾಗಿಯೂ ತಿಳಿಸಿದರು.

ಪುಸ್ತಕವೂ ಹೊರಬಂತು. ಜಿಲ್ಲಾಮಟ್ಟದ ಬಹಳ ಮಂದಿ ಸಾಹಿತಿಗಳು, ಕವಿಗಳು, ಕಲಾವಿದರುಗಳನ್ನೂ ಅವರು ಪತ್ತೆ ಮಾಡಿ, ಪರಿಚಯಮಾಡಿಸಿದ್ದಾರೆ. ಮಹಾಬಲ, ಈಶ್ವರ ಈ ಎರಡೂ ಹೆಸರಿನ ಈ ಮಹಾಬಲೇಶ್ವರ ಭಟ್ಟರಿಗೆ ಎಲ್ಲ

ಕಡೆಗೂ ಅಪಾರ ಸ್ನೇಹಿತರಿದ್ದಾರೆ. ನನ್ನ ಪರಿಚಯ ಈ ರೀತಿಯಿಂದ ಪ್ರಕಟವಾದಂದಿನಿಂದ ನನ್ನ -ಭಟ್ಟರ ಸ್ನೇಹ ಬಲಿಯುತ್ತ ಬಂತು. ಪ್ರತೀ ವರ್ಷ ನಡೆಯುತ್ತಿದ್ದ ಕನ್ನಡ ಸಾಹಿತ್ಯ ಸಮ್ಮೇಳನಗಳಲ್ಲಿ ನಾನು- ಅವರು, ಹಾಜರಾಗಿ ಸಾಹಿತ್ಯ ಸಂವಾದದಲ್ಲಿ ಒಂದಾಗುತ್ತಿದ್ದೆವು. ಇಂಥಾ ಒಬ್ಬ ಸಾಹಿತ್ಯ ಪ್ರೇಮಿ ಸ್ನೇಹಿತನನ್ನು ಸಂಪಾದಿಸಿಕೊಂಡ ಹೆಮ್ಮೆ ನನ್ನದು. ಈಗ ಭಟ್ಟರಿಗೆ ೭೦ ವರ್ಷದ ತಾರುಣ್ಯವೆಂದು ಗೊತ್ತಾಯಿತು. ಆಶ್ಚರ್ಯ! ಅಂದಿನ ಇಪ್ಪತ್ತರ ಇರವೇ ಇಂದೂ ಇದೆಯಲ್ಲ! ಇದರ ಗುಟ್ಟೇನು ? ಎಂದು ನಾನು ಕೇಳದ ಒಂದು ತಪ್ಪು ನನ್ನದು. ಕಾರಣ ಅವರಿಗೆ ಎಪ್ಪತ್ತು ಎಂದು ಯಾರೂ ನಂಬುವುದೂ ಕಷ್ಟ.

ಅದೇ ಮೈಕಟ್ಟು, ಬಿಳುಪಾದ ಮೈ ಬಣ್ಣದ ಕಾಂತಿ, ತಿದ್ದಿಕೊಂಡ ಕೂದಲಿನ ಕ್ರಾಪು, ಉದ್ದನೆಯ ಮೂಗು, ನೀಳವಾದ ಕಿವಿಗಳು, (ಉದ್ದನೆಯ ಮೂಗು, ನೀಳವಾದ ಕಿವಿ ಇರುವವರನ್ನು ಬುದ್ಧಿವಂತರು ಎಂದು ನಮ್ಮ ಹಿರಿಯರು ಹೇಳುತ್ತಾರೆ.) ಇಷ್ಟುಅಂದಕ್ಕೆ ಮತ್ತಷ್ಟೂ ಚೆಲುವಾಗಿ ಅವರ ಉಡುಗೆ ಎಂಥಹವರನ್ನೂ ಕಣ್ಣು ತಿರುಗಿಸಿ; ಯಾರಿವರು ? ಎಂದು ನೋಡುವ ಚಟ ಹುಟ್ಟಿಸುತ್ತದೆ. ಶುದ್ಧ ಖಾದಿ, ಶ್ವೇತ ವಸ್ತ್ರಭೂಷಣ ಆಗತಾನೇ ಇಸ್ತ್ರಿಯಿಂದ ತೀಡಿದ ಗರಿಗರಿಯ ಖಾದಿಜುಬ್ಬ, ಇಳಿಬಿಟ್ಟ ಮುಂಗಚ್ಚೆ, ಆಗಾಗ್ಗೆ ಧರಿಸುವ ಖಾದಿ ಕವಚ (ವೇಸ್ಟ್ ಕೋಟು) ಕೈಯಲ್ಲಿಷ್ಟು ಹಿಡಿದ ಕಾಗದ ಪತ್ರಗಳ ಸುರುಳಿಯ ಜತೆ ಅಂದಿನ ದಿನ ಪತ್ರಿಕೆ ನಾನು, ಅವರ ಈ ಎಲ್ಲಾ ವೇಷ ಭೂಷಣಗಳನ್ನು ಆಗಾಗ್ಗೆ ಅವರ ಕಣ್ಣಿಗೆ ಬೀಳದಂತೆ ಕದ್ದುನೋಡಿದ್ದೇನೆ. ಅವರ ಸುಂದರವಾದ ವದನಾರವಿಂದದಲ್ಲಿ ಹೆಸರಿಗೆ ತಕ್ಕಂತೆ ಎಂದೂ ಕಿಡಿಯಷ್ಟೂ ಕೋಪಕಂಡವರಲ್ಲ. ಸದಾ ಮುಗುಳು ನಗೆಯ ಮಲ್ಲಿಗೆಯ ಮಾತುಗಳು.

ನಾನು ಇದೀಗ ಅವರಿಗಿಂತ ಇನ್ನೈದು ವರ್ಷಗಳಷ್ಟು ಹಿರಿಯ. ಹೆಚ್ಚುಕಡಿಮೆ ಇಬ್ಬರೂ ಸರಿ - ಸಮಾನರೆನ್ನಬಹುದು. ಅನೇಕ ಸಲ ನಾನು ಭಟ್ಟರನ್ನು ಕಂಡು ಹೊಟ್ಟೇಕಿಚ್ಚುಪಟ್ಟಿದ್ದೇನೆ. ಇವರಿಗೆ ರೂಪ, ಯೌವ್ವನ, ಭಾಗ್ಯ ಎಲ್ಲಾಕೊಟ್ಟು ಬಿಟ್ಟನಲ್ಲ ಆ ಶಿವ! ಅಂತ ಯಾರಿಗೂ ಕೇಳಿಸದಂತೆ ನನಗೆ - ನಾನೇ ಅಂದು ಕೊಂಡಿದ್ದೇನೆ. ಅವರನ್ನು ನಾನು ಒಂದು ಸಾರಿ ಸ್ನೇಹಭಾವದ ಹಾಸ್ಯದಲ್ಲಿಯೇ 'ಶಿಸ್ತುಗಾರ ಪುಟ್ಟಸ್ವಾಮಿ' ಎಂದಿದ್ದೇನೆ. ಇದು ಪ್ರೀತಿಯ ಗೌರವ ಎಂದೇ ಸ್ವೀಕರಿಸಿದ್ದರು ಅವರೂ.

ಸಭೆ, ಸಮಾರಂಭ ಇತ್ಯಾದಿ ಕಾರ್ಯಕ್ರಮಗಳಿಗೆ ಸಕಾಲಕ್ಕೆ ಇನ್ನೂ ಐದು ನಿಮಿಷ ಮುಂಚಿತವಾಗಿಯೇ ಅಲಂಕಾರ ಮಾಡಿಕೊಂಡು ಮುಂಭಾಗದಲ್ಲಿ ಹಾಕಿದ ಕುರ್ಚಿ ಹಿಡಿದು ಕೂತು ಸಭೆಗೆ ಬರುವ ಸ್ನೇಹಿತರನ್ನೆಲ್ಲಾ ಕೈಮುಗಿದು ಸ್ವಾಗತಿಸಿ

ಕೂರಿಸುವ ಗೆಳೆಯ. ಎಲ್ಲರೊಡನೆಯೂ ಆತ್ಮೀಯವಾಗಿ ಬೆರೆತು, ಬಹುಬೇಗ ಜನಪ್ರಿಯರಾಗುವ ಆಕರ್ಷಕ ವ್ಯಕ್ತಿ. ಮಹಾಬಲೇಶ್ವರ ಭಟ್ಟರು ಸಭೆ-ಸಮಾರಂಭ ಕಾರ್ಯಕ್ರಮಗಳನ್ನು ಏರ್ಪಡಿಸುವಲ್ಲಿ ತುಂಬಾ ಅಚ್ಚು-ಕಟ್ಟಿನ ಜನ. ನಾನು ಸಾಗರದಲ್ಲಿ ಬಹಳಷ್ಟು ಕಾರ್ಯಕ್ರಮಗಳಲ್ಲಿ ಭಾಗವಹಿಸಿ, ಆ ಎಲ್ಲಾ ಕಾರ್ಯಕ್ರಮಗಳಲ್ಲೂ ಭಟ್ಟರ ಕೈವಾಡವಿರುವುದನ್ನು ಗಮನಿಸಿದ್ದೇನೆ. ಮಲೆನಾಡು ಆತಿಥ್ಯಕ್ಕೆ ಹೆಸರುವಾಸಿ ಎನ್ನುವ ಅಂಬೋಣಕ್ಕೆ ಸರಿಯಾಗಿ ಭಟ್ಟರು ಎಲ್ಲ ರೊಡನೊಂದಾಗಿ ಬೆರೆತು ಬಿಡುವ ಸರಳ ಸಜ್ಜನ ವ್ಯಕ್ತಿ ಕೂಡ.

ಶಿವಮೊಗ್ಗೆಯ ಪರಿಚಿತ ಲೇಖಕರು, ಸಾಹಿತಿಗಳು, ಇಂಥಹವರನ್ನು ಕೂಡಿಸಿ 'ಜಿಲ್ಲಾ ಬರಹಗಾರರ ಮಂಡಳಿ' ಯನ್ನು ಪ್ರಪ್ರಥಮವಾಗಿ ಆರಂಭಿಸಿ, ನಂತರ ಪ್ರಥಮ ಜಿಲ್ಲಾ ಬರಹಗಾರರ ಸಮ್ಮೇಳನವನ್ನೂ ಅಚ್ಚುಕಟ್ಟಾಗಿ ನಡೆಸಿ, ನಮ್ಮ ಶಿವಮೊಗ್ಗ ಜಿಲ್ಲಾ ಬರಹಗಾರರನ್ನುನಾಡಿಗೆ ಪರಿಚಯಿಸಿಕೊಟ್ಟ ಕೀರ್ತಿ ಇವರಿಗೆ ಸಲ್ಲಬೇಕು. ಇದೀಗ ಸಾಗರ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಪೀಠದಲ್ಲಿದ್ದು, ನಮ್ಮ ಜಿಲ್ಲೆಯ ಎಲ್ಲ ತಾಲೂಕುಗಳಿಗಿಂತಲೂ ಚುರುಕಾಗಿ ಚಟುವಟಿಕೆಗಳನ್ನು ನಡೆಸುತ್ತಿರುವುದರೊಂದಿಗೆ, ಕೇಂದ್ರ ಸಾಹಿತ್ಯ ಪರಿಷತ್ತಿನಿಂದ ಗೌರವ ಶಹಬಾಸ್‌ಗಿರಿ ಸಂಪಾದಿಸಿದ್ದಾರೆ.

ಭಟ್ಟರ ಸಾಹಿತ್ಯ ಕ್ಷೇತ್ರ ವಿಶಾಲವಾದುದು. ಸಾಹಿತಿಗಳಾಗಿ, ಈಗ ಪ್ರಸಿದ್ಧ ಅಂಕಣ ಬರಹಗಾರರಾಗಿಯೂ ಇದ್ದಾರೆ. ಅವರ ಜ್ಞಾಪಕ ಶಕ್ತಿಯು ಅದ್ಭುತ ಎನ್ನುವುದಕ್ಕೆ ಈ ಅಂಕಣಬರಹಗಳೇ ಸಾಕ್ಷಿಯಾಗಿ ನಿಂತಿದೆ. ರಾಜಕೀಯದಲ್ಲೂ ಅವರು ಇಂದಿಗೂ ಶುದ್ಧ ಖಾದಿಧಾರಿಗಳಾಗಿರುವಂತೆ, ಶುದ್ಧಹಸ್ತರಾಗಿಯೂ, ಕಪ್ಪುಚುಕ್ಕೆರಹಿತರಾಗಿಯೂ ಕಾಂಗ್ರೆಸ್ ಪಕ್ಷದ ಒಬ್ಬ ನಿಷ್ಠಾವಂತ ಕಾರ್ಯಕರ್ತರೂ ಹೌದು. ತಾಲೂಕು ಕಾಂಗ್ರೆಸ್ ಪಕ್ಷದ ಪದಾಧಿಕಾರಿಯಾಗಿಯೂ ಸೇವೆ ಸಲ್ಲಿಸಿದ್ದಾರೆ. ಎಲ್ಲಕ್ಕಿಂತ ಮಿಗಿಲಾಗಿ ಸರಕಾರದಿಂದ ರಚಿತವಾದ ಮಲೆನಾಡು ಅಭಿವೃದ್ಧಿ ಮಂಡಳಿಗಿಂತಲೂ ಮುಂಚಿತವಾಗಿ ಮಲೆನಾಡು ಅಭಿವೃದ್ಧಿ ಪ್ರತಿಷ್ಠಾನದ ಆರಂಭಕ್ಕೆ ಕಾರಣರಾಗಿ, ಪ್ರತಿಷ್ಠಾನದ ಕಾರ್ಯದರ್ಶಿ, ಉಪಾಧ್ಯಕ್ಷ ಮುಂತಾದ ವಿವಿಧ ಸ್ಥಾನ ಗೌರವದಿಂದ ಸ್ವಕ್ಷೇತ್ರದಲ್ಲಿ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಲು ಕಾರಣರಾಗಿರುವುದು ಒಂದು ವಿಶೇಷ.

ಈ ಸಂಸ್ಥೆಯು ಫೆಬ್ರವರಿ ೧೯೯೨ರಲ್ಲಿ ಆಚರಿಸಿದ ಸಂಭ್ರಮದ ಬೆಳ್ಳಿ ಹಬ್ಬದ ಸವಿನೆನಪಿನ ಬೃಹತ್ ಸ್ಮರಣ ಸಂಚಿಕೆಗೂ 'ಸಂಭ್ರಮ' ಎಂದೇ ಹೆಸರಿಟ್ಟು, ಅದರ ಸಂಪಾದಕರೂಪವಾಗಿ ಪ್ರಕಟಿಸಿದ ಗ್ರಂಥ-ಮರೆಯಲಾರದ ಒಂದು ಶೇಖರ ಯೋಗ್ಯವಾದ ಗ್ರಂಥವಾಗಿದೆ. ಶ್ರೀ ಮಹಾಬಲೇಶ್ವರ ಭಟ್ಟರನ್ನು ಅಭಿನಂದಿಸುವ

ಸಮಿತಿಯ ಕಾರ್ಯಕರ್ತರು ನನಗೆ ಪತ್ರ ಬರೆದು, ನೀವು ಅವರ ಆತ್ಮೀಯ ಗೆಳೆಯರಾಗಿರುವ ಕಾರಣ ಒಂದು ಲೇಖನ ಕೊಡಿ, ಎಂದು ವಿನಂತಿ ಪತ್ರಬಂದಾಗ ನನಗೊಂದು ಆಶ್ಚರ್ಯವಾಯಿತು. ಭಟ್ಟರಿಗೆ ಈ ಗೌರವ ಅಭಿನಂದನೆ ಎಂದೋ ಸಲ್ಲಬೇಕಾದದ್ದು... ಈಗೇಕೆ ? ಎಂದು ಬಹುಶಃ ಕಾರ್ಯಕರ್ತರು ಭಟ್ಟರಿಗೆ ಈ ಎಪ್ಪತ್ತು ಬರಲಿ, ಹೇಗೂ ಅವರ ೭೦ನೇ ಶಾಂತಿ ಆಚರಣೆಯ ಶುಭ ಸಂದರ್ಭಕ್ಕೆ ಇದೂ ಒಂದು ಕಾಣಿಕೆಯಾದೀತು! ಎಂದಿರಬೇಕು.

ಲಾಲ್ ಬಹದ್ದೂರ್ ಶಾಸ್ತ್ರಿ ಕಲಾ-ವಿಜ್ಞಾನ, ಶ್ರೀ ಎಸ್.ಬಿ. ಸೊಲಬಣ್ಣಶೆಟ್ಟಿವಾಣಿಜ್ಯ ಕಾಲೇಜು, ತಾಳಗುಪ್ಪದ ನಾಲಂದಾ ಸಂಯುಕ್ತ ಪದವಿ ಪೂರ್ವ ಕಾಲೇಜು, ಪ್ರಗತಿ ಬಾಲಭವನ ಸಂಯುಕ್ತ ಪ್ರೌಢಶಾಲೆ, ಸಾಗರ. ಈ ಸಂಸ್ಥೆಗಳುಹುಟ್ಟಿ ಪ್ರವರ್ಧಮಾನಕ್ಕೆ ಬಂದು ಪ್ರಸಿದ್ಧಿ ಪಡೆಯುವ ಈ ಮಹಾ ಸಾಹಸದಲ್ಲಿ ಶ್ರೀ ಮಹಾಬಲೇಶ್ವರ ಭಟ್ಟರ ಕೈ ಸಹಕಾರವು ಪ್ರಶಂಸನೀಯ ಹಾಗೂ ಮರೆಯಲಾರದ ಸೇವೆ. ೨೫ ವರ್ಷಗಳ ಸೇವೆಯ ರಜತ ಮಹೋತ್ಸವವನ್ನು ಆಚರಿಸಿಕೊಳ್ಳುವ ಮಲೆನಾಡು ಪ್ರತಿಷ್ಠಾನದ ಇತಿಹಾಸವನ್ನು ಈ ಸಂಚಿಕೆ ಹೆಸರಿಗೆ ತಕ್ಕಂತೆ ಒಂದು ಸುಂದರ ಸಾಹಿತ್ಯ ಸೇವೆಯೂ ಮುಖ್ಯ ಕಾರಣವೆನ್ನಬೇಕು. ಅಭಿನಂದನ ಸಮಿತಿಯು ನನಗೆ ಲೇಖನ ಕಳುಹಿಸಲು ಕೇಳಿದಾಗ ನಾನೇನು ಬರೆಯಲಿ ಎಂದೇ ಕಾಲ ಕಳೆಯುತ್ತ ಕುಳಿತಾಗ ಮತ್ತೊಂದು ನೆನಪೋಲೆ. 'ತಮಗೆ ಪ್ರಿಯವಾದ ಲೇಖನ, ಆದಷ್ಟುಬೇಗ ಕಳುಹಿಸಿ, ಎಂದು.

ಎಲ್ಲರಿಂದಲೂ ನಾನು ಸರಸಕವಿ, ಪತ್ರಿಕೋದ್ಯಮಿ, ಲೇಖಕ ಎನಿಸಿಕೊಂಡ ತಪ್ಪಿಗೆ ಏನಾದರೊಂದು ಬರೆಯಲೇಬೇಕು. ಎಂದು ಈ ಪ್ರಿಯ ಸ್ನೇಹಿತರ ಸ್ನೇಹತನದ ನೆನಪನ್ನೇ ಮೆಲುಕು ಹಾಕಿ ಎರಡು ಮಾತುಗಳಿಂದ ಅಭಿನಂದಿಸುತ್ತಿದ್ದೇನೆ. ಎಪ್ಪತ್ತರಲ್ಲಿರುವ ಶ್ರೀ ಮಹಾಬಲೇಶ್ವರ ಭಟ್ಟರು ನೂರು ತಲುಪಿ ಬಾಳುತ್ತ ಅವರಿಂದ ಸಾಹಿತ್ಯಕ, ಸಾಮಾಜಿಕ ಸೇವೆ ನಿರಂತರವಾಗಿ ನಡೆಯುವುದಕ್ಕೆ ಬೇಕಾದ ಆರೋಗ್ಯ ಭಾಗ್ಯ, ಆಯಸ್ಸು ತುಂಬಿ ಬರಲಿ ಎಂದಿಷ್ಟೇ ಪ್ರಾರ್ಥಿಸುತ್ತಾನೆ, ಈ ಎಪ್ಪತ್ತೈದರ ಮಿತ್ರ.

# ಶಿಸ್ತುಬದ್ಧ ಆಳುತನ

- ಕೆ. ಈ. ಪ್ರಕಾಶ ಕುಗ್ವೆ

ಸಾಹಿತ್ಯ ಸೇವೆ - ಇಂದು ಏನೆಲ್ಲಾ ತಂದು ಕೊಡುತ್ತೇ ನೋಡಿ. ಗರ್ವ, ಗತ್ತು, ಹಣ.. ಇನ್ನೂ ಇತ್ಯಾದಿ. ಇವತ್ತಿನ ಜಾಗತೀಕರಣದ ಸಂದರ್ಭದಲ್ಲಿಯಂತೂ ಇದೊಂದು ಭರ್ಜರಿ ಬಿಜಿನೆಸ್‌ಕೂಡಾ ಹೌದು. ಇದಕ್ಕೆಲ್ಲಾ ಭಿನ್ನ ಎನ್ನುವಂತೆ; ತಮ್ಮ ಜೇಬಿಂದ ಸಾವಿರಾರು ರೂಪಾಯಿಗಳನ್ನು ಹಾಕಿ, ಜೀವನದ ಬಹು ಪಾಲು ಸಮಯವನ್ನು ಸಾಹಿತ್ಯಿಕ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡು, ನಿಸ್ವಾರ್ಥವಾಗಿ, ಸ್ಥಳೀಯವಾಗಿ, ದುಡಿಯುತ್ತಿರುವವರು ಯಾರಾದರೂ ಇದ್ದರೆ,ಅದು. ಶ್ರೀ ಟಿ. ಮಹಾಬಲೇಶ್ವರ ಭಟ್ಟರು ಮಾತ್ರಾ.

ಗರಿ-ಗರಿ ಜುಬ್ಬ, ಶುಭ್ರವಾದ ನಿರಿಗಟ್ಟಿ ಇಸ್ತ್ರಿ ಹಾಕಿದ ಪಂಚೆ, ಇವುಗಳಿಲ್ಲದ ಮಹಾಬಲೇಶ್ವರ ಭಟ್ಟರನ್ನು ಭಾವಿಸುವುದು ನನಗೆ ಕೂಡ ಅಲ್ಲ; ಅವರನ್ನು ಬಲ್ಲ ಎಂಥಹವರಿಗೂ ಕಷ್ಟವಾಗುತ್ತೆ. ಅಷ್ಟು ಸ್ವಚ್ಛ,ಶಿಸ್ತು ಬದ್ಧ, ಆಳುತನ ಅವರದು. ತಮ್ಮ ಈ ಅಚ್ಚುಕಟ್ಟುತನದಿಂದಲೇ ನಮ್ಮನ್ನೆಲ್ಲಾ ಬೆರಗುಗೊಳಿಸುವಂಥಹ ಪ್ರಭೆ ಸೃಷ್ಟಿಸಿಕೊಂಡಿದ್ದಾರೆ. ತಮ್ಮ ಅರ್ಥಪೂರ್ಣ ಮೌನ, ಸಾತ್ವಿಕ ಸಿಟ್ಟು, ಪ್ರಾಮಾಣಿಕ ಹೋರಾಟಗಳಿಂದ ನಿಜವಾಗುತ್ತಿರುವ ಭಟ್ಟರು- ಒಂದು ಗಟ್ಟಿ ಜೀವ.

ಅದು ಎಂತಹ ಸಣ್ಣ ಕಾರ್ಯಕ್ರಮವಾಗಿರಲಿ, ವೇದಿಕೆ ಮೇಲೆ ನೆಟ್ಟಿರುವ ಒಂದು ಸಣ್ಣ ಪಿನ್ ಕೂಡ ಸರಿ ಕಾಣದಿದ್ದರೆ, ಚಡ-ಪಡಿಸುತ್ತಿರುತ್ತಾರೆ. ಕೊನೆಗೆ ಯಾರನ್ನೂ ಆಶ್ರಯಿಸದೆ, ತಾವೇ ಸರಿಪಡಿಸಿ ತೃಪ್ತಿಯ ನಿಟ್ಟುಸಿರು ಬಿಡುತ್ತಾರೆ. ಅಷ್ಟರ ಮಟ್ಟಿಗೆ ಅವರ ಅನುಸಂಧಾನ ಒಂದು ಕಾರ್ಯಕ್ರಮ ನಡೆಸುವಾಗ ಇರುತ್ತೆ. ಸ್ವತಃ ಪ್ರಕಟನ ಸಂಸ್ಥೆ ಕಟ್ಟಿ, ಅನೇಕ ಸಂಘ-ಸಂಸ್ಥೆಗಳನ್ನು ರೂಪಿಸಿ, ಪರಿಷತ್ತಿನ ಬೆನ್ನೆಲುಬಾಗಿ ದುಡಿಯುತ್ತಿರುವ ಭಟ್ಟರದು ಪಾರದರ್ಶಕ ವ್ಯಕ್ತಿತ್ವ. ಕಿರಿಯರೊಂದಿಗೆ-ಕಿರಿಯರಾಗಿ, ಹಿರಿಯರೊಂದಿಗೆ ವಿನಯಶೀಲರಾಗಿ ಬದುಕುತ್ತಿರುವ ಭಟ್ಟರು, ತಮ್ಮ ಪರಿಷತ್ತಿನ ಕಾರ್ಯಕ್ರಮಗಳಿಗೆ ದೊಡ್ಡ-ದೊಡ್ಡ ಸಾಹಿತಿಗಳನ್ನು ಬರಮಾಡಿಕೊಂಡು ನಮ್ಮಂತಹ ಕಿರಿಯರಿಗೆ ಕಾಣಿಸಿದ್ದಾರೆ.

ಸಾಕಷ್ಟುಸಾಹಿತ್ಯ ಕೃತಿಗಳನ್ನು ರಚಿಸಿರುವ ಭಟ್ಟರು ತಮ್ಮ 'ಹೊಸೂರಿನ ಹಲವರು' ಕೃತಿಯಲ್ಲಿ ಪರಕೀಯತೆಯ ಚೌಕಟ್ಟನ್ನು ಮೀರಿ, ಅನುಭವಗಳನ್ನು

ಹಸಿ-ಹಸಿಯಾಗಿಸುತ್ತಾರೆ. ಈ ಜೀವನದ ಚಿತ್ರ ಅವರ ಸಾಹಿತ್ಯ ಕೃತಿಗಳಲ್ಲೇ ಶ್ರೇಷ್ಠವಾದುದು ಎನ್ನಬಹುದು.

ಸಾಹಿತ್ಯ ಕಲಿಯುವ ಮತ್ತು ಕಲಿಸುವವರೆ ಸಾಹಿತ್ಯದೆಡೆಗೆ ಬೆನ್ನುಮಾಡಿ ನಿಂತಿರುವ ಈ ಹೊತ್ತಿನಲ್ಲಿಅವರನ್ನ ಕಲೆಹಾಕಿ, ಕೊನೇ ಪಕ್ಷ ಅವರಲ್ಲಿ ಓದುವ ಹವ್ಯಾಸವನ್ನಾದರೂ ಉಳಿಸಿಕೊಳ್ಳುವಷ್ಟು ಅನಿವಾರ್ಯತೆಯನ್ನು ತಮ್ಮ ಕಾರ್ಯಕ್ರಮಗಳ ಮೂಲಕ ತರುತ್ತಿದ್ದಾರೆ. ಪುಸ್ತಕ ಗ್ರಾಹಕ ನೆಲೆ ಬತ್ತಿಲ್ಲ, ಕೊಳ್ಳುವವರ ಬಳಿಗೆ ಪುಸ್ತಕಗಳನ್ನು ಒಯ್ಯಬೇಕಾಗಿದೆನ್ನುವ ಸತ್ಯವನ್ನು ಕಂಡುಕೊಂಡಿರುವ ಭಟ್ಟರು, ತಮ್ಮ ಪರಿಷತ್‌ನಲ್ಲಿ ಈ ನಾಲ್ಕು ವರ್ಷಗಳಿಂದ ಪುಸ್ತಕ ಪ್ರದರ್ಶನ ಮತ್ತು ಮಾರಾಟವನ್ನು ಏರ್ಪಡಿಸುತ್ತಾ ಬಂದಿದ್ದಾರೆ. ತನ್ಮೂಲಕ ವೈವಿಧ್ಯಮಯ ಪುಸ್ತಕಗಳು ಓದುಗರ ಕೈ ಸೇರುವಂತೆ ಮಾಡಿದ್ದಾರೆ.

ಈ ೭೦ರ ವಯಸ್ಸಿನಲ್ಲೂ ೨೦ರ ಹರೆಯದ ಹುಡುಗನಂತೆ, ಉತ್ಸಾಹದಿಂದ, ಪ್ರೀತಿಯಿಂದ ಅನೇಕ ಕಾರ್ಯಕ್ರಮಗಳನ್ನು ಸಂಘಟಿಸುತ್ತ ಬಂದಿರುವ, ಮಹಾಬಲೇಶ್ವರ ಭಟ್ಟರಿಗೆ, ಇನ್ನೂ ಅನೇಕ ಪ್ರಶಸ್ತಿ, ಪುರಸ್ಕಾರಗಳು ಬರಬೇಕಾಗಿವೆ. ಆದರೆ ಅವರು ಅದನ್ನೆಲ್ಲಾ ನೆಚ್ಚಿ ಕೂತವರಲ್ಲ. ಸಾಹಿತ್ಯಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದರಲ್ಲೇ ತಮ್ಮ ಸರ್ವ ಸುಖ ಅಡಗಿದೆ ಎಂದು ನಂಬಿದವರು.

# ಸಾರ್ಥಕ ಜೀವನ

- ಬಿ. ಆರ್. ವಾಸಂತಿ

ಸಾಗರ ಎಂದರೆ ಸದಾ ಚಟುವಟಿಕೆಗಳ ಆಗರ. ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು ಸಾಗರದ ಜನತೆಗೆ ಸಾಹಿತ್ಯದ ರಸದೌತಣ ನೀಡುತ್ತಿದೆ. ಇದಕ್ಕೆ ಪ್ರೇರಕ ಮತ್ತುಕಾರಕ ಶಕ್ತಿ ಶ್ರೀ ಟಿ. ಮಹಾಬಲೇಶ್ವರ ಭಟ್ಟರು. ಹೆಸರಿಗೆ ತಕ್ಕಂತೆ ಇವರು 'ಮಹಾಬಲರೇ'. ಜೀವನದ ಹಲವು-ಹತ್ತು ರಂಗಗಳಲ್ಲಿ ಮಹಾನಂದದಿಂದ ಕಾರ್ಯಪ್ರವೃತ್ತರಾದವರು. ಅನುಭವ, ಜ್ಞಾನ, ವಯಸ್ಸು ಎಲ್ಲದರಿಂದಲೂ ಹಿರಿತನವುಳ್ಳ ಶ್ರೀ ಮಹಾಬಲೇಶ್ವರ ಭಟ್ಟರನ್ನು ಅತೀ ಸಮೀಪದಿಂದಕಂಡದ್ದು ಇತ್ತೀಚಿಗೆ ಎರಡು ವರ್ಷಗಳ ಹಿಂದೆ. ಏನೂ ಅಗ್ಗಳಿಕೆ ಇಲ್ಲದ ನನ್ನನ್ನು ನಮ್ಮ ಗುರುಗಳಾದ ಶ್ರೀ ಜಿ.ಎಂ. ಭಟ್‌ರವರು ಪರಿಷತ್ತಿನ ಅಧ್ಯಕ್ಷರಿಗೆ ಪರಿಚಯಿಸಿದರು. ಶ್ರೀಯುತರು ತುಂಬು ಆತ್ಮೀಯತೆಯಿಂದ ನನ್ನ ಹೆಸರು-ದೆಸೆಗಳನ್ನು ವಿಚಾರಿಸಿದರು. ದೊಡ್ಡ ಮನುಷ್ಯರನ್ನು ಮಾತನಾಡಿಸುವುದು ಹೇಗೋ ಏನೋ, ನಮ್ಮಂತಹವರ ಕಡೆ ಅವರ ಲಕ್ಷ್ಯಹರಿಯಲು ಸಾಧ್ಯವೇ ಇಲ್ಲ ಎಂದು ತಿಳಿದಿದ್ದೆ. ಅದ್ಭುತ ಎಂದರೆ, ಶ್ರೀಯುತ ಭಟ್ಟರು ನನ್ನ ಅನಿಸಿಕೆಯನ್ನು ಹುಸಿಗೊಳಿಸಿದರು. 'ತುಂಬಿದ ಕೊಡ ತುಳುಕುವುದಿಲ್ಲ' ಎನ್ನುವ ಗಾದೆ ಮಾತನ್ನು ಸತ್ಯವಾಗಿಸಿದರು.

ಶ್ರೀ ಭಟ್ಟರು ನಿಗರ್ವಿ, ಸರಳ ಸ್ವಭಾವದ ವ್ಯಕ್ತಿ. ಪ್ರತಿಯೊಬ್ಬರನ್ನೂ ಅವರು ಮನಃಪೂರ್ವಕವಾಗಿ ನುಡಿಸುತ್ತಾರೆ. ಹಿರಿಯರಿರಲಿ, ಕಿರಿಯರಿರಲಿ, ವಿದ್ಯಾರ್ಥಿಯೇ ಆಗಲಿ ಅಥವಾ ಅನುಭವಸ್ಥರಿರಲಿ ಎಲ್ಲರನ್ನೂ ಸಮನಾಗಿ ಕಾಣುತ್ತಾರೆ. ಗೌರವವನ್ನು ಕೊಟ್ಟು ತೆಗೆದುಕೊಳ್ಳುವುದನ್ನು ಶ್ರೀ ಮಹಾಬಲೇಶ್ವರ ಭಟ್ಟರಿಂದ ಕಲಿಯಬೇಕು. ಪ್ರತಿಭೆಯನ್ನು ಕಂಡಾಗ ಅದನ್ನು ಬೆಳೆಸಿಕೊಳ್ಳಲು ಅವಕಾಶ ನೀಡಿ ಪ್ರೋತ್ಸಾಹಿಸುತ್ತಾರೆ. ತಾವೂ ದುಡಿಯುತ್ತಾ ಇತರು ತಾವಾಗಿ ಮುಂದೆ ಬಂದು ಕೆಲಸ ಮಾಡುವಂತೆ ಆದರ್ಶವಾಗಿ ಇರುವವರು.

'ಮಹಾನಂದ' ಅಭಿನಂದನಾ ಗ್ರಂಥವನ್ನು ಓದಿದಾಗ ಬೆರಗುಗೊಂಡೆ ಶ್ರೀಯುತರಿಗೆ ಪರಿಚಯವಿಲ್ಲದ ಸಾಹಿತಿಯಾಗಲಿ, ಕವಿಯಾಗಲೀ ಇಲ್ಲ ಎನಿಸಿತು. ದಿಗ್ಗಜರೊಂದಿಗಿನ ಅವರ ಒಡನಾಟ, ಪಡೆದಿರುವ ಅನುಭವ ಇವೆಲ್ಲ ಸಾಗರದ ಸಾಹಿತ್ಯಾಸಕ್ತರಿಗೊಂದು ಆದರ್ಶ. ಶ್ರೀಯುತ ಭಟ್ಟರನ್ನು ಮೆಚ್ಚಿಕೊಳ್ಳದ ವ್ಯಕ್ತಿಯೇ

ಇಲ್ಲ. ಕನ್ನಡ ಭಾಷೆಗೆ ಸಂಬಂಧಿಸಿದ ಕಾರ್ಯಗಳೆಂದರೆ ಶ್ರೀಯುತರು ಊಟ-ನಿದ್ರೆಯನ್ನೂ ಮರೆತು ದುಡಿಯುವ, ಸಮರ್ಪಣಾ ಮನೋಭಾವಿಗಳು. ಸಮಯದ ಮಹತ್ವ, ಮಾಡಬೇಕಾದ ಕೆಲಸದಲ್ಲಿ ಶ್ರದ್ಧೆ, ಅಚ್ಚುಕಟ್ಟುತನಗಳಿಗೆ ಖ್ಯಾತನಾಮರು.

'ಆಡುಮುಟ್ಟದ ಸೊಪ್ಪಿಲ್ಲ' ಎಂಬ ಗಾದೆಯಂತೆ ಭಟ್ಟರು ದುಡಿಯದ ಕ್ಷೇತ್ರವೇ ಇಲ್ಲವೇನೋ. ೧೯೪೭ರಿಂದಲೇ ಸಾಹಿತ್ಯದ ಮೇಲಿನ ಭಟ್ಟರ ಒಲವು ವ್ಯಕ್ತವಾಗಿದೆ. ಪುಸ್ತಕ ಓದುವುದು, ಕೊಳ್ಳುವುದು, ಮತ್ತು ಸಾಹಿತ್ಯ ರಚನೆಯಿಂದಲೂ ಸರಸ್ವತಿಯ ಸೇವೆಯನ್ನು ಮಾಡಬಹುದು. ಆದರೆ ಶ್ರೀ ಮಹಾಬಲೇಶ್ವರ ಭಟ್ಟರಿಗೆ ಎಲ್ಲಾ ವಿಷಯಗಳಲ್ಲಿಯೂ ಸಹಜತೆಯನ್ನು ಕಾಪಾಡಿಕೊಳ್ಳುವ ಗುಣವಿದೆ. 'ಜಲಂಧರ ಪ್ರಕಟನಾಲಯ'ದ ಮೂಲಕ ಅನೇಕ ಕವಿ- ಸಾಹಿತಿಗಳ ಪುಸ್ತಕಗಳನ್ನು ಪ್ರಕಟಿಸಿ, ಕನ್ನಡ ಸಾರಸ್ವತ ಲೋಕಕ್ಕೆ ಮತ್ತಷ್ಟು ಕೊಡುಗೆಗಳು ಸೇರುವಂತೆ ಮಾಡಿದ್ದಾರೆ.

ಶ್ರೀ ಮಹಾಬಲೇಶ್ವರ ಭಟ್ಟರ ಸಾಧನೆಗಳನ್ನು ಅವಲೋಕಿಸಿದಾಗ ಅಭಿಮಾನವೆನ್ನಿಸದೇ ಇರಲಾರದು. ಸ್ವಾತಂತ್ರ್ಯ ಸಿಕ್ಕ ವರ್ಷದಿಂದ ಸುಮಾರು ೪೩ ವರ್ಷಗಳ ಕಾಲ ರಾಜಕೀಯ ಕ್ಷೇತ್ರದಲ್ಲಿ ಸಕ್ರಿಯರಾಗಿದ್ದರು. ೧೯೪೯ರಲ್ಲಿ ಕನ್ನಡಸಾಹಿತ್ಯ ಪರಿಷತ್ತಿನ ಕವಿಗೋಷ್ಠಿಯಲ್ಲಿ ಭಾಗವಹಿಸಿದರು. ಅಲ್ಲಿಂದ ಭಟ್ಟರು ಕವಿಯಾಗಿ ಜನರಿಗೆ ಪರಿಚಿತರಾದರು. ಸಾಗರ ಪುರಸಭೆಗೆ ೧೯೫೩ರಲ್ಲಿ ಸದಸ್ಯರಾಗಿ ಆಯ್ಕೆಯಾಗಿ ೬ ವರ್ಷಗಳ ಕಾಲ ಸೇವೆ ಸಲ್ಲಿಸಿದರು. ಜಿಲ್ಲಾ ಬರಹಗಾರ ಮಂಡಳಿಯ ಅಧ್ಯಕ್ಷರಾಗಿದ್ದರು. ಮಲೆನಾಡು ಅಡಿಕೆ ಮಾರಾಟ ಸಹಕಾರ ಸಂಘ, ಶಿವಮೊಗ್ಗ ಇದರ ನಿರ್ದೇಶಕರಾಗಿ ೨೧ ವರ್ಷಗಳ ಕಾಲ ಮಾಡಿದ ಕೆಲಸ ಗಮನಾರ್ಹವಾದುದು.

ಕಲೆ, ಸಾಹಿತ್ಯ, ಸಂಸ್ಕೃತಿ, ಶಿಕ್ಷಣ ಇದರ ಅಭಿವೃದ್ಧಿಗಾಗಿ ಶ್ರಮಿಸಿದ್ದಾರೆ. ಶ್ರೀಯುತರ ಚಿಂತನ ಶಕ್ತಿ ಪ್ರಭಾವಶಾಲಿಯಾದುದು- ಎನ್ನುವುದಕ್ಕೆ ೧೯೬೭ರಿಂದ ಬೆಂಗಳೂರಿನ ಸಂಯುಕ್ತ ಕರ್ನಾಟಕ ಪತ್ರಿಕೆಗೆ 'ಬೇವು-ಬೆಲ್ಲ' ಅಂಕಣಕಾರರಾಗಿ, ಶಿವಮೊಗ್ಗದ ಜನವಾರ್ತೆ ಪತ್ರಿಕೆಗೆ 'ನಿಮ್ಮೊಡನೆ' ಅಂಕಣಕಾರರಾಗಿ ನಾನಾ ವಿಚಾರಗಳನ್ನು ಕುರಿತು ನಡೆಸುತ್ತಿರುವ ಬರವಣಿಗೆಯೇ ಸಾಕ್ಷಿಯಾಗಿದೆ. ಇವರು ೧೯೬೨ರಲ್ಲಿ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಆಯ್ಕೆಯಾದರು. 'ಸಾಗರ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು ಎಂದರೆ ಶ್ರೀ ಮಹಾಬಲೇಶ್ವರ ಭಟ್ಟರು' ಎನ್ನುವಷ್ಟು ಪರಿಷತ್ತಿನ ಬೆಳವಣಿಗೆಗಾಗಿ ನಿಷ್ಕಾಮ ಕರ್ಮಯೋಗಿಯಂತೆ ಕಾರ್ಯನಿರತರಾಗಿದ್ದಾರೆ.

ಶ್ರೀಯುತರು ಜನಿಸಿದ್ದು ತೊರೆಮನೆ ಎಂಬ ಹಳ್ಳಿಯಲ್ಲಿ. ಸ್ವಪ್ರಯತ್ನದಿಂದ ಮೇಲೇರಿದ ಮಹಾನುಭಾವರು. ತುಂಬಿದ ಸಂಸಾರವನ್ನು ಹೊಂದಿರುವ ಸಂತಪ್ತ

ಜೀವಿ. ತಂದೆ ಶ್ರೀ ವಿಶ್ವನಾಥ ಭಟ್ಟ, ತಾಯಿ ಶ್ರೀಮತಿ ವೆಂಕಮ್ಮನವರ ಸತ್ಪುತ್ರರಾಗಿ ೮.೯.೧೯೨೮ರಲ್ಲಿ ಜನಿಸಿದರು. ಪತ್ನಿ ಶ್ರೀಮತಿ ಪದ್ಮಾವತಿ ಅಂತಃಕರಣದ ಸಾಕಾರ ಮೂರ್ತಿ. ಮಮತೆಯ ಮಾತೆಯಾಗಿ ಮಕ್ಕಳ ಪಾಲನೆ ಮಾಡುತ್ತ, ಪತಿಯ ಚಟುವಟಿಕೆಗಳಿಗೆ ಪ್ರೀತಿಯಿಂದ ಸಹಕರಿಸುತ್ತಾರೆ.

'ಹೂಮಾಲೆ', 'ಋತುಗಾನ'ಗಳಿಂದ ಶ್ರೀಯುತ ಭಟ್ಟರು ಕವಿಯಾಗಿಯೂ 'ಗುಲಾಬಿ', 'ತೋರಣ'ಗಳನ್ನು ಬರೆದು ಕತೆಗಾರರೆಂದು ಪ್ರಸಿದ್ಧರಾದರು. ಪ್ರಖ್ಯಾತ ವ್ಯಕ್ತಿಗಳ ಜೀವನ ಪರಿಚಯ, ಸಾಹಿತ್ಯ ಶಿಲ್ಪಿಗಳ ಪರಿಚಯ ನೀಡಿ, 'ಅಣ್ಣ-ತಂಗಿ', 'ವ್ಯಾಘ್ರಮುಖಿ' 'ಮಾನವರಾಕ್ಷಸರು' ಕಾದಂಬರಿಗಳ ಮೂಲಕ ಸಾಹಿತ್ಯದ ವಿವಿಧ ಕ್ಷೇತ್ರಗಳಲ್ಲಿ ಬರಹಗಾರರಾಗಿ ಪ್ರಖ್ಯಾತರಾದರು. 'ನನ್ನಬದುಕು' ಅವರ ಜೀವನ ಚಿತ್ರವನ್ನು ಒಳಗೊಂಡ ಪುಸ್ತಕ. ಪ್ರಕಟಣೆಗೆ ಸಿದ್ಧವಾಗುತ್ತಿರುವ ಈ ಕೃತಿ ಕಿರಿಯ ಸಾಹಿತಿಗಳಿಗೆ ಖಂಡಿತಾ ಒಂದು ಉತ್ತಮ ಕೈಗನ್ನಡಿಯಾಗಬಲ್ಲರು.

೭೦ ವರ್ಷಗಳ ತುಂಬು ಜೀವನವನ್ನು ನಡೆಸುತ್ತಿರುವ ಶ್ರೀಯುತರನ್ನು ಕಂಡರೆ ವೃದ್ಧಾಪ್ಯವು ಹತ್ತಿರ ಬರಲಿಕ್ಕೆ ನಾಚುವುದು. ಇಂದಿನ ಕಾಲದ ಎಷ್ಟೋ ಜನ ಸೋಮಾರಿ ಯುವಕರನ್ನು ತಲೆತಗ್ಗಿಸುವಂತೆ ಮಾಡಬಲ್ಲ ಹುರುಪು, ಉತ್ಸಾಹ, ದಕ್ಷತೆ, ಕ್ರಿಯಾಶೀಲತೆಗಳುಳ್ಳ ಶ್ರೀಯುತರಿಗೆ ೭೦ ವರ್ಷ ಎಂದರೆ ಮೂಗಿನ ಮೇಲೆ ಬೆರಳಿಡುವಂತೆ ಆಗುತ್ತದೆ. ಎಂದೂ ಮುಖಗಂಟಿಕ್ಕಿಕೊಳ್ಳದೆ, ನಗುನಗುತ್ತಾ ಇರುವ ರೀತಿ,ಆದರಣೀಯ ಮಾತು,ನಲ್ನುಡಿ, ನಸುನಗೆ, ನಿರಂತರ ಚಟುವಟಿಕೆಗಳೇ ಭಟ್ಟರ ಆರೋಗ್ಯದ ಮತ್ತು ಆಕರ್ಷಕ ವ್ಯಕ್ತಿತ್ವದ ರಹಸ್ಯ. ವಿವಿಧ ಸಂಘ-ಸಂಸ್ಥೆಗಳ ಅಧ್ಯಕ್ಷರಾಗಿ, ಉಪಾಧ್ಯಕ್ಷರಾಗಿ, ಬರಹಗಾರರಾಗಿ, ಪ್ರಕಾಶಕರಾಗಿ, ಆಡಳಿತ ಗಾರರಾಗಿ, ಪತ್ರಿಕೆಗಳ ಅಂಕಣಕಾರರಾಗಿ, ಇಂದಿಗೂ ಅಷ್ಟೇ ಚಟುವಟಿಕೆಯಿಂದಿರುವ ಶ್ರೀಯುತರನ್ನು ಕಂಡರೆ ಗೌರವ ತಾನಾಗಿಯೇ ಮೂಡುವುದು.

ಸಂಘಟನೆ ಕ್ಲಿಷ್ಟಕರವಾದಂತೆ, ಸ್ವಇಚ್ಛೆ ಮತ್ತು ಪ್ರೇರಣೆಗಳಿಂದ ಸಂಘವನ್ನು ಬೆಳೆಸುವವರೂ ಬೇಕು. ಸಾಗರ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು ಹೆಚ್ಚು ಸಕ್ರಿಯವಾಗಲು, ಜನಪ್ರಿಯವಾಗಲು ಶ್ರೀ ಭಟ್ಟರೇ ಕಾರಣ. ಉತ್ತಮ ಮಟ್ಟದ ಕಾರ್ಯಕ್ರಮಗಳನ್ನು ಅಚ್ಚುಕಟ್ಟಾಗಿ ನಿಯೋಜಿಸುತ್ತಾರೆ. ಅಲಭ್ಯವೆಂದುಕೊಳ್ಳಲಾದ ಅನೇಕ ಶ್ರೇಷ್ಠ ಸಾಹಿತಿ, ಕವಿಗಳನ್ನು ತಮ್ಮ ವ್ಯಕ್ತಿತ್ವದಿಂದ ಸೆಳೆದು, ಸಾಗರಕ್ಕೆ ಆಗಮಿಸುವಂತೆ ಮಾಡಿದ ಮಹಾನುಭಾವರು. ಬಿರುದಿಗಾಗಿ, ಕೀರ್ತಿಗಾಗಿ ತವಕಿಸುವವರ ಮಧ್ಯೆ ಶ್ರೀ ಮಹಾಬಲೇಶ್ವರ ಭಟ್ಟರನ್ನು ಪ್ರಶಂಸೆ ತಾನಾಗಿ ಅರಸಿ ಬಂದಿದೆ. ತಾವು ಮಾತ್ರ ಹೆಸರು ಗಳಿಸಿದರೆ ಸಾಕೆಂಬ ಸ್ವಾರ್ಥ ವ್ಯಕ್ತಿಗಳ ಮಧ್ಯೆ ಶ್ರೀಯುತರು ಒಂದು ಅಪವಾದದಂತೆ ಇದ್ದಾರೆ. ಹಿರಿಯ ಸಾಹಿತಿಗಳನ್ನು

ಗೌರವಿಸುವುದರ ಜೊತೆಗೆ ಕಿರಿಯ ಸಾಹಿತಿಗಳ ಬೆನ್ನುತಟ್ಟಿ ಮಾರ್ಗದರ್ಶನ ನೀಡುವ ಪ್ರಾಂಜಲ ಮನಸ್ಸಿನವರು.

ಶ್ರೀಯುತರ ಬಗ್ಗೆ ಲೇಖನ ಬರೆದು, ಒಂದು ಅರ್ಥದಲ್ಲಿ 'ಗುರು-ಹಿರಿಯವಂದನೆ' ಸಲ್ಲಿಸುವ ಅವಕಾಶಮಾಡಿಕೊಟ್ಟಿದ್ದಕ್ಕೆ ಕೃತಜ್ಞಳಾಗಿದ್ದೇನೆ. ಅತಿ ಅಲ್ಪ ಪರಿಚಯದಿಂದ ಶ್ರೀಯತರ ವಿಷಯಕವಾಗಿ ಹೇಳಲು ಪ್ರಯತ್ನಿಸಿದ ಮಾತುಗಳು 'ಹಿಮಾಲಯವನ್ನು ವರ್ಣಿಸುವ' ಪ್ರಯತ್ನವೇ ಆಗಿರಬಹುದು. ಸಾರ್ಥಕ ಜೀವನವನ್ನು ನಡೆಸುತ್ತಿರುವ ಶ್ರೀ ಮಹಾಬಲೇಶ್ವರ ಭಟ್ಟರ ಪರಿಚಿತ ವರ್ಗದಲ್ಲಿ ನಾನೂ ಸೇರಿರುವುದಕ್ಕೆ ಹೆಮ್ಮೆ ಎನಿಸುತ್ತದೆ. ಇಂತಹ ಜೀವಿಗಳು ನೂರ್ಕಾಲ ಬಾಳಲಿ ಎಂದು ದೇವರಲ್ಲಿ ಪ್ರಾರ್ಥಿಸುತ್ತೇನೆ.

# ಭಟ್ಟರ ವಿಶಿಷ್ಟ ವ್ಯಕ್ತಿತ್ವ

– ಬಂಜಗೆರೆ ವಿ.ಟಿ. ಸ್ವಾಮಿ.

'ಬೆಳೆಯುವ ಪೈರು ಮೊಳಕೆಯಲ್ಲಿಯೇ' ಎಂಬಂತೆ ಯಾವುದೇ ಒಬ್ಬ ವ್ಯಕ್ತಿ ತನ್ನ ಉನ್ನತಿಯನ್ನು ಕಾಣಬೇಕಾದರೆ ಮಗುವಾಗಿದ್ದಾಗಲೇ ಕೆಲವೊಂದು ವಿಶಿಷ್ಟ ಗುಣಗಳನ್ನುನಾವು ಮನಗಾಣಬಹುದು. ಅದು ವಂಶ ಪರಂಪರೆಯಾಗಿರಬಹುದು, ಇಲ್ಲವೇ ತಾನು ಬೆಳೆದ ಪರಿಸರವಾಗಿರಬಹುದು, ಹೀಗೆ ಆ ವ್ಯಕ್ತಿಯ ಮೇಲೆ ಒಂದಲ್ಲ ಒಂದಂಶ ಒಳಗೊಂಡಿರುವುದನ್ನು ನಾವು ಗಮನಿಸಬಹುದು. ಅಂಥಹ ವಿಶಿಷ್ಟವಾದ ವ್ಯಕ್ತಿತ್ವವನ್ನು ಹೊಂದಿದ ತೊರೆಮನೆ ಮಹಾಬಲೇಶ್ವರ ಭಟ್ಟರ ಬಗ್ಗೆ ಬರೆಯುವುದಾದರೆ 'ತುಂಬಿದ ಸಮುದ್ರದಲ್ಲಿ ತಂಬಿಗೆಯಿಂದ ನೀರು ತುಂಬುವಂತಾದೀತು' ಆದರೂ ಸಹಾ ಅವರ ಬಗ್ಗೆ ಇರುವ ನನ್ನ ಆತ್ಮೀಯತೆಯ ವಿಚಾರ ಹಾಗೂ ವಿಶಿಷ್ಟ ವ್ಯಕ್ತಿತ್ವದ ಬಗ್ಗೆ ತಿಳಿಸಲು ಇಚ್ಚಿಸಿದ್ದೇನೆ.

ಹಚ್ಚ ಹಸುರಿನ ಕಾಡಿನಿಂದ ಕೂಡಿದ ಸುತ್ತಲೂ ಶರಾವತಿಯ ನೀರು ಆವರಿಸಿಕೊಂಡು ಮಿನಿ ದ್ವೀಪವೊಂದು ರಚಿತವಾದ ಕರೂರು ಹೋಬಳಿ ಪ್ರಾಂತ್ಯ ನಿಸರ್ಗದ ಸ್ವರ್ಗ, ಇಂಥಹ ಪ್ರದೇಶದ ತೊರೆಮನೆಯಲ್ಲಿ ಸಂಪ್ರದಾಯಸ್ಥ ಕುಟುಂಬದ ದಂಪತಿಗಳಾದ ಶ್ರೀ ವಿಶ್ವನಾಥ ಭಟ್ಟ ಮತ್ತು ಅವರ ಧರ್ಮಪತ್ನಿ ಸಕಲ ಸದ್ಗುಣವಂತೆ ಶ್ರೀಮತಿ ವೆಂಕಮ್ಮ ಇವರುಗಳ ಏಕೈಕ ಸುಪುತ್ರರಾಗಿ ೮.೯.೧೯೨೮ರಂದು ಜನಿಸಿದರು. ಭಟ್ಟರು, ಇದೇ ಗ್ರಾಮದಲ್ಲಿಯೇ ಪ್ರಾಥಮಿಕ ಶಿಕ್ಷಣವನ್ನು ಪಡೆಯುತ್ತಿರುವಾಗಲೇ ಅವರಿಗೆ ಪ್ರಕೃತಿಯನ್ನು ಕಂಡರೆ ಬಹಳ ಪ್ರೀತಿ. ಸ್ವತಂತ್ರವಾಗಿ ಹಾರಾಡುವ ಹಕ್ಕಿಗಳನ್ನು ತದೇಕ ಚಿತ್ತದಿಂದ ನೋಡುತ್ತಾ, ತನ್ನನ್ನೇ ತಾನು ಮರೆತು ಚಪ್ಪಾಳೆ ತಟ್ಟುತ್ತಾ ಕುಣಿಯುತ್ತಿದ್ದರು. ಕೆಲವು ಪ್ರಾಣಿಗಳನ್ನು ಮುದ್ದಿನಿಂದ ಸಾಕುವುದು, ಅತಿ ಶಿಸ್ತನ್ನು ಹಾಗೂ ಜವಾಬ್ದಾರಿಯುತ ಕೆಲಸಗಳನ್ನು ಚಿಕ್ಕ ಹುಡುಗನಿರುವಾಗಲೇ ನೆರವೇರಿಸುತ್ತಿದ್ದರು ಎಂಬುದು ಅವರ ನಿಕಟವರ್ತಿ ಬಂಧುಗಳ ಬಾಯಿಂದ ಬಂದ ಆತ್ಮೀಯತೆಯ ನುಡಿಮುತ್ತುಗಳು.

ಕಲೆ ಸಾಹಿತ್ಯ, ಸಂಘಟನೆ, ಸೇವೆ, ಹೀಗೆ – ಭಾರತೀಯ ಆಚಾರ ವಿಚಾರಗಳ ಬಗ್ಗೆ ನೂರಾರು ಭಾವನೆಗಳ ಮನೆಯಾಗಿದ್ದ ಅವರ ಮನಸ್ಸು, ಅದರಂತೆ ಸಾಧನೆಯತ್ತ

ಗಮನ ಹರಿಸಿದ ಇವರ ಸಾಧನೆ ಆಧುನಿಕ ಹೋರಾಟಗಾರರ ಸಾಲಿಗೆ ಸೇರುವುದರಲ್ಲಿ ಅನುಮಾನವೇ ಇಲ್ಲ.

ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಕಾಂಗ್ರೆಸ್ ಸಂಸ್ಥೆಯಿಂದ ಹಿಡಿದು ಇತ್ತೀಚಿನ ಅನೇಕ ಸಂಘ-ಸಂಸ್ಥೆಗಳಲ್ಲಿ ನಿರ್ವಹಿಸಿದ ಇವರ ಕಾರ್ಯಗಳು ಹಾಗೂ ನಿಷ್ಕಾಮ ಸೇವೆ ಜನರ ಮನದಲ್ಲಿ ಹಚ್ಚಹಸುರಾಗಿ ಉಳಿದಿದೆ. ರಾಜಕೀಯ ಕ್ಷೇತ್ರವನ್ನು ತ್ಯಜಿಸಿ ಸಾಹಿತ್ಯ ಕ್ಷೇತ್ರದಲ್ಲಿ ತೊಡಗಿದ ಇವರ ದಿಟ್ಟ ನಿಲುವುಗಳು ಮತ್ತು ಸಂಘಟನೆ ರಾಜ್ಯಕ್ಕೆ ಮಾದರಿಯೆನಿಸಿವೆ. ತಾಲ್ಲೂಕು ಸಾಹಿತ್ಯ ಪರಿಷತ್‌ನ ಅಧ್ಯಕ್ಷರಾದ ಮೇಲೆ ಕನ್ನಡಮ್ಮನ ಸೇವೆಯನ್ನು ಅತ್ಯಂತ ಪ್ರೀತಿಯಿಂದ, ಶ್ರದ್ಧೆಯಿಂದ ಮಾಡಿಕೊಂಡು ಬಂದಿದ್ದಾರೆ. ಹಿರಿಯರಿಗೆ ಹಾಗೂ ಪ್ರತಿಭಾವಂತರಿಗೆ ನೀಡುತ್ತಿರುವ ಗೌರವ, ಕಿರಿಯರಲ್ಲಿನ ಇವರ ಆತ್ಮೀಯತೆ, ಪ್ರೋತ್ಸಾಹ ಎಂಥಹವರನ್ನೂ ಮಂತ್ರ ಮುಗ್ಧರನ್ನಾಗಿಸುತ್ತವೆ. ಬೇಧ ಭಾವನೆಗಳನ್ನು ತೊರೆದು ಸರ್ವರನ್ನು ಒಗ್ಗೂಡಿಸಿ ಸಾಗರ ತಾಲೂಕಿನಲ್ಲಿ ಸಾಹಿತ್ಯಕ ಕ್ರಾಂತಿಯನ್ನೇ ಮಾಡುತ್ತಿದ್ದಾರೆ. ಇತ್ತೀಚಿನ ವರ್ಷಗಳಲ್ಲಿ ಅವರು ಸಾಹಿತ್ಯದ ಬಗ್ಗೆ ಹಮ್ಮಿಕೊಂಡಿರುವ ಕಾರ್ಯಕ್ರಮಗಳ ಅಗಾಧತೆ, ಅವುಗಳಲ್ಲಿನ ಶಿಸ್ತು, ಅಚ್ಚುಕಟ್ಟುತನ, ಸಮಯ ಪ್ರಜ್ಞೆ ಇವೆಲ್ಲವೂ ಇಡೀ ನಾಡಿಗೇ ಮಾದರಿಎನಿಸಿವೆ.

ಹತ್ತಾರು, ಸಂಘ ಸಂಸ್ಥೆಗಳಲ್ಲಿ ತಮ್ಮ ಕಾರ್ಯ ದಕ್ಷತೆಯಿಂದ ಯಾವ ರೀತಿಯ ಫಲಾಪೇಕ್ಷೆಯನ್ನೂ ಬಯಸದೆ ' ಜನ ಸೇವೆಯೇ ಜನಾರ್ದನನ ಸೇವೆ' ಎಂಬಂತೆ ಕಾರ್ಯ ನಿರ್ವಹಿಸಿಕೊಂಡು ಬರುತ್ತಿರುವ ಇವರ ವ್ಯಕ್ತಿತ್ವವು ಕಲಶಪ್ರಾಯವಾದುದು. ಇವರ 'ಅಣ್ಣ-ತಂಗಿ' ಕಾದಂಬರಿಯಲ್ಲಿ ಮೂಡಿಬರುವ ಅಂಶಗಳನ್ನೇ ಗಮನಿಸಿದಾಗ ಅದರಲ್ಲಿ ಎಷ್ಟೊಂದು ರಚನಾತ್ಮಕ ಹಾಗೂ ಭಾವ ಬಿಂಬಗಳು ತುಂಬಿವೆ ಎಂದರೆ ಅದನ್ನು ಓದಿದ ಪ್ರತಿಯೊಬ್ಬ ಓದುಗನೂ ಸಹಾ ಅವರ ಪ್ರತಿಭಾ ಕೌಶಲ್ಯಕ್ಕೆ ಮಾರುಹೋಗುತ್ತಾನೆ. ಹೀಗೆಯೇ ಅವರ ಅನೇಕ ಕಥೆಗಳು, ಲೇಖನಗಳು ನಾಡಿನ ಓದುಗರನ್ನು ಆಕರ್ಷಿಸಿವೆ.

ಇವರ ವ್ಯಕ್ತಿತ್ವ ಚಟುವಟಿಕೆ, ಕಾರ್ಯ ಬದ್ಧತೆ, ಶಿಸ್ತು ಅಚ್ಚುಕಟ್ಟುತನ, ಇವರ ಆತ್ಮೀಯತೆಗಳನ್ನು ಕಂಡ ಎಂಥಹವರಿಗೂ ಇವರ ಮೇಲೆ ತುಂಬು ಗೌರವ ಭಾವನೆ, ಅಭಿಮಾನಗಳನ್ನು ಮೂಡಿಸುತ್ತವೆ. ಭಟ್ಟರನ್ನು ಕಂಡ ಯಾರಿಗಾದರೂ ಇವರಿಗೆ ಎಪ್ಪತ್ತು ವರ್ಷವೆಂದೆನಿಸಲಾರದು. ಕಾಯ ಹಾಗೂ ಕರ್ಮ ಶುದ್ಧತೆಯಿಂದ ಸದಾ ಚಟುವಟಿಕೆಯಲ್ಲಿರುವ ಇವರು ಇನ್ನು ಇಪ್ಪತ್ತರ ತರುಣರಂತೆ ಕಂಡುಬರುತ್ತಾರೆ - ಇವರಿಗೆ ಮಂಗಳವಾಗಲೆಂದು ಹಾರೈಸುತ್ತೇನೆ.

# ಎಪ್ಪತ್ತರ ಹಬ್ಬ

**-ನಾರಾಯಣ ಹೆಗಡೆ, ಕುಂದರಗಿ**

ಗರಿಗರಿಯಾದ ಪಂಚೆ, ನೆಹರೂ ಜುಬ್ಬಾ, ತಿದ್ದಿ ತೀಡಿದ ಕ್ರಾಪು ನಗುಮುಖ, ಒಮ್ಮೆ ಆದ ಪರಿಚಯ ಎಷ್ಟೋ ಸಂವತ್ಸರದ ನಂತರದಲ್ಲಿ ಭೇಟಿಯಾದಾಗಲೂ ನೆನಪಿನ ಆತ್ಮೀಯ ಭಾವದಿಂದ ಮಾತನಾಡಿಸುವ ರೀತಿ ಸದಾ ಆತ್ಮೀಯ, ಪರಿಚಯ ಸಮೂಹವನ್ನು ಬೆಳೆಸಿ- ಉಳಿಸಿಕೊಂಡು ಬಂದ-ಸಾಗರದ ಶ್ರೀ ಟಿ. ಮಹಾಬಲೇಶ್ವರ ಭಟ್ಟರಿಗೆ ೭೦ರ ಹಬ್ಬ ಹತ್ತಿರವಾಗುತ್ತದೆಂದು ಕೇಳಿ ತಿಳಿದಾಗ, ಅವರ ಕಾರ್ಯ ತತ್ಪರತೆ, ಉತ್ಸಾಹ, ಕ್ರಿಯಾಶೀಲತೆಯ ಬಗ್ಗೆ ನೆನೆದಾಗ ಅನಿಸಿದ್ದು ಅವರು ೨೦ರ ಮುಂದಿನವರು ಎಂದೇ.

ಶ್ರೀ ಮಹಾಬಲೇಶ್ವರ ಭಟ್ಟರ ಪರಿಚಯ... ನನಗೆ ಬಹಳ ಹಿಂದಿನದು, ಮಹಾಬಲೇಶ್ವರ ಭಟ್ಟರು ಆಗತಾನೇ ಸಾಹಿತ್ಯ ಕೃಷಿ ಆರಂಭಿಸಿದ-ಮುಂದುವರೆಯುತ್ತಿರುವ ಸಮಯ, ನಾನೂ ಆ ಕೃಷಿಯಲ್ಲಿ ಅಲ್ಪ-ಸ್ವಲ್ಪ ತೊಡಗಿಸಿಕೊಳ್ಳುತ್ತಿದ್ದ ಸಂದರ್ಭ. ನನಗಿಂತ ಸ್ವಲ್ಪ ಮುಂದಿದ್ದ ಅವರ ಪರಿಚಯವನ್ನು ನಾನಾಗಿ ಸಾಗರದಲ್ಲಿ ಮಾಡಿಕೊಂಡ ನೆನಪು ನನಗೆ ಇನ್ನೂಮಾಸಿಲ್ಲ - ಆ ನಂತರದಲ್ಲಿ ಸಾಹಿತ್ಯ ಕ್ಷೇತ್ರಕ್ಕೆ ಸಂಬಂಧಿಸಿಯೋ, ರಾಜಕೀಯ ಕ್ಷೇತ್ರಕ್ಕೆ ಸಂಬಂಧಿಸಿಯೋ ಶುಭಕಾರ್ಯದಲ್ಲೊ ಬೇರೆ -ಬೇರೆ ಸಮ್ಮೇಳನದಲ್ಲೋ... ಬಹುದಿನದ ನಂತರದ ದೀರ್ಘಕಾಲದಲ್ಲಿ ಆಗಾಗ ನಾವು ಭೇಟಿಯಾಗುತ್ತಿದ್ದೇವೆ. ನಂತರದ ದಿನಗಳಲ್ಲಿ ನಮ್ಮ ಪ್ರಧಾನ ಆದ್ಯತಾ ಕಾರ್ಯಕ್ಷೇತ್ರಗಳು ಬೇರೆ-ಬೇರೆಯಾಗಿ ಮುನ್ನಡೆದಾಗಲೂ ಕೂಡ ನಮ್ಮ ಸ್ನೇಹ, ವಿಶ್ವಾಸ, ಅಭಿಮಾನ, ನೆನಪಿನಿಂದ ಹಸುರಾಗಿಯೇ ಇದೆ- ಎಂದರೆಅತಿಶಯೋಕ್ತಿಯಲ್ಲ.

ಶ್ರೀ ಭಟ್ಟರ ಅಧಿಕೃತ ಓದು, ಒಕ್ಕಾಲು, ಅಧ್ಯಯನ ಅನುಭವ ಮುಕ್ಕಾಲು. ಅವರ ಆಸಕ್ತಿ ವಿಷಯ ಬಹುಮುಖವಾದುದು. ಕೃಷಿಕರಾದ ಅವರು ಸಹಕಾರ, ರಾಜಕೀಯ, ಸಾಹಿತ್ಯ ಪ್ರಕಟನೆ, ಕಲಾ ಸಂಘಟನೆ, ಜನರ ಸಂಕಷ್ಟ ಬದುಕಿಗೆ ಸಂಬಂಧಿಸಿದ ಕೆಲಸ, ಪ್ರಸ್ತುತ ವಿಚಾರ. ನಡವಳಿಕೆ ಬಗೆಗೆ ಅಂಕಣ ಬರಹಗಾರ... ಹೀಗೆ ತನ್ನ ಸುತ್ತಲಿನ ಎಲ್ಲಾ ರಂಗಗಳಲ್ಲಿ ಅವರ ಆಸಕ್ತಿ, ಕಾಳಜಿ, ಸ್ಪಂದನವನ್ನು ಕಾಣಬಹುದಾಗಿದೆ. ಈ ಎಲ್ಲ ಕ್ಷೇತ್ರಗಳಲ್ಲಿನ ಅವರ ಆಸಕ್ತಿ ಹಾಗೂ ಸ್ಪಂದನ

ಭಟ್ಟರಿಗೆ ಎಲ್ಲಾ ಕ್ಷೇತ್ರಗಳಲ್ಲಿಯ ಅಭಿಮಾನಿಗಳೂ ಸ್ನೇಹಿತರೂ ಅಪಾರವಾದ ಸಂಖ್ಯೆಯಲ್ಲಿ ಇರುವುದು ಅವರನ್ನು - ಉಳಿಸಿ-ಬೆಳೆಸಿ-ನೆನಪಿನಿಂದಿರಿಸಿ ಕೊಂಡಿರುವುದೂ ಸಹ ಅವರ ಜಾಣ್ಮೆ-ಸಹೃದಯತೆಗೆ ಸಾಕ್ಷಿಯಾಗಿದೆ.

ಭಟ್ಟರ ಜೀವನ ಶೈಲಿ ನನ್ನ ಅನಿಸಿಕೆಯಂತೆ ಒಂದು ರೀತಿಯ ವಿಶಿಷ್ಟವಾದುದು. ಅಧ್ಯಯನ, ಆಸಕ್ತಿ, ಸ್ಪಂದನಗಳಿದ್ದರೂ ಯಾವುದೇ ಸ್ಥಾನಕ್ಕೆ ಅಪಾಹಪಿಸುವುದರಲ್ಲಿ ಅದೇ ಜೀವನದ ಪರಮೋದ್ದೇಶ ಆದರಿಂದಲೇ ತಮ್ಮ ಜೀವನ ಸಾರ್ಥಕ ಎಂದು ಆಶಿಸಿದವರಲ್ಲಿ ಎಲ್ಲರಿಗೂ ಇರುವಂತೆ ಅವರಿಗೂ ಪರವಾಗಿರುವಂತೆ ನವಿರಾಗಿ ಬೇಕೆನೆ ದೂರುವ ಜನರೂ ಇಲ್ಲದಿಲ್ಲ. ಇದರಲ್ಲಿಯ ಒಂದು ವಿಶಿಷ್ಟತೆಯನ್ನು ನಾನು ಕಂಡಿರುವುದು - ಅವರ ಜೀವನ ನಡವಳಿಕೆಯ ರೀತಿಯ ಬಗ್ಗೆ ವಿಶಿಷ್ಟ ಶೈಲಿಯ ಬಗ್ಗೆ, ಅವರ ಟೀಕಾಕಾರರೂ-ಭಟ್ಟರು ಬುದ್ಧಿವಂತರೆಂದೇ ಹೇಳುವುದು ಎಲ್ಲ ಕೆಲಸ ಕಾರ್ಯಗಳಲ್ಲೂ ಅವರು ಅಳೆದು, ಸುರಿದು ಮೇಲೆ ಇರುತ್ತಾರೆಂದೇ ಹೇಳುತ್ತಾರೆ. ಏನಕೇನ ಪ್ರಕಾರೇಣ ಮುನ್ನಡೆದು ಯಾವುದರಲ್ಲೂ ಅತೀ ಎತ್ತರದ ವಿಶಿಷ್ಟತೆಯನ್ನು ಹೊಂದಿರದಿದ್ದರೂ - ಎಲ್ಲದರಲ್ಲಿ, ಎಲ್ಲರಲ್ಲಿ ಭಟ್ಟರಿರುವುದು - ಅದು ಮಹಾಬಲೇಶ್ವರ ಭಟ್ಟರ ವೈಶಿಷ್ಟ್ಯತೆ ಅನುಕರಣೀಯ ಶೈಲಿ. ಈ ಬಗೆಗೆ ಅವರ ಟೀಕಾಕಾರರು, ಸಹಮತರು ಅವರು ಕೈಯಾಡಿಸಿದ, ನುಗ್ಗಿದ ಕ್ಷೇತ್ರಗಳ ಬಗೆಗೆ ಒಂದೊಂದಕ್ಕೂ ಸಂಬಂಧಿಸಿದ ವಿಶಿಷ್ಟತೆ, ವೈಶಿಷ್ಟದ ಬಗ್ಗೆ ಹೇಳಬಹುದು. ಅದನ್ನು ಬೇರೆ ಸ್ನೇಹಿತರು ಗುರುತಿಸಿ ವಿವರಿಸಬಹುದು. ಕನ್ನಡ ಸಾಹಿತ್ಯ ಪರಿಷತ್ತಿನ ತಾಲ್ಲೂಕು ಸಮಿತಿಯ ಅಧ್ಯಕ್ಷರಾಗಿ ಅವರು ಮಾಡಿದ ಕೆಲಸ ಇತರ ಜಿಲ್ಲಾ ಪದಾಧಿಕಾರಿಗಳಿಗೂ ಮಾದರಿಯಾದುದು. ಕೆಲಸ ಮಾಡುವವರಿಗೆ ಕ್ಷೇತ್ರ ಸ್ಥಾನಕ್ಕಿಂತ ಅವರ ಆಸಕ್ತಿ, ಅನುಸರಿಸುವ ವಿಧಾನ, ಸಾಧನೆಯ ಮಾರ್ಗ ಪ್ರಾಮುಖ್ಯವಾದುದು - ಎಂಬುವುದನ್ನು ತೋರಿಸಿದ್ದಾರೆ. ಯಾವುದೇ ಕ್ಷೇತ್ರದಲ್ಲಾದರೂ ಅವರು ವಹಿಸಿಕೊಂಡ ಸ್ಥಾನಕ್ಕೆ ತಕ್ಕುದಾಗಿ ಇತರರಿಗೆ ಮಾರ್ಗದರ್ಶಿಯಾಗಿದ್ದಾರೆ.

# ಪವಿತ್ರವಾದ ಸರೋವರ

– ಪ್ರಕಾಶ್.ಆರ್. ಕಮ್ಮಾರ್

ಕರ್ನಾಟಕ ರಾಜ್ಯದ ಸಹ್ಯಾದ್ರಿ ತಪ್ಪಲಲ್ಲಿ ಶಿವಮೊಗ್ಗ ಜಿಲ್ಲೆಯಿದೆ ಈ ಜಿಲ್ಲೆಯ ಸೆರಗಿನಲ್ಲಿ ಸಾಗರ ತಾಲ್ಲೂಕಿನ ಒಂದು ಬದಿ ಕೆಳದಿ, ಇನ್ನೊಂದು ಬದಿ ಇಕ್ಕೇರಿ, ಎಂಬ ಐತಿಹಾಸಿಕ ಮಹತ್ವದ ಕ್ಷೇತ್ರಗಳಿವೆ. ಸುತ್ತಲೂ ಅಡಿಕೆ ತೆಂಗುಗಳ ತೋಟ, ಇವುಗಳ ನಡುವೆ ಸಾಗರ ತಾಲ್ಲೂಕು. ಇಂತಹ ನಾಡಿನಲ್ಲಿ ಹಲವಾರು ಜನ ಗಣ್ಯರಾಗಿ ಪ್ರಸಿದ್ಧರಾಗಿದ್ದಾರೆ. ಅವರಲ್ಲಿ ದಾಖಲಿಸಬಹುದಾದ ಹೆಸರು,ಕನ್ನಡ ಕಾರ್ಯಕ್ರಮಗಳ ನೇತಾರ, ರಾಜಕಾರಣಿ, ಸಾಹಿತಿ, ಕವಿ, ಲೇಖಕ, ಅಂಕಣ ಬರಹಗಾರರಾದ ಶ್ರೀ. ಟಿ. ಮಹಾಬಲೇಶ್ವರಭಟ್ಟರು.

ತೊರೆಮನೆಯಲ್ಲಿ ಹುಟ್ಟಿದವರು. ಇವರೊಬ್ಬರೆ ಮಗ ಇವರ ತಂದೆಗೆ. ಮದುವೆಯಾಯಿತು. ಹಳ್ಳಿಯಿಂದ ಸಾಗರಕ್ಕೆ ಸಾರ್ವಜನಿಕರ ಸಂಪರ್ಕ ಬೆಳೆಯಿತು. ಸಾಹಿತ್ಯದ ಕಡೆಗೆ ಒಲವಾಯಿತು. ಅಂದಿನಿಂದಲೇ ಬರವಣಿಗೆ ಆರಂಭ. ಅನೇಕ ಗಣ್ಯರ ಸ್ನೇಹ. ಇದರ ಪರಿಣಾಮ ಸಾಗರದ ಪುರಜನರು ಇವರನ್ನು ಎಂಟು ವರ್ಷಗಳಕಾಲ ಪುರಸಭಾ ಸದಸ್ಯರನ್ನಾಗಿ ಆರಿಸಿದರು. ಇದರಿಂದ ಸಾಗರ ಪುರಜನರ ಸೇವಾಕಾರ್ಯ ಮಾಡುವ ಅವಕಾಶ. ಜೊತೆಗೆ ಅನೇಕ ಸಾಂಸ್ಕೃತಿಕ ಕಾರ್ಯಕ್ರಮ ನಡೆಸಿದರು. ಅನೇಕ ಗಣ್ಯ ಸಾಹಿತಿಗಳನ್ನು ಸಾಗರಕ್ಕೆ – ಕರೆಯಿಸಿ, ಸನ್ಮಾನಿಸಿ, ಅವರ ಭಾಷಣಗಳ ರಸದೌತಣ ಮಾಡಿಸಿದ್ದಾರೆ. ಇದರ ನಡುವೆ ಅವರ ಬರವಣಿಗೆ ನಡಿತಾನೇ ಇತ್ತು. ಕತೆ, ಕಾದಂಬರಿ, ಕಾವ್ಯ, ವಿಮರ್ಶೆ, ಜೀವನ ಪರಿಚಯ ಹೀಗೆ ಹತ್ತು ಹಲವಾರು ಪುಸ್ತಕಗಳು ಪ್ರಕಟವಾದವು. ಇದೇ ಸಂದರ್ಭದಲ್ಲಿ ಇವರದೇ 'ಜಲಂಧರ' ಪ್ರಕಟನಾಲಯ ಪುಸ್ತಕ ಪ್ರಕಾಶನದ ಸಂಸ್ಥೆ ಜನ್ಮ ತಾಳಿತು. ಇದರ ಆಶ್ರಯದಲ್ಲಿ ಹೊಸ ಬರಹಗಾರರನ್ನು ಗುರುತಿಸಿದ್ದಾರೆ. ಇದರ ಮೂಲಕ ೨೪ ಪುಸ್ತಕಗಳು ಪ್ರಕಟಗೊಂಡಿವೆ. ಅವುಗಳಲ್ಲಿ ಶ್ರೀನಿವಾಸ ಉಡುಪರು, ನೀ.ನಾ. ಮಧ್ಯಸ್ಥರು, ನಾ. ಡಿಸೋಜಾರವರದ್ದು ಮುಖ್ಯವಾದವುಗಳು. ಏಕೋ, ಏನೋ, ಸಾಗರದಿಂದ ಪುನಃ ಬೇದೂರಿಗೆ ಪಯಣ. ಕೆಲವು ವರ್ಷ ಕಳೆದ ಮೇಲೆ ಅವರ ಸಾಹಿತಿಗಳ ಮಿತ್ರರ ಒತ್ತಡಕ್ಕೆ ಮಣಿದೋ ಅಥವಾ ಅವರ ಮೊಮ್ಮಕ್ಕಳ

ವಿದ್ಯಾಭ್ಯಾಸಕ್ಕೋ ಏನೋ, ತಿರುಗಿ ಸಾಗರಕ್ಕೆ ವಾಪಸ್ಸು. ಆಗ ಸಾಹಿತ್ಯಕ ಚಟುವಟಿಕೆ ಪುನಃ ಆರಂಭ. ಸಾಗರದ ಜನತೆಗೆ ಸಾಹಿತ್ಯದ ಸುಗ್ಗಿಯೋ ಸುಗ್ಗಿ

ಇವರಿಂದ ಅನೇಕ ಜನ ಸಹಾಯ ಪಡೆದಿದ್ದಾರೆ. ಆದರೆ ಭಟ್ಟರನ್ನು ಸ್ಮರಿಸುವುದಿಲ್ಲ. ಆದರೂ ಕೂಡ ಕೆಲವು ಜನ ಅವರ ಎದುರು ಟೀಕಿಸದೆ ಹಿಂದುಗಡೆಯಿಂದ ಟೀಕಿಸುತ್ತಾರೆ. ಈಗ ಅಂತಹ ಜನರೂ ಕೂಡ ಇವರನ್ನು ಮೆಚ್ಚುತ್ತಿದ್ದಾರೆ. ಭಟ್ಟರು ಅಂತಹ ಜನರನ್ನೂ ನಂಬುತ್ತಾರೆ. ಒಲವಿನಿಂದ ಕಾಣುತ್ತಾರೆ. ಅಷ್ಟೊಂದು ಹೃದಯವಂತಿಕೆ, ಸದ್ಭಾವನೆಯ ವ್ಯಕ್ತಿ ನಮಗೆಲ್ಲೂ ಕಾಣಸಿಗುವುದಿಲ್ಲ. ಅಪರೂಪ, ಇದು ಮುಖಸ್ತುತಿಯಲ್ಲ.

ಇಂದಿನ ಟಿ.ವಿ. ಹಾವಳಿಯಲ್ಲಿ ಕನ್ನಡದ ಕಾರ್ಯಕ್ರಮ ನಡೆಸುವುದು ಸಾಧ್ಯವಿಲ್ಲವೇನೋ ಎನ್ನುವ ಕಾಲದಲ್ಲಿ ಜನರು ಬರ್ತಾರೆಯೋ ಬರೋದಿಲ್ಲವೋ ಎನ್ನುವ ಸಮಯದಲ್ಲಿ ಭಟ್ಟರು ಅದ್ದೂರಿಯಾಗಿ ಶಿಸ್ತು ಬದ್ಧವಾಗಿ ಕಾರ್ಯಕ್ರಮ ನಡೆಸುತ್ತಾ ಬಂದಿದ್ದಾರೆ. ಇದರ ಪರಿಣಾಮ ರಾಜ್ಯದಲ್ಲಿಯೇ ಉತ್ತಮ ಕಾರ್ಯಗೈಯ್ಯುವ ಪರಿಷತ್ತು ಸಾಗರದ್ದಾಗಿದೆ. ಈಗ- 'ಪರಿಷತ್ತಿನ ಮುಂದಿನ ಕಾರ್ಯಕ್ರಮವಾವುದು ?' ಎಂದು ಅಭಿಮಾನಿಗಳು ಕೇಳುವಂತಾಗಿದೆ. ಹಾಗಾಗಿ ಇದರಲ್ಲೂ ಶ್ರೀ ಭಟ್ಟರ ಕಾರ್ಯದಕ್ಷತೆಯನ್ನು ಕಾಣಬಹುದಾಗಿದೆ. ಹಳೇ ಪೀಳಿಗೆಯವರೊಂದಿಗೆ ಹೊಸಪೀಳಿಗೆಯವರೊಂದಿಗೆ ಒಂದಾಗುತ್ತಾರೆ. ಅವರ ದೇಹವು ಅವರ ಬುದ್ಧಿಗೆ ತಕ್ಕಹಾಗೆ ಕೆಲಸ ಮಾಡುತ್ತದೆ. ಜಾತಿ ಭೇದ ವಿಲ್ಲದೆ ಎಲ್ಲರನ್ನು ತಮ್ಮ ಅಂತರಂಗಕ್ಕೆ ತೆಗೆದುಕೊಂಡು ಪ್ರೀತಿಯ ಧಾರೆಯೆರೆಯುವ ಜಾದೂಗಾರ. ಎಲ್ಲರಿಗೂ ಬೇಕಾದ ವ್ಯಕ್ತಿ. ಎಲ್ಲರಂತೆ ನಾನಾಗಲೊಲ್ಲೆ ಎನ್ನುವ ಮನೋಧರ್ಮ. ಅಚ್ಚುಕಟ್ಟಾಗಿ ಕೆಲಸ ಮಾಡುವವರು. ಹಾಗಾಗಿ ಶಿಸ್ತಿಗೆ ಇನ್ನೊಂದು ಹೆಸರು ಭಟ್ಟರು. 'ಸಿಟ್ಟು' ಅವರ ಡಿಕ್ಷನರಿಯಲ್ಲಿಯೇ ಇಲ್ಲ. 'ಶಿಸ್ತು' ಮತ್ತು 'ಸಿಟ್ಟು'ಗಳ ಅನುಭವದ ಒಂದೆರಡು ಘಟನೆಗಳ ನೆನಪು ಮಾಡ್ತೀನಿ.

ಅಂದು ಮಧ್ಯಾಹ್ನವಾಗಿತ್ತು. ನನ್ನ ಕ್ಲಾಸನ್ನು ಮುಗಿಸಿ ಸ್ಟಾಫು ರೂಮಿಗೆ ಹೋದೆ. ಆಗಲೇ ಪೋಸ್ಟ್ ಬಂದಿತ್ತು. ನನ್ನ ಮೇಜಿನ ಮೇಲೊಂದು ಅಂಚೆ ಕಾರ್ಡು ನನ್ನನ್ನು ಕಾಯುತ್ತಿತ್ತು. ಇದನ್ನು ಓದಿದೆ. ಅವತ್ತು ನನಗಾದ ಸಂತೋಷ ಅಷ್ಟಿಷ್ಟಲ್ಲ. ಏಕೆಂದರೆ ಅದು ಸಾಗರ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಪತ್ರ. ಅದರಲ್ಲಿ ತಮ್ಮನ್ನು ಸಾಗರ ತಾಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಕಾರಿ ಸಮಿತಿಗೆ ಆರಿಸಿದ್ದೇನೆ. ಪರಿಷತ್ತಿನ ಕೆಲಸ ಕಾರ್ಯಗಳಿಗೆ ದಯವಿಟ್ಟು ಸಹಕರಿಸಬೇಕು. ಮತ್ತು ತಮ್ಮ ಒಪ್ಪಿಗೆಯನ್ನು ತಿಳಿಸಬೇಕು. ಎಂದಿತ್ತು. ನನಗೆ ಇಷ್ಟವಿದೆ ಎಂದು ತಕ್ಷಣ ಉತ್ತರಿಸಿದೆ. ಆಗ ಕಾರ್ಯದರ್ಶಿಗಳು ನೀ.ನಾ. ಮಧ್ಯಸ್ಥರು, ಶ್ರೀನಿವಾಸವಾಸ

ಉಡುಪರು, ಅಧ್ಯಕ್ಷರು ಶ್ರೀ ಟಿ. ಮಹಾಬಲೇಶ್ವರ ಭಟ್ಟರು ಆಗಿದ್ದು, ನನ್ನ ಹೆಸರನ್ನು ಸೂಚಿಸಿದವರು ಟಿ.ಎಂ. ಭಟ್ಟರು ಎಂದು ಆ ಮೇಲೆ ತಿಳಿಯಿತು. ಇಂದು ನಾನೀಗ ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಯಾಗಿದ್ದೇನೆ.

ಮೊದಲನೇ ಸಭೆಯ ತಿಳುವಳಿಕೆ ಪತ್ರ ಬಂತು. ಸಂಜೆ6.00 ಗಂಟೆಗೆ ಸಾಗರ ಪುರಭವನದಲ್ಲಿ ಎಂದು. ನಾನು ಹತ್ತು ನಿಮಿಷ ಮುಂಚೆ ಹೋದೆ. ನನಗೆ ಆಶ್ಚರ್ಯವೋ ಆಶ್ಚರ್ಯ. ನಾನೇ ಮುಂಚೆ ಹೋದೆನೆಂದು ಭಾವಿಸಿದೆ. ಆದರೆ ಅದು ತಪ್ಪಾಗಿತ್ತು. ನನಗಿಂತ ಮುಂಚೆ ಭಟ್ಟರು ಪುರಸಭೆಗೆ ಬಂದು ಮೀಟಿಂಗಿಗೆ ಕುರ್ಚಿ ಹಾಕಿಸಿ, ಟೇಬಲ್ ಹಾಕಿಸಿ, ತಯಾರು ಮಾಡಿಸಿದ್ದರು. ನಾನು ಒಳಗೆ ಹೋದೊಡನೆ ಅವರೇ 'ನಮಸ್ಕಾರ ಬನ್ನಿ ಬನ್ನಿ' ಎಂದು ನನ್ನನ್ನು ಕರೆದು ಕುರ್ಚಿಯ ಮೇಲೆ ಕೂರಿಸಿದರು. ನನಗೆ ನಾಚಿಕೆಯಾಗಿ ಹೋಯ್ತು. ಅವರು ಅಚ್ಚುಕಟ್ಟಾಗಿ ಶಿಸ್ತಿನಿಂದ ಆ ಸಭೆಯನ್ನು ಮುಗಿಸಿದರು. ಆ ಸಭೆಯಲ್ಲಿ ಕಾರ್ಯಕ್ರಮದ ಬಗ್ಗೆ ಮಾತಾಡಲಿಕ್ಕೆ, ಚರ್ಚೆಗೆ ಎಲ್ಲರಿಗೂ ಅವಕಾಶ ಕೊಟ್ಟು ಮುಕ್ತವಾಗಿ ಚರ್ಚಿಸಿದರು. ನಾನು ಅವರನ್ನು ಅಂದೇ ಮೆಚ್ಚಿಕೊಂಡೆ. ನಮ್ಮಂತಹವರಿಗೆ ಅಂತಹ ವ್ಯಕ್ತಿಗಳು ಬೇಕಾಗಿತ್ತು. ಅಂದಿನಿಂದ ನನ್ನ ಮತ್ತು ಅವರ ಸಂಬಂಧ ತೀರಾ ಹತ್ತಿರವಾಗಿ ಬೆಳೆಯುತ್ತಾ ಹೋಯ್ತು. ಈಗ, ಭಟ್ಟರ ಬಗ್ಗೆ ಎಷ್ಟು ಹೇಳಿದರೂ ಸಾಲದು. ಹೊಗಳಿದರೂ ಅತಿಶಯೋಕ್ತಿಯಾಗಲಾರದು. ಹಾಗೆಯೇ ಅವರ ಕೆಲಸ ಕಾರ್ಯಗಳು. ಅವರಸ್ನೇಹಿತರ ಬಳಗ ತುಂಬಾ ದೊಡ್ಡದು. ದೊಡ್ಡ, ದೊಡ್ಡ ವ್ಯಕ್ತಿಗಳ, ಸಾಹಿತಿಗಳ ಸಂಗ ಮಾಡಿದವರು. ನಮ್ಮಂತಹ ಕುಡಿಗಳ ಜೊತೆಗೂ ಸಂಗ ಮಾಡಿದವರು. ಯಾವುದೇ ತಾರತಮ್ಯವಿಲ್ಲದವರು. ಯಾರ ಬಗ್ಗೆಯೂ ಸಿಟ್ಟು ಮಾಡದವರು. ಅವರ ಮುಖದಲ್ಲಿ ಸಿಟ್ಟಿನ ಗೆರೆಯೇ ಮೂಡುವುದಿಲ್ಲ. ಅವರು ಸಮಾಧಾನದ, ತಾಳ್ಮೆಯ, ಪ್ರತೀಕ, ಅಂತಹ ವ್ಯಕ್ತಿತ್ವ ಅವರದ್ದು.

ಒಮ್ಮೆ ಅವರ 'ಅಣ್ಣ-ತಂಗಿ' ಎಂಬ ಕಾದಂಬರಿ ಪುಸ್ತಕ ಅವರಿಗೆ ಸಿಕ್ಕಿತ್ತು. ಅವರು ಅದನ್ನು ನನಗೆ ತೋರಿಸಿದರು. ಆಗ ಅವರಿಗಾದ ಸಂತೋಷ ಅಷ್ಟಿಷ್ಟಲ್ಲ. ಸುಮಾರಷ್ಟುಹಳೆಯದಾದ ಪುಸ್ತಕ. ಈಗ ಅವರು ಬರೆದ ಯಾವುದೇ ಪುಸ್ತಕಗಳು ಲಭ್ಯವಿಲ್ಲ. ಹಾಗಾಗಿ ಅವರಿಗೆ ಬಹಳಷ್ಟು ಆನಂದವಾಗಿತ್ತು. ನಾನದನ್ನೋಡಿ, ಒಮ್ಮೆ ಓದಿ ಕೊಡುವೆನೆಂದು ತೆಗೆದುಕೊಂಡೆ.

ನಮ್ಮ ತಂದೆ ಅದನ್ನು ಓದಿದ್ದರು. ನಾನಿನ್ನೂ ಓದಿರಲಿಲ್ಲ. ನನ್ನಾಕೆ ಅದನ್ನು ಓದಲು ತೆಗೆದುಕೊಂಡಿದ್ದಳು. ಅವಳಿಗೆ ಕಾದಂಬರಿ ಓದುವುದರಲ್ಲಿ ತುಂಬಾ ಆಸಕ್ತಿ. ರಾತ್ರಿ ನಿದ್ದೆಬರುವ ತನಕ ಓದಿ ತಲೆದಿಂಬಿನ ಬಳಿಯಿಟ್ಟು ಹಾಗೇ ನಿದ್ದೆ ಹೋಗಿದ್ದಾಳೆ. ಬೆಳಗ್ಗೆ ಮುಂಚೆ ಎದ್ದು ತನ್ನ ದೈನಂದಿನ ಕೆಲಸಕ್ಕೆ ತಾನು ಹೋಗಿದ್ದಾಳೆ.

ಯಾವಾಗಲೋ ಏನೋ ನನ್ನ ಮಗ ಚಿಕ್ಕವನು, ಅವನಿಗೆ ಪುಸ್ತಕ ಅಂದ್ರೆ ಪ್ರಾಣ. ತಾಯಿ ಹಿಂದೇನೇ ಎದ್ದಿದ್ದಾನೆ. ಅವನ ಕಣ್ಣಿಗೆ ಆ ಪುಸ್ತಕ ಬಿತ್ತು. ಅದರ ಜೊತೆಗೇ ಶುರುವಾಯ್ತು ಅವನ ಆಟ. ಪುಸ್ತಕದ ಮುಖಪುಟ ಕಿತ್ತಿದ್ದಾನೆ. ನಾಲ್ಕಾರು ತುಂಡುಗಳಾಗಿವೆ. ಒಳಗಿನ ಪುಟ ಕೂಡಾ ಹರಿದಿದ್ದಾನೆ. ಅಷ್ಟರಲ್ಲೇ ನನ್ನಾಕೆಗೆ ನೆನಪಾಗಿ ಓಡಿ ಬಂದು ನೋಡ್ತಾಳೆ; ತನ್ನ ಮಗನ ಆ ಅದ್ಭುತವನ್ನು. ಏನು ಮಾಡುವುದು. ಆಕೆಗೆ ತುಂಬಾ ಹೆದರಿಕೆಯಾಯ್ತು. ಹರಿದ ತುಣುಕುಗಳನ್ನು ಆ ಪುಸ್ತಕದಲ್ಲಿಯೇ ಇಟ್ಟು ಅದನ್ನು ಅವನಿಂದ ದೂರ ತೆಗೆದಿಟ್ಟಳು. ಎರಡು ಮೂರು ದಿನ ಕಳೆದಿದೆ. ನನ್ನ ಹತ್ತಿರ ಬಂದು ಹೆದರಿಕೆಯಿಂದ ನಿಧಾನವಾಗಿ 'ರೀ, ನೀವು; ನೀವು; ಬೈಯ್ಯೋದಿಲ್ಲ ಅಂದ್ರೆ, ಒಂದು ಮಾತು ಹೇಳ್ತೀನಿ...'ಹೇಳು ಅದೇಕೆ ಹೆದರಿಕೊಳ್ತೀಯ' ಎಂದೆ. ಆಕೆ ನಡೆದ ವಿಷಯ ಹೇಳಿದಳು. ಏಕೆಂದರೆ ಭಟ್ಟರ ವಿಚಾರವಾಗಿ ನಾವೆಲ್ಲಾ ಮನೆಯಲ್ಲಿ ಮಾತಾಡಿಕೊಳ್ಳುತ್ತೇವೆ. ಆಕೆಗೂ ಹೆದರಿಕೆ. ಅಂತೂ ನಡೆದ ವಿಚಾರ ಗೊತ್ತಾಯಿತು. ರಾದ್ಧಾಂತವಾಯಿತು. ಕಡೆಗೆ'ನಾನೇ ಭಟ್ಟರಲ್ಲಿ ಕ್ಷಮೆ ಕೇಳ್ತೀನೆ' ಎಂದಳು. ಅಷ್ಟೊಂದು ಹೆದರಿಕೆ. ನಾವು ಮಾತು ಬಿಟ್ಟೆವು-ಮೂರ್‍ನಾಲ್ಕು ದಿವಸ ಕಳೀತು. ನನ್ನ ಸಿಟ್ಟು ಇಳೀತು. ನಾನೂ ಕೂಡ ಹರಿದ ತುಣುಕುಗಳನ್ನೆಲ್ಲಾ ಜೋಡಿಸಿ ಪುಸ್ತಕ ರಿಪೇರಿ ಮಾಡಿದೆ. ಸಧ್ಯ ಅದರಲ್ಲಿ ಯಾವ ಪುಟಕ್ಕೂ ಧಕ್ಕೆಯಾಗಿರಲಿಲ್ಲ. ಪುಸ್ತಕ ಒಣಗಿದ ಮೇಲೆ ನೋಡ್ದೆ. ಮೊದಲಿದ್ದ ರೀತೀನೇ ಆಗಿತ್ತು. ಮನಸ್ಸಿಗೆ ಒಂದು ರೀತಿ ಸಮಾಧಾನವಾಯಿತು.

ಒಂದು ದಿನ ಬೆಳಿಗ್ಗೆ ಈ ವಿಚಾರವನ್ನು ಭಟ್ಟರಿಗೆ ಹೇಗಾದರೂ ಮಾಡಿ ತಿಳಿಸುವುದು ಎಂದು ಅವರ ಮನೆಗೆ ಹೋದೆ. ಎಂದಿನಂತೆ ಅವರ ಮನೆಯಲ್ಲಿ ಹೊರಗಿನ ರೂಮಿನಲ್ಲಿ ಮಾತಾಡ್ತಾ ಸೋಫಾದಲ್ಲಿ ಕುಳಿತೆ. ಆಗ ಬೇರೆ ಬೇರೆ ವಿಚಾರ ಮಾತಾಡ್ತಾ ನಿಧಾನವಾಗಿ ಪುಸ್ತಕ ಹರಿದ ವಿಚಾರ, ಮನೆಯಲ್ಲಿನ ರಾದ್ಧಾಂತ, ಮಾತು ಬಿಟ್ಟ ವಿಚಾರ ಎಲ್ಲಾ ತಿಳಿಸಿದೆ. ನನಗೆ ಎಲ್ಲಿ ಸಿಟ್ಟು ಮಾಡ್ತಾರೋ, ಬೈಯ್ಯುತ್ತಾರೋ ಎಂದು ಗಾಭರಿಯಾಗಿ ಕಂಗಾಲಾಗಿದ್ದೆ. ಆದರೆ ಭಟ್ಟರು,ನನ್ನಮಾತು ಕೇಳಿ ಯಾವುದೇ ರೀತಿಯ ಸಿಟ್ಟಿಲ್ಲದೆ'ಪರ್‍ವಾಗಿಲ್ಲ, ಪರ್‍ವಾಗಿಲ್ಲ, ಏನೂ ಬೇಜಾರು ಮಾಡ್ಕೋಬೇಡಿ, ಎಲ್ಲಾ ಪುಟಗಳೂ ಕಳೀದೆ ಇದ್ರೆ ಸಾಕು. ಆ ಪುಸ್ತಕ ಸಿಕ್ಕಿದ್ದೇ ಹೆಚ್ಚಾಗಿದೆ'.. ಎಂದು ಮತ್ತೊಮ್ಮೆ 'ನೀವೇನೂ ಬೇಜಾರು ಮಾಡ್ಕೋಬೇಡಿ, ನಿಮ್ಮ ಮನೆಯವರಿಗೆ ಬೈಬೇಡಿ' ಎಂದು ನನ್ನನ್ನೇ ಸಮಾಧಾನ ಪಡಿಸಿದರು.

ಇದರಿಂದ ನನಗಾದ ಖುಷಿ ಅಷ್ಟಿಷ್ಟಲ್ಲ. ಭಟ್ಟರುಅದರ ಬಗ್ಗೆ ಒಂದು ಚೂರೂ ಸಿಟ್ಟನ್ನು ಮಾಡಿಕೊಂಡವರಲ್ಲ. ಸಣ್ಣ ಪುಟ್ಟ ವಿಚಾರಕ್ಕೂ ಸಿಟ್ಟು ಮಾಡಿ ಬಯ್ಯುವವರ ಸಂಖ್ಯೆ ಇಂದು ಜಾಸ್ತಿ. ಅಂತಹವರಿಗೆ ತಾಳ್ಮೆಯೇ ಇರುವುದಿಲ್ಲ. ಆದರೆ ಭಟ್ಟರು

ಹಾಗೆ ಮಾಡಲಿಲ್ಲ. ಹಾಗಾಗಿ ನನಗೂ ಅವರ ಬಗ್ಗೆ ಹೆಚ್ಚಿನ ಗೌರವ ಮೂಡಿತು. ಬಾಂಧವ್ಯ ಬೆಸೆಯಿತು. ಇಂತಹವರ ಸಹವಾಸದಲ್ಲಿ ಎಷ್ಟುವರ್ಷಗಳ ಕಾಲವಾದರೂ ಜೊತೆಯಲ್ಲಿಯೇ ಕೆಲಸಮಾಡಬಹುದು. ಅಂತಹ ಸುಜ್ಞಾನಿ ಬೇರೆ ಇರಲಿಕ್ಕಿಲ್ಲ. ಯಾರು ಏನೇ ಹೇಳಲಿ, ನನಗಂತೂ ಅವರ ಜೊತೆಯಲ್ಲಿ ಕೆಲಸ ಮಾಡುವುದೆಂದರೆ ಅಷ್ಟೊಂದು ಉತ್ಸಾಹ, ಸಡಗರ, ಸಂತೋಷ. ಅವರನ್ನು ಬಿಟ್ಟಿರಲು ಅಸಾಧ್ಯ ಎರಡು ದಿನಕ್ಕೆ ಒಮ್ಮೆಯಾದರೂ, ಅವರನ್ನು ಕಂಡು ಮಾತನಾಡಿಸದಿದ್ದರೆ, ಏನನ್ನೊ, ಏನೋ ಕಳೆದುಕೊಂಡಷ್ಟು ನೋವು, ವೇದನೆವುಂಟಾಗುತ್ತದೆ. ಅಷ್ಟೊಂದು ಧೀಮಂತ ವ್ಯಕ್ತಿತ್ವ. ಅದಕ್ಕೆ ಅವರನ್ನು 'ಪುಷ್ಕರ' ಎಂದು ಕರೆಯುತ್ತೇನೆ.

'ಪುಷ್ಕರ' ಎಂದರೆ ಪವಿತ್ರವಾದ ಸರೋವರ. ಹಿಂದೆ ಬ್ರಹ್ಮನು ಭೂಮಿಯಲ್ಲಿ ಯಾಗ ಮಾಡಲು ಯೋಚಿಸಿದ. ಅದಕ್ಕಾಗಿ ಜಾಗ ಹುಡುಕಲು ಕಮಲ ಎಸೆದ. ಆ ತಾಣದಲ್ಲಿ 'ಪುಷ್ಕರ' ಸರೋವರ ಸೃಷ್ಟಿಯಾಯಿತು. ಅದು ಪವಿತ್ರ ಕ್ಷೇತ್ರವಾಯಿತು. ಅಲ್ಲಿ ಬ್ರಹ್ಮನ ದೇಗುಲವಿದೆ. ಆ ರೀತಿಯ ಬ್ರಹ್ಮ ದೇಗುಲವು ಬೇರೆಲ್ಲೂ ಇಲ್ಲ. ಅದರಲ್ಲಿ ಮಿಂದವನು ಪವಿತ್ರನಾಗುತ್ತಾನೆ. ಹಾಗೆಯೇ ಭಟ್ಟರ ಜೊತೆಗಿದ್ದರೆ ನಾವೆಲ್ಲಾ ಪವಿತ್ರರಾಗುತ್ತೇವೆ. ಪುನೀತರಾಗುತ್ತೇವೆ. ಹಾಗಾಗಿ ಅವರಿಗೆ 'ಪುಷ್ಕರ' ಎಂದು ಹೇಳಲು ಯಾವುದೇ ಅಭ್ಯಂತರವಿಲ್ಲ; ಮುಜುಗರವಿಲ್ಲ. ನಾನು ಅವರಿಗಿಂತ ಬಹಳ ಚಿಕ್ಕವನು. ಅವರಷ್ಟು ಎತ್ತರಕ್ಕೇರದಿದ್ದರೂ ಚಿಕ್ಕವನಾದ ನಾನು ಅವರ ಬಗ್ಗೆ ಹೇಳುವುದನ್ನು ಹೇಳಿದ್ದೇನೆ.

ಇನ್ನು ಅವರ ಪುಸ್ತಕ 'ಅಣ್ಣ-ತಂಗಿ' ನನ್ನ ಹತ್ತಿರವೇ ಇದೆ. ನಿಧಾನವಾಗಿ ಓದಿ ಮುಗಿಸಿದೆ. ಅದರ ಬಗ್ಗೆ ಒಂದೆರಡು ಮಾತು.

ಸಮಾಜದಲ್ಲಿ ಸಂಪನ್ನತೆಯ ಮುಖವಾಡ ಧರಿಸಿಕೊಂಡಿರುವವರ ಸಂಖ್ಯೆ ಬಹಳ. ಕಪಟ, ಅನೀತಿ, ಅತ್ಯಾಚಾರ, ಭ್ರಷ್ಟ. ಅಧರ್ಮಗಳಲ್ಲಿ ತೊಡಗಿಕೊಂಡು ವ್ಯಕ್ತಿಗಳ ವಿರುದ್ಧಹೋರಾಟ ಮಾಡಿ ಆದರ್ಶ ವ್ಯಕ್ತಿಯಾಗಿ ಬಾಳಿ ಬದುಕುವುದು ಎಷ್ಟೊಂದು ಕಷ್ಟ. ಎನ್ನುವುದನ್ನು ಭಟ್ಟರು, 'ಅಣ್ಣ-ತಂಗಿ'ಯಲ್ಲಿ ವ್ಯಕ್ತಪಡಿಸಿದ್ದಾರೆ.

ಇಂದಿನ ಸಮಾಜ ತುಂಬಾ ಕ್ರೌರ್ಯವಾಗಿದೆ. ಗಂಡಾಗಲೀ, ಹೆಣ್ಣಾಗಲೀ ಯಾವುದೇ ಕೆಲಸವಾಗಲೀ, ಮಾಡುವುದಕ್ಕೆ ಹೇಸುವುದಿಲ್ಲ. ಗಂಡನಿಗೆ ಸುಖ ಸರಿಯಾಗಿ ದೊರೆಯುವುದಿಲ್ಲವೆಂದಾಗ ಆತನ ಮನಸ್ಸು ಬೇರೆಡೆಗೆ ಹೊರಳುತ್ತದೆ. ಹೆಂಡತಿಗೆ ಗಂಡನಿಂದ ಸುಖ ಸಿಗಲಿಲ್ಲವೆಂದರೆ ಆಕೆಯ ಮನಸ್ಸುಕೂಡ ಅದೇ ಹಾದಿ ತುಳಿಯುತ್ತದೆ. ಇಲ್ಲದಿದ್ದರೆ ವಿವಾಹ ವಿಚ್ಛೇದನೆ, ವಿಚ್ಛೇದನೆ ಆದಮೇಲೆ ಸಮಾಜದ ವಕ್ರದೃಷ್ಟಿ ಆಕೆಯ ಮೇಲೆ ಬೀಳುತ್ತದೆ. ಒಂದಲ್ಲಾ ಒಂದು ರೀತಿಯಿಂದ ಆಕೆಯನ್ನು ವ್ಯಭಿಚಾರಕ್ಕೆ ತಳ್ಳುತ್ತದೆ ಈ ಸಮಾಜ.

ಹೆಣ್ಣು ನಾಳಿನ ಒಬ್ಬ ನಾರಿ, ನಾರಿ ಎಂದರೆ ರಾಷ್ಟ್ರದ ಉಸಿರು, ಅವಳ ಮಡಿಲಲ್ಲಿ ಭಾವೀ ನಾಗರೀಕ ಬೆಳೆಯುತ್ತಾನೆ. ಅಂತಹ ನಾರಿಯ ಸೆರಗಿನಲ್ಲಿಯೇ ನರಕದ ದುರ್ವಾಸನೆ ಬರತೊಡಗುತ್ತದೆ. ಆದರೆ ದೇಶದ ಉನ್ನತಿಗೂ ಮತ್ತು ನಾಶಕ್ಕೂ ನಾರಿಯು ಸೆರಗನ್ನೇ ಅವಲಂಬಿಸಿದೆ. ಹಾಗಾಗಿ ಈ ಸೆರಗಿಗೆ ಮಹತ್ವ. ನಾವು ನಾರಿಯು ಸೆರಗಿನ ಮಹತ್ವವನ್ನು ತಿಳಿಯಬೇಕು. ಈ ನಾರಿಯ ಮೌಲ್ಯವನ್ನು ಈ ಕಾದಂಬರಿಯಲ್ಲಿ ಅಚ್ಚುಕಟ್ಟಾಗಿ ಭಟ್ಟರು ಸೆರೆ ಹಿಡಿದಿದ್ದಾರೆ. ಈ ದೇಶದಲ್ಲಿ ನಾರಿಗೆ ಪ್ರಮುಖತೆ ಕೊಟ್ಟಷ್ಟುಬೇರೆ ಯಾವುದೇ ರಾಷ್ಟ್ರವು ಕೊಟ್ಟಿರಲಿಕ್ಕಿಲ್ಲ. ಅದಕ್ಕೆ ಜನರು ಹೆಣ್ಣು ಎಂದರೆ ಕಾಮದಾಹವನ್ನು ತಣಿಸುವಾಕೆ ಎಂದು ತಿಳಿದಿದೆ. ಏನು ಮಾಡುವುದು ಪರಿಸ್ಥಿತಿ ಹಾಗೆ ಮಾಡಿಸುತ್ತದೆ. ಗೇಣು ಹೊಟ್ಟೆಗಾಗಿ ಬದುಕಬೇಕು. ಬದುಕಿಗಾಗಿ ತಿನ್ನಬೇಕು. ಇದಕ್ಕಾಗಿ ಮೈ ಮಾರುವುದು. ಇಷ್ಟೇ. ಇದಕ್ಕೆ ಎಷ್ಟೊಂದು ಜನ ಅಂಟಿಕೊಂಡಿದ್ದಾರೆ ಎಂದು ಭಟ್ಟರು ಸಹಜವಾಗಿ ಚಿತ್ರಿಸಿದ್ದಾರೆ.

ಈ ಕಾದಂಬರಿಯಲ್ಲಿನ ಸಹೋದರ 'ವಿಪಿನ್' ಹಾಗೂ ಅವನ ಸಹೋದರಿ 'ಮಿನ್ನಿ' ಕೊನೆಯತನಕ ಹೋರಾಡಿದರು. ಅವರು ಕೂಡ ವ್ಯಭಿಚಾರವೆಂಬ ಮೃತ್ಯು ಕೂಪದಲ್ಲಿ ಬೀಳುತ್ತಾರೆ. ಇದರ ಹಿಂದೆ ಸಮಾಜದ ಕ್ರೂರತನ ಹೇಗಿದೆ ಎಂಬುದನ್ನು ಈ ಕಾದಂಬರಿ ತೋರಿಸುತ್ತದೆ.

ಈ ಕಾದಂಬರಿಯಲ್ಲಿ ಬರುವ 'ಮುರುಗನ್' ಇವನಿಗೆ ಮನೆ ಮಾರುಗಳಿಲ್ಲ, ಬಂಧು ಬಾಂಧವರಿಲ್ಲ, ಆತ ಏಕಾಂಗಿ, ಆತ ಹೊಟ್ಟೆಪಾಡಿಗಾಗಿ ಎಂತಹ ಕನಿಷ್ಠ ಕೆಲಸವನ್ನು ಬೇಕಾದರೂ ಮಾಡಲು ಹಿಂಜರಿಯುತ್ತಿರಲಿಲ್ಲ. ಅವನು ಒಬ್ಬ ಗೌರವಾನ್ವಿತ ವ್ಯಕ್ತಿಯಾಗಿ ಪ್ರತಿಷ್ಠಿತ ವ್ಯಕ್ತಿಯಾಗಿ ಬಾಳಲು ಬಯಸುತ್ತಿದ್ದ. ಆದರೆ ಪ್ರತಿ ಸಲವೂ ಹಸಿದ ಹೊಟ್ಟೆ ಅವನ ನಿರ್ಧಾರವನ್ನುಬದಲಾಯಿಸುತ್ತಿತ್ತು. ಅನಿವಾರ್ಯವಾಗಿ ಕಳ್ಳತನಕ್ಕೆಬೀಳುತ್ತಾನೆ. ಇವನು ಮಧ್ಯಂತರದಲ್ಲಿ ವಿಪಿನ್ನನ ಸ್ನೇಹಿತನಾಗುತ್ತಾನೆ.

ಇಲ್ಲಿ ವಿಪಿನ್ನನ ತಾಯಿ ಸೂಳೆಗಾರಿಕೆ ಮಾಡುತ್ತಿರುತ್ತಾಳೆ. ತನ್ನ ಮಗಳು ಮಿನ್ನಿಯನ್ನು ಸೂಳೆಗಾರಿಕೆಗೆ ಇಳಿಸಲು ಹವಣಿಸುತ್ತಿರುತ್ತಾಳೆ. ತಾಯಿಯ ಈ ಸಂಚು ವಿಪಿನ್ನನಿಗೆ ಗೊತ್ತಿರುವುದಿಲ್ಲ. ಆತ ಬೇರೆ ಊರಿನಲ್ಲಿ ಓದುತ್ತಿರುತ್ತಾನೆ. ಬೇಸಿಗೆ ರಜೆಗೆ ಊರಿಗೆ ಬರುತ್ತೇನೆ ಎಂದ ತಿಳಿಸಿ ಬರುತ್ತಾನೆ. ಅವನ ತಾಯಿಯೇ ಅವನನ್ನು ಸ್ವಾಗತಿಸಿ ಮನೆಗೆ ಕರೆತರುತ್ತಾಳೆ. ಅಲ್ಲಿನ ವಿಚಾರ ತಿಳಿಯುವಷ್ಟರಲ್ಲಿಯೇ ಮಿನ್ನಿ ಒಬ್ಬ ಮಾರ್ವಾಡಿಗೆ ಬಲಿಯಾಗಿರುತ್ತಾಳೆ. ಇದರಿಂದ ರೋಸಿಗೆಟ್ಟುಹೋದ ವಿಪಿನ್ ಮಿನ್ನಿಯನ್ನು ಕರೆದುಕೊಂಡು ಪಾರಾಗುತ್ತಾನೆ. ಹೇಗಾದರೂ ಮಾಡಿ ನಾವು ಮರ್ಯಾದೆಯಿಂದ ಬದುಕಬೇಕೆಂದು ಬರುತ್ತಾರೆ. ಸಮಾಜದಲ್ಲಿ ನಡೆಯುವ

ಕೆಲವು ಘಟನೆಗಳು ಆತನ ಅನುಭವಕ್ಕೆ ಬರುತ್ತವೆ. ಯಾರು ಸಭ್ಯರೋ, ಸುಸಂಸ್ಕೃತರೆಂದು ಇರುತ್ತಾರೆಯೋ ಅಂತಹ ಮಹನೀಯರೇ ಇವರನ್ನು ನರಕಕ್ಕೆ ತಳ್ಳಿದರು.

ಒಂದು ದಿನ ಇವರು ಉಳಿದುಕೊಂಡಿದ್ದ ರೂಮಿನ ಅಕ್ಕ ಪಕ್ಕದವರು ಇವರ ಮೇಲೆ ಅನುಮಾನಿಸುತ್ತಾರೆ. ಅಲ್ಲಿಂದ ರಾತ್ರೋರಾತ್ರಿ ರೂಮನ್ನು ಖಾಲಿ ಮಾಡಿಸಿ ಹೊರ ಹಾಕುತ್ತಾರೆ. ನಂತರ ಮುಂದೇನೂ ತೋಚದೆ ರಾತ್ರಿ ರಸ್ತೆಯಲ್ಲಿ ಬರುತ್ತಿರುವ ಸಂದರ್ಭದಲ್ಲಿ ಪೋಲೀಸಿನವರಿಗೆ ಸಿಕ್ಕಿಕೊಳ್ಳುತ್ತಾರೆ. ಅಲ್ಲಿ ಅವರು ಅಸಹಾಯಕರು. ಪೋಲೀಸರ ಕ್ರೂರ ದೃಷ್ಟಿ ಮಿನ್ನಿಯ ಮೇಲೆ ಬೀಳುತ್ತದೆ. ಆಕೆಯು ಅವರಿಂದ ಅತ್ಯಾಚಾರಕ್ಕೊಳಗಾಗುತ್ತಾಳೆ. ಅವನು ಎಷ್ಟೇ ಹೆಣಗಾಡಿದರೂ ಅವರಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗುವುದಿಲ್ಲ.

ಕೊನೆಯಲ್ಲಿ ಒಂದು ದಿನ ಅಚಾನಕ್ ಮುರುಗನ್ ಅವನಿಗೆ ಭೇಟಿಯಾಗುತ್ತಾನೆ. ಅವನೀಗ ದೊಡ್ಡ ಮನುಷ್ಯ. ಸಮಾಜದ ಪ್ರತಿಷ್ಠಿತ ವ್ಯಕ್ತಿ, ಫೈವ್‌ಸ್ಟಾರ್ ಹೋಟೆಲ್ ನಡೆಸುತ್ತಿದ್ದಾನೆ. ದಿನಕ್ಕೆ ಎರಡು, ಮೂರು ಯುವತಿಯರು ಅವನ ಮಜಕ್ಕೆ ಇರುತ್ತಾರೆ. ಇವರನ್ನು ಕರೆದುಕೊಂಡು ಹೋಗಿ ವಿಪಿನ್‌ನನ್ನು ಒಂದು ಹೋಟೇಲ್‌ನ ಮ್ಯಾನೇಜರ್ ಆಗಿ ಮಾಡುತ್ತಾನೆ. ಮಿನ್ನಿಯನ್ನು ಸ್ವಾಗತಗಾರಳನ್ನಾಗಿ ಮಾಡುತ್ತಾನೆ. ಈಗ ವಿಪಿನ್‌ಗೂ ಕೂಡ ಮೂರ್‍ನಾಲ್ಕು ಜನ ಯುವತಿಯರು ಮಜಕ್ಕಾಗಿ ಕಾಯುತ್ತಿರುತ್ತಾರೆ. ಮಿನ್ನಿಯೂ ಕೂಡ ಊರಿನ ದೊಡ್ಡ, ದೊಡ್ಡ ವ್ಯಾಪಾರಸ್ಥರಿಗೆ, ಮಂತ್ರಿಗಳಿಗೆ, ಯುವತಿಯರ ವ್ಯವಸ್ಥೆ ಮಾಡುವುದನ್ನು ನಡೆಸಿರುತ್ತಾಳೆ. ಪುನಃ ಅವರಿಗೆ ಹಳೆಯ ಗಂಡನ ಪಾದವೇ ಗತಿ ಎಂಬಂತಾಗಿರುತ್ತದೆ. ಇದನ್ನು ಭಟ್ಟರು ತುಂಬಾ ಮನೋಜ್ಞವಾಗಿ, ಅಚ್ಚುಕಟ್ಟಾಗಿ ನಿರೂಪಣೆ ಮಾಡಿದ್ದಾರೆ. ಸಮಾಜದ ಮತ್ತೊಂದು ಮುಖವನ್ನು ತೋರಿಸಿದ್ದಾರೆ. ಇಂದಿನ ಯುವ ಪೀಳಿಗೆ ಈ ಪುಸ್ತಕವನ್ನು ಓದಬೇಕು.

ಅಂದಿನಿಂದಲೂ ಭಟ್ಟರು ಬರೆದಿದ್ದರೆ ಸುಮಾರಷ್ಟು ಕಾದಂಬರಿಗಳನ್ನು ಸಾರಸ್ವತ ಲೋಕಕ್ಕೆ ಕೊಡಬಹುದಾಗಿತ್ತು. ಆದರೆ ಅವರು ಇದಕ್ಕಿಂತ ಸಂಘಟನೆಗೆ ಹೆಚ್ಚು ಮಹತ್ವವನ್ನು ಕೊಟ್ಟಿದ್ದರಿಂದ ಬರಹ ಕುಂಠಿತವಾಯಿತು. ಅವರು ಉತ್ತಮ ಸಂಘಟನಕಾರರಾದರು. ಅವರ ಸಂಘಟನೆಯ ಚಪ್ಪರದಲ್ಲಿ ಬಿಟ್ಟ ಕಾಯಿಗಳು ನಾವೆಲ್ಲ. ಭಟ್ಟರು ಕನ್ನಡದ ಸೇವೆ ಮಾಡದಿದ್ದರೆ ಈ ನಾಡೆಲ್ಲಾ ಬಿಕ್ಕುವುದು - ಎಂದು ನನಗನ್ನಿಸುತ್ತದೆ.

# ಶ್ರೀ ಭಟ್ಟರಿಗೊಂದು - ನುಡಿ ನಮನ

- ರವೀಂದ್ರ ಭಟ್ಟ ಕುಳಿಬೀಡು

ಮಾನ್ಯ ಶ್ರೀ ಟಿ. ಮಹಾಬಲೇಶ್ವರ ಭಟ್ಟರ ಬಗ್ಗೆಬರೆಯಲು ಅವರಿಗಿಂತ ಬಹಳ ಕಿರಿಯನಾದ ನನಗೆ ಮುಜುಗರವಾಗುತ್ತಿದೆ. ಆದರೆ ಹಾಗಂತ ಅವರನ್ನು ಕಂಡಾಗೆಲ್ಲ ಹುಟ್ಟುವ ಅಸೂಯೆಯನ್ನು ಹೊರಗೆಡಹಲು ಇದಕ್ಕಿಂತ ಹೆಚ್ಚಿನ ವೇದಿಕೆ ಬೇರೆ ಇಲ್ಲವಾಗಿದೆ. ಈ ಎಪ್ಪತ್ತರ ಇಳಿ ವಯಸ್ಸಿನಲ್ಲೂ ಶ್ರೀ ಭಟ್ಟರಲ್ಲಿರುವ ಲವಲವಿಕೆ, (Love ಲವಿಕೆ ಕೂಡಾ ಹೌದು) ಶಿಸ್ತು. ಸಮಯ ಪ್ರಜ್ಞೆ ನನ್ನಲ್ಲಿ ಮತ್ತು ನನ್ನಂಥವರಲ್ಲಿ ಅಸೂಯೆ ಹುಟ್ಟಿಸುತ್ತದೆ. ಹೀಗೆ ಹುಟ್ಟುವ ಅಸೂಯೆ- ಅವರು ತೋರಿದ ಹಾದಿಯನ್ನು ತುಳಿಯಲು ನೆರವಾದರೆ ಅದೇ ಆದರ್ಶವೂ ಆಗಬಲ್ಲದು.

ನಾನು ಶ್ರೀ ಭಟ್ಟರ ಸಾಹಿತ್ಯ ಕೃಷಿಯ ಬಗ್ಗೆ ಹೆಚ್ಚಿಗೆ ಹೇಳಲಾರದ್ದಕ್ಕೆಕಾರಣ. ನನ್ನ ಓದಿನ ಮಿತಿಯೇ ಹೊರತು ಅವರ ಸಾಹಿತ್ಯ ಸೃಷ್ಟಿಯ 'ಗುಣ' ಅಲ್ಲ. ಆದರೂ ಅವಿರತವಾಗಿ 'ಸಂಯುಕ್ತ ಕರ್ನಾಟಕದ' ಶನಿವಾರದ ಅವರ ಅಂಕಣ ಬರೆದ 'ಬೇವು -ಬೆಲ್ಲ' ಓದುತ್ತಿದ್ದಾಗ- ಒಂದು ರೀತಿಯಲ್ಲಿ ಅವರ ಸರಳತೆ-ಸಜ್ಜನಿಕೆ-ವಿಷಯವನ್ನು ಅವರು ಗ್ರಹಿಸುವ ವಿಶಾಲವಾದ ದೃಷ್ಟಿ ತೃಪ್ತಿಯನ್ನು ನೀಡುತ್ತಿದೆ. ವಿಷಯವನ್ನು 'ವಿಷಕಾರಲು' ಬಳಸಿಕೊಳ್ಳದ-ಆಪ್ತ ಧಾಟಿಯ ಬರವಣಿಗೆ ಒಂದು ರೀತಿಯಲ್ಲಿ ಎಲ್ಲ ಅಂಕಣಕಾರರಲ್ಲೂ ಇರಬೇಕಾದ ಅವಶ್ಯಕ ಗುಣ ಎಂದೇ ಭಾವಿಸುತ್ತೇನೆ.

ಸಾಗರದಂಥ ಚಿಕ್ಕಪಟ್ಟಣದಲ್ಲಿದ್ದೂ - ಸಾಹಿತ್ಯ - ಸಾಂಸ್ಕೃತಿಕ ಪರಂಪರೆಯನ್ನು ಶ್ರೀ ಭಟ್ಟರು ವಹಿಸಿದ ಪಾತ್ರ ಎಂಥವರಲ್ಲೂ ಬೆರಗು ಹುಟ್ಟಿಸುವಂತಹದು. ತಾಲೂಕಿನ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಅವರು ಸಾಹಿತ್ಯಿಕ ವಾತಾವರಣ ನಿರ್ಮಿಸುವಲ್ಲಿ ಮತ್ತು ಅವರಿಂದ ಹಿಡಿದು ನನ್ನಂಥ ಕಿರಿಯರವರೆಗೂ ಅದರಲ್ಲಿ ಭಾಗವಹಿಸುವಂತೆ ಪ್ರೇರೇಪಿಸಿದ ಅವರ ಶಕ್ತಿ ಕೇವಲ ಇಂಥಾ ಬರವಣಿಗೆಗೆ ಹಿಡಿದಿಡಲು ಸಾಧ್ಯವಾಗದ್ದು. ಅದಕ್ಕೆ ಶಾಶ್ವತ ಸಾಕ್ಷಿಯಾಗಿ ನಿಲ್ಲಬಲ್ಲದ್ದು. ಅವರ ಸಂಪಾದಕತ್ವದಲ್ಲಿ ಪ್ರಕಟವಾದ 'ಕಾವ್ಯ ಸಾಗರ'. ಇದರೊಳಗಿನ ಕವಿತೆಗಳ ಗುಣ-ಮಟ್ಟದ ಕುರಿತು ಭಿನ್ನಾಭಿಪ್ರಾಯಗಳಿರಬಹುದು. ಅದು ಸಹಜ ಕೂಡ. ಆದರೆ ಒಂದು ತಾಲ್ಲೂಕಿನ ವ್ಯಾಪ್ತಿಯೊಳಗೆ ಬರುವ ಬರೆವ

ಶಕ್ತಿಗಳಿಗೆಲ್ಲಾ ಒಂದು ವೇದಿಕೆಯಾದದ್ದು ಆ ಸಂಕಲನ ತನ್ಮೂಲಕ ಬರೆವ ಕಿರಿಯರಿಗೆ ಭರವಸೆಯ ಬೆಳಕಾದ್ದು ಸುಳ್ಳಲ್ಲ.

ಶ್ರೀ ಭಟ್ಟರೊಬ್ಬರೇ ಕುಳಿತು - ಬರೆದಿದ್ದರೆ ಅವರು ಬೇಕಾದಷ್ಟು ಬರೆಯಬಹುದಿತ್ತು. ಆದರೆ ಅವರು ತಾವು ಬರೆದದ್ದಕ್ಕಿಂತ ಬೆನ್ನು ತಟ್ಟಿದ್ದೇ ಹೆಚ್ಚು. ಕನ್ನಡ ಸಾಹಿತ್ಯದ ಪರಿಸರ ನಿರ್ಮಿತಿಯ ವ್ರತ ತೊಟ್ಟು- ಆ ಕಾರ್ಯಕ್ರಮಗಳಿಗೆ ಹಗಲಿರುಳು ತಮ್ಮನ್ನು ಅರ್ಪಿಸಿ ಕೊಂಡವರಿಗೆ ಹೀಗೆ ಅಭಿನಂದಿಸುವ ಅವಕಾಶ ನನಗೆ ದೊರಕಿದ್ದು ನನ್ನ ಪುಣ್ಯ ಎಂದೇ ಭಾವಿಸುತ್ತೇನೆ.

ಅವರ ಹಳ್ಳಿಯ ಮನೆಯನ್ನು - ಅದರಹೊರಗಡೆ ಇರುವ ಸುಂದರವಾದ ಹೂದೋಟವನ್ನು - ಅದರಾಚೆಗಿನ ಸಮೃದ್ಧ ಅಡಿಕೆ ತೋಟವನ್ನು ಕಂಡವನು ನಾನು. ಅವರ ಸಾಹಿತ್ಯ ಕೃಷಿ ಮತ್ತು ಕೃಷಿ ಸಾಹಿತ್ಯ ಒಂದರೊಡನೆ ಒಂದು ಬೆರೆತಿವೆ. ಅವೆಲ್ಲವೂ ಸುಂದರವಾಗಿ ಮತ್ತು ಸಮೃದ್ಧವಾಗಿಯೇ ಇವೆ. ಅದು ಸದಾ ಹಾಗೇ ಇರಲಿ ಮತ್ತು ಶ್ರೀಯುತರು ಪಡೆದ ಸೌಭಾಗ್ಯವನ್ನು ನೂರ್ಕಾಲ ಅನುಭವಿಸುವ ಆರೋಗ್ಯ- ಆಯುಷ್ಯವನ್ನು ಆ ಭಗವಂತ ಕರುಣಿಸಲೆಂದು ಆಶಿಸುತ್ತೇನೆ. ಅವರಂಥ ವ್ಯಕ್ತಿಗಳ ವ್ಯಕ್ತಿತ್ವದ ನೆರಳು ನಮ್ಮಂಥ ಕಿರಿಯರನ್ನು ಸದಾ ಕಾಪಾಡುತ್ತಿರಲಿ.

# ಸಮೂಹ ಕಾಳಜಿಯ ಶ್ವೇತಧಾರಿ

- ಗಣಪತಿ ಶಿರಳಗಿ

ಹಾಗೆ ನೋಡಿದರೆ ಇವರಿಗಿಂತ ನಾನು ತೀರಾ ಚಿಕ್ಕವನು. ಆದರೆ ಅವರ ಒಡನಾಟ ವಯಸ್ಸನ್ನು ಸುಳ್ಳುಗೊಳಿಸುತ್ತದೆ.

ಹೌದು. ಶ್ರೀ ಟಿ. ಮಹಾಬಲೇಶ್ವರ ಭಟ್ಟರ ವ್ಯಕ್ತಿತ್ವವೇ ಅಂಥದ್ದು. ಹಿರಿತನದಲ್ಲೂ - ಕಿರಿತನವನ್ನು ಸಮನ್ವಯಗೊಳಿಸುವ ಎಲ್ಲ ಹಮ್ಮು-ಬಿಮ್ಮುಗಳಿಂದ ಹೊರಗುಳಿದು ಸಹಜವಾಗಿ ಸ್ನೇಹಪರವಾಗಿಬಿಡುವುದು. ಅವರ ವ್ಯಕ್ತಿತ್ವದ ಆಕರ್ಷಣೀಯ ಮುಖ್ಯ ಗುಣವೂ ಇದೇ ಹೌದು.

ನಿಜ, ಅವರೇ ಟಿ. ಮಹಾಬಲೇಶ್ವರ ಭಟ್ಟರು. ಗರಿಗರಿಯಾದ ಶುಭ್ರಪಂಚೆ, ಜುಬ್ಬಾ, ಕೂದಲೊಂದೂ ಅಲುಗಾಡದಂತೆ ಒಪ್ಪವಾಗಿ ತಿದ್ದಿ ತೀಡಿದಂತಿರುವ ತಲೆಗೂದಲು. ಎಪ್ಪತ್ತರಲ್ಲೂ - ಇಪ್ಪತ್ತರ ಯುವಕರನ್ನು ನಾಚಿಸುವ ಲವಲವಿಕೆ, ಕ್ರಿಯಾಶೀಲತೆ, ಜೀವನ ಪ್ರೀತಿ.

ಶಿಸ್ತು, ಅಚ್ಚುಕಟ್ಟು, ಸುವ್ಯವಸ್ಥೆ ಇದಕ್ಕೆ ಅನ್ವರ್ಥ ಟಿ. ಮಹಾಬಲೇಶ್ವರ ಭಟ್ಟರು. ಯಾವುದೇ ಸಭೆ, ಸಮಾರಂಭ, ಕಾರ್ಯಕ್ರಮಗಳಾಗಲೀ ಅಲ್ಲಿ ಭಟ್ಟರ 'ಛಾಪು' ಎದ್ದುಕಾಣುತ್ತದೆ. ಇವರ ನೇತೃತ್ವದಲ್ಲಿ ಏರ್ಪಡುವ ಸಮಾರಂಭವನ್ನು ನೋಡುವುದೂ ಒಂದು ವಿಶೇಷ ಅನುಭವ. ಭಟ್ಟರು ಕೆಲಸವನ್ನು ಮಾಡುವುದರ ಜೊತೆಗೇ ತಾವೂ ಭಾಗಿಗಳಾಗುತ್ತಾರೆ. ಇತ್ತೀಚೆಗೆ ನಾನು ಗಮನಿಸಿದ ಒಂದು ಚಿತ್ರಣದ ನೆನಪಾಗುತ್ತದೆ. ಕನ್ನಡ ಸಾಹಿತ್ಯ ಪರಿಷತ್ತು (ಇವರು ಅಧ್ಯಕ್ಷರು) ಏರ್ಪಡಿಸಿದ್ದ ಕನ್ನಡ ಪುಸ್ತಕ ಪ್ರದರ್ಶನ ಮತ್ತು ಮಾರಾಟ ಮುಗಿದ ಮಾರನೇ ದಿನ ನಾನು ಆ ಮಳಿಗೆಯ ಎದುರು ರಸ್ತೆಯಲ್ಲಿ ಹೋಗುವಾಗ ಒಳಗೆ ಸ್ನೇಹಿತರಿರುವುದನ್ನು ಕಂಡು ಒಳಗೆ ನಡೆದೆ. ಅಲ್ಲಿ ಭಟ್ಟರು ಇನ್ನೊಬ್ಬರ ಸಹಾಯದೊಂದಿಗೆ ಉಳಿದ ಪುಸ್ತಕಗಳನ್ನು ಚೀಲದೊಳಕ್ಕೆ ತುಂಬಿ ಚೀಲದ ಬಾಯನ್ನು ದಾರದಿಂದ ಹೊಲಿಯುತ್ತಿದ್ದರು..! ಯಾವುದೇ ಯಶಸ್ಸಿನ ಅಂತರಂಗ ಹೇಗಿದೆ ನೋಡಿ!

ಟಿ. ಮಹಾಬಲೇಶ್ವರ ಭಟ್ಟರೊಡನೆ ನನ್ನ ಒಡನಾಟ ಕೇವಲ ಒಂದು ದಶಕದ್ದೆನ್ನಬಹುದೇನೋ. ಆ ದಿನದಿಂದಲೂ ನಾನು ಅವರನ್ನು ಗಮನಿಸಿದ್ದು,

ಮೆಚ್ಚಿದ್ದು ಅವರಲ್ಲಿರುವ ಸಮೂಹ ಪ್ರಜ್ಞೆಯ ಕಾಳಜಿಗಾಗಿ. ಇದೇ ಸ್ಪಷ್ಟ ಧ್ವನಿ. ಅಂಕಣ ಲೇಖನವಾಗಿ, ನಾನು ಸಂಪಾದಿಸಿದ 'ಜನಮನ'ದ ಜಲಂಧರ ಹೆಸರಿನಲ್ಲಿ ದಾಖಲಾದ್ದು. ಕೆಲವು ವಾರ 'ನಗರ ಸಂಚಾರ' ಅಂಕಣವನ್ನು ಜೀವಂತವಾಗಿಟ್ಟು ಸಾರ್ವಜನಿಕ ಬದುಕಿನ ಕಾಳಜಿಯನ್ನು ಹಾಗೂ ಆಗಿರುವ ಲೋಪವನ್ನು ಎತ್ತಿ ಹಿಡಿದಿದ್ದಾರೆ.

ಭೂತ ಬಂಗಲೆಯಾಗಿ ಶ್ರೀ ಕೃಷ್ಣ ಟಾಕೀಸು ಮಾರ್ಪಾಡಾಗಿ ಅಲ್ಲಿ ಗಿಡಗಂಟಿಗಳು ಬೆಳೆದು ಹಾವು, ಸರ್ಪಗಳಿಗೆ ತಾಣವಾಗಿತ್ತು. ಪಟ್ಟಣದ ಮಧ್ಯೆಯಿರುವ ಇದು ಸೊಳ್ಳೆಗಳ ಉಗ್ರಾಣವಾಗಿ ಮಲೇರಿಯಾಕ್ಕೆ ಮೂಲವಾದೀತೆಂದು ಪುರಸಭೆಯ ಗಮನ ಸೆಳೆದರು. ಒಂದೆರಡು ದಿನದಲ್ಲಿ ಈ ಪರಿಸರ ಸ್ವಚ್ಛವಾಯಿತು. !

ಪ್ರತೀ ದಿನ ನಸುಕಿನಲ್ಲಿ ನಗರ ಪ್ರದಕ್ಷಿಣೆ ಮಾಡುವ ಭಟ್ಟರು ಸೊರಬ ರಸ್ತೆಯಲ್ಲಿರುವ ಬಸ್ ಪ್ರಯಾಣಿಕರ ತಂಗುದಾಣವನ್ನು ಗಮನ ಸೆಳೆಯುತ್ತಾರೆ. ಇದರದುರವಸ್ಥೆಯ ಚಿತ್ರಣ ನೀಡುತ್ತಾರೆ. ಈಹಿಂದೆ ಸಾಗರ ಪುರಸಭೆಯ ಸದಸ್ಯರಾಗಿ ಮೂರು ಬಾರಿ ಆಯ್ಕೆಯಾಗಿ ಒಂಭತ್ತು ವರ್ಷಗಳ ಕಾಲ ಪುರಸಭೆಯ ಆಡಳಿತದೊಳಗಿದ್ದ ಇವರಿಗೆ ಈಗಿನ ಪುರಸಭೆಯ ಕಾರ್ಯನಿರ್ವಹಣೆಯ ಬಗ್ಗೆಯೂ ವ್ಯಥೆ ಇದೆ. ಇನ್ನೊಂದು ಕಡೆ ಅವರು ಕಾಣುವುದು ಪುರಸಭೆ ನಿರಂತರವಾಗಿ – ನಿರಾತಂಕವಾಗಿ ಚೆಲ್ಲುವ ಕೊಳಕು ಕಸದ ರಾಶಿ. ವರದಾ ನದಿಗೂ ಅಪಾಯವಾಗುವಂತೆ ಹರಡಿರುವ ನಗರದ ಕಸ ಕೊಳಚೆಯ ಬಗ್ಗೆ ಭಟ್ಟರ ಲೇಖನಿ ದಿಟ್ಟವಾಗಿ ಪುರಸಭೆಯ ಕೊಳಕು ನಿರ್ವಹಣೆಗಳನ್ನು ದಾಖಲಿಸುತ್ತದೆ. ಪ್ರತಿಯೊಂದರಲ್ಲೂ ಭಟ್ಟರ ಅಭಿವ್ಯಕ್ತಿ ಇಣುಕುವುದು ಸಮೂಹ ಕಾಳಜಿಯೇ.

ಟಿ. ಮಹಾಬಲೇಶ್ವರ ಭಟ್ಟರು ಸಾಗರ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಮೇಲೆ ಸಾಂಸ್ಕೃತಿಕ ವಕ್ತಾರರಾಗಿ ರಾಜ್ಯದ ಗಮನವನ್ನೇ ಸೆಳೆದರು. ಉಸಿರಾಡದ ಘಟಕಗಳನ್ನೂ ಎಷ್ಟು 'ಶಕ್ತಿ'ಯುತವಾಗಿ ಬೆಳೆಸಿ ಬಳಸಿಕೊಳ್ಳಬಹುದೆಂದು ತೋರಿಸಿಕೊಟ್ಟಿದ್ದಾರೆ. ಪರಿಷತ್ತಿನ ಚಟುವಟಿಕೆಗೂ ಶಿಸ್ತಿನ ಚಟುವಟಿಕೆಯುಕ್ತ ಚೌಕಟ್ಟನ್ನೇ ರಚಿಸಿಕೊಟ್ಟರು. ಗಮನಾರ್ಹ ಸಂಖ್ಯೆಯಲ್ಲಿ ಪರಿಷತ್ತಿಗೆ ಸದಸ್ಯರನ್ನು ಒಟ್ಟುಗೂಡಿಸಿದರು. ಸಮಾನ ಅಭಿರುಚಿಯುಳ್ಳ, ಆರೋಗ್ಯ ಪೂರ್ಣ ಮನಸ್ಸುಳ್ಳ ಇತರೆ ಸಂಘ ಸಂಸ್ಥೆಗಳ ಜೊತೆಗೂಡಿ ಹಲವಾರು ಸಭೆ ಸಮಾರಂಭಗಳನ್ನು ಭಟ್ಟರು ನಡೆಸಿದ್ದಾರೆ.

ಸಾಹಿತ್ಯ, ಸಂಗೀತ, ನೃತ್ಯ, ಜಾನಪದ, ವಿಚಾರ ಸಂಕಿರಣ, ವಿಮರ್ಶೆ, ಗೋಷ್ಠಿ, ದತ್ತಿ ಉಪನ್ಯಾಸ, ಸಾಹಿತಿ-ಕಲಾವಿದರನ್ನು ಆಹ್ವಾನಿಸಿ, ಗೌರವಿಸುವುದು ಹೀಗೆ ಮಹಾಬಲೇಶ್ವರ ಭಟ್ಟರು ಪರಿಷತ್ತಿನ ಅಧ್ಯಕ್ಷರಾದ ನಂತರ ಹೆಚ್ಚಿನ

ಆಸಕ್ತಿಯಿಂದ ವಿಶೇಷವಾಗಿ ಸಾಂಸ್ಕೃತಿಕ ಚಟುವಟಿಕೆಗೆ ಗಮನ ನೀಡಿದರು. ಸ್ಥಳೀಯ ಹಿರಿಯ- ಕಿರಿಯ ಪ್ರತಿಭೆಗಳನ್ನು ಗುರುತಿಸಿ, ಪ್ರೋತ್ಸಾಹಿಸುವುದು ಭಟ್ಟರ ಆಕರ್ಷಣೀಯ ದೊಡ್ಡಗುಣ. ಹಲವಾರು ಕವಿಗಳಿಗೆ, ಲೇಖಕರಿಗೆ ಭಟ್ಟರು ಮಾರ್ಗದರ್ಶಿಯಾಗಿದ್ದಾರೆ. ಪರಿಷತ್ತಿನ ಆಶ್ರಯದಲ್ಲಿ ಪುಸ್ತಕ ಪ್ರಕಟಣೆ ಮಾಡಿರುವುದೂ ಭಟ್ಟರ ಹೆಗ್ಗಳಿಕೆಯುಲ್ಲೊಂದು. ಹೀಗೆ - ಅವರ ಸಾಧನೆ ಹತ್ತುಹಲವು.

ಮಹಾಬಲೇಶ್ವರ ಭಟ್ಟರ ವ್ಯಕ್ತಿತ್ವವೇ ಆಕರ್ಷಣೀಯ ಅನುಕರಣೀಯ. ಇಂಥವರು ಸಿಗುವುದು ತುಂಬಾ ವಿರಳ. ಸಾಗರದ ಈ ಸುಂದರ ಪರಿಸರದಲ್ಲಿ ನಗುನಗುತ್ತಾ ಇರುವ ಭಟ್ಟರೊಡನೆ ನಾವಿರುವುದೇ ಹೆಮ್ಮೆಯ ವಿಷಯ.

# ಇವರನ್ನು ಕಂಡರೆ ಹೊಟ್ಟೆ ಉರಿ

- ಗರುಡನಗಿರಿ ನಾಗರಾಜ್

ಹಿರಿಯರಾದ ಶ್ರೀ ಟಿ. ಮಹಾಬಲೇಶ್ವರ ಭಟ್ಟರ ಪರಿಚಯ ನನಗೆ ಎಂದಾಯಿತೋ ತಿಳಿಯದು. ಸರಿ ಸುಮಾರು ನಾಲ್ಕು ದಶಕಗಳ ಪರಿಚಯ, ಎಂಬ ನೆನಪು. ವ್ಯಕ್ತಿಗತ ಪರಿಚಯಕ್ಕೂ ಮುನ್ನ ಅವರಿವರ ಬಾಯಿಂದ ಅವರ ಬಗ್ಗೆಬಂದ ಮಾತುಗಳನ್ನು ಸಾಕಷ್ಟು ಕೇಳಿದ್ದೆ.

ಇದೇನೇಯಿರಲಿ ಅವರನ್ನು ಎಂದು ಮುಖಾ ಮುಖಿಯಾಗಿ ಭೇಟಿಯಾದರೂ ಅವರ ಬಗ್ಗೆ ಒಂದು ತರಹ ಹೊಟ್ಟೆಕಿಚ್ಚು ಉಂಟಾಗುತ್ತದೆ. ಈ ಹೊಟ್ಟೇಕಿಚ್ಚು ಅವರು ಹೊರಟು ಹೋದ ನಾಲ್ಕಾರು ದಿನಗಳು ಕಾಡುತ್ತದೆ.

ಇದೆಂತಹ ಹೊಟ್ಟೇಕಿಚ್ಚು? ಅವರ ಚಿರಯೌವನ, ಸೌಜನ್ಯದ ನಗೆ, ಆತ್ಮೀಯ ಮಾತು, ಇವುಗಳಿಂದ ವಂಚಿತನಾದ ನನಗೆ ಅವರನ್ನು ಕಂಡಾಗಲೆಲ್ಲ ಸಂಕಟವಾಗುತ್ತದೆ. ಮಹಾಬಲೇಶ್ವರ ಭಟ್ಟರು ಮೂವತ್ತರ ಪ್ರಾಯದಲ್ಲಿ ಹೇಗೆ ಇದ್ದರೋ ಇಂದಿನ ಪ್ರಾಯದಲ್ಲೂ ಹಾಗೇ ಇದ್ದರೆ ಯಾರಿಗೆ ತಾನೇ ಹೊಟ್ಟೆ ಉರಿ ಆಗಲಾರದು ?

ಇಂದು ಪ್ರಮುಖ ರಾಜಕೀಯ ಪಕ್ಷದಲ್ಲಿ ಸಕ್ರಿಯವಾಗಿ ಹಲವು ದಶಕಗಳದ್ದು, ತಾಲ್ಲೂಕು, ಜಿಲ್ಲೆ, ರಾಜ್ಯ ಮಟ್ಟದ ಸಂಘ-ಸಂಸ್ಥೆಗಳಲ್ಲಿ ಕೆಲಸ ಮಾಡಿ, ಬಹುಪಾಲು ರಾಜಕೀಯ ದುರ್ಜನರ ಸಹವಾಸದಲ್ಲಿದ್ದರೂ ಇವರು ಹೇಗೆ ಬಾಹ್ಯ-ಅಂತಃ ಸೌಂದರ್ಯವನ್ನು ಕಾಪಾಡಿಕೊಂಡು ಬಂದರೆಂಬುದು ನನಗೆ ಚಿದಂಬರ ರಹಸ್ಯವಾಗಿದೆ.

ಮಹಾಬಲೇಶ್ವರ ಭಟ್ಟರ ಪರಿಚಯಕ್ಕೂಮುನ್ನ ಅವರ ಜಲಂಧರ ಪ್ರಕಾಶನ. ಸಾಗರದಲ್ಲಿ ಅವರೇ ನಡೆಸುತ್ತಿದ್ದ ಕನ್ನಡ ಪುಸ್ತಕಗಳ ಮಾರಾಟ ಮಳಿಗೆ, ಅಲ್ಲಿ ಪ್ರತಿನಿತ್ಯ ಸೇರುತ್ತಿದ್ದ ಸಾಹಿತ್ಯಾಸಕ್ತರ ಗುಂಪು, ಅವರುಗಳಿಗೆ ಆಗುತ್ತಿದ್ದ ತಿಂಡಿ-ತಿನಸುಗಳ ಸಮಾರಾಧನೆ ವಿಷಯವನ್ನು ನನಗೆ ತ.ರಾ.ಸು. ನನ್ನ ಹಳ್ಳಿಗೆ ಬಂದಾಗ ಹೇಳಿದ್ದರು. ಆಗಿನಿಂದಲೂ ಅವರನ್ನು ಕಾಣುವ ಆಸೆ.

ವ್ಯಕ್ತಿಗತ ಪರಿಚಯವಾಗಿ ಅವರ ಅತಿಥ್ಯದ ಸವಿ ಸವಿದ ಮೇಲೆ, ಬೇದೂರಿನ ತೋಟ, ಮನೆಗಳನ್ನು ಕಂಡಮೇಲೆ ಅವರೆಂತಹ ರಸಿಕರು ಎಂಬುದು ಅರ್ಥವಾಯಿತು.

ಅವರಲ್ಲಿರುವ ಎಲ್ಲಾ ಹಂತದ ಶಿಸ್ತು, ಸರಳ ನಡಾವಳಿ, ಹಲವಾರು ಆಸಕ್ತಿ, ಬೆರಗುಗೊಳಿಸುಂತಹದು. ಅವರ ಕೃತಿಗಳಲ್ಲಿರುವ ಸರಳ ಭಾಷೆ, ಹೇಳುವ ವಿಷಯವನ್ನು ನೇರವಾಗಿ, ಸ್ಪಷ್ಟವಾಗಿ ಹೇಳುವ ರೀತಿ ಬಲು ಸೊಗಸು.

ಅವರ ವ್ಯಕ್ತಿತ್ವ, ಅವರಸಾಹಿತ್ಯ ಸೇವೆಗಿಂತ ದೊಡ್ಡದು. ಅವರ ಬದುಕು ಇನ್ನೂ ದೊಡ್ಡದು. ಇಂತಹ ಮಹಾಬಲೇಶ್ವರಭಟ್ಟರು ನೂರಕ್ಕೂ ಹೆಚ್ಚುಕಾಲ ಬದುಕಿ ನಮ್ಮಂತಹವರ ಹೊಟ್ಟೆ ಉರಿಯನ್ನು ಹೆಚ್ಚಿಸುತ್ತಾಹೋಗಲಿ ಎಂದು ಹಾರೈಸುತ್ತೇನೆ.

# ಮುಂದೆಯೂ ಇನ್ನಷ್ಟು ಬರೆಯಲಿ

**- ಬಂದಗದ್ದೆ ರಾಧಾಕೃಷ್ಣ**

ಶ್ರೀ ಮಹಾಬಲೇಶ್ವರ ಭಟ್ಟರಿಗೆ ಬಹಳ ಕಿರಿಯನಾಗಿದ್ದರಿಂದ ಅವರ ಹಿಂದಿನ ಚಟುವಟಿಕೆಗಳನ್ನುಕೇಳಿ ಬಲ್ಲೆ. ೧೯೪೭ರಲ್ಲೇ ಅವರು ಜಲಂಧರ ಪ್ರಕಟನಾಲಯವನ್ನು ಪ್ರಾರಂಭಿಸಿದ್ದು, ಸಾಗರದಲ್ಲಿ ಪುಸ್ತಕ ಮಳಿಗೆಯನ್ನು ನಡೆಸಿದ್ದೂ, ಮುಂತಾಗಿ. ಅವರ ಈಚಿನ ಚಟುವಟಿಕೆಗಳನ್ನು ನೋಡಿ ಬಲ್ಲೆ.

೧೯೮೦ರ ದಶಕದಲ್ಲಿ ನಾವು ಒಂದಷ್ಟು ಗೆಳೆಯರು ಸೇರಿ ಸಾಗರ ಪೇಟೆಯಲ್ಲಿ ಸಾಹಿತ್ಯಿಕ ಚಟುವಟಿಕೆ ಪ್ರಾರಂಭಿಸುವಾಗ, ಈ ಹಿಂದೆ ಮಹಾಬಲೇಶ್ವರ ಭಟ್ಟರು ಸಾಹಿತ್ಯಿಕ ಸಭೆ ಸಮಾರಂಭ ನಡೆಸುತ್ತಿದ್ದರು ಎಂಬ ಮಾತು ಕೇಳುತ್ತಿದ್ದೆವು. ನಂತರದ ವರ್ಷಗಳಲ್ಲಿ ಸಾಗರದಲ್ಲೇ ವಾಸಿಸುವ ಹಿರಿಕಿರಿಯ ಮಿತ್ರರು ಸಾಹಿತ್ಯಿಕ ಸಭೆ, ಸಮಾರಂಭ ಪ್ರಾರಂಭಿಸಿದರು. ಅಷ್ಟರಲ್ಲಿ ಹಳ್ಳಿಯಿಂದ ಪೇಟೆಗೆ ಹೋಗಿ ಕಾರ್ಯ ನಿರ್ವಹಿಸುವ ಉತ್ಸಾಹವೂ ನಮ್ಮಲ್ಲಿ ಕುಗ್ಗಿತ್ತು. ಹಳ್ಳಿಯಲ್ಲೇ ಇಂಥಹ ಕೆಲಸ ಮಾಡುವ ತುಡಿತ ಶುರುವಾಗಿತ್ತು. ಈ ವೇಳೆಗೆ-೧೯೯೨ರಲ್ಲಿ ಮಹಾಬಲೇಶ್ವರಭಟ್ಟರು ಸಾಗರ ತಾಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಕೆಲಸ ಪ್ರಾಂಭಿಸಿದರು. ಭಟ್ಟರು ಬೇದೂರಿನಿಂದ ಸಾಗರಕ್ಕೆ ಬಂದು ನೆಲೆಸಿದ್ದರಿಂದ ಸಾಗರದಲ್ಲಿ ಕೆಲಸ ಮಾಡಲು ಅವರಿಗೆ ಇನ್ನಷ್ಟು ಅನುಕೂಲವಾಯಿತು. ಕ.ಸಾ.ಪ. ಅಧ್ಯಕ್ಷರಾಗಿ ಅವರೀಗ ಉತ್ಸಾಹದಿಂದ ಕೆಲಸ ಮಾಡುತ್ತಿದ್ದಾರೆ.

೧೯೭೦ರ ದಶಕದಲ್ಲಿ ಸಾಗರದಲ್ಲಿ ನಾನು ಪ್ರೌಢ ಶಾಲಾ ವಿದ್ಯಾರ್ಥಿಯಾಗಿದ್ದಾಗ ಭಟ್ಟರು ಲೇಖಕ ಅನ್ನುವುದಕ್ಕಿಂತ ಬಹಳ ಚುರುಕಾದ ರಾಜಕಾರಣಿ ಎಂದೇ ಭಾವಿಸಿದ್ದೆ. ೧೯೬೭ರಲ್ಲೇ ಅವರು 'ಮಾಮ್‌ಕೋಸ್' ಶಿವಮೊಗ್ಗ ಇದ್ದರ ನಿರ್ದೇಶಕರು. ಸಾಗರದ ತಾಲ್ಲೂಕು ಕಾಂಗ್ರೆಸ್ ಸಮಿತಿ ಅಧ್ಯಕ್ಷರು. ಹಾಗೂ ೮೦ರ ದಶಕದಲ್ಲಿ ಬಹುಶಃ ೧೯೮೩ರ ವಿಧಾನ ಸಭಾ ಚುನಾವಣೆಯಲ್ಲಿ ಶಾಸಕರ ಸ್ಥಾನಕ್ಕೂ ಸ್ಪರ್ಧಿಸುತ್ತಾರೆ - ಎಂಬ ದಟ್ಟವದಂತಿ ತಾಲ್ಲೂಕಿನಾದ್ಯಂತ ಹಬ್ಬಿತ್ತು.

೧೯೯೨ರಲ್ಲಿ ಅವರು ಸಾಗರ ತಾಲ್ಲೂಕು ಕ.ಸಾ.ಪ. ಅಧ್ಯಕ್ಷರಾಗಿ ಕೆಲಸ ಪ್ರಾರಂಭಿಸುವ ವೇಳೆಗೆ ಅವರ ಮೊಕ್ತಾ ಪರಿಚಯ ಆಯಿತು. ಭಟ್ಟರು ಎಂದರೆ

ನನಗೆ ಅವರ ಗರಿಗರಿಯಾದ ಕಚ್ಚೆ ಪಂಚೆ, ಜುಬ್ಬಾ, ನೀಟಾಗಿ ಬಾಚಿದ ತಲೆಗೂದಲು ಮುಂತಾಗಿ ಆ ಶಿಸ್ತೇ ನೆನಪಿಗೆ ಬರುತ್ತದೆ. ಅವರು ನಡೆಸುವ ಕಾರ್ಯಕ್ರಮವೂ ಅಷ್ಟೇ ಶಿಸ್ತಾಗಿ, ಅಚ್ಚುಕಟ್ಟಾಗಿ ಇರುತ್ತದೆ.

೧೯೯೫ ರಿಂದೀಚೆಗೆ ಶಿವಮೊಗ್ಗದ ಜನವಾರ್ತೆ ಮತ್ತು ಬೆಂಗಳೂರಿನಿಂದ ಪ್ರಕಟವಾಗುವ ಸಂಯುಕ್ತ ಕರ್ನಾಟಕದಲ್ಲಿ ಭಟ್ಟರು ಅಂಕಣಕಾರರಾಗಿಯೂ ಕಾಣಿಸಿಕೊಂಡಿದ್ದಾರೆ. ಅಂಕಣ ಬರೆಯುವುದು ಬಹಳ ಕಷ್ಟದ ಕೆಲಸ. ಆದರೆ ಜೀವನದಲ್ಲಿ ಶಿಸ್ತನ್ನು ರೂಢಿಸಿಕೊಂಡ ಭಟ್ಟರು ಸಮಯಕ್ಕೆ ಸರಿಯಾಗಿ ಬರೆಯುವುದರ ಜೊತೆಗೇ ವಿಷಯದ ಗುಣಮಟ್ಟವನ್ನೂ ಕಾದುಕೊಳ್ಳಬಲ್ಲರೆಂಬ ಭರವಸೆ ಉಂಟು. ಕಿರಿಯನಾದರೂ ಈ ಮಾತನ್ನೇಕೆ ಹೇಳುತ್ತೇನೆಂದರೆ ಸಮಯಕ್ಕೆ ಸರಿಯಾಗಿ ಪ್ರತಿವಾರವೂ ಬರೆಯುವಾಗ ಎಷ್ಟುದೊಡ್ಡ ಲೇಖಕನಾದರೂ ಕೆಲವು ವಾರ ನೆಗೆದುಬಿದ್ದಿರುತ್ತಾನೆ.

ತೋಟ, ಮನೆ, ಮಡದಿ ಮಕ್ಕಳು, ಸಾಮಾಜಿಕ, ರಾಜಕೀಯ ಕೆಲಸ ಕಾರ್ಯಗಳ ಜೊತೆಗೇ ಕಥೆ, ಕಾದಂಬರಿ, ಕವಿತೆ, ಜೀವನ ಚರಿತ್ರೆ ಬರೆಯುತ್ತಾ ಸಾಹಿತ್ಯಿಕವಾಗಿಯೂ ಭಟ್ಟರು ಬೆಳೆಯುತ್ತ ಬಂದವರು. ೭೦ ವರ್ಷಗಳು ತುಂಬು ಜೀವನ ನಡೆಸಿದ ಇವರು ಹೀಗೇ ಹೆಮ್ಮರದಂತೆ ಬೆಳೆದು ಸಾಹಿತ್ಯ ಛಾವಡಿಯಾಗಿರಲಿ, ಇನ್ನಷ್ಟು ಬರೆಯಲಿ ಎಂದು ಆಶಿಸುವೆ.

# ಸುದರ್ಶನರು

– ಬಿ. ನಾಗೇಶ ರಾವ್

ಸುಮಾರು ನಾಲ್ಕೂವರೆ ದಶಕಗಳ ಕಾಲ ಕನ್ನಡ ನಾಡು ನುಡಿಯ ಕೈಂಕರ್ಯ ನಡೆಸಿ, ನಾಡಿನ ಉದ್ದಗಲಗಳಲ್ಲಿ ಹಿರಿಯ ಸಾಹಿತಿಗಳ, ವಿಚಾರವಂತರಮನದಲ್ಲಿ ತಮ್ಮದೇ ಆದ, ನಲುಗದ ನಂಟನ್ನು ಇರಿಸಿಕೊಂಡಿರುವ, ಶ್ರೀ ಮಹಾಬಲೇಶ್ವರ ಭಟ್ಟರದು, ನಿಜಕ್ಕೂ ಅಪರೂಪದ ವ್ಯಕ್ತಿತ್ವವೇ ಸರಿ. ಅವರು ಬದುಕಲ್ಲಿ ಅಳವಡಿಸಿಕೊಂಡಿರುವ, ಎಲ್ಲರ ಬದುಕಿಗೂ ಬೇಕಾದ, ಅಚ್ಚುಕಟ್ಟುತನ, ಶಿಸ್ತು, ಕೊನೆಯರಿಯದ ಕ್ರಿಯಾಶೀಲತೆ ಬೆರಗುಗೊಳಿಸುವಂತಾದ್ದಾಗಿದೆ.

ಹೌದು, ನಾನು ಶ್ರೀ ಮಹಾಬಲೇಶ್ವರ ಭಟ್ಟರನ್ನು ೧೯೭೫ರ ಆಸುಪಾಸಿನಲ್ಲೇ ಕಂಡಿದ್ದೆ, ಪರಿಚಯವಿರಲಿಲ್ಲ. ಈ ನಾಡಿನ ಸಾಹಿತ್ಯ ಕ್ಷೇತ್ರದ ಅತಿರಥ ಮಹಾರಥರನ್ನು ಸಾಗರಕ್ಕೆ ಕರೆಸಿ, ಸಮಾರಂಭವೇರ್ಪಡಿಸಿ, ಸಾಹಿತ್ಯ ರಸದೌತಣವನ್ನು ಏರ್ಪಡಿಸುತ್ತಿದ್ದ, ಶ್ರೀ ಭಟ್ಟರನ್ನು ಸಾಗರದ ಸಮಸ್ತರೂ ಮೆಚ್ಚಿದ್ದರು, ಕಂಡಿದ್ದರು. ಕಡೆದ ಪ್ರತಿಮೆಯಂತ ಹುರಿಗೊಂಡ ದೇಹಸೌಷ್ಠವ, ಗರಿಗರಿಯಾದ ಪಂಚೆ–ಜುಬ್ಬಾ, ಸದಾ ಮಿರುಗುತ್ತಿರುವ ಬೂಡ್ಸು, ಎಚ್ಚರದಿಂದ ತಿದ್ದಿ ತೀಡಿ ಒಪ್ಪವಾಗಿರಿಸಿದ ಕ್ರಾಪು, ದೃಢನಿಶ್ಚಯವನ್ನು ಸಾರುವ ನೀಳ ಮೂಗು, ಗಂಭೀರ ಮುಖಭಾವ. ಸಂಯಮ ಶಿಸ್ತನ್ನು ಪ್ರತಿಷ್ಠಾಪಿಸುವ ನಡಿಗೆ, ತೂಗಿ, ತೂಗಿ ಆಯ್ದ ಪದ ಪ್ರಯೋಗದ ಮೆಲುಧ್ವನಿಯ ಮಾತು– ಇದು ಭಟ್ಟರ ಬಾಹ್ಯಮುಖ. ಆದರೆ ೧೯೯೧ರ ನಂತರ ನನಗೆ ಶ್ರೀಭಟ್ಟರ ಪರಿಚಯ ನಿಕಟವಾದಾಗ, ಹತ್ತು ಹಲವು ಸಂದರ್ಭಗಳಲ್ಲಿ, ಅವರ ವ್ಯಕ್ತಿ–ಸಂಪದದ ಹರವು ಅರಿವಿಗೆ ಬಂದಾಗ, ನಿಜಕ್ಕೂ ಶ್ರೀ ಭಟ್ಟರು 'ಸುದರ್ಶನರು' ಎನ್ನಿಸಿತು.

ಗುಣಗ್ರಾಹ್ಯತೆ ಭಟ್ಟರಲ್ಲಿ ನಾವು ಕಾಣಬಹುದಾದ ಒಂದು ದೊಡ್ಡ ಗುಣ. ಕನ್ನಡಸಾಹಿತ್ಯ ಪರಿಷತ್‌ನ ಸಾಗರ ಘಟಕದ ಅಧ್ಯಕ್ಷರಾಗಿ, ಯಾವುದೇ ಹಿರಿತನದ ಬಿಂಕವನ್ನು ಇರಿಸಿಕೊಳ್ಳದೆ, ಎಲ್ಲರೊಂದಿಗೆ ಒಂದಾಗಿ ದುಡಿಯುವ ಪರಿ ವಿಸ್ಮಯಕರವಾಗಿದೆ. ಪ್ರತಿವ್ಯಕ್ತಿಯ ಪ್ರತಿಭೆಯನ್ನು ಅರಿತು, ನಿಗದಿತ ಕಾರ್ಯದಲ್ಲಿ ಸಂಪೂರ್ಣವಾಗಿ ಅದನ್ನು ತೊಡಗಿಸಿ, ಸಮಾರಂಭದ ರಂಗನ್ನು ಎತ್ತರಕ್ಕೆ ಕೊಂಡೊಯ್ಯುವ ಭಟ್ಟರ ಕಾರ್ಯ ಕೌಶಲ ಮೆಚ್ಚಬೇಕಾದ್ದೇ ಸರಿ.

ಶ್ರೀ ಮಹಾಬಲೇಶ್ವರ ಭಟ್ಟರ ಜನ್ಮ ಸ್ಥಳ-ತೊರೆಮನೆ, ಯೌವನದಲ್ಲಿ ಸಾಗಿಬಂದದ್ದು ಸಾಗರದತ್ತ. ಈ ಎರಡೂ ಸ್ಥಳ ನಾಮಗಳು ಧ್ವನಿಪೂರ್ಣವಾಗಿವೆ. ತೊರೆಯಲ್ಲಿ ಆಳದ ಅಂಜಿಕೆಯಿಲ್ಲ, ನುಂಗಿ ನೊಣೆಯುವ ಸುಳಿಗಳಿಲ್ಲ, ಮೊಸಳೆಯ ಮಡುಗಳಿಲ್ಲ. ತನ್ನ ಮಿತಿಯಲ್ಲಿ ಪಾರದರ್ಶಕವಾಗಿ ಹರಿದು, ಸುತ್ತಲ ನೆಲಕ್ಕೆ ನೀರುಣಿಸಿ, ಹಸಿರ ಚಿಗುರಿಸಿ, ತಾನೂ ತಣಿಯುತ್ತದೆ, ಇತರರಿಗೆ ಮುದ ನೀಡುತ್ತದೆ. ಅಂತೆಯೇ ತೀರಾ ಎಳವೆಯಲ್ಲಿಯೇ ಶ್ರೀ ಭಟ್ಟರು ತಂದೆಯ ಬೆಚ್ಚನೆಯ ವಾತ್ಸಲ್ಯಕ್ಕೆ ಎರವಾಗಿ, ಕಾರ್ಪಣ್ಯಕ್ಕೆದುರಾಗಿ 'ತೊರೆ' ಯಂತೆ ತೆಳುವಾದರೂ ತಾಯಿ ಹಾಗೂ ಸೋದರ ಮಾವನ ಶ್ರೀರಕ್ಷೆಯಲ್ಲಿ ಬೆಳೆದು, ಸಾಗರ ತೀರದ 'ಮಹಾಬಲ'ರಾಗಿ ಬಾಳಲು ಸಾಗರದತ್ತ ಬಂದರು. ಅವರಲ್ಲಿ ದೊಡ್ಡಸ್ತಿಕೆಯ 'ಸುಳಿ' ಇಲ್ಲ ಗರ್ವದ 'ಮಡು' ಇಲ್ಲ, ಸುಸಂಸ್ಕೃತ ನಡೆಯಿಂದ ಗೆಳೆಯರ ಮನದಲ್ಲಿ ಹಸಿರು ಚಿಗುರಿಸುವರು, ಸಂತಸದ ತಂಗಾಳಿಯನ್ನೇರ್ಪಡಿಸುವರು, ಪಿತೃಸಮ ವಾತ್ಸಲ್ಯದಿಂದ ಸರ್ವರ ಕಣ್ಮಣಿಯಾಗುವರು.

ಸಾಗರ ಸಮೀಪ 'ಬೇದೂರಿನಲ್ಲಿ' ಸ್ವಂತ ಕೃಷಿ ಭೂಮಿ ಹೊಂದಿರುವ ಭಟ್ಟರು ಯಾರನ್ನೂ ಯಾವುದನ್ನೂ 'ದೂರು'ವುದಿಲ್ಲ. ಬದುಕು ಇರುವುದೇಹೀಗೆ, ನಾವು ತುಟಿ ಹೊಲಿದುಕೊಂಡು, ಬಂದದ್ದನ್ನು ಎದುರಿಸಲೇಬೇಕೆಂಬುದು ಭಟ್ಟರು ಬಾಳಿನಲ್ಲಿ ಕಂಡುಕೊಂಡ ಸತ್ಯ. 'ಪರಿಳಿಕೆಯ'ಮನ ಭಟ್ಟರದಲ್ಲ. ಮುಗಿಲ ಮಲ್ಲಿಗೆಯ ವ್ಯಾಮೋಹವಿರಿಸಿಕೊಂಡಿಲ್ಲ. ಇತ್ತೀಚಿಗೆ ಇದ್ದಕ್ಕಿದ್ದಂತೆ, ಅವರ ಶ್ರೀಮತಿಯವರು ಅನಾರೋಗ್ಯಕ್ಕೆ ಒಳಗಾದಾಗ, ಸ್ನೇಹಿತನಾಗಿ ತೀವ್ರ ಕಳಕಳಿಯಿಂದ ಭಟ್ಟರನ್ನು ಕಂಡು ಮಾತಾಡಿಸಲು ಹೋದಾಗ, ಎಂದಿನಂತೆ ಭಟ್ಟರು ವಿಚಲಿತರಾಗದೆ ದೃಢಮನಸ್ಕರಾಗಿದ್ದರು. ಅದೇ ಮಂದಹಾಸ, ಆತ್ಮೀಯತೆ, ಅದೇ ಗಂಭೀರ ನಡೆ ನುಡಿ. ಆಳದಲ್ಲೆಲ್ಲೋ ನೋವಿನ ಸೆಳಕು ಇದ್ದಂತೆ ನನಗನ್ನಿಸಿದರೂ, ಭಟ್ಟರ ಸಂಯಮ ಕೋಟೆಯನ್ನು ಭೇದಿಸಿ ಹೊರಬರಲು ನೋವಿಗೆ ಭಟ್ಟರ ಹೆದರಿಕೆ. ಬಾಳಿನಲ್ಲಿ ಬಿರುಗಾಳಿಯಂತೆ ಬಂದೆರಗುವ ಘಟನೆಗಳಿಗೆ ತತ್ತರಿಸದಂತೆ ಬೆಳಸಿಕೊಂಡ ಸದೃಢವಾದ ಆತ್ಮ ವಿಶ್ವಾಸದ ಹೊಳಹು ಹಾಗೂ ಶ್ರೀ ಭಟ್ಟರ ಹರಳುಗೊಂಡ ವ್ಯಕ್ತಿತ್ವ ಸುದರ್ಶನ ಇಂತಲ್ಲಿ ನಮಗಾಗುತ್ತದೆ.

ಬೇದೂರಲ್ಲಿನ ಭವ್ಯ 'ಪ್ರಕೃತಿ' ಶ್ರೀ ಭಟ್ಟರ ದೃಢ ಪರಿಶ್ರಮದಿಂದ ಮನೋಕರ್ಷಕ 'ಸಂಸ್ಕೃತಿ'ಯಾಗಿ, ತೋಟ,ಒತ್ತಲು, ಮನೆಯ ರೂಪದಲ್ಲಿ ಹೊರಹೊಮ್ಮಿ ಉತ್ತಮ ಕಲಾವಿದನ ಕಲ್ಪನಾಶಕ್ತಿಯ ಕೂಸಂತಿದೆ. ಬದುಕಿಗೆ ಭರವಸೆ ತೃಪ್ತಿ, ಬೆನ್ನೆಲುಬಾಗುವ ತಾಣ ಭಟ್ಟರು ತಮ್ಮ ಮನೆ ಮಂದಿಗಲ್ಲದೆ, ತಮ್ಮ ಗಿಡಮರಗಳಿಗೆಲ್ಲಾ ಅಚ್ಚುಕಟ್ಟುತನ ಮತ್ತು ಪಮೌನದ ಮಹತ್ತನ್ನು ಮನವರಿಕೆ ಮಾಡಿಕೊಟ್ಟಂತೆನಿಸುತ್ತದೆ. ಎತ್ತನೋಡಿದರೂ ಏನೋ ಶಿಸ್ತು-ಅಚ್ಚುಕಟ್ಟು ಅದೇ ಅದಾಗಿ ವೇದ್ಯವಾಗುತ್ತದೆ.

'ಮುರ್ರಾ'ಇಲ್ಲಿ'ರಾಮು'ನಾಗಿದೆ. ಸ್ಫೂರ್ತಿಯ ಸೆಲೆಯಾಗಿದೆ. ಪರಿಶ್ರಮದ ಪ್ರತೀಕವಾಗಿದೆ. ಶ್ರೀ ಭಟ್ಟರ ಮಕ್ಕಳು ಹಾಗೂ ಮನೆಯವರಿಗೆಲ್ಲಾ ಅತಿಥಿ ಸತ್ಕಾರ ಆತ್ಮೀಯ ಕಾಯಕ, ಶ್ರದ್ಧಾ ಪೂರ್ವಕ ವ್ರತವಾಗಿದೆ. ನೀಡಿ ದಣಿಯದ ಮುಜಗರವಾಗದ ಉಪಚಾರ, ಮರೆಯಲಾಗದ ಮಂದಹಾಸ, ಆತ್ಮೀಯತೆಯ ಸಾಕಾರ ಶ್ರೀ ಭಟ್ಟರ ಸಂಸಾರ ಒಟ್ಟಿನಲ್ಲಿ ಅವರೊಬ್ಬ ಸುಖೀ ಗೃಹಸ್ಥ. ಹೋದ ಅತಿಥಿಗಳಿಗೆ ಹೊಟ್ಟೆ ಭಾರವಾದರೂ ಅನಿರ್ವಚನೀಯ ತೃಪ್ತಿಯಿಂದ ಮನ ಹಗುರ. ನಿಜಕ್ಕೂ ಭಟ್ಟರ ಆತಿಥ್ಯ ಪಡೆಯಲು 'ಗುರುಕೃಪೆ' ಬೇಕೆನಿಸುತ್ತದೆ. ಶ್ರೀ ಭಟ್ಟರ ಸಮಚಿತ್ತದ ನಿರ್ಲಿಪ್ತ ಯಜಮಾನಿಕೆ ಗಮನಿಸಿದರೆ, ಸನ್ಯಾಸ ಜೀವನಕ್ಕಿಂತ ಗೃಹಸ್ಥ ಜೀವನ ನಡೆಸುವುದು ಕಠಿಣವೆಂಬ ಉಕ್ತಿ ನೆನಪಿಗೆ ಬರುತ್ತದೆ.

'ನಾನೊಬ್ಬ ಸಾಧಕನೇ ಹೊರತು ಸಿದ್ಧನಲ್ಲ'.

ಎಂಬುವುದು ಶ್ರೀ ಭಟ್ಟರು ತಮ್ಮ ಬಗ್ಗೆಹೇಳಿಕೊಂಡ ಮಾತು.

ನಿಜಬದುಕಿನ ಬೆಲೆ ಹೆಚ್ಚುವುದು ಸಾಧನೆಯಿಂದಲೇ. ಸಫಲತೆ- ವಿಫಲತೆಗಳು ಗೌಣವಾಗುತ್ತದೆ. ಭಗವದ್ಗೀತೆ ಬೋಧಿಸುವುದು ಇದನ್ನೇ ಅಲ್ಲವೇ? ಶ್ರೀ ಭಟ್ಟರು ಸ್ವತಃ ಹದಿಮೂರು ಸಾಹಿತ್ಯ ಕೃತಿಗಳನ್ನು ರಚಿಸಿದ್ದಾರೆ. ಆದರೆ ಹಲವಾರು ಜನರೆ ಕೃತಿ ರಚಿಸಲು ಪ್ರೋತ್ಸಾಹಿಸಿದ್ದಾರೆ. ಕನ್ನಡ ಸಂಘ, ಸಾಹಿತ್ಯ ಪರಿಷತ್ ವೇದಿಕೆಯಲ್ಲಿ ಹಲವಾರು ಸಾಹಿತಿಗಳನ್ನು ಗೌರವಿಸಿ, ಕೃತಿಗಳನ್ನುಬಿಡುಗಡೆ ಮಾಡಿದ್ದಾರೆ. ಸ್ವಂತ 'ಜಲಂಧರ' ಪ್ರಕಟನಾಲಯದಿಂದ,ಹಲವರ ಕೃತಿಗಳನ್ನ ಹೊರತಂದಿದ್ದಾರೆ. ಹಲವು ಬರಹಗಾರರಿಗೆ 'ತವರ'ಂತೆ ಬೆಂಬಲವಾಗಿದ್ದಾರೆ. ನಿಷ್ಕಾಮ ಪ್ರೇಮದಿಂದ ಕನ್ನಡ ನಾಡು, ನುಡಿ, ನಾಡವರ ಸೇವೆಯನ್ನು ಶ್ರದ್ಧಾ ಭಕ್ತಿಯಿಂದ ಮಾಡಿದ್ದಾರೆಂಬುವುದಕ್ಕೆ ಅನುಮಾನವಿಲ್ಲ. ಈ ರಾಜ್ಯದ ಪ್ರತೀ ತಾಲ್ಲೂಕಿನಲ್ಲಿ ಶ್ರೀ ಮಹಾಬಲೇಶ್ವರ ಭಟ್ಟರಂತವರು ಒಬ್ಬೊಬ್ಬರು ಇದ್ದರೆ, ಕನ್ನಡ ಕಾವಲು ಸಮಿತಿಯ ಅಗತ್ಯವಿರುತ್ತಿರಲಿಲ್ಲ.

ಸ್ವಾತಂತ್ರ್ಯ ಪೂರ್ವದಲ್ಲಿಯೇ ಸಕ್ರಿಯ ರಾಜಕೀಯ ಕಾರ್ಯಕರ್ತರಾಗಿ, ಸಾಗರ ತಾಲ್ಲೂಕು ಕಾಂಗ್ರೆಸ್ ಅಧ್ಯಕ್ಷರಾಗಿ, ಕೃಷಿ ಭೂ ಅಭಿವೃದ್ಧಿ ಬ್ಯಾಂಕಿನ ಅಧ್ಯಕ್ಷರಾಗಿ, ಮಲೆನಾಡು ಅಭಿವೃದ್ಧಿ ಪ್ರತಿಷ್ಠಾನದ ಉಪಾಧ್ಯಕ್ಷರಾಗಿ ಭಾರತೀಯ ವಿದ್ಯಾಭವನದ ಶಿವಮೊಗ್ಗ ಕೇಂದ್ರ ಉಪಾಧ್ಯಕ್ಷರಾಗಿ, 'ಕನ್ನಡಸಂಘ ಹಾಗೂ ಸಾಗರ ತಾಲ್ಲೂಕು ಸಾಹಿತ್ಯ ಪರಿಷತ್ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ ಶ್ರೀ ಭಟ್ಟರ ಕ್ರಿಯಾಶೀಲ ವ್ಯಕ್ತಿತ್ವ ನಿಜಕ್ಕೂ ಅನನ್ಯವಾದುದು. ಕೆಲಸವನ್ನು ಅತ್ಯಲ್ಪ ಮಾಡಿ, ಅದರ ಬಗೆಗ ಆತ್ಮಗಾಥವಾದ ಮಾತುಗಳನ್ನು ಹೇಳುವವರು ಎಲ್ಲರ ಗಮನ ಸೆಳೆಯುವರು. ಫಲಾಪೇಕ್ಷೆಯಿಲ್ಲದೆ ಅಸೀಮ ಪರಿಶ್ರಮ ಪಟ್ಟವರು ಯೋಗ್ಯರ ಕಣ್ಣಿಗೆ ಮಾತ್ರ

ಕಾಣುವರು. ಈ ಹಿನ್ನೆಲೆಯಲ್ಲಿ ಯೋಗ್ಯರನ್ನರಸಿ ಉತ್ಸಾಹದಿಂದ ಸನ್ಮಾನಿಸುವ, ಅಭಿನಂದಿಸುವ ಕಾರ್ಯ ನಿಜಕ್ಕೂ ಯೋಗ್ಯ ಕೆಲಸವೆನಿಸುತ್ತದೆ. ಈ ಮುಖಾಂತರ ನಮ್ಮನ್ನು ನಾವೇ ಗೌರವಿಸಿಕೊಂಡಂತಾಗುತ್ತದೆ.

ವ್ಯಕ್ತಿ-ವಜನನ್ನು ನಾವು ಹೇಗೆ ತೂಗಿನೋಡಬೇಕು ? ವ್ಯಕ್ತಿಯ ಅಧಿಕಾರ ಪ್ರಭಾವದಿಂದಲ್ಲ, ಆಸ್ತಿ - ಐಶ್ವರ್ಯದಿಂದಲ್ಲ, ಜಾತಿ ಅಂತಸ್ತಿನಿಂದಲ್ಲ, ಆದರೆ ಕಾರ್ಯಕ್ಷಮತೆ ಹಾಗೂ ಪರಹಿತ ದೃಷ್ಟಿಯಿಂದ ದುಡಿದು, ಒಳ್ಳೆಯದಾರಿ ನಿರ್ಮಿಸುವ ಧೀಮಂತತೆ ಗಣನೆಗೆ ಬರಬೇಕು. ಮೌಲ್ಯಗಳೆಲ್ಲ ಮೂಲೆಗುಂಪಾಗಿ, ಸ್ವಾರ್ಥ ಪಿರುಬೆಳಕಲ್ಲಿ ಮೆರೆಯುತ್ತಿರುವ ಪ್ರಸ್ತುತ ಸಮಯದಲ್ಲಿ, ಶ್ರೀ ಭಟ್ಟರು ಬದುಕಲ್ಲಿ ಪಾಲಿಸಿಕೊಂಡು ಬಂದ ವಿಚಾರಗಳಿಗೆ ಬೆಲೆಸಿಗಬೇಕು, ಮಾದರಿಯಾಗಿ ನಮ್ಮ ಮುಂದಿರಬೇಕು. ಈಗ ಅಂತರ್ಜಲದಂತೆಯೇ ಇಂತಹ ಅಪರೂಪದವರು ಅಲಭ್ಯರಾಗುತ್ತಿದ್ದಾರೆ. ಇಂತಹ ವ್ಯಕ್ತಿಗಳನ್ನು ಅಭಿಮಾನದಿಂದ ಅಭಿನಂದಿಸುವ ಮುಖಾಂತರ ನಮ್ಮ ಜೀವನದ 'ಜೀವಜಲ' ಬತ್ತದಂತೆ ನೋಡಿಕೊಳ್ಳಬೇಕಿದೆ. ಶ್ರೀ ಮಹಾಬಲೇಶ್ವರ ಭಟ್ಟರ ಸ್ನೇಹ ಸಿಕ್ಕಿದ್ದೇ ನನ್ನ ಬಾಳಿಗೊಂದು ಊರುಗೋಲಾಗಿದೆ. ಈ ಎಪ್ಪತ್ತು ವರ್ಷದ ಭಟ್ಟರ ಸಾರ್ಥಕ ಬದುಕು ನೂರು ವರ್ಷ ಹಬ್ಬಲಿ,ಎಂಬುದು ನಮ್ಮಂತವರ ನಿರಂತರ ಬಯಕೆಯಾಗಿದೆ.

# ಶ್ರೀ ಭಟ್ಟರು ನಾ ಕಂಡಂತೆ...

- ಎಸ್.ಬಿ. ಮಹದೇವ್

ಕ್ರಿಯಾಶೀಲ, ಗರಿಗರಿ ಶ್ವೇತ ವಸ್ತ್ರಧಾರಿ, ಕ್ರಾಫ್ ಕಟ್ಟಿನ ಶ್ರೀ ತೊರೆಮನೆ ಮಹಾಬಲೇಶ್ವರ ಭಟ್ಟರಿಗೆ ೭೦ ವರ್ಷ ಎಂದರೆ ಆಶ್ಚರ್ಯದ ಸಂಗತಿ. ಯಾವಾಗಲೂ ಲವಲವಿಕೆಯಿಂದಿದ್ದು, ಏನಾದರೂ ಒಂದು ಕಾರ್ಯ, ಕಾರ್ಯಕ್ರಮಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ೨೦ ವರ್ಷದ ಯುವಕರನ್ನು ನಾಚಿಸುವಂತಹ ವ್ಯಕ್ತಿತ್ವ ನಮ್ಮ ಭಟ್ಟರದು.

ಜೀವನದ ಹತ್ತು ಹಲವಾರು ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡ ಭಟ್ಟರ ಬಗ್ಗೆ ಬರೆಯುವುದು ಸುಲಭ, ಸಂತೋಷದ ವಿಷಯ. ನನ್ನ ಅವರ ಪರಿಚಯ ಬಹಳ ವರ್ಷಗಳಿಂದ ಸ್ಥಳೀಯ ಮಲೆನಾಡು ಅಭಿವೃದ್ಧಿ ಪ್ರತಿಷ್ಠಾನದ ಬೆಳ್ಳಿ ಹಬ್ಬದ ಸಂದರ್ಭದಲ್ಲಿ ಅವರು ಸಮಿತಿಯ ಅಧ್ಯಕ್ಷರಾಗಿ ನಾನು ಕಾರ್ಯದರ್ಶಿಯಾದಾಗ ನನ್ನ ಅವರ ಪರಿಚಯ ಸ್ನೇಹದಿಂದ ಕೆಲವೇ ದಿನಗಳಲ್ಲಿ ಆತ್ಮೀಯರಾದೆವು. ಅವರ ಕಾರ್ಯಾಸಕ್ತಿ, ಸಜ್ಜನಿಕೆ, ಶಿಸ್ತು, ಬುದ್ಧಿವಂತಿಕೆ, ಸೃಜನಶೀಲತೆ ನನಗೆ ಮೆಚ್ಚುಗೆಯಾದುದು. ನೈಜತೆಯಿಂದ ಕೂಡಿದ ಭಾಷೆ ಮುದಕೊಡುವುದಲ್ಲದೆ ನಮಗೆ ತಿಳಿಯದೆ ಮರೆಯಲಾಗದಂತಹ ಒಂದು ಛಾಪನ್ನು ಹಾಕಿಬಿಡುತ್ತದೆ. ಹೆಚ್ಚಾಗಿ ಅವರಿಗಿಂತ ನಾನು ವಯಸ್ಸಿನಲ್ಲಿ ತುಂಬಾ ಚಿಕ್ಕವನಾಗಿದ್ದರೂ ಅವರು ತೋರಿದ ಗೌರವ ಹಾಗೂ ಸಮವಯಸ್ಕರಿಗಿಂತಲೂ ಅತೀ ಸರಳವಾಗಿ, ಆತ್ಮೀಯವಾಗಿ ನನ್ನೊಡನೆ ಬೆರತು ತಮ್ಮ ಹಾಸ್ಯ ಪ್ರಜ್ಞೆಯನ್ನು ಪ್ರದರ್ಶಿಸಿ, ರಂಜಿಸಿದ ಅವರ ಬಗ್ಗೆ ಇದ್ದ ಗೌರವವನ್ನು ಹೆಚ್ಚಾಗಿಸಿತು. ವಿಶ್ವಾಸಿಕರಿಗೆ ಏನು ಸಹಾಯ ಬೇಕಾದರೂ ಮಾಡುವ ಧಾಷ್ಟ್ಯ ಭಟ್ಟರದು. ಬೇಡವಾದಲ್ಲಿ ಒಂದು ಮೈಲು ದೂರ.

ಭಟ್ಟರು ಸ್ವತಃ ಬರಹಗಾರರು. ಕಾದಂಬರಿ, ಕವನಗಳು ಮೂಡಿಬಂದಿವೆ. ಬೇದೂರಿನ ಕೃಷಿಕ ಬರಹಗಾರರಾಗಿ ಸಾಗರಕ್ಕೆಬಂದ ಕಾಲ ಸುಮಾರು ೩೦ ವರ್ಷಗಳ ಹಿಂದಿನ ಮಾತು. ಹರಟೆ ಹಾಗೂ ಕಟ್ಟೆ ಪಂಚಾಯಿತಿಯಲ್ಲಿ ತೊಡಗಿದಂತ ಕೆಲವು ಯುವಕರಲ್ಲಿ ತಮ್ಮ ವೈವಿಧ್ಯಮಯ ಸಾಹಿತ್ಯಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ

ಮೂಲಕ ಅವರನ್ನು ತೊಡಗಿಸಿಕೊಂಡು ಅವರಲ್ಲಿ ಕನ್ನಡ ಸಾಹಿತ್ಯಾಸಕ್ತಿ, ಅಭಿಮಾನ ಮೂಡಿಸುವಲ್ಲಿ ಯಶಸ್ವಿಯಾಗಿದ್ದಲ್ಲದೆ, ನಾಡಿನ ಖ್ಯಾತ ಸಾಹಿತಿಗಳನ್ನು ಸಾಗರಕ್ಕೆ ಬರಮಾಡಿಕೊಂಡು ಅವರ ಉಪನ್ಯಾಸ ಕಾರ್ಯಕ್ರಮಗಳನ್ನು ವ್ಯವಸ್ಥೆ ಮಾಡಿ ಇನ್ನು ಗಟ್ಟಿಯಾಗಿ ಕನ್ನಡತನ, ಸಂಸ್ಕೃತಿ ಸಾಹಿತ್ಯವನ್ನು ಈ ಭಾಗದ ಜನತೆಗೆ ಪರಿಚಯಿಸುವಲ್ಲಿ ಭಟ್ಟರದು ದೊಡ್ಡಪಾಲು. ಒಂದಿನಿಂದಲೂ ಸಾಹಿತ್ಯಿಕ, ಸಾಂಸ್ಕೃತಿಕ ಸಂಸ್ಥೆಗಳ ಜೊತಗೆ ತಮ್ಮ ನಿಕಟ ಸಂಪರ್ಕ ಇಟ್ಟುಕೊಂಡು ಸದಸ್ಯರಾಗಿ ಪದಾಧಿಕಾರಿಯಾಗಿ ತನ್ನ ಪಾಲಿನ ಕನ್ನಡದ ಸೇವೆಯನ್ನು ನಿರ್ವಹಿಸುವುದರ ಜೊತೆಗೆ ಸ್ವತಃ ತಮ್ಮ ಪ್ರಕಟನಾಲಯ ಪುಸ್ತಕ,ಕಾದಂಬರಿ ಮಾರಾಟ ಮಾಡುವುದರಿಂದ ಸಾಹಿತ್ಯಪ್ರಚಾರ ಮಾಡುವುದರ ಮೂಲಕ ಪಡ್ಡೆ ಹುಡುಗರೆಂದು ಖ್ಯಾತರಾಗದೆ, ಸಾಹಿತ್ಯಾಭಿಮಾನಿಗಳಾಗಿಸಿದ ಕೀರ್ತಿ ಭಟ್ಟರದು.

ವಿಚಾರಶೀಲ ಪ್ರವೃತ್ತಿ ಬಹುಶಃ ಭಟ್ಟರನ್ನು ರಾಜಕೀಯಕ್ಕೆ ಎಳೆಯಿತು. ತನ್ನ ಸುತ್ತಮುತ್ತ ನಡೆಯುವ ಯಾವುದೇ ಒಳಿತು-ಕೆಟ್ಟದ್ದಕ್ಕೆ ನೇರವಾಗಿ ಸ್ಪಂದಿಸುವುದು ಅವರ ಜಾಯಮಾನ. ರಾಜಕೀಯ ಸಹಕಾರಿ ಕ್ಷೇತ್ರಕ್ಕೆಳೆದು ಧೀರ್ಘಾವಧಿಯ ಸೇವೆ ಸಲ್ಲಿಸಿದ ಹಿರಿಮೆ ಭಟ್ಟರದು. ರಾಜಕಾರಣದಲ್ಲಿ ಭಟ್ಟರ ಸಾಧನೆ ಅವರ ಪ್ರತಿಭೆಗೆ ಕಡಿಮೆ ಎಂದು ಹೇಳಬಹುದು. ಬಹುಶಃ ಅವರ ನೇರ ನಿಷ್ಠೂರ ಮಾತು ಅವರನ್ನು ಮುಂದೊಯ್ಯಲಿಕ್ಕಿರಲಾರದು. ಆದರೆ ಸೂಕ್ಷ್ಮ ಸಾಮಾನ್ಯ ವಿವೇಕ ಹಾಗೂ ಅವರ ಅನುಭವ ಅಪಾರ ಮೆಚ್ಚುವಂತಹುದು. ರಾಜ್ಯದ ಸಮಕಾಲೀನ ರಾಜಕಾರಿಣಿಗಳನ್ನು ನಿಕಟವಾಗಿ ಬಲ್ಲವರು-ನಮ್ಮ ಭಟ್ಟರು. ತನ್ನ ಇತಿ ಮಿತಿಯನ್ನು ತಿಳಿದು ಪ್ರತಿಕ್ರಿಯಿಸುವಂತಹ ವಿಶಿಷ್ಟ ವ್ಯಕ್ತಿತ್ವ. ಏನೇ ಕೆಲಸ ಮಾಡಲಿ ಚೊಕ್ಕವಾಗಿ, ಆಕರ್ಷಕವಾಗಿ ಮಾಡುವ ಪ್ರತಿಭೆ ಅವರಿಗೆ ಸಿದ್ಧಿಸಿದ ಕಾಯಕ. 'Touch of Class' ಅವರಿಗೆ ಕರತಲಾಮಲಕ. ಆ ಗುಣ ಇನ್ನೊಬ್ಬರಲ್ಲಿ ಕಂಡಾಗ್ಯೂ ವ್ಯಕ್ತಪಡಿಸುವಲ್ಲಿ 'Touch of Class' ಇರುತ್ತದೆ. ಅವರ ಬದುಕೇ ಒಂದು ಮಾದರಿ, ಅನುಕರಣೀಯ.

ಸಾಕಷ್ಟು ಪ್ರತಿಕೂಲ ಪರಿಸ್ಥಿತಿಯನ್ನು ಜೀವನದುದ್ದಕ್ಕೂಎದುರಿಸಿದವರು. ಸಂತೋಷ ಬಂದಾಗ ಹಿಗ್ಗದೆ, ಕಷ್ಟಬಂದಾಗ ಕುಗ್ಗದೆ, ಎರಡನ್ನೂ ಸಮನಾಗಿ ಕಾಣುವ ವಿವೇಚನೆ, ವಿವೇಕ ಭಟ್ಟರಲ್ಲಿದೆ. ಸ್ನೇಹಿತರಲ್ಲಿ, ಆತ್ಮೀಯರಲ್ಲಿ ಬೆರೆತು ಸ್ನೇಹ ಕೂಟದಲ್ಲಿ ಸೇರಿ ಸಂಭ್ರಮ ಪಡುವುದು ಭಟ್ಟರ ಗುಣ. ಹೃದಯವಂತಿಕೆಯಲ್ಲಿ ಅನುಕೂಲೆ, ಏನನ್ನೂ ಬಯಸದ, ಒಂದು ಪ್ರೇರಕ ಶಕ್ತಿಯಾದ, ಭಟ್ಟರಿಗೆ ತಕ್ಕ ಪತ್ನಿಯಾದ ಶ್ರೀಮತಿ ಪದ್ಮಾವತಿಯವರಿಗೆ ಭಟ್ಟರ ಯಶಸ್ಸಿನಲ್ಲಿ ಒಂದು ಪಾಲು ಸಲ್ಲಬೇಕು. ಎಲ್ಲಾ ಮಕ್ಕಳ ಮದುವೆ ಮುಂಜಿ ಮುಗಿಸಿ, ಒಳ್ಳೆಯ ಅಳಿಯಂದಿರು, ಸೊಸೆಯಂದಿರನ್ನು ಪಡೆದ ತೃಪ್ತಿ ಈ ದಂಪತಿಗಳದು.

ರಾಜಕೀಯದಲ್ಲಿ ೪೦ ವರ್ಷ ಸೇವೆ ಸಲ್ಲಿಸಿಯೂ, ಅವರಿಗೆ ಸಾಹಿತ್ಯ ಕ್ಷೇತ್ರ ಸಂತೃಪ್ತಿ ಕೊಟ್ಟಿದೆ ಎನ್ನುವ ಮಾತು ಕೇಳಿದ ನೆನಪಿದೆ. ಇನ್ನೂ ಹೆಚ್ಚಿನ ಸಾಹಿತ್ಯ ವ್ಯವಸಾಯವಾಗಲಿ ಹಾಗೂ ಬರುವ ಸೆಪ್ಟೆಂಬರಿಗೆ ೭೦ ತುಂಬುವ ಈ ತರುಣನಿಗೆ ಆಯುರಾರೋಗ್ಯ, ಸುಖ-ಶಾಂತಿಯನ್ನು ಆ ಭಗವಂತನು ದಯಪಾಲಿಸಲೆಂದು ನನ್ನ ಆತ್ಮೀಯ ಹಾರೈಕೆ.

# ಶ್ರೀಗಂಧದ ಕೊರಡು

- ಆರ್.ಜಿ. ರಾಯಕರ

‘ಮಾಡಬಲ್ಲವರು ಮಾಡುತ್ತಾರೆ, ಮಾಡಲರಿಯದವರು ಹೇಳುತ್ತಾರೆ.’ ಎನ್ನುವುದು ಬರ್ನಾರ್ಡ್‌ಷಾರ ಒಂದು ಪ್ರಖ್ಯಾತ ಮಾತು. ಮಾಡಬಲ್ಲ ಒಬ್ಬ ಮನುಷ್ಯನ ಮನಸ್ಸಿನಲ್ಲಿ ಅದ್ಭುತ ಚೈತನ್ಯ ತುಂಬಿಕೊಂಡಿರುತ್ತದೆ. ಆ ಅದ್ಭುತ ಚೈತನ್ಯ ಒಂದು ಚೇತೋಹಾರಿ ನಿದರ್ಶನವನ್ನು ನಾವು ಶಿವಮೊಗ್ಗಾ ಜಿಲ್ಲೆಯ ಸಾಗದಿಂದ ಶ್ರೀ ಟಿ. ಮಹಾಬಲೇಶ್ವರ ಭಟ್ಟರಲ್ಲಿ ಕಾಣಬಹುದು.

ಜೀವನ ಚರಿತ್ರೆ ಎಂದರೆ ಒಂದು ವ್ಯಕ್ತಿಯ ಸಾಧನೆ ಸಿದ್ಧಿಗಳ ದಾಖಲೆ. ಈ ಸಾಧನೆ ಸಿದ್ಧಿ ಬಹುಜನರ ಬದುಕಿನ ಮೇಲೆ ಪರಿಣಾಮ ಆಗುವಂತಾದಾಗ ಸಾರ್ವಜನಿಕ ಆಸಕ್ತಿಯ ವಿಷಯವಾಗುತ್ತದೆ. ಇಂತಹ ಜಿಜ್ಞು ಮನಸ್ಸಿನ ಪ್ರಶಂಸೆಗೆ ಪಾತ್ರರಾದ - ಕನ್ನಡ ಸಾರಸ್ವತ ಕ್ಷೇತ್ರದಲ್ಲಿ ಶ್ರೀ ಟಿ. ಮಹಾಬಲೇಶ್ವರ ಭಟ್ಟರು ಈ ಶತಮಾನದ ಪ್ರಮುಖರಲ್ಲಿ ಒಬ್ಬರು.

ಶ್ರೀ ಭಟ್ಟರು ಕರ್ನಾಟಕ ರಾಜ್ಯದಲ್ಲಿ ನಾಡು - ನುಡಿ-ಸಂಸ್ಕೃತಿಗಾಗಿ ಹೋರಾಡಿದ ಪ್ರಮುಖರಾಗಿರುವರು. ಅವರ ಸತತ ಪ್ರಯತ್ನ ಜನರೊಡನೆ ಹೊಂದಿಕೊಂಡು ಬಾಳುವ ವಿಚಾರಗಳು. ನಾನು ಹೋದ ಎಲ್ಲ ಅಖಿಲ ಭಾರತ ಕನ್ನಡ ಸಾಹಿತ್ಯಸಮ್ಮೇಳನಗಳಲ್ಲಿ ಅವರ ಭೇಟಿ ಮತ್ತು ಮಾತುಕತೆಯಿಂದ ನನ್ನನ್ನು ಅವರ ಸಮೀಪಕ್ಕೆತಂದಿದೆ. ನಾನು ಅವನ್ನು ದೂರದಿಂದಲೂ ಕಂಡಿದ್ದೇನೆ; ಅತೀ ಸಮೀಪವಾಗಿ, ನಿಕಟವರ್ತಿಯಾಗಿ ಇದ್ದು ಕೂಡಾ ಕಂಡಿದ್ದೇನೆ. ಅವರನಡೆ, ನುಡಿ, ವೇಷ ಭೂಷಣ ನೋಡಿ ನಾನು ಪ್ರಭಾವಿತನಾದೆ.

ನಾನೊಬ್ಬ ಭಾವನಾಜೀವಿ. ಜೀವನದಲ್ಲಿ ಕಂಡುಂಡ ಸ್ಥಳಗಳಲ್ಲಿಯಾಗಲೀ ಸಂಪರ್ಕ-ಸಂಬಂಧಬಂದವ್ಯಕ್ತಿಗಳಲ್ಲಾಗಲೀ ಒಳ್ಳೆಯದ್ದೇನನ್ನಾದರೂ ಕಂಡುಕೊಂಡಿದ್ದರೆ ಅದು ಸದಾಕಾಲ ಸ್ಮರಿಸಿ, ಆನಂದಿಸುವ ವ್ಯಕ್ತಿನಾನು.

ಕೆಲವರು ಕೆಲವರ್ಷ ಮಿಂಚುತ್ತಾರೆ, ಕೆಲಸಂದರ್ಭದಲ್ಲಿ ಮಾತ್ರ ಎದ್ದುಕಾಣುತ್ತಾರೆ, ಆದರೆ ಸಾಗರದ ಶ್ರೀ ಮಹಾಬಲೇಶ್ವರ ಭಟ್ಟರವರನ್ನು ಅರಿಯದವರೇ ಇಲ್ಲ, ಇಂದಿಗೂ ಗೌರವವನ್ನೂ, ವ್ಯಕ್ತಿತ್ವವನ್ನೂ ಜನ-ಮನ-

ವಲ್ಲಿ ಉಳಿಸಿಕೊಂಡಿರುವರು. ಯಾವುದೇ ಕ್ಷೇತ್ರಕ್ಕೆ ಪ್ರವೇಶಮಾಡಿದರೂ ಅದನ್ನು ಕೂಲಂಕಷವಾಗಿ ಅಭ್ಯಸಿಸಿ ಅದಕ್ಕೊಂದು ನವಕಳೆಯನ್ನು ಚೈತನ್ಯವನ್ನು ತುಂಬುವುದು ಭಟ್ಟರ ಕಾರ್ಯ ವೈಖರಿ.

ಸಾಹಿತ್ಯ ಮನೆ ಮನೆಯ ಮಾತಾಗಬೇಕು, ಶ್ರೀಸಾಮಾನ್ಯನ ಸೊತ್ತಾಗಬೇಕೆಂದು ಶಕ್ತಿಮೀರಿ ಶ್ರಮಿಸಿ, ಅಭೂತಪೂರ್ವಕವಾದ ಸೇವೆಯನ್ನು ಸಾಗರ ನಗರದಲ್ಲಿ ಕನ್ನಡ-ನಾಡು-ನುಡಿಗೆ ಸಲ್ಲಿಸಿ, ಕನ್ನಡ ನಾಡಿನ ಜನರ ಮನವನ್ನು ಗೆದ್ದ ಶ್ರೀಭಟ್ಟರು ಬಹುಮುಖ ವ್ಯಕ್ತಿತ್ವನ್ನು ಹೊಂದಿದವರು. ಶ್ರೀ ಭಟ್ಟರು ಎಂದೂ ಆಸೆ-ಆಮಿಷಗಳಿಗೆ ಬಲಿಯಾಗುವವರಲ್ಲ.

ಶ್ರೀಯುತರು ಅನೇಕ ಕ್ಷೇತ್ರಗಳಲ್ಲಿಪ್ರವೀಣರು, ಇನ್ನೂ ವಿಧ ವಿಧವಾಗಿ ಅವರು ನಾಡ ಸೇವೆ ಮಾಡಿದ್ದಾರೆ. ಹಿರಿಯ ಸಾಹಿತಿಗಳು ಸಂಘಟಿಕರು, ಸಾಹಿತ್ಯ ಕೃತಿಕಾರರು, ಪುಸ್ತಕ ಪತ್ರಿಕೆಗಳನ್ನು ವಿಪುಲವಾಗಿ ಓದಿದವರು, ಕರ್ನಾಟಕ ವ್ಯಾಪ್ತಿಯ ಕಲಾಕಾರರು, ಸಾಹಿತಿಗಳ ಸಂಬಂಧ ಸಂಪರ್ಕಗಳ ವ್ಯಕ್ತಿತ್ವದವರು, ಎಲ್ಲಕ್ಕೂ ಮಿಗಿಲಾಗಿ ಸಹೃದಯಿಗಳು, ಸದಾ ಹಸನ್ಮುಖಿ, ಶಿಸ್ತು- ಅಚ್ಚುಕಟ್ಟಿನ ಇಂತಹವರು ಸಲ್ಲಿಸಿದ ವಿಶೇಷ ಸೇವೆಗಾಗಿ ಕೃತಜ್ಞತಾ ಭಾವನೆಯಿಂದ ಗೌರವಿಸಿ ಅಭಿನಂದನಾ ಗ್ರಂಥ, ಅದನ್ನು ಅರ್ಪಿಸಿಕೊಳ್ಳುತ್ತಿರುವ ಹಿರಿಯರಾದ ಶ್ರೀ ಟಿ. ಮಹಾಬಲೇಶ್ವರ ಭಟ್ಟರಿಗೆ ೭೦ ತುಂಬಿದ ಸಂದರ್ಭದಲ್ಲಿ ಇದನ್ನು ಬಿಡುಗಡೆ ಮಾಡುತ್ತಿರುವುದು ಆನಂದದ ಸಂಗತಿ. ಶ್ರೀ ಭಟ್ಟರು ಸಣ್ಣ ಕತೆ, ಕಾದಂಬರಿ, ಕವಿತೆ, ಜೀವನ ಪರಿಚಯ ಹಾಗೂ ವಿಮರ್ಶನಾ ಲೇಖನವನ್ನು ಬರೆದು ಜನಪ್ರಿಯ ಸಾಹಿತಿಗಳಾದರು. ಇಂದಿಗೂ ಗ್ರಂಥಗಳ ರೂಪದಲ್ಲಿ ಬಿಡಿ ಬರಹಗಳ ರೂಪದಲ್ಲಿ ಪತ್ರಿಕೆಗಳಲ್ಲಿ ಅವರು ಇನ್ನೂ ಬರೆಯುತ್ತಲೇ ಇದ್ದಾರೆ. ಯಾವಾಗಲೂ ಅಧ್ಯಯನ ನಡೆಸುತ್ತಲೇ ಇರುತ್ತಾರೆ ನಾನು ಪ್ರಕಾರಗಳಲ್ಲಿ ಯಶಸ್ವಿಯಾಗಿ ಕೆಲಸ ಮಾಡಿದ ಪ್ರಭಾವಶಾಲಿ, ಸ್ವಂತ ಪುಸ್ತಕ ಪ್ರಕಾಶನ ಸಂಸ್ಥೆ, ಸಹಕಾರ ಸಂಘಗಳಲ್ಲಿ ನಿರ್ದೇಶಕರಾಗಿ, ಕಾಂಗ್ರೆಸ್ ಕಾರ್ಯಕರ್ತರಾಗಿ ತಲಸ್ಪರ್ಶಿಯಾಗಿ ದುಡಿದಿದ್ದಾರೆ. ಈ ನೆಲೆಯಲ್ಲಿ ಕೆಲಸ ಮಾಡಿದ ಶ್ರೀ ಭಟ್ಟರು ನನಗೆ ಬಹುಮುಖ್ಯ ವ್ಯಕ್ತಿಯಾಗಿ ಗೋಚರಿಸುತ್ತಾರೆ. ಹಾಗೆಯೇ ತಮ್ಮ ಉಜ್ವಲವಾದ, ಅನುಕರಣೀಯವಾದ ವ್ಯಕ್ತಿತ್ವದಿಂದ ಪರೋಪಕಾರ, ಪ್ರೀತಿ, ವಿನಯ, ವಿಶ್ವಾಸ, ಸರಳತೆ ಮುಂತಾದ ಗುಣಗಳಿಂದ ಜನರ ಮತ್ತು ಸಾಹಿತಿಗಳ ಪ್ರೀತಿಯನ್ನು ಅಪಾರವಾಗಿ ಗಳಿಸಿದ ತಮ್ಮ ಸೇವೆಯನ್ನು ಸಮಾಜ ಗುರುತಿಸಿದೆ.

ಇಂತಹ ವ್ಯಕ್ತಿಗಳ ಜೀವನ-ಸಾಧನೆಗಳು ಮುಂದಿನ ಜನಾಂಗಕ್ಕೆ ಮಾರ್ಗದರ್ಶಕವಾಗಿರುತ್ತದೆ. ಆದುದರಿಂದ ಅವರ ಜೀವನ ಸಾಧನೆಗಳನ್ನು ದಾಖಲಿಸಬೇಕಾಗುತ್ತದೆ. ಈ ಕಾರಣದಿಂದಲೇ ಇಂತಹ ಅಭಿನಂದನ ಗ್ರಂಥ

ಹೊರತರಬೇಕಾಗುತ್ತದೆ. ಶ್ರೀ ಭಟ್ಟರ ಬದುಕು ಈ ಸಂದರ್ಭದಲ್ಲಿ ನಮಗೆ ಮುಖ್ಯವಾಗುತ್ತದೆ. ಆದರ್ಶಗಳು ವಾಸ್ತವ ಸತ್ಯವಾಗಿ ಮೂರ್ತಸ್ವರೂಪವನ್ನು ಪಡೆದಿದ್ದಕ್ಕೆ ಸಾಕ್ಷಿಯಾಗುತ್ತದೆ.

ಶ್ರೀಭಟ್ಟರ ೭೦ನೆಯ ಹುಟ್ಟು ಹಬ್ಬದ ವೇಳೆಯಲ್ಲಿ, ಅವರ ಕಾರ್ಯದಕ್ಷತೆ ಕುಂದಲಿಲ್ಲ, ಈಗಲೂ ಅವರು ಉತ್ಸಾಹದ ಚಿಲುಮೆ, ಕುಶಾಗ್ರಮತಿ, ಭವಿಷ್ಯವನ್ನು ಸ್ಪಷ್ಟವಾಗಿ ಕಾಣಬಲ್ಲ ಚತುರ ಯೋಜಕ, ರಾಜಕೀಯವನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಬಲ್ಲ ಚಾಣಾಕ್ಷ, ಸಹಕಾರಿ ಕ್ಷೇತ್ರದಲ್ಲಿ ಆಳವಾದ ಅನುಭವ, ಸಾಹಿತ್ಯ ರಂಗದಲ್ಲಿ ಅವರ ಸೇವೆ ಅವಿಸ್ಮರಣೀಯವಾದುದು. ಹೀಗೆ ಅವರನ್ನು ಹಲವು ವಿಧದಲ್ಲಿ ಪರಿಚಯಿಸುವವರು ಹಲವರಿದ್ದಾರೆ. ಪ್ರಶಂಸೆ, ನಿಂದನೆಗಳನ್ನು ಸಮಸ್ಥಿತಿಯಲ್ಲಿರಿಸಿಕೊಂಡ ಶ್ರೀಯುತರು ಇಂದಿಗೂ ಸ್ಥಿತಪ್ರಜ್ಞರೇ.. ಸರಳತೆಯೇ ಅವರ ಗುಣ ವಿಶೇಷ. ಒಳ್ಳೆಯ ಕೆಲಸಮಾಡಬೇಕೆನ್ನುವವರು ಯಾರಿಂದಲಾದರೂ ಹೇಳಿಸಿಕೊಂಡು ಆ ಕೆಲಸ ಮಾಡಬೇಕೆನ್ನುವುದಿಲ್ಲ. ಅವರು ತಾವಾಗಿಯೇ ತಿಳಿದು ಆ ಕೆಲಸ ಮಾಡುತ್ತಾರೆ. ಒಳ್ಳೆಯದನ್ನು ಬಿಟ್ಟು ಬೇರೆ ಮಾಡುವುದು ಅವರಿಗೆ ಗೊತ್ತಿರುವುದೇ ಇಲ್ಲ. ಇಷ್ಟೆಲ್ಲಾ ಪಾಂಡಿತ್ಯವುಳ್ಳ ಶ್ರೀ ಭಟ್ಟರಲ್ಲಿ ಉಜ್ವಲ ಕ್ರತುಶಕ್ತಿಯೂ ಇದೆ. ಅವರ ಪ್ರಯತ್ನವಿಲ್ಲದೆ ಈ ಭಾಗದಲ್ಲಿ ಯಾವ ಸಾಮಾಜಿಕ, ಸಾಹಿತಿಕ, ಕಲಾ, ಸಾಂಸ್ಕೃತಿಕ ಕಾರ್ಯವೂ ಪೂರ್ತಿಯಾಗುವುದಿಲ್ಲ. ಸಾಗರವು ವಿವಿಧರಂಗದಲ್ಲಿ ಒಂದು ವಿಶಿಷ್ಟ ಸ್ಥಾನ ಪಡೆದಿದೆ. ಇದರ ಶ್ರೇಯಸ್ಸಿನ ಬಹುಭಾಗ ಶ್ರೀ ಭಟ್ಟರಿಗೆ ಸಲ್ಲಬೇಕು. ಹೀಗಾಗಿ ಜನತೆಯ ಪ್ರೀತಿ ವಿಶ್ವಾಸವನ್ನು ಪಡೆದಿರುವರು. ಅವರ ಬಗೆಗೆ ಸಾರ್ವಜನಿಕರಿಗೆ ಅಪಾರ ನಂಬುಗೆ ಇದೆ.

ನಿಮ್ಮಿಂದ ಇನ್ನು ಮುಂದೆಯೂ ಇದಕ್ಕಿಂತಲು ಇತ್ಯೋಪ್ಯತಿಶಯವಾದ ಕನ್ನಡ-ನಾಡು-ನುಡಿ-ಕಲೆ-ಸಂಸ್ಕೃತಿಗಳ ಸೇವಾ ಭಾಗ್ಯವನ್ನು ಪಡೆಯುವ ಅವಕಾಶವು ಸದಾ ಇರಲಿ- ಎಂದು ಆಶಿಸುತ್ತೇನೆ.

ಕನ್ನಡದ ಆಸ್ತಿ ಶ್ರೀ ಭಟ್ಟರು, ಎಲ್ಲಕ್ಕೂ ಮಿಗಿಲಾಗಿ ಅವರು ಸ್ನೇಹ ಜೀವಿಗಳು ಅವರು ನೂರು ವಸಂತ ಬದುಕಲೆಂದು ಹಾರೈಸುತ್ತೇನೆ. ನಾಡು ಅವರ ಸೇವೆಯನ್ನು ಪಡೆಯಲಿ ಎಂದು ಹಾರೈಸಿ, ದಯಾಮಯನಾದ ಭಗವಂತನು ಸಕಲ ಭಾಗ್ಯಗಳನ್ನು ನೀಡಲಿ ಎಂದು ಬೇಡುತ್ತೇನೆ.

# ಮಾನವೀಯ ಗುಣಗಳ ಸಾಕಾರ ಮೂರ್ತಿ

- ಸಾ.ಕೆ. ಸುರೇಶ್

ವೈಯಕ್ತಿಕ ಬದುಕಿನ ಜೊತೆ ಜೊತೆಯಲ್ಲಿಸಾರ್ವತ್ರಿಕ ಬದುಕನ್ನು ಅಳವಡಿಸಿಕೊಂಡು ಮುನ್ನಡೆಯುತ್ತಿರುವ ಜನಾದರಣೀಯರಲ್ಲಿ ಶ್ರೀ ಮಹಾಬಲೇಶ್ವರ ಭಟ್ಟರು ಪ್ರಮುಖರು.

ಗ್ರಾಮೀಣಸೊಗಡನ್ನು, ಭಾರತೀಯ ಸಂಸ್ಕೃತಿಯನ್ನು ತಮ್ಮೆಲ್ಲ ಕಾರ್ಯಕ್ಷೇತ್ರದಲ್ಲಿ ಅಭಿನ್ನವಾಗಿಸಿಕೊಂಡಿರುವ ಅಪರೂಪದ ವ್ಯಕ್ತಿತ್ವ ಭಟ್ಟರದು. ಇತ್ತೀಚಿನ ದಿನಗಳಲ್ಲಿ ಶ್ರೀಯುತರು ಸಾಗರ ತಾಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಚುಕ್ಕಾಣಿಯನ್ನು ಹಿಡಿದು ಮುನ್ನಡೆಸುತ್ತಿದ್ದಾರೆ. ಪರಿಷತ್ತಿನ ಕಾರ್ಯಕ್ಷೇತ್ರವನ್ನು ಒಂದಿಲ್ಲೊಂದು ಸಾಹಿತ್ಯಿಕ ಚಟುವಟಿಕೆಗಳ ಮೂಲಕ ಕ್ರಿಯಾಶೀಲವಾಗಿಟ್ಟು ನಾಡಿನ ಉದ್ದಗಲಕ್ಕೂ ಸಾಗರದ ಕೀರ್ತಿಯನ್ನು ಹಬ್ಬಿಸುತ್ತಿದ್ದಾರೆ. ಕನ್ನಡಾಂಬೆಯ ಹಿರಿಯ ಚೇತನಗಳನ್ನು, ಕಿರಿಯ ಅಣಿ ಮುತ್ತುಗಳನ್ನು ಗುರುತಿಸುವ, ಪ್ರೀತಿಸುವ ಮತ್ತು ಗೌರವಿಸುವ ಭಟ್ಟರ ಆತ್ಮೀಯತೆಯನ್ನು ಕಂಡಾಗ ಅಭಿಮಾನ ಪ್ರೀತಿಯಿಂದ ತನ್ನಿಂದ ತಾನೇ ಹೊಮ್ಮುತ್ತದೆ.

ಸಾಗರ ತಾಲೂಕು ಕನ್ನಡಸಾಹಿತ್ಯ ಪರಿಷತ್ ಕೇಂದ್ರ ವ್ಯಕ್ತಿಗಳಾಗಿರುವ ಭಟ್ಟರು ರೂಪಿಸುವ ಯಾವುದೇ ಒಂದು ಕಾರ್ಯ ಯೋಜನೆಗೆ ಒಪ್ಪವಾದ ಚೌಕಟ್ಟನ್ನು ಸ್ವತಃ ಅವರೇ ಸಿದ್ಧಪಡಿಸುತ್ತಾರೆ. ಆ ಪರಿಧಿಯ ಎಲ್ಲಾ ಮಜಲುಗಳನ್ನುಚಾಚೂ ತಪ್ಪದೇ ಸಮಯಕ್ಕೆ ಸರಿಯಾಗಿ ಪರಿಶೀಲಿಸುವ, ಅರೆಕೊರೆಗಳನ್ನು ಗುರುತಿಸುವ ಪರಿ ಕಾರ್ಯಕರ್ತರನ್ನು ಬೆರಗುಗೊಳಿಸುತ್ತದೆ. ಬರಿ ಗುರುತಿಸುವಿಕೆಗೆ ನಿಲ್ಲದ ಭಟ್ಟರು ಎಂಥವರನ್ನು ಕಾರ್ಯೋನ್ಮುಖರಾಗುವಂತೆ ಮಾಡಲು ಅವರು ನೀಡುವ ಸೌಜನ್ಯ ಶೀಲ ಸಲಹೆ-ಸೂಚನೆಗಳು ಕಾರ್ಯಕರ್ತರನ್ನು ಆ ದಿಶೆಯಲ್ಲಿ ಮುನ್ನುಗ್ಗಿ ಸರಿಪಡಿಸುವಂತೆ ಪ್ರೇರೇಪಿಸುತ್ತದೆ.

ಅಂದರೆ ಯಾವುದೇ ಒಂದು ಕೆಲಸದ ರೀತಿ-ನೀತಿ ಹೇಗಿದ್ದರೆ ಚೆನ್ನವೋ ಹಾಗೆಯೇ ಇದ್ದಾಗ, ಆದಾಗ ಮಾತ್ರವೇ ಚೆನ್ನ ಎಂಬ ತತ್ವಕ್ಕೆ ಭಟ್ಟರು ಬದ್ಧರಾಗಿರುವವರು. ಆದಕ್ಕಾಗಿಯೇ ಅವರು ಸಮಯಕ್ಕೆ ಬಹಳ ಮಹತ್ವ

ಕೊಡುತ್ತಾರೆ. ಕಾಲ ಮಿಂಚಿ ಮಾಯವಾಗುವ ಮೊದಲೇ ಚಿಂತಿಸಿ ಅವರ ಬಗ್ಗೆ ಕುತೂಹಲ ಭರಿತವಾಗಿ ಮುನ್ನುಗ್ಗಿ ಆನಂದ ಪಡುವುದು ಅವರ ಅತೀ ಮುಖ್ಯವಾದ ಗುಣವು ಆಗಿದೆ.

ಸಮಯ ಪರಿಪಾಲನೆಯೊಂದಿಗೆ ಕಾರ್ಯ ತತ್ಪರತೆಯನ್ನು, ಶಿಸ್ತು, ಚೈತನ್ಯ, ತಾಳ್ಮೆ, ಛಲ, ನಿಸ್ವಾರ್ಥತೆ ದೃಢಸಂಕಲ್ಪ ಭಟ್ಟರಿಗೆ ರಕ್ತಗತವಾಗಿದೆ. ಅಂತೆಯೇ ಅವರು ಪ್ರೀತಿಯಿಂದ ಗೆಳೆತನದ ಸವಿಯನ್ನು ಹಂಚುವ ಮೂಲಕ ಮಧುರ ಬಾಂಧವ್ಯವನ್ನು ಬೆಳೆಸಿಕೊಂಡಿದ್ದಾರೆ. ಅಂತೆಯೇ ಮಾರ್ಗದರ್ಶಕರಾಗಿ ಹಿರಿಯ ಮತ್ತು ಕಿರಿಯ ಮುಂದಾಳು ಆಗಿದ್ದಾರೆ. ಸಾರ್ವಜನಿಕ ಹಿತ ಸಾಧನೆಗಾಗಿ ಅವರು ಬಾಳುವೆಯ ಪಥದಲ್ಲಿ ಕೃಷಿಕರಾಗಿ, ರಾಜಕೀಯ ಮುತ್ಸದ್ದಿಯಾಗಿ, ಹಲವಾರು ಸಂಘ-ಸಂಸ್ಥೆಗಳ ಸದಸ್ಯರಾಗಿ, ಕಾರ್ಯದರ್ಶಿಗಳಾಗಿ, ಉಪಾಧ್ಯಕ್ಷರಾಗಿ, ಅಧ್ಯಕ್ಷರಾಗಿ, ಲೇಖಕರಾಗಿ, ಕವಿಗಳಾಗಿ, ಪುಸ್ತಕ ಪ್ರಕಾಶಕರಾಗಿ, ಸಂಪಾದಕರಾಗಿ ಕಾರ್ಯ ನಿರ್ವಹಿಸಿದವರು ಮತ್ತು ಈಗಲೂ ರಾಜ್ಯ ಪತ್ರಿಕೆಗಳ ಅಂಕಣ ಕಾರರಾಗಿದ್ದಾರೆ.

ಭಟ್ಟರದು ಶಿಸ್ತು ಬದ್ಧ ಜೀವನ ಎಂಬುದರಲ್ಲಿ ಎರಡು ಮಾತಿಲ್ಲ. ಅವರು ಬದುಕಿನ ಎಲ್ಲಾ ಏರಿಳಿತಗಳ ನಡೆಯಲ್ಲಿ ಇತಿ-ಮಿತಿಯರಿತು, ಶಿಸ್ತಿನ ಗತಿಯನ್ನು ಲಯಬದ್ಧವಾಗಿ ನಡೆ-ನುಡಿಯಲ್ಲಿ ಅನುಸಂಧಾನ ಮಾಡಿಕೊಂಡವರು. ಸೃಜನ ಶೀಲವಾದ ಕಲೆಗಾರಿಯಲ್ಲಿಯೂ ನವಿರಾದ ಭಾವನೆಯನ್ನು ಧುಮ್ಮಿಕ್ಕಿಸುವ ವಿಚಾರ ಪೂರ್ಣ ಬರಹಗಾರರು. ಅಂತೆಯೇ ಮಾತಿನ ಮೋಡಿಯ ಮೂಲಕ ಎಲ್ಲರನ್ನೂ ತನ್ನತ್ತ ಸೆಳೆದುಕೊಳ್ಳುವ ವಾಗ್ಮಿಖರಿ ಪಡೆದವರು.

ಆಡಳಿತಾತ್ಮಕವಾದ ರೀತಿ ನೀತಿಗಳ ಅನುಸರಣೆ ಲೆಕ್ಕಪತ್ರಗಳ ಸಮರ್ಪಕವಾದ ರೀತಿಯಲ್ಲಿ ವ್ಯವಸ್ಥಿತವಾಗಿ ನಿರೂಪಿಸಿಡುವ ಬಗೆ ಅನುಕರಣೀಯವಾದುದು. ಚಿಕ್ಕದಿರಲಿ, ದೊಡ್ಡದಿರಲಿ ಚೊಕ್ಕವಾಗಿರಬೇಕು-ಎಂಬುದು ಅವರು ರೂಢಿಸಿಕೊಂಡ ಸತ್ಯ.

ಜೀವನದ ಬಹುಮುಖತೆಯನ್ನು ತನ್ನೊಳಗೆ ಇರಿಸಿಕೊಂಡ ಸಾಹಿತ್ಯ ಕೃತಿಗಳ ಅಧ್ಯಯನದೊಂದಿಗೆ ಅವುಗಳನ್ನು ಹಿರಣವಾಗಿ ಜೋಡಿಸಿಡುವ ಭಟ್ಟರ ಕ್ರಮ ಓದುಗನನ್ನು ಬಳಿ ಸೆಳೆಯುತ್ತದೆ.

ಸಾಗರ ತಾಲೂಕು ಕನ್ನಡಸಾಹಿತ್ಯ ಪರಿಷತ್ತು ಕಳೆದ ನಾಲ್ಕು ವರ್ಷಗಳಿಂದ ಮಹಾಬಲೇಶ್ವರ ಭಟ್ಟರ ನೇತೃತ್ವದಲ್ಲಿ ಕನ್ನಡಪುಸ್ತಕಗಳ ಪ್ರದರ್ಶನ ಮತ್ತು ಮಾರಾಟವನ್ನು ನಿರಂತರವಾಗಿ ಹಮ್ಮಿಕೊಂಡು ಬರುತ್ತಿದೆ. ಈ ಕಾರ್ಯಕ್ರಮದ ಪೂರ್ವೋತ್ತರ ಸಿದ್ಧತೆಯ ದಿನಗಳಲ್ಲಿ ಭಟ್ಟರೊಂದಿಗೆ ಬಹುಕಾಲ ಕಳೆಯುವ

ಸುಯೋಗ ನನಗೂ ಎರಡು ವರ್ಷಗಳಿಂದ ದೊರೆತಿರುವುದಕ್ಕೆ ಸಂತೋಷವಾಗುತ್ತದೆ. ೧೯೯೫ರ ಸಾಲಿನಲ್ಲಿ ನಡೆಸಿದ ಪುಸ್ತಕ ಪ್ರದರ್ಶನ ಮತ್ತು ಮಾರಾಟದ ವೇಳೆಯಲ್ಲಿ ಭಟ್ಟರೊಂದಿಗೆ ನನ್ನನ್ನು ಪರಿಚಯಿಸಿದ ಶ್ರೀ ಪ್ರಕಾಶ್ ಕಮ್ಮಾರರನ್ನು ನೆನೆಯುತ್ತೇನೆ. ನಂತರದ ಕೆಲದಿನಗಳಲ್ಲಿ ಪರಿಷತ್ತಿನ ಕಾರ್ಯಕ್ರಮಗಳಲ್ಲಿ ನನ್ನನ್ನು ನಾನು ತೊಡಗಿಸಿಕೊಳ್ಳಲು ಅವಕಾಶವಿತ್ತ ಭಟ್ಟರು ಪರಿಷತ್ತಿನ ಕಾರ್ಯಕಾರಿ ಸಮಿತಿಗೆ ವಿಶೇಷ ಆಹ್ವಾನಿತನನ್ನಾಗಿ ಆಯ್ಕೆ ಮಾಡಿಕೊಳ್ಳುವಲ್ಲಿ ತಮ್ಮ ಔದಾರ್ಯವನ್ನು ಪ್ರಕಟಪಡಿಸಿದರು. ಆ ಮೂಲಕವಾಗಿ ನನ್ನಂತ ಕಿರಿಯನಿಗೂ ಸಾಹಿತ್ಯ ದೇವಿಯ ಸಾನಿಧ್ಯದಲ್ಲಿ ಅಳಿಲು ಸೇವೆ ಸಲ್ಲಿಸಲು ಭಟ್ಟರು ಅವಕಾಶವಿತ್ತರು.

ತಮಗೆ ಸನ್ನಿಹಿತರಾದವರ ಮನೋಭಿಪ್ರಾಯವನ್ನು ಅವರ ನಡೆ ನುಡಿಯಲ್ಲಿ ಅರ್ಥೈಸಿಕೊಳ್ಳುವ ಭಟ್ಟರು, ಓದಲು-ಮನನ ಮಾಡಲು ಸೂಚಿಸುವ ಪುಸ್ತಕಗಳು ಆಕಾರದಲ್ಲಿ ವಾಮನನಾದರೂ, ಗುಣದಲ್ಲಿ ವಿಶ್ವರೂಪವನೇ ಪ್ರತಿಬಿಂಬಿಸುತ್ತವೆ. ಭಟ್ಟರಂತ ವಿಶೇಷ ಓದುಗರ ಸಹಚರ್ಯೆ ಜ್ಞಾನದಾಹಿಯೊಬ್ಬರಿಗೆ ಮರಳುಗಾಡಿನಲ್ಲಿ ಸಿಕ್ಕ ಒರತೆಯಂತೆ ಸರಿ.

ಒಟ್ಟಾರೆಯಾಗಿ ಮಾನವೀಯ ಗುಣಗಳ ಸಾಕಾರ ಮೂರ್ತಿಯಾಗಿರುವ ಮಹಾಬಲೇಶ್ವರ ಭಟ್ಟರಿಗೆ ಎಪ್ಪತ್ತು ವರ್ಷಗಳು ತುಂಬಿವೆ. ಆದರೂ ಅವರು ಬದುಕನ್ನು ಸವಿಯುತ್ತಿರುವ ಕ್ರಮದಿಂದಾಗಿ ಇಂದಿಗೂ ಅವರಲ್ಲಿ ಎಪ್ಪತ್ತರ ನವ ತರುಣನ ಉತ್ಸಾಹ, ಲವಲವಿಕೆ, ಚುರುಕುತನ ಅನುಭವದ ಪಡಿನೆಳಲಲ್ಲಿ ಅಭಿವ್ಯಕ್ತ ವಾಗುತ್ತದೆ.

ಈ ಅಭಿವ್ಯಕ್ತಿಯೊಂದಿಗೆ ಹಲವಾರು ಕಿರಿಯ ಬರಹಗಾರರಿಗೆ ಪ್ರೇರಣೆ ನೀಡಿದಂತೆ ನನ್ನನ್ನು ಸಾರ್ವಜನಿಕ ಜೀವನಕ್ಕೆ ಆಶೀರ್ವಾದ ಪೂರ್ವಕವಾಗಿ ಹರಸಿದ್ದಾರೆ.

# ಪುಸ್ತಕ ಮೇಳದ ರೂವಾರಿ

- ವಿ. ಗಣೇಶ್

ತೊರೆಮನೆ ಮಹಾಬಲೇಶ್ವರ ಭಟ್ಟರಿಗೂ ಕನ್ನಡಕ್ಕೂ ಇರುವ ನಂಟು ಬಾಲ್ಯದಿಂದಲೂ ಬೆಳೆದು ಬಂದುದಾಗಿದೆ. ಆದುದರಿಂದ ಶ್ರೀ ಭಟ್ಟರು ಕನ್ನಡದ ದೊಡ್ಡ ಆಸ್ತಿಯಾಗಿ ಬೆಳೆದು ಬಂದಿದ್ದಾರೆ. ಸಾಗರ ತಾಲ್ಲೂಕಿನಲ್ಲಿ ಎಲ್ಲೇ ಕನ್ನಡದ ಕಾರ್ಯಕ್ರಮಗಳಿರಲಿ ಅಲ್ಲಿ ಪ್ರತ್ಯಕ್ಷವಾಗಿಯಾಗಲೀ ಅಥವಾ ಪರೋಕ್ಷವಾಗಿಯಾಗಲೀ ಭಟ್ಟರ ಸಹಕಾರವಿರಲೇಬೇಕು. ಅದು ಸನ್ಮಾನ ಸಮಾರಂಭವಿರಲಿ, ರಾಜ್ಯೋತ್ಸವವಿರಲಿ, ಪುಸ್ತಕ ಪ್ರದರ್ಶನವಿರಲೀ ಅಲ್ಲಿ ಭಟ್ಟರಿರಲೇಬೇಕು. ಇವರ ಸಾಹಿತ್ಯ ಕ್ಷೇತ್ರವು ಕೂಡ ತುಂಬಾ ವಿಶಾಲವಾದುದು. ಇವರು ಕಥೆ, ಕಾದಂಬರಿ, ನಾಟಕ, ಕವನ ಮುಂತಾದ ಎಲ್ಲಾ ಪ್ರಕಾರಗಳಲ್ಲೂ ತುಂಬಾ ಪಳಗಿದ್ದಾರೆ. ಈಗಂತೂ ಸುಮಾರು ಒಂದು ವರ್ಷಗಳಿಂದ ಸಂಯುಕ್ತ ಕರ್ನಾಟಕದ ಖ್ಯಾತ ಅಂಕಣಕಾರರಾಗಿ ನಾಡಿನ ಮೂಲೆ ಮೂಲೆಗಳಿಗೂ ಇವರ ಸಾಹಿತ್ಯ ಸೇವೆ ಪಸರಿಸುತ್ತಿದೆ.

ಬಾಲ್ಯದಲ್ಲಿಯೇ ತಂದೆಯನ್ನು ಕಳೆದುಕೊಂಡು ಅನಾಥರಾದ ಇವರನ್ನು ಪೋಷಿಸಿ ಬೆಳೆಸಿದವರು ಇವರ ಸೋದರ ಮಾವನವರಾದ ದಿ. ಚಕ್ರಪಾಣಿಯವರು. ಈ ಕನ್ನಡದ ಕುವರರನ್ನು ನಾಡಿಗೆ ಅರ್ಪಿಸಿದ ಆ ಚೇತನವನ್ನು ನೆನೆದು ನಮಿಸುವುದು ನಮ್ಮೆಲ್ಲರ ಆದ್ಯ ಕರ್ತವ್ಯ.

ಶ್ರೀಯುತರಿಗೆ ಕನ್ನಡಗೀಳು ಅಂಟಿದುದು ಮನೆಯಲ್ಲೇ ಮಾಡಿದ ಅಧ್ಯಯನದಿಂದ. ತೊರೆಮನೆಯಿಂದ ಸಾಗರಕ್ಕೆ ಕಾಲಿಟ್ಟಾಗ ಇನ್ನೂ ಹದಿನಾರು ವರ್ಷದ ಯುವಕ. ಅಂದಿನಿಂದ ಪ್ರಾರಂಭವಾದ ಇವರ ಅಧ್ಯಯನ ಅವಿರತವಾಗಿ ಮುಂದುವರಿಯುತ್ತಲೇ ಇದೆ. ಡಿ.ವಿ.ಜಿ. ಯವರಿಂದ ಹೆಚ್ಚು ಪ್ರಭಾವಿತರಾದ ಇವರು ಮಂಕು ತಿಮ್ಮನ ಕಗ್ಗದಲ್ಲಿರುವ ಒಂದೊಂದು ಸಾಲು ಕೂಡ ತನಗೆ ವಿಶ್ವಕೋಶವಾಯಿತು ಎಂದು ಹೇಳುತ್ತಾರೆ.

ಭಟ್ಟರು ಆರಿಸಿಕೊಂಡ ರಂಗಗಳು ಒಂದಲ್ಲ, ಎರಡಲ್ಲ. ಒಮ್ಮೆ ಕೃಷಿಕರಾದರೆ, ಮತ್ತೊಮ್ಮೆ ಪ್ರಕಾಶಕರಾದರು. ರಾಜಕೀಯಕ್ಕೆ ಧುಮುಕಿದ ಇವರು ಸುಮಾರು ೩ ದಶಕಗಳಿಗೂ ಹೆಚ್ಚಾಗಿ ರಾಜಕಾರಣಿಯಾಗಿ ಕೆಲಸಮಾಡಿದರು. ಸುಮಾರು ೧೨

ವರ್ಷಗಳ ಕಾಲ ಸಾಗರದ ಪುರಸಭಾ ಸದಸ್ಯರಾಗಿ ಸಲ್ಲಿಸಿದ ಸೇವೆ ಸದಾ ಹಸಿರು. ಸ್ವತಃ ಬರಹಗಾರರಾದ ಇವರು ಬರಹಗಾರರನ್ನು ಪ್ರೋತ್ಸಾಹಿಸಲು 'ಜಲಂಧರ' ಪ್ರಕಟನಾಲಯವನ್ನು ಪ್ರಾರಂಭಿಸಿದರು. ಇದು ಕೇವಲ ಪ್ರಕಟನಾಲಯವಾಗಿರಲಿಲ್ಲ. ಅದೊಂದು ಸಾಹಿತ್ಯ ಕೇಂದ್ರ. ಅವರ ಪ್ರಕಟನಾಲಯದಲ್ಲಿ ಸದಾ ಸಾಹಿತಿಗಳ ಸಮೂಹವೇ ಸೇರುತ್ತಿತ್ತು.

ಬರೆದದ್ದಕ್ಕಿಂತಲೂ ಹೆಚ್ಚಾಗಿ ಬರೆಯುವವರನ್ನು ಸಾಗರದ ಜನತೆಗೆ ಪರಿಚಯಿಸಿದ್ದು ಭಟ್ಟರ ಹೆಗ್ಗಳಿಕೆ. ಶ್ರೀ ಸಾ.ಶಿ. ಮರುಳಯ್ಯನವರನ್ನು ಸಾಗರದಲ್ಲಿಸನ್ಮಾನಿಸಿದ ಸಂದರ್ಭದಲ್ಲಿ ಸಾಹಿತ್ಯ ಪ್ರೇಮಿಗಳ ಸಾಗರವನ್ನೇ ನೋಡಿದಾಗ ಅವರು ದಂಗಾಗಿಬಿಟ್ಟರು. ಬೆಂಗಳೂರಿನಂತಹ ಪಟ್ಟಣದಲ್ಲಿ ಕಾಣದ ಈ ಮಹಾಪೂರವನ್ನುಸಾಗರದಲ್ಲಿಕಾಣಲು ಸಾಧ್ಯವಾಗುತ್ತಿರುವುದಕ್ಕೆ ಶ್ರೀ ಭಟ್ಟರ ಕಾಣಿಕೆ ಅಪಾರ ಎಂದರೆ ಅತಿಶಯೋಕ್ತಿಯಾಗಲಾರದು. ಅವರ ಅಧ್ಯಕ್ಷತೆಯಲ್ಲಿ ನಡೆಯುತ್ತಿರುವ 'ಸಾಗರ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್' ಅದ್ಭುತವಾಗಿ ಕೆಲಸ ಮಾಡುತ್ತಿದೆ.

ನಾಡಿನ ಹೆಸರಾಂತ ಸಾಹಿತಿಗಳಾದ ದ.ರಾ. ಬೇಂದ್ರೆ, ರಂ.ಶ್ರೀ. ಮುಗಳಿ, ಬಸವರಾಜ ಕಟ್ಟೀಮನಿ, ಕೆ.ವಿ. ಪುಟ್ಟಪ್ಪ, ಗೋಪಾಲಕೃಷ್ಣ ಅಡಿಗ ಮುಂತಾದ ಗಣ್ಯರುಗಳನ್ನು ಸಾಗರದಲ್ಲಿಸನ್ಮಾನಿಸಿದಾಗ ಶ್ರೀ ಭಟ್ಟರ ಪಾತ್ರವನ್ನು ಮರೆಯುವಂತಿಲ್ಲ. ಇದಲ್ಲದೇ ಶ್ರೀ ಭಟ್ಟರು ಸ್ಥಾಪಿಸಿದ ಕನ್ನಡ ಸಂಘ ಎಪ್ಪತ್ತರ ದಶಕದಲ್ಲಿ ಅಸಾಧಾರಣ ಕೆಲಸ ಮಾಡಿ ಜನರ ಮೆಚ್ಚಿಗೆಯನ್ನು ಪಡೆಯಿತು.

ಹೆಸರಾಂತ ಸಾಹಿತಿಗಳ ಸನ್ಮಾನಕ್ಕಿಂತಲೂ ಅವರ ಕೃತಿಗಳಿಗೆ ಸನ್ಮಾನ ಮಾಡುತ್ತಿರುವುದು ಶ್ರೀ ಮಹಾಬಲೇಶ್ವರ ಭಟ್ಟರ ಹೆಗ್ಗಳಿಕೆ. ಕಳೆದ ೩-೪ ವರ್ಷಗಳಿಂದ ಅವರು ನಡೆಸುತ್ತಿರುವ ಪುಸ್ತಕ ಪ್ರದರ್ಶನ ನಿಜಕ್ಕೂ ಶ್ಲಾಘನಾರ್ಹ. ನಾಡಿನ ಹೆಸರಾಂತ ಸಾಹಿತಿಗಳ ಎಲ್ಲಾ ಪುಸ್ತಕಗಳು ಇವರು ನಡೆಸುವ ಪುಸ್ತಕ ಪ್ರದರ್ಶನದಲ್ಲಿ ದೊರೆಯುತ್ತವೆ. ಊರಿನಲ್ಲಿ ಹೊಸದಾಗಿ ಕಟ್ಟಲ್ಪಟ್ಟ ಮಳಿಗೆಯೊಂದು ಇವರ ಪುಸ್ತಕ ಪ್ರದರ್ಶನಕ್ಕೆಂದೇ ತೆರವಾಗಿರುತ್ತದೆ. ಭಟ್ಟರು ಕೇಳುವುದರೊಳಗೆ ಸಹೃದಯ ದಾನಿಗಳು ಮಳಿಗೆಗಳನ್ನು ಯಾವ ಬಾಡಿಗೆಯೂ ಇಲ್ಲದೆ ೮-೧೦ ದಿನಗಳ ಕಾಲ ಕೊಡಲು ಮುಂದೆ ಬರುತ್ತಾರೆ. ಇವೆಲ್ಲದರ ಹಿಂದೆ ಅಡಗಿರುವುದು ಭಟ್ಟರ ಅನನ್ಯವಾದ ಶಕ್ತಿ.

ಪ್ರಖ್ಯಾತ ಸಾಹಿತಿಯೋರ್ವರಿಂದಲೇ ಪುಸ್ತಕ ಪ್ರದರ್ಶನ ಉದ್ಘಾಟನೆ ಯಾಗಬೇಕು. ಇದಕ್ಕೆ ಎರಡು ದಿನಗಳಿಂದಲೇ ತಯಾರಿ ನಂತರ ಭಟ್ಟರೇ ಸ್ವತಃ ನಿಂತು ಪುಸ್ತಕವನ್ನು ಮಾರುವ ದೃಶ್ಯವಂತೂ, ಅವರ ಕರ್ತವ್ಯ ಪ್ರಜ್ಞೆ ಹಾಗೂ

ಕನ್ನಡಾಭಿಮಾನವನ್ನು ಎತ್ತಿ ತೋರಿಸುತ್ತದೆ. ತಾವು ಮೆಚ್ಚಿದ ಕೃತಿಗಳನ್ನು 'ಈ ಪುಸ್ತಕವನ್ನುಕೊಳ್ಳಿ; ಇದು ನೀವು ಮನೆಯಲ್ಲಿ ಇಡಲೇಬೇಕಾದ ಪುಸ್ತಕ' 'ಇದು ಕುವೆಂಪುವರಿಗೆ ಜ್ಞಾನಪೀಠ ಪ್ರಶಸ್ತಿಯನ್ನು ತಂದುಕೊಟ್ಟ ಪುಸ್ತಕ' 'ಇದು ಅಡಿಗರ ನವ್ಯಕಾವ್ಯ ನಡೆದು ಬಂದ ದಾರಿ' ಎನ್ನುತ್ತ ಅತ್ಯುತ್ತಮ ಕೃತಿಗಳನ್ನು ಓದುಗರ ಮಡಿಲಿನೊಳಗೆ ತುಂಬಿ ಕಳುಹಿಸುತ್ತಾರೆ. ಶ್ರೀ ಶ್ರೀನಿವಾಸ ಉಡುಪರು, ಶ್ರೀ ನಿ.ನಾ. ಮಧ್ಯಸ್ಥರು ಮುಂತಾದ ಗೆಳೆಯರು ಇವರ ಎಡಬಲಗಳಲ್ಲಿ ಸಹಾಯಕರಾಗಿ ನಿಂತಿರುತ್ತಾರೆ. ಅಂತೂ ಹತ್ತು ದಿನಗಳ ಇವರ ಪುಸ್ತಕ ಪ್ರದರ್ಶನ ಸಾಗರದಲ್ಲಿ ಒಂದು ಹಬ್ಬದ ವಾತಾವರಣವನ್ನೇ ಸೃಷ್ಟಿಸಿರುತ್ತದೆ. ಸುಮಾರು ೭೦,೦೦೦ ರೂ.ಗಳಿಗೂ ಹೆಚ್ಚುಪುಸ್ತಕಗಳು ಮಾರಾಟವಾಗುತ್ತದೆ ಎಂದರೆ, ಇದು ಭಟ್ಟರ ಶ್ರಮಕ್ಕೆ ಸಂದ ಪ್ರತಿಫಲವಲ್ಲವೇ ?

ಅ.ರಾ. ಮಿತ್ರರು ಒಂದು ಕಡೆ ಹೇಳುತ್ತಾರೆ, ಹೊಸದಾಗಿ ಮನೆ ಕಟ್ಟಿಸುವಾಗ, ದೇವರ ಕೋಣೆ, ಮಲಗುವ ಕೋಣೆ, ಸ್ನಾನದ ಕೋಣೆ ಮುಂತಾದವುಗಳ ಕಡೆ ಗಮನ ಕೊಡುತ್ತಾರೆಯೇ ವಿನಃ ಯಾರೂ ಪುಸ್ತಕ ಭಂಡಾರಕ್ಕಾಗಿ ಒಂದು ಪ್ರತ್ಯೇಕ ಕೋಣೆ ಇರಲಿ, ಒಂದು ಕಪಾಟನ್ನುಕೂಡಾ ಇರಿಸುವ ಅಭ್ಯಾಸವನ್ನು ನಾವು ಕಾಣುವುದಿಲ್ಲ. ಭಟ್ಟರಂತಹ ಕನ್ನಡದ ಕುಲದೀಪಕರು ನಾಡಿನೆಲ್ಲೆಡೆ ಉದಯಿಸಿದ್ದೇ ಆದರೆ ಎಲ್ಲಾ ಮನೆಗಳಿಗೂ ಒಂದೊಂದು ಕನ್ನಡದ ಪುಸ್ತಕ ಭಂಡಾರದ ಅವಶ್ಯಕತೆ ಬಂದೇ ಬರುತ್ತದೆ. ಸಹಜವಾಗಿ ಕನ್ನಡ ಪುಸ್ತಕಗಳನ್ನು ಓದುವ ಅಭ್ಯಾಸ ಕೂಡ ಬೆಳೆಯುತ್ತದೆ. ಪುಸ್ತಕಗಳನ್ನುಕೊಂಡು ಮನೆಯಲ್ಲಿಟ್ಟಾಗ ಮಾತ್ರ ಮಕ್ಕಳು ಬಾಲ್ಯದಿಂದಲೇ ಓದುವ ಅಭ್ಯಾಸ ಬೆಳೆಸಿಕೊಳ್ಳಲು ಸಹಕಾರಿಯಾಗುತ್ತದೆ.

ಭಟ್ಟರು ಸಾಹಿತ್ಯ ಪರಿಷತ್ತಿನ ಚುಕ್ಕಾಣಿಯನ್ನು ಹಿಡಿಯುವುದಕ್ಕೂ ಮೊದಲು ಒಂಕ್ಕೂ ತಲುಪದ ಸದಸ್ಯರ ಸಂಖ್ಯೆ ಇಂದು ೬೮೦ ನ್ನೂ ದಾಟಿ ಓಡುತ್ತಿದೆ. ಭಟ್ಟರ ಜೊತೆಯಲ್ಲಿ ಸಾಗರದ ಸಹೃದಯಿಗಳನ್ನು ಸಂಧಿಸಿದಾಗ ನಾಮುಂದು ತಾಮುಂದು ಎಂದು ಸದಸ್ಯರಾಗುತ್ತಾರೆ. ಅವರು ಪಡೆಯುವ ಒಂದೊಂದು ರೂಪಾಯಿ ಕೂಡ ಸದ್ವಿನಿಯೋಗವಾಗುತ್ತದೆ ಎಂಬ ವಿಶ್ವಾಸವೇ ಅವರಿಗೆ ದೊರೆಯುತ್ತಿರುವ ಈ ಸಹಕಾರಕ್ಕೆ ಮುಖ್ಯ ಕಾರಣ.

ಭಟ್ಟರು ಯಾವ ಕಾರ್ಯಕ್ರಮವನ್ನೇ ನಡೆಸಲಿ ಅದು ತುಂಬಾ ಅಚ್ಚು ಕಟ್ಟಾಗಿ, ಸಮರ್ಪಕವಾಗಿ ನಡೆಯುತ್ತದೆ. ಕಾರ್ಯಕ್ರಮಕ್ಕೆ ಹಿಂದಿನ ದಿನವೇ ಅವರು ತಮ್ಮ ಮಿತ್ರರೊಂದಿಗೆ ಸೇರಿ ಎಲ್ಲಾ ವ್ಯವಸ್ಥೆಯನ್ನೂ ಮಾಡಬೇಕು. ಕಾರ್ಯಕ್ರಮದ ದಿನ ಬಂದ ಅತಿಥಿಗಳಿಗೆ ಭೋಜನದ ವ್ಯವಸ್ಥೆ ಇವರ ಮನೆಯಲ್ಲಿಯೇ ನಡೆಯಬೇಕು. ಯಾರೇ ಬರಲಿ ಭಟ್ಟರ ಆತಿಥ್ಯವನ್ನು ಹೊಗಳದವರಿಲ್ಲ. ಕಾರ್ಯಕ್ರಮಗಳನ್ನು ಹೇಗೆ ನಡೆಸಬೇಕು ಎಂದು ನಿಜವಾಗಿಯೂ ಭಟ್ಟರಿಂದ ಕಲಿಯಬೇಕು.

ಯುವ ಪೀಳಿಗೆಯನ್ನು ಭಟ್ಟರು ಪ್ರೋತ್ಸಾಹಿಸಿ, ಹುರಿದುಂಬಿಸಿ ಬರೆಯುವಂತೆ ಪ್ರೇರೇಪಿಸುತ್ತಾರೆ. ಜಲಂಧರ ಪ್ರಕಟನಾಲಯದಲ್ಲಿ ಅನೇಕ ಪುಸ್ತಕಗಳನ್ನು ಪ್ರಕಟಿಸಿ ತೃಪ್ತಿ ಪಡದ ಭಟ್ಟರು ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ತಾಲ್ಲೂಕಿನ ಹೆಚ್ಚು ಕವಿಗಳ ಕವನ ಸಂಕಲನ'ಕಾವ್ಯಸಾಗರ'ವನ್ನುಹೊರ ತಂದಿದ್ದಾರೆ. ಕನ್ನಡಕ್ಕಾಗಿ ತಾನು ಮಾಡಿದ ಕೆಲಸಕ್ಕಿಂತಲೂ ಮಾಡಬೇಕಾದುದು ಬಹಳಷ್ಟಿದೆ ಎನ್ನುತ್ತಾರೆ.

ಈ ರೀತಿ ಭಟ್ಟರ ಬಗ್ಗೆ ಬರೆಯುತ್ತಾ ಹೋದರೆ ಮುಗಿಯುವುದೇ ಇಲ್ಲ. ಆರಂಭದ ಜೀವನದಲ್ಲಿ ಕಷ್ಟನಷ್ಟಗಳನ್ನೇ ಕಂಡುಂಡು, ಹಂತ ಹಂತವಾಗಿ ಬೆಳೆದು ಮೇಲೇರುತ್ತಾ ಬಂದ ಭಟ್ಟರು, ತಮ್ಮ ಬಾಳಿನ ಪಥದಲ್ಲಿ ಗಳಿಸಿಕೊಂಡಿದ್ದು ಅಪಾರ ಲೋಕಾನುಭವ, ಹಾಗೂ ಬುದ್ಧಿಶಕ್ತಿ. ತಮ್ಮ ಕಾರ್ಯನಿಷ್ಠೆ, ಉತ್ತಮ ಸಂಸ್ಕಾರ, ಸಂಸ್ಕೃತಿ, ಸರಳತೆ, ಸಜ್ಜನಿಕೆ, ಪ್ರಾಮಾಣಿಕತನಗಳಿಂದ, ಇಂದು ಸುಶೋಭಿತರಾಗಿರುವ ಶ್ರೀಯುತರು, ಹೃದಯ ಶ್ರೀಮಂತರು, ಭಾವ ಶ್ರೀಮಂತರು. ಕನ್ನಡ ನಾಡು ನುಡಿಗಾಗಿ ಶ್ರಮಿಸಿಕೊಂಡೇ ಬಂದಿರುವ, ಭಟ್ಟರು, ನಿಜಕ್ಕೂ ಕನ್ನಡದ ಭಟರು. ಈ ಹಿರಿಯ ಚೇತನಕ್ಕೀಗ ೭೦ರ ವಸಂತ. ಈ ಸಂದರ್ಭದಲ್ಲಿ ಅವರನ್ನು ಅಭಿನಂದಿಸುವುದು, ಗೌರವಿಸುವುದು, ಕನ್ನಡಿಗರಾದ ನಮ್ಮೆಲ್ಲರ ಕರ್ತವ್ಯ. ಇದು ನಾವು ಕನ್ನಡಕ್ಕಾಗಿ ಸಲ್ಲಿಸುತ್ತಿರುವ ಗೌರವವೂ ಕೂಡ ಆಗಿದೆ.

ವೈಯಕ್ತಿಕ ಜೀವನದಲ್ಲೂ ಕೂಡ ಭಟ್ಟರ ಬದುಕು ಸದಾ ಹಸಿರು. ಅತ್ಯಂತ ಸರಳವಾದ ಹಾಗೂ ಚೊಕ್ಕವಾದ ಅಚ್ಚ ಬಿಳುಪಿನ ಉಡುಗೆಯೊಂದಿಗೆ ಭಟ್ಟರು ಹೊರ ಹೊರಟರೆ ಇಂದಿನ ನವಯುವಕರೂ ಕೂಡ ನಾಚುವಂತಿರಬೇಕು. ಸರ್.ಎಂ. ವಿಶ್ವೇಶ್ವರಯ್ಯನವರು ಹೇಳುವಂತೆ "To be well dressed is to be well disciplined" ಭಟ್ಟರ ವಿಷಯದಲ್ಲಿ ಈ ತತ್ವ ಅಕ್ಷರಶಃ ನಿಜ. ಸದಾ ಹಸನ್ಮುಖಿ, ಹಿರಿಯ ಕಿರಿಯರೆಂಬ ಬೇಧವಿಲ್ಲದೆ ಎಲ್ಲರನ್ನೂ ನಗುನಗುತ್ತಾ ಮಾತನಾಡಿಸುವ ಹೃದಯವಂತಿಕೆ. ವ್ಯಕ್ತಿ ಸೌಮ್ಯವಾದರೂ; ಕಾರ್ಯದಕ್ಷತೆಯಲ್ಲಿ ಮಾತ್ರ ತುಂಬಾ ನಿಷ್ಠುರವಾದಿ, ಸದಾ ಚೈತನ್ಯದ ಚಿಲುಮೆ.

ಕುಟುಂಬದ ಜೀವನದಲ್ಲೂ ಕೂಡ ತುಂಬಾ ತೃಪ್ತಿಯ ಬದುಕನ್ನು ನಡೆಸುತ್ತಿದ್ದಾರೆ. ಮಕ್ಕಳಿಗೆ, ಮೊಮ್ಮಕ್ಕಳಿಗೆ ಮಾರ್ಗದರ್ಶನವನ್ನು ಕೊಡುತ್ತಾ ಇರುವುದರಿಂದ ಚಿರಂಜೀವಿಗಳೂ ಕೂಡ ತಂದೆಗೆ ತಕ್ಕಮಕ್ಕಳಾಗಿ ಬೆಳೆಯುತ್ತಿದ್ದಾರೆ. ಶ್ರೀ ಭಟ್ಟರು ತಮ್ಮ ಶ್ರೀಮತಿಯವರೊಂದಿಗೆ ನೂರು ವರ್ಷಗಳ ಕಾಲ ಬಾಳಿ ಬದುಕಿ; ಕನ್ನಡಮ್ಮನ ಕೀರ್ತಿಯನ್ನು ಇನ್ನೂ ಉತ್ತುಂಗ ಶಿಖರಕ್ಕೆ ಏರಿಸುವಂತಾಗಲಿ ಎಂದು ಹಾರೈಸುತ್ತೇನೆ.

# ಸಾಹಿತ್ಯ ಮತ್ತು ಸಹೃದಯತೆ

**- ಕೆ. ಡಿ. ಕೃಷ್ಣಮೂರ್ತಿ**

ಕೃತಿ ರಚನೆಯಷ್ಟೇ ಸಾಹಿತ್ಯ ಸೇವೆಯೆಂಬುದು ಇಂದು ಬಹಳ ಜನ ಲೇಖಕರ ನಂಬಿಕೆಯಾಗಿದೆ. ತಾವು ಬರೆದ ಪುಸ್ತಕಗಳನ್ನು ಎಷ್ಟುಮಂದಿ ಓದುತ್ತಾರೆಂದು ಯಾರೂ ಯೋಚಿಸುವುದಿಲ್ಲ. ಹಾಗಾಗಿಯೇ ಬಿಡುಗಡೆಯಾದ ಪುಸ್ತಕಗಳು ಪ್ರಕಾಶಕರ ಬಳಿಯೇ ಉಳಿಯುತ್ತವೆ. ಅಥವಾ ಲೈಬ್ರರಿಯ ಕಪಾಟುಗಳಲ್ಲಿ ಭದ್ರವಾಗಿರುತ್ತವೆ. ಹೀಗಾಗಿ ಯಾವುದೇ ಲೇಖಕರ ವಿಚಾರಗಳಾಗಲೀ, ಭಾವನೆಗಳಾಗಲೀ ಜನಸಾಮಾನ್ಯರಿಗೆ ಅರ್ಥವಾಗುವುದಿಲ್ಲ. ಇದನ್ನು ಅರ್ಥಮಾಡಿಕೊಂಡು ಜನ ಸಾಮಾನ್ಯರಿಗೆ ಸಾಹಿತಿಗೆ ಅಭಿಪ್ರಾಯಗಳನ್ನು ತಿಳಿಸಬೇಕಾಗಿದ್ದು ಇಂದು ತೀರಾ ಅಗತ್ಯವಾದ ಕೆಲಸವೆಂದು ನಂಬಿ, ನಾಡು ನುಡಿಗಳ ಬಗ್ಗೆ ಅರಿವು, ಮತ್ತು ಸಾಹಿತ್ಯದ ಬಗ್ಗೆ ಸಾಮಾನ್ಯ ಜನರಲ್ಲೂ ಆಸಕ್ತಿ ಮೂಡುವಂತೆ ಶ್ರಮಿಸುತ್ತಿರುವ ಶ್ರೀಟಿ. ಮಹಾಬಲೇಶ್ವರ ಭಟ್ಟರು ನಿಜವಾದ ಅರ್ಥದಲ್ಲಿ ಕನ್ನಡದ ಸೇವೆ ಮಾಡುತ್ತಿದ್ದಾರೆಂದರೆ ಅದು ಹೊಗಳಿಕೆಯ ಮಾತಾಗುವುದಿಲ್ಲ.

ಕರ್ನಾಟಕ ರಾಜ್ಯದಲ್ಲಿ ಸಾಗರ ಒಂದು ಚಿಕ್ಕ ತಾಲ್ಲೂಕು ಕೇಂದ್ರ. ಇಂತಹ ಪ್ರದೇಶದಲ್ಲಿ ನಡೆಯುತ್ತಿರುವ ಸಾಹಿತ್ಯದ ಕಾರ್ಯಕ್ರಮಗಳು ರಾಜ್ಯದಲ್ಲೇ ಮಾದರಿಯಾಗಿವೆ. ಕಾರಣ ಇಲ್ಲಿ ನಡೆಯುವ ಕಾರ್ಯಕ್ರಮಗಳು ಸಾಮಾನ್ಯ ಜನರಿಗೂ ಸಾಹಿತ್ಯದ ಬಗ್ಗೆ ಗೌರವ, ಆಸಕ್ತಿ ಮೂಡಿಸುವಂತಹುವಾಗಿವೆ. ಇವೆಲ್ಲವುಗಳ ಪ್ರೇರಕ ಶಕ್ತಿಯಾಗಿರುವವರು ಸಾಗರ ತಾಲ್ಲೂಕು ಕನ್ನಡಸಾಹಿತ್ಯ ಪರಿಷತ್‌ನ ಅಧ್ಯಕ್ಷರಾಗಿರುವ ಶ್ರೀ ಮಹಾಬಲೇಶ್ವರ ಭಟ್ಟರು. ಅನೇಕ ವರ್ಷಗಳಿಂದ ಹೊಸ ಹೊಸ ಕಾರ್ಯಕ್ರಮಗಳನ್ನು ನಡೆಸುತ್ತಾ ಸಾಗರದಲ್ಲಿ ಹಳ್ಳಿ ಹಳ್ಳಿಗಳವರೆಗೆ ಸಾಹಿತ್ಯದ ಬಗ್ಗೆ ಜನರ ಆಸಕ್ತಿಯನ್ನು ಕೆರಳಿಸುತ್ತಿದ್ದಾರೆ.

ಮಹಾಬಲೇಶ್ವರ ಭಟ್ಟರು ಮೂಲತಃ ಕೃಷಿಕರು, ಗ್ರಾಮೀಣ ಪ್ರದೇಶದಲ್ಲಿ ಹುಟ್ಟಿಬೆಳೆದು ಹಳ್ಳಿಯಬದುಕಿನ ಬಗ್ಗೆ ಸಂಪೂರ್ಣ ಅನುಭವ ಪಡೆದವರು. ರಾಜಕೀಯ ರಂಗದಲ್ಲೂ ಸಾಕಷ್ಟು ಸೇವೆ ಸಲ್ಲಿಸಿದವರು. ಎಲ್ಲವಕ್ಕಿಂತಲೂ ಮಿಗಿಲಾಗಿ ಭಟ್ಟರು ಒಳ್ಳೆಯ ಬರಹಗಾರರು, ಕವಿ, ಕಾದಂಬರಿಕಾರ ಹಾಗೂ ಅಂಕಣಕಾರರು. ಗಂಭೀರ ವ್ಯಕ್ತಿತ್ವದ ಶ್ರೀಯುತರು ಶಿಸ್ತಿಗೆ ಇನ್ನೊಂದು ಹೆಸರು.

ಆಬಾಲ ವೃದ್ಧರನ್ನೂ ಅತ್ಯಂತ ಆತ್ಮೀಯವಾಗಿ ಕಾಣುವ ಇವರಸೌಜನ್ಯ ಶೀಲತೆಯೇ ಜನರಲ್ಲಿ ಇವರ ಬಗ್ಗೆ, ಹಾಗೂ ಸಾಹಿತ್ಯ ಪರಿಷತ್ತಿನ ಬಗ್ಗೆಗೌರವಾದರಗಳು ಮೂಡಲು ಕಾರಣವಾಗಿದೆ.

ಇಂದು ಪಟ್ಟಣದಿಂದ ಹಿಡಿದು ಹಳ್ಳಿಗಳವರೆಗೂ ಪ್ರತಿ ಮನೆಯಲ್ಲೂ ದೂರದರ್ಶನ ಒಂದು ಅಗತ್ಯವಸ್ತುವೆನ್ನುವಂತಾಗಿದೆ. ಜನರಿಗೆ ಬೇಕಾಗುವ ಮನರಂಜನೆ ದೂರದರ್ಶನದ ಮೂಲಕ ಕುಳಿತಲ್ಲೇ ಸಿಗುತ್ತಿದೆ. ಹೊರಗೆ ನಡೆಯುವ ಯಾವುದೇ ಸಾಂಸ್ಕೃತಿಕ ಕಾರ್ಯಕ್ರಮಗಳೂ ದೂರದರ್ಶನದ ಕಾರ್ಯಕ್ರಮಗಳಷ್ಟು ಆರಾಮ ಮತ್ತು ಮೋಜಿನದಲ್ಲವೆಂದು ಜನ ಭಾವಿಸುತ್ತಾರೆ. ಹೀಗಾಗಿ ಜನರು ಹೊರಗಿನ ಕಾರ್ಯಕ್ರಮಗಳ ಬಗ್ಗೆ ಆಸಕ್ತಿಯನ್ನು ಕಳೆದುಕೊಂಡಿದ್ದಾರೆ. ಇಂತಹ ಪರಿಸ್ಥಿತಿಯಲ್ಲೂ ಸಾಗರದಲ್ಲಿ ನಡೆಯುವ ಸಾಹಿತ್ಯದ ಕಾರ್ಯಕ್ರಮಗಳಲ್ಲಿ ಜನರು ಅತ್ಯಂತ ಆಸಕ್ತಿ ಹಾಗೂ ಶ್ರದ್ಧೆಯಿಂದ ಭಾಗವಹಿಸುತ್ತಿದ್ದಾರೆ. ಇದಕ್ಕೆ ಮೂಲಭೂತ ಕಾರಣ ಜನರಲ್ಲಿರುವ ಉತ್ತಮ ಅಭಿರುಚಿಯಾಗಿದೆ. ಜನರಲ್ಲಿ ಇಂತಹ ಒಳ್ಳೆಯ ಅಭಿರುಚಿ ಹುಟ್ಟಿಸುವಲ್ಲಿ, ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಮಹಾಬಲೇಶ್ವರ ಭಟ್ಟರು ವಹಿಸಿದ ಶ್ರಮ ಗಮನೀಯವಾಗಿದೆ. ಕೇವಲ ಕಾರ್ಯಕ್ರಮಗಳನ್ನು ಮಾಡಿ ಪತ್ರಿಕೆಗಳಲ್ಲಿ ಹೆಸರು ಬರಬೇಕೆಂಬದನ್ನು ಬಿಟ್ಟು, ಸ್ವತಃ ತಾವೇ ನಿಂತು ಪ್ರತಿಯೊಂದು ಕೆಲಸವನ್ನು ಮುಂದಾಗಿ ಮಾಡುವ, ಎಪ್ಪತ್ತರ ಇಳಿ ವಯಸ್ಸಿನಲ್ಲೂ ಯುವಕರಿಗೂ ಮಾರ್ಗದರ್ಶಕರಾಗಿ ಕಾರ್ಯಕ್ರಮದ ಯಶಸ್ವಿಗಾಗಿ ಹೋರಾಡುವ ಇಂತಹ ಸರಳತೆ ಎಲ್ಲರಲ್ಲೂ ಕಾಣಸಿಗುವುದಿಲ್ಲ. ಈ ಕಾರಣಕ್ಕಾಗಿಯೇ ಜನರಲ್ಲಿ ಸಾಹಿತ್ಯ ಪರಿಷತ್ತಿನ ಬಗ್ಗೆ ಗೌರವಾದರಗಳು ಉಳಿದುಕೊಂಡಿವೆ.

ಭಟ್ಟರನ್ನುಮೊದಲು ಮುಖಾ-ಮುಖಿಯಾಗಿ ಭೇಟಿಯಾದಾಗ ನನಗೆ ಮಾತನಾಡಲೂ ಅಂಜಿಕೆಯಾಯಿತು. ಆದರೆ ಶ್ರೀಯುತರು ನಮ್ಮಂತಹ ಕಿರಿಯರನ್ನು ಅತ್ಯಂತ ಸೌಜನ್ಯ ಹಾಗೂ ಗೌರವದಿಂದ ಕಾಣುವುದನ್ನು ನೋಡಿ, ನನಗೆ ಸಾಹಿತ್ಯ ಪರಿಷತ್ತಿನ ಕಾರ್ಯಕ್ರಮಗಳ ಬಗ್ಗೆ ಅತೀವಾದ ಗೌರವಗಳು ಮೂಡಿದವು. ಎಲ್ಲಾ ಸಂಘ-ಸಂಸ್ಥೆಗಳಲ್ಲಿ ಇರುವ ಹಿರಿಯರಲ್ಲೂ ಇಂತಹ ಸದ್ಗುಣಗಳಿದ್ದರೆ ಜನರು ತಾವೇ ತಾವಾಗಿ ಸಂಘ-ಸಂಸ್ಥೆಗಳಲ್ಲಿ ಭಾಗಿಯಾಗುತ್ತಾರೆಂಬುದರಲ್ಲಿ ಅನುಮಾನವಿಲ್ಲ.

# ಆದರ್ಶಮಾನವನ ಹುಡುಕಾಟದ ಕಾಳಜಿಯಲ್ಲಿ

- ಎಂ.ಹೆಚ್. ಶ್ರೀ ನರಹರಿ

ದೇವರು, ಮನುಷ್ಯ ಮತ್ತು ರಾಕ್ಷಸಾರು ? ಎಂಬ ನಿಗೂಢತೆಯ ಪ್ರಶ್ನೆಗೆ ಉತ್ತರದ ಜಿಜ್ಞಾಸೆ ಅನಾದಿಕಾಲದಿಂದಲೂ ಹುಡುಕುತ್ತಾ ಬಂದಿದ್ದೇವೆ. ಅತಿಮಾನವನಿಗೂ ಬೌದ್ಧಿಕ ಮಟ್ಟದ ಪರಿಧಿಯನ್ನು ಮೀರಿರುವ ಅಂಶವನ್ನು ದೈವತ್ವವೆಂದು ಗುರುತಿಸಿದರೆ, ಅಸಾಧುವಾದ, ವಿಚಿತ್ರವಾದ ಸದಾ ಕೆಡುಕನ್ನು ಬಯಸುವ ಗುಣವನ್ನು ರಾಕ್ಷಸತ್ವ ಎಂದೂ ವರ್ಗೀಕರಿಸಿದ್ದೇವೆ.

ಮಾನವ ಈ ಎರಡೂ ಗುಣಗಳ ರಾಸಾಯನಿಕ ಸಂಮಿಶ್ರ. ಕೆಲವೊಮ್ಮೆ ದೈವತ್ವವನ್ನೂ ಮತ್ತೆ ಕೆಲವೊಮ್ಮೆ ರಾಕ್ಷಸತ್ವವನ್ನು ಹೊಂದಿರುವುದು ಸಹಜವೆಂದೂ ಗುರುತಿಸಿದ್ದೇವೆ. ಕೆಲವರಲ್ಲಿ ಇವುಗಳಲ್ಲಿನ ಒಂದು ಗುಣ ಯಥೇಚ್ಛವಾಗಿ ಅತಿ ವೈಶಿಷ್ಟ್ಯಪೂರ್ಣವಾಗಿಯೂ ಕಂಡುಬರುತ್ತದೆ. ಮಾನವ ಏಕಾಂಗಿಯಾಗಿ ಮಾನವನೇ ಆಗಿದ್ದರೂ ಕೆಲವು ವಿಶೇಷ ಪರಿಸರದಲ್ಲಿಟ್ಟಾಗ ಅವನ ರಾಕ್ಷಸತ್ವಗುಣವೂ ಜಾಗೃತವಾಗುವುದನ್ನೂ ಅವಲೋಕಿಸಿದ್ದೇವೆ. ಕೆಲವರಲ್ಲಿ ಈ ಗುಣವು ಸುಪ್ತವಾಗಿದ್ದು, ಆಗಾಗ್ಗೆ ಜಾಗೃತವಾಗುತ್ತದೆ. ಹಾಗೆಯೇ ನುಡಿನಡೆಗಳಲ್ಲಿ ವ್ಯತ್ಯಾಸವನ್ನು ಸಹ ಗಮನಿಸಿದ್ದೇವೆ.

ಡಾ॥ ರಾಧಾಕೃಷ್ಣನ್ ತಮ್ಮ ತತ್ವ ಶಾಸ್ತ್ರದಲ್ಲಿ ಈ ಗುಣವನ್ನು ಕೆಳಕಂಡಂತೆ ವ್ಯಾಖ್ಯೆಸಿದ್ದಾರೆ.

ಮನುಷ್ಯ ಹಕ್ಕಿಯಂತೆ ಆಕಾಶದಲ್ಲಿ ಹಾರಾಡಬಲ್ಲ;

ಮೀನಿನಂತೆ ನೀರಿನಲ್ಲಿ ಈಜಾಡಬಲ್ಲ. ಆದರೆ

ಮನುಷ್ಯನಾಗುವುದನ್ನು ಇನ್ನೂ ಕಲಿಯಲಿಲ್ಲ.

ಹಾಗಾದರೆ, ಆದರ್ಶ ಮಾನವನಾರು ಎಂಬ ಪ್ರಶ್ನೆ ಆಗಿಂದಾಗ್ಗೆ ವಿದ್ವಾಂಸರಿಗೆ, ಲೇಖಕರಿಗೆ, ನಾಟಕಕಾರರಿಗೆ, ಚಿತ್ರಕಾರರಿಗೆ, ಸಮಾಜ ಶಾಸ್ತ್ರಜ್ಞರಿಗೆ, ವಿಜ್ಞಾನಿಗಳಿಗೆ

ಕಾಡಿಲ್ಲವೆಂದಿಲ್ಲ. ಬೆನ್ ಜಾನ್‌ಸನ್, ಡಾಕ್ಟರ್ ಫಾಸ್ಟಸ್‌ನಲ್ಲಿ ಅತೀ ಬುದ್ಧಿವಂತನಾಗಿ ಅಲೌಕಿಕ ವಿಚಾರ, ಪಾರಮಾರ್ಥಿಕ ಹಾಗೂ ಮಾನವ ಸೀಮಿತ ಗೆರೆಯನ್ನು ಮೀರಿ ಕಲಿಯುವ ಮನುಷ್ಯನ ಆಸೆ, ಆದರ್ಶ ಮಾನವನನ್ನಾಗಿ ಮಾಡಬಲ್ಲುದೇ ಎಂಬುದಕ್ಕೆ ನಕಾರವಾದ ಉತ್ತರವನ್ನು ಹುಡುಕಿದ್ದಾನೆ. ಇತ್ತೀಚಿನ ಅಮೇರಿಕಾದ ನ್ಯೂರೋಮ್ಯಾನ್ಸರು, ಆಂಟಿ-ನ್ಯೂಮ್ಯಾನ್ಸರುಗಳು ಸಹ ಇದೇ ರೀತಿಯ ಸೈದ್ಧಾಂತಿಕ ಪ್ರಶ್ನೆಯ ನೆರಳಲ್ಲಿ ಚರ್ಚಿಸುತ್ತಿದ್ದಾರೆ.

ಹೀಗೆಯೇ ಗ್ರೀಕರು ಪುರಾತನ ಕಾಲದಲ್ಲಿಯೇ ಎಲ್ಲಾ ಸುಗುಣ ಸಂಪನ್ನನು ಒಂದು ಅವಗುಣದಿಂದ ತನ್ನ ಅಸ್ಥಿತ್ವದೊಂದಿಗೆ ಇಡೀ ಸಂಪತ್ತು ಸ್ಥಾನ, ರಾಜ್ಯವನ್ನು ಹೇಗೆ ಕಳೆದುಕೊಳ್ಳುತ್ತಾನೆ ಎಂಬ ನೀತಿಯುಕ್ತ ನಾಟಕದ ಮಾಧ್ಯಮದಲ್ಲಿ ಪ್ರಯೋಗವನ್ನು ಮಾಡಿದ್ದಾರೆ. ಇವುಗಳೇ ಅಂದಿನ ದಿನದ ಸಾರ್ವಜನಿಕ ಶಿಕ್ಷಣದ ಧ್ಯೇಯೋದ್ದೇಶಗಳಲ್ಲೊಂದಾಗಿತ್ತು.

ಇದರಂತೆ, ಷೇಕ್‌ಸ್ಪಿಯರ್ ಸಹ ತನ್ನ ದುರಂತ ನಾಟಕಗಳಲ್ಲಿ ಆದರ್ಶ ಮಾನವನನ್ನು ಹುಡುಕುತ್ತಾಹೋಗುವುದನ್ನು ಗಮನಿಸಬಹುದು. ಅತಿ ನಂಬುವ ಒಥೆಲೋ; ಪೂರ್ವ ನಿಯೋಜಿತ ಸಿದ್ಧ ಕಲ್ಪನೆಗಳಿಂದ ಮುಂದುವರೆಯುವ 'ಲಿಯರ್'; ನಿಧಾನದ ಪರಮಾವಧಿಯ ಹ್ಯಾಮ್ಲೆಟ್; ಭವಿಷತ್ತಿನ ಮೇಲೆ ಅತಿ ನಂಬಿಕೆಯ ಅತಿ ಆಸೆಯ ಮ್ಯಾಕ್‌ಬೆತ್, ಹೀಗೆ ಹತ್ತುಹಲವಾರು ಮನುಷ್ಯನ ಅತೀತ ಗುಣಗಳನ್ನು, ಮನುಷ್ಯನ ಪರಿಕಲ್ಪನೆಗಳನ್ನು ಪರಾಮರ್ಶಿಸಿದ್ದಾನೆ.

ಆದರೆ, ಇಂದಿನ ವೈಜ್ಞಾನಿಕ ಯುಗದಲ್ಲಿಯೂ ಆದರ್ಶವಾದ ಮನುಷ್ಯನ ಹುಡುಕಾಟ ನಿರಂತರವಾಗಿ ನಡದೇ ಇದೆ. ಸಮಸ್ತ ಜೀವಜಂತುಗಳಲ್ಲಿ 'ಮಾನವ ಜನ್ಮ ದೊಡ್ಡದು... ಎಂದು ವ್ಯಾಖ್ಯೆಸಿರುವ ದಾಸರು, ಮನುಷ್ಯನ ನಡವಳಿಕೆಯನ್ನು ನಿಯಂತ್ರಿಸಿರುವ ಕಾನೂನು ಚೌಕಟ್ಟನ್ನು ತಿಳಿ ಹೇಳಿರುವ ಸರ್ವಜ್ಞ, ಬಸವಣ್ಣ, ಕನಕದಾಸರಿಗೂ ಈ ಜಟಿಲ ಸಮಸ್ಯೆಯನ್ನು ಬಿಡಿಸುವ ಪ್ರಯತ್ನಗಳನ್ನು ಅಲ್ಲಲ್ಲಿ ಕಾಣಬಹುದು.

ರಜಸ್ಸು, ತಮಸ್ಸು, ಸತ್ವಗಳನ್ನೊಳಗೊಂಡ ಆದರ್ಶ ವ್ಯಕ್ತಿಯನ್ನು ಗುರುತಿಸಿ ಗೌರವಿಸುವುದು ಮಾನವನ ಮೂಲವಾದ ಅಂತರಿಕ ಧ್ಯೇಯೋದ್ದೇಶಗಳಲ್ಲಿ ಒಂದು. ಆದರೆ, ಇಂದಿನ ಇಪ್ಪತ್ತನೆಯ ಶತಮಾನದ ಅಂತ್ಯದಲ್ಲಿ, ಡಾಂಭಿಕತೆ, ಹಣದ ವ್ಯಾಮೋಹ, ಗುಂಪುಗಾರಿಕೆ, ಅಧಿಕಾರದಾಹ, ಮತ್ತೊಬ್ಬರ ಸುಗುಣದ ತೇಜೋವಧೆಯಿಂದ ಬೆಳಗುವ ಲಕ್ಷಣಗಳಲ್ಲಿ ಇಂತಹ ವಿಚಾರ ಅತಿ ಪ್ರಾಚೀನವೆನಿಸದಿರುವುದಿಲ್ಲ. ಆದರೂ ಯುಗಪುರುಷರು ಶತಮಾನಗಳಿಗೊಬ್ಬರಂತೆ ಉದಯಿಸಿ ನೀತಿ ಸಂಹಿತೆಯನ್ನು ಬೋಧಿಸಿ ಪ್ರಾಚೀನ ಮೌಲ್ಯಗಳನ್ನು ಗುರುತಿಸಿ,

ಗೌರವಿಸಿ ಎತ್ತಿ ಹಿಡಿದಿರುವುದು ಕೋಟಿಗಟ್ಟಲೆ ಜನರಲ್ಲಿ ಒಬ್ಬೊಬ್ಬರಲ್ಲವೆ ? ಕೋಟಿ ಜನರನ್ನು ನೆನೆಯದೆ ಮೌಲ್ಯಾಧಾರಿತ ಶ್ರೇಷ್ಠರನ್ನು ಮಾತ್ರ ಇಂದು ನೆನಸುವ ಕಾರಣವಾದರೂ ಏನು ? ಆದರೆ, ಮತ್ತೊಂದು ದಿಶೆಯಲ್ಲಿ ವಿಚಾರ ಮಾಡಿದಾಗ, ಮೌಲ್ಯಗಳು ಸ್ಥಿರವಲ್ಲ. ಅದುಕಾಲಕಾಲಕ್ಕೆ, ವ್ಯಕ್ತಿಯಿಂದ ವ್ಯಕ್ತಿಗೆ ಬದಲಾಗುತ್ತದೆ. ಮೌಲ್ಯಗಳಿಗೆ 'ಇದ ಮಿತ್ಥಂ' ಎಂಬಕಲ್ಪನೆಯಿಲ್ಲ. ಭ್ರಷ್ಟ ಅಧಿಕಾರಿಗೆ ತನಗಿಂತ ಹೆಚ್ಚಿನ ಕುಖ್ಯಾತಿಯ ಭ್ರಷ್ಟ ಅಧಿಕಾರಿಯೇ ಆದರ್ಶ. ತನ್ನ ಹುಳುಕನ್ನು ಮರೆಮಾಡಲು ಭ್ರಷ್ಟತನ ಅತಿ ಸ್ವಾಭಾವಿಕ, ಸಾಮಾಜಿಕ, ವಿಶ್ವವ್ಯಾಪಕ ಸಹಜಗುಣವೆಂದು ಪ್ರತಿಪಾದಿಸುತ್ತಿರುತ್ತಾನೆ. ಆದುದರಿಂದ ಅತಿ ಆದರ್ಶ ವ್ಯಕ್ತಿಗಳು ಅತಿ ವಿರಳ.

ಸಮಾಜದ ಕಪಟತನದ ವಾಸ್ತವ್ಯದಲ್ಲಿ ಕೆಸರಿನ ನಡುವಿನ ಕಮಲದಂತೆ, ಎಲೆಮರೆಯ ಕಾಯಿಯಾಗಿದ್ದುಬಿಟ್ಟಿರುತ್ತಾರೆ. ಒಬ್ಬ ವ್ಯಕ್ತಿ ಪ್ರಸಿದ್ಧಿಗೆ ಬರಲು ರಾಜಕೀಯ ಹಿನ್ನೆಲೆ, ಬಲ- ಪ್ರಬಲಗಳು ಎಷ್ಟರ ಮಟ್ಟಿಗೆ ಕಾರಣೀ ಭೂತವಾಗಿದೆ ಎಂಬುದು ಗಣನೆಗೆ ಬರುತ್ತದೆ. ದೊಡ್ಡ ಪಟ್ಟಣ ಪ್ರದೇಶಗಳಲ್ಲಿ ಸಾಮಾನ್ಯ ನೆಲೆಯಲ್ಲಿರುವವನೂ ಪ್ರವರ್ಧಮಾನಕ್ಕೆ ಬರುವುದು ಬಹಳ ಸುಲಭ. ಆದರೆ, ಗ್ರಾಮಗಳಲ್ಲಿ, ಗ್ರಾಮೀಣ ವಿಭಾಗಗಳಲ್ಲಿ ಪ್ರತಿಭೆಗಳು ಮುರುಟಿಹೋಗುತ್ತವೆ. ಸ್ವಯಂ ವರ್ಚಸ್ಸಿನಿಂದ ಕಾರ್ಯಸಿದ್ಧಿಯಿಂದ ಅಸೂಯೆಯ ವಾತಾವರಣದಲ್ಲಿ ಎಷ್ಟೇ ಮೇಲಕ್ಕೇಳಲು ಪ್ರಯತ್ನಿಸಿದರೂ ಬಡಿದು ಬಗ್ಗಿಸುವ, ಅನುಮಾನಿಸಿ ನೋಡುವ, ಯಾವ ವೈಯುಕ್ತಿಕ ಲಾಭಕ್ಕಾಗಿ ಪ್ರಕಾಶನ ಎಂಬುದು ಯಾವಾಗಲೂ ಲೋಕ ಜನಿತವಾದ ಗುಣಗಳಾಗಿರುತ್ತದೆ. ಆದರ್ಶ ಮಾನವನ ಹುಡುಕಾಟದ ಕಾಳಜಿಯಲ್ಲಿರುವ ವ್ಯಕ್ತಿಯಲ್ಲಿಯೂ ಶಿಸ್ತು, ಸಂಯಮ, ಸಮಾಜದ ಅಣಕಗಳನ್ನು ಎದುರಿಸುವ ಆದರ್ಶಗುಣಗಳು ಅಡಕವಾಗಿರಬೇಕಲ್ಲವೆ ? ಈ ಪ್ರಯತ್ನದಲ್ಲಿ ಅಪರೂಪ ವ್ಯಕ್ತಿಗಳಲ್ಲಿ ಶ್ರೀ ಟಿ. ಮಹಾಬಲೇಶ್ವರ ಭಟ್ಟರು ಒಬ್ಬರು.

ಶ್ರೀಯುತರ ಮತ್ತು ನನ್ನ ಸಂಪರ್ಕ ಕೇವಲ ಒಂದು ದಶಕದ್ದು. ಆ ಅವರ ಆಂತರಿಕ ಶಿಸ್ತು ಶ್ರದ್ಧೆ, ಸಂಯಮ, ವಿನಯ, ಸರಳತನ, ಗಾಂಭೀರ್ಯ, ಅಚ್ಚುಗಟ್ಟುತನ ಸತ್ಯಸಂಧತೆ, ವಿಚಾರಶಕ್ತಿ, ನೇರ ವಿಷಯ ಪ್ರತಿಪಾದನೆ, ಇತ್ಯಾದಿಗಳೆಲ್ಲವೂ ಅವರ ನಿಲುವು, ಭಂಗಿ, ಧಾರ್ಢ್ಯತೆ, ವಸ್ತ್ರಗಳಿಂದ ಬಾಹ್ಯವಾಗಿಯೇ ಪ್ರಜ್ವಲಿಸುತ್ತಿರುತ್ತವೆ. ಒಬ್ಬ ಒಳ್ಳೇ ಸಾಹಿತಿ ಸಾಮಾನ್ಯವಾಗಿ ಒಬ್ಬ ಒಳ್ಳೆ ಆರ್ಗನೈಸರ್ ಆಗಿರುವುದಿಲ್ಲ. ಈ ವಿಷಯದಲ್ಲಿ ಶ್ರೀಯುತರು ಅಪವಾದಕ್ಕೆ ಹೊರತು. ಅವರ ಸಾಹಿತ್ಯ ನಾನಾ ನೆಲೆಗಳಲ್ಲಿ ರೂಪುಗೊಂಡಿದೆ. ಅವರು ಏರ್ಪಡಿಸಿರುವ ಕಾರ್ಯಕ್ರಮಗಳು ಶಿಸ್ತು, ಕ್ರಮ ಬದ್ಧತೆಗಳ ನೆಲೆಯಲ್ಲಿ ಆದರ್ಶ ಪ್ರಾಯವಾಗಿರುವುದನ್ನು ಕಂಡು ಮೆಚ್ಚಿದ್ದೇನೆ. ಅನೇಕ ಬಾರಿ ಅವರ ಶಿಸ್ತಿನ ಅಚ್ಚುಗಟ್ಟುತನವನ್ನು, ನನ್ನ ಕಾರ್ಯವೈಖರಿಯನ್ನು ತಾಳೆ ನೋಡಿ "Heaven hath made such a man" ಎಂದು ನಿಬ್ಬೆರಗಾಗಿದ್ದೇನೆ.

ಶ್ರೀಯುತರ ಐವತ್ತನೆ ವರ್ಷದಲ್ಲಿ 'ಮಹಾನಂದ'ದ ಬಿಡುಗಡೆಯ ಸಂದರ್ಭದಲ್ಲಿ ಸಾಗರದಲ್ಲಿರಲಿಲ್ಲ. ಆದರೆ ಶ್ರೀಯುತರ ಈಗಿನ ಎಪ್ಪತ್ತನೆಯ ಹುಟ್ಟು ಹಬ್ಬದ ಸಂದರ್ಭದಲ್ಲಿ ಅಭಿನಂದನ ಗ್ರಂಥವನ್ನು ಮತ್ತೆ ಪ್ರಕಟಿಸುತ್ತಿರುವುದು ಬಹಳ ಸಂತೋಷದ ವಿಷಯವಾಗಿದೆ. ಶ್ರೀಯತರ ಕೃತಿ ಸಂಗ್ರಹಣೆಯು ದುಸ್ತರವಾಗಿರುವುದರಿಂದ ಲಭ್ಯವಾಗಿರುವ ಇತ್ತೀಚಿನ ಅವರ ಅಭಿಪ್ರಾಯಗಳು ಹೊಸತಾಗಿರುವುದರಿಂದ ಅವರ ಬಿಡಿ ಲೇಖನಗಳ ಬಗ್ಗೆ ಬೆಳಕು ಚೆಲ್ಲುವ ಪ್ರಯತ್ನವನ್ನು ಈ ಮುಂದೆ ಮಾಡಲಿದ್ದೇನೆ. ಅವುಗಳಲ್ಲಿಯೂ ಅವರ ಅಪಾರ ಲೇಖನಗಳಲ್ಲಿ ನನ್ನ ಬಳಿಯಿರುವುದು ಕೇವಲ ಕೆಲವು. ಆದರೆ, ಅವುಗಳು ನನ್ನ ದೃಷ್ಟಿಯಲ್ಲಿ ಮಹತ್ತರವಾದವು. ಈ ವ್ಯಕ್ತಿಯ ಶಕ್ತಿಯನ್ನು ಗುರುತಿಸುವಂತಹವು.

ರಾಜಕೀಯದಿಂದ ನಿವೃತ್ತಿಯಾಗಿ ಮೂಲತಃ ಕೃಷಿಕರಾಗಿ ಸಾಹಿತ್ಯ ಕ್ಷೇತ್ರದಲ್ಲಿಹಾಲಿ ಕಾರ್ಯ ನಿರ್ವಹಿಸುತ್ತಿರುವ ಶ್ರೀಯುತರು ತಮ್ಮ ಲೇಖನಗಳಲ್ಲಿ ಒಟ್ಟಾರೆಯಾಗಿ ಸಾಮಾಜಿಕ ಕಾಳಜಿಯನ್ನು ಪ್ರತಿಬಿಂಬಿಸುವಂತಹುದು. ಅವರು ಈ ಸಮಾಜದ-ಮಲೆನಾಡಿನ ಬುದ್ಧಿಜೀವಿಗಳ ತೌರೂರಾದ ಸಾಗರ ಕ್ಷೇತ್ರದ ಅಭಿಪ್ರಾಯಗಳ ಪ್ರತಿನಿಧಿಯೂ ಹೌದು. ಭಟ್ಟರು ನುಡಿಯುತ್ತಿದ್ದಾರೆ ಎಂದರೆ, ಅದು ಇಡೀ ಈ ಸಮಾಜದ ಅಂಕುಡೊಂಕನ್ನು ಕೊಂಕಿಸಿ, ಮೂಲ ಉದ್ದೇಶಗಳನ್ನು ಅಗಿಂದಾಗ್ಗೆ ನೆನಪು ಮಾಡಿಕೊಟ್ಟು ಸಮಾಜ ಸುಧಾರಣೆಯಲ್ಲಿ ತೊಡಗಿದ್ದಾರೆ ಎಂಬುದೇ ಇದರ ಗೂಢಅರ್ಥ. ಸಮಾಜಿಕ ಕಾಳಜಿ, ಭವ್ಯ ನವ ಕರ್ನಾಟಕ ನಿರ್ಮಾಣ ಇವರ ಗುರಿ. ಅಂಧಶ್ರದ್ಧೆ,ರಾಜಕೀಯ, ಆಟೋಪಗಳ ಬಗ್ಗೆ ಸಿಟ್ಟು, ಪಾರಂಪರಿಕವಾಗಿ ಬಂದ ಕಲೆಯ ವ್ಯಕ್ತಿ - ವ್ಯಕ್ತಿತ್ವದ ಚಿತ್ರಣ ನಮ್ಮನ್ನು ಸದಾ ಜಾಗ್ರತರನ್ನಾಗಿ ಮಾಡಲು ಪ್ರಯತ್ನಿಸುತ್ತದೆ. ಪ್ರಾಚೀನ ಶುದ್ಧ ಮೌಲ್ಯಗಳನ್ನು ಎತ್ತಿಹಿಡಿದು ಈಗಿನ ಸಮಾಜ ಸುಧಾರಣೆ ಸಾಧ್ಯ ಎಂಬ ಆಶೋತ್ತರಗಳನ್ನು ಹೊಂದಿರುವುದು ಈ ಬಿಡಿ ಲೇಖನಗಳಿಂದಕಂಡುಬರುತ್ತದೆ. ಈ ಲೇಖನಕ್ಕೆ 'ಜನವಾರ್ತೆ' ಯ 'ನಿಮ್ಮೊಡನೆ' ಎಂಬ ಶೀರ್ಷಿಕೆಯ ಅಂಕಣದ ಕೆಲವು ಮಹತ್ತರ ಅಂಶಗಳನ್ನು ಪ್ರಸ್ತುತ ಅಧ್ಯಯನಕ್ಕೆ ಆಧಾರವಾಗಿಟ್ಟುಕೊಂಡಿದ್ದೇನೆ.

ಇವುಗಳನ್ನು ಚಾರಿತ್ರಿಕ ಹಿನ್ನೆಲೆಯಲ್ಲಿ ವಿಂಗಡಿಸಿದಾಗ 'ಅ.ನ.ಕೃ. ರವರ ಇಪ್ಪತ್ತೈದನೆಯ ಪುಣ್ಯ ತಿಥಿ' ಎಂಬುದು ಶ್ರೀಯುತರ ತೀಕ್ಷ್ಣ ಯೋಚನಾ ಲಹರಿಯನ್ನು ಪ್ರತಿಬಿಂಬಿಸುತ್ತದೆ. ಶ್ರೀಯುತರು ಅನಕೃ ಅರವತ್ತ ಮೂರು ವರ್ಷದಲ್ಲಿಯೂ 'ಸದಾ ಯೌವ್ವನ, ಹುರುಪು, ಕನ್ನಡದ ಕೆಚ್ಚು ' ಎಂಬ ಅವರ ' ಜೀವನದ ಮೌಲ್ಯಗಳು' ಎಂದು ಗುರುತಿಸುತ್ತಾರೆ. ಸಾಗರದಲ್ಲಿಕಿಕ್ಕಿರಿದ ಜನಸ್ತೋಮದ ಮುಂದೆ ಮಾಡಿದ ಅನಕೃರವರ ಭಾಷಣವನ್ನು ಸ್ಮರಿಸಿ, ಅವರ ವಿಚಾರಧಾರೆಯನ್ನು, ಸಮಯ ಸ್ಫೂರ್ತಿಯನ್ನು ಕನ್ನಡದ ಅಭಿಮಾನವನ್ನು ಶ್ಲಾಘಿಸುತ್ತಾರೆ. ಪುರಸಭೆಯ

ಅಧ್ಯಕ್ಷರೇ ಅಂದಿನ ಸಭೆಯ ಅಧ್ಯಕ್ಷರಾಗಿದ್ದಾಗ ಅನಕೃರವರು ಪುರಭವನದಲ್ಲಿ ಕನ್ನಡಕವಿಗಳ ಭಾವಚಿತ್ರಗಳ ಅಭಾವವನ್ನು ಗುರುತಿಸಿ ಖಂಡಿಸಿದ ಅಂಶವನ್ನು ರಸವತ್ತಾಗಿ ವಿವರಿಸುತ್ತಾರೆ. ಮೈಸೂರು ರಾಜ್ಯಕ್ಕೆ 'ಕರ್ನಾಟಕ' ಎಂಬ ನಾಮಕರಣದ ವೇಳೆಯಲ್ಲಿ ಅನಕೃರವರ ಮಹತ್ತರ ಪಾತ್ರವನ್ನು ಕೊಂಡಾಡುತ್ತಾರೆ. ಅನಕೃರವರ ಸರಳತನ, ಅಧಿಕಾರದಾಹ ರಹಿತ, ಕನ್ನಡಕ್ಕಾಗಿ ಯಾವ ಸ್ಥಾನದಲ್ಲಿಯೂ, ಸಾಮಾನ್ಯನಂತೆಯೂ ದುಡಿಯುವ ಹೊಣೆಗಾರಿಕೆಯ ಗುಣವನ್ನು ಶ್ಲಾಘಿಸುತ್ತಾರೆ. ಮುಖ್ಯಮಂತ್ರಿ ಶ್ರೀಯುತ ಕೆಂಗಲ್ ಹನುಮಂತಯ್ಯನವರ ಸಂಗಡ ಶ್ರೀಯುತ ಮಹಾಬಲೇಶ್ವರ ಭಟ್ಟರು, ಶ್ರೀ ಅ.ನ.ಕೃ.ರವರನ್ನು ಕನ್ನಡಸಂಸ್ಕೃತಿ ಇಲಾಖೆಯ ನಿರ್ದೇಶಕರನ್ನಾಗಿ ಕಾರ್ಯ ನಿರ್ವಹಿಸಬೇಕೆಂದು ಪ್ರಾರ್ಥಿಸಿದಾಗಲೂ ಶ್ರೀ ಸಿ.ಕೆ. ವೆಂಕಟರಾಮಯ್ಯನವರ ಹೆಸರನ್ನು ಸೂಚಿಸಿ, ಬಲವಾದ ಪಟ್ಟನ್ನು ಹಿಡಿದು, ಆ ಸ್ಥಾನವನ್ನಾಲಂಕರಿಸಲು ಪ್ರಯತ್ನಪಟ್ಟ ಶಕ್ತಿಯನ್ನು ಸುಗುಣವನ್ನು ನೆನೆಯುವುದೂ ಶ್ರೀಯುತರ ಮಹತ್ತರ ಗುಣಗಳಲ್ಲೊಂದಾಗಿದೆ.

ವ್ಯಕ್ತಿ ಚಿತ್ರಣದಲ್ಲಿ ಶ್ರೀ ಭಟ್ಟರ ಬರವಣಿಗೆ ಸ್ಫುಟವಾದದ್ದು ನಿರರ್ಗಳವಾದದ್ದು. 'ಜಾನಪದ ಜಂಗಮ ಎಸ್.ಕೆ. ಕರೀಂಖಾನ್' ಲೇಖನ ಈ ದಿಶೆಯಲ್ಲಿ ಗಮನ ಸೆಳೆಯುವಂತಹುದು. ಶ್ರೀ ಭಟ್ಟರ ನೆನಪಿನ ಶಕ್ತಿ ಅಪಾರವಾದದ್ದು. ಮುವತ್ತನಾಲ್ಕು ವರ್ಷಗಳ ಹಿಂದಿನ ಭೇಟಿ, ಇತ್ತೀಚಿನ ಭೇಟಿ ಅವುಗಳಲ್ಲಿ ಏಕರೂಪತ್ವ, ಬಹುಮುಖ ಪ್ರತಿಭೆ, ವಿದ್ವಾಂಸರ ಬಗ್ಗೆ ಇಟ್ಟಿರುವ ಗೌರವ, ತಮ್ಮಂತೆ ಅವರು ಎಂಬ ಕಾಳಜಿ- ಅವರ ನೋವು, ನಮ್ಮೆಲ್ಲರ ನೋವು ಎಂದು ಗುರುತಿಸುವ ಶ್ರೀಯತರ ಸ್ವಭಾವ ಮಾನವ ವಿಕಾಸನದ ಉತ್ತುಂಗ ಶಿಖರದ ಮನೋಧರ್ಮವನ್ನು ಗುರುತಿಸುವಂತಿದೆ.

ಶ್ರೀ ಮಹಾಬಲೇಶ್ವರ ಭಟ್ಟರ ವ್ಯಕ್ತಿಯ ಹೊಂದಿರುವ ಶಕ್ತಿಯನ್ನು 'ವಿನಾಯಕ' ಎಂಬ ಲೇಖನದಿಂದ ಗುರುತಿಸಬಹುದಾಗಿದೆ. ಇಪ್ಪತ್ತು ವರ್ಷಗಳ ಹಿಂದೆ ಸಾಗರದಲ್ಲಿ 'ಕನ್ನಡ ಸಂಘ' ಪುರಸಭೆಯ ಮೈದಾನದಲ್ಲಿ ಕವಿ ವಿನಾಯಕ ಕೃಷ್ಣ ಗೋಕಾಕರನ್ನು, ರಂ.ಶ್ರೀ.. ಮುಗಳಿಯವರನ್ನು ಅದ್ದೂರಿಯಾಗಿ ಸನ್ಮಾನಿಸಲಾಗಿತ್ತು. ಸಭೆಯ ಅಧ್ಯಕ್ಷರಾಗಿದ್ದ ಶ್ರೀಯುತರನ್ನು ಗೋಕಾಕರು ಪ್ರಶ್ನಿಸಿದರು. 'ಇಷ್ಟೊಂದು ಜನರನ್ನು ಎಲ್ಲೆಲ್ಲಿ ತಂದಿರಿ ? ಹೇಗೆ ಸೇರಿಸಿದಿರಿ ?' ಎಂದು. ಸಾಮಾನ್ಯವಾಗಿ ಸಾಹಿತಿಗಳ ಸನ್ಮಾನಕ್ಕೆಇಷ್ಟೊಂದು ಜನರನ್ನು ಗೋಕಾಕರು ಕಂಡಿದ್ದಿಲ್ಲ. ಶ್ರೀಯುತರು ಗೋಕಾಕರಿಗೆ ಉತ್ತರಿಸುತ್ತಾರೆ. 'ಈ ಭಾಗದ ಜನರು ತುಂಬಾ ಸುಸಂಸ್ಕೃತರು, ಜನರನ್ನು ಸೇರಿಸಲು ಏನೂ ಪ್ರಯತ್ನ ಪಡಬೇಕಾಗಿಲ್ಲ' ಕವಿ ವರ್ಯರು ಹಾಗೂ ಸನ್ಮಾನಿತರು ಆದ ಗೋಕಾಕರು ತಮ್ಮ ಭಾಷಣದ ನಂತರ ತಮ್ಮ ಕಲ್ಪನೆಗಳನ್ನು ಸರಿಪಡಿಸಿಕೊಳ್ಳಬೇಕಾಗಿತ್ತು. 'ಮಲೆನಾಡಿನ ಜನ ಸಜ್ಜನರು, ಸುಸಂಸ್ಕೃತರು' ಎಂಬುದನ್ನು ಒಪ್ಪಿಕೊಳ್ಳಬೇಕಾಯಿತು. ಹೀಗೆ ಶ್ರೀ ಭಟ್ಟರು ಈ ಮಲೆನಾಡಿನ

ಜನರಿಗೆ ಸಾಹಿತ್ಯದ ಗೀಳನ್ನು ಹಚ್ಚಿದವರು. ತಮ್ಮೊಡನೆ ತಮ್ಮ ಇಡೀ ಸಮಾಜವನ್ನು ಎತ್ತುವ ಪ್ರಯತ್ನವನ್ನು ಮಾಡಿರುವುದಕ್ಕೆ ಇದೊಂದು ನಿದರ್ಶನ. ಹೀಗಾಗಿ ಭಟ್ಟರು "Purveyor of Literature and Culture". ಗೆ ಸಾಕಾರ ಮೂರ್ತಿಗಳಾಗಿದ್ದಾರೆ. ಪ್ರಸ್ತುತ ಶ್ರೀಯುತರ 'ವಿನಾಯಕ' ಲೇಖನದಲ್ಲಿಗೋಕಾಕರ ಬಹುಮುಖ ಪ್ರತಿಭೆಯನ್ನು, ಚಾರಿತ್ರಿಕ ಹಿನ್ನೆಲೆಯನ್ನು ರಸವತ್ತಾಗಿ ಚಿತ್ರಿಸಿದ್ದಾರೆ.

ಶ್ರೀಯುತರಿಗೆ ಕೇವಲ ಪುರಾತನ ಕವಿಗಳು-ಮೌಲ್ಯಗಳಲ್ಲಿ ಮಾತ್ರ ಆಸಕ್ತಿಯೆಂದಲ್ಲ. ಅದರಂತೆ ಸಮಕಾಲಿನ ವಚನಕಾರರಾದ ಶ್ರೀ ಮಹದೇವ ಬಣಕಾರರ ಕೃತಿಗಳ ಬಗ್ಗೆಯೂ ಮೆಚ್ಚುಗೆಯುಂಟು. ಬಣಕಾರರು ಶಾಸಕರಾಗಿರುವಾಗ ವಿಧಾನ ಸಭೆಯಲ್ಲಿ ಕವಿಚಾತುರ್ಯವನ್ನು ತೋರಿಸುವ ರೀತಿಯನ್ನು ಸಹ ಮೆಚ್ಚುಗೆ ಸೂಚಿಸಿದ್ದಾರೆ. ಇದರಂತೆ ಬಣಕಾರರಲ್ಲಿ 'ಸಾಹಿತ್ಯಾಸಕ್ತಿ, ಶಬ್ದ ಸಂಪತ್ತು, ಬರೆಯುವ ವಿಧಾನ, ಹೇಳುವ ರೀತಿ ಬೇರೆ ವಚನಕಾರರಿಗೆ ಹೋಲಿಸಲು ಸಾಧ್ಯವಾಗುವುದಿಲ್ಲ. ಈ ವಚನಗಳಿಗೆ ಬಣಕಾರರೊಬ್ಬರೆ ಹೋಲಿಕೆಗೆ ಸಿಗಬಲ್ಲರು.' ಎಂದು ತುಲನಾತ್ಮಕ ಅಧ್ಯಯನವನ್ನು ಶ್ರೀಯತರು ಮಾಡಿದ್ದಾರೆ. 'ಮಹದೇವ ಬಣಕಾರರ ವಚನಗಳು' ಆರನೂರಕ್ಕೂ ಮಿಕ್ಕ ಪುಟಗಳು, ಒಂದು ಸಾವಿರದ ಒಂದನೂರ ಎಂಟು ವಚನಗಳು ಎಂದು ತಿಳಿಸಿ ಈ ಗ್ರಂಥವನ್ನು ಓದಲು ಶ್ರೀಯುತರು ಪೂರ್ಣವಾದ ಹನ್ನೆರಡು ದಿನಗಳ ಅಧ್ಯಯನ ಕಾಲವನ್ನು ನೆನೆಯುತ್ತಾರೆ.

ಬಣಕಾರರ ಮತ್ತೊಂದು 'ಮರುಳಸಿದ್ಧ ಕಾವ್ಯ' ಮುನ್ನೂರಐವತ್ತು ಪುಟಗಳವು. ಭಾಮಿನಿ ಷಟ್ಪದಿಯಲ್ಲಿ ಒಂದು ಸಾವಿರದ ಇನ್ನೂರ ಅರವತ್ತನಾಲ್ಕು ಪದ್ಯಗಳು ಎಂದುಗಾತ್ರದ ಬಗ್ಗೆ ಉಲ್ಲೇಖಿಸಿ 'ಸತ್ಯಾನ್ವೇಷಣೆಯಲ್ಲಿ ಉತ್ತಮ ಕಾವ್ಯವಾಗಬೇಕೆಂಬ ಕವಿಯ ಅಭಿಲಾಷೆ,' ಯನ್ನು ಗುರುತಿಸುತ್ತಾರೆ. ಕುರುಹನ್ನು ಗಳಿಸಲು ನಡೆಸಿದ ಹುಡುಕಾಟಗಳ ಹಿನ್ನೆಲೆಯಲ್ಲಿ ವೈಜ್ಞಾನಿಕವಾಗಿ ಸಂಗ್ರಹಿಸಿದ ಸಾಧಕನ ಮಹಿಮೆಯನ್ನು ಕವಿ ಎಂಟನೂರ ಎಪ್ಪತ್ತಾರು ವರ್ಷಗಳ ಇತಿಹಾಸ ಶೋಧನೆಯನ್ನು ತೊಡಗಿದುದನ್ನು ಶ್ರೀಯುತರು ಶ್ಲಾಘಿಸುತ್ತಾರೆ. ವಿಕ್ಟೋರಿಯಾ ಆಸ್ಪತ್ರೆಯಲ್ಲಿಯೂ, ಶಾಸಕರ ಭವನದ ಕೊಠಡಿಯಲ್ಲೂ ರೂಪುಗೊಂಡ ಕಾವ್ಯದಲ್ಲಿ ಕವಿಯ ಹೃದಯಾಳದಲ್ಲಿ ನೆಲೆಸಿರುವ ಆಶೋತ್ತರಗಳನ್ನು ಶ್ರೀಯುತರು ನಿಖರವಾಗಿ ಪದ್ಯಗಳನ್ನು ಸ್ಮರಿಸಿ, ದಾಖಲಿಸಿ ಆದಿಯಿಂದ ಅಂತ್ಯದವರೆಗೂ ಗುರುತಿಸುತ್ತಾರೆ.

ಶ್ರೀ ಮಹಾಬಲೇಶ್ವರ ಭಟ್ಟರ ತಮ್ಮ ಲೇಖನದಿಂದ ಕೇವಲ ಸಾಹಿತ್ಯ ಕ್ಷೇತ್ರವನ್ನು ವಿಜೃಂಭಿಸುವುದಲ್ಲದೆ, ಸಾಮಾಜಿಕ ನೆಲೆಯಲ್ಲಿ ರೂಪುಗೊಂಡ ವ್ಯಕ್ತಿತ್ವ ವಿಕಸನಗಳನ್ನು ಗುರ್ತಿಸುವುದರ ಮೂಲಕ 'ಆದರ್ಶ ಮಾನವ' ನನ್ನು ಹುಡುಕುವುದರಲ್ಲಿ ಪ್ರಯತ್ನಿಸಿರುವುದು ಶ್ಲಾಘನೀಯ ಅಂಶವಾಗಿದೆ. ಈ ದಿಶೆಯಲ್ಲಿ

'ತಿರುಕ' ನೆಂದು ಕರ್ನಾಟಕದಲ್ಲಿ ಖ್ಯಾತಿಯಾದ ಮಲ್ಲಾಡಿ ಹಳ್ಳಿಯ ಶ್ರೀ ರಾಘವೇಂದ್ರ ಸ್ವಾಮಿಗಳ ಬಗ್ಗೆಯೂ ಶ್ರೀಯುತರು ಲೇಖನವನ್ನು ಬರೆದಿದ್ದಾರೆ. ತಿರುಕನ ಕನಸು- ಹಗಲು ಕಂಡ ಬಗೆಯನ್ನು ವಿವರಿಸುತ್ತಾ ಶ್ರೀಯುತರು ಹೇಗೆ ಶ್ರೀ ರಾಘವೇಂದ್ರ ಸ್ವಾಮಿಯವರು ದಕ್ಷಿಣ ಕನ್ನಡದಿಂದ ಮಲ್ಲಾಡಿಹಳ್ಳಿಗೆ ಬಂದು ಅದನ್ನು ಆದರ್ಶ ಗ್ರಾಮವಾಗಿ ಮಾಡಿದರೆಂಬುದನ್ನು ರಸವತ್ತಾಗಿ ವರ್ಣಿಸುತ್ತಾರೆ. ಅನಾಥಾಶ್ರಮ, ಬಾಳಬೆಳಕು ಸಾಹಿತ್ಯ ಮಾಲೆಯ ನಾಟಕ, ಕಾದಂಬರಿ, ಕವಿತೆ, ಯೋಗಗಳ ಬಗ್ಗೆ ಅಮೂಲ್ಯ ಗ್ರಂಥ ಪ್ರಕಾಶನ, ಆಯುರ್ವೇದ ಪಂಡಿತರಾಗಿ, ನೂರಾ ಆರು ವರ್ಷಗಳವರೆಗೆ ಅವಿರತವಾಗಿ ದುಡಿದ ಮಹನೀಯರ ಆದರ್ಶ ಗುಣಗಳನ್ನು ಈ ಲೇಖನದಲ್ಲಿ ದಾಖಲಿಸಿದ್ದಾರೆ.

ಶ್ರೀ ಭಟ್ಟರು ವ್ಯಕ್ತಿ ಚಿತ್ರಣದಂತೆಯೇ ಸಮಾಜದ ಅಂಕುಡೊಂಕನ್ನು ಸಹ ಎತ್ತಿ ಹಿಡಿದು ಆದರ್ಶ ಸಮಾಜದ ಕನಸನ್ನು ಹಂಬಲಿಸಿದ್ದಾರೆ. ಇವರ ಶ್ರೇಷ್ಠ ಬರವಣಿಗೆಯ ಪ್ರತೀಕವೆಂದರೆ ಸಾಹಿತ್ಯ ಪರಿಷತ್ತಿನ ಬಗ್ಗೆ ತಮ್ಮ ಜಿಗುಪ್ಸೆ, ಸಾಮಾಜಿಕ ಕಾಳಜಿಯನ್ನು ಈ ಲೇಖನದ ಮೂಲಕ ತೋಡಿಕೊಂಡಿದ್ದಾರೆ. ಸಾಹಿತ್ಯ ಮೌಲ್ಯಗಳನ್ನಾಧಾರ ಮಾಡಿಕೊಳ್ಳುವ ಅನುಯಾಯಿಗಳ, ನೌಕರ ವರ್ಗದವರು, ಹೇಗೆ ಪ್ರಭಾವ, ದುಂಡುಗಾರಿಕೆ, ಗುಂಪುಗಾರಿಕೆಯನ್ನು ಮತ್ತು ಕನ್ನಡದ ಸೇವೆಯ ಧ್ಯೇಯೋದ್ದೇಶಗಳನ್ನು ತಿರಸ್ಕರಿಸಿರುವ, ಮರೆತಿರುವ ರೀತಿಯನ್ನು ಸೂಕ್ಷ್ಮ ಸ್ವರಗಳಲ್ಲಿ ಖಂಡಿತವಾದಿಯಾಗಿ ಖಂಡಿಸಿದ್ದಾರೆ.

ಶ್ರೀ ಭಟ್ಟರ ಪ್ರಖ್ಯಾತಿಗೆ ಒಂದು ಕಾರಣ ಅವರು ತಮ್ಮ ಸುತ್ತಮುತ್ತಲ ಜಗತ್ತನ್ನೇ ಕೇಂದ್ರವಾಗಿಟ್ಟುಕೊಂಡು ಅದರಲ್ಲೇ ವಿಶ್ವರೂಪವನ್ನು ಕಂಡಿರುವುದಾಗಿದೆ. ಇದಕ್ಕೆ ನಿದರ್ಶನವೆಂದರೆ 'ನೀರು ಮುಳುಗಡೆ ಜನರ ಕಥೆ-ವ್ಯಥೆ' ಎಂಬ ಲೇಖನದಿಂದ ವ್ಯಕ್ತವಾಗುತ್ತದೆ. ಶರಾವತಿ ನದಿಯ ನೀರನ್ನು ವಿದ್ಯುತ್ ಉತ್ಪಾದನೆಗೆ ಹಿಡಿದಿಟ್ಟು ನಿರ್ಮಿಸಿರುವ ಲಿಂಗನಮಕ್ಕಿ ಜಲಾಶಯದಿಂದಾಗಿ ವೈಜ್ಞಾನಿಕ ಪ್ರಗತಿಯಾದರೂ ಜನರ ಜೀವನದ ಮೇಲಾಗಿರುವ ದುಷ್ಪರಿಣಾಮವನ್ನು ಶ್ರೀ ನಾ. ಡಿಸೋಜರವರು ತಮ್ಮ ಕೃತಿಗಳಲ್ಲಿ ಶ್ರೇಷ್ಠವಾಗಿ ಬಿಂಬಿಸಿರುವಂತೆ ಶ್ರೀ ಭಟ್ಟರು ಸಹ ಸಮಕಾಲೀನ ಸಾಮಾಜಿಕ ಪ್ರಶ್ನೆಯನ್ನು ಹೊಂದಿದ್ದು ತಮ್ಮದೇ ಆದ ವಿಶಿಷ್ಟ ರೀತಿಯಲ್ಲಿ ಒಂದು ಲೇಖನದ ಮೂಲಕ ಮೂಕ ಪ್ರಾಣಿಯಾದ ಜಾನುವಾರುಗಳ ಮೂಕ ನೋವನ್ನು ಅರ್ಥಮಾಡಿಕೊಂಡು ಅವುಗಳನ್ನು ಚಿತ್ರರಿಸುವಲ್ಲಿ ಯಶಸ್ವಿಯಾಗಿದ್ದಾರೆ.

ಹೀಗೆಯೇ, 'ಯಾರು ಸಂಪನ್ನರು' ಎಂಬ ಲೇಖನದಲ್ಲಿ ಯಾರೂ ಸಂಪನ್ನರಲ್ಲ ಎಂಬುದನ್ನುಗುರುತಿಸುತ್ತಾ ರಾಷ್ಟ್ರದ ಸಂಸ್ಕೃತಿ ಹೀಗೆ ಇವರಿಂದ ವಿಚ್ಛಿದ್ರವಾಗಿ,

ವಿಕಾರವಾಗಿ ಅಧೋಗತಿಗಿಳಿದಿದೆ ಎಂಬ ಸಾಮಾಜಿಕ ದೃಷ್ಟಿಕೋನದಿಂದ ತಮ್ಮ ಆಕ್ರೋಶವನ್ನು ವ್ಯಕ್ತಪಡಿಸಿದ್ದಾರೆ.

ಕೊನೆಯದಾಗಿ, ಮನೋವೈಜ್ಞಾನಿಕ ಜಾಡನ್ನು ಹಿಡಿದು, ಅನೇಕ ಕೇಸ್-ಹಿಸ್ಟರಿಗಳನ್ನು ದಾಖಲಿಸುತ್ತಾ ಹಣವೇ ಸರ್ವಸ್ವವೆಂದು ತಿಳಿದ ಮೌಢ್ಯಗಳನ್ನು ತೊಲಗಿಸಿ, ಶ್ರೀಯುತ ಮಹಾಬಲೇಶ್ವರ ಭಟ್ಟರು 'ಮಾನಸಿಕ ನೆಮ್ಮದಿಯೇ ಸುಖದ ದಾರಿ' ಯೆಂದು ತಮ್ಮ ಸ್ವಂತ ಜೀವನದ ಅನುಭವದ ಕಟು ಸತ್ಯವನ್ನು - ಸಾಮರತ್ವ ತತ್ವವನ್ನು ಇಡೀ ಸಮಾಜಕ್ಕೆ ದಾರಿ ದೀಪವನ್ನು ತೋರಿಸುವ ಪ್ರಯತ್ನವನ್ನು ಅತ್ಯಂತ ಯಶಸ್ವಿಯಾಗಿ ಮಾಡಿದ್ದಾರೆ. ಹೀಗೆ ಈ ಲೇಖನಗಳ ಮೂಲಕ ಶ್ರೀ ಮಹಾಬಲೇಶ್ವರ ಭಟ್ಟರು ಆದರ್ಶ ವ್ಯಕ್ತಿ-ಆದರ್ಶ ಸಮಾಜದ ಹುಡುಕಾಟದ ಧ್ಯೇಯೋದ್ದೇಶಗಳಲ್ಲಿ ಸಾಕ್ಷಾತ್ಕಾರದ ಸಫಲತೆಯ ಅತೀ ಸಮೀಪಕ್ಕೆ ಬಂದು ಸೇರುವುದರಲ್ಲಿ ಗಟ್ಟಿಗರಾಗಿದ್ದಾರೆ ಎಂದು ಸಹಜವಾಗಿಯೇ ಕಂಡು ಬರುತ್ತದೆ.

# ಮಹಾಬಲಶಾಲಿ ಭಟ್ಟರು

- ಹೆಚ್. ಗಣಪತಿಯಪ್ಪ

ನನ್ನ ಆತ್ಮೀಯ ಗೆಳೆಯರಲ್ಲೊಬ್ಬರಾಗಿರುವ ಶ್ರೀ ಟಿ. ಮಹಾಬಲೇಶ್ವರ ಭಟ್ಟರು, ನನಗಿಂತ ನಾಲ್ಕು ವರ್ಷ ಚಿಕ್ಕವರಾಗಿದ್ದರೂ, ಅವರನ್ನು ನೋಡಿದಾಗಲೆಲ್ಲಾ ಅವರು ನನಗಿಂತ ಹಿರಿಯರೇ ಹೊರತು, ಕಿರಿಯರಲ್ಲ ಎಂದು ನನ್ನ ಮನದಾಳದಲ್ಲಿ ಪೂಜ್ಯ ಭಾವನೆ ಮೂಡುತ್ತದೆ. ಮಾನವತೆಯನ್ನು ಮೈಗೂಡಿಸಿಕೊಂಡಿರುವ ಭಟ್ಟರಿಗೆ - ಶಿಸ್ತು, ಸ್ವಚ್ಛತೆಗಳ ಬಗ್ಗೆ ಒಲವಿಲ್ಲದವರನ್ನು ಕಂಡರೆ - ಒಂದು ರೀತಿಯ ಜಿಗುಪ್ಸೆ. ಅದಕ್ಕಾಗಿ ಕೆಲವರು ಭಟ್ಟರ ಬಗ್ಗೆ ಮೂಗು ಮುರಿದರೆ ಅದು ಸಹಜಕ್ರಿಯೆಯೇ ಹೊರತು - ಭಟ್ಟರ ತಪ್ಪಲ್ಲ.

೧೯೭೮ರಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಪಕ್ಷ ಇಬ್ಭಾಗವಾಗಿ ಇಂದಿರಾ ಕಾಂಗ್ರೆಸ್ ಹುಟ್ಟಿದಾಗ ಸಾಗರ ತಾಲ್ಲೂಕಿನಲ್ಲಿ ನಾನು ಮತ್ತು ಭಟ್ಟರು ಇಬ್ಬರೇ ಅವರ ಜಲಂಧರ ಪ್ರಕಟನಾಲಯದಲ್ಲಿಕುಳಿತು ನಿರ್ಧರಿಸಿ-ಇಂದಿರಾ ಕಾಂಗ್ರೆಸ್ ಪಕ್ಷದ ಶಾಖೆಯನ್ನು ಪ್ರಾರಂಭಿಸಿದ್ದೆವು. ಹಾಗಾಗಿ ಅವರ ಮತ್ತು ನನ್ನ ವಿಶೇಷ ಸಂಪರ್ಕ ಬೆಳೆಯಿತು. 'ಹಣದ' ರಾಜಕಾರಣವೇ ಮೇಲುಗೈ ಸಾಧಿಸಿದ್ದರಿಂದ 'ಗುಣದ' ರಾಜಕಾರಣ ಹಿಂದೆ ಬೀಳುವಂತಾಯಿತು. ಇಲ್ಲವಾದರೆ ಮಹಾಬಲೇಶ್ವರ ಭಟ್ಟರೂ ಒಮ್ಮೆ ಈ ತಾಲ್ಲೂಕಿನ ಶಾಸಕರಾಗಲು ಅವಕಾಶ ತಪ್ಪುತ್ತಿರಲಿಲ್ಲ. ಅದನ್ನು ತಿಳಿದು ಒಮ್ಮೆ ನಾನು ಹೇಳಿದೆ. 'ಭಟ್ಟರೇ ಶ್ರೀ ಬಂಗಾರಪ್ಪನವರ ಜೊತೆ ರಾಜಕೀಯದಲ್ಲಿ ಸೇರಿಕೊಳ್ಳಿ, ಸಾಗರ ಕ್ಷೇತ್ರದಲ್ಲಿ ನೀವು ಸ್ಪರ್ಧಿಸುವುದಕ್ಕೆ ಅವರ ಮನ ಒಲಿಸೋಣ. ಅವರು ನಿಮ್ಮನ್ನು ಖಂಡಿತಾ ಒಪ್ಪಿಕೊಳ್ಳುತ್ತಾರೆ' ಎಂದಿದ್ದೆ. ಅದಕ್ಕೂ ಅವರು ಮನಸ್ಸು ಕೊಡದೇ ಅವರು ತಮ್ಮ ಜೀವನದ ಸ್ವಚ್ಛತೆಯ ವ್ಯಾಪ್ತಿಯನ್ನು ರಾಜಕೀಯ ಕ್ಷೇತ್ರದಲ್ಲೂ ತೋರಿಸಿಬಿಟ್ಟರು.

ಸಾಗರ ತಾಲ್ಲೂಕಿನ ವಡ್ಡಾಲ ಎಂಬ ಸಣ್ಣ ಹಳ್ಳಿಯ ಕೊಂಪೆಯಿಂದ ಭಾರತದ ರಾಜಧಾನಿ ದೆಲ್ಲಿಯವರೆಗೂ - ಹತ್ತಾರು ಬಾರಿ ತಿರುಗಾಡಿದಾಗಿನ ನನ್ನ ಅನುಭವದ ಪ್ರಕಾರ ಶ್ರೀ ಮಹಾಬಲೇಶ್ವರ ಭಟ್ಟರು ಸಾಗರ ತಾಲ್ಲೂಕಿಗೆ ಒಳ್ಳೆಯ ಹೆಸರು ಬರುವಂತೆ ಮಾಡಿದವರಲ್ಲಿ ಇತರೆಯವರಾರಿಗೂ ಕಡಿಮೆಯವರಲ್ಲ ಎನ್ನುತ್ತೇನೆ.

ದೇವರು ಅವರಿಗೆ ಧೀರ್ಘಾಯುಷ್ಯವನ್ನೂ, ಅವರ ಸೇವಾ ಕ್ಷೇತ್ರದಲ್ಲಿ ಇನ್ನೂ ಹೆಚ್ಚಿನ ಸದಾವಕಾಶಗಳನ್ನೂ ನೀಡಲಿ ಎಂದೂ, ಅವರ ಕುಟುಂಬ ಜೀವನ ಸುಖ-ಸಮೃದ್ಧಿಯ ನೆಲೆವೀಡಾಗಲೆಂದೂ ಅನನ್ಯ ಭಾವದಿಂದ ಹಾರೈಸುತ್ತೇನೆ.

# ನಾ ಕಂಡ ಕರ್ಮಯೋಗಿ

**- ಹೆಚ್.ವಿ. ನಾಗರಾಜನ್**

೧೯೪೬ರಲ್ಲಿ ನೀರು ಮುಳುಗಡೆಪ್ರದೇಶದಿಂದ ಸಾಗರಕ್ಕೆ ಶ್ರೀ ತೊರೆಮನೆ ಮಹಾಬಲೇಶ್ವರ ಭಟ್ಟರು ಬಂದಾಗ ಅವರಿಗೆ ೧೮ ವರ್ಷದ ಪ್ರಾಯ. ಅಂದು ಸಾಗರ ಇಂದಿನಂತಿಲ್ಲದೆ ಶಾಂತಿ ಸಾಗರವಾಗಿತ್ತು. ಕುಟುಂಬದ ಜವಾಬ್ದಾರಿಯನ್ನು ಇವರೇ ಹೊರಬೇಕಾದುದರಿಂದಲೂ ಮುಂದಿನ ವಿದ್ಯಾಭ್ಯಾಸಕ್ಕೆ ಆಗ ಸಾಗರದಲ್ಲಿಕಾಲೇಜು ಇರಲಿಲ್ಲವಾದ್ದರಿಂದಲೂ ಉನ್ನತ ಶಿಕ್ಷಣದ ಕನಸು-ಕನಸಾಗಿಯೇ ಉಳಿಯಿತು. ತನಗಾದಂತೆ ಇತರರಿಗಾಗಬಾರದೆಂಬ ಕೊರಗಿನಿಂದ, ಸಾಗರವನ್ನು ಇಂದು ಶಿಕ್ಷಣ ಕೇಂದ್ರವನ್ನಾಗಿ ಮಾಡಲು ಶ್ರಮಿಸಿದ ಅನೇಕ ಮಹನೀಯರಲ್ಲಿ ಇವರೂ ಒಬ್ಬರಾಗಿದ್ದಾರೆ.

ಯೌವ್ವನದಲ್ಲೇ ಇವರಿಗೆ ಜನಸೇವೆ ಮಾಡುವ, ಸಮಾಜಸೇವಕರಾಗಿ ದುಡಿಯುವ, ಏನಾದರೂ ಮಹತ್ಕಾರ್ಯವನ್ನು ಸಾಧಿಸುವ ಹಂಬಲ ಹೆಚ್ಚಾಗಿತ್ತು. ಇಂದಿಗೂ ಎಪ್ಪತ್ತರಲ್ಲಿ ಸಹಾ ಈ ವಿಚಾರಗಳಲ್ಲಿ ಇಪ್ಪತ್ತರಲ್ಲಿದ್ದ ಉತ್ಸಾಹವೇ, ಸಾಹಸಪ್ರವೃತ್ತಿಯೇ ಉಳಿದಿದೆ. 'ಇಪ್ಪತ್ತರಲ್ಲಿ ಬಂದುದು ಎಪ್ಪತ್ತರವರೆಗೆ' ಎಂಬ ಗಾದೆ ಇವರ ಸಮಾಜ ಸೇವಾ ವೃತ್ತಿಗೆ ನಿಜವಾಗಿದೆ.

ಸಾಹಿತ್ಯಕ್ಷೇತ್ರದಲ್ಲಿ ಇವರು ಹನ್ನೆರಡು ಕೃತಿಗಳ ಲೇಖಕರು. ಎರಡು ಕಥಾ ಸಂಕಲನ ('ಗುಲಾಬಿ'-'ತೋರಣ'). ಎರಡು ಕವನ ಸಂಕಲನ (ಹೂಮಾಲೆ-ಋತುಗಾನ) ಎರಡು ಜೀವನ ಚಿತ್ರಣ (ಹೊಸೂರಿನ ಹಲವರು ಮೈಸೂರಿನ ಉಕ್ಕಿನ ಮನುಷ್ಯ) ಸಾಹಿತಿಗಳ ಪರಿಚಯಗಳ ಮಾಹಿತಿ ಮೂರು ಪುಸ್ತಕಗಳು (ಸಾಹಿತ್ಯ ಶಿಲ್ಪಿಗಳು ಭಾಗ ೧ ಮತ್ತು ೨, ಹಾಗೂ ಕನ್ನಡಕುಲದೀಪಕರು) ಮೂರು ಕಾದಂಬರಿಗಳು (ಅಣ್ಣ ತಂಗಿ, ವ್ಯಾಘ್ರ ಮುಖಿ ಮತ್ತು ಮಾನವ ರಾಕ್ಷಸರು)

ಹನ್ನೆರಡು ಕೃತಿಗಳ ಲೇಖಕರಾಗಿರುವುದು ಅಷ್ಟೇನು ಮುಖ್ಯವಲ್ಲವೆಂದು ನನ್ನ ಭಾವನೆ. ಏಕೆಂದರೆ ಹಲವಾರು ಲೇಖಕರು ಸುಮ್ಮನೇ ಲೇಖಕರಾಗಿಯೇ ಉಳಿದು ಬಿಡುತ್ತಾರೆ. ಆದರೆ ಇವರು ಹಾಗಲ್ಲ. ಹಿಂದೆ ಮಹಾರಾಜರು ಕವಿಗಳಿಗೆ ಆಶ್ರಯದಾತರಾಗಿದ್ದ ಹಾಗೆ, ಇವರು ಅನೇಕ ಲೇಖಕರಿಗೆ ಆಶ್ರಯದಾತರಾದರು.

ಇವರ ಜಲಂಧರ ಪ್ರಕಟನಾಲಯ ಪುಸ್ತಕ ಪ್ರಕಾಶನ ಸಂಸ್ಥೆಯಿಂದ ಅನೇಕರು ಲೇಖಕರಾಗಿ ಸೃಷ್ಟಿಯಾಗಿದ್ದಾರೆ. ಇಂದು ಸುಪ್ರಸಿದ್ಧ ಸಾಹಿತಿಗಳಾಗಿರುವವರ ಪೈಕಿ, ಹಲವರಿಗೆ ಇವರ ಜಲಂಧರ ಪ್ರಕಟನಾಲಯ ತವರು ಮನೆ. ಜಲಂಧರ ಪ್ರಕಟನಾಲಯ ಸಾಹಿತಿಗಳಿಗೆ ಸವಿನೆನಪಾಗಿ ಉಳಿದಿದೆ. ನನ್ನ ಕಾದಂಬರಿ (೧೯೬೨ರಲ್ಲಿ) 'ಪ್ರೀತಿ'ಯನ್ನು ಶ್ರೀ ಟಿ. ಮಹಾಬಲೇಶ್ವರ ಭಟ್ಟರು ಜಲಂಧರ ಪ್ರಕಟನಾಲಯದಲ್ಲಿ ಪ್ರಕಟಿಸಿದ್ದಾರೆ. ಆಗ ನಾನು ಕಾರ್ಗಲ್‌ನಲ್ಲಿ ಲೋಕೋಪಯೋಗಿ ಇಲಾಖೆಯಲ್ಲಿ ಗುಮಾಸ್ತನಾಗಿದ್ದೆ.

ಸಾಗರ ತಾಲ್ಲೂಕಿನ ರಾಜಕೀಯ ಕ್ಷೇತ್ರದಲ್ಲಿ, ವ್ಯಾಪಾರಸ್ಥರ ಸಂಸ್ಥೆಯಲ್ಲಿ, ಸಾಂಸ್ಕೃತಿಕ ಕ್ಷೇತ್ರದಲ್ಲಿ, ಪುರಸಭಾ ಆಡಳಿತದಲ್ಲಿ, ಶಿಕ್ಷಣಾಭಿವೃದ್ಧಿಕ್ಷೇತ್ರದಲ್ಲಿ ಹಲವು ವರ್ಷಗಳ ಕಾಲ ಅಧ್ಯಕ್ಷರಾಗಿ, ಉಪಾಧ್ಯಕ್ಷರಾಗಿ ಕಾರ್ಯದರ್ಶಿಯಾಗಿ ಮುಂದುವರಿದು ಸೇವೆ ಸಲ್ಲಿಸಿರುತ್ತಾರೆ. ಒಂದು ಹುದ್ದೆಯಲ್ಲಿ ಅದೂ ಸಾರ್ವಜನಿಕರ ಸಂಪರ್ಕವಿರುವ ಒಂದು ಹುದ್ದೆಯಲ್ಲಿ ಒಂದು ವರ್ಷ ಪೂರೈಸುವುದೇ ಸಾಹಸದ ಮಾತು. ಹೀಗಿರುವಾಗ ಹಲವಾರು ವರ್ಷಗಳು ಸಾರ್ವಜನಿಕ ಸಂಸ್ಥೆಗಳಲ್ಲಿ ಒಂದೇ ಹುದ್ದೆಯಲ್ಲಿ ಮುಂದುವರಿದವರೆಂದರೆ ಅವರ ಪ್ರಾಮಾಣಿಕತೆಗೆ, ಜನಾನುರಾಗಕ್ಕೆ, ಶುದ್ಧ ಹಸ್ತರೆಂಬುದಕ್ಕೆ ಬೇರೆ ಯಾವ ಸಾಕ್ಷಿಯೂ ಅಗತ್ಯವಿಲ್ಲವೆಂದು ಗಟ್ಟಿಯಾಗಿ ಕೂಗಿ ಹೇಳುತ್ತೇನೆ.

ಇವರ ಕಾರ್ಯದಕ್ಷತೆಯ ಬಗ್ಗೆ ಹೇಳಬೇಕಾದರೆ ಒಂದು ಪುಟ್ಟ ಪ್ರಸಂಗವನ್ನು ಮೊದಲು ಉದಾಹರಿಸಬಹುದು. ಒಂದು ಕೊಠಡಿಯಲ್ಲಿ ಮೂವರು ವಿದ್ಯಾರ್ಥಿಗಳಿದ್ದರು. ಅವರ ಹೆಸರು ನಿಂಗ, ಮಾದ, ಸುಬ್ಬ. ನಿಂಗ ಮೈಮರೆತು ನಿದ್ರಿಸುವ ವ್ಯಕ್ತಿಯಾದ್ದರಿಂದ, ಮರುದಿನ ಬೆಳಗಿನ ಜಾವದ ಬಸ್ಸಿಗೆ ಊರಿಗೆ ಹೋಗಬೇಕಾದ ಪರಿಸ್ಥಿತಿಗಾಗಿ ನಿಂಗ ಮಾದನಿಗೆ ಕೇಳಿಕೊಂಡ. 'ಬೆಳಗಿನ ಜಾವ ಐದು ಗಂಟೆಗೆ ಎಬ್ಬಿಸು, ಬಸ್ಸಿಗೆ ಹೋಗಬೇಕು.'' ಎಂದು. ಅದಕ್ಕೆ ಮಾದ ಹೇಳಿ 'ಆಗಲಿ ಎಬ್ಬಿಸುತ್ತೇನೆ. ನಿನ್ನನ್ನು ನಾನು ಎಬ್ಬಿಸಬೇಕಾದರೆ ಸುಬ್ಬ ನನ್ನನ್ನು ಸ್ವಲ್ಪ ಎಬ್ಬಿಸಬೇಕು. ಆನಂತರ ನಾನು ನಿನ್ನನ್ನು ಪೂರ್ತಿ ಏಳಿಸುತ್ತೇನೆ.' ಮಾದನನ್ನು ಸ್ವಲ್ಪ ಎಬ್ಬಿಸುವ ಜವಾಬ್ದಾರಿ ಸುಬ್ಬನಿಗೆ ವಹಿಸಲಾಯಿತು.

ಹೀಗೆ ಒಂದು ಸಂಸ್ಥೆಯಲ್ಲಿ ಅಧ್ಯಕ್ಷರು, ಉಪಾಧ್ಯಕ್ಷರು, ಕಾರ್ಯದರ್ಶಿಗಳು, ಖಜಾಂಚಿ, ಸಂಚಾಲಕರು, ಎಂಬ ಹಲವು ಹುದ್ದೆಗಳಿವೆ. ಆದರೂ, ಎಲ್ಲರೂ ಅವರವರ ಕರ್ತವ್ಯಗಳನ್ನು ತಾವಾಗಿಯೇ ನಿರ್ವಹಿಸಿಬಿಡುವುದಿಲ್ಲ. ಈ ಪೈಕಿ ಎಲ್ಲರಿಗೂ ಸ್ಫೂರ್ತಿ ತುಂಬುವ, ಸಕಾಲದಲ್ಲಿ ನೆನಪಿಸುವ, ಒತ್ತಾಯಿಸುವ ಒಂದು 'ಸಹಶಕ್ತಿ' ಇದ್ದೇ ಇರುತ್ತದೆ. ಶ್ರೀ ಟಿ. ಮಹಾಬಲೇಶ್ವರ ಭಟ್ಟರು ಯಾವುದೇ

ಸಂಸ್ಥೆಯಲ್ಲಿ ಯಾವುದೇ ಹುದ್ದೆಯಲ್ಲಿ ಕೆಲಸ ಮಾಡಿದರೂ ಸಹ, ಸಂಸ್ಥೆಯ ಇತರರಿಗೆ ಸ್ಫೂರ್ತಿ ತುಂಬುವ ಕೆಲಸವನ್ನು, ಸಕಾಲದಲ್ಲಿ ಕರ್ತವ್ಯವನ್ನು ನೆನಪಿಸುವ ಕೆಲಸವನ್ನು ಮಾಡಿದ್ದಾರೆ. ಚಂದಾವಸೂಲಿ, ಸಮಾರಂಭಕ್ಕೆ ಬೇಕಾದ ಸಾಮಾನುಗಳ ಸಂಗ್ರಹಣೆ, ಒಬ್ಬರನ್ನು ಒಂದು ನಿಬಂಧನೆಗೆ ಒಪ್ಪಿಸಿಕೊಳ್ಳುವ ಮಾತುಕತೆ-ಇವುಗಳೆಲ್ಲ ಭಟ್ಟರು ಇಲ್ಲದೆ ಆಗಿರುವುದಿಲ್ಲ.

'ಅಲ್ಲಿಗೆ ಹೋಗಿದ್ದಿರಾ ? ಆ ಕೆಲಸ ಆಯಿತೆ ?' ಎಂದಾಗ 'ಇಲ್ಲ, ಹೋಗಲಿಲ್ಲ' ಭಟ್ಟರು ಬರಲಿಲ್ಲ, ಹೋಗಲಿಲ್ಲ. ಎಂಬುದು ಉತ್ತರ.

ಹೀಗಾಗಿ ಅನೇಕ ಕಾರ್ಯಗಳಿಗೆ ಭಟ್ಟರು ಇರಲೇಬೇಕು. ಮಹಾಭಾರತದಲ್ಲಿ ಶ್ರೀ ಕೃಷ್ಣನು ಸೂತ್ರಧಾರಿಯಾಗಿರುವ ಹಾಗೆ, ಇವರು ಎಲ್ಲರಿಗೂ ಸ್ಫೂರ್ತಿ ತುಂಬುವ ಸಮಾಜ ಸೇವಕರಾಗಿದ್ದಾರೆ. ಕರ್ನಾಟಕದ ಪ್ರಸಿದ್ಧ ವರ್ತಮಾನ ಪತ್ರಿಕೆ, 'ಸಂಯುಕ್ತ ಕರ್ನಾಟಕ'ಕ್ಕೆ ಅಂಕಣಕಾರರಾಗಿರುತ್ತಾರೆ. ಶಿವಮೊಗ್ಗದ 'ಜನವಾರ್ತೆ' ಪತ್ರಿಕೆಗೆ ಸಹ ಅಂಕಣಕಾರರಾಗಿದ್ದಾರೆ.

ದಿನಾಂಕ ೭.೧೧.೯೬ರಲ್ಲಿ ಸಾಗರಕ್ಕೆ ಶ್ರೀ ಭಟ್ಟರ ಮನೆಗೆ ಹೋಗಿದ್ದೆ. ನನ್ನ ನಾಲ್ಕನೇ ಪುಸ್ತಕ 'ಉತ್ತಮ ಸಾಹಿತ್ಯ'ವನ್ನು ಅವರಿಗೆ ಅರ್ಪಿಸಲು ಹೋಗಿದ್ದೆ. ಅದೇ ಮುಗುಳುನಗೆಯ ಸುಸ್ವಾಗತ.

ಶ್ರೀ ಭಟ್ಟರಿಗೆ ಸುಪ್ರಸನ್ನ, ಹಸನ್ಮುಖಿ, ಮುಗಳುನಗೆ ಸ್ವಾಭಾವಿಕವಾಗಿ ಬಂದಿದೆ. ಇದರಲ್ಲಿ ನಟನೆಯಿಲ್ಲ. ಅವರ ಮುಗುಳು ನಗೆಯ ಗುಟ್ಟು ನನಗೆ ಗೊತ್ತು. ಸರ್ವರಲ್ಲಿ ಸಮಭಾವ, ಬಡವ-ಬಲ್ಲಿದನೆಂಬ ವ್ಯತ್ಯಾಸ ಮಾಡದ ಸಮಾನ ದೃಷ್ಟಿ, ಆ ಜಾತಿ, ಈ ಜಾತಿ ಎಂಬ ಭೇದವಿಲ್ಲದ ಮಾನವೀಯತೆ, ಎಲ್ಲರೂ ಸುಖವಾಗಿರಬೇಕೆಂಬ ಸಾಮಾಜಿಕ ಕಳಕಳಿ, 'ಎಳೆಗರುಂ ಎತ್ತಾಗದೇ - ಇಂದು ವಿದ್ಯಾರ್ಥಿಯಾಗಿರುವವನು ಮುಂದೆ ಪ್ರೊಫೆಸರಾಗುತ್ತಾನೆಂಬ ಮುಂದಾಲೋಚನೆ, ಪ್ರತಿ ಮನುಷ್ಯನಿಂದಲೂ ಒಂದಲ್ಲ ಒಂದು ಸಾಮಾಜಿಕ ಸೇವೆ ಆಗುತ್ತದೆಂಬ ಭಾವನೆ, ಅವರವರ ಕರ್ತವ್ಯ ಅವರವರು ಮಾಡುತ್ತಿರುವುದರಿಂದ ಸಮಾಜ ಹೀಗಾದರೂ ಇದೆ ಎಂಬ ಭಾವನೆ-ಇವೆಲ್ಲ ಗುಣಗಳು ರಕ್ತಗತವಾಗಿರುವುದರಿಂದಲೇ ಅವರು ಮಹಾಭಾರತದ ಕೃಷ್ಣನ ಹಾಗೆ ಹಸನ್ಮುಖರಾಗಿ ನಗುನಗುತ್ತ ಎಲ್ಲರನ್ನು ಮಾತನಾಡಿಸುತ್ತಾರೆ.

ಸಮಾಜ ಸುಧಾರಣೆ, ಸಾರ್ವಜನಿಕ ಸೇವೆ ಸುಲಭದ ಕೆಲಸವಲ್ಲ. ಒಂದು ಸಂಘಟನೆ, ಕಾರ್ಯಕ್ರಮ ನಡೆಸುವುದು ಬಹಳ ಕಷ್ಟ. ಹತ್ತಾರು ಜನರ ಸಹಾಯವಿಲ್ಲದೆ, ಹಲವಾರು ಕೈಗಳು ಒಂದಾಗದೆ ಯಾವ ಕೆಲಸವೂ ಒಬ್ಬರಿಂದ ಸಾಧ್ಯವಿಲ್ಲ. ಆದರೆ ಜನರನ್ನು ಒಂದೂ ಗೂಡಿಸುವ, ಗಣ್ಯರಿಂದ ಚಂದಾವಸೂಲು

ಮಾಡುವ, ಸಮಾರಂಭದ ಕೆಲಸಗಳ ಬಗ್ಗೆ ಒಂದು ಪಟ್ಟಿ ತಯಾರಿಸಿಕೊಂಡು, ಯಾವುದಾದ ಮೇಲೆ ಇನ್ನಾವುದಾಗಬೇಕೆಂದು ಗಮನಿಸಿ, ಸಂಬಂಧಪಟ್ಟವರಿಗೆ ಸಕಾಲದಲ್ಲಿ ಸೂಚನೆ ಕೊಡುವ ಒಂದು ಸ್ಫೂರ್ತಿ, ಪ್ರೇರಣೆ ಶ್ರೀ ಭಟ್ಟರಿಗಿರುವುದರಿಂದ ಅವರು ಹಲವು ಕಾರ್ಯಕರ್ತರ ಮಧ್ಯೆ ಎದ್ದು ಕಾಣುವ ವ್ಯಕ್ತಿಯಾಗಿದ್ದಾರೆ.

ಅವರ ಹಾಸಿಗೆಯಲ್ಲಿ, ಸುಪ್ಪತ್ತಿಗೆಯಲ್ಲಿ ಮಲಗಿದರೆ, ಅವರನ್ನು ಸುಖಿಯೆಂದೂ, ನಿದ್ರಿಸಿದರೆಂದೂ ಭಾವಿಸುವಂತಿಲ್ಲ. ಯಾವ ಸಮಾರಂಭದ ಯಾವ ಬಾಕಿಯಾಗಿರುವ ಕೆಲಸದ ನೆನಪಾಗಿ, ಆ ಚಿಂತೆಯಿಂದ, ನಿದ್ದೆ ಹತ್ತದೆ ಒದ್ದಾಡುವರೋ ಹೇಳಲಿಕ್ಕೆ ಬರುವುದಿಲ್ಲ. ಎದುರಿಗೆ ಕಂಡರೆ 'ನಮಸ್ಕಾರ ಸ್ವಾಮಿ' ಎನ್ನುವುದು ಸರಳ ಮರ್ಯಾದೆ. ಆದರೆ ಒಂದು ವ್ಯಕ್ತಿ ನಮ್ಮ ಕಣ್ಣೆದುರಿಗೆ ಇಲ್ಲದಿದ್ದರೂ ಮನಸಾರೆ ಆ ವ್ಯಕ್ತಿಯನ್ನು ನೆನೆಯುವುದು ನಿಜವಾದ ಮರ್ಯಾದೆ. ಸಾಗರ ತಾಲ್ಲೂಕು ಮತ್ತು ಸುತ್ತ ಹತ್ತಾರು ಹಳ್ಳಿಗಳಲ್ಲಿ ಶ್ರೀ ಭಟ್ಟರು ಚಿರಪರಿಚಿತರಾಗಿದ್ದಾರೆ. ಅವರ ಸಹಾಯದಿಂದ ಓದಲು ಅವಕಾಶದೊರೆತವರು, ಅವರ ಸಹಾಯದಿಂದ ಉದ್ಯೋಗ ದೊರಕಿದವರು, ಅವರ ಸಹಾಯದಿಂದ ವ್ಯಾಪಾರದಲ್ಲಿ ಇಂದು ಮುಂದುವರಿದಿರುವವರು ಅವರ ಸಹಾಯದಿಂದ ಸಾಹಿತ್ಯಕ್ಷೇತ್ರದಲ್ಲಿ ಹೆಸರು ಗಳಿಸಿದವರು, ಅವರು ಪ್ರಕಾಶಕ್ಕೆ ತಂದ ಸುಪ್ತಗುಣದಿಂದ ಇಂದು ಹೆಸರಾಂತ ಕಲಾವಿದರಾಗಿರುವವರು, ಅವರು ಜಗಳ ನಿಲ್ಲಿಸಿ, ಹೊಂದಾಣಿಕೆ ಹೇಳಿಕೊಟ್ಟಿದ್ದರಿಂದ ಒಡೆಯದೇ ಒಂದಾಗಿರುವ ಕುಟುಂಬದವರು - ಅವರು ಎದುರಿಗೆ ಇಲ್ಲದಿದ್ದರೂ ಅವರ ಉಪಕಾರವನ್ನು ಮನಸಾರೆ ಸ್ಮರಿಸುತ್ತಿದ್ದಾರೆ. ರತ್ನ ಖಚಿತವಾದ ಚಿನ್ನದ ಸಿಂಹಾಸನಕ್ಕಿಂತಲೂ ಮುಖ್ಯವಾಗಿ ಹಲವಾರು ಜನರ ಹೃದಯ ಸಿಂಹಾಸನದಲ್ಲಿ, ಮನಮಂದಿರದಲ್ಲಿ ಶ್ರೀ ಭಟ್ಟರು ಸ್ಥಿರವಾಗಿ ಉಳಿದು ಬಿಟ್ಟಿದ್ದಾರೆ. ಈ ಜನಾನುರಾಗವೇ ಶ್ರೀ ರಕ್ಷೆ. ಇದೇ ಜೀವನದ ಸಾರ್ಥಕತೆ. ಧನ್ಯಜೀವನ ಲೋಪದೋಷಗಳಿಲ್ಲದ ವ್ಯಕ್ತಿಯೇ ಎಂಬ ಪ್ರಶ್ನೆಗೆ ನನ್ನ ಉತ್ತರವೇನೆಂದರೆ ಅವರು ನುಂಗಿದ ಕಹಿಯನ್ನು ಹೇಳುವ ಅಗತ್ಯವಿಲ್ಲವೆಂದೂ ಅವರು ಹಂಚಿದ ಸಿಹಿಯನ್ನುಹೇಳಬೇಕೆಂಬುದೂ ನನ್ನ ಉತ್ತರ. ದೀಪದ ಕೆಳಗೆ ಕತ್ತಲೆ ಇದ್ದೇ ಇರುತ್ತದೆ.

'ಪರೋಪಕಾರ: ಪುಣ್ಯಾಯ ಪಾಪಾಯ ಪರ ಪೀಡನಂ' ಎಂಬ ತತ್ವವನ್ನು ಆಡಿತೋರಿಸದೆ, ಮಾಡಿ ತೋರಿಸುತ್ತಿರುವ ಕರ್ಮಯೋಗಿಯನ್ನಾಗಿ ನಾನು ಶ್ರೀ ಭಟ್ಟರನ್ನು ಕಂಡಿದ್ದೇನೆ.

# ಹೃದಯ ಶ್ರೀಮಂತಿಕೆ

– ಬಿ. ಹೆಚ್. ಚಂದ್ರಶೇಖರ

ಶ್ರೀ ಟಿ.ಮಹಾಬಲೇಶ್ವರ ಭಟ್ಟರನ್ನು ಸಾಗರ ತಾಲೂಕಿನಲ್ಲಿ ಅರಿಯದವರೇ ಇಲ್ಲ. ಹುಟ್ಟಿನಿಂದ ಅಷ್ಟೇನೂ ಶ್ರೀಮಂತರಲ್ಲದ, ಆದರೆ ಹೃದಯ ಶ್ರೀಮಂತಿಕೆಯನ್ನೇ ತಮ್ಮ ಬಂಡವಾಳವಾಗಿಸಿಕೊಂಡು ಧೀಮಂತರೆನಿಸಿದ ಶ್ರೀ ಟಿ.ಎಂ. ಭಟ್ಟರ ಜೀವನ ಆದರ್ಶಮಯ ಹಾಗೂ ಅನುಕರಣೀಯ. ಅವರ ಎಪ್ಪತ್ತರ ಈ 'ತಾರುಣ್ಯ'ದಲ್ಲಿ ಅವರ ಧೀಮಂತ ಭೂತಕಾಲವನ್ನೊಮ್ಮೆ ಇಣಿಕಿ ನೋಡಿ ವರ್ತಮಾನಕ್ಕೆಜೀವಕಳೆ ತುಂಬಿದ ಈ ಅಭಿನಂದನಾ ಗ್ರಂಥವು ಕಾಲೋಚಿತ ಹಾಗೂ ಸ್ತುತ್ಯಾರ್ಹ.

ಶ್ರೀ ಟಿ. ಮಹಾಬಲೇಶ್ವರ ಭಟ್ಟರು ದಿನಾಂಕ ೮.೯.೧೯೨೮ರಂದು ಸಾಗರ ತಾಲ್ಲೂಕು ತೊರೆಮನೆ ಗ್ರಾಮದಲ್ಲಿಜನಿಸಿದರು. ಇವರ ತಂದೆ ವಿಶ್ವನಾಥ ಭಟ್ಟ, ತಾಯಿ ಶ್ರೀಮತಿ ವೆಂಕಮ್ಮ. ಕೇವಲ ಎಸ್.ಎಸ್.ಎಲ್.ಸಿ.ಯ ವರೆಗೆ ಓದಿದ ಶ್ರೀಯುತರು ಸಾರ್ವಜನಿಕ ಕ್ಷೇತ್ರದಲ್ಲಿ ಹಿಂದೆ ನೋಡದೆ, ಈವರೆಗೂ ಹೆಸರು ಮಾಡುತ್ತಲೇ ಬಂದಿದ್ದಾರೆ. ಮಲೆನಾಡಿನ ಹಳ್ಳಿಯೊಂದರಿಂದ ಬಂದ ಈ ಪ್ರತಿಭೆಗೆ ಹತ್ತಿರದ ಪಟ್ಟಣವಾದ ಸಾಗರ ಆಶ್ರಯತಾಣವಾಯಿತು. ಪ್ರಾರಂಭದಿಂದಲೂ ಶಿಸ್ತಿನ ಜೀವನಕ್ಕೆ ಹೆಸರಾದ ಭಟ್ಟರು ಇಂದಿಗೂ ತಮ್ಮ ಶಿಸ್ತು ಅಚ್ಚುಕಟ್ಟುತನಗಳನ್ನು ಉಳಿಸಿಕೊಂಡಿದ್ದಾರೆ.

ಭಟ್ಟರ ಸಾಧನೆಗಳನ್ನು ಮೆಲುಕು ಹಾಕಿದಾಗ ಹಳ್ಳಿಗಾಡಿನ ಈ ವ್ಯಕ್ತಿ ಇಂದಿಗೂ ಇಷ್ಟೊಂದು ಸಾರ್ವಜನಿಕ ಕ್ಷೇತ್ರಗಳಲ್ಲಿಸೇವೆ ಸಲ್ಲಿಸಿದರೇ ಎಂದು ಆಶ್ಚರ್ಯವಾಗುವುದರೊಂದಿಗೆ ಅವರ ಸಾಧನೆಯ ಮೆಟ್ಟಿಲುಗಳ ಸ್ವಸಾಧನೆಯನ್ನು ತಿಳಿಸುತ್ತವೆ. ೧೯೪೬ರಲ್ಲಿ ಅಖಿಲಭಾರತ ಕಾಂಗ್ರೆಸ್‌ನ ಪ್ರಾಥಮಿಕ ಸದಸ್ಯತ್ವವನ್ನು ಪಡೆದರು. ನಂತರ ಭಾರತದ ರಾಷ್ಟ್ರೀಯ ಚಳುವಳಿಯ ಬಿಸಿಯಲ್ಲಿ ಈ ಹಳ್ಳಿಗಾಡಿನ 'ಪ್ರತಿಭೆ' ತನ್ನನ್ನು ಗುರುತಿಸಿಕೊಂಡಿತು. ನಂತರ ಸುಮಾರು ೪೩ ವರ್ಷಗಳ ಕಾಲ ಕಾಂಗ್ರೆಸ್ ಒಂದೇ ಪಕ್ಷದಲ್ಲಿ ನಿರಂತರವಾಗಿ ವಿನಮ್ರ ಸೇವೆ ಸಲ್ಲಿಸಿರುತ್ತಾರೆ. ಪಕ್ಷದ ಏಳುಬೀಳುಗಳಲ್ಲಿ ಒಂದಾಗಿ, ಪಕ್ಷಾಂತರ ಮಾಡದೆ ಇದ್ದುದು ಒಂದು ದೊಡ್ಡ ಸಾಧನೆ. ಇದರೊಂದಿಗೇ ೧೯೪೭ರಲ್ಲಿ ಸ್ವಂತ ಪುಸ್ತಕ ಪ್ರಕಾಶನ ಸಂಸ್ಥೆಯೊಂದನ್ನು ಪ್ರಾರಂಭಿಸಿದರು. ಸಾಗರದಲ್ಲಿ ಈಗ ತಾಲೂಕು ಸೊಸೈಟಿ ಇರುವ ಕಟ್ಟಡದ

ಪಕ್ಕದಲ್ಲಿ ಭಟ್ಟರು ಜಲಂಧರ ಪ್ರಕಟನಾಲಯ ಎಂಬ ಮಳಿಗೆಯಲ್ಲಿ ಕುಳಿತುಕೊಳ್ಳುತ್ತಿದ್ದುದನ್ನು ಇಂದಿಗೂ ಅನೇಕರು ನೆನಪಿಸಿಕೊಳ್ಳುತ್ತಾರೆ. ಶ್ರೀ ಭಟ್ಟರಿಗೆ ಸಾಹಿತ್ಯದಲ್ಲಿ ಪ್ರಾರಂಭದಿಂದಲೂ ಆಸಕ್ತಿ ಇದ್ದುದರಿಂದಲೇ ಅವರ ಸಾಹಿತ್ಯ ಸೇವೆ ಪ್ರಕಟನಾಲಯದಿಂದ ಪ್ರಾರಂಭವಾಗಿದ್ದನ್ನು ಇಲ್ಲಿ ಸ್ಮರಿಸಬಹುದು.

ಇಂದು ಶ್ರೀಯುತರನ್ನು ನೋಡಿದರೆ ರಾಜಕೀಯದ ಗಂಧಗಾಳಿಯೂ ಇಲ್ಲದವರಂತೆ ಕಾಣುತ್ತಾರೆ. ಈಗ ತಮ್ಮನ್ನು ಸಾಹಿತ್ಯಕ್ಕೆ ಸಂಪೂರ್ಣ ಒಪ್ಪಿಸಿಕೊಂಡಿದ್ದಾರೆ. ನಾನು ತಾಲೂಕು ಸಾಹಿತ್ಯ ಪರಿಷತ್ತಿನ ಹಾಲೀ ಕಾರ್ಯಕಾರಿ ಸಮಿತಿಯ ಸದಸ್ಯನಾಗಿದ್ದು ಈ ನಿಟ್ಟಿನಲ್ಲಿ ಶ್ರೀಯುತರ ಬಗ್ಗೆ ಹೇಳುವುದಾದರೆ, 'ಅವರೊಬ್ಬ ಗಂಭೀರ, ಸರಳ ಹಾಗೂ ಶಿಸ್ತಿನ ಸಿಪಾಯಿ. ಸಾಗರದಲ್ಲಿ ಸಾಹಿತ್ಯ ಪರಿಷತ್ತಿನ ಕಾರ್ಯಕ್ರಮಗಳೆಲ್ಲಾ ನಿರ್ದಿಷ್ಟ ಸಮಯಕ್ಕೆ ನಡೆದಿವೆ ಎಂದಾದರೆ, ಈ ಸಮಯ ಪ್ರಜ್ಞೆ ಹಾಗೂ ಶಿಸ್ತು ಅವರಿಂದಲೇ ಎಂಬುದು ನೂರಕ್ಕೆ ನೂರು ಸತ್ಯ. ಅವರಿಗೆ ದೊಡ್ಡವರು ಸಣ್ಣವರೆಂಬ ಭೇದವಿಲ್ಲ. ಅವರು ಸೂಕ್ಷ್ಮವಾಗಿ ಎಲ್ಲವನ್ನೂ, ಎಲ್ಲರನ್ನೂ ಗಮನಿಸುವರು. ಯಾರಿಗೂ ಬಿರುನುಡಿಯನ್ನಾಡಿದ್ದನ್ನು ನಾನು ನೋಡಿಯೇ ಇಲ್ಲ. ಅವರ ಅಚ್ಚುಕಟ್ಟು ಮತ್ತು ಶಿಸ್ತು ಎಂಥವರನ್ನೂ ಮೋಡಿ ಮಾಡಿ ಆಕರ್ಷಿಸುತ್ತದೆ.'

ಅವರ ಸಾಮಾಜಿಕ ಸೇವೆಯ ಬಗ್ಗೆ ಹೇಳುವುದಾದರೆ, ಶ್ರೀಯುತರು ಸಾಗರದ ಪುರಸಭಾಸದಸ್ಯರಾಗಿ ಮೂರು ಬಾರಿ ಆಯ್ಕೆಯಾಗಿ ಸೇವೆ ಸಲ್ಲಿಸಿದ್ದಾರೆ. ಒಟ್ಟು ಒಂಭತ್ತು ವರ್ಷಗಳ ಕಾಲ ಸಕ್ರಿಯವಾಗಿ ಕೆಲಸಮಾಡಿದ್ದಾರೆ. ೧೯೫೪ರಲ್ಲಿ ಸಾಗರ ತಾಲೂಕು ಕಾಂಗ್ರೆಸ್ ಪಕ್ಷದ ಪ್ರಧಾನ ಕಾರ್ಯದರ್ಶಿಯಾಗಿ ಆಯ್ಕೆಯಾಗಿ ಶಿವಮೊಗ್ಗ ಜಿಲ್ಲಾ ಕಾಂಗ್ರೆಸ್ ಸಮಿತಿಗೂ ಆಯ್ಕೆಯಾದರು. ೧೯೬೧ರಲ್ಲಿ ರಾಜ್ಯಮಟ್ಟದಲ್ಲಿ ಶರಾವತಿ ನೀರು ಮುಳುಗಡೆ ಪುನರ್‌ವಸತಿ ಸಮಿತಿಗೆ ರಾಜ್ಯ ಸರ್ಕಾರದ ಪ್ರತಿನಿಧಿಯಾಗಿ ೬ ವರ್ಷಗಳ ಕಾಲ ಸೇವೆ ಸಲ್ಲಿಸಿದರು. ೧೯೫೮ರಲ್ಲಿ ಮೈಸೂರು ಆಕಾಶವಾಣಿಯಲ್ಲಿ ಪ್ರಥಮ ಬಾರಿಗೆ ಭಾಷಣ ಮಾಡಿದರು.

ಮಲೆನಾಡು ಅಡಿಕೆ ಮಾರಾಟ ಸಹಕಾರ ಸಂಘವು ಈ ಜಿಲ್ಲೆಯ ಒಂದು ಪ್ರತಿಷ್ಠಿತ ಸಂಸ್ಥೆ. ಈ ಸಂಸ್ಥೆಗೆ ಶ್ರೀಯುತರು ೧೯೬೭ರಿಂದ ಸುಮಾರು ೨೦ ವರ್ಷಗಳ ಕಾಲ ಸತತವಾಗಿ ನಿರ್ದೇಶಕರಾಗಿ ದುಡಿದರು. ೧೯೬೮ರಲ್ಲಿ ಕಲೆ,ಸಾಹಿತ್ಯ, ಸಂಸ್ಕೃತಿ, ನಾಟಕ, ಸಂಗೀತ ಇವುಗಳ ಅಭಿವೃದ್ಧಿಗಾಗಿ ಹಾಗೂ ವಿಕಾಸಕ್ಕಾಗಿ ಸ್ಥಾಪನೆಯಾದ ಕನ್ನಡ ಸಂಘದ ಅಧ್ಯಕ್ಷರಾಗಿ ೮ ವರ್ಷಗಳ ಕಾಲ ಸತತವಾಗಿ ದುಡಿದರು. ೧೯೬೯ರಲ್ಲಿ ಸಾಗರ ತಾಲೂಕು ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿ ೫ ವರ್ಷಗಳ ಕಾಲ ಸೇವೆ ಸಲ್ಲಿಸಿದರು. ೧೯೭೪ರಲ್ಲಿ ಸಾಗರ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘದ ಅಧ್ಯಕ್ಷರಾಗಿ ಆರು ವರ್ಷಗಳ

ಕಾಲ ಸೇವೆ ಸಲ್ಲಿಸಿದರು. ಹಾಗೂ ಸಾಗರ ಕೃಷಿ ಭೂ ಅಭಿವೃದ್ಧಿ ಬ್ಯಾಂಕಿನ ಅಧ್ಯಕ್ಷರಾಗಿ ೫ ವರ್ಷಗಳ ಕಾಲ ಕೆಲಸ ನಿರ್ವಹಿಸಿದರು.

೧೯೭೬ರಲ್ಲಿ ಶಿವಮೊಗ್ಗದಲ್ಲಿ ನಡೆದ ಅಖಿಲ ಭಾರತ ೪೯ನೇ ಕನ್ನಡ ಸಾಹಿತ್ಯ ಸಮ್ಮೇಳನದ ಸ್ವಾಗತ ಸಮಿತಿಯ ಉಪಾಧ್ಯಕ್ಷರಾದರು. ೧೯೭೭ರಲ್ಲಿ ಆರು ವರ್ಷಗಳ ಕಾಲ ಮಲೆನಾಡು ಅಡಿಕೆ ಮಾರಾಟ ಸಹಕಾರ ಸಂಘ, ಶಿವಮೊಗ್ಗ ಇದರ ಉಪಾಧ್ಯಕ್ಷರಾಗಿ ಸೇವೆ ಸಲ್ಲಿಸಿದರು.

೧೯೭೮ನೇ ಇಸವಿ ಇತರ ಜೀವನದಲ್ಲೊಂದು ಪ್ರಮುಖ ವರ್ಷ. ಇವರ ೫೦ನೇ ವರ್ಷದ ಹುಟ್ಟು ಹಬ್ಬವನ್ನಾಚರಿಸಿದ ಈ ವರ್ಷ, ಶ್ರೀಯುತರು ತಾಲ್ಲೂಕಿಗೆ ಸಾಹಿತ್ಯ, ಸಂಸ್ಕೃತಿ, ಕಲೆಗಳಿಗೆ ಸತತವಾಗಿ ಸಲ್ಲಿಸಿದ ಸೇವೆಗಾಗಿ ಸಾಗರ ಪ್ರಾಂತ್ಯ ಮಹಾಜನತೆಯು ಇವರಿಗೆ ಸನ್ಮಾನ ಮಾಡಿತು. ಅಲ್ಲದೆ 'ಮಹಾನಂದ' ಅಭಿನಂದನ ಗ್ರಂಥದ ಸಮರ್ಪಣೆ ಮಾಡಲಾಯಿತು. ಈ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಹಂ.ಪ.ನಾಗರಾಜಯ್ಯನವರು ಅಧ್ಯಕ್ಷತೆವಹಿಸಿದ್ದರು.

೧೯೮೦ರಲ್ಲಿ ಮಲೆನಾಡು ಅಭಿವೃದ್ಧಿ ಪ್ರತಿಷ್ಠಾನದ ಉಪಾಧ್ಯಕ್ಷರಾಗಿ ಆಯ್ಕೆಯಾದ ಶ್ರೀಯುತರು ಇಂದಿಗೂ ಕೂಡ ಆ ಶ್ರೀ ಸ್ಥಾನದಲ್ಲಿ ಮುಂದುವರೆದಿದ್ದಾರೆ. ಅಲ್ಲದೆ ೧೯೮೦ರಲ್ಲಿ ಸಾಗರದಲ್ಲಿ ನಡೆದ ಶಿವಮೊಗ್ಗ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸ್ವಾಗತ ಸಮಿತಿಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು.

೧೯೮೮ರಲ್ಲಿ ಶಿವಮೊಗ್ಗ ಜಿಲ್ಲಾ ಕಾಂಗ್ರೆಸ್ ಸಮಿತಿಯ ಉಪಾಧ್ಯಕ್ಷರಾಗಿ ೬ ವರ್ಷಗಳ ಕಾಲ ಸೇವೆ ಸಲ್ಲಿಸಿದರು. ಅಲ್ಲದೆ ೧೯೮೮ರಲ್ಲಿ ಮಲೆನಾಡು ಅಭಿವೃದ್ಧಿ ಪ್ರತಿಷ್ಠಾನ ಬೆಳ್ಳಿ ಹಬ್ಬದ ಕಾರ್ಯಾಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದರು. ೧೯೭೬ ರಿಂದ ೧೯೮೮ವರೆಗೆ 'ಆರಾಧನೆ' ಮತ್ತು 'ಸಂಭ್ರಮ' ಎಂಬ ಸ್ಮರಣ ಸಂಚಿಕೆಯ ಸಂಪಾದಕ ಹಾಗೂ ಪ್ರಧಾನ ಸಂಪಾದಕ ಹಾಗೂ ಪ್ರಧಾನ ಸಂಪಾದಕರಾಗಿ ಕಾರ್ಯನಿರ್ವಹಿಸಿದರು. ೧೯೯೨ರಿಂದ ಇಂದಿನವರೆಗೂ ಸಾಗರ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಸಕ್ರಿಯ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ೧೯೯೬ರಲ್ಲಿಬೆಂಗಳೂರಿನ ಸಂಯುಕ್ತ ಕರ್ನಾಟಕ ಪತ್ರಿಕೆಗೆ 'ಬೇವು-ಬೆಲ್ಲ' ಅಂಕಣಕಾರರಾಗಿಯೂ ಹಾಗೂ ಶಿವಮೊಗ್ಗದ ಜನವಾರ್ತೆ ಪತ್ರಿಕೆಗೆ 'ನಿಮ್ಮೊಡನೆ' ಅಂಕಣಕಾರರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ತಾಳಗುಪ್ಪದಲ್ಲಿ ನಡೆಯಲಿರುವ ಅಖಿಲ ಕರ್ನಾಟಕ ಯಕ್ಷಗಾನ ಸಮಗ್ರ ಸಮ್ಮೇಳನದ ಸ್ವಾಗತ ಸಮಿತಿಯ ಕಾರ್ಯಾಧ್ಯಕ್ಷರಾಗಿಯೂ, ಇವರು ಕೆಲಸ ನಿರ್ವಹಿಸುತ್ತಿದ್ದಾರೆ.

ಮೇಲ್ಕಂಡ ವಿವಿಧ ಸಂಸ್ಥೆಗಳಿಗೆ ಸೇವೆ ಸಲ್ಲಿಸಿದ ಹಾಗೂ ಸಲ್ಲಿಸುತ್ತಿರುವ ಶ್ರೀಯುತರನ್ನು ಅವರ ಈ ೭೦ನೇ ಹುಟ್ಟು ಹಬ್ಬದ ಸಮಯದಲ್ಲಿ ಸನ್ಮಾನಿಸುವುದು

ನಿಜವಾಗಿಯೂ ಸ್ತುತ್ಯಾರ್ಹ ಕಾರ್ಯ. ಅವರ ಈ ಸಾಧನೆಗಳನ್ನು ನೋಡಿದಾಗ ಅವರು ಕೇವಲ ವ್ಯಕ್ತಿಯಲ್ಲ 'ಶಕ್ತಿ'ಯಾಗಿ ಕೆಲಸ ಮಾಡಿದ್ದಾರೆ ಎನ್ನಬಹುದು.

ಅವರ ಸದಭಿರುಚಿಯ ಇನ್ನೊಂದು ಜ್ವಲಂತ ಉದಾಹರಣೆ ಅವರ ಕುಟುಂಬ ಅವರ ಸದಸ್ಯರು. ಅವರ ಪತ್ನಿ ಶ್ರೀಮತಿ ಪದ್ಮಾವತಿ ಹಾಗೂ ಮಕ್ಕಳಿಗೆ, ಮನೆಗೆ ನೆಂಟರು, ಆಪ್ತರು ಬಂದರೆ ಮಹಾ ಸಂತಸ, ಅವರ ಮನೆಯ ಸುತ್ತಲಿನ ಉದ್ಯಾನವನವು ಪುಷ್ಪಗಳಿಂದಲೂ ಅಲಂಕಾರಿಕ ಸಸ್ಯಗಳಿಂದಲೂ ಕಂಗೊಳಿಸುತ್ತಿದೆ. ಅವರ ಶಿಸ್ತು ಬದ್ಧ ಜೀವನವು ಅವರ ಮನೆಯ ಪರಿಸರದಲ್ಲೂ ಅವರ ಅಡಿಕೆ ತೋಟದಲ್ಲೂ ಮನೆಯ ವರಾಂಡದಲ್ಲೂ ಎಲ್ಲೆಲ್ಲೂ ಕಂಡುಬರುತ್ತದೆ.

'ಸದೃಢ ಶರೀರದಲ್ಲಿ ಸುಂದರ ಮನಸ್ಸು ಇರುತ್ತದೆ' ಎಂಬ ನಾಣ್ನುಡಿ ಇವರನ್ನು ನೋಡಿಯೇ ಬರೆಯಲ್ಪಟ್ಟಿರಬೇಕು.

ಒಟ್ಟಿನಲ್ಲಿ ಶ್ರೀಯುತರು ಇದುವರೆಗೂ ಸಾಂಸಾರಿಕವಾಗಿ ಮತ್ತು ಸಾಮಾಜಿಕವಾಗಿ ತುಂಬು ಜೀವನ ನಡೆಸಿದ್ದಾರೆ. ಇನ್ನು ಮುಂದೂ ದೇವರು ಇವರಿಗೆ ದೀರ್ಘಾಯುಸ್ಸು,ಆರೋಗ್ಯ ಹಾಗೂ ಚೈತನ್ಯವನ್ನು ಕೊಡಲಿ ಎಂಬುದು ನನ್ನಂತಹ ಕಿರಿಯರೆಲ್ಲರ ಹರಕೆ.

# ಸಾಗರಕ್ಕೆ ಮಹಾಬಲ

– ಗಣಪತಿವರ್ಧನ್

ಜೀವನವೆಂದರೆ ಕೇವಲ ಆಯುಷ್ಯವನ್ನು ಕಳೆಯುವುದಲ್ಲ. ಏಕೆಂದರೆ ಪ್ರಪಂಚದ ಸಮಸ್ತ ಜೀವಕೋಟಿಗಳಿಗೂ ಆಯುರ್ಮಾನ ಮೊದಲೇ ನಿಗದಿಪಡಿಸಲ್ಪಟ್ಟಿರುತ್ತದೆ. ಹಾಗೆ ನೋಡಿದರೆ, ಬದುಕನ್ನು ಸವೆಸುವುದೇ ಜೀವಿಯ ಪ್ರಮುಖ ಲಕ್ಷಣ ಎನ್ನಬಹುದು. ಪ್ರಾಣಿಯೇ ಇರಲಿ, ಪಕ್ಷಿಯೇ ಇರಲಿ ಕೊನೆಗೆ ಸಸ್ಯವೇ ಇರಲಿ-ಬದುಕಿಗಾಗಿ ಹೋರಾಟ ಮಾಡುತ್ತವೆ. ಆಹಾರ-ಮೈಥುನ-ನಿದ್ರೆ-ಇವುಗಳಲ್ಲಿ ಮಾನವನಿಗೂ ಇತರ ಪ್ರಾಣಿಗಳಿಗೂ ವ್ಯತ್ಯಾಸ ಕಂಡುಬರುವುದಿಲ್ಲ. ಆದರೆ ಮಾನವ ಪ್ರಾಣಿ- ಸಾಮಾನ್ಯ ಪ್ರಾಣಿಯಲ್ಲ. ಇತರೆ ಪ್ರಾಣಿಗಳಿಗಿಂತ ಬುದ್ಧಿವಂತ ಎಂದು ಹೆಸರಾಗಿದ್ದಾನೆ. ತನಗಿಂತಲೂ ದೇಹಬಲದಲ್ಲಿ ವಿಶಿಷ್ಟ ಗುಣಗಳಲ್ಲಿ-ಕೋಡು, ಉಗುರು ಮುಂತಾದ ಅವಯವಗಳಲ್ಲಿ ಬೇರೆವಿಧವಾದ ಇರುವಿಕೆಯನ್ನು ಹೊಂದಿದ್ದು, ಭಯವನ್ನು ಹುಟ್ಟಿಸುವ ಪ್ರಾಣಿ ಪಕ್ಷಿಗಳು ಅಸ್ತಿತ್ವದಲ್ಲಿದ್ದರೂ ಅವೆಲ್ಲವನ್ನೂ ಮೆಟ್ಟಿ ನಿಂತುಕೊಂಡು- ಇಂದು ಮಾನವನೇ ಈ ಜಗತ್ತಿನಲ್ಲಿ ತಾನೇ ತಾನಾಗಿ ರಾರಾಜಿಸುತ್ತಿರುವುದು - ಕೇವಲ ತನ್ನ ಬುದ್ಧಿವಂತಿಕೆಯಿಂದ ಅಷ್ಟೇ ಅಲ್ಲ; ಮಾನವ ಸಮಾಜ ಜೀವಿ. ಇಷ್ಟೆಲ್ಲಾ ನಾನು ಹೇಳುವ ಕಾರಣ- ಕೇವೆಲ ವಯಸ್ಸನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿ ಬದುಕು-ಮಾನವನ ಪರಮೋದ್ದೇಶ ಆಗಿರದೆ- ಹೇಗೆ ಬದುಕಬೇಕು ಎಂಬುದನ್ನರಿತು ನಡೆದುಕೊಳ್ಳಬೇಕಾಗುತ್ತದೆ. ಅಂದರೆ ತನ್ನ ಇತಿ-ಮಿತಿಗಳನ್ನು ಹಿರಿಮೆ-ಗರಿಮೆಗಳನ್ನು ಗಣನೆಗೆ ತೆಗೆದುಕೊಂಡು ಸಾಧ್ಯವಾದಷ್ಟು ಒಳ್ಳೆಯ ರೀತಿಯಲ್ಲಿ ಬಾಳಿದರೆ, ಅವನು ಜೀವಿಸಿದ್ದಕ್ಕೆ-ಮಾನವ ಜನ್ಮ ತಾಳಿದ್ದಕ್ಕೆ ಮಹತ್ವ ಬರುತ್ತದೆ. ಸಮಾಜದ ಇತರೆಯವರೊಡನೆ ಬೆರೆತು, ತನ್ನ ವ್ಯಕ್ತಿತ್ವನ್ನು ಬೆಳೆಸಿಕೊಂಡು ಹೋದಲ್ಲಿ ಬಾಳು ಅರ್ಥಪೂರ್ಣವಾಗುತ್ತದೆ. ತನ್ನ ನಡೆ-ನುಡಿ-ಕೃತಿಗಳಲ್ಲಿ ಇತರರಿಗೆ ತೊಂದರೆಯಾಗದ ರೀತಿಯುಲ್ಲಿ ಪ್ರವರ್ತಿಸಿದರೆ ಬೃಂದಾವನ ಸದೃಶವಾದ ಏಳಿಗೆ ಪಡೆಯುತ್ತಾನಲ್ಲದೆ ಜೀವನ್ಮೃತ ಆಗಲಾರ. ತಮ್ಮ ಜೀವನದ ೭೦ರ ಪಾವಟಿಗೆಗೆ ಪಾದಾರ್ಪಣೆ ಮಾಡಿರುವ ವ್ಯಕ್ತಿ-ಏಳು ದಶಕಗಳ ಸಾರ್ಥಕ ಬದುಕನ್ನು ಪೂರ್ತಿಮಾಡಿದ ಹಿರಿಯ ಚೇತನದ ಬಗ್ಗೆ, ನಮ್ಮನಿಮ್ಮೆದುರು ಓಡಾಡಿಕೊಂಡಿರುವ ಶ್ರೀಯುತ ಟಿ. ಮಹಾಬಲೇಶ್ವರ ಭಟ್ಟರ ಬಗ್ಗೆ.

ಮಲೆನಾಡಿನ ಹೆಮ್ಮೆಯ ಪುತ್ರರಾದ ಶ್ರೀಯುತ ಟಿ. ಮಹಾಬಲೇಶ್ವರ ಭಟ್ಟರ ಕುರಿತಾಗಿ ಲೇಖನವೊಂದನ್ನು ಸಿದ್ಧಪಡಿಸಿಕೊಡಬೇಕೆಂದು 'ಶ್ರೀ ಭಟ್ಟರ ಅಭಿನಂದನ ಸಮಿತಿ- ಸಾಗರ' ಇವರು ಕೋರಿದಾಗ- 'ತುಂಬಾ ಉತ್ತಮವಾದ ಕೆಲಸ ಮಾಡುತ್ತಿದ್ದೀರಿ, ನನ್ನ ಕೈಲಾದ ಮಟ್ಟಿಗೆ ಈ ಅಳಿಲು ಸೇವೆ ಮಾಡುತ್ತೇನೆ ಎಂದೆ.

೧೯೨೮ನೇ ಇಸವಿಯ ಸೆಪ್ಟೆಂಬರ್ ತಿಂಗಳಿನ ೮ನೇ ದಿನಾಂಕ ಶ್ರೀಯುತ ಟಿ. ಮಹಾಬಲೇಶ್ವರ ಭಟ್ಟರು ಈಗಿನ ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕಿಗೆ ಸೇರಿದ ತೊರಮನೆ ಎಂಬಲ್ಲಿ ಶ್ರೀಮತಿ ವೆಂಕಮ್ಮನವರಲ್ಲಿ ಜನ್ಮವೆತ್ತಿದರು. ಇವರ ತಂದೆ ಶ್ರೀಮಾನ್ ವಿಶ್ವನಾಥ ಭಟ್ಟರು.

ಶ್ರೀಯುತ ಭಟ್ಟರು ಎಸ್.ಎಸ್.ಎಲ್.ಸಿ.ಯನ್ನು ದಾಟಿದವರು. ಅಂದರೆ ಈಗಿನಂತೆ ಪದವೀಧರರಾಗುವುದರಿಂದಲೇ ಜಾಣರೆನಿಸಿಕೊಳ್ಳಬಹುದು, ರ್‍ಯಾಂಕ್ ಬಂದರೇನೆ ವಿದ್ವನ್ಮಣಿಗಳ ಸಾಲಿಗೆ ಸೇರಬಹುದು–ಎಂಬ ತಾರತಮ್ಯ ಭಾವನೆ ಇಲ್ಲದ ಕಾಲವದು. ಆಗಿನ ಶಿಕ್ಷಣದಲ್ಲಿ ಶಿಸ್ತು, ಸಂಯಮ, ವಿವೇಕ, ದಕ್ಷತೆ-ಇತ್ಯಾದಿ ಸದುದ್ದೇಶಗಳು ಮನೆ ಮಾಡಿಕೊಂಡಿದ್ದವು. ತಾನು ಯಾರು ? ತನ್ನ ಪಾಲಿನ ಕರ್ತವ್ಯವೇನು ? ತನ್ನ ಮುಂದಿನ ಗುರಿ-ಸಾಧನೆಗಳೇನು ? - ಇಂತಾ ಶಾಶ್ವತ ಸುಖಕ್ಕೆ ಅಡಿಪಾಯ ಹಾಕಬಲ್ಲ - ಸಮರ್ಥ ಸಿಪಾಯಿಗಳನ್ನು ತಯಾರಿಸಲು ತಳರೇಖೆಯನ್ನು ಸಿದ್ಧಗೊಳಿಸಬಲ್ಲ- ಸಾಮರ್ಥ್ಯವಿರುವ ಉನ್ನತ ಧ್ಯೇಯೋದ್ದೇಶಗಳನ್ನು ಆಗಿನ ಕಾಲದ ಯೋಜನೆಯಲ್ಲಿ ಅಳವಡಿಸಿ ಕೊಳ್ಳಲಾಗುತ್ತಿತ್ತು. ಇಂಥಾ ವಾತಾವರಣದಲ್ಲಿ ಶ್ರೀ ಭಟ್ಟರು ಬೆಳೆದಿದ್ದರು - ಎನ್ನುವುದು ಅವರನ್ನು ದೂರದಿಂದ ಬಲ್ಲವರಿಗೂ ಗೊತ್ತಾಗುವಂತಿದೆ. ಇದರ ಜೊತೆಗೆ ಶ್ರೀಯುತರ ಸ್ವಂತ ಪರಿಶ್ರಮ ಚಿಕಿತ್ಸಕ ಬುದ್ಧಿ ಇವು ಕಾರಣವಾದವು-ಅವರ ವ್ಯಕ್ತಿತ್ವ ವಿಕಾಸದಲ್ಲಿ ಎಂಬ ಮಾತನ್ನು ನಾವು ಮರೆಯಬಾರದು.

ಶ್ರೀಯುತ ಭಟ್ಟರ ಕುಟುಂಬ ಜೀವನ ಆದರ್ಶ ಪ್ರಾಯವಾದುದು. ಶ್ರೀಯುತರ ಸಹಧರ್ಮಿಣಿ ಶ್ರೀಮತಿ ಪದ್ಮಾವತಿಯವರು ಪತಿಗೆ ಅನುಕೂಲೆ ಅನುರೂಪ ಸತಿ. ಶ್ರೀ ಭಟ್ಟರ ಸಂಸಾರ ಈಗಿನ ಕಾಲಕ್ಕೆ ಸ್ವಲ್ಪ ದೊಡ್ಡದು ಎಂದು ಕೆಲವರಿಗೆ ಅನಿಸಿದರೂ- ಹುಟ್ಟಿ-ಕೆಟ್ಟಿ' ಮಕ್ಕಳ ಸಾಲಿಗೆ ಅವರ ಮಕ್ಕಳಾರೂ ಬರಲಿಲ್ಲ - ಬರಲಾರರು. ಮನೆಯ ವಾತಾವರಣವೇ ಹಾಗಿದೆ. ತುಂಡು ತುಂಡಾದ ಸಂಸಾರಗಳಿರುವ ಇಂದಿನ ದಿನಗಳಲ್ಲಿ ತುಂಬು ಸಂಸಾರ ನೋಡಲು ಅಪರೂಪ- ಆದರೂ ಅಂದ. ಗೀತಾ, ಪುಷ್ಪಾ, ವಿಶ್ವನಾಥ, ಶ್ರೀನಾಥ, ರೋಹಿಣಿ, ಭಾಗ್ಯ, ತಿಮ್ಮಪ್ಪ- ಶ್ರೀಯುತರ ಪುತ್ರ-ಪುತ್ರಿಯರು.

ತಮ್ಮ ೧೮ನೇ ವಯಸ್ಸಿಗೆ ಅಂದರೆ ೧೯೪೬ರಲ್ಲಿ ಶ್ರೀಯುತರು ಅಖಿಲ ಭಾರತ ಕಾಂಗ್ರೆಸ್ ಪಕ್ಷದ ಪ್ರಾಥಮಿಕ ಹಾಗೂ ಸಕ್ರಿಯ ಸದಸ್ಯರಾದರು. ಒಂದೇ ಪಕ್ಷದಲ್ಲಿದ್ದುಕೊಂಡು ಸುದೀರ್ಘಕಾಲ ಸೇವೆ ಸಲ್ಲಿಸುವುದು ಅಷ್ಟೊಂದು ಸುಲಭಸಾಧ್ಯವಲ್ಲ. ಹಲವು ವ್ಯಕ್ತಿಗಳಿಗೆ ಅದು ಒಗ್ಗುವ ವಿಚಾರವೂ ಅಲ್ಲ ಬಿಡಿ. 'ಕ್ಷಣಚಿತ್ತ-ಕ್ಷಣ-ಪಿತ್ತ' ಎಂಬಂತಿರುವ ವ್ಯಕ್ತಿಗಳೇ ಹೆಚ್ಚೆ ಹೆಚ್ಚೆಗೂ ನೋಡಲು ಸಿಕ್ಕುವ ಕಾಲವಿದು. ಶ್ರೀಯುತರು ಹಾಗಲ್ಲ. ೪೩ ವರ್ಷಗಳ ಅಖಂಡ ಸೇವೆಯನ್ನು ಏಕಪಕ್ಷೀಯ ನಿಷ್ಠರಾಗಿ ಸಲ್ಲಿಸುವ ಮೂಲಕ ತುಷ್ಟರಾದವರು. ಪ್ರಸ್ತುತದಲ್ಲಿ, ಯಾವುದೇ ರಾಜಕೀಯ ಪಕ್ಷದಲ್ಲಿಯೂ ಇಲ್ಲ ರಾಜಕೀಯ ಜಂಜಾಟದಲ್ಲಿಯೂ ಬಿದ್ದಿಲ್ಲ. ತಮ್ಮ ಕೈಲಾದ ಮಟ್ಟದ ಮಟ್ಟಿಗೆ ಸಾಮಾಜಿಕ ಹಾಗೂ ಸಾಹಿತ್ಯ ಸೇವೆ ಮಾಡಿಕೊಂಡು ನಿರಾಳವಾಗಿದ್ದಾರೆ.

ಸಾಗರ ಪುರಸಭೆಯ ಸದಸ್ಯರಾಗಿ - ಮೂರು ಅವಧಿಯ ವಿಸ್ತೃತ ಸೇವೆ ಸಲ್ಲಿಸಿದವರು. ೧೯೫೩ರಿಂದ ಒಂಭತ್ತು ವರ್ಷಗಳ ಕಾಲ ಸೇವೆ ಸಲ್ಲಿಸಿದ ಹಿರಿಮೆಯು ಅವರ ಪಾಲಿಗಿದೆ. ೧೯೫೫ರಲ್ಲಿ ಸಾಗರ ತಾಲೂಕು ಕಾಂಗ್ರೆಸ್ ಪಕ್ಷದ ಪ್ರಧಾನ ಕಾರ್ಯದರ್ಶಿಯಾದರು. ಅಷ್ಟೇ ಅಲ್ಲ ಶಿವಮೊಗ್ಗ ಜಿಲ್ಲೆಯ ಕಾಂಗ್ರೆಸ್ ಸಮಿತಿಗೂ ಆಯ್ಕೆಯಾಗುವ ಮೂಲಕ ತಮ್ಮ ಕಾರ್ಯಕ್ಷೇತ್ರವನ್ನು ವಿಸ್ತರಿಸಿಕೊಂಡರು.

೧೯೬೧ರಲ್ಲಿ - 'ಶರಾವತಿ ನೀರು ಮುಳುಗಡೆ ಪುನರ್ವಸತಿ ಸಮಿತಿ' ಎಂಬ ರಾಜ್ಯ ಮಟ್ಟದ ಸಮಿತಿಗೆ ರಾಜ್ಯ ಸರ್ಕಾರದ ಪ್ರತಿನಿಧಿಯಾಗಿ ಆರು ವರ್ಷಗಳಷ್ಟು ದೊಡ್ಡ ಅವಧಿಯ ಸೇವೆ ಸಲ್ಲಿಸಿದರೆಂದರೆ ಸರ್ಕಾರಕ್ಕೆ ಇವರ ಮೇಲೆ ಅದೆಷ್ಟು ವಿಶ್ವಾಸ ಇತ್ತೆನ್ನುವುದು ಎಂಥಹ ದಡ್ಡನಿಗೂ ಅರ್ಥವಾದೀತು.

೧೯೬೭ರಲ್ಲಿ ಮಲೆನಾಡು ಅಡಿಕೆ ಮಾರಾಟದ ಸಹಕಾರ ಸಂಘ ಶಿವಮೊಗ್ಗ - ಇದರ ನಿರ್ದೇಶಕರಾಗಿ ಸತತ ೨೧ ವರ್ಷಗಳ ದೀರ್ಘವಾದ ಸೇವೆ ಸಲ್ಲಿಸಿದರೆಂದ ಮೇಲೆ ಇವರದೆಷ್ಟು ಜನಪ್ರಿಯ ಗಣ್ಯರಾಗಿದ್ದರೆನ್ನುವುದನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತದೆ.

ಜೊತೆಗೆ ೧೯೬೯ರಲ್ಲಿ ಸಾಗರ ತಾಲೂಕು ಕಾಂಗ್ರೆಸ್ ಅಧ್ಯಕ್ಷರಾಗಿ ೫ ವರ್ಷಗಳವರೆಗೆ ಕೆಲಸ ಮಾಡಿ - ಪಕ್ವತೆಯಲ್ಲಿ ಮೆರೆದವರು.

೧೯೭೪ರಲ್ಲಿ ಸಾಗರ ತಾಲೂಕು ವ್ಯವಸಾಯೋತ್ಪನ್ನ ಮಾರಾಟ ಸಂಘಟ ಅಧ್ಯಕ್ಷರಾಗಿ ಆರು ವರ್ಷಗಳು ಕೆಲಸ ಮಾಡಿದರು. ಹಾಗೆಯೇ ಸಾಗರ ಕೃಷಿ ಭೂ ಅಭಿವೃದ್ಧಿ ಬ್ಯಾಂಕಿನ ಅಧ್ಯಕ್ಷರಾಗಿ ಐದು ವರ್ಷಗಳ ಸತತ ಸೇವೆ ಮಾಡಿದರು. ೧೯೮೦ರಲ್ಲಿ ಮಲೆನಾಡು ಅಭಿವೃದ್ಧಿ ಪ್ರತಿಷ್ಠಾನದ ಉಪಾಧ್ಯಕ್ಷರಾಗಿ ಆಯ್ಕೆಯಾಗಿ ೧೬ ವರ್ಷಗಳ ಕಾಲ ಕೆಲಸ ಮಾಡಿದ್ದಾರೆ.

೧೯೮೪ ರಲ್ಲಿ, ಶಿವಮೊಗ್ಗ ಜಿಲ್ಲಾ ಕಾಂಗ್ರೆಸ್ ಸಮಿತಿ ಉಪಾಧ್ಯಕ್ಷರಾಗಿ ಆಯ್ಕೆಯಾಗಿ ಆರು ವರ್ಷಗಳವರೆಗಿದ್ದರು. ೧೯೮೮ರಲ್ಲಿ ಮಲೆನಾಡು ಅಭಿವೃದ್ಧಿ ಪ್ರತಿಷ್ಠಾನ ಬೆಳ್ಳಿ ಹಬ್ಬದ ಕಾರ್ಯಾಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದ್ದಾರೆ. ೧೯೯೬ರಲ್ಲಿ ಭಾರತೀಯ ವಿದ್ಯಾಭವನದ ಶಿವಮೊಗ್ಗಾ ಕೇಂದ್ರದ ಉಪಾಧ್ಯಕ್ಷರಾಗಿ ಆಯ್ಕೆಗೊಂಡಿದ್ದಾರೆ. ಅದಲ್ಲದೆ ತಾಳಗುಪ್ಪದಲ್ಲಿ ನಡೆಯಲಿರುವ ಅಖಿಲ ಕರ್ನಾಟಕ ಸಮಗ್ರ ಯಕ್ಷಗಾನ ಸಮ್ಮೇಳನದ ಸ್ವಾಗತ ಸಮಿತಿಗೆ ಕಾರ್ಯಾಧ್ಯಕ್ಷರಾಗಿಯೂ ಆಯ್ಕೆಯಾಗಿದ್ದಾರೆ.

ಇಲ್ಲಿ ಒಂದು ಹೇಳುವುದು ಸಮಂಜಸವಾಗುತ್ತದೆ. ಶ್ರೀಯುತ ಭಟ್ಟರು ದಕ್ಷ ಆಡಳಿತಗಾರರು, ನಿಸ್ವಾರ್ಥ ಸೇವೆಗಾಗಿ ಹೆಸರಾದವರು. ಶುದ್ಧ ಹಸ್ತರೆಂದು ಪ್ರಖ್ಯಾತರಾದವರು. ವಿವಿಧ ಸಂಘ-ಸಂಸ್ಥೆಗಳಲ್ಲಿ ಕೆಲಸಮಾಡುವಾಗ, ಬೇರೆ-ಬೇರೆಯದಾದ ದೊಡ್ಡ ದೊಡ್ಡ ಹುದ್ದೆಗಳನ್ನು ಅಲಂಕರಿಸುವಾಗ ಇರುವ ಉತ್ಸಾಹ ನಿಸ್ವಾರ್ಥ, ಮನೋಭಾವನೆ, ಆಸ್ಥಾನಕ್ಕೆ ಹೋದಾಗ ಇರುವುದು ಅಪರೂಪ. ಭ್ರಷ್ಟತೆಯು ತಾಂಡವಾಡುತ್ತಿರುವ ವಿವಿಧ ವಿಭಾಗಗಳಲ್ಲಿ ಒಬ್ಬರಾಗಿ ಕೆಲಸ ಮಾಡುವುದೆಂದರೆ ತನ್ನ ತನವನ್ನು ಕಾಪಾಡಿಕೊಂಡು ಹೋಗುತ್ತೇನೆನ್ನುವುದಾದರೆ ಮೂರ್ಖತನ ಎನ್ನುವವರೂ ಉಂಟು. ಆದರೆ ಶ್ರೀಯುತರು ಅಪರಂಜಿ ಎನಿಸಿಕೊಂಡಿರುವುದು ಅವರ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿ.

ದೊಡ್ಡವರು ಯಾವಾಗಲೂ ದೊಡ್ಡದ್ದನ್ನೇ ವಿಚಾರ ಮಾಡುತ್ತಾರೆ ಎನ್ನುವುದಕ್ಕೆ ಶ್ರೀಯುತರು ಉತ್ತಮ ನಿದರ್ಶನ.

೧೯೫೭ರಲ್ಲಿಯೇ 'ಜಲಂಧರ ಪ್ರಕಟನಾಲಯ' ಎಂಬ ಸ್ವಂತ ಪುಸ್ತಕ ಪ್ರಕಾಶನಾ ಸಂಸ್ಥೆಯೊಂದನ್ನು ಆರಂಭಿಸಿದರು. ೧೯೪೯ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಕವಿಗೋಷ್ಠಿಯಲ್ಲಿ ಪ್ರಥಮವಾಗಿ ಭಾಗವಹಿಸಿದರು. ೧೯೫೮ರಲ್ಲಿ ಮೈಸೂರು ಆಕಾಶವಾಣಿಯಲ್ಲಿ ಪ್ರಥಮ ಭಾಷಣ ಮಾಡಿದರು. ೧೯೬೧ರಲ್ಲಿ ಶಿವಮೊಗ್ಗ ಜಿಲ್ಲಾ ಬರಹಗಾರರ ಮಂಡಳಿಯ ಅಧ್ಯಕ್ಷರಾಗಿ ಆಯ್ಕೆಯಾದರು; ಎಂಟು ವರ್ಷಗಳ ಕಾಲ ಸೇವೆಯನ್ನು ಸಲ್ಲಿಸಿದರು. ೧೯೭೬ರಲ್ಲಿ ಶಿವಮೊಗ್ಗದಲ್ಲಿ ನಡೆದ ಅಖಿಲ ಭಾರತ ೪೯ನೇ ಕನ್ನಡ ಸಾಹಿತ್ಯ ಸಮ್ಮೇಳನದ ಸ್ವಾಗತ ಸಮಿತಿಯ ಉಪಾಧ್ಯಕ್ಷರಾದರು. ಇದಕ್ಕೂ ಮುಂಚೆ ಅಂದರೆ, ೧೯೬೮ರಲ್ಲಿ ಕಲೆ, ಸಾಹಿತ್ಯ, ಸಂಸ್ಕೃತಿ, ನಾಟಕಗಳ ಅಭಿವೃದ್ಧಿಗಾಗಿ ಹಾಗೂ ವಿಕಾಸಕ್ಕಾಗಿ ಸ್ಥಾಪನೆಯಾದ 'ಕನ್ನಡ ಸಂಘದ' ಅಧ್ಯಕ್ಷರಾಗಿ' ಸತತ ಎಂಟು ವರ್ಷ ಸೇವೆ ಮಾಡಿದ್ದಾರೆ. ೧೯೮೦ರಲ್ಲಿ ಸಾಗರದಲ್ಲಿ ನಡೆದ ಶಿವಮೊಗ್ಗ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ಸ್ವಾಗತ ಸಮಿತಿ ಅಧ್ಯಕ್ಷರಾಗಿ ಅವಿರತ ಸೇವೆ ಸಲ್ಲಿಸಿದರು. ೧೯೯೨ರಲ್ಲಿ ಸಾಗರ ತಾಲ್ಲೂಕು ಕನ್ನಡ ಸಾಹಿತ್ಯ

ಪರಿಷತ್ತಿನ ಅಧ್ಯಕ್ಷರಾಗಿ – ಅಂದಿನಿಂದ ಇಂದಿನವರೆಗೂ ಸಂಸ್ಥೆಯ ಸರ್ವತೋಮುಖ ಅಭಿವೃದ್ಧಿಗಾಗಿ ಉಳಿವಿಗಾಗಿ ಚಿರಂತನ ಸೇವೆ ಮಾಡುತ್ತಾ ಬಂದಿದ್ದಾರೆ.

ಇವಷ್ಟೇ ಅಲ್ಲದೆ ೧೯೭೬ರಲ್ಲಿ 'ಆರಾಧನೆ' ಎಂಬ ಸ್ಮರಣ ಸಂಚಿಕೆಗೆ ಸಂಪಾದಕರಾಗಿಯೂ, ೧೯೮೮ರಲ್ಲಿ 'ಸಂಭ್ರಮ' ಎಂಬ ಸ್ಮರಣ ಸಂಚಿಕೆಗೆ ಪ್ರಧಾನ ಸಂಪಾದಕರಾಗಿಯೂ ಅಭಿಮಾನಿಗಳಿಂದ ಜವಾಬ್ದಾರಿವಹಿಸಿಕೊಂಡು ತಮ್ಮದೇ ಆದ ಶಿಸ್ತಿನಿಂದ ಕೂಡಿದ ಕೊಡುಗೆ ನೀಡಿದ್ದಾರೆ.

ಸಾಗರ ತಾಲೂಕಿನ ವ್ಯಾಪ್ತಿಯಲ್ಲಿ ಬರುವ ಉದಯೋನ್ಮುಖ ಕವಿಗಳ ಕವನಗಳ ಜೊತೆಗೆ ಕೆಲವು ಹಿರಿಯ ಕವಿಗಳ ಕವನಗಳನ್ನು ಸೇರಿಸಿ ಪುಸ್ತಕ ರೂಪದಲ್ಲಿ ಹೊರತಂದ 'ಕಾವ್ಯ-ಸಾಗರ' ಕವನ ಸಂಕಲನ – ಶ್ರೀ ಟಿ. ಮಹಾಬಲೇಶ್ವರ ಭಟ್ಟರ 'ಮಸ್ತಿಷ್ಕಶಿಶು' ಎಂದು ನಾನು ಕರೆಯುತ್ತೇನೆ. ಆದರೆ ಅದಕ್ಕೆ ಕನ್ನಡಿಗರಾದ ನಮ್ಮಿಂದ ಬಂದ ಪ್ರೋತ್ಸಾಹ ಮಾತ್ರ ಗಮನಾರ್ಹವಾದುದಲ್ಲ ಎಂದು ಅಷ್ಟೇ ವಿಷಾದದಿಂದ ನಾನು ಹೇಳಬೇಕಾಗಿದೆ.

ಸಾಹಿತಿಗಳಾಗಿ ಶ್ರೀಭಟ್ಟರು ಕನ್ನಡ ನಾಡಿನ ದಿನ ಪತ್ರಿಕೆ, ವಾರಪತ್ರಿಕೆ, ಮಾಸಪತ್ರಿಕೆಗಳಿಗೆ ಲೇಖನಗಳನ್ನು ಬಹಳ ಹಿಂದಿನಿಂದಲೂ ಬರೆಯುತ್ತಾ ಬಂದಿದ್ದಾರೆ. ಇದುವರೆಗೆ ಮೂನ್ನೂರಕ್ಕೂ ಹೆಚ್ಚು ಲೇಖನಗಳು ಪ್ರಕಟಣೆಗೊಂಡಿವೆ.

ಇಷ್ಟೇ ಅಲ್ಲದೆ – 'ಗುಲಾಬಿ', 'ತೋರಣ', (ಕಥಾ ಸಂಕಲನಗಳು) 'ಹೂಮಾಲೆ' 'ಋತುಗಾನ' (ಕವನ ಸಂಗ್ರಹಗಳು) 'ಅಣ್ಣ ತಂಗಿ', 'ವ್ಯಾಘ್ರಮುಖ', 'ಮಾನವ ರಾಕ್ಷಸರು' (ಕಾಂಬರಿಗಳು), 'ಹೊಸೂರಿನ ಹಲವರು', 'ಮೈಸೂರಿನ ಉಕ್ಕಿನ ಮುಷ್ಯ' (ಜೀವನ ಚಿತ್ರಣ), 'ಸಾಹಿತ್ಯ ಶಿಲ್ಪಿಗಳು' – (ಭಾಗ-೧, ಭಾಗ-೨)' (ಸಾಹಿತಿಗಳ ಪರಿಚಯ)' ಕನ್ನಡ ಕುಲದೀಪಕರು' (ಸಾಹಿತಿಗಳ ಪರಿಚಯ)– ಈ ಪುಸ್ತಕಗಳನ್ನು ಹೊರ ತಂದವರು.

ಪ್ರಸ್ತುತದಲ್ಲಿ (೧೯೯೬) ಬೆಂಗಳೂರಿನ ಸಂಯುಕ್ತ ಕರ್ನಾಟಕ ಪತ್ರಿಕೆಗೆ 'ಬೇವು-ಬೆಲ್ಲ' ಅಂಕಣಕಾರರಾಗಿಯೂ, ಶಿವಮೊಗ್ಗದ ಜನವಾರ್ತೆ ಪತ್ರಿಕೆಗೆ 'ಸಿಮ್ಮೊಡಸೆ' ಅಂಕಣಕಾರರಾಗಿಯೂ ನಾನಾ ವಿಚಾರಗಳನ್ನು ಕುರಿತು ಬರವಣಿಗೆ ಮಾಡುತ್ತಿದ್ದಾರೆ. ಇಂಥಹ ಅಂಕಣ ಪ್ರಕಾರಗಳು ಎಲ್ಲರಿಗೂ ಸಿದ್ಧಿಸುವ ಕಲೆಯಲ್ಲ. ನಮ್ಮ ಮಹಾಬಲೇಶ್ವರ ಭಟ್ಟರು ಅದನ್ನೂ ಮೈಗೂಡಿಸಿಕೊಂಡ ಬಲಾಢ್ಯರೇ ಸರಿ.

ಗಂಭೀರ ವ್ಯಕ್ತಿತ್ವದ, ಶಿಸ್ತಿಗೆ ಮತ್ತೊಂದು ಹೆಸರಾಗಿರುವ, ಅಚ್ಚುಕಟ್ಟುತನದಲ್ಲಿ ತಮ್ಮದೇ ಛಾಪು ಹೊಂದಿರುವ ಶ್ರೀಯುತರು ಅಷ್ಟೇ ಸರಳ ಜೀವಿ. ಸ್ನೇಹಕ್ಕೆ ಬಹು ಬೇಗ ಮಾರುಹೋಗುವವರು. ನೇರಮಾತು, ಸ್ಪಷ್ಟ ಉತ್ತರ ಇವರ ಶೈಲಿ.

ಕ್ರಮಬದ್ಧವಾದ ಜೀವನ ನಡೆಸಿರುವುದರಿಂದ ಇಳಿವಯಸ್ಸಿನಲ್ಲಿಯೂ - ಯುವಕರನ್ನು ನಾಚಿಸುವಂತ ಉತ್ಸಾಹದ ಚಿಲುಮೆಯಂತಿದ್ದಾರೆ. ಅವರಿಗೆ ೭೦ ವರ್ಷ ವಯಸ್ಸು ಎಂದಾಗ ನನಗೇ ನಂಬಲಾಗಲಿಲ್ಲ-ಥಟ್ಟನೇ.

ಒಂದು ವಿಷಯವನ್ನು ಮರೆತೆ ಎನ್ನಿಸುತ್ತದಲ್ಲವೇ ? ಹೌದು, ೧೯೭೫ನೇ ಇಸವಿಯಲ್ಲಿ, ಅವರ ೫೦ನೇ ಹುಟ್ಟು ಹಬ್ಬದ ಸಂದರ್ಭದಲ್ಲಿ, ವಿವಿಧ ಕ್ಷೇತ್ರಗಳಲ್ಲಿ ಸಲ್ಲಿಸಿದ ಸೇವೆಯ ದ್ಯೋತಕವಾಗಿ, ಸಾಗರ ಪುರಸಭಾ ಬಯಲು ರಂಗಮಂದಿರದಲ್ಲಿ ಸನ್ಮಾನ ಏರ್ಪಡಿಸಲಾಗಿತ್ತು. ಸಮಾರಂಭದ ಘನ ಅಧ್ಯಕ್ಷತೆ ಯಾರದ್ದು ಗೊತ್ತೇ? ಆಗಿನ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಹಂಪ ನಾಗರಾಜಯ್ಯನವರಿಂದ. ಆ ಸಂದರ್ಭದಲ್ಲಿ - 'ಮಹಾನಂದ' ಎಂಬ ಅಭಿನಂದನಾ ಗ್ರಂಥವನ್ನು ಅರ್ಪಿಸಲಾಗಿತ್ತು. ಸಾಗರದ 'ಮಹಾಬಲ' ರನ್ನು ಗೌರವಿಸಲಾಗಿತ್ತು.

ಶ್ರೀಯುತ ಟಿ. ಮಹಾಬಲೇಶ್ವರ ಭಟ್ಟರು ಆಯುರಾರೋಗ್ಯವಂತರಾಗಿ ನೂರ್ಕಾಲ ಬಾಳಲಿ 'ಶತಮಾನೋತ್ಸವ' ಆಚರಿಸುವ ಸೌಭಾಗ್ಯ ನಮ್ಮದಾಗಲೀ ಎಂದು ಶ್ರೀ ವಿಘ್ನೇಶ್ವರನಲ್ಲಿ - ಶ್ರೀ ರಾಜರಾಜೇಶ್ವರಿಯಲ್ಲಿ ಪ್ರಾರ್ಥಿಸುತ್ತೇನೆ.

# ಮಾಸದ ನೆನಪುಗಳು

**– ಪಿ. ಆರ್. ತಿಪ್ಪೇಸ್ವಾಮಿ**

೧೯೮೫ರ ಆಗಸ್ಟ್ ೫ರ ಭಾನುವಾರ ಮೈಸೂರಿನಲ್ಲಿ ಪ್ರಥಮ ಬಾರಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಅಧ್ಯಕ್ಷ ಪ್ರೋ ಕೆ.ಎಸ್. ನಿಸಾರ್‌ಅಹಮದ್‌ರಿಗೆ ಆದ್ದೂರಿಯ ಸನ್ಮಾನ. ಪ್ರೊ. 'ಎಚ್ಚೆಸ್ಕೆ' ಅವರ ಅಧ್ಯಕ್ಷತೆ. ಚದುರಂಗರಿಂದ ಕವಿ ನಿಸಾರ್ ಅವರಿಗೆ ಸನ್ಮಾನ. ಇದನ್ನು ಏರ್ಪಡಿಸಿದ ನನ್ನನ್ನು ಮಿತ್ರ ರಾಜಶೇಖರ ಕದಂಬರು ಅಭಿನಂದಿಸಿದರು.

ಅಂದೇ ಸಂಜೆ ನಿಸಾರರ ಜೊತೆಗೆ ಸಾಗರದ ಕಡೆ ಪ್ರವಾಸ. ಮಡಿಕೇರಿಯಲ್ಲಿ ಅಂದು ರಾತ್ರಿ ವಸತಿ. ೧೮೭೯ರಲ್ಲಿ ನಿರ್ಮಾಣಗೊಂಡ ಭವ್ಯ ಅತಿಥಿ ಗೃಹದಲ್ಲಿ ಅಂದು ರಾತ್ರಿ ಕಳೆದ ವೇಳೆ ಮರೆಯಲಾರೆವು. ಮರುದಿನ ಸಾಹಿತಿಗಳು ಅಧ್ಯಾಪಕರು, ಪತ್ರಿಕೋದ್ಯಮಿಗಳ ಜೊತೆ ವಿಚಾರಗೋಷ್ಠಿ. ನಿಸಾರ್ ಅವರು ಅಕಾಡೆಮಿಯ ಕಾರ್ಯ ವಿವರ ನೀಡಿದರು. ಇದೇ ರೀತಿ ಮಂಗಳೂರಿನಲ್ಲೂ ಒಂದು ಗೋಷ್ಠಿ. ಮರುದಿನ ಉಡುಪಿ, ಕೊಲ್ಲೂರು ಮಾರ್ಗ ಘಟ್ಟವೇರಿ ಸಾಗರ ನಗರ ಸೇರಿದಾಗ ಸಂಜೆಯಾಗಿತ್ತು. ದಾರಿಯಲ್ಲಿ ನಿಸರ್ಗ ರಮಣೀಯ ದೃಶ್ಯ ಕವಿಹೃದಯವನ್ನು ತಣಿಸಿತ್ತು. ನಮಗಾಗಿ ಸಾಗರದ ಬಸ್ ನಿಲ್ದಾಣದಲ್ಲಿ ಮಿತ್ರರ ಗುಂಪು ಕಾದಿತ್ತು. ಅತಿಥಿ ಗೃಹಕ್ಕೆ ಕರೆತಂದರು. ಮಿತ್ರ ಟಿ. ಮಹಾಬಲೇಶ್ವರ ಭಟ್ಟರು ನಮ್ಮನ್ನು ಕಂಡು ನಿಮ್ಮ ಪ್ರಯಾಣ ಹೇಗಿತ್ತು ?' ಎಂದು ವಿಚಾರಿಸಿದರು.

'ಕಲಾವಿದರು ಜೊತೆಗಿದ್ದ ಮೇಲೆ ಕೇಳಬೇಕೆ ? ಪ್ರಯಾಣ ತುಂಬಾ ಸೊಗಸಾಗಿತ್ತು. ಪ್ರಯಾಣದ ಉದ್ದಕ್ಕೂ ನಿಮ್ಮದೇ ವಿಚಾರ, ನಿಮ್ಮದೇ ಗುಣಗಾನ ನಮ್ಮ ತಿಪ್ಪೇಸ್ವಾಮಿಗಳದ್ದು' ಎಂದರು ನಿಸಾರ್.

ಸಾಗರದಲ್ಲಿ ಅಡಿಕೆ ಮಾರಾಟ ಸಹಕಾರ ಸಂಘದ ಕಟ್ಟಡದ ಮಹಡಿಯಲ್ಲಿ ಸಾಹಿತ್ಯಾಸಕ್ತರಗೋಷ್ಠಿ ಕರೆಯಲಾಗಿತ್ತು. ಸ್ಥಳೀಯ ಬರಹಗಾರರು, ಪತ್ರಿಕಾ ಪ್ರತಿನಿಧಿಗಳು, ಸಾಹಿತ್ಯಾಸಕ್ತರು ತುಂಬಿದ ಸಭೆ. ಮಹಾಬಲೇಶ್ವರ ಭಟ್ಟರ ಅಧ್ಯಕ್ಷತೆ ಎಂದು ನೆನಪು. ಮೂರು ವರ್ಷಗಳ ಕಾಲ ಸಾಹಿತ್ಯ ಅಕಾಡೆಮಿ ಮಾಡಬೇಕಾದ ಚಟುವಟಿಕೆಯನ್ನು ನಿಸಾರ್ ಅವುರು ವಿವರಿಸಿದರೂ, ಇದೊಂದು ಸಹೃದಯರ ಪರಿಮಿತ ಸ್ನೇಹ ಕೂಟದಂತಿತ್ತು.

ಅಂದು ನಮ್ಮನ್ನು ಮಹಾಬಲೇಶ್ವರ ಭಟ್ಟರು ತಮ್ಮ ಕಾರಿನಲ್ಲಿ ಸಾಗರದ ಸಮೀಪದ ಅವರ ಬೇದೂರಿಗೆ ಕರೆತಂದರು. 'ಗುರುಕೃಪಾ' ಅಡಿಕೆ ತೋಟದ ನಡುವೆ ಇರುವ ಭವ್ಯವೂ, ಸುಂದರವೂ ಆದ ಭಟ್ಟರ ಮನೆ, ನಾವು ಮನೆಯ ಒಳಗೆ ಹೋದೆವು. ಅಲ್ಲಿ ಕೆಲವಾರು ಭಾವಚಿತ್ರಗಳು ನಮ್ಮ ಕಣ್ಣಿಗೆ ಬಿದ್ದವು. ಒಂದು ಭಟ್ಟರ ತಂದೆ ವಿಶ್ವನಾಥ ಭಟ್ಟರದು. ಮತ್ತೊಂದು ಅವರ ಮಾತೆ ವೆಂಕಮ್ಮನವರದು. ಭಟ್ಟರು ತಮ್ಮ ಪತ್ನಿ ಪದ್ಮಾವತಮ್ಮನವರ ಪರಿಚಯ ಮಾಡಿಕೊಟ್ಟರು. ಕೂರಲು ತಿಳಿಸಿದರು. ಮೆತ್ತನೆ ಹಾಸಿಗೆ ಒರಗುದಿಂಬು. ಶುಂಟಿ ಬೆಲ್ಲದ ಪಾನಕ ನೀಡಿದರು. ನಿಸಾರರು ಅದು ಇದು ಎಂದು ಭಟ್ಟರ ಪೂರ್ವಿಕರ ವೃತ್ತಾಂತವನ್ನೆಲ್ಲಾ ವಿಚಾರಿಸಿಕೊಂಡರು. ತಾಜಾ ತುಪ್ಪದಿಂದ ತಯಾರಿಸಿದ ತಿಂಡಿತಿನಿಸು ನಮ್ಮ ಮುಂದೆ ಬಂದಿತು. ನಾಲಿಗೆ ಚಪ್ಪರಿಸಿದ ಕವಿಗಳು ತೃಪ್ತರಾದಂತೆ ಕಂಡರು. ನಮ್ಮ ಮುಂದೆ ಅಡಿಕೆ ಎಲೆಯ ಚಿತ್ತದ ತಟ್ಟೆಯೊಂದನ್ನು ಇರಿಸಲಾಗಿತ್ತು. ಅದರಲ್ಲಿ ಚಿಗುರೆಲೆ, ಹಸಿಗೋಟು ಅಡಿಕೆ, ಅಡಿಕೆ ಪುಡಿ, ಕೊಬರಿ ಚೂರುಗಳು, ದಾಲ್‌ಚಿನ್ನಿ, ಲವಂಗ, ಏಲಕ್ಕಿ ಜೊತೆಗೆ ಬೆಳ್ಳಿ ಸರಪಳಿಯಿಂದ ಕೂಡಿದ ಗೋಳಾಕಾರದ ಒತ್ತಾಳೆಯ ಸುಣ್ಣದ ಅಂಡೆ. ಇದು ವಿಶೇಷವಾಗಿ ನನ್ನನ್ನು ಆಕರ್ಷಿಸಿತು. ಕಲಾತ್ಮಕವೂ, ಗಾತ್ರದಲ್ಲಿ ಅತಿ ದೊಡ್ಡದೂ ಆಗಿತ್ತು. ಅದನ್ನು ಎರಡು ಕೈಗಳಿಂದ ಎತ್ತಿಕೊಂಡೆ. ಇದನ್ನೆ ಗಮನಿಸಿದ ನಿಸಾರ್'ಸ್ವಾಮಿ ಭಟ್ಟರೇ, ನಿಮ್ಮ ಈ ಸುಣ್ಣಕಾಯಿ ಅಂಡೆಯ ಮೇಲೆ ಈ ಆಸಾಮಿ ಕಣ್ಣುಬಿದ್ದಿದೆ, ಇದನ್ನು ಬಿಡೋ ಇಸಂ ಅಲ್ಲ, ನಮ್ಮ ತಿಪ್ಪೇಸ್ವಾಮಿ' ಎಂದು ಭಟ್ಟರನ್ನು ಎಚ್ಚರಗೊಳಿಸಬೇಕೆ ?

ನಾನು ಆ ಸುಣ್ಣಕಾಯಿ ಬಗ್ಗೆ, ಅದರ ಕಲೆ ಬಗ್ಗೆ, ಅದನ್ನು ರಚಿಸಿದ ಗ್ರಾಮೀಣ ಕುಶಲ ಕರ್ಮಿ ಬಗ್ಗೆ ಹೊಗಳತೊಡಗಿದೆ. 'ಭಟ್ಟರೇ ಎಷ್ಟೋ ಅಂಡೆಗಳನ್ನು ನಮ್ಮ ಜಾನಪದ ವಸ್ತು ಸಂಗ್ರಹಾಲಯಕ್ಕೆ ಸಂಗ್ರಹಿಸಿರುವೆ. ಆದರೆ ಇಷ್ಟು ದೊಡ್ಡ ಗಾತ್ರದ್ದನ್ನು ಕಂಡದ್ದು ನಿಮ್ಮಲ್ಲೆ - ದಯವಿಟ್ಟು, ದಾನ ಮಾಡಿ ನಿಮ್ಮ ತಂದೆಯವರ ಹೆಸರಿನಲ್ಲಿ' ಎಂದು ಅಂಗಲಾಚಿದೆ. ಈ ನನ್ನ ಮಾತುಗಳು ಭಟ್ಟರ ಮಡದಿ ಕಿವಿಗೆ ಬಿದ್ದಿರಬೇಕು. ಅವರು ಅಡಿಗೆ ಕೋಣೆಯಿಂದ ಬಂದವರೇ ' ರೀ... ಇದು ನಿಮ್ಮ ತಾತನವರ ಕಾಲದ್ದಲ್ಲವೇ ? ಅವರ ನೆನಪಿಗಾಗಿ ಒಂದು ವಸ್ತು ನಮ್ಮಲ್ಲಿರಬಾರದೆ? ಎಂದು ಕೇಳಿಕೊಂಡರು. ಭಟ್ಟರಿಗೆ ಏನು ಹೇಳಬೇಕೆಂಬುದೇ ತಿಳಿಯದಾಯಿತು. ತಟ್ಟನೇ ಏನೋ ನೆನಪು ತಂದುಕೊಂಡರು. 'ಇದೇ ರೀತಿ ಒಂದನ್ನು ಮಾಡಿಸಿ ಕೊಟ್ರೆ ಆಗೊಲ್ವೆ ತಿಪ್ಪೇಸ್ವಾಮಿಗಳೇ ?' ಎಂದು ನಯವಾಗಿ ಕೇಳಿದರು.'ಹಾಗೆ ಮಾಡಿ ಭಟ್ಟರೆ' ಎಂಬ ನಿಸಾರ್ ಅವರ ರಾಜೀಸೂತ್ರ. ಕೈಗೆ ಬಂದದ್ದು ಬಾಯಿಗೆ ಬರಲಿಲ್ಲ ಎಂದು ಕೊಂಡೆ. ಭಟ್ಟರ ಪರ ವಕಾಲತ್ತು ವಹಿಸಿದ ನಿಸಾರರನ್ನು ಮನದಲ್ಲೇ ಶಪಿಸಿಕೊಂಡೆ. ಭಟ್ಟರ ಶ್ರೀಮಂತ ಗುಣ ಆತಿಥ್ಯ ಸವಿದು ಹೊರಬಂದೆವು. ಅಂದೇ

ರಾತ್ರಿ ನಾವಿಬ್ಬರೂ ಬೆಂಗಳೂರಿಗೆ ಪ್ರಯಾಣಿಸುವಂತೆ ಭಟ್ಟರು ಮಾಡಿದರು. ನಮ್ಮ ಈ ಪ್ರವಾಸದಲ್ಲಿ ಭಟ್ಟರ ಅಪ್ಪಟ ಸ್ನೇಹ ಹೃದಯವನ್ನು ಮೆಚ್ಚಿಕೊಂಡೆನಾದರೂ, ಸಿಗದೆಹೋದ ಅಪರೂಪದ ಜಾನಪದ ವಸ್ತು ಸುಣ್ಣಕಾಯಿ ಅಂಡೆ ಮಾತ್ರ ಸದಾ ನನ್ನ ಮುಂದೆ ನಿಂತಿದೆ.

ಸುಮಾರು ೧೯೫೭ ಕ್ಕೂ ಹಿಂದಿನ ವೇಳೆ ನಾನು 'ಮಲೆನಾಡು' ಪತ್ರಿಕೆ ಸಂಪಾದಕ ದಿ. ಎಂ. ವಿ. ಗುರುಬಸಪ್ಪ ಶೆಟ್ಟರ ಜೊತೆ ಸಾಗರದ ಕಡೆ ಹೋಗಿದ್ದೆ. ಮಹಾಬಲೇಶ್ವರ ಭಟ್ಟರನ್ನು ನನಗೆ ಮೊದಲು ಪರಿಚಯಿಸಿದವರು ಇವರೇ. ಭಟ್ಟರು ಅವರ ಅಂಗಡಿಯಲ್ಲಿ ಕುಳಿತಿದ್ದರು. 'ಜಲಂಧರ' ಪುಸ್ತಕ ಪ್ರಕಟಣೆಯನ್ನು ಪ್ರಾರಂಭಿಸಿದ್ದರು. ಒಂದೆರಡು ಪುಸ್ತಕಗಳನ್ನು ನನಗೆ ನೀಡಿದ್ದರು. ಭಟ್ಟರ ಸಾಹಿತ್ಯ ಸೇವೆ ಬಹುದೊಡ್ಡದು. ಇವರನ್ನು ಇವರ ಕನ್ನಡ ಸಾಹಿತ್ಯ ಚಟುವಟಿಕೆಯನ್ನು ಅನಕೃ, ತರಾಸು ಮೊದಲಾದವರು ಮೆಚ್ಚಿಕೊಂಡಿದ್ದರು. ಮಲೆನಾಡಿನ ಒಂದು ಮೂಲೆಯಲ್ಲಿ ಭಟ್ಟರ ಸಾಹಿತ್ಯ ಸೇವೆ ಕನ್ನಡ ನಾಡಿನಲ್ಲಿ ಹಳೇ ಮೈಸೂರಿನಲ್ಲಿ ತುಂಬಾ ಜನರ ಆಸಕ್ತಿಯನ್ನು ಕೆರಳಿಸಿತ್ತು. ಅಭಿಮಾನ ಪಡುವಂತೆ ಮಾಡಿತ್ತು. ಇದು ಸಣ್ಣ ಕೆಲಸವೇನಲ್ಲ.

ನಾನು ಬೆಂಗಳೂರಿಗೆ ಹೋದಾಗಲೆಲ್ಲಾ ಜೆ.ಪಿ. ನಗರದ ಬಡಾವಣೆಯಲ್ಲಿರುವ ಮಿತ್ರ ಕಲಾವಿದ ಚಂದ್ರನಾಥಚಾರ್ಯ ಅವರನ್ನು ಕಾಣದೆ ಬರುವುದಿಲ್ಲ. ಆಗ ಅಲ್ಲಿ ಭಟ್ಟರ ಪುತ್ರಿಯನ್ನು, ಅವರು ರಚಿಸಿದ ಚಿತ್ರಗಳನ್ನು, ಚುರುಕಿನ ಮೊಮ್ಮಗನನ್ನು ಕಾಣುವ ಅವಕಾಶ. ಆಗ ಭಟ್ಟರ ಆ ಸುಣ್ಣಕಾಯಿ ಅಂಡೆಯ ನೆನಪು ನಮ್ಮ ಮಾತಿನ ನಡುವೆ ಬರದೆ ಇರುವುದಿಲ್ಲ.

೧೯೯೫ರ ಡಿಸೆಂಬರ್ ಅಂತ ಕಾಣುತ್ತೆ. ನನ್ನನ್ನು ಶಿವಮೊಗ್ಗ ಜಿಲ್ಲಾಧಿಕಾರಿಗಳು ಕುಪ್ಪಳಿಗೆ ರಾಷ್ಟ್ರಕವಿ 'ಕುವೆಂಪು' ಅವರ ಮನೆಯ ನವೀಕರಣದ ಬಗ್ಗೆ ಸಮಾಲೋಚಿಸಲು ಕರೆದಿದ್ದರು. ನಿದ್ದೆಗೆಟ್ಟು ಶಿವಮೊಗ್ಗ ಬಸ್ ನಿಲ್ದಾಣ ಸೇರಿದಾಗ ಬೆಳಗಿನ ಮಬ್ಬುಗತ್ತಲು. ಭಟ್ಟರು ಸಾಗರದಿಂದ ಅದೇ ವೇಳೆ ಬಂದಿಳಿದರು. ನನ್ನನ್ನು ನೋಡಿದರು. ನಿಂತಲ್ಲೇ ಕ್ಷೇಮ ಸಮಾಚಾರ. ಅವರ ಸಹೃದಯಕ್ಕೆ ಹೆಮ್ಮೆ ತರಿಸಿತು. ಅವರ ಬರವಣಿಗೆ ನೇರ ಅಷ್ಟೇ ಸ್ಪಷ್ಟ. ಭಟ್ಟರದು ಗೌರವಾನ್ವಿತ ತುಂಬಿದ ಸಂಸಾರ. ಮಾಗಿದ ಮನಸ್ಸು. ಶ್ರೀಮಂತರಾದರೂ ಅದನ್ನ ತೋರಗೊಡದವರು. ಅನೇಕ ಸಂಘ ಸಂಸ್ಥೆಗಳಲ್ಲಿ ಪ್ರಾಮಾಣಿಕವಾಗಿ ದುಡಿದಿದ್ದಾರೆ. ಆದರ್ಶ ವ್ಯಕ್ತಿತ್ವದ ಮಹಾಬಲೇಶ್ವರ ಭಟ್ಟರು ಹೃದಯ ಶ್ರೀಮಂತರೂ ಕೂಡ.

ಒಮ್ಮೆ 'ಕುವೆಂಪು' ಅವರನ್ನು ಮೈಸೂರಿನ ಉದಯರವಿಯಲ್ಲಿ ಭೇಟಿ ಮಾಡಿದ್ದೆ. ಆಗ ಅವರು 'ತಿಪ್ಪೇಸ್ವಾಮಿ ನೀವು ಸೊಗಸಾಗಿ ಬೆಟ್ಟ ಗುಡ್ಡಗಳನ್ನು ರಚಿಸುತ್ತೀರಿ.

ನಿಸರ್ಗವನ್ನು ಅದೇ ರೀತಿ ರಚಿಸಬಾರದೇಕೆ ? ನಮ್ಮ ಮಲೆನಾಡಿಗೆ ಹೋಗಿ ಬನ್ನಿ. ಅಲ್ಲಿನ ಪ್ರಕೃತಿಯನ್ನು ನೀವು ಕುಂಚದಿಂದ ಸೆರೆ ಹಿಡಿಯಿರಿ. ಮಲೆನಾಡಿಗೆ ಮಹಾಕವಿ ಬೇಕಾದಂತೆ ಒಬ್ಬ ಮಹಾ ಕಲಾವಿದ ಬೇಕು'' ಎಂದಿದ್ದರು.

ಎಂ.ಎ. ವಿದ್ಯಾರ್ಥಿಯಾಗಿದ್ದ 'ತೇಜಸ್ವಿ', 'ಜೀಶಂಪ'ರು ನನ್ನನ್ನು ಕುಪ್ಪಳ್ಳಿಗೆ ಕರೆತಂದರು. ಕುವೆಂಪು ಅವರ ಕಾವ್ಯದಲ್ಲಿ ಬರುವ ಸುಂದರ ನೆಲೆಗಳಾದ ಕವಿಶೈಲ, ಕುಂದಾದ್ರಿ, ಸಂಜೆಗಿರಿ, ಕುಪ್ಪಳ್ಳಿ, ತೋಟ, ಮನೆ- ಹೀಗೆ ಆರೇಳು ಚಿತ್ರಗಳನ್ನು ರಚಿಸಿಕೊಂಡು ಮೈಸೂರಿಗೆ ಬಂದೆ.

'ಉದಯರವಿ'ಯಲ್ಲಿ ಕುವೆಂಪು ಅವರಿಗೆ ಅವೆಲ್ಲವನ್ನು ಅರ್ಪಿಸಿದಾಗ ಅವರಿಗೆ ಅದೆಷ್ಟು ಸಂತೋಷವಾಯಿತೆಂದರೆ ಒಂದು ಸಂಜೆ ಉದಯರವಿಯ ಬಿಸಿಲು ಮಹಡಿಯಲ್ಲಿ ಸಹೃದಯರ ಗೋಷ್ಠಿ ಕರೆದರು. ಅಲ್ಲಿ ಕುವೆಂಪು, ಶಾಮರಾಯರು, ಶಿವರುದ್ರಪ್ಪ, ಪ್ರಭುಶಂಕರ, ನಘ, ಜೀಶಂಪ, ತೇಜಸ್ವಿ ಮತ್ತು ನಾನು ಇದ್ದೆವು. ನಾನು ರಚಿಸಿದ ಕುಪ್ಪಳ್ಳಿ ನಿಸರ್ಗ ಚಿತ್ರಗಳನ್ನು ನಮ್ಮ ಸುತ್ತಲೂ ಇರಿಸಲಾಗಿತ್ತು. ಕುವೆಂಪು ಅವರ ಪತ್ನಿ ಹೇಮಾವತಮ್ಮನವರು ತಯಾರಿಸಿದ ಮಲೆನಾಡಿನ ಸಿಹಿ ಎಲ್ಲರೂ ಸವಿದೆವು. ಆಗ 'ಕುವೆಂಪು' ಒಂದು ಮಾತು ಅಭಿಮಾನದಿಂದ ನುಡಿದರು - ನಮ್ಮ ಮಲೆನಾಡಿಗೂ ನಮ್ಮ ಮನೆಗೂ ಕಿಂಡಿ ಕೊರೆದಿದ್ದಾರೆ' ಎಂದರು. ಅಂದು ಕಳೆದ ರಸಗಳಿಗೆ ನಾನೆಂದೂ ಮರೆಯಲಾರೆ.

ಕೆಲವು ದಿನಗಳ ನಂತರ 'ಕುವೆಂಪು' ಅವರನ್ನು ಭೇಟಿ ಮಾಡಿದೆ. ನನ್ನನ್ನು ಅವರ ಅಧ್ಯಯನ ಕೋಣೆಗೆ ಕರೆದರು. ಅವರು ರಚಿಸಿದ ಒಂದು ಕವನವನ್ನು ಓದಿ ಹೇಳಿದರು. ಅದು ನಾನು ರಚಿಸಿದ ಒಂದು ಚಿತ್ರದ (ಕುಂದಾದ್ರಿ) ಬಗ್ಗೆ ರಚಿಸಿದ್ದರು. 'ಕವಿ ಶೈಲದಿಂದ ಕುಂದಾದ್ರಿ' ಎಂಬ ಕವನ ಅದು. 'ಕದರಡಕೆ' ಕವನ ಸಂಕಲನದಲ್ಲಿ ಪ್ರಕಟಗೊಂಡಿತು. ಕುಪ್ಪಳ್ಳಿ, ವರಕವಿ 'ಕುವೆಂಪು' ಅವರ ಹುಟ್ಟೂರು. ಅಲ್ಲಿಯ ನಿಸರ್ಗ ಪರಿಸರ ನನ್ನನ್ನು ಆಕರ್ಷಿಸಿತು. ಕೆಲವಾರು ಸಾರಿ ಹೋಗಿ ಬಂದಿದ್ದೆ. ಬಯಲುಸೀಮೆಯಿಂದ ಬಂದ ನನ್ನನ್ನು ಗೆಳೆಯ 'ಜೀಶಂಪ'ರನ್ನು 'ತೇಜಸ್ವಿ'ಕಡಿದಾಳ ಶಾಮಣ್ಣನವರು ಗುಡ್ಡ ಬೆಟ್ಟ, ಕಾಡು ಮೇಡಿನಲ್ಲಿ ಸುತ್ತಿಸಿದ್ದು, ಭೀಮಾಕಾರದ ವೃಕ್ಷಗಳ ಬನಗತ್ತಲ ಮುಸುಕಿನಲ್ಲಿ ನಾವು ಭಯಗೊಂಡದ್ದು, ಕಾಜಾಣ, ಕಾಮಳ್ಳಿ, ಹಕ್ಕಿಗಳ ಸವಿದನಿ ಕೇಳಿಸಿದ್ದು. ಸಿಹಿ, ಒಗರು, ಸಪ್ಪೆ ವಿವಿಧ ಜಾತಿಯ ಹಣ್ಣು ತಿನ್ನಿಸಿದ್ದು, ಅವರ ಕುಪ್ಪಳ್ಳಿ ಮನೆಯ (ಕಾನೂನು ಸುಬ್ಬಮ್ಮ ಹೆಗ್ಗಡತಿ) ಸುಡುನೀರ ಅಭ್ಯಂಜನ ಸ್ನಾನ ಮಾಡಿಸಿದ್ದು, ಮಲೆನಾಡಿನ ಸಿಹಿತಿಂಡಿ ತಿನಿಸಿದ್ದು, ಕವಿಶೈಲದ ಆ ಪವಿತ್ರ ಬಂಡೆಯ ಮೇಲೆ ನಮ್ಮೆಲ್ಲರ ಹಸ್ತಾಕ್ಷರ ಕೊರೆಸಿದ್ದು, ಸಿತಾರವಾದದ ಸಂಗೀತ ಪ್ರೇಮಿ 'ತೇಜಸ್ವಿ' ಬಿಸಿಲು ಮಹಡಿಯ ವಿಶ್ರಾಂತಿ ಕೋಣೆಯಲ್ಲಿ

ನಿದ್ದೆಗೆಟ್ಟುರೇಡಿಯೋದಲ್ಲಿ ಬರುವ ಸಂಗೀತ ಕೇಳುವಂತೆ ಮಾಡಿದ್ದು, ಅಲ್ಲಿಯ ಏಳೆಂಟು ದೃಶ್ಯಗಳ ವರ್ಣಗಳಲ್ಲಿ ಕ್ಯಾಲೆಂಡರ್ ಆಗಿ ಮುದ್ರಿಸಿ ಹಂಚಿದ್ದು ಎಲ್ಲಾ ನೆನಪು ಬರುತ್ತಿದೆ.

೧೯೫೦ರ ಡಿಸೆಂಬರ್ ೨೯ ಮರೆಯಲಾಗದ ದಿನ. ನಾವು ಅಂದು ಕುಪ್ಪಳ್ಳಿಯಲ್ಲಿದ್ದೆವು. ನಮ್ಮ ಅದೃಷ್ಟಕ್ಕೆ ಆಗ ಕುವೆಂಪು ಮೈಸೂರಿನಿಂದ ಅಲ್ಲಿಗೆ ಬಂದಿದ್ದರು. 'ಕುವೆಂಪು' ಅವರ ಜೊತೆ ಕುಪ್ಪಳ್ಳಿಯ ಅವರ ಮನೆಯ ಬೆನ್ನೇರಿ 'ಕವಿಶೈಲ'ಕ್ಕೆ ಹೋದೆವು.

ಕುಪ್ಪಳ್ಳಿ ಮನೆಗೆ ಅಂಟಿಕೊಂಡಂತೆ ಬೆಟ್ಟ ಒಂದಿದೆ. ಅಲ್ಲಿಗೆ ಹತ್ತಿ ಹೋದರೆ ಒಂದು ಸ್ಥಳದಿಂದ ಪಶ್ಚಿಮ ದಿಗಂತದಲ್ಲಿ ಮಲೆಮಲೆಯಾಗಿ ಹೋಗುತ್ತದೆ ಸಹ್ಯಾದ್ರಿ ಶ್ರೇಣಿ. ಉತ್ತರಕ್ಕೆ ಕಂಗು ತೆಂಗುಗಳ ಹೆಮ್ಮರಗಳ ಕಾಡಿನ ಗರ್ಭದ ನಡುವೆ ಕುಂದಾದ್ರಿ ಬೆಟ್ಟ ಆದಿಶೇಷನ ಹೆಡೆ ಎತ್ತಿದಂತೆ ಗೋಚರವಾಗುತ್ತದೆ. ಕುವೆಂಪು ತಮ್ಮ ಕವನದಲ್ಲಿ ಕವಿಶೈಲ ಸ್ಥಳದಲ್ಲಿ ಕಾಣುವ ನಿಸರ್ಗ ದೃಶ್ಯವನ್ನು ಬೇಕಾದಷ್ಟು ಕಡೆ ವರ್ಣಿಸಿದ್ದಾರೆ.

ಕವಿಶೈಲ ಅವರ ಒಂದು ಧ್ಯಾನಮಂದಿರ ಇದ್ದಂತೆ. ಈ ಬಂಡೆಯ ಮೇಲೆ ರಾಮಕೃಷ್ಣ ಆಶ್ರಮದ ಸ್ವಾಮಿಗಳು, ಬಿ.ಎಂ.ಶ್ರೀ, ವೆಂಕಣ್ಣಯ್ಯ, ಆನಂದ ಮೊದಲಾದವರು ಕುಳಿತುಹೋದ ಪವಿತ್ರ ತಾಣ. ಅಲ್ಲಿ ಇವರೆಲ್ಲರ ಹಸ್ತಾಕ್ಷರ ಕೆತ್ತಿದ್ದಾರೆ. ನಾವೂ ನಮ್ಮ ಹೆಸರನ್ನು ಕೆತ್ತಿದೆವು. ಮುಂದೆ ಈ ತಾಣ ಪ್ರಸಿದ್ಧಿಗೇರುತ್ತದೆಂಬ ಅರಿವು ಆಗ ನಮಗಿರಲಿಲ್ಲ.

ಡಿಸೆಂಬರ್ ೨೯ 'ಕುವೆಂಪು' ಅವರ ಜನ್ಮದಿವೂ ಆಗಿತ್ತು. ಆಗತಾನೆ 'ಕುವೆಂಪು' ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿ ಪದವಿಯಿಂದ ನಿವೃತ್ತರಾಗಿದ್ದರು. 'ಕುವೆಂಪು' ಕವಿಶೈಲದ ಬಂಡೆಯ ಮೇಲೆ ಕುಳಿತರು. ನಾವೆಲ್ಲ ಅವರ ಪಕ್ಕದಲ್ಲಿ ಕುಳಿತೆವು. 'ಕುವೆಂಪು' ಆಗ ಒಂದು ಮಾತು ಹೇಳಿದರು. 'ನಾನು ಉಪಕುಲಪತಿ ಪದವಿಯಿಂದ ಬಿಡುಗಡೆ ಆದದ್ದು ಒಂದು ಹೊರೆ ಇಳಿದಂತಾಯಿತು. ಈಗ ಸಂಪೂರ್ಣವಾಗಿ ಸಾಹಿತ್ಯಾರಾಧನೆಯಲ್ಲಿ ಮುಳುಗಬಹುದು.' ಎಂದರು.

ನಂತರ ಮೌನ ತಾಳಿದರು. ಕುವೆಂಪು ಅವರು ಕಣ್ಣುಮುಚ್ಚಿ ಉಪನಿಷತ್ತಿನ ಮಂತ್ರ ಒಂದನ್ನು ಪಠಿಸಿದರು. ಆ ನಿಸರ್ಗದ ಮಧ್ಯೆ ಕುಳಿತು ಧ್ಯಾನ ಮಗ್ನರಾದ 'ಕುವೆಂಪು' ಅವರನ್ನು ನೋಡಿದ ನನಗೆ ಕನ್ಯಾಕುಮಾರಿಯಲ್ಲಿ ಧ್ಯಾನ ಮಗ್ನರಾದ ವಿವೇಕಾನಂದರಂತೆ ಗೋಚರಿಸಿದರು.

'ಕುವೆಂಪು' ಅವರ ಎಡಬಲದಲ್ಲಿ ನಾನು, ಜೀಶಂಪ, ದೇವಂಗಿ ರತ್ನಾಕರಗೌಡ, ಕಡಿದಾಳು ಶ್ಯಾಮಣ್ಣ ಮೊದಲಾದವರು ಕುಳಿತಿದ್ದೆವು. 'ತೇಜಸ್ವಿ' ಅಂದು ತೆಗೆದ

ಫೋಟೋ ಇಂದಿಗೂ ನನ್ನಲ್ಲಿ ಇದೆ' ಕೀರ್ತಿಶನಿಗೆ ಅಧಿಕಾರ ಗದ್ದುಗೆಗೆ ಕುವೆಂಪು ಅಂಟಿಕೊಂಡವರಲ್ಲ ಎಂಬ ಅಂದಿನ ಅವರ ಮಾತೇ ಸಾಬೀತು ಪಡಿಸಿತು. ಈ ಒಂದು ನೆನಪು ಸದಾ ಹಸುರಾಗಿ ಉಳಿದಿದೆ.

ಶಿವಮೊಗ್ಗ ಜಿಲ್ಲೆಯ ನನ್ನ ಜಾನಪದ ಕ್ಷೇತ್ರ ಕಾರ್ಯ ಮರೆಯುವಂಥಹುದಲ್ಲ. ೧೯೮೩ರ ಮೇ ತಿಂಗಳು, ಹೊನ್ನಾಳಿಯಲ್ಲಿ ಒಂದು ಸಮಾರಂಭಕ್ಕೆ ನಾನು ಹೋಗಿದ್ದೆ. ಮೈಸೂರು ವಿಶ್ವವಿದ್ಯಾನಿಲಯದ ಜಾನಪದ ವಸ್ತು ಸಂಗ್ರಹಾಲಯಕ್ಕೆ ನನ್ನ ಬಹುದಿನದ ಬಯಕೆಯೊಂದು ನೆರವೇರಿದ ಸಂದರ್ಭ.

ಹೊನ್ನಾಳಿ ನನಗೆ ಪರಿಚಿತ ಊರು. ಕಲ್ಮಠದಲ್ಲಿ ನಡೆದ ಸಮಾರಂಭ. ಈ ಮಠದ ಪಕ್ಕದಲ್ಲಿ ಶ್ರೀ ಚನ್ನಕೇಶ್ವರ ಸ್ವಾಮಿ ದೇವಾಲಯ. ಇಲ್ಲಿ ನನಗೆ ಒಂದು ಅಪರೂಪದ ವಸ್ತು ಗೋಚರವಾಯಿತು. ಕೆಂಪು ಮಣ್ಣಿನ ಲಿಂಗಾಕಾರದ ವಸ್ತು, ಇದನ್ನು ಸಂಗ್ರಹಿಸುವ ಕಾತುರ 'ಧೂಪದ ಕುಂಡ' - ಇದನ್ನು ಮಠದ ಶ್ರೀಗಳು ದಾನವಾಗಿ ನೀಡಿದರು.

ಈ ಕಲ್ಮಠಕ್ಕೆ ದೊಡ್ಡ ಇತಿಹಾಸವಿದೆ. ಈ ಮಠಕ್ಕೆ ನಾನು ಭೇಟಿ ನೀಡಿದ್ದು ಇದು ಮೂರನೆ ಸಲ. ಮಠದ ಶ್ರೀಗಳಿಂದ ೪ ಅಡಿಯ 'ಬತ್ತಿ ಕೋವಿ' ಯೊಂದನ್ನು ಸಂಗ್ರಹಿಸಿದ್ದೆ. ಸ್ವಾಮಿಗಳು ನನಗೆ ಪರಿಚಿತರು. ನಮ್ಮಿಬ್ಬರ ಸಂಭಾಷಣೆ ಆಲಿಸುತ್ತಿದ್ದ ಓರ್ವ ಅಪರಿಚಿತ ವ್ಯಕ್ತಿಯ ಪರಿಚಯವಾಯಿತು. 'ನಮ್ಮೂರ ಆಚಾರರಲ್ಲಿ ಗೊಂಬೆಗಳಿವೆ' ಎಂದು ಹೇಳಿ ನನ್ನ ಕುತೂಹಲ ಕೆರಳಿಸಿದರು. ಆ ಕೂಡಲೇ ಅವರ ಜೊತೆ ಕುಂದೂರು ಗ್ರಾಮಕ್ಕೆ ಹೋದೆ. ಊರ ಅಂಜನೇಯ ಸ್ವಾಮಿ ಗುಡಿಯ ಹೊರಗೆ ಮಂಟಪದಲ್ಲಿ ಒಂದು ವಸ್ತುವಿನ ಕಡೆ ನನ್ನ ಗಮನ ಹರಿಯಿತು. 'ಶಾಸ' ಎಂದು ಕರೆಯುವ ಒಂದು ಜೊತೆ ಪಾದರಕ್ಷೆಗಳು. ಬೆಳ್ಳಿ ದಾರದ ಹೆಣಿಗೆ ಕೆಂಪು ಕುಚ್ಚನ್ನು ಹೊಂದಿದ್ದು ಗಾಜಿನ ಬುಟ್ಟಿ ಕುಸುರಿನ ಕೆಲಸ. ಚಿತ್ತಾರದಿಂದ ಕೂಡಿದ್ದು ಸೋಜಿಗ ತರಿಸಿತು. 'ರಾತ್ರಿಯ ವೇಳೆ ಆಂಜನೇಯ ಸ್ವಾಮಿ ಈ ಪಾದ ರಕ್ಷೆಗಳನ್ನು ಮೆಟ್ಟಿಕೊಂಡು ಊರ ಸುತ್ತಲೂ ಪ್ರದಕ್ಷಿಣೆ ಮಾಡಿ ಊರನ್ನು ರಕ್ಷಣೆ ಮಾಡುತ್ತಾನೆ, ಎಂಬ ನಂಬಿಕೆ ಹಳ್ಳಿಯವರದ್ದು.

ಇವುಗಳನ್ನು ಸಂಗ್ರಹಿಸಲು ಏಳೆಂಟು ದಿನಗಳು ಪಟ್ಟ ಪಾಡು, ಶ್ರಮ, ವರ್ಣಿಸಲಸದಳ. ಅವುಗಳನ್ನು ನೀರಿಗೆ ಸಮರ್ಪಿಸಿ, ಹೊಸ ಜೋಡುಗಳನ್ನು ಆ ಸ್ಥಾನದಲ್ಲಿ ಇರಿಸುವ ಪದ್ಧತಿ ಇತ್ತು. ಇಂಥ ಕಲಾತ್ಮಕ ವಸ್ತು ನೀರು ಪಾಲಾಗಬಾರದೆಂದು ಭಾವಿಸಿ ನಾನು ಅವುಗಳನ್ನು ಸಂಗ್ರಹಿದ್ದು ಒಂದು ದೊಡ್ಡಸಾಹಸವೇ ಎನ್ನಬೇಕು. ಅವುಗಳನ್ನು ಕೊಡಲು ಒಪ್ಪಿದ ಹರಿಜನರ ಜನ ಮತ್ತೆ ನಿರಾಕರಿಸಿದರು. ಏನೇನೋ ಹೇಳಿ ಅವರ ಮನವೊಲಿಸಿದೆ. ಒಪ್ಪಿಸಿದೆ.

ಅವುಗಳನ್ನು ಆರಿಸುವಾಗ ಅಜ್ಜಿಯೊಬ್ಬಳು 'ಇದನ್ನು ಕೊಂಡೊಯ್ಯೋರಿಗೆ ಒಳ್ಳೇದಾಗೊಲ್ಲ' ಎಂದು ನನಗೆ ಶಾಪ ಹಾಕಿದ್ದು. ಆಗ ನಾನು ಧೈರ್ಯ ಶಾಲಿ 'ಹೋಗಜ್ಜಿ ನಾನೇನು ನನ್ನ ಮನೆಗೇನು ಕೊಂಡೊಯ್ಯೋದಿಲ್ಲ; ಸಂಗ್ರಹಾಲಯಕ್ಕೆ, ಅದೂ ದೇವಾಲಯವಿದ್ದಂತೆ' ಎಂದು ತಕ್ಷಣ ನುಡಿದೆನಾದರೂ ಆ ಅಜ್ಜಿಯ ಶಾಪದ ನುಡಿಗಳು ನನ್ನನ್ನು ಭೀತಿಗೊಳಿಸಿದವು.

ಹೀಗೆ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ಸಮೀಪದ ಕಾರೇನಹಳ್ಳಿಯ ಶಿವಯೋಗಿ ಮಂದಿರದಲ್ಲಿದ್ದ 'ಗೊಂಬೆ ಮಂಟಪ' ವನ್ನು ಅಂದಿನ ದಿ. ರುದ್ರಮುನಿ ಸ್ವಾಮಿಗಳಿಂದ (೧೫-೪-೧೯೭೩) ದಾನವಾಗಿ ತಂದುದ್ದು; ಶಿರಾಳಕೊಪ್ಪ ಸಮೀಪದ ತೊಗರ್ಸಿಯ ಶ್ರೀ ಮಳೇಮಠದಲ್ಲಿದ್ದ ಕೆಲವಾರು ಮರದ ಮೂರ್ತಿಗಳನ್ನು, ಆಳೆತ್ತರದ ದ್ವಾರಪಾಲಕರನ್ನು; ಚಲಿಸುವ ವಿಭೂತಿ ಕರಂಡ ಒಂದನ್ನೂ ಅಲ್ಲಿಯ ಶ್ರೀಮಹಂತ ದೇಶೀಕೇಂದ್ರ ಸ್ವಾಮಿಗಳಿಂದ ನಮ್ಮ ಸಂಗ್ರಹಾಲಯಕ್ಕೆದಾನವಾಗಿ ಪಡೆಯುವಾಗ ಎದುರಾದ ಅಡೆತಡೆಗಳನ್ನು ನೆನೆದರೆ ಅಚ್ಚರಿಯಾಗುತ್ತದೆ.

೨೬.೧೧ ೭೩ರಲ್ಲಿ ಸಾಗರದ ಕೆರೆಯ ಅಂಗಳದಲ್ಲಿ ವಿಸರ್ಜಿತ ಮಾರಿಯ ವಿಗ್ರಹವನ್ನು ಸಂಗ್ರಹಿಸಿ ಸಾಗಿಸುವಾಗ ನನಗೆ ನೆರವಾದ ದಿ. ಕೆ.ಹೆಚ್.ಎಸ್. ಸಾಗರ್ ಅವರ ಬೆಂಬಲ ಹಾಗೂ ಮಾರಿಕಾಂಬ ದೇವಾಲಯದ ಕನ್‌ವೀನಿಯರ್ ಆಗಿದ್ದ ಎಸ್.ಕೆ. ನೀಲಪ್ಪ, ಸದಸ್ಯ ರಂಗನಾಥರಾವ್ ಇವರ ಸಹಕಾರದಿಂದಾಗಿ ವಿಸರ್ಜಿತ ಏಳು ಅಡಿ ಎತ್ತರದ ಮಾರಿಕಾಂಬ ಮೂರ್ತಿ ಸಂಗ್ರಹಿಸುವಂತಾಯಿತು. ಕೊಂಡು ಹೋಗಲು ಒಪ್ಪಿಗೆ ಏನೋ ದೊರೆಯಿತು. ಅದನ್ನು ಸಾಗಿಸಲು, ಅದರ ಬಳಿ ಬರಲು ಯಾರೂ ಮುಂದಾಗದಾಗ ಪೈಲ್ವಾನ್ ಅಬ್ದುಲ್ ಗನಿ ತನ್ನ ಗಾಡಿಯ ನೆರವಿನಿಂದ ರಾತ್ರೋರಾತ್ರಿ ಸಾಗಿಸಿ ರೈಲ್ವೆ ನಿಲ್ದಾಣಕ್ಕೆ ತಂದದ್ದು - ನಾನೆಂದೂ ಮರೆಯಲಾರೆ.

ಶಿವಮೊಗ್ಗ ಜಿಲ್ಲೆಯ ಅಪರೂಪ ಜಾನಪದ ವಸ್ತುಗಳಲ್ಲಿ ಮೇಲಿನ ವಸ್ತುಗಳನ್ನು ಸಾಗಿಸುವಾಗ ನಾನು ಪಟ್ಟ ಶ್ರಮ ಕುರಿತು ಬರೆದರೆ ಒಂದು ದೊಡ್ಡ ಕಥನ ಗ್ರಂಥವೇ ಅದೀತು.

ಹೀಗೆ ಮಲೆನಾಡು ಮಡಿಲಲ್ಲಿ ನನಗೆ ಚಿತ್ರಕಲೆ ಹಾಗೂ ಜಾನಪದ ಸಾಹಿತ್ಯ ಕಲೆಗಳ ಹುಡುಕಾಟದಲ್ಲಿ ಆದ ಅನುಭವಗಳನ್ನು ನಾನೆಂದು ಮರೆಯಲಾರೆ. ಟಿ. ಮಹಾಬಲೇಶ್ವರ ಭಟ್ಟರನ್ನು ನೆನಪಿಸಿಕೊಂಡಾಗ ಇಡೀ ಮಲೆನಾಡು ಪ್ರಾಂತ್ಯವೇ ಕಣ್ಣ ಮುಂದೆ ಕಾಣುತ್ತದೆ.

# ವ್ಯಕ್ತಿತ್ವ - ಒಂದು ನುಡಿ ಚಿತ್ರ

- ಎಂ.ವಿ. ರಾಜಣ್ಣವರ

ಎಪ್ಪತ್ತನೇ ಇಸ್ವಿಯ ಒಂದು ದಿನ. ಪುರಸಭಾ ಆವರಣದಲ್ಲಿ ರಾಷ್ಟ್ರಕವಿ ಕುವೆಂಪು ಅವರಿಗೆ ಸಾರ್ವಜನಿಕ ಸನ್ಮಾನ. ಸನ್ಮಾನಿತರ ಮುಂದೆ ಆಳೆತ್ತರದ ಗಂಧದ ಹಾರಗಳ ರಾಶಿ. ಜನಸಾಗರ ಆನಂದೋಲ್ಲಾಸಗಳಲ್ಲಿ ಮುಳುಗಿದ್ದಾರೆ. ಇದು ಸಾಗರದ 'ಕನ್ನಡ ಸಂಘ'ದವರು ಏರ್ಪಡಿಸಿದ್ದ ಕಾರ್ಯಕ್ರಮ. ಇದರ ರೂವಾರಿ ಅಧ್ಯಕ್ಷರಾದ ಶ್ರೀ ಟಿ. ಮಹಾಬಲೇಶ್ವರ ಭಟ್ಟರು ಎಂಬುದು ಅನಂತರ ತಿಳಿಯಿತು. ಅಂದಿನ ಆ ದಿನ ಇನ್ನೂ ಕಣ್ಮುಂದೆ ಕಟ್ಟಿದಂತಿದೆ.

ಅಂದಿನಿಂದ ಶ್ರೀ ಟಿ. ಮಹಾಬಲೇಶ್ವರ ಭಟ್ಟರ ಬಗ್ಗೆ ವಿಶೇಷವಾದ ಗೌರವ ಭಾವನೆ ನನ್ನಲ್ಲಿ ಮೂಡಿತು. ಅವರನ್ನು ಮತ್ತೆ ಮತ್ತೆ ನೋಡಬೇಕೆಂದು ಕುತೂಹಲ. ಹಾಗಾಗಿ ಮಾರ್ಕೆಟ್ ರಸ್ತೆಯಲ್ಲಿದ್ದ ಅವರ ಅಂಗಡಿಯ ಕಡೆಗೆ ಆಗಾಗ ಹೋಗುತ್ತಿದ್ದೆ ಆ ಸಮಯದಲ್ಲಿ ವೇಷಭೂಷಣದಲ್ಲಿ ನಾನು ಮೆಚ್ಚಿದ ವ್ಯಕ್ತಿಗಳಲ್ಲಿ ಶ್ರೀ ಟಿ. ಮಹಾಬಲೇಶ್ವರ ಭಟ್ಟರು ಪ್ರಮುಖರು. ಅವರ ಉದ್ದನೆಯ ಜುಬ್ಬ, ಶುಭ್ರಕಚ್ಚೆಪಂಚೆ, ನೀಟಾಗಿ ಬಾಚಿದ ತಲೆಗೂದಲು, ಕಾಲಲ್ಲಿ ಓಪನ್ ಶೂ, ಯಾವಾಗ ಕಂಡರೂ ಇವುಗಳಲ್ಲಿ ಒಂದಿಷ್ಟೂ ವ್ಯತ್ಯಾಸವಿಲ್ಲ. ವ್ಯತ್ಯಾಸವಿದ್ದರೆ ಓವರ್ ಕೋಟ್ ಮಾತ್ರಾ. ನನಗೆ ಅವರ ಪರಿಚಯವಾದ ಮೇಲೆ ಎಲ್ಲಿಯೇ ಕಂಡರೂ ತಾವೇ ಮೊದಲು ನಗುತ್ತಾ ಮಾತನಾಡಿಸುವುದು ಅವರ ಸ್ವಭಾವ. ಆಗಿನ ಸಂತೋಷಕ್ಕೆ ನಾನು ರೋಮಾಂಚನಗೊಳ್ಳುತ್ತಿದ್ದೆ.

ಅನೇಕ ವರ್ಷಗಳವರೆಗೆ ಕನ್ನಡಸಂಘದ ಕಾರ್ಯಕ್ರಮಗಳು ಸಾಗರದ ಜನತೆಗೆ ಸಾಹಿತ್ಯಿಕ ಸಂತೋಷವನ್ನು ನೀಡುತ್ತಿದ್ದವು. ಹೊಸದಾಗಿ ಸಾಗರಕ್ಕೆ ಬಂದಿದ್ದನನ್ನಂಥವರಿಗೆ ಅದು ಹೊಸ ಅನುಭವವಾಗಿತ್ತು. ಆಮೇಲೆ ಶ್ರೀ ಭಟ್ಟರು ತಮ್ಮ ಹಳ್ಳಿ ಮನೆಗೆ ಹೋದಮೇಲೆ ಆ ಚಟುವಟಿಕೆಗಳು ನಿಂತೇ ಹೋದವು. ಸಾಗರವು ಸ್ತಬ್ಧವಾಗಿತ್ತು. ಇತ್ತೀಚಿಗೆ 'ಒಡನಾಟ'ವು ಪ್ರಾರಂಭವಾದ ಮೇಲೆ ಸಾಗರದಲ್ಲಿ ಸ್ವಲ್ಪ ಲವಲವಿಕೆ ಕಂಡು ಬಂದಿತ್ತು. ಇದೇ ಸಮಯದಲ್ಲಿ ಶ್ರೀ ಭಟ್ಟರು ಸಾಗರ ತಾ. ಕನ್ನಡಸಾಹಿತ್ಯ ಪರಿಷತ್ತಿಗೆ ಹೊಸ ಚೈತನ್ಯ ತುಂಬಿದರು. ಅವರೇ ಅದರ ಅಧ್ಯಕ್ಷ ಸ್ಥಾನವನ್ನಲಂಕರಿಸಿ ಮತ್ತೆ ಆ ಕಾಲದ ಕನ್ನಡ ಸಂಘದ ನೆನಪು

ಕಾರ್ಯಕ್ರಮ ಇದ್ದರೆ ಹೀಗಿರಬೇಕು; ನಡೆದರೆ ಹೀಗೆ ನಡೆಯಬೇಕು; ಎನಿಸಿತು. ನಂತರ ತಿಳಿದುಬಂತು ಇದನ್ನು ಸಾಗರದ ಕನ್ನಡ ಸಂಘದವರು ನಡೆಸಿದ್ದು. ಅದರ ಅಧ್ಯಕ್ಷರು ಶ್ರೀ ಟಿ. ಮಹಾಬಲೇಶ್ವರ ಭಟ್ಟರು - ಅವರ ಮಾರ್ಗದರ್ಶನದಿಂದಲೇ ನಡೆದುದು, ಎಂದು.

ಕೆಲವೇ ಕಾಲಾನಂತರ ಬಹುಶಃ ೧೯೭೧ ಇರಬಹುದು ಸಾಗರಕ್ಕೆ ದಿಗ್ಗಜಗಳಿಬ್ಬರ ಆಗಮನವಾಯಿತು. ಅವರೇ ರಂ.ಶ್ರೀ ಮುಗಳಿ. ತಮ್ಮ ಕನ್ನಡ ಸಾಹಿತ್ಯ ಚರಿತ್ರೆ ಗ್ರಂಥದಿಂದ ಕನ್ನಡಧ್ಯಯನಿಗೆ ಚಿರಪರಿಚಿತ ಪಂಡಿತರು. ಇನ್ನೊಬ್ಬರು ಪ್ರೊ. ವಿ.ಕೃ. ಗೋಕಾಕ್ 'ಸಮರಸವೇ ಜೀವನ' ದಂಥ ಬೃಹತ್ ಮಹತ್‌ಗಳ ಕಾದಂಬರಿ ಕರ್ತೃ, ಉದ್ದಾಮ ಸಾಹಿತಿ. ಇಂಗ್ಲಿಷ್ ಅಭ್ಯಸಿಸಿ ಇಂಗ್ಲೆಂಡ್‌ನಲ್ಲಿ ಗೌರವ ಉಪನ್ಯಾಸಕರಾಗಿದ್ದ ಕನ್ನಡ ಸಾಹಿತಿ ವರೇಣ್ಯರು. ಅವರಿಬ್ಬರಿಗೂ ನಡೆದ ಗೌರವ ಸಮಾರಂಭವು ಸಾಗರದ ಸಾಹಿತ್ಯಾಭಿಮಾನಿಗಳೂ ಯಾರೂ ಮರೆಯುವಂಥದಲ್ಲ. ಕಾರ್ಯಕ್ರಮದ ಯೋಜನೆ-ಯೋಚನೆ-ನಿರ್ದೇಶನ-ಉದ್ಯಾಪನೆಯ ಹೊಣೆಗಾರರೂ ಕೂಡ ಅಧ್ಯಕ್ಷ ಶ್ರೀ ಟಿ. ಮಹಾಬಲೇಶ್ವರ ಭಟ್ಟರದ್ದು.

ನಾನು ಪ್ರಥಮತಃ ಕಂಡ ಟಿ. ಮಹಾಬಲೇಶ್ವರ ಭಟ್ಟರಿಗೂ ಇಂದು ಕಾಣುವ ಭಟ್ಟರಿಗೂ ೨೮ ವರ್ಷಗಳು ಹೆಚ್ಚಾಗಿವೆ, ಅಷ್ಟೇ, ಅದನ್ನು ಬಿಟ್ಟರೆ ಯಾವ ಬದಲಾವಣೆಯನ್ನೂ ನಾನಂತು ಕಾಣೆ. ಇಂದಿನ ಅವರ ಅನುಭವ ಕೆಲಕಾಲದ ರಾಜಕಾರಣವನ್ನು ಹೊಂದಿ ಬಂದಿದೆ. ಕೆಲ ಕಾಲಾನಂತರ ಪುನಃ ಸಾಗರ ತಾಲ್ಲೂಕು ಕ.ಸಾ.ಪ.ನ ಅಧ್ಯಕ್ಷರಾಗಿದ್ದಾರೆ. ಅದೇ ಪಂಚೆ, ಅದೇ ಜುಬ್ಬ, ಅಷ್ಟೇ ಕಪ್ಪುಕೂದಲು, ನಸುನಗೆ, ಬದಲಾಗದ ಗಂಭೀರ ಮುಖ ಮುದ್ರೆ, ವ್ಯಕ್ತಿತ್ವ. ಬದಲಾಗದ ನಿಲುವು ತನು-ಮನಗಳಲ್ಲಿ ಚಿಂತನ ಶೀಲತೆಯಲ್ಲಿ ಸಮಾಜ ಸೇವೆ, ಸಾಹಿತ್ಯ ಸೇವೆಯಲ್ಲಿ ನುರಿತಿದ್ದಾರೆ. ಅವರ ಸ್ನೇಹ ವೃತ್ತದಲ್ಲಿ ಪ್ರವೇಶಿಸಿದವರು ಸುಲಭವಾಗಿ ಹೊರ ಬರಲಾರರು. ಅಜಾತ ಶತ್ರು- ಸಾಹಿತಿ ಶ್ರೀ ಭಟ್ಟರ ಸ್ನೇಹದ ಸೂಜಿಗಲ್ಲು ಅಂತಹುದು. ಸಾಗರದ ಜನತೆ ಕಂಡರಿಯದ, ಕೇಳರಿಯದ, ನಗೆ ಸಾಹಿತಿಗಳನ್ನೂ ಚಿಂತನ ಶೀಲರನ್ನು, ಕಲೆಗಾರರನ್ನೂ, ಕವಿಗಳನ್ನು, ಲೇಖಕರನ್ನೂ ಸಾಗರಕ್ಕೆ ಕರೆಯಿಸಿದ್ದಾರೆ. ಜನತೆಗೆ ಪರಿಚಯಿಸಿದ್ದಾರೆ. ಒಮ್ಮೆ ಬಂದವರು ಇನ್ನೊಮ್ಮೆ ಹೀಗೆ ಮತ್ತೆ, ಮತ್ತೆ ಸಾಗರಕ್ಕೆ ಬರಲೇ ಬೇಕೆಂಬಂತೆ ಮಾಡುವ-ಮಾಡಿದ ಶಕ್ತಿ ಬೇರೆಯವರಿಗೆ ಬರದು. ಅವರ ಕರೆ ನಿರಾಕರಿಸಿದ ವ್ಯಕ್ತಿಯಿಲ್ಲ.

ಇಂಥ ಸರಳ ವ್ಯಕ್ತಿತ್ವದ, ನಿರಾಡಂಬರ ವ್ಯಕ್ತಿಗಳು ದುರ್ಲಭ. "Simple Living and High thinking" ಎಂಬ ಮಾತಿಗೆ ಒಳ್ಳೇ ಉದಾಹರಣೆ ಸಾಗರದ ಶ್ರೀ ಟಿ. ಮಹಾಬಲೇಶ್ವರ ಭಟ್ಟರು ಎಂದರೆ ಅತಿಶಯೋಕ್ತಿ ಆಗಲಿಕ್ಕಿಲ್ಲ. ಅವರಿಗೆ ಈಗ ಎಪ್ಪತ್ತು ವರ್ಷ ! ನಂಬಲು ಸಾಧ್ಯವಿಲ್ಲ. ಅವರಿನ್ನೂ ಚಿರಯುವಕ !

# ನೆನಪನ್ನು ಕೆದಕಿದಾಗ

- ಮೋಹನ. ಗ. ಹೆಗಡೆ

೧೯೭೮ರ ನವೆಂಬರ್ ತಿಂಗಳಿರಬೇಕು. ಜೀವನ ವೃತ್ತಿಗಾಗಿ ಸಾಗರ ಸೇರಿ ಕೆಲವೇ ತಿಂಗಳು ಕಳೆದಿದ್ದವು. ಸಾಗರದ ಕನ್ನಡ ಸಂಘದ ಉತ್ಕರ್ಷದ ಕಾಲ. ಸಾಗರ ತಾಲೂಕು ಕನ್ನಡಸಾಹಿತ್ಯಕ ಚಟುವಟಿಕೆಗಳು ಚೆನ್ನಾಗಿ ನಡಯುತ್ತಿದ್ದ ವೇಳೆ ಅದು. ಯಾವುದೋ ಒಂದು ಸಾಹಿತ್ಯಕ ಕಾರ್ಯಕ್ರಮಕ್ಕೆ ಪುರಸಭೆಗೆ ಹೋಗಿದ್ದೆ. ಅದರ ಅಧ್ಯಕ್ಷರು ನೀಳವಾದ ಶುಭ್ರ ಕಚ್ಚೆ ಪಂಚೆ, ಬಿಳಿ ನೆಹರು ಜುಬ್ಬ, ಆಚೆ-ಈಚೆ ನೀಟಾಗಿ ಬಾಚಿದ ಹೊಳಪಿನ ಕಪ್ಪುಕೂದಲಿನವರು ನನ್ನನ್ನು ಆಕರ್ಷಿಸಿದರು. ಹಿಂದಿನಿಂದ ಅವರನ್ನು ಹೆಸರು ಕೇಳಿ ತಿಳಿದೆ. ನನ್ನ ಓರ್ವ ಗೆಳೆಯರು 'ಅವರು ಶ್ರೀ ಟಿ. ಮಹಾಬಲೇಶ್ವರ ಭಟ್ಟರು. ಬೇದೂರು ಅವರು ಊರು. ಕನ್ನಡ ಸಂಘದ ಅಧ್ಯಕ್ಷರು, ಲೇಖಕರು, ಕಾದಂಬರಿಗಳನ್ನು ಬರೆದಿದ್ದಾರೆ. ಕತೆ - ಕವನಗಳನ್ನೂ ಬರೀತಾರೆ. ಅವರದೇ ಆದ ಪುಸ್ತಕ ಪ್ರಕಟನಾಲಯ 'ಜಲಂಧರ ಪ್ರಕಾಶನ'ವೂ ಇದೆ. ಅವರದಾದ ಒಂದು ಪುಸ್ತಕದ ಅಂಗಡಿ ಪೇಟೆ ಯ ಹೆದ್ದಾರಿಯಲ್ಲಿದೆ. ನಿಮಗೆ ಬೇಕಾದ ಉತ್ತಮ ಸಾಹಿತ್ಯಕ ಕೃತಿಗಳು ನಿಮಗಲ್ಲಿ ದೊರೆಯುತ್ತವೆ.' ಎಂದರು.

೧೯೭೯ರ ವೇಳೆ ಸಾಗರಕ್ಕೆ ಜ್ಞಾನ ಪೀಠ ಪ್ರಶಸ್ತಿ ವಿಜೇತ ರಾಷ್ಟ್ರಕವಿಗಳನ್ನು ಸನ್ಮಾನಿಸುವ ಯೋಜನೆ ನಡೆದಿತ್ತು. ಕುವೆಂಪು ಬಂದಿದ್ದರು. ಜೊತೆಗೆ ಕುವೆಂಪುರವರ ಸಾಧನೆಗಾಗಿ, ಗಳಿಸಿದ ಪ್ರಶಸ್ತಿಗಾಗಿ ಸನ್ಮಾನವನ್ನು ಪುರಸಭೆಯ ಬಯಲು ರಂಗಮಂದಿರದಲ್ಲಿ ಇಟ್ಟುಕೊಳ್ಳಲಾಗಿತ್ತು. ಪ್ರಥಮತಃ 'ಕನ್ನಡ ಭಾಷೆಗೆ' 'ಜ್ಞಾನ ಪೀಠ' ಪ್ರಶಸ್ತಿ ಸಿಗುವಂತೆ ಮಾಡಿ, ಕನ್ನಡಮ್ಮನ ಪಾದಗಳಿಗೆ ಮಣಿಯುವಂತೆ ಮಾಡಿದ ಮೇರು ಕೃತಿ 'ರಾಮಾಯಣದರ್ಶನಂ' ಸಾಹಿತ್ಯಾಸಕ್ತರಿಗೆ - ಕಲ್ಲು ಸಕ್ಕರೆ; ನಿರಾಸಕ್ತರಿಗೆ - ಕಬ್ಬಿಣದ ಕಡಲೆಯಾದ, ಕೃತಿ ಮಹಾಕಾವ್ಯ. ಅದನ್ನು ಜನ ಸಾಮಾನ್ಯನೂ ಅರ್ಥ ಮಾಡಿಕೊಳಬಲ್ಲ ಪದದ ಗದ್ಯರೂಪಕ್ಕೆ ತಂದ ಲೇಖಕ ಕುವೆಂಪುರವರ ಪ್ರಿಯ ಶಿಷ್ಯ ಸಹೋದ್ಯೋಗಿ ಡಾ. ಪ್ರಭುಶಂಕರ ಕೂಡ ಬಂದಿದ್ದರು. ರಾಮಾಯಣ ದರ್ಶನಂ' ದತ್ತ ಸಾಮಾನ್ಯನೂ ಕಣ್ಣು ಹಾಯಿಸಬಲ್ಲಂತೆ ಮಾಡಿದವರು' 'ರಾಮಾಯಣ ದರ್ಶನಂ ವಚನ ಚಂದ್ರಿಕೆ' ಬರೆದವರು - ಕಾರ್ಯ ಕ್ರಮದ ಪ್ರಾರಂಭದಿಂದ ಅಂತ್ಯದವರೆಗೂ ಏನೋ ಒಂದು ರೀತಿಯ ಶಿಸ್ತು - ವ್ಯವಸ್ಥೆ, ಅಚ್ಚುಕಟ್ಟುತನ, ವೇಳೆಯ ಕರಾರುವಾಕ್ಕುತನ ಏನೋ ಆಕರ್ಷಕತೆ ಕಂಡು ಬಂತು.

ಕಾರ್ಯಕ್ರಮ ಇದ್ದರೆ ಹೀಗಿರಬೇಕು; ನಡೆದರೆ ಹೀಗೆ ನಡೆಯಬೇಕು; ಎನಿಸಿತು. ನಂತರ ತಿಳಿದುಬಂತು ಇದನ್ನು ಸಾಗರದ ಕನ್ನಡ ಸಂಘದವರು ನಡೆಸಿದ್ದು. ಅವರಅಧ್ಯಕ್ಷರು ಶ್ರೀ ಟಿ. ಮಹಾಬಲೇಶ್ವರ ಭಟ್ಟರು - ಅವರ ಮಾರ್ಗದರ್ಶನದಿಂದಲೇ ನಡೆದುದು, ಎಂದು.

ಕೆಲವೇ ಕಾಲಾನಂತರ ಬಹುಶಃ ೧೯೭೧ ಇರಬಹುದು ಸಾಗರಕ್ಕೆ ದಿಗ್ಗಜಗಳಿಬ್ಬರ ಆಗಮನವಾಯಿತು. ಅವರೇ ರಂ.ಶ್ರೀ ಮುಗಳಿ. ತಮ್ಮ ಕನ್ನಡ ಸಾಹಿತ್ಯ ಚರಿತ್ರೆ ಗ್ರಂಥದಿಂದ ಕನ್ನಡಧ್ಯಯನಿಗೆ ಚಿರಪರಿಚಿತ ಪಂಡಿತರು. ಇನ್ನೊಬ್ಬರು ಪ್ರೊ. ವಿ.ಕೃ. ಗೋಕಾಕ್ 'ಸಮರಸವೇ ಜೀವನ' ದಂಥ ಬೃಹತ್ ಮಹತ್‌ಗಳ ಕಾದಂಬರಿ ಕರ್ತೃ, ಉದ್ದಾಮ ಸಾಹಿತಿ. ಇಂಗ್ಲಿಷ್ ಅಭ್ಯಸಿಸಿ ಇಂಗ್ಲೆಂಡ್‌ನಲ್ಲಿ ಗೌರವ ಉಪನ್ಯಾಸಕರಾಗಿದ್ದ ಕನ್ನಡ ಸಾಹಿತಿ ವರೇಣ್ಯರು. ಅವರಿಬ್ಬರಿಗೂ ನಡೆದ ಗೌರವ ಸಮಾರಂಭವು ಸಾಗರದ ಸಾಹಿತ್ಯಾಭಿಮಾನಿಗಳೂ ಯಾರೂ ಮರೆಯುವಂಥದಲ್ಲ. ಕಾರ್ಯಕ್ರಮದ ಯೋಜನೆ-ಯೋಚನೆ-ನಿರ್ದೇಶನ-ಉದ್ಯಾಪನೆಯ ಹೊಣೆಗಾರರೂ ಕೂಡ ಅಧ್ಯಕ್ಷ ಶ್ರೀ ಟಿ. ಮಹಾಬಲೇಶ್ವರ ಭಟ್ಟರದ್ದು.

ನಾನು ಪ್ರಥಮತಃ ಕಂಡ ಟಿ. ಮಹಾಬಲೇಶ್ವರ ಭಟ್ಟರಿಗೂ ಇಂದು ಕಾಣುವ ಭಟ್ಟರಿಗೂ ೨೮ ವರ್ಷಗಳು ಹೆಚ್ಚಾಗಿವೆ, ಅಷ್ಟೇ, ಅದನ್ನು ಬಿಟ್ಟರೆ ಯಾವ ಬದಲಾವಣೆಯನ್ನೂ ನಾನಂತು ಕಾಣೆ. ಇಂದಿನ ಅವರ ಅನುಭವ ಕೆಲಕಾಲದ ರಾಜಕಾರಣವನ್ನು ಹೊಂದಿ ಬಂದಿದೆ. ಕೆಲ ಕಾಲಾನಂತರ ಪುನಃ ಸಾಗರ ತಾಲ್ಲೂಕು ಕ.ಸಾ.ಪ.ನ ಅಧ್ಯಕ್ಷರಾಗಿದ್ದಾರೆ. ಅದೇ ಪಂಚೆ, ಅದೇ ಜುಬ್ಬ, ಅಷ್ಟೇ ಕಪ್ಪುಕೂದಲು, ನಸುನಗೆ, ಬದಲಾಗದ ಗಂಭೀರ ಮುಖ ಮುದ್ರೆ, ವ್ಯಕ್ತಿತ್ವ. ಬದಲಾಗದ ನಿಲುವು ತನು-ಮನಗಳಲ್ಲಿ ಚಿಂತನ ಶೀಲತೆಯಲ್ಲಿ ಸಮಾಜ ಸೇವೆ, ಸಾಹಿತ್ಯ ಸೇವೆಯಲ್ಲಿ ನುರಿತಿದ್ದಾರೆ. ಅವರ ಸ್ನೇಹ ವೃತ್ತದಲ್ಲಿ ಪ್ರವೇಶಿಸಿದವರು ಸುಲಭವಾಗಿ ಹೊರ ಬರಲಾರರು. ಅಜಾತ ಶತ್ರು- ಸಾಹಿತಿ ಶ್ರೀ ಭಟ್ಟರ ಸ್ನೇಹದ ಸೂಜಿಗಲ್ಲು ಅಂತಹುದು. ಸಾಗರದ ಜನತೆ ಕಂಡರಿಯದ, ಕೇಳರಿಯದ, ನಗೆ ಸಾಹಿತಿಗಳನ್ನೂ ಚಿಂತನ ಶೀಲರನ್ನು, ಕಲೆಗಾರರನ್ನೂ, ಕವಿಗಳನ್ನು, ಲೇಖಕರನ್ನೂ ಸಾಗರಕ್ಕೆ ಕರೆಯಿಸಿದ್ದಾರೆ. ಜನತೆಗೆ ಪರಿಚಯಿಸಿದ್ದಾರೆ. ಒಮ್ಮೆ ಬಂದವರು ಇನ್ನೊಮ್ಮೆ ಹೀಗೆ ಮತ್ತೆ, ಮತ್ತೆ ಸಾಗರಕ್ಕೆ ಬರಲೇ ಬೇಕೆಂಬಂತೆ ಮಾಡುವ-ಮಾಡಿದ ಶಕ್ತಿ ಬೇರೆಯವರಿಗೆ ಬರದು. ಅವರ ಕರೆ ನಿರಾಕರಿಸಿದ ವ್ಯಕ್ತಿಯಿಲ್ಲ.

ಇಂಥ ಸರಳ ವ್ಯಕ್ತಿತ್ವದ, ನಿರಾಡಂಬರ ವ್ಯಕ್ತಿಗಳು ದುರ್ಲಭ. "Simple Living and High thinking" ಎಂಬ ಮಾತಿಗೆ ಒಳ್ಳೇ ಉದಾಹರಣೆ ಸಾಗರದ ಶ್ರೀ ಟಿ. ಮಹಾಬಲೇಶ್ವರ ಭಟ್ಟರು ಎಂದರೆ ಅತಿಶಯೋಕ್ತಿ ಆಗಲಿಕ್ಕಿಲ್ಲ. ಅವರಿಗೆ ಈಗ ಎಪ್ಪತ್ತು ವರ್ಷ ! ನಂಬಲು ಸಾಧ್ಯವಿಲ್ಲ. ಅವರಿನ್ನೂ ಚಿರಯುವಕ!

# ನೆನಪನ್ನು ಕೆದಕಿದಾಗ

**- ಮೋಹನ. ಗ. ಹೆಗಡೆ**

೧೯೬೮ರ ನವೆಂಬರ್ ತಿಂಗಳಿರಬೇಕು. ಜೀವನ ವೃತ್ತಿಗಾಗಿ ಸಾಗರ ಸೇರಿ ಕೆಲವೇ ತಿಂಗಳು ಕಳೆದಿದ್ದುವು. ಸಾಗರದ ಕನ್ನಡ ಸಂಘದ ಉತ್ಕರ್ಷದ ಕಾಲ. ಸಾಗರ ತಾಲೂಕು ಕನ್ನಡಸಾಹಿತ್ಯಕ ಚಟುವಟಿಕೆಗಳು ಚೆನ್ನಾಗಿ ನಡೆಯುತ್ತಿದ್ದ ವೇಳೆ ಅದು. ಯಾವುದೋ ಒಂದು ಸಾಹಿತ್ಯಕ ಕಾರ್ಯಕ್ರಮಕ್ಕೆ ಪುರಸಭೆಗೆ ಹೋಗಿದ್ದೆ. ಅದರ ಅಧ್ಯಕ್ಷರು ನೀಳವಾದ ಶುಭ್ರ ಕಚ್ಚೆ ಪಂಚೆ, ಬಿಳಿ ನೆಹರು ಜುಬ್ಬ, ಆಚೆ-ಈಚೆ ನೀಟಾಗಿ ಬಾಚಿದ ಹೊಳಪಿನ ಕಪ್ಪುಕೂದಲಿನವರು ನನ್ನನ್ನು ಆಕರ್ಷಿಸಿದರು. ಹಿಂದಿನಿಂದ ಅವರನ್ನು ಹೆಸರು ಕೇಳಿ ತಿಳಿದೆ. ನನ್ನ ಓರ್ವ ಗೆಳೆಯರು 'ಅವರು ಶ್ರೀ ಟಿ. ಮಹಾಬಲೇಶ್ವರ ಭಟ್ಟರು. ಬೇದೂರು ಅವರು ಊರು. ಕನ್ನಡ ಸಂಘದ ಅಧ್ಯಕ್ಷರು, ಲೇಖಕರು, ಕಾದಂಬರಿಗಳನ್ನು ಬರೆದಿದ್ದಾರೆ. ಕತೆ - ಕವನಗಳನ್ನೂ ಬರೀತಾರೆ. ಅವರದೇ ಆದ ಪುಸ್ತಕ ಪ್ರಕಟನಾಲಯ 'ಜಲಂಧರ ಪ್ರಕಾಶನ'ವೂ ಇದೆ. ಅವರದಾದ ಒಂದು ಪುಸ್ತಕದ ಅಂಗಡಿ ಪೇಟೆ ಯ ಹೆದ್ದಾರಿಯಲ್ಲಿದೆ. ನಿಮಗೆ ಬೇಕಾದ ಉತ್ತಮ ಸಾಹಿತ್ಯಕ ಕೃತಿಗಳು ನಿಮಗಲ್ಲಿ ದೊರೆಯುತ್ತವೆ.' ಎಂದರು.

೧೯೬೯ರ ವೇಳೆ ಸಾಗರಕ್ಕೆ ಜ್ಞಾನ ಪೀಠ ಪ್ರಶಸ್ತಿ ವಿಜೇತ ರಾಷ್ಟ್ರಕವಿಗಳನ್ನು ಸನ್ಮಾನಿಸುವ ಯೋಜನೆ ನಡೆದಿತ್ತು. ಕುವೆಂಪು ಬಂದಿದ್ದರು. ಜೊತೆಗೆ ಕುವೆಂಪುರವರ ಸಾಧನೆಗಾಗಿ, ಗಳಿಸಿದ ಪ್ರಶಸ್ತಿಗಾಗಿ ಸನ್ಮಾನವನ್ನು ಪುರಸಭೆಯ ಬಯಲು ರಂಗಮಂದಿರದಲ್ಲಿ ಇಟ್ಟುಕೊಳ್ಳಲಾಗಿತ್ತು. ಪ್ರಥಮತಃ 'ಕನ್ನಡ ಭಾಷೆಗೆ' 'ಜ್ಞಾನ ಪೀಠ' ಪ್ರಶಸ್ತಿ ಸಿಗುವಂತೆ ಮಾಡಿ, ಕನ್ನಡಮ್ಮನ ಪಾದಗಳಿಗೆ ಮಣಿಯುವಂತೆ ಮಾಡಿದ ಮೇರು ಕೃತಿ 'ರಾಮಾಯಣದರ್ಶನಂ' ಸಾಹಿತ್ಯಾಸಕ್ತರಿಗೆ - ಕಲ್ಲು ಸಕ್ಕರೆ; ನಿರಾಸಕ್ತರಿಗೆ - ಕಬ್ಬಿಣದ ಕಡಲೆಯಾದ, ಕೃತಿ ಮಹಾಕಾವ್ಯ. ಅದನ್ನು ಜನ ಸಾಮಾನ್ಯನೂ ಅರ್ಥ ಮಾಡಿಕೊಳಬಲ್ಲ ಪದದ ಗದ್ಯರೂಪಕ್ಕೆ ತಂದ ಲೇಖಕ ಕುವೆಂಪುರವರ ಪ್ರಿಯ ಶಿಷ್ಯ ಸಹೋದ್ಯೋಗಿ ಡಾ. ಪ್ರಭುಶಂಕರ ಕೂಡ ಬಂದಿದ್ದರು. ರಾಮಾಯಣ ದರ್ಶನಂ' ದತ್ತ ಸಾಮಾನ್ಯನೂ ಕಣ್ಣು ಹಾಯಿಸಬಲ್ಲಂತೆ ಮಾಡಿದವರು' 'ರಾಮಾಯಣ ದರ್ಶನಂ ವಚನ ಚಂದ್ರಿಕೆ' ಬರೆದವರು - ಕಾರ್ಯ ಕ್ರಮದ ಪ್ರಾರಂಭದಿಂದ ಅಂತ್ಯದವರೆಗೂ ಏನೋ ಒಂದು ರೀತಿಯ ಶಿಸ್ತು - ವ್ಯವಸ್ಥೆ, ಅಚ್ಚುಕಟ್ಟುತನ, ವೇಳೆಯ ಕರಾರುವಾಕ್ಕುತನ ಏನೋ ಆಕರ್ಷಕತೆ ಕಂಡು ಬಂತು.

ಇನ್ನೊಮ್ಮೆ, ೧೯೫೮-೫೯ ಇರಬೇಕು. ಸಾಗರದಲ್ಲಿ ನಡೆದ ಸಾಹಿತ್ಯ ಸಮ್ಮೇಳನದಲ್ಲಿ. ಪ್ರಸಿದ್ಧ ಕವಿ ಶ್ರೀ ಬಿ.ಹೆಚ್. ಶ್ರೀಧರ್‌ರವರು ಕವಿಗೋಷ್ಠಿಯ ಅಧ್ಯಕ್ಷರಾಗಿದ್ದ ನೆನಪು. ಅತ್ಯಂತ ಸರಳವಾಗಿ, ಅಷ್ಟೇ ಪ್ರಬುದ್ಧವಾಗಿ ನಡೆದ ಆ ಸಾಹಿತ್ಯ ಸಮ್ಮೇಳನದಲ್ಲಿ ನಾನೂ ಒಬ್ಬ ಕವಿಯಾಗಿ ಭಾಗವಹಿಸಿದ್ದಲ್ಲದೆ, ನನ್ನ ಕವನಗಳನ್ನು ಅಂದು ದೇವಂಗಿ ಚಂದ್ರಶೇಖರ್ ಮೊದಲ ಬಾರಿಗೆ ಸುಶ್ರಾವ್ಯವಾಗಿ ಹಾಡಿದ್ದನ್ನು ಕೇಳಿ ಆನಂದಿಸಿದ್ದ ಸವಿನೆನಪು, ಇಂದಿಗೂ ನನ್ನದಾಗಿದೆ. ಆಗ ನಡೆದ ಸಾಗರದ ಸಾಹಿತ್ಯ ಸಮ್ಮೇಳನದ ಬಹು ಪಾಲು ಯಶಸ್ಸಿಗೆ ಕಾರಣರಾಗಿದ್ದವರಲ್ಲಿ ಹಾಗೂ ಎಲ್ಲರ ಮೆಚ್ಚುಗೆ ಗಳಿಸಿದ್ದವರಲ್ಲಿ ಶ್ರೀ ಮಹಾಬಲೇಶ್ವರ ಭಟ್ಟರು ಮುಖ್ಯರು. ನನ್ನ ಮತ್ತು ಶ್ರೀ ಭಟ್ಟರ ವೈಯಕ್ತಿಕ ಪರಿಚಯವಾದದು ಇಂತಹ ಸಾಹಿತ್ಯ ಸಮಾವೇಶದಲ್ಲಿ.

ತದನಂತರದ ವರ್ಷಗಳಲ್ಲಿ ನಾನು ಸರ್ಕಾರದ ಕೆಲ ಪ್ರಮುಖ ಹುದ್ದೆಗಳಲ್ಲಿ ಕೆಲಸ ಮಾಡುತ್ತಿದ್ದಾಗ ಶ್ರೀಯುತರನ್ನು ಸ್ವಯಂ ಸೇವಾ ಸಂಸ್ಥೆಗಳಪ್ರಮುಖರಾಗಿ, ರಾಜಕೀಯ ಮುಂದಾಳುಗಳಾಗಿ, ಸಹಕಾರೀ ಧುರೀಣರಾಗಿ ಎಲ್ಲಕ್ಕೂ ಮೇಲಾಗಿ ಗ್ರಾಮೀಣ ಅಭಿವೃದ್ಧಿ ಬಗ್ಗೆ ಕಳಕಳಿಯ ಚಿಂತಕರಾಗಿ ಕೆಲಸ ಮಾಡಿದ್ದನ್ನು ಕಂಡಿದ್ದೇನೆ. ನನ್ನ ನಿವೃತ್ತಿಯ ನಂತರ ಕಳೆದ ಏಳೆಂಟು ವರ್ಷಗಳಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಹಲವು ಉತ್ತಮ ಕಾರ್ಯಕ್ರಮಗಳಲ್ಲಿ ಅವರೊಂದಿಗೆ ಜೊತೆಗೂಡಿ ಕೆಲಸ ಮಾಡುವ ಸಂದರ್ಭಗಳಲ್ಲೂ ನೋಡಿದ್ದೇನೆ.

ಹೀಗೆ ಕಳೆದ ೪೦ ವರ್ಷಗಳಿಂದ ನಿರಂತರವಾಗಿ ನಮ್ಮ ಅವರ ನಡುವಿನ ಪರಿಚಯ, ಸ್ನೇಹವಾಗಿ, ಸಮಾನ ಸಾಹಿತ್ಯಾಸಕ್ತರಾಗಿ ಹಾಗೂ ಕನ್ನಡದ ವಿನಮ್ರ ಸೇವಕರಾಗಿ ನಡೆದು ಬಂದಿದೆ.

ಇಂತಹ ಹಿನ್ನೆಲೆಯಲ್ಲಿ ಶ್ರೀ ಮಹಾಬಲೇಶ್ವರ ಭಟ್ಟರ ಬಗ್ಗೆ ಒಂದೆರಡು ಮಾತುಗಳನ್ನು ಹೆಚ್ಚಿಗೆ ಬರೆದರೆ, ನುಡಿದರೆ ಅದು ನಿಜಕ್ಕೂ ಉತ್ಪ್ರೇಕ್ಷೆಯಲ್ಲ; ಅನುಭವದ, ವಾಸ್ತವತೆಯ ಮಾತುಗಳು ಎಂದು ಮೊದಲಿಗೇ ಸ್ಪಷ್ಟಪಡಿಸುತ್ತಿದ್ದೇನೆ.

ಶ್ರೀ ಮಹಾಬಲೇಶ್ವರ ಭಟ್ಟರ ವ್ಯಕ್ತಿತ್ವನ್ನು ಹಾಗೂ ಅವರಲ್ಲಿನ ಸಹೃದಯತೆಯನ್ನು ಅರಿಯಬೇಕಾದರೆ ಅವರನ್ನು ಭೇಟಿಯಾದವರಿಗೆ, ಅವರೊಂದಿಗೆ ಒಡನಾಡಿದವರಿಗೆ ಮಾತ್ರ ಸಾಧ್ಯ. ತುಂಬು ಆಕರ್ಷಕ, ಎತ್ತರ ನಿಲುವಿನ, ಸದಾ ಸುಂದರ ಸರಳ ಉಡುಪಿನಲ್ಲಿರುವ, ನಗುಮೊಗದ ಶ್ರೀ ಮಹಾಬಲೇಶ್ವರ ಭಟ್ಟರಲ್ಲಿ ನಾನು ಮೊದಲು ಗುರುತಿಸಿದುದು ಅವರಲ್ಲಿನ ಶ್ರದ್ಧೆ ಮತ್ತು ಉತ್ಸಾಹ. ಅವರು ನಡೆಸಿದ, ನಡೆಸುವ ಕೆಲಸ ಕಾರ್ಯಗಳಲ್ಲಿ ನಿಯೋಜಿಸುವ ಕಾರ್ಯಕ್ರಮಗಳಲ್ಲಿ

# ಸಹೃದಯಿ ಸಂಘಟಕ

- ಕ. ಮ. ಶಿ. ಚಂದ್ರಶೇಖರಯ್ಯ

೧೯೫೩ನೇ ಜನವರಿ ತಿಂಗಳ ಮೊದಲ ವಾರದಲ್ಲಿ ಬೆಂಗಳೂರಿನಿಂದ ಪ್ರಕಟವಾಗುತ್ತಿದ್ದ 'ರಾಮರಾಜ್ಯ' ಮಾಸಪತ್ರಿಕೆಯ ಸಂಪಾದಕರು ಎರಡು ಪುಸ್ತಕಗಳನ್ನು ನನಗೆ ಕಳುಹಿಸಿ ಅವುಗಳ ವಿಮರ್ಶೆ ಕಳಿಸಲು ಸೂಚಿಸಿದ್ದರು. 'ಮೈಸೂರಿನ ಉಕ್ಕಿನ ಮನುಷ್ಯ' - ೩೮ ಪುಟಗಳ, ಆರಾಣೆ ಬೆಲೆಯ ಆಂಗ್ಲ ಭಾಷೆಯಿಂದ ಅನುವಾದಿತವಾದ ಪುಟ್ಟ ಪುಸ್ತಕ. ಮೈಸೂರಿನ ಉಕ್ಕಿನ ಮನುಷ್ಯರೆಂದು ಪ್ರಖ್ಯಾತರಾಗಿದ್ದ, ಸ್ವಾತಂತ್ರ್ಯಕ್ಕಾಗಿ ನಿರಂತರ ಹೋರಾಟ ನಡೆಸಿ ಸೆರೆಮನೆ ವಾಸವನ್ನು ದೀರ್ಘಕಾಲ ಅನುಭವಿಸಿದ್ದ ಶಿವಮೊಗ್ಗದವರೇ ಆದ ಶ್ರೀ ಹೆಚ್. ಸಿದ್ದಯ್ಯನವರ ಜೀವನ ಕುರಿತ ಪುಸ್ತಕ ಅದು. ಅದರ ಮೂಲಕ ಲೇಖಕರು ನನ್ನ ವಿದ್ಯಾ ಗುರುಗಳಾಗಿದ್ದ ದಾವಣಗೆರೆಯ ಶ್ರೀ ಕೆ. ವೀರಭದ್ರಪ್ಪನವರು. ಇನ್ನೊಂದು ಪುಸ್ತಕ 'ಹೊಸೂರಿನ ಹಲವರು' ಜನಜೀವನ ಚಿತ್ರಣ. 'ಮೈಸೂರಿನ ಉಕ್ಕಿನ ಮನುಷ್ಯ' ಪುಸ್ತಕದ ಮುನ್ನುಡಿ ಬರೆದವರು ಆಗಲೇ ಪ್ರಸಿದ್ಧ ಬರಹಗಾರರಾಗಿದ್ದ ಶ್ರೀ ಪ.ಸು. ಭಟ್ಟರು. ಹೀಗಾಗಿಪುಸ್ತಕಗಳು ಮೊದಲ ನೋಟಕ್ಕೆ ನನ್ನನ್ನು ಓದಲು ಹುರಿದುಂಬಿಸಿದುವು.

'... ನಮ್ಮ ಕನ್ನಡ ನಾಡಿನವರೇ ಆದ ಶ್ರೀ ಸಿದ್ದಯ್ಯನವರ ಪರಿಚಯ ಕನ್ನಡಿಗರಿಗೂ ಆಗಲೆಂಬ ಸದುದ್ದೇಶದಿಂದ ಸಾಗರದ ತರುಣ ಲೇಖಕರಾದ ಶ್ರೀ ಟಿ. ಮಹಾಬಲೇಶ್ವರ ಭಟ್ಟರು ಇದನ್ನುಕನ್ನಡಕ್ಕೆ ಅನುವಾದಿಸಿದ್ದಾರೆ. ಮಹಾಬಲೇಶ್ವರ ಭಟ್ಟರ ಪರಿಚಯ ಕನ್ನಡ ಓದುಗರಿಗೆ ಅನಾವಶ್ಯ. ಏಕೆಂದರೆ ಈಗಾಗಲೇ 'ತೋರಣ' 'ಗುಲಾಬಿ' 'ಹೂಮಾಲೆ' ಮೊದಲಾದ ಹಲವು ಪುಸ್ತಕಗಳನ್ನು ಬರೆದುಪ್ರಕಟಿಸಿದ್ದಾರೆ. ಕವಿಯಾಗಿ ಹಾಡಿದ್ದಾರೆ. ಕತೆಗಾರರಾಗಿ ಜೀವನದ ಸಿಹಿಕಹಿಗಳನ್ನು ಓದುಗರಿಗೆ ಉಣಿಸಿದ್ದಾರೆ. ನಾಟಕಗಳನ್ನು ಕೂಡ ಬರೆದಿದ್ದಾರೆಂದು ಕೇಳಿದ್ದೇನೆ. ಅಲ್ಲದೆ ಇನ್ನು 'ಡಜನ್' ಗಟ್ಟಲೆ ಪುಸ್ತಕಗಳನ್ನು ಬರೆದು ಪ್ರಕಟಗೊಳಿಸುವವರಿದ್ದಾರೆ. ಅವರಲ್ಲಿ ಉತ್ಸಾಹವಿದೆ. ಆ ಉತ್ಸಾಹವೇ ಅವರನ್ನು ಮುಂದೆ ಮುಂದೆ ಕೊಂಡೊಯ್ಯುತ್ತಿದೆ.' ಶ್ರೀ ಪ.ಸು. ಭಟ್ಟರ ಮುನ್ನುಡಿಯಲ್ಲಿನ ಈ ಕೆಲ ಮಾತುಗಳು ಶ್ರೀ ಮಹಾಬಲೇಶ್ವರ ಭಟ್ಟರನ್ನು ಮೊದಲಬಾರಿಗೆ ಸಾಹಿತ್ಯಿಕವಾಗಿ ನನಗೆ ಪರಿಚಯಿಸಿದವು.

ಇನ್ನೊಮ್ಮೆ, ೧೯೫೮-೫೯ ಇರಬೇಕು. ಸಾಗರದಲ್ಲಿ ನಡೆದ ಸಾಹಿತ್ಯ ಸಮ್ಮೇಳನದಲ್ಲಿ. ಪ್ರಸಿದ್ಧ ಕವಿ ಶ್ರೀ ಜಿ.ಹೆಚ್. ಶ್ರೀಧರ್‌ರವರು ಕವಿಗೋಷ್ಠಿಯ ಅಧ್ಯಕ್ಷರಾಗಿದ್ದ ನೆನಪು. ಅತ್ಯಂತ ಸರಳವಾಗಿ, ಅಷ್ಟೇ ಪ್ರಬುದ್ಧವಾಗಿ ನಡೆದ ಆ ಸಾಹಿತ್ಯ ಸಮ್ಮೇಳನದಲ್ಲಿ ನಾನೂ ಒಬ್ಬ ಕವಿಯಾಗಿ ಭಾಗವಹಿಸಿದ್ದಲ್ಲದೆ, ನನ್ನ ಕವನಗಳನ್ನು ಅಂದು ದೇವಂಗಿ ಚಂದ್ರಶೇಖರ್ ಮೊದಲ ಬಾರಿಗೆ ಸುಶ್ರಾವ್ಯವಾಗಿ ಹಾಡಿದ್ದನ್ನು ಕೇಳಿ ಆನಂದಿಸಿದ್ದ ಸವಿನೆನಪು, ಇಂದಿಗೂ ನನ್ನದಾಗಿದೆ. ಆಗ ನಡೆದ ಸಾಗರದ ಸಾಹಿತ್ಯ ಸಮ್ಮೇಳನದ ಬಹು ಪಾಲು ಯಶಸ್ಸಿಗೆ ಕಾರಣರಾಗಿದ್ದವರಲ್ಲಿ ಹಾಗೂ ಎಲ್ಲರ ಮೆಚ್ಚುಗೆ ಗಳಿಸಿದ್ದವರಲ್ಲಿ ಶ್ರೀ ಮಹಾಬಲೇಶ್ವರ ಭಟ್ಟರು ಮುಖ್ಯರು. ನನ್ನ ಮತ್ತು ಶ್ರೀ ಭಟ್ಟರ ವೈಯಕ್ತಿಕ ಪರಿಚಯವಾದದು ಇಂತಹ ಸಾಹಿತ್ಯ ಸಮಾವೇಶದಲ್ಲಿ.

ತದನಂತರದ ವರ್ಷಗಳಲ್ಲಿ ನಾನು ಸರ್ಕಾರದ ಕೆಲ ಪ್ರಮುಖ ಹುದ್ದೆಗಳಲ್ಲಿ ಕೆಲಸ ಮಾಡುತ್ತಿದ್ದಾಗ ಶ್ರೀಯುತರನ್ನು ಸ್ವಯಂ ಸೇವಾ ಸಂಸ್ಥೆಗಳಪ್ರಮುಖರಾಗಿ, ರಾಜಕೀಯ ಮುಂದಾಳುಗಳಾಗಿ, ಸಹಕಾರೀ ಧುರೀಣರಾಗಿ ಎಲ್ಲಕ್ಕೂ ಮೇಲಾಗಿ ಗ್ರಾಮೀಣ ಅಭಿವೃದ್ಧಿ ಬಗ್ಗೆ ಕಳಕಳಿಯ ಚಿಂತಕರಾಗಿ ಕೆಲಸ ಮಾಡಿದ್ದನ್ನು ಕಂಡಿದ್ದೇನೆ. ನನ್ನ ನಿವೃತ್ತಿಯ ನಂತರ ಕಳೆದ ಏಳೆಂಟು ವರ್ಷಗಳಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಹಲವು ಉತ್ತಮ ಕಾರ್ಯಕ್ರಮಗಳಲ್ಲಿ ಅವರೊಂದಿಗೆ ಜೊತೆಗೂಡಿ ಕೆಲಸ ಮಾಡುವ ಸಂದರ್ಭಗಳಲ್ಲೂ ನೋಡಿದ್ದೇನೆ.

ಹೀಗೆ ಕಳೆದ ೪೦ ವರ್ಷಗಳಿಂದ ನಿರಂತರವಾಗಿ ನಮ್ಮ ಅವರ ನಡುವಿನ ಪರಿಚಯ, ಸ್ನೇಹವಾಗಿ, ಸಮಾನ ಸಾಹಿತ್ಯಾಸಕ್ತರಾಗಿ ಹಾಗೂ ಕನ್ನಡದ ವಿನಮ್ರ ಸೇವಕರಾಗಿ ನಡೆದು ಬಂದಿದೆ.

ಇಂತಹ ಹಿನ್ನೆಲೆಯಲ್ಲಿ ಶ್ರೀ ಮಹಾಬಲೇಶ್ವರ ಭಟ್ಟರ ಬಗ್ಗೆ ಒಂದೆರಡು ಮಾತುಗಳನ್ನು ಹೆಚ್ಚಿಗೆ ಬರೆದರೆ, ನುಡಿದರೆ ಅದು ನಿಜಕ್ಕೂ ಉತ್ಪ್ರೇಕ್ಷೆಯಲ್ಲ; ಅನುಭವದ, ವಾಸ್ತವತೆಯ ಮಾತುಗಳು ಎಂದು ಮೊದಲಿಗೇ ಸ್ಪಷ್ಟಪಡಿಸುತ್ತಿದ್ದೇನೆ.

ಶ್ರೀ ಮಹಾಬಲೇಶ್ವರ ಭಟ್ಟರ ವ್ಯಕ್ತಿತ್ವನ್ನು ಹಾಗೂ ಅವರಲ್ಲಿನ ಸಹೃದಯತೆಯನ್ನು ಅರಿಯಬೇಕಾದರೆ ಅವರನ್ನು ಭೇಟಿಯಾದವರಿಗೆ, ಅವರೊಂದಿಗೆ ಒಡನಾಡಿದವರಿಗೆ ಮಾತ್ರ ಸಾಧ್ಯ. ತುಂಬು ಆಕರ್ಷಕ, ಎತ್ತರ ನಿಲುವಿನ, ಸದಾ ಸುಂದರ ಸರಳ ಉಡುಪಿನಲ್ಲಿರುವ, ನಗುಮೊಗದ ಶ್ರೀ ಮಹಾಬಲೇಶ್ವರ ಭಟ್ಟರಲ್ಲಿ ನಾನು ಮೊದಲು ಗುರುತಿಸಿದುದು ಅವರಲ್ಲಿನ ಶ್ರದ್ಧೆ ಮತ್ತು ಉತ್ಸಾಹ. ಅವರು ನಡೆಸಿದ, ನಡೆಸುವ ಕೆಲಸ ಕಾರ್ಯಗಳಲ್ಲಿ ನಿಯೋಜಿಸುವ ಕಾರ್ಯಕ್ರಮಗಳಲ್ಲಿ

# ಸಹೃದಯಿ ಸಂಘಟಕ

– ಕ. ಮ. ಶಿ. ಚಂದ್ರಶೇಖರಯ್ಯ

೧೯೫೬ನೇ ಜನವರಿ ತಿಂಗಳ ಮೊದಲ ವಾರದಲ್ಲಿ ಬೆಂಗಳೂರಿನಿಂದ ಪ್ರಕಟವಾಗುತ್ತಿದ್ದ 'ರಾಮರಾಜ್ಯ' ಮಾಸಪತ್ರಿಕೆಯ ಸಂಪಾದಕರು ಎರಡು ಪುಸ್ತಕಗಳನ್ನು ನನಗೆ ಕಳುಹಿಸಿ ಅವುಗಳ ವಿಮರ್ಶೆ ಕಳಿಸಲು ಸೂಚಿಸಿದ್ದರು. 'ಮೈಸೂರಿನ ಉಕ್ಕಿನ ಮನುಷ್ಯ' - ೨೮ ಪುಟಗಳ, ಆರಾಣೆ ಬೆಲೆಯ ಆಂಗ್ಲ ಭಾಷೆಯಿಂದ ಅನುವಾದಿತವಾದ ಪುಟ್ಟ ಪುಸ್ತಕ. ಮೈಸೂರಿನ ಉಕ್ಕಿನ ಮನುಷ್ಯರೆಂದು ಪ್ರಖ್ಯಾತರಾಗಿದ್ದ, ಸ್ವಾತಂತ್ರ್ಯಕ್ಕಾಗಿ ನಿರಂತರ ಹೋರಾಟ ನಡೆಸಿ ಸೆರೆಮನೆ ವಾಸವನ್ನು ದೀರ್ಘಕಾಲ ಅನುಭವಿಸಿದ್ದ ಶಿವಮೊಗ್ಗದವರೇ ಆದ ಶ್ರೀ ಹೆಚ್. ಸಿದ್ದಯ್ಯನವರ ಜೀವನ ಕುರಿತ ಪುಸ್ತಕ ಅದು. ಅದರ ಮೂಲಕ ಲೇಖಕರು ನನ್ನ ವಿದ್ಯಾಗುರುಗಳಾಗಿದ್ದ ದಾವಣಗೆರೆಯ ಶ್ರೀ ಕೆ. ವೀರಭದ್ರಪ್ಪನವರು. ಇನ್ನೊಂದು ಪುಸ್ತಕ 'ಹೊಸೂರಿನ ಹಲವರು' ಜನಜೀವನ ಚಿತ್ರಣ. 'ಮೈಸೂರಿನ ಉಕ್ಕಿನ ಮನುಷ್ಯ' ಪುಸ್ತಕದ ಮುನ್ನುಡಿ ಬರೆದವರು ಆಗಲೇ ಪ್ರಸಿದ್ಧ ಬರಹಗಾರರಾಗಿದ್ದ ಶ್ರೀ ಪ.ಸು. ಭಟ್ಟರು. ಹೀಗಾಗಿಪುಸ್ತಕಗಳು ಮೊದಲ ನೋಟಕ್ಕೆ ನನ್ನನ್ನು ಓದಲು ಹುರಿದುಂಬಿಸಿದುವು.

'... ನಮ್ಮ ಕನ್ನಡ ನಾಡಿನವರೇ ಆದ ಶ್ರೀ ಸಿದ್ದಯ್ಯನವರ ಪರಿಚಯ ಕನ್ನಡಿಗರಿಗೂ ಆಗಲೆಂಬ ಸದುದ್ದೇಶದಿಂದ ಸಾಗರದ ತರುಣ ಲೇಖಕರಾದ ಶ್ರೀ ಟಿ. ಮಹಾಬಲೇಶ್ವರ ಭಟ್ಟರು ಇದನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಮಹಾಬಲೇಶ್ವರ ಭಟ್ಟರ ಪರಿಚಯ ಕನ್ನಡ ಓದುಗರಿಗೆ ಅನಾವಶ್ಯ. ಏಕೆಂದರೆ ಈಗಾಗಲೇ 'ತೋರಣ' 'ಗುಲಾಬಿ' 'ಹೂಮಾಲೆ' ಮೊದಲಾದ ಹಲವು ಪುಸ್ತಕಗಳನ್ನು ಬರೆದುಪ್ರಕಟಿಸಿದ್ದಾರೆ. ಕವಿಯಾಗಿ ಹಾಡಿದ್ದಾರೆ. ಕತೆಗಾರರಾಗಿ ಜೀವನದ ಸಿಹಿಕಹಿಗಳನ್ನು ಓದುಗರಿಗೆ ಉಣಿಸಿದ್ದಾರೆ. ನಾಟಕಗಳನ್ನು ಕೂಡ ಬರೆದಿದ್ದಾರೆಂದು ಕೇಳಿದ್ದೇನೆ. ಅಲ್ಲದೆ ಇನ್ನು 'ಡಜನ್' ಗಟ್ಟಲೆ ಪುಸ್ತಕಗಳನ್ನು ಬರೆದು ಪ್ರಕಟಗೊಳಿಸುವವರಿದ್ದಾರೆ. ಅವರಲ್ಲಿ ಉತ್ಸಾಹವಿದೆ. ಆ ಉತ್ಸಾಹವೇ ಅವರನ್ನು ಮುಂದೆ ಮುಂದೆ ಕೊಂಡೊಯ್ಯುತ್ತಿದೆ.' ಶ್ರೀ ಪ.ಸು. ಭಟ್ಟರ ಮುನ್ನುಡಿಯಲ್ಲಿನ ಈ ಕೆಲ ಮಾತುಗಳು ಶ್ರೀ ಮಹಾಬಲೇಶ್ವರ ಭಟ್ಟರನ್ನು ಮೊದಲಬಾರಿಗೆ ಸಾಹಿತ್ಯಿಕವಾಗಿ ನನಗೆ ಪರಿಚಯಿಸಿದವು.

ಮಾಡುವುದ ಮಾಡು, ಅದಕಿಲ್ಲ ಕೇಡು
ಒಳಿತಿರಲಿ ನಡೆವ ದಾರಿ.
× × × ×
ದೊಡ್ಡವರ ದಾರಿ ನಿನಗಿರಲು ಸಾರಿ
ಕುಳಿತಿರಲು ನೀನೆ ಹೇಡಿ–ಎನ್ನುವ ಕವಿವಾಣಿಯಂತೆ

ಮಹಾಬಲೇಶ್ವರ ಭಟ್ಟರದು ಒಳಿತಿನದಾರಿ, ಸರ್ವರ ಹಿತ ಬಯಸುವ ಗುರಿ, ಮತ್ತು ಅವರದು ಸಂಘಟನಾ ಕೌಶಲ್ಯದ ಹೆದ್ದಾರಿ. ವಿನಯಶೀಲರಾದ ಶ್ರೀಯುತರು ಕನ್ನಡ ನುಡಿಗೆ, ನಾಡಿಗೆ ಮತ್ತು ಜನತೆಗೆ ಸಲ್ಲಿಸಿರುವ ಸೇವೆ ಅಪಾರ, ಎಲ್ಲರಿಗೂ ಮಾರ್ಗದರ್ಶಕ ವಿಚಾರ.

ಶ್ರೀ ತೊರೆಮನೆ ಮಹಾಬಲೇಶ್ವರ ಭಟ್ಟರಿಂದ ನಾಡು ನುಡಿಯ ಸೇವೆ ನಿರಂತರವಾಗಿ ನಡೆಯುವಂತೆ ಕನ್ನಡ ರಾಜರಾಜೇಶ್ವರಿ ತಾಯಿ ಭುವನೇಶ್ವರಿ ಆಶೀರ್ವದಿಸಲಿ ಎಂದು ಪ್ರಾರ್ಥಿಸುವುದು ನಮ್ಮಂತಹ ಮಿತ್ರರು ಬಯಸುವ ಸದಾಶಯ; ಶುಭಾಶಯ.



ಶ್ರೀ ಟಿ. ಮಹಾಬಲೇಶ್ವರ ಭಟ್ಟರು. ಮತ್ತು ಪತ್ನಿ ಶ್ರೀಮತಿ ಪದ್ಮಾವತಿಯವರು.



ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಡಾ॥ ಸಾ.ಶಿ. ಮರುಳಯ್ಯನವರೊಡನೆ
ಶ್ರೀ ಟಿ. ಮಹಾಬಲೇಶ್ವರ ಭಟ್ಟರು

ದೆಹಲಿಯ ಶಾಂತಿವನದಲ್ಲಿರುವ, ದಿ. ಜವಾಹರಲಾಲ್ ನೆಹರೂ ರವರ
ಸಮಾಧಿಗೆ ಪುಷ್ಪಗುಚ್ಛ ಅರ್ಪಿಸುತ್ತಿರುವ, ಶ್ರೀ ಟಿ. ಮಹಾಬಲೇಶ್ವರ ಭಟ್ಟರು

ಸಾಗರಕ್ಕೆ ೯ ಕಿ.ಮೀ. ಸಮೀಪವಿರುವ, ಬರೂರಿನ ತಮ್ಮ ಮನೆಯ
ಮುಂಭಾಗದಲ್ಲಿ ತಮ್ಮ ಸ್ನೇಹಿತರೊಂದಿಗೆ ಶ್ರೀ ಟಿ. ಮಹಾಬಲೇಶ್ವರ ಭಟ್ಟರು

ಸ್ನೇಹಿತರಾದ, ಸಾಹಿತಿ ನಿರಂಜನರವರು, ಧೀರ್ಘಕಾಲ ಅನಾರೋಗ್ಯದಲ್ಲಿದ್ದಾಗ ಅವರ
ಮನೆಯಲ್ಲಿ, ಅವರ ಆರೋಗ್ಯದ ಬಗ್ಗೆ ವಿಚಾರಿಸುತ್ತಿರುವ,
ಶ್ರೀ ಟಿ. ಮಹಾಬಲೇಶ್ವರ ಭಟ್ಟರು

ಶ್ರೀ ಟಿ. ಮಹಾಬಲೇಶ್ವರ ಭಟ್ಟರು, ಡಾ॥ ಎಸ್.ಎಲ್. ಭೈರಪ್ಪ, ಡಾ॥ ಹಾ.ಮಾ. ನಾಯಕ
– ಶಿವಮೊಗ್ಗೆಯ ಒಂದು ಸಮಾರಂಭದಲ್ಲಿ.

ಭಾರತೀಯ ವಿದ್ಯಾಭವನ, ಬೆಂಗಳೂರು ಕೇಂದ್ರದ, ಅಧ್ಯಕ್ಷರೂ, ಹಾಗೂ ಸರ್ವೋಚ್ಚ ನ್ಯಾಯಾಲಯದ ಮಾನ್ಯ ನಿವೃತ್ತ ಮುಖ್ಯ ನ್ಯಾಯಾಧೀಶರಾದ, ಶ್ರೀ ಇ.ಎಸ್. ವೆಂಕಟರಾಮಯ್ಯ ನವರನ್ನು ಗೌರವಿಸುತ್ತಿರುವ ಶ್ರೀ ಟಿ. ಮಹಾಬಲೇಶ್ವರ ಭಟ್ಟರು.

ಶಿವಮೊಗ್ಗೆಯ, ಪ್ರಮುಖ ಸಾಹಿತ್ಯ ಸಮಾರಂಭವೊಂದರಲ್ಲಿ ಶ್ರೀ ಟಿ. ಮಹಾಬಲೇಶ್ವರ ಭಟ್ಟರೊಂದಿಗೆ ಶ್ರೀ ಕೆ. ವಾಸುದೇವಾಚಾರ್. ಶ್ರೀನಿವಾಸ ಉಡುಪರು, ಹಾಗೂ ಹಿರಿಯ ಪತ್ರಕರ್ತ ಡಾ॥ ಪಾಟೀಲ ಪುಟ್ಟಪ್ಪನವರು.

ಮಲೆನಾಡು ಅಭಿವೃದ್ಧಿ ಪ್ರತಿಷ್ಠಾನದ, ಧೀರ್ಘಕಾಲದ ಉಪಾಧ್ಯಕ್ಷರಾಗಿ, ಸೇವೆಸಲ್ಲಿಸಿದ ಶ್ರೀ ಟಿ. ಮಹಾಬಲೇಶ್ವರ ಭಟ್ಟರ ಸೇವೆಯನ್ನು ಸ್ಮರಿಸಿ, ಕಾಲೇಜಿನ ಬೆಳ್ಳಿ ಹಬ್ಬದ ಸಂದರ್ಭದಲ್ಲಿ ಅವರನ್ನು ಶಾಸಕ, ಶ್ರೀ ಕಾಗೋಡು ತಿಮ್ಮಪ್ಪನವರು ಸನ್ಮಾನಿಸುತ್ತಿರುವುದು.

ಶ್ರೀ ಟಿ. ಮಹಾಬಲೇಶ್ವರ ಭಟ್ಟರೊಂದಿಗೆ, ಚಲನಚಿತ್ರ ನಟ, ಶ್ರೀಧರ್, ಮತ್ತು ಚಿತ್ರ ನಿರ್ದೇಶಕ ಶ್ರೀ ಟಿ.ಎಸ್. ನಾಗಾಭರಣ. ಸಂದರ್ಭ – 'ಆಸ್ಫೋಟ' ಚಲನಚಿತ್ರ ಚಿತ್ರೀಕರಣ

ಅ.ನ.ಕೃ.ರವರ, ಪುನರ್ಮುದ್ರಿತ ಕಾದಂಬರಿಗಳಾದ, 'ಹೃದಯಸಾಮ್ರಾಜ್ಯ' 'ಧರ್ಮಪತ್ನಿ' ಪುಸ್ತಕಗಳನ್ನು ಬಿಡುಗಡೆ ಮಾಡುತ್ತಿರುವ, ಶ್ರೀ ಟಿ. ಮಹಾಬಲೇಶ್ವರ ಭಟ್ಟರು, – ಜೊತೆಯಲ್ಲಿ ಡಾ॥ ಸಾ. ಶಿ. ಮರುಳಯ್ಯ ಹಾಗೂ ಶ್ರೀ ಬಿ. ಎಂ. ರಂಗನಾಥ್

ಶ್ರೀ ಟಿ. ಮಹಾಬಲೇಶ್ವರ ಭಟ್ಟ ರೊಂದಿಗೆ, ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ, ಡಾ॥ ಯು. ಆರ್. ಅನಂತಮೂರ್ತಿ, ಹಾಗೂ, ಮ್ಯಾಗಸೇಸೆ ಪ್ರಶಸ್ತಿ ಪಡೆದ ಶ್ರೀ ಕೆ.ವಿ. ಸುಬ್ಬಣ್ಣ

ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ, ಡಾ॥ ದ.ರಾ.ಬೇಂದ್ರೆಯುವರ ಸಾಹಿತ್ಯ ವಿಚಾರಗೋಷ್ಠಿ ಅಧ್ಯಕ್ಷತೆವಹಿಸಿದಾಗ - ಡಾ॥ ಸಾ.ಶಿ. ಮರುಳಯ್ಯ ಮತ್ತು ವಿಮರ್ಶಕ, ಟಿ. ಪಿ. ಅಶೋಕ, ಅಕ್ಕಪಕ್ಕದಲ್ಲಿ

ಬೆಂಗಳೂರಿನ ದೇವುಡು ಪ್ರತಿಷ್ಠಾನದ ಅಧ್ಯಕ್ಷರಾದ ಶ್ರೀ ಗಂಗಾಧರ ದೇವುಡುರವರು ಶ್ರೀ ಟಿ. ಮಹಾಬಲೇಶ್ವರ ಭಟ್ಟರಿಗೆ ದೇವುಡು ಲಾಂಛನವನ್ನು ನೀಡಿ ಗೌರವಿಸುತ್ತಿರುವುದು.

ಶ್ರೀ ಟಿ. ಮಹಾಬಲೇಶ್ವರ ಭಟ್ಟರೊಂದಿಗೆ ಖ್ಯಾತ ಲಲಿತ ಪ್ರಬಂಧಕಾರರಾದ, ಪ್ರೊ. ಅ. ರಾ. ಮಿತ್ರ ಹಾಗೂ ಅಭಿನಂದನ ಗ್ರಂಥ ಸಂಪಾದಕರಾದ, ಶ್ರೀ ಪ್ರಕಾಶ್ ಆರ್. ಕಮ್ಮಾರ್, ಮತ್ತು ಶ್ರೀ ತಿರುಮಲ ಮಾವಿನಕುಳಿ.

ಶ್ರೀ ಟಿ. ಮಹಾಬಲೇಶ್ವರ ಭಟ್ಟರು, ತಮ್ಮ ಕುಟುಂಬದ ಸದಸ್ಯರೊಡನೆ

ಶ್ರೀ ಟಿ. ಮಹಾಬಲೇಶ್ವರ ಭಟ್ಟರೊಂದಿಗೆ, ಸಾಹಿತಿ ಹಾಗೂ ಚಿತ್ರ ಗ್ರಾಹಕ ಡಾ॥ ಡಿ. ವಿ. ರಾವ್ ಮತ್ತು ವಿದ್ವಾನ್ ಎನ್. ರಂಗನಾಥ ಶರ್ಮಾ



ಬೇದೂರಿನ ಮನೆಗೆ ಬಂದ, ಡಾ॥ ಗೊರೂರು ರಾಮಸ್ವಾಮಿ ಅಯ್ಯಂಗಾರ್‌ರವರನ್ನು, ಶ್ರೀ. ಟಿ. ಮಹಾಬಲೇಶ್ವರ ಭಟ್ಟರು ಗೌರವಿಸುತ್ತಿರುವ ಸಂದರ್ಭದ ಒಂದು ರಸನಿಮಿಷ

೧೯೭೦ರಲ್ಲಿ, ಸಾಗರದಲ್ಲಿ, ರಾಷ್ಟ್ರಕವಿ ಕುವೆಂಪು ರವರನ್ನು, ಸಾಗರ ತಾಲ್ಲೂಕಿನ ಜನತೆಯ ಪರವಾಗಿ, ಸಾಗರದ ಕನ್ನಡ ಸಂಘದ ವತಿಯಿಂದ, ಅಧ್ಯಕ್ಷರಾದ ಶ್ರೀ ಟಿ. ಮಹಾಬಲೇಶ್ವರ ಭಟ್ಟರು, ಅವರಿಗೆ ಗಂಧದ ಕರಂಡಕ ನೀಡಿ, ಸನ್ಮಾನಿಸುತ್ತಿರುವುದು. ಪಕ್ಕದಲ್ಲಿ ನ್ಯಾಯಮೂರ್ತಿ ಟಿ. ಕೆ. ತುಕೋಳ್

ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ, ವರಕವಿ, ಡಾ॥ ದ. ರಾ. ಬೇಂದ್ರೆಯವರಿಂದ, ಆಶೀರ್ವಾದ ಪಡೆಯುತ್ತಿರುವ, ಶ್ರೀ ಟಿ. ಮಹಾಬಲೇಶ್ವರ ಭಟ್ಟರು.

ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ, ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರರೊಡನೆ

ಸಾಗರದಲ್ಲಿ ನಡೆದ, ಶಿವಮೊಗ್ಗ ಜಿಲ್ಲಾ ಸಾಹಿತ್ಯ ಸಮ್ಮೇಳನದಲ್ಲಿ ದಿ. ಗೋವಿಂದರಾಜು, ಪ್ರೊ. ಎಸ್.ವಿ. ಪರಮೇಶ್ವರ ಭಟ್ಟರು, ಡಾ॥ ಹಂಪ. ನಾಗರಾಜಯ್ಯ, ದಿ. ಬಸವರಾಜ ಕಟ್ಟಿಮನಿಯವರೊಂದಿಗ ಶ್ರೀ ಟಿ. ಮಹಾಬಲೇಶ್ವರ ಭಟ್ಟರು

ಶ್ರೀ ಟಿ. ಮಹಾಬಲೇಶ್ವರ ಭಟ್ಟರು, ಸಾಗರದಲ್ಲಿ, ತಮ್ಮ ಅರವತ್ತನೇ ಹುಟ್ಟು ಹಬ್ಬದ ಸಂದರ್ಭದಲ್ಲಿ ಸಾಗರದ ಮಹಾಜನತೆಯಿಂದ ಸನ್ಮಾನಿತರಾದಾಗ, ಅಭಿಮಾನಿಗಳ ಅಕ್ಕರದ, ಗಂಧದ ಹಾರಗಳ ರಾಶಿಯೊಂದಿಗೆ ವಿನಮ್ರರಾಗಿ ಕೈಮುಗಿಯುತ್ತಿರುವುದು.

ಶ್ರೀ. ಟಿ. ಮಹಾಬಲೇಶ್ವರ ಭಟ್ಟರೊಡನೆ, ಹಿರಿಯ ಚಲನಚಿತ್ರ ನಿರ್ದೇಶಕರಾದ ಶ್ರೀ ಪುಟ್ಟಣ್ಣ ಕಣಗಾಲ್. - "ಅಮೃತ ಘಳಿಗೆ" ಚಲನ ಚಿತ್ರದ ಚಿತ್ರೀಕರಣ ಸಂದರ್ಭದಲ್ಲಿ.

ಶ್ರೀ ಟಿ. ಮಹಾಬಲೇಶ್ವರ ಭಟ್ಟರ ಮನೆಯಲ್ಲಿ ಒಂದು ಅಪೂರ್ವ ಸಂದರ್ಭ, ಶ್ರೀ ಭಟ್ಟರೊಂದಿಗೆ, ಹಿರಿಯಕವಿ, ಡಾ॥ ಪು. ತಿ. ನರಸಿಂಹಾಚಾರ್, ಶ್ರೀ ನಿಟ್ಟೂರು ಶ್ರೀನಿವಾಸರಾವ್, ಕೆಳದಿ ಗುಂಡಾಜೋಯಿಸ್, ಮತ್ತು ಶ್ರೀ ಹೊಸಬಾಳೆ ಸೀತಾರಾಮರಾವ್.

ಪುಸ್ತಕ ಬಿಡುಗಡೆ ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಶ್ರೀ ಟಿ. ಮಹಾಬಲೇಶ್ವರ ಭಟ್ಟರೊಂದಿಗೆ, ಖ್ಯಾತವಿಮರ್ಶಕ ಡಾ॥ ಸಿ.ಎನ್. ರಾಮಚಂದ್ರನ್ ಮತ್ತು ಪುಸ್ತಕ ಬಿಡುಗಡೆ ಮಾಡಿದ ಸಾಹಿತಿ, ಪ್ರೊ. ಎಂ. ರಾಮಚಂದ್ರ.

ಸಾಗರದಲ್ಲಿ, ಕವಿ, ಶ್ರೀ ಬೇದರಡ್ಡಿ ಹಳ್ಳಿ ಪಂಪಣ್ಣನವರ 'ಬಿಂದುಮೊಗ್ಗು', 'ಮಾವು ಮಲ್ಲಿಗೆ' ಎರಡು ಕವನ ಸಂಕಲನಗಳನ್ನು ಶ್ರೀ ಟಿ. ಮಹಾಬಲೇಶ್ವರ ಭಟ್ಟರು ಬಿಡುಗಡೆ ಮಾಡುತ್ತಿರುವುದು. ಖ್ಯಾತ ಕಾದಂಬರಿಕಾರ, ಶ್ರೀನಿವಾಸ ಉಡುಪರು ಮತ್ತು ಬೇದರಡ್ಡಿ ಹಳ್ಳಿ ಪಂಪಣ್ಣ, ಎಡಬಲದಲ್ಲಿ ೨೮.೭.೧೯೯೮.

ಶ್ರೀಮತಿ, ನಾಗವಲ್ಲಿ ನಾಗರಾಜ್ ಹಾಡಿರುವ, ಪ್ರೊ.ಅ.ರಾ. ಮಿತ್ರರ ನಿರೂಪಣೆಯ, "ಕುಮಾರವ್ಯಾಸ ದರ್ಶನ" ಧ್ವನಿ ಸುರುಳಿಯನ್ನು ಬಿಡುಗಡೆ ಮಾಡುತ್ತಿರುವ, ಶ್ರೀ ಟಿ. ಮಹಾಬಲೇಶ್ವರ ಭಟ್ಟರು. ಪಕ್ಕದಲ್ಲಿ ಪ್ರೊ. ಅ.ರಾ. ಮಿತ್ರ

ಗೋಕಾಕ ವರದಿ, ಜಾರಿಗೆ ಒತ್ತಾಯಿಸಿ, ದಿನಾಂಕ ೧೭.೪.೮೨ರಂದು , ಸಾಗರದ ಪ್ರಾಂತ್ಯಾಧಿಕಾರಿಗಳ ಕಛೇರಿಯ ಮುಂಭಾಗದಲ್ಲಿ, ಶ್ರೀ ಟಿ. ಮಹಾಬಲೇಶ್ವರ ಭಟ್ಟರ ನೇತೃತ್ವದಲ್ಲಿ ಧರಣಿ

ಶ್ರೀ ಟಿ. ಮಹಾಬಲೇಶ್ವರ ಭಟ್ಟರೊಂದಿಗೆ, ಪ್ರೊ. ಕೆ.ಎಸ್. ನಿಸಾರ್ ಅಹಮದ್.
ಒಂದು ಚರ್ಚೆ

ಗಡಿ ಚಳುವಳಿಯ ಸಂದರ್ಭದಲ್ಲಿ ಸಾಗರದಲ್ಲಿ ನಡೆದ ರೈಲು ತಡೆ ಚಳುವಳಿಯ ನಾಯಕರಾಗಿ, ಶ್ರೀ ಟಿ.ಮಹಾಬಲೇಶ್ವರ ಭಟ್ಟರು, ಹತ್ತು ದಿನಗಳ ಕಾಲ ನಡೆಸಿದ ಸತ್ಯಾಗ್ರಹ

ಅ.ನ.ಕೃ. ರವರ ಅಧ್ಯಕ್ಷತೆಯಲ್ಲಿ, ಮಣಪಾಲದಲ್ಲಿ ನಡೆದ, ಅಖಿಲ ಭಾರತ, ಕನ್ನಡ ಸಾಹಿತ್ಯ ಸಮ್ಮೇಳನದ ಸಂದರ್ಭ. ಚಿತ್ರದಲ್ಲಿ ಶ್ರೀ ಬಿ.ಎಂ. ಇದಿನಬ್ಬ, ಶ್ರೀನಿವಾಸರಾವ್ ಕೊರಟಿ, ಶ್ರೀ ರಮೇಶ್ ಪೈ, ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿ, ಡಾ. ದ.ರಾ.ಬೇಂದ್ರೆ, ಶ್ರೀ ಟಿ. ಮಹಾಬಲೇಶ್ವರ ಭಟ್ಟರು, ಮತ್ತು ಕಯ್ಯಾರ ಕಿಞ್ಞಣ್ಣರೈ ಇದ್ದಾರೆ.



ರೇಖಾಚಿತ್ರದಲ್ಲಿ ಶ್ರೀ ಟಿ. ಮಹಾಬಲೇಶ್ವರಭಟ್ಟರು - ಕಲಾವಿದ ಶ್ರೀ ಬಿ.ಕೆ.ಎಸ್. ವರ್ಮ

# ಕನ್ನಡದಲ್ಲಿ ಅಭಿನಂದನ ಸಾಹಿತ್ಯ

- ಡಾ॥ ಜಿ. ಎಂ. ಹೆಗಡೆ

ಆಧುನಿಕ ಕನ್ನಡಸಾಹಿತ್ಯದಲ್ಲಿ ಸಾಹಿತ್ಯದ ನಾನಾ ಪ್ರಕಾರಗಳಲ್ಲಿ ಸಾಹಿತ್ಯ ಸೃಷ್ಟಿ ವಿಫುಲವಾಗಿ, ವೈವಿಧ್ಯಮಯವಾಗಿ ಆಗುತ್ತಲಿದ್ದು ಅದರಲ್ಲಿ ಅಭಿಂದನಗ್ರಂಥ ಸಾಹಿತ್ಯವು ವಿಶಿಷ್ಟ ಬೆಳೆಯಾಗಿ ವಿಕಾಸ ಹೊಂದಿದೆ.

ಕರ್ನಾಟಕದ ಕಲೆ, ಸಾಹಿತ್ಯ, ಸಮಾಜ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಮಹತ್ತರವಾದ ಕಾರ್ಯಗಳನ್ನು ಮಾಡಿದ ಮಹನೀಯರ ಸಾಧನೆಗಳು ಅನುಪಮವಾದದ್ದು. ತಮ್ಮ ಬದುಕನ್ನು ನಾಡಿನ ಸಾಂಸ್ಕೃತಿಕ ಉತ್ಕರ್ಷಕ್ಕೆ ಧಾರೆಯೆರೆದ ಇಂಥ ಮಹನೀಯರ ಜೀವನ ಸಾಧನೆಗಳನ್ನು ಮುಂದಿನ ಪೀಳಿಗೆಗೆ ಸ್ಫೂರ್ತಿದಾಯಕವಾಗಿವೆ. ನಾಡಿನ ಸಾಂಸ್ಕೃತಿಕ ಪ್ರಪಂಚದ ಸಾಧಕ ಚೇತನಗಳನ್ನು ಗುರುತಿಸಿ, ಗೌರವಿಸುವ ವಿಶಿಷ್ಟ ಪರಂಪರೆ ಕನ್ನಡ ಸಂಸ್ಕೃತಿಯ ಆದರ್ಶವಾಗಿದೆ. ಹೀಗೆ ಗೌರವಿಸುವ ಚೇತನವನ್ನು ಗ್ರಂಥದ ಮೂಲಕ ಅಭಿನಂದಿಸಲ್ಪಡುವುದು ಕನ್ನಡದಲ್ಲಿ ಒಂದು ಪರಂಪರೆಯಾಗಿ ಬೆಳೆದುಬಂದಿದೆ. ಹೀಗೆ ಕವಿ, ಸಾಹಿತಿ, ಸಮಾಜ ಸೇವಕ, ಕಲಾವಿದ, ಧಾರ್ಮಿಕ ಮಹಾಪುರುಷರ ಜೀವನ ಸಾಧನೆಗಳನ್ನು ಅವರ ಜೀವಿತದ ಮಹತ್ವದ ಸಂದರ್ಭಗಳಲ್ಲಿ ಅಭಿನಂದಿಸಿ, ಗೌರವಿಸುವ ಗ್ರಂಥವೇ ಅಭಿನಂದನ ಗ್ರಂಥವಾಗಿದೆ. ಅದು ಏಕವ್ಯಕ್ತಿಯ ರಚನೆಯಲ್ಲ. ನಾಡಿನ ವಿದ್ವಾಂಸರು, ಜೊತೆಯ ಲೇಖಕರು, ಮಿತ್ರರು, ಶಿಷ್ಯರು, ಅಭಿಮಾನಿಗಳು ಹೀಗೆ ಹಲವು ಹಿರಿಕಿರಿಯ ಲೇಖಕರ ಲೇಖನಗಳಿಂದ ಕೂಡಿರುವ ಈ ಅಭಿನಂದನ ಗ್ರಂಥವು ಸಾಮೂಹಿಕ ಪ್ರಯತ್ನ, ಪ್ರತಿಭೆ ಪಾಂಡಿತ್ಯಗಳ ಫಲವಾಗಿದೆ.

ಭಾರತೀಯ ಸಾಹಿತ್ಯದಲ್ಲೇ ಅತ್ಯಂತ ವಿಶಿಷ್ಟವಾದ ಅಭಿನಂದನ ಗ್ರಂಥಗಳು ಕನ್ನಡದಲ್ಲಿ ಪ್ರಕಟವಾಗಿವೆ. ವೈಶಿಷ್ಟ್ಯಪೂರ್ಣ ವಸ್ತು ಸಾಮಗ್ರಿಗಳಿಂದ ವಿಭಿನ್ನ ವಿಚಾರಧಾರೆಗಳಿಂದ ಕೂಡಿರುವ ವೈವಿಧ್ಯಮಯವಾದ ಅಭಿನಂದನ ಗ್ರಂಥಗಳು ಕನ್ನಡದಲ್ಲಿ ಬಂದಿದೆ. ಇಂಗ್ಲೀಷ್ ಸಾಹಿತ್ಯದ ಪ್ರೇರಣೆ ಪಡೆದುಕೊಳ್ಳದೆ ಅರಳಿರುವ ಅಭಿನಂದನ ಗ್ರಂಥಗಳು ಕನ್ನಡದ ವಿಭಿನ್ನ ಪ್ರತಿಭೆಯನ್ನು ಗ್ರಂಥಲೇಖನಗಳ ಮೂಲಕ ಸಾಕಾರಗೊಳಿಸುತ್ತವೆ.

**ಅಭಿನಂದನ ಗ್ರಂಥಗಳ ಸ್ವರೂಪ:**

ಅಭಿನಂದನ ಗ್ರಂಥಗಳ ಸ್ವರೂಪ ವಿಸ್ತಾರವಾದದ್ದು, ವಾಸ್ತವಿಕವಾಗಿ ವ್ಯಕ್ತಿಯ ಸಾಧನೆಯ ಪರ್ವಕಾಲದಲ್ಲಿ ಅವನ ಅಭಿಮಾನಿಗಳು, ಮಿತ್ರರು, ಶಿಷ್ಯರು ಅರ್ಪಿಸುವ ಈ ಅಭಿನಂದನ ಗ್ರಂಥ ವ್ಯಕ್ತಿಯ ಸಾಹಿತ್ಯ ಸಾಧನೆಯನ್ನು, ನಾಡು ನುಡಿಗಳ ಸೇವೆಯನ್ನು, ಕಲಾರಾಧನೆಯನ್ನು ಅದು ಸಮೀಕ್ಷಿಸುತ್ತದೆ. ಸಾಹಿತ್ಯಿಕ, ಸಾಮಾಜಿಕ, ಸಾಂಸ್ಕೃತಿಕ ಆದರ್ಶಗಳನ್ನು ವಿಶದಪಡಿಸುತ್ತದೆ. ಅಭಿನಂದನ ಗ್ರಂಥ ಕವಿ ಸಾಹಿತಿಗಳದಾಗಿದ್ದರೆ ಆಯಾ ಕವಿ ಸಾಹಿತಿಗಳ ಸಾಹಿತ್ಯಿಕ ಸಾಧನೆಗಳ ವ್ಯಕ್ತಿತ್ವದ ಸಮಾಲೋಕನ ಮತ್ತು ಸಾಹಿತ್ಯದ ಮೌಲ್ಯಮಾಪನ ಅವುಗಳಲ್ಲಿ ಒಂದು ಮಿತಿಯಲ್ಲಿ ಸಮಗ್ರವಾಗಿ ಆಗುತ್ತದೆ. ಕನ್ನಡದ ಜೊತೆಯ ಕವಿ ಲೇಖಕರು ಆ ಸಾಹಿತಿಯನ್ನು ನೋಡುವ ವಿಭಿನ್ನ ಮುಖವಾದ ದೃಷ್ಟಿಕೋನಗಳೂ ಅಲ್ಲಿ ಪ್ರತಿಬಿಂಬಿತವಾಗುತ್ತದೆ. ಬಹಳ ಮುಖ್ಯವಾದದ್ದೆಂದರೆ ವಿಮರ್ಶೆ, ಮೌಲ್ಯಮಾಪನ ಮಾಡುವಾಗಲೂ ಅಭಿನಂದಿಸಲ್ಪಡುವ ಸಾಹಿತಿ, ಸಾಹಿತ್ಯದ ಕುರಿತು ಒಂದು ರೀತಿಯ ಸಹೃದಯತೆಯ, ಪ್ರಶಂಸಾಪರವಾದ ಮಾತುಗಳು ಅಲ್ಲಿ ಅಧಿಕವಾಗಿ ಬರುತ್ತವೆ. ಸಮಗ್ರಮುಖವಾದ ಅವಲೋಕನವೂ ನಡೆಯುತ್ತದೆ. ಇದೇ ಮಾತು ಸಾಹಿತ್ಯೇತರ ಕ್ಷೇತ್ರಗಳಲ್ಲಿಯ ಸಾಧಕರ ಅಭಿನಂದನ ಗ್ರಂಥಗಳಿಗೂ ಅನ್ವಯಿಸುತ್ತದೆ. ಒಟ್ಟಿನಲ್ಲಿ ನಾಡಿನ ಸಾಂಸ್ಕೃತಿಕ ಜೀವನಕ್ಕೆ ಅಭಿನಂದಿಸಲ್ಪಟ್ಟ ವ್ಯಕ್ತಿಯ ಕೊಡುಗೆಯ ಒಟ್ಟು ನೋಟ ನಮಗೆ ಪ್ರಾಪ್ತವಾಗುತ್ತದೆ. ಅಭಿನಂದನಗ್ರಂಥ ಯಾರಿಗೆ ಅರ್ಪಿತವಾಗುವಂಥದು ಎಂಬ ಪ್ರಶ್ನೆ ಉದ್ಭವಿಸಬಹುದು. ಅಭಿನಂದಿಸಲ್ಪಡುವ ವ್ಯಕ್ತಿ ತೀರ ಸಾಮಾನ್ಯ ಮನುಷ್ಯನಾಗಿರುವುದು ಸಾಧ್ಯವಿಲ್ಲ. ಆತನು ಸಾಹಿತ್ಯ ಪ್ರಪಂಚದ ಶ್ರೇಷ್ಠ ವ್ಯಕ್ತಿ ಮಾತ್ರವಲ್ಲ, ಕಲೆಯ ಕ್ಷೇತ್ರದಲ್ಲಿ, ಸಮಾಜ ಸೇವೆಯಲ್ಲಿ, ಧರ್ಮ ಕಾರ್ಯದಲ್ಲಿ ಹೀಗೆ ರಾಷ್ಟ್ರ ನಿರ್ಮಾಣ ಕೈಂಕರ್ಯದಲ್ಲಿ ಮಹತ್ತರವಾದ ಸಾಧನೆ ಮಾಡಿರಬೇಕಾದ್ದು ಮುಖ್ಯ ಸಂಗತಿ, ಅಂಥ ವ್ಯಕ್ತಿಗಳು ಒಂದು ಶಕ್ತಿಯಾಗಿ ಜನಾಂಗಕ್ಕೆ ಬೆಳಕಾಗಿರುತ್ತಾರೆ, ಕನ್ನಡದಲ್ಲಿ ಸಾಹಿತ್ಯ, ಕಲೆ, ಸಮಾಜ, ಧರ್ಮ ಹೀಗೆ ಬೇರೆ ಬೇರೆ ಕ್ಷೇತ್ರಗಳಲ್ಲಿಯ ಮಹನೀಯರನ್ನು ಕುರಿತ ಬಹುಬಗೆಯ ಅಭಿನಂದನ ಗ್ರಂಥಗಳು ಪ್ರಕಟವಾಗಿವೆ.

ಅಭಿನಂದನ ಗ್ರಂಥಗಳ ಗಾತ್ರವೂ ಅಷ್ಟೇ ಮುಖ್ಯವಾದದ್ದು. ಅವು ಗಾತ್ರದಲ್ಲಿ ಪುಟ್ಟ ಪುಸ್ತಕಗಳಾಗಿರುವುದು ಸಾಧ್ಯವಿಲ್ಲ. ಹತ್ತಾರು ಲೇಖಕರ ವಿದ್ವತ್ಪೂರ್ಣ ಬರವಣಿಗೆಯಿಂದ ಕೂಡಿರುವ ಅಭಿನಂದನ ಗ್ರಂಥಗಳು ವಸ್ತು, ಸ್ವರೂಪ, ಗಾತ್ರದಲ್ಲಿ ಹಿರಿದಾದದ್ದಾಗಿರುತ್ತವೆ. ಅವು ವಿಭಿನ್ನ ವಿಷಯಗಳಿಗೆ ಸಂಬಂಧಿಸಿದ ಸಂದರ್ಭ ಗ್ರಂಥಗಳಾಗಿಯೂ ಇರುತ್ತವೆ. ಲೇಖನಗಳ ಗುಣಮಟ್ಟ ಶ್ರೇಷ್ಠವೇ ಆಗಿರುತ್ತದೆಂದು ಹೇಳಲಾಗದಿದ್ದರೂ ಬಹುಮಟ್ಟಿಗೆ ಅಭಿನಂದನ ಗ್ರಂಥಗಳು ಜ್ಞಾನದ ಹೊಸದಿಗಂತವನ್ನು ಪರಿಚಯಿಸುವಲ್ಲಿ ನಿರತವಾಗಿರುತ್ತವೆಂದು ಹೇಳಬಹುದು.

ಅಭಿನಂದನ ಗ್ರಂಥಗಳಲ್ಲಿ ವ್ಯಕ್ತಿಪೂಜೆಯೇ ಪ್ರಧಾನವಾಗಿರುತ್ತದೆಂದು ಕೆಲವರು ಭಾವಿಸುತ್ತಾರೆ. ಅದರಲ್ಲಿ ಅಭಿನಂದಿಸಲ್ಪಟ್ಟ ವ್ಯಕ್ತಿಯ ಆರಾಧನೆ ನಡೆಯುತ್ತದೆ ಎಂದು ಹೇಳುವವರೂ ಇದ್ದಾರೆ. ಆದರೆ ಅಭಿನಂದನಗ್ರಂಥಗಳು ಸಾಹಿತ್ಯ, ಕಲೆ, ಸಂಸ್ಕೃತಿಯ ವಿವಿಧ ಮಗ್ಗಲುಗಳನ್ನು ನಮಗೆ ಪರಿಚಯಿಸುವಲ್ಲಿ ವಿಶೇಷ ಸಹಾಯ ಮಾಡುತ್ತಲಿವೆ.

ಅಭಿನಂದನ ಗ್ರಂಥಗಳಿಗೆ 'ಗೌರವ ಗ್ರಂಥ', 'ಸಂಭಾವನಾ ಗ್ರಂಥ'ಗಳೆಂಬ ಹೆಸರಿನಿಂದಲೂ ಕರೆಯಲಾಗುತ್ತದೆ. ವ್ಯಕ್ತಿಯ ಜೀವನ ಸಾಧನೆಯನ್ನು ಆತನು ಬದುಕಿದ್ದಾಗ ಗ್ರಂಥದ ಮೂಲಕ ಗೌರವಿಸುವ ಗ್ರಂಥವೇ ಅಭಿನಂದನ ಗ್ರಂಥವಾಗಿದೆ. ನಾಡಿನ ಸಾಂಸ್ಕೃತಿಕ ಪ್ರಪಂಚದಲ್ಲಿ ಮಹತ್ತರವಾದ ಸಾಧನೆ ಮಾಡಿ ಜನತೆಯ ಮನಸ್ಸಿನಲ್ಲಿ ಶಾಶ್ವತಸ್ಥಾನ ಪಡೆದಿದ್ದು ಅಂಥವರ ಚಿರಸ್ಮರಣೆಗಾಗಿ ಗ್ರಂಥಗಳನ್ನು ಹೊರತಂದು ಗೌರವಿಸುವ ಗ್ರಂಥಗಳೂ ಪ್ರಕಟವಾಗುತ್ತದೆ. ಹೀಗೆ ಅಗಲಿದ ವ್ಯಕ್ತಿಗಳ ಸಾಧನೆಯ ಗ್ರಂಥಗಳನ್ನು 'ಸಂಸ್ಮರಣ ಗ್ರಂಥ', ಸ್ಮಾರಕ ಗ್ರಂಥ', 'ಸ್ಮೃತಿ ಸಂಪುಟ', 'ನೆನಪಿನ ಗ್ರಂಥ' ವೆಂದು ಕರೆಯಲಾಗುತ್ತದೆ. ಕನ್ನಡದಲ್ಲಿ ಇಂಥ ಗ್ರಂಥಗಳೂ ಸಾಕಷ್ಟು ಪ್ರಮಾಣದಲ್ಲಿ ಪ್ರಕಟವಾಗಿದೆ.

ಕನ್ನಡ ನಾಡು ಸಾಂಸ್ಕೃತಿಕ ಆಡುಂಬೊಲ. ಸಾಹಿತ್ಯ, ಸಂಸ್ಕೃತಿಯ ವೈಶಿಷ್ಟ್ಯಪೂರ್ಣ ಸಭೆ ಸಮ್ಮೇಳನ, ವಿಚಾರಸಂಕಿರಣ, ಬೆಳ್ಳಿ ಹಬ್ಬ, ಸುವರ್ಣ ಮಹೋತ್ಸವ, ವಜ್ರಮಹೋತ್ಸವ, ಅಮೃತ ಮಹೋತ್ಸವ, ಶತಮಾನೋತ್ಸವ ಹೀಗೆ ಬೇರೆ ಬೇರೆ ಸಾಂಸ್ಕೃತಿಕ ಉತ್ಸವಗಳು ನಿರಂತರವಾಗಿ ನಡೆಯುತ್ತವೆ. ಅಂಥ ಸಮ್ಮೇಳನ, ಉತ್ಸವದ ಸವಿಸ್ಮರಣೆಗಾಗಿ ಸ್ಮರಣ ಸಂಚಿಕೆ, ಸಂಪುಟಗಳನ್ನು ಹೊರತರುವ ಸಂಪ್ರದಾಯ ಬೆಳೆದುಬಂದಿದೆ. ಇಂಥ ಸ್ಮರಣಸಂಪುಟಗಳಲ್ಲಿ ಪ್ರಚಲಿತ ವಿಷಯ, ವಸ್ತು, ಸ್ಥಳ, ವ್ಯಕ್ತಿಗಳಿಗೆ ಸಂಬಂಧಿಸಿದ ವಿದ್ವಾಂಸರ ಉಪಯುಕ್ತ ಲೇಖನಗಳನ್ನು ಚಿತ್ರ, ಜಾಹೀರಾತುಗಳನ್ನು ಪ್ರಕಟಿಸಿ ಸಮಾರಂಭದ ನೆನಪನ್ನು ಚಿರವಾಗಿಸುವ ಉದ್ದೇಶವಿರುತ್ತದೆ. ಕನ್ನಡದಲ್ಲಿ ಪ್ರತಿವರ್ಷ ಪ್ರಕಟವಾಗುವ ಸ್ಮರಣಸಂಪುಟಗಳಿಗೆ ಲೆಕ್ಕವಿಲ್ಲ. ಅಸಂಖ್ಯಾತವಾಗಿ ಪ್ರಕಟವಾಗುವ ಇಂಥ ಸಂಪುಟಗಳು ಸಾಮಯಿಕ ಮಹತ್ವವನ್ನು ಪಡೆದುಕೊಳ್ಳುತ್ತವೆ.

ಅಭಿನಂದನ ಗ್ರಂಥಗಳ ಸ್ವರೂಪ, ಸಿದ್ಧತೆ ಇತ್ಯಾದಿ ವಿಚಾರಗಳಿಗೆ ಸಂಬಂಧಿಸಿದಂತೆ ವಿದ್ವಾಂಸರಲ್ಲಿ ವಿಭಿನ್ನ ಅಭಿಪ್ರಾಯ, ಚರ್ಚೆಯೂ ನಡೆದಿದೆ. ಅದರ ಬಗೆಗೂ ಇಲ್ಲಿ ಗಮನಿಸಬೇಕಾದುದು ಅವಶ್ಯಕ. ಅಭಿನಂದನ ಗ್ರಂಥಗಳನ್ನು, ಕಾವ್ಯ, ನಾಟಕ, ಸಣ್ಣ ಕಥೆ, ಕಾದಂಬರಿ, ವಿಮರ್ಶೆ, ಪ್ರಬಂಧ ಮೊದಲಾದ ಸೃಜನಾತ್ಮಕ ಸಾಹಿತ್ಯ ಪ್ರಕಾರಗಳ ಜೊತೆಗೆ ಸಮೀಕರಣ ಮಾಡಲಾಗದೆಂದೂ ಅದು

ಸಾಹಿತ್ಯ ಪ್ರಕಾರಗಳಲ್ಲಿ ಬರುವುದಿಲ್ಲವೆಂದೂ ಹೇಳಲಾಗುತ್ತದೆ. ಜೀವನ ಚರಿತ್ರೆ, ಆತ್ಮ ಚರಿತ್ರೆ, ವಿಮರ್ಶೆ, ಸಂಶೋಧನೆಗೆ, ವಿಚಾರ, ಪ್ರಬಂಧ, ಕಾವ್ಯ ಹೀಗೆ ಸಾಹಿತ್ಯದ ಬೇರೆ ಬೇರೆ ಪ್ರಕಾರಗಳು ಸೇರಿ ಒಂದು ಸಂಪುಟವಾಗುವುದರಿಂದ ಅಭಿನಂದನ ಗ್ರಂಥವನ್ನು ಗ್ರಂಥ ಸಮುದಾಯ ಎಂದು ಕರೆಯಬೇಕೆಂದೂ ಅಭಿಪ್ರಾಯ ಪಡಲಾಗಿದೆ. ಇದು ಅಭಿನಂದನ ಗ್ರಂಥ ವಸ್ತುವಿನ ವಿಸ್ತಾರವನ್ನು ಸೂಚಿಸುತ್ತದೆ.

ಅಭಿನಂದನ ಗ್ರಂಥಗಳಲ್ಲಿ ಅಭಿನಂದಿಸಲ್ಪಡುವ ವ್ಯಕ್ತಿಯ ವ್ಯಕ್ತಿತ್ವ, ಸಾಧನೆ, ಸಾಹಿತ್ಯ ಸಮೀಕ್ಷೆಯ ಲೇಖನಗಳು ಮಾತ್ರವಿರಬೇಕೆಂದು ಅಂಥ ಅಭಿನಂದನ ಗ್ರಂಥವೇ ಶ್ರೇಷ್ಠವಾದುದು ಎಂದೂ ಒಂದು ಅಭಿಪ್ರಾಯವಿದೆ. ಉದಾಹರಣೆಗೆ 'ಸಹ್ಯಾದ್ರಿ', 'ಚಂದನ', 'ಶ್ರೀನಿವಾಸ' ಇತ್ಯಾದಿ. ಅಭಿನಂದನ ಗ್ರಂಥಗಳಲ್ಲಿ ಅಭಿನಂದಿಸಲ್ಪಡುವ ವ್ಯಕ್ತಿಯ ಜೀವನ ಸಾಧನೆಯ ಜೊತೆಗೆ ಆತನ ಆಸಕ್ತಿಯ ಕ್ಷೇತ್ರಗಳಲ್ಲಿ ವಿದ್ವಾಂಸರ ಪ್ರೌಢ ವಿಚಾರ ಧಾರೆಯ ಪ್ರಬಂಧಗಳನ್ನು ಅಳವಡಿಸುವುದು ಆತನಿಗೆ ತೋರಿಸುವ ನಿಜವಾದ ಗೌರವ ಎಂಬ ಅಭಿಪ್ರಾಯವೂ ಜನಜನಿತವಾಗಿದೆ. ಉದಾಹರಣೆಗೆ 'ಸಂಶೋಧನ', 'ಮಾನ', 'ಅಧ್ಯಯನ' ಮೊದಲಾದ ಅಭಿನಂದನ ಗ್ರಂಥಗಳನ್ನು ನೋಡಬಹುದು. ಅಭಿನಂದಿಸಲ್ಪಡುವ ವ್ಯಕ್ತಿಯ ಬದುಕು, ಸಾಹಿತ್ಯ ಸಾಧನೆಯ ನಿಜವಾದ ಪರಿಚಯವಾಗಬೇಕಾದರೆ ಆತನ ಮೌಲಿಕ ಬರಹಗಳಿಂದ ಮಾತ್ರ ಸಾಧ್ಯ. ಆದ್ದರಿಂದ ಅಭಿನಂದನ ಗ್ರಂಥಗಳಲ್ಲಿ ಅಭಿನಂದಿಸಲ್ಪಡುವ ವ್ಯಕ್ತಿಯ ಮೌಲಿಕ ಲೇಖನಗಳನ್ನು, ಆತನ ಜೀವನ ಸಾಧನೆಗಳ ಜೊತೆಗೆ ಅಳವಡಿಸಬೇಕೆಂಬುದು ಇನ್ನೊಂದು ವಿಚಾರವಾಗಿದೆ. ಅಂಥ ಅಭಿನಂದನ ಗ್ರಂಥಗಳೂ ಕನ್ನಡದಲ್ಲಿ ಬಂದಿವೆ. ಉದಾಹರಣೆಗೆ 'ಭಾಷೋಪಾಸಕ'.

ಅಭಿನಂದನಗ್ರಂಥ ಒಂದು ಪರಾಮರ್ಶನಗ್ರಂಥದಂತೆ ಸಹೃದಯರಿಗೆ, ಸಂಶೋಧಕರಿಗೆ ಉಪಯುಕ್ತವಾಗುತ್ತದೆ. ನೂರಾರು ಲೇಖಕರು, ಅಭಿಮಾನಿಗಳ ವಿಚಾರಧಾರೆಯನ್ನು ಪ್ರಸ್ತುತ ಪಡಿಸುವ ಅಭಿನಂದನ ಗ್ರಂಥ ವಿಶಿಷ್ಟ ಸಾಹಿತ್ಯವಾಗಿದೆ. ವ್ಯಕ್ತಿಯು ನಡೆಸಿದ ಹೋರಾಟ, ಸಾಧನೆ, ಸಿದ್ಧಿಯ ಜೊತೆಗೆ ಆತನ ಆಸಕ್ತಿಯ ಕ್ಷೇತ್ರಗಳ ಸಂಶೋಧನೆಯ ಮುಂದುವರಿಕೆಯೂ ಆಗಿ ಅಭಿನಂದನ ಗ್ರಂಥ ಆದರಣೀಯವಾಗುತ್ತದೆ.

ಕನ್ನಡದಲ್ಲಿ ಅಭಿನಂದನಗ್ರಂಥ ಪರಂಪರೆ ನವೋದಯ ಸಾಹಿತ್ಯದ ಆಚಾರ್ಯ ಪುರುಷರಾದ ಬಿ.ಎಂ. ಶ್ರೀಕಂಠಯ್ಯನವರಿಗೆ ಅರ್ಪಿತವಾದ 'ಸಂಭಾವನೆ' (೧೯೪೧) ಯಿಂದ ಆರಂಭವಾಯಿತು. ಮಾಸ್ತಿ ವೆಂಕಟೇಶ ಅಯ್ಯಂಗಾರ ಅವರ ಸಂಪಾದಕತ್ವದಲ್ಲಿ ಪ್ರಕಟವಾದ 'ಸಂಭಾವನೆ' ಮುಂದಿನ ಅಭಿನಂದನ ಗ್ರಂಥಗಳಿಗೆ ಪ್ರೇರಕವೂ ಮಾರ್ಗದರ್ಶಿಯೂ ಆಯಿತು. ಅದರಲ್ಲಿ 'ಶ್ರೀ' ಯವರ ಜೀವನ

ಸಾಧನೆಯ ಲೇಖನಗಳ ಜೊತೆಗೆ ಕನ್ನಡ ಸಾಹಿತ್ಯ, ಸಂಸ್ಕೃತಿಗೆ ಸಂಬಂಧಿಸಿದ ವಿದ್ವಾಂಸರ ಹಲವು ಲೇಖನಗಳು ಪ್ರಕಟವಾಗಿವೆ. ಬಹಳ ಮುಖ್ಯವಾದದ್ದು ಎಂದರೆ ಮುಂದಿನ ಎಲ್ಲ ಅಭಿನಂದನ ಗ್ರಂಥಗಳು ವಿಭಿನ್ನ ಧೋರಣೆ ಉದ್ದೇಶಗಳಿಂದ ಬೆಳವಣಿಗೆ ಹೊಂದಿದವು. ಸಾಹಿತಿಯ ಸಮಗ್ರ ಸಾಹಿತ್ಯ ಹಾಗೂ ವ್ಯಕ್ತಿತ್ವವನ್ನು ವಿಮರ್ಶಾತ್ಮಕವಾಗಿ ಪರಿಶೀಲಿಸಿ ಅವುಗಳಿಗೆ ಸಂಬಂಧಿಸಿ ಬೃಹತ್ ಲೇಖನಗಳ ಗ್ರಂಥಗಳು ಬಂದಿವೆ.

ಶಿವರಾಮಕಾರಂತರಿಗೆ ಅರ್ಪಿತವಾದ 'ಕಾರಂತ ಪ್ರಪಂಚ' ಮಾಸ್ತಿಯವರಿಗೆ ಅರ್ಪಿತವಾದ 'ಶ್ರೀನಿವಾಸ', ಅ.ನ.ಕೃ. ಅವರಿಗೆ ಅರ್ಪಿತವಾದ 'ರಸಚೇತನ' ಕುವೆಂಪು ಅವರಿಗೆ ಅರ್ಪಿತವಾದ 'ಗಂಗೋತ್ರಿ' 'ಸಹ್ಯಾದ್ರಿ', ಮೊದಲಾದವು ಈ ಬಗೆಯವು. ಅಬಿನಂಧನ ಗ್ರಂಥಗಳಲ್ಲಿ ಕವಿಕೃತಿಗಳ ಸಮೀಕ್ಷಾತ್ಮಕ ದೃಷ್ಟಿಕೋನಗಳು ಪ್ರಧಾನವಾಗಿ ಒಂದು ಸಹೃದಯವಿಮರ್ಶೆ ಅಭಿವೃದ್ಧಿ ಹೊಂದಿತು. ನವೋದಯ ಸಾಹಿತ್ಯದ ವಿಮರ್ಶೆಗೆ ನೆಲೆಯೂ ಒಂದು ನಿಟ್ಟಿನಲ್ಲಿ ಇವುಗಳಲ್ಲಿ ಪ್ರಾಪ್ತವಾಯಿತೆನ್ನಬಹುದು.

ಅಭಿನಂದನ ಗ್ರಂಥದ ಕೇಂದ್ರ ವ್ಯಕ್ತಿ ಸಾಹಿತ್ಯದ ಯಾವ ಪ್ರಕಾರದಲ್ಲಿ ಸಾಧನೆ ಮಾಡಿದ್ದಾರೊ ಆ ಕ್ಷೇತ್ರಕ್ಕೆ ಸಂಬಂಧಿಸಿದ ತಾತ್ವಿಕ ವಿಚಾರಧಾರೆಯನ್ನು ವಿವೇಚಿಸುವ ಲೇಖನಗಳನ್ನೊಳಗೊಂಡ ಅಭಿನಂದನ ಗ್ರಂಥಗಳೂ ಪ್ರಕಟವಾಗಿವೆ. ಸ.ಸ. ಮಾಳವಾಡರಿಗೆ ಅರ್ಪಿತವಾದ 'ವ್ಯಾಸಂಗ' ವಿಮರ್ಶೆಯ ತತ್ವವಿವೇಚನೆಯನ್ನು ಫ.ಗು. ಹಳಕಟ್ಟಿಯವರ ಸ್ಮಾರಕ ಗ್ರಂಥ 'ಮಣಿಹ' ಹಸ್ತಪ್ರತಿ, ಲಿಪಿಶಾಸ್ತ್ರಕ್ಕೆ ಸಂಬಂಧಿಸಿದಂತೆಯೂ, ವಿ.ಎಂ. ಇನಾಮದಾರರಿಗೆ ಅರ್ಪಿತವಾದ 'ಕಾದಂಬರಿಲೋಕ' ಪ್ರಪಂಚದ ಕಾದಂಬರಿ ಸಾಹಿತ್ಯದ ಕುರಿತಾದ ಮೌಲಿಕ ಲೇಖನಗಳನ್ನೊಳ ಗೊಂಡಿರುವುದೂ, ರಾ.ಯ. ಧಾರವಾಡಕರ ಅವರಿಗೆ ಅರ್ಪಿತವಾದ 'ಪ್ರಬಂಧ ಪ್ರಪಂಚ' ಪ್ರಬಂಧ ಸಾಹಿತ್ಯದ ಸ್ವರೂಪ, ಪ್ರಕಾರ ವೈವಿಧ್ಯವನ್ನು ವಿವೇಚಿಸುವ ಗ್ರಂಥವಾಗಿರುವುದು ಇದಕ್ಕೆ ನಿದರ್ಶನಗಳಾಗಿವೆ. ಇದರಿಂದ ಸಾಹಿತ್ಯ ಹಾಗೂ ವಿವಿಧ ಶಾಸ್ತ್ರಗಳಿಗೆ ಸಂಬಂಧಿಸಿದಂತೆ ತತ್ವ ಮೀಮಾಂಸೆಯು ಕನ್ನಡದಲ್ಲಿ ಬೆಳೆಯಲು ಸಾಧ್ಯವಾಗಿದೆ. ಜ್ಞಾನಕ್ಷೇತ್ರದ ವಿಸ್ತಾರಕ್ಕೆ ಅಭಿನಂದನ ಗ್ರಂಥಗಳ ಕೊಡುಗೆ ಅಗಾಧವಾದದ್ದಾಗಿದೆ. ವಿದ್ವಾಂಸರಾದ ಲೇಖಕರು ತಮ್ಮ ವಿದ್ವತ್ಪೂರ್ಣ ವಿಚಾರಧಾರೆಯ ಲೇಖನಗಳನ್ನು ಅಭಿನಂದನ ಗ್ರಂಥಗಳಲ್ಲಿ ಪ್ರಕಟಿಸುವುದರಿಂದ ಅದು ಒಂದು ರೀತಿಯಲ್ಲಿ ಸಂದರ್ಭಗ್ರಂಥ (Reference Book) ವಾಗಿಯೂ ರೂಪಿತವಾಗಿರುವುದು ಸಾಧ್ಯವಾಗಿದೆ. ಇದರಿಂದ ಸಂಶೋಧಕರಿಗೆ ಉಪಯುಕ್ತ ಸಾಮಗ್ರಿಯನ್ನು, ವಿಚಾರಧಾರೆಯನ್ನು ಒದಗಿಸುವಂತಾಗಿದೆ.

ಸಾಹಿತಿ ಕಲಾವಿದರನ್ನು ಕುರಿತ ಗೌರವ ಗ್ರಂಥಗಳು ಸೃಜನ ಸಾಹಿತ್ಯಕ್ಕೂ ಕಾಣಿಕೆ ಸಲ್ಲಿಸಿವೆ. ಕನ್ನಡದ ಪ್ರಸಿದ್ಧ ಕವಿಗಳ ಕವಿತೆಗಳು ಸುನೀತಗಳ ಮೂಲಕ

ಅಭಿನಂದಿಸಲ್ಪಡುವ ವ್ಯಕ್ತಿಯ ವ್ಯಕ್ತಿತ್ವವನ್ನು ಸುನೀತ, ಕವಿತೆಯಲ್ಲಿ ಸೆರೆಹಿಡಿದು ಕಲಾಕೃತಿಯನ್ನಾಗಿಸುವ ಪರಂಪರೆ ಬೆಳೆದಿದೆ. ಇದರಿಂದ ಬೇರೆ ಬೇರೆ ಸಾಹಿತಿ ಕಲಾವಿದರ ಕುರಿತಾದ ಸುನೀತ ಕವಿತೆಗಳು ಕನ್ನಡ ವ್ಯಕ್ತಿಗೀತಪರಂಪರೆಗೆ ವಿಶಿಷ್ಟ ಕೊಡುಗೆ ನೀಡಿವೆ. ಬೇಂದ್ರೆ, ಶಿವರುದ್ರಪ್ಪ, ಚೆನ್ನವೀರ ಕಣವಿ, ಮೊದಲಾದ ಕವಿಗಳು ಬರೆದ ಸುನೀತ, ಕವಿತೆಗಳು ಕಾವ್ಯ ಪ್ರಪಂಚದಲ್ಲಿ ವಿಶಿಷ್ಟತೆಯನ್ನು ಗಳಿಸಿವೆ. ಹಾಗೆಯೆ ಸಾಹಿತಿ, ಕಲಾವಿದರ ಆತ್ಮಜಿಜ್ಞಾಸೆಯನ್ನೂ ಬದುಕಿನ ಅನನ್ಯತೆಯನ್ನೂ ಅರಿಯಲು ನೆಲೆ ಕಲ್ಪಿಸಿವೆ. ಚಿದಾನಂದಮೂರ್ತಿ ಅವರ ಆತ್ಮಕಥನ (ಸಂಶೋಧನ) ಶಂಬಾ ಜೀವನಚರಿತ್ರೆ (ಅಧ್ಯಯನ) ಬೇಂದ್ರೆ ಜೀವನಚರಿತ್ರೆ (ಇಳಿದು ಬಾ ತಾಯಿ) ಮೊದಲಾದವು ಇದಕ್ಕೆ ನಿದರ್ಶನಗಳಾಗಿವೆ.

ಅರ್ಧಶತ ಮಾನದಷ್ಟು ಸುದೀರ್ಘವಾದ ಕಾಲದಲ್ಲಿ ಮುನ್ನೂರಕ್ಕೂ ಹೆಚ್ಚು ಅಭಿನಂದನ ಗ್ರಂಥಗಳು ಹೊಸಗನ್ನಡ ಸಾಹಿತ್ಯದ ವಿಶಿಷ್ಟ ಬೆಳೆಯಾಗಿ ಕಂಗೊಳಿಸುತ್ತವೆ. ಕನ್ನಡದಲ್ಲಿ ಬಂದ ಅಭಿನಂದನ ಗ್ರಂಥಗಳ ಬಗೆಗೆ ಇದೇ ಲೇಖಕರು ಬರೆದ ಕರ್ನಾಟಕ ಭಾರತಿ ೨೬-೧ರಲ್ಲಿಯ ಲೇಖನ ನೋಡಿರಿ, ಭಾರತೀಯ ಭಾಷೆಗಳಲ್ಲಿ ಕನ್ನಡದಲ್ಲಿ ಬಂದಷ್ಟು ಮೌಲಿಕವಾದ ಬಹುಸಂಖ್ಯೆಯ ಅಭಿನಂದನ ಗ್ರಂಥಗಳಿಲ್ಲ ಎಂಬ ಒಂದು ಅಭಿಪ್ರಾಯವಿದೆ. ಕನ್ನಡ ನಾಡು ನುಡಿಯ ಸಂಪನ್ನ ಚೇತನಗಳನ್ನು ಗ್ರಂಥದ ಮೂಲಕ ಗೌರವಿಸಿ ಅವರ ಸರ್ವತೋಮುಖ ಸಾಧನೆಗಳನ್ನು ದಾಖಲಿಸಿ ಮುಂದಿನ ಪೀಳಿಗೆಗೆ ಆದರ್ಶವನ್ನು ಒದಗಿಸುವ ಕಾರ್ಯ ಇವುಗಳ ಮೂಲಕ ನಿರಂತರವಾಗಿ ಸಾಗುತ್ತ ಬಂದುದನ್ನು ನಾವು ಕಾಣುತ್ತೇವೆ.

ಎಲ್ಲಕ್ಕಿಂತ ಮುಖ್ಯವಾದದ್ದೆಂದರೆ ಹೊಸಗನ್ನಡ ಸಾಹಿತ್ಯ ಪ್ರಪಂಚದ ಹಿರಿಯ ಕವಿ ಲೇಖಕರಿಗೆ ಅರ್ಪಿತವಾದ ಅಭಿನಂದನ ಗ್ರಂಥಗಳಲ್ಲಿ ಅವರ ಸಾಹಿತ್ಯ ಸಮೀಕ್ಷೆ ಮಾಡಿದಂತಾಗಿದೆ. ವಿವಿಧ ಮುಖವಾದ ದೃಷ್ಟಿಕೋನಗಳಿಂದ ವಿಮರ್ಶಾತ್ಮಕ ಪರಿಶೀಲನೆಯನ್ನೂ ನಡೆಸಿದಂತಾಗಿದೆ. ಇದು ಹೊಸಗನ್ನಡ ವಿಮರ್ಶೆಯ ಬೆಳವಣಿಗೆಗೆ ಆರೋಗ್ಯಕರವಾದ ವಾತಾವರಣವನ್ನು ಸೃಷ್ಟಿಸಿದಂತಾಗುತ್ತದೆ. ಅನೇಕ ಕವಿ ಕೃತಿಗಳ ವಿಮರ್ಶೆ ಆಗದೆ ಹೋಗದಂತಾದಾಗ ಯಾವುದೇ ಮಿತಿಯಿದ್ದ ಪಕ್ಷದಲ್ಲೂ ಸಾಹಿತ್ಯ ವಿಮರ್ಶೆ ಅಭಿನಂದನಗ್ರಂಥಗಳ ಲೇಖನಗಳಲ್ಲಿ ಸಾಧ್ಯವಾಗುತ್ತದೆ ಎಂಬುದಕ್ಕೆ ಕನ್ನಡದ ಅಭಿನಂದನಗ್ರಂಥಗಳೇ ಸಾಕ್ಷಿ.

ಕನ್ನಡ ಅಭಿನಂದನ ಗ್ರಂಥಗಳನ್ನು ಕಂಡಾಗ ಅದರಲ್ಲಿ ಕವಿ ಕೃತಿಗಳ ಅಧ್ಯಯನ ನೇರವಾಗಿ ಆಗುವಂಥದ್ದು ಒಂದು ವಿಧವಾದರೆ (ಗಂಗೋತ್ರಿ, ಶ್ರೀನಿವಾಸ, ಬೆಂಬೆಳಕು, ಇತ್ಯಾದಿ) ಇನ್ನೊಂದು ರೀತಿಯಲ್ಲಿ ಹಿರಿಯ ಸಾಹಿತ್ಯ ಚೇತನದ ಸಂಸ್ಮರಣೆಯ ಸಂದರ್ಭದಲ್ಲಿ ಆ ಚೇತನದ ಆಸಕ್ತಿಯ ಕ್ಷೇತ್ರಗಳಲ್ಲಿ ಮೌಲಿಕ ಸಂಶೋಧನ

ಲೇಖನಗಳು ಪ್ರಕಟವಾಗಿರುವುದು, ಕನ್ನಡ ಸಂಶೋಧನಪರಂಪರೆಯ ಬೆಳವಣಿಗೆಗೂ ಸಹಾಯಕವಾಗಿದೆ. ಈ ಅಭಿನಂದನ ಗ್ರಂಥಗಳಲ್ಲಿಯ ವಿಮರ್ಶೆ ಮುಖ್ಯವಾಗಿ ಸಹೃದಯನಿಷ್ಠವಾದದ್ದು, ಕವಿಕೃತಿಗಳಿಗೆ ನ್ಯಾಯವನ್ನು ಒದಗಿಸುವ ಧೋರಣೆಯಿಂದ ಕೂಡಿರುವಂಥಹದು. ಯುವ ಸಂಶೋಧಕರಿಗೆ ಸಂಶೋಧನಲೇಖನ ಬರೆಯುವಲ್ಲಿ ಉತ್ತೇಜನ ನೀಡುವಂಥಹದು, ಹಿರಿಯರ ಮೌಲಿಕ ವಿಚಾರಗಳ ಸ್ಪಂದನ ವಾಗಿರುವಂಥಹದು, ಕೆಲವು ಅಭಿಂದನ ಗ್ರಂಥಗಳಲ್ಲಿ ಪ್ರಾಯೋಗಿಕ ವಿಮರ್ಶೆಯ ನೆಲೆಯೂ ಇರುವುದನ್ನು ನಾವು ಕಾಣುತ್ತೇವೆ. 'ಸ್ನೇಹ ಕಾರ್ತಿಕ', 'ಚೆಂಬೆಳಕು', 'ಇಳಿದು ಬಾ ತಾಯಿ' – ಇಂಥ ಅಭಿನಂದನ ಗ್ರಂಥಗಳಲ್ಲಿಯ ಕವಿತೆಗಳ ವಿಶ್ಲೇಷಣೆ ಈ ಬಗೆಯ ಪ್ರಾಯೋಗಿಕ ವಿಮರ್ಶೆಯ ಲೇಖನಗಳಿಗೆ ನಿದರ್ಶನವನ್ನೊದಗಿಸುತ್ತವೆ.

ಕನ್ನಡದಲ್ಲಿ ಬಂದ ಅಭಿನಂದನ ಗ್ರಂಥಗಳು ಕನ್ನಡ ನಾಡಿನ ಚೇತನಗಳನ್ನು ಮಾತ್ರ ಗ್ರಂಥದ ಮೂಲಕ ಗೌರವಿಸಲ್ಪಟ್ಟಿರದೆ ಅವು ಭಾರತೀಯ ಮತ್ತು ವಿಶ್ವದ ಚೇತನಗಳನ್ನು ವ್ಯಾಪಿಸಿರುವುದು, ಕನ್ನಡ ಸಂಸ್ಕೃತಿಯ ಇನ್ನೊಂದು ಆದರ್ಶವನ್ನು ಪ್ರಕಟಿಸುತ್ತವೆ. ಕಾಳಿದಾಸ, ಷೇಕ್ಸ್‌ಪಿಯರ್, ರವೀಂದ್ರರು, ಗಾರ್ಕಿ, ಲೆನಿನ್ ಮೊದಲಾದವರ ಬಗ್ಗೆ ಬಂದ ಗ್ರಂಥಗಳು ಇದಕ್ಕೆ ಸಾಕ್ಷಿಯಾಗಿವೆ. ಇದರಿಂದ ಭಾರತೀಯತೆಯನ್ನೂ, ವಿಶ್ವ ಪ್ರಜ್ಞೆಯನ್ನೂ ನಾವು ಅಭಿನಂದನ ಗ್ರಂಥಗಳಲ್ಲಿ ಕಾಣುತ್ತೇವೆ. ಎಲ್ಲ ಸಾಹಿತ್ಯ ಪ್ರಕಾರಗಳಂತೆ ಅಭಿನಂದನ ಗ್ರಂಥಗಳಲ್ಲೂ ತೀರಾ ಸಾಮಾನ್ಯವಾದ ಕೃತಿಗಳೂ, ತುಂಬ ಮೌಲಿಕವಾದ ಗ್ರಂಥಗಳೂ ಇವೆ. ಕೆಲವು ಅಭಿನಂದನ ಗ್ರಂಥಗಳು ಪರಾಮರ್ಶನಗ್ರಂಥಗಳಾಗಿ ಸಾಹಿತ್ಯ ಪ್ರಪಂಚದಲ್ಲಿ ಮಾನ್ಯವಾಗಿವೆ. ಅಧ್ಯಯನಾಸಕ್ತರಿಗೆ, ಸಂಶೋಧಕರಿಗೆ ಮಾರ್ಗದರ್ಶಿಯಾಗಿವೆ. ಗುಣಗಾತ್ರಗಳಲ್ಲಿ ಶ್ರೇಷ್ಠವಾದ ಮಹಾಸಂಪುಟಗಳು ಕನ್ನಡದ ಹೊಸ ಸಾಹಿತ್ಯದಲ್ಲಿ ವಿಶಿಷ್ಟವಾಗಿವೆ. (ಗಂಗೋತ್ರಿ, ಸಂಶೋಧನ, ಮಾನ, ಸಹ್ಯಾದ್ರಿ, ಹರಿತಿಸಿರಿ, ರಾಷ್ಟ್ರಧರ್ಮದೃಷ್ಟಾರ ಹರ್ಡೇಕರ ಮಂಜಪ್ಪ ಇತ್ಯಾದಿ) ಬಹಳ ಸ್ವಾರಸ್ಯವಾದ ಸಂಗತಿಯೆಂದರೆ ಕನ್ನಡದ ಹಲವಾರು ಕವಿ ಲೇಖಕರಿಗೆ ಒಂದಕ್ಕಿಂತ ಹೆಚ್ಚು ಗೌರವ ಗ್ರಂಥ ಅರ್ಪಿತವಾಗಿರುವುದು ಕನ್ನಡದ ಅಭಿನಂದನ ಗ್ರಂಥಗಳ ವೈಶಿಷ್ಟ್ಯವಾಗಿದೆ. ಕುವೆಂಪು, ಬೇಂದ್ರೆ, ಕಾರಂತ, ಮಾಸ್ತಿ, ಗೋಕಾಕ, ಮುಗಳಿ, ಸಿದ್ಧಯ್ಯ ಪುರಾಣಿಕ, ದೇಜಗೌ, ಹಾ.ಮಾ. ನಾಯಕ, ಮೂಜಗಂ ಮೊದಲಾದ ಸಾಹಿತಿಗಳ ಗೌರವ ಗ್ರಂಥಗಳು ಇದಕ್ಕೆ ನಿದರ್ಶನಗಳಾಗಿವೆ. ಇದು ಆಯಾ ಸಾಹಿತಿಗಳ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಬೇರೆ ಬೇರೆ ವಿಮರ್ಶನ ವಿಚಾರಗಳ ಮಂಡನೆಗೆ, ಚಿಂತನ ಮಂಥನಕ್ಕೆ ಹೊಸ ಆಲೋಚನೆಗಳಿಗೆ ಮಾರ್ಗ ಕಲ್ಪಿಸಿದಂತಾಗಿದೆ ಎಂದೂ ಹೇಳಬಹುದು. ಕನ್ನಡದ ಎಲ್ಲ ಅಭಿನಂದನ ಗ್ರಂಥಗಳೂ ಶ್ರೇಷ್ಠವಾದದ್ದು ಎಂದು ಹೇಳಲು ಸಾಧ್ಯವಾಗದು. ಅವುಗಳಲ್ಲಿ ಗುಣದೋಷಗಳಿರುವುದನ್ನು ನಾವು ಕಾಣುತ್ತೇವೆ.

ಕನ್ನಡದ ಅಭಿನಂದನ ಗ್ರಂಥಗಳಲ್ಲಿ ಸಾಹಿತಿಗಳ ಸಮಗ್ರ ಸಾಹಿತ್ಯ ಸಮೀಕ್ಷೆ, ಶ್ರೇಷ್ಠ ಸಂಶೋಧನೆ ವಿಚಾರಗಳು ವಸ್ತುನಿಷ್ಠ ದೃಷ್ಟಿಕೋನದ ಗುಣಗಳು ಕಂಡುಬರುವ ಹಾಗೆ ವ್ಯಕ್ತಿಯ ಅತಿಪ್ರಶಂಸೆ, ಮೌಲಿಕ ಲೇಖನ, ಸತ್ಯನಿಷ್ಠ ವಿಚಾರಗಳ ಕೊರತೆ, ಇತ್ಯಾದಿ ದೋಷಗಳನ್ನೂ ಹೇಳಬಹುದು.

ಹದಿನೈದು ಸಾವಿರಕ್ಕೂ ಹೆಚ್ಚು ವಿಮರ್ಶೆ ಸಂಶೋಧನೆಯ ಲೇಖನ ಗಳನ್ನೊಳಗೊಂಡ ಕನ್ನಡದ ಅಭಿನಂದನ ಗ್ರಂಥಗಳು ಕನ್ನಡ ಸಾಹಿತ್ಯಲೋಕದ ಸಾಮೂಹಿಕ ಪ್ರತಿಭೆಯ ಫಲವಾಗಿವೆ. ಅವುಗಳಲ್ಲಿ ಪ್ರಕಟವಾದ ನಾಡಿನ ವಿದ್ವಾಂಸರ ಮೌಲಿಕ ಲೇಖನಗಳು ಹೊಸಗನ್ನಡದ ಗದ್ಯ, ವಿಮರ್ಶೆ, ವಿಚಾರ, ಸಂಶೋಧನೆ, ಸಾಹಿತ್ಯ ಚರಿತ್ರೆ, ಪಾಂಡಿತ್ಯ ಪ್ರಪಂಚದ ವಿವಿಧ ಕ್ಷೇತ್ರಗಳಿಗೆ ಸಂಬಂಧಿಸಿದ ವಿಚಾರಧಾರೆಯನ್ನು ಬೆಳೆಸುವುದಕ್ಕೆ ಅವು ಬಹುಮುಖ್ಯ ಕೊಡುಗೆ ಕೊಟ್ಟಿವೆ. ಕನ್ನಡ ಮನಸ್ಸಿನ ಸೃಜನಶೀಲತೆಯನ್ನು, ಸಂಸ್ಕೃತಿಯ ಪ್ರೀತಿಯನ್ನು, ಆದರ್ಶಗಳನ್ನು ಪ್ರತಿಬಿಂಬಿಸುವ ಅಭಿನಂದನ ಗ್ರಂಥಗಳು ಹೊಸಗನ್ನಡದ ಉತ್ಕರ್ಷಕ್ಕೆ ಕಾರಣವಾಗಿವೆ. ಕನ್ನಡದ ಎಲ್ಲ ಪ್ರತಿಭಾವಂತ ಚೇತನಗಳಿಗೆ ಅಭಿನಂದನ ಗ್ರಂಥ, ನೆನಪಿನ ಗ್ರಂಥ ಅರ್ಪಿತವಾಗಿದೆ ಎಂದು ಹೇಳಲಾಗದಿದ್ದರೂ, ಕನ್ನಡ ಸಾಹಿತ್ಯಸಂಸ್ಕೃತಿಯ ಸಂವರ್ಧನೆಯಲ್ಲಿ ಮಹತ್ತರ ಸೇವೆ ಸಲ್ಲಿಸಿದ ಚೇತನಗಳಿಗೆ ಇಂಥ ಗೌರವಗ್ರಂಥ ಅರ್ಪಿತವಾದದ್ದು ಕನ್ನಡದ ಭಾಗ್ಯವೆನ್ನಬೇಕು. ಈ ಗ್ರಂಥಾಭಿನಂದನ ಪರಂಪರೆ ನಿರಂತರವಾಗಿ ಮುಂದುವರಿದಿದೆ.

ಹೊಸಗನ್ನಡ ಸಾಹಿತ್ಯ ಪ್ರಪಂಚದ ಹಿರಿಯರನ್ನು ಅಭಿನಂದಿಸಲ್ಪಡುವ ಅಭಿನಂದನ ಗ್ರಂಥ ಪರಂಪರೆ ಬೆಳೆದು ಬಂದಹಾಗೆ ನಮ್ಮ ಹಳೆಗನ್ನಡ ಸಾಹಿತ್ಯದ ಪ್ರಮುಖ ಕವಿಗಳ ಕುರಿತು ಪ್ರಶಸ್ತಿಗ್ರಂಥಗಳನ್ನು ಹೊರತಂದು ಆಯಾ ಕವಿಗಳ ಕಾವ್ಯಗಳ ರಸವಿಮರ್ಶೆ ಹಾಗೂ ಸಾಹಿತ್ಯದ ಮೌಲ್ಯಮಾಪನ, ವಿಮರ್ಶೆಯ ಲೇಖನಗಳನ್ನು ಪ್ರಶಸ್ತಿ ಗ್ರಂಥಗಳಲ್ಲಿ ಪ್ರಕಟಿಸುವ ಪರಂಪರೆ ಕನ್ನಡದಲ್ಲಿ ಬಹು ಹಿಂದಿನಿಂದಲೂ ಬೆಳೆದುಬಂದಿದೆ. ರನ್ನಕವಿ ಪ್ರಶಸ್ತಿ, ಕುಮಾರವ್ಯಾಸಪ್ರಶಸ್ತಿ, ಮುದ್ದಣ ಪ್ರಶಸ್ತಿ, ದೇವರದಾಸಿಮಯ್ಯ ಪ್ರಶಸ್ತಿ ಗ್ರಂಥಗಳಲ್ಲದೆ ಪಂಪ, ಲಕ್ಷ್ಮೀಶ, ನಿಜಗುಣ ಶಿವಯೋಗಿ, ಸರ್ವಜ್ಞ, ಬಸವಣ್ಣವರ ಅಷ್ಟಶತಮಾನೋತ್ಸವ, ಪುರಂದರದಾಸರ ಚತುರ್ಥ ಶತಮಾನೋತ್ಸವ, ಕನಕದಾಸರ ಚತುರ್ಥ ಶತಮಾನೋತ್ಸವ, ಕನಕದಾಸ ೫೦೦ನೆಯ ಜಯಂತಿ, ಕನಕಸಾಹಿತ್ಯದರ್ಶನ, ಷಡಕ್ಷರದೇವ ಹೀಗೆ ಬೇರೆ ಬೇರೆ ಹಳೆಯ ಸಾಹಿತ್ಯದ ಕವಿಗಳ ಜೀವನ ಹಾಗೂ ಕೃತಿಗಳ ಸಮೀಕ್ಷೆಗಳನ್ನೊಳಗೊಂಡ ಗ್ರಂಥಗಳು ಸಾಮುದಾಯಿಕವಾಗಿ ಪ್ರಕಟವಾಗಿದ್ದು ಅವುಗಳಲ್ಲಿ ಕನ್ನಡನಾಡಿನ ವಿದ್ವಾಂಸರು ತಮ್ಮ ಮೌಲಿಕ ಲೇಖನಗಳ ಮೂಲಕ ಕವಿಗಳಿಗೆ ಗೌರವ ಅರ್ಪಿಸಿರುವುದು ಕಂಡು ಬರುತ್ತದೆ.

ಕನ್ನಡದಲ್ಲಿ ಪ್ರಕಟವಾದ ಸ್ಮರಣಸಂಚಿಕೆಗಳು ಅಸಂಖ್ಯಾತ. ವಿವಿಧ ಸಾಹಿತ್ಯ ಸಮ್ಮೇಲನ, ಸಾಮಾಜಿಕ, ಸಾಂಸ್ಕೃತಿಕ ಉತ್ಸವ, ಕಲಾ ಉತ್ಸವಗಳ ಸಮಾರಂಭಗಳಲ್ಲಿ ಸಾವಿರಾರು ಸ್ಮರಣಸಂಚಿಕೆಗಳು ಪ್ರಕಟವಾಗಿವೆ. ಇವು ಸಮ್ಮೇಳನದ ಸ್ಮರಣಿಕೆಗಳು ಮಾತ್ರವಾಗಿರದೆ ಆಯಾ ಪ್ರದೇಶದ ಸಾಹಿತ್ಯ, ಇತಿಹಾಸ, ಕಲೆ ಸಂಸ್ಕೃತಿಗೆ ಸಂಬಂಧಿಸಿದ ಅಮೂಲ್ಯ ಲೇಖನಗಳಿಂದ ಸಾಹಿತ್ಯಿಕವಾಗಿಯೂ ಮಹತ್ವಗಳಿಸುತ್ತವೆ. ಈ ಹಿನ್ನೆಲೆಯಲ್ಲಿ ಸಾಹಿತ್ಯ ಸಮ್ಮೇಳನ ಸ್ಮರಣ ಸಂಚಿಕೆಗಳು ದೊಡ್ಡ ಲೇಖನ ಸಂಪುಟಗಳಾಗಿ, ಆಯಾ ಪ್ರದೇಶದ ಸಾಹಿತ್ಯ, ಕಲೆ, ಸಂಸ್ಕೃತಿಯ ಅವಲೋಕನಗಳಾಗಿ ಆದರಣೀಯವಾಗುತ್ತವೆ. ಹಾಗೆ ನೋಡಿದರೆ ಸ್ಮರಣ ಸಂಚಿಕೆಗಳನ್ನು ಪ್ರತ್ಯೇಕವಾಗಿ ಸಂಕಲಿಸಿ ಅವುಗಳಲ್ಲಿಯ ಸಾಹಿತ್ಯ ಸಾಮಗ್ರಿಯನ್ನು ಪ್ರತ್ಯೇಕವಾಗಿ ಅವಲೋಕಿಸ ಬೇಕಾಗುತ್ತದೆ.

ಒಟ್ಟಿನಲ್ಲಿ ಕನ್ನಡದಲ್ಲಿ ಬಂದ ಅಭಿನಂದನ ಗ್ರಂಥಗಳು ವಿಶಿಷ್ಟ ರೂಪ, ಸ್ವರೂಪದಿಂದ ವೈವಿಧ್ಯಮಯವಾಗಿ,ವರ್ಣಮಯವಾಗಿ ವ್ಯಕ್ತಿ, ಪ್ರತಿಭೆಗಳನ್ನು, ಸಾಧನೆ ಸಿದ್ಧಿಗಳನ್ನು ಅನಾವರಣಗೊಳಿಸುವಲ್ಲಿ ಯಶಸ್ವಿಯಾಗಿವೆ.

ಕನ್ನಡದ ಸೃಜನಶೀಲ ಲೇಖಕರೂ, ರಾಜಕೀಯ, ಸಾಮಾಜಿಕ ಕ್ಷೇತ್ರಗಳಲ್ಲಿ ಧುರೀಣರೂ ಆದ ಟಿ. ಮಹಾಬಲೇಶ್ವರ ಭಟ್ಟರಿಗೆ ಅರ್ಪಿತವಾದ 'ಮಹಾನಂದ' (೧೯೭೭) ಅವರ ವ್ಯಕ್ತಿತ್ವ ಸಾಧನೆಗಳನ್ನು ಸಾಕಾರಗೊಳಿಸುವ ಅಭಿನಂದ ಗ್ರಂಥವಾಗಿದೆ. ಸಾಗರದ ಮಹಾಬಲೇಶ್ವರ ಭಟ್ಟರು ಬರೆದ 'ಗುಲಾಬಿ', 'ತೋರಣ' ಕಥಾ ಸಂಕಲನಗಳು, 'ಹೂಮಾಲೆ', 'ಋತುಗಾನ' ಕವನ ಸಂಗ್ರಹಗಳು 'ಅಣ್ಣತಂಗಿ', 'ವ್ಯಾಘ್ರಮುಖ', 'ಮಾನವ ರಾಕ್ಷಸರು ಕಾದಂಬರಿಗಳು, 'ಸಾಹಿತ್ಯಶಿಲ್ಪಿಗಳು' (ಎರಡು ಭಾಗಗಳು) 'ಕನ್ನಡ ಕುಲದೀಪಕರು' ಪುಸ್ತಕಗಳ ಮೂಲಕ ಸಾಹಿತ್ಯ ಪ್ರಪಂಚದಲ್ಲಿ ಹೆಸರಾಗಿದ್ದಾರೆ. ಮಹಾಬಲೇಶ್ವರ ಭಟ್ಟರ ಕಥನ ಸಾಹಿತ್ಯದಲ್ಲಿ ಮಲೆನಾಡಿನ ಜೀವನ ಚಿತ್ರಗಳಿವೆ. ಕವಿತೆಗಳನ್ನು ಓದಿದಾಗಿ ಅವರೊಬ್ಬ 'ಭಾವಜೀವಿ' ಎನ್ನಿಸುತ್ತದೆ. ಅವರ ವ್ಯಕ್ತಿತ್ವದಲ್ಲಿ ಕನ್ನಡ ಸಂಸ್ಕೃತಿಯ ಆದರ್ಶಗಳಿವೆ. ನಯ ವಿನಯ ಸರಸ ಸಜ್ಜನಿಕೆಗಳಿಂದ ಕೂಡಿದ ಭಟ್ಟರು ಸ್ನೇಹ ಪರರು, ಕೆಟ್ಟದ್ದನ್ನು ಮಾಡದೆ ಎಲ್ಲರಿಗೂ ಲೇಸನ್ನು ಬಯಸುವ ಮೃದು ಹೃದಯಿಗಳು ಸಮಕಾಲೀನ ಸಂದರ್ಭದಲ್ಲಿ ಜೀವನದ ಹಲವುಕ್ಷೇತ್ರಗಳಲ್ಲಿ ತಮ್ಮ ಹೆಜ್ಜೆಗಳನ್ನು ಮೂಡಿಸುತ್ತ ಸಾಗಿರುವ ಮಹಾಬಲೇಶ್ವರ ಭಟ್ಟರು ರಾಜಕೀಯ ಸಾಮಾಜಿಕ ರಂಗದಲ್ಲಿದ್ದೂ ಸಾಹಿತ್ಯ ರಚನೆ, ಸಾಹಿತ್ಯ ಸಹೃದಯತೆಯನ್ನು ಪಡೆದುಕೊಂಡವರು. ಹೀಗೆ ಮಹಾಬಲೇಶ್ವರ ಭಟ್ಟರ ವ್ಯಕ್ತಿತ್ವ ತನಗೆ ತಾನೆ ಬೆಳೆದಿರುವಂಥದು. ಲಕ್ಷ್ಮಿ ಸರಸ್ವತಿ ಒಂದೆಡೆ ಸೇರುವುದಿಲ್ಲ ಎಂದು ಹೇಳುವುದುಂಟು ಇದಕ್ಕೆಅಪವಾದವಾಗಿ ಕಂಗೊಳಿಸುವ ಭಟ್ಟರು ಅದರ ಹಮ್ಮುಬಿಮ್ಮುಗಳಿಲ್ಲದೆ ಎಲ್ಲರೊಡನೆ ಬೆರೆತು ಸ್ನೇಹದ ಸುಗಂಧವನ್ನೂ,

ಪಾರಿಜಾತದ ಪರಿಮಳವನ್ನೂ, ಪಸರಿಸುವ ಅಪರೂಪದ ವ್ಯಕ್ತಿ. ನಮ್ಮ ಸಾರ್ವಜನಿಕ ಜೀವನ ಇಂಥಹ ಮಹನೀಯರಿಂದ ಸಂಪನ್ನವಾಗುತ್ತದೆ. ಕುವೆಂಪು ಹುಟ್ಟಿ ಬೆಳೆದ ಮಲೆನಾಡಿನ ಸಂಸ್ಕೃತಿಯ ಪ್ರತೀಕವಾಗಿರುವ ಮಹಾಬಲೇಶ್ವರ ಭಟ್ಟರು ಎಪ್ಪತ್ತು ಸಂವತ್ಸರಗಳ ಸಂಭ್ರಮದಲ್ಲಿ ನಾಡ ಹಿರಿಯರ, ಅಭಿಮಾನಿಗಳ ಅಭಿನಂದನೆಯ ಗೌರವಪಡೆಯುತ್ತಿರುವುದು ಹರ್ಷವನ್ನುಂಟು ಮಾಡುತ್ತದೆ ಅವರ ಎಪ್ಪತ್ತರ ಗೌರವ ಗ್ರಂಥ ಕನ್ನಡ ಅಭಿನಂದನ ಗ್ರಂಥಗಳಲ್ಲಿ ವಿಶಿಷ್ಟವಾದ ಸ್ಥಾನ ಪಡೆಯುವುದರೆಂಬುದರಲ್ಲಿ ಎರಡು ಮಾತಿಲ್ಲ. ಸುಸಂಸ್ಕೃತ ವ್ಯಕ್ತಿಯೆಂದು ನಾಡ ಜನರ ಪ್ರೀತಿ ಆದರಕ್ಕೆ ಪಾತ್ರರಾದ ಟಿ. ಮಹಾಬಲೇಶ್ವರ ಭಟ್ಟರ ಜೀವನಾದರ್ಶ ಮುಂದಿನ ಜನಾಂಗಕ್ಕೆ ಸ್ಫೂರ್ತಿಯಾಗಲಿ ಎಂದು ಹಾರೈಸೋಣ.

# ಸಾಹಿತ್ಯದಲ್ಲಿ ಸಾಮಾಜಿಕ ಪ್ರಜ್ಞೆ

- ಡಾ॥ ನಿಂಗಣ್ಣ ಸಣ್ಣಕ್ಕಿ

ಇಪ್ಪತ್ತನೆಯ ಶತಮಾನದ ಪ್ರಾರಂಭದಲ್ಲಿಯೇ ಸಾಹಿತ್ಯದ ಬಗೆಗೆ ಮಹತ್ವದ ಹೇಳಿಕೆಗಳು ಉಗಮಗೊಂಡವು. ಸಾಹಿತ್ಯವು ಭಾಷೆ ಮೂಡಿದಾಗಲೇ ಉಗಮಗೊಂಡಿದೆ ಎಂಬ ಅರಿವು ವಿಶ್ವದ ಬೇರೆ ಬೇರೆ ನಿಟ್ಟುಗಳಲ್ಲಿ ಮಿಂಚುತ್ತಿತ್ತು.

ಭಾಷೆ ಮತ್ತುಸಾಹಿತ್ಯ ಎಂದು ಪ್ರಾರಂಭಗೊಂಡವು ಎಂಬುದಾಗಿಯೂ ಓದುಗರ ಮನಸ್ಸಿನಲ್ಲಿ ಹೊಳೆಯದೇ ಇಲ್ಲ! ಕ್ರೈಸ್ತರ ಪವಿತ್ರ ಗ್ರಂಥದಲ್ಲಿ ಬರುವ ಕಥೆಯ ಪ್ರಕಾರ, ಹಿಂದುಗಳ ಪವಿತ್ರ ಗ್ರಂಥಗಳ ಮಾಲಿಕೆಯಲ್ಲಿ ಬರುವ ಪುರಾಣಗಳ ಪ್ರಕಾರ ಜಲ ಪ್ರಳಯವಾಗಿ ಜೀವರಾಶಿಗಳು ಹಾಳಾಗಿ, ಬಳಿಕ ಗಂಡು-ಹೆಣ್ಣು ಉಳಿದುಕೊಂಡು ಜನಾಂಗವಾಗಿ ಒಗ್ಗಟ್ಟಾದರು. ದೇವರೇ ಅವರನ್ನು ಬೇರೆ ಬೇರೆ ಸ್ಥಳಗಳಿಗೆ ಕಳುಹಿಸಿದನು. ಆದುದರಿಂದ ಅವರು ಬೇರೆ ಬೇರೆ ಭಾಷಿಕರಾದರು. ಈ ಸಂಗತಿಗಳು ಜಗತ್ತಿನ ಬೇರೆ ರೀತಿಯ ಅನೇಕ ಭಾಷೆಗಳು ಇರುವುದಕ್ಕೆ ಕಾರಣವಾಯ್ತು.

ಭಾಷಾ ಶಾಸ್ತ್ರಜ್ಞರ ಪ್ರಕಾರ ಇತ್ತೀಚಿನ ಸಂಶೋಧನೆಯು ತೋರಿಸು ವುದೇನೆಂದರೆ - ಸುಮಾರು ೧೦,೦೦೦ ವರ್ಷಗಳ ಹಿಂದೆ ಪ್ರಪಂಚದ ಎಲ್ಲೆಡೆಯಲ್ಲೂ ಸೇರಿ ೧೫ ಸಾವಿರ ಭಾಷೆಗಳು ಇದ್ದುವಂತೆ ಅವುಗಳಲ್ಲಿ ಸುಮಾರು ೫ ಸಾವಿರ ಭಾಷೆಗಳು ಉಳಿದುಕೊಂಡವುಗಳಾದವು. ಬಳಿಕ ೧೦೦ಕ್ಕೆ ೯೦ರಷ್ಟು(೯೦%) ಭಾಷೆಗಳು ನಿರ್ನಾಮವಾದವುಗಳೆಂದು ತಿಳಿಸುತ್ತಾರೆ. ಈಗ ವಿಶ್ವದಲ್ಲಿ ೨೦೦೦ ಭಾಷೆಗಳಿದ್ದೂ, ದ್ರಾವಿಡ ವರ್ಗಕ್ಕೆ ಸೇರಿದವು ಹತ್ತು ಭಾಷೆಗಳಿವೆ. ಕನ್ನಡ ದ್ರಾವಿಡ ವರ್ಗಕ್ಕೆ ಸೇರಿದ ಭಾಷೆ. ಈಗ ಕನ್ನಡಿಗರು ಸುಮಾರು ಐದು ಕೋಟಿಜನರು ಮಾತನಾಡುತ್ತಾರೆ. ಕನ್ನಡಕ್ಕೆ ಸುದೀರ್ಘವಾದ ಎರಡು ಸಾವಿರ ವರುಷಗಳ ಇತಿಹಾಸವಿದ್ದು, ಚರಿತ್ರೆ ಎದ್ದುಕಾಣುತ್ತಿದೆ. ಎರಡು ಸಾವಿರ ವರುಷಕ್ಕೂ ಪೂರ್ವದಲ್ಲಿ ಕನ್ನಡವನ್ನು ಮೌಖಿಕವಾಗಿ ಮಾತನಾಡುತ್ತಿರುವುದು ಕಂಡುಬಂದಿದೆ.

ಮಾನವರು ದನಿ ಬಿಚ್ಚಿ ಮಾತನಾಡುವ ಸರಣಿಗೆ ಭಾಷೆ, ನುಡಿ ಎಂಬುದಾಗಿ ಪರಂಪರೆಯಿಂದ ಕರೆಯುವುದುಂಟು. ಮಾನವನಿಗೆ ಭಾಷೆಗಟ್ಟಿಗೊಂಡಾಗ, ಅನ್ಯರ ಅರಿವಿಗೆ ಮುಟ್ಟಿ ತಿರುಗಿ ಮಾತು ಕೇಳಿದಾಗ, ರಸಿಕತೆಯ ಮಾತುಗಳೇ ಸಾಹಿತ್ಯವಾಗಿ

ಪ್ರಸಾರಪಡೆದದ್ದುಂಟು. ಸಾಹಿತ್ಯವನ್ನು ಮಾನವನಿಗೆ ಉಂಟು ಮಾಡುವ ಸಂಗತಿಗಳಲ್ಲಿ ಭಾಷೆ-ಸಾಹಿತ್ಯ ಮೊದಲ ಸ್ಥಾನದಲ್ಲಿ ನಿಲ್ಲುತ್ತವೆ. ಭಾಷೆ-ಸಾಹಿತ್ಯವನ್ನೊಳಗೊಂಡಿರುವಂತೆ, ಸಾಹಿತ್ಯದಲ್ಲಿ ಭಾಷೆ ಜೀವಂತವಾಗಿರುತ್ತದೆ; ಇವೆರಡು ಮಾನವನ ಸಂಸ್ಕೃತಿಯ ಅಂಗಗಳಾಗಿರುತ್ತವೆ, ಮತ್ತುಸಂಸ್ಕೃತಿ ಸಾಹಿತ್ಯದ ಶರೀರವನ್ನು ಪಡೆದುಕೊಂಡಿರುತ್ತದೆ. ಪ್ರತಿಯೊಂದು ಸಾಹಿತ್ಯದಲ್ಲಿ ಸಂಸ್ಕೃತಿ ಹೃದಯವೋ ಆತ್ಮವೋ ಆಗಿ ಸಜೀವತೆಯ ಸಾಕಾರ ಪಡೆಯುತ್ತದೆ. ಈ ದೃಷ್ಟಿಯಲ್ಲಿ ನಾವಿಂದು ಕನ್ನಡ ಸಾಹಿತ್ಯದಲ್ಲಿ ಸಾಮಾಜಿಕ ಪ್ರಜ್ಞೆಯನ್ನು ತಿಳಿಯುವುದು ಅವಶ್ಯವಿದೆ.

**ಸಾಹಿತ್ಯವೆಂದರೇನು ?**

ನಮ್ಮ ಜ್ಞಾನೇಂದ್ರಿಯಗಳಿಗೆ ತೋರುವ ವಸ್ತು-ಸಂಗತಿ, ಆಗುಹೋಗು, ಇರುವಿಕೆ-ಇಲ್ಲದಿರುವಿಕೆ, ಬರುವಿಕೆ -ಹೋಗುವಿಕೆ, ಜನನದಿಂದ -ಮರಣದ ವರೆಗಿನ 'ಅರ್ಥ'ವನ್ನು ವಿವರಿಸುತ್ತೇವೆ. ತಿಳಿಯುತ್ತೇವೆ. ತಿಳಿಸಲು ಇಷ್ಟಪಡುತ್ತೇವೆ. ಅದಕ್ಕೆ ಖಚಿತವಾದ ಶಬ್ದ ಗೊತ್ತುಮಾಡುತ್ತೇವೆ. ಆ ಶಬ್ದಕ್ಕೆ ಧ್ವನಿ-ಲಯ ನೀಡುತ್ತೇವೆ; ಮಾಲೆಮಾಡುತ್ತೇವೆ. ಶಬ್ದಗಳ ಮಾಲೆಯೇ ಮಾತು. ಹೀಗೆ ನಮ್ಮ ಪೂರ್ವಿಕರು ಮಾಡಿದ್ದಾರೆ. ನಾವು ಮಾಡುತ್ತೇವೆ. ಮುಂದಿನವರೂ ಮಾಡುತ್ತಾರೆಂಬ ವಿಶ್ವಾಸ ಮೂಡಿ, ಕಲಿಸುತ್ತೇವೆ. ಕಲಿಸುವುದಕ್ಕೆ ಸೌಂದರ್ಯ ಸೇರಿಸುತ್ತೇವೆ. ಶಬ್ದವು ಪ್ರಮುಖವಾಗಿ, ಅರ್ಥವು ಹರವು ಪಡೆದು ಬದುಕಿಗೆ ತಿಳುವಳಿಕೆಗೆ ಹಿತ ನೀಡುತ್ತದೆ. ಅದನ್ನು ದಾಖಲಾಯಿಸುತ್ತೇವೆ. ಹೀಗೆ ನಡೆಯುವ ಚಕ್ರವೇ ಸಾಹಿತ್ಯವೆಂದೆನಿಸಿಕೊಳ್ಳುವುದು. ಇದು ಜೀವಿಗಳಿಗೆಲ್ಲರಿಗೂ ಬೇಕಾಗಿರುವುದು. ಆದುದರಿಂದ ಸಾಹಿತ್ಯವು ಜೀವನದ ಕನ್ನಡಿ, ಪರಿವಿಡಿ, ಪಡಿನೆಳಲು, ಬಾಳಗನ್ನಡಿ ಇತ್ಯಾದಿಯಾಗಿ ಹೇಳುತ್ತ ಸಾಗುತ್ತಿದ್ದೇವೆ. ಇಂಗ್ಲಿಷಿನಲ್ಲಿ ಸಾಹಿತ್ಯಕ್ಕೆ ಲಿಟರೇಚರ್ ಎಂಬುದಾಗಿ ಕರೆದಿದ್ದಾರೆ. ವಿಶ್ವದಲ್ಲಿ ಸಂಚಾರವಾದುದು ಇಂಗ್ಲಿಷರಿಂದ ಲಿಟರೇಚರ್ ಮಾತ್ರ. ಈ ಅರ್ಥ ತಿಳಿದು ಅಲ್ಲಲ್ಲಿ ಚದುರಿಹೋಗಿದ್ದ ಸಾಹಿತ್ಯನ್ನು ವಿಶ್ವದ ವಿವಿಧ ಭಾಷಿಕರು ತಮ್ಮ ಲಿಟರೇಚರ್ ಮಾತ್ರ. ಈ ಅರ್ಥ ತಿಳಿದು ಅಲ್ಲಲ್ಲಿ ಚದುರಿ ಹೋಗಿದ್ದ ಸಾಹಿತ್ಯವನ್ನು ವಿಶ್ವದ ವಿವಿಧ ಭಾಷಿಕರು ತಮ್ಮ ಲಿಟರೇಚರ್‌ನ್ನು ದೊಡ್ಡದು ಮಾಡುತ್ತಾ, ತಾವು ದೊಡ್ಡವರು ಎಂಬ ಚಲಾವಣೆಯು ಸಾಗಿಬಂದಿದೆ.

ಮೊದ ಮೊದಲಿಗೆ ಕನ್ನಡದಲ್ಲಿ ನಮ್ಮವರು ವಾಙ್ಮಯ, ಶಾಸ್ತ್ರ ಇತ್ಯಾದಿ ಕರೆಯುವ ಪ್ರಯತ್ನ ಮಾಡಿದರು. ವಾಙ್ಮಯಕ್ಕೆ ಬದಲಾಗಿ ಸಾಹಿತ್ಯ ಶಬ್ದ ಬಹು ಚಲಾವಣೆ ಕಂಡಿತು. ಶಾಸ್ತ್ರ ಒಂದು ತಾತ್ವಿಕ ಸಿದ್ಧಾಂತ ಎಂಬ ವಾದವು ಆಚಾರ್ಯರಿಂದ ಬಂದುದಾಯಿತು.

ಒಂದು ನಾಡು-ದೇಶ ಸಂಸ್ಕೃತಿಯಿಂದ ಸಾಹಿತ್ಯ, ಕಲೆ, ಸಂಗೀತ ಇತ್ಯಾದಿ ಕ್ಷೇತ್ರಗಳಲ್ಲಿ ಮುಂದೊರೆದರೆ, ವ್ಯಕ್ತಿಗಳು ಅವುಗಳನ್ನು ಅಭಿವೃದ್ಧಿ ಪಡಿಸಿದರೆ, ಆ ನಾಡಿನ ಆ ದೇಶದ ಕೀರ್ತಿ ಉನ್ನತ ಮಟ್ಟದಲ್ಲಿ ಇರುತ್ತದೆಂಬುದು ಸ್ಪಷ್ಟವಾಗುತ್ತದೆ. ಸಾಹಿತ್ಯವು ಮೊದಲು ಮೂಡಿದ್ದು 'ಕಾವ್ಯ' ಪ್ರಕಾರದಲ್ಲಿ ಎಂಬುದನ್ನು ಕಾಣುತ್ತೇವೆ. ಕಾವ್ಯ ರಚನೆ ಕಾವ್ಯ ವಾಚನವು ಪಾಂಡಿತ್ಯದ ಕುರುವಾಗಿ ಬಂದಿದೆ. ಶಿಲಾಶಾಸನಗಳಲ್ಲೂ ಮೊದಲು ಮೂಡಿದ್ದು ಕಾವ್ಯದಲ್ಲಿಯೇ, ಆದರ ಮೂಲ ಜಾನಪದದಲ್ಲಿಯೇ. ಏಕಪದಿಯಿಂದ ಶುರುವಾಗಿ ಬಹುಪದಿಯ ಕಾವ್ಯವು ಜಾನಪದದಲ್ಲಿರುವುದನ್ನು ಕಂಡುಕೊಂಡಿದ್ದೇವೆ. ಬಳಿಕ ಗದ್ಯವು ಮೂಡಿದ್ದು. ಗದ್ಯ ಪದ್ಯಗಳೆರಡು ಸಾಹಿತ್ಯದ ಪ್ರಕಾರವಾಗಿ ಬರಬರುತ್ತ ಹಲವು ಸಾಹಿತ್ಯ ಸ್ವರೂಪಗಳು ಮೂಡಿ ನಿಂತು ರಚನೆಗೊಂಡವು. ರಚನೆಗೊಂಡ ಸಾಹಿತ್ಯವು ಓದುಗರಿಗೆ ತಿಳಿಯುತ್ತಾ ಹೋದರೆ ಸಾರ್ಥಕತೆ ಸಾಧಿಸಿದಂತಾಗುವುದು.

ಕನ್ನಡ ಸಾಹಿತ್ಯವು ರಸಗಟ್ಟಿಯ ತವರುಮನೆಯಾಗಿದೆ. ಶಾಸನ ಸಾಹಿತ್ಯ ಮೊದಲು ಮಾಡಿ, ನೃಪತುಂಗನ ಕವಿರಾಜ ಮಾರ್ಗವನ್ನು ತಿಳಿದು, ಪಂಪ, ರನ್ನ, ಪೊನ್ನ, ಅಲ್ಲಮ-ಬಸವಣ್ಣ ಶಿವಶರಣರು, ಹರಿಹರ- ರಾಘವಾಂಕರು, ಕುಮಾರವ್ಯಾಸ-ಲಕ್ಷ್ಮೀಶ ಪುರಂದರ -ಕನಕದಾಸರು, ಅಕ್ಕಮಹಾದೇವಿ ಸಂಚಿ ಹೊನ್ನಮ್ಮ, ರತ್ನಾಕರವರ್ಣಿ, ಗೋವಿಂದ ವೈದ್ಯ, ಸಂಚಾರಿ ಸರ್ವಜ್ಞ, ಷಡಕ್ಷರಿ, ನಿಜಗುಣ ಶಿವಯೋಗಿ, ಮಹಂತರು, ಜಾನಪದ ಸಾಹಿತ್ಯ, ಆಧುನಿಕ ಸಾಹಿತ್ಯಜ್ಞರು ಇತ್ಯಾದಿಯಾಗಿ ಕನ್ನಡ ಸಾಹಿತ್ಯವನ್ನು ಪೂರ್ವದ ಹಳಗನ್ನಡದಿಂದ ಸಿರಿಗನ್ನಡಕ್ಕೇರಿಸಿದ ಕೀರ್ತಿ ಕನ್ನಡ ಸಾಹಿತ್ಯಕ್ಕಿದೆ. ಆದರೂ ನಾವೆಲ್ಲ ಒಕ್ಕೊರಲನ್ನು ತಾಳಿಲ್ಲ. 'ಕನ್ನಡದ ಮನೆಯಲ್ಲಿ ಕನ್ನಡತಿಯೇ ಯಜಮಾನಿ' ಎಂಬುದನ್ನು ತಿಳಿದು, 'ಎಲ್ಲಿಯಾದರೂ ಇದ್ದರೂ ಎಂದೆಂದಿಗೂ ಕನ್ನಡವಾಗಿರುವ ಛಲ' ಕನ್ನಡಿಗರಿಗೆ ಇರಬೇಕಾದ ಐಶ್ವರ್ಯ.

ಸಾಹಿತ್ಯದಲ್ಲಿ ಸಾಮಾಜಿಕ ಪ್ರಜ್ಞೆ ಮೂಡುವ ಮೊದಲು ಯೋಚನೆಯ ಅವಶ್ಯಕತೆ ಇದೆ ಅದೇನೆಂದರೆ - ಸಾಹಿತ್ಯದಿಂದ ಏನು ಲಾಭ ? ಅಥವಾ ಏನು ಪ್ರಯೋಜನ ? ಎಂಬ ಮಾತೇ ಎಲ್ಲೆಡೆಯಲ್ಲಿ ಕೇಳುವವರುಂಟು.

ಸಾಹಿತ್ಯ ಅಕ್ಷರಸ್ಥರನ್ನು, ಓದುಗರನ್ನು, ಕೇಳುಗರನ್ನು ಉಲ್ಲಾಸ-ಉತ್ತೇಜನಗೊಳಿಸುತ್ತದೆ.

ಸಾಹಿತ್ಯದ ರಚನೆಯು ಸಾರ್ವಕಾಲಿಕವಾಗಿ ಸಾರ್ವಜನಿಕವಾಗಿ ಇರುತ್ತದೆ.

ಸಾಹಿತ್ಯ ಧರ್ಮ, ಅರ್ಥ, ಕಾಮ, ಮೋಕ್ಷ ಸಾಧಿಸುವ ಸಾಧನಮಾರ್ಗವಾಗಿದೆ.

ಸಮಾಜದ ಪರಿವರ್ತನೆ ಸಾಹಿತ್ಯಜ್ಞರಿಂದ ಸಾಹಿತ್ಯದಿಂದ ಮಾತ್ರ ಸಾಧ್ಯವಾಗುತ್ತಿದೆ. ಪ್ರಪಂಚದ ಇತಿಹಾಸ ಇದನ್ನು ತಿಳಿಯಪಡಿಸುತ್ತಿದೆ.

ಸಾಹಿತ್ಯ ಕ್ರಾಂತಿ ಕಹಳೆಯನ್ನು ಊದಿದೆ, ಮತ್ತು ಊದುತ್ತಿದೆ.

ಭಾರತೀಯ ಸಾಹಿತ್ಯದಲ್ಲಿ ಋಷಿಗಳು, ಮಹರ್ಷಿಗಳು, ದರ್ಶನಕಾರರು, ಮಹಾಕವಿಗಳು, ಕವಿಗಳು, ಲೇಖಕರು ನಾಟಕಕಾರರು ಈ ಕಾರ್ಯ ಮಾಡಿ ತೋರಿಸಿದ ಮಹನೀಯರಾಗಿದ್ದಾರೆ. ಈ ಮಹನೀಯರು ಸಮಾಜಕ್ಕೆ ಒಳ್ಳೆಯದನ್ನೇ ಮಾಡಿದ್ದಾರೆ. ಭಾರತದಲ್ಲಿ ವೇದ, ಉಪನಿಷತ್ತು, ಶಾಸ್ತ್ರಗಳು, ಆಗಮಗಳು, ಪುರಾಣಗಳು, ಕಾವ್ಯಕೃತಿಗಳು ಸಾಕ್ಷಿಯಾಗಿನಿಂತಿವೆ.

ಹೊಸತರಹದ ಸಾಹಿತ್ಯವು ಮಾನವನಿಗೆ ಹೊಸದಿಕ್ಕನ್ನು ತೋರುತ್ತದೆ. ಈ ಹೊಸ ಸಾಹಿತ್ಯ ಜ್ಞಾನವಿಜ್ಞಾನದ ತಮ್ಮ ಶಾಖೆಗಳನ್ನು ವಿಸ್ತರಿಸುತ್ತಾ ಸಾಗಿವೆ. ನಾಡು-ದೇಶಗಳ ಆಗು-ಹೋಗುವಿಕೆಗೆ ಲೇಖಕರು ಒಂದಿಲ್ಲೊಂದು ತರದ ರೀತಿ ನೀತಿ ಪಕ್ಷ-ಪಂಗಡಗಳಿಗೆ ಬದ್ಧರಾಗಬೇಕಾಗುತ್ತದೆ. ಅಂದಾಗ ಅವರು ತಮ್ಮ ವಿಚಾರಗಳಿಂದ ಸಾಮಾಜಿಕ ಕಳಕಳಿಯನ್ನು ತೋರಲು ಶಕ್ಯರಾಗುತ್ತಾರೆ.

**ಸಾಮಾಜಿಕ ಪ್ರಜ್ಞೆ**

ಸಾಹಿತ್ಯದಲ್ಲಿ - ಸಾಹಿತ್ಯ ನಿರ್ಮಾಪಕರಲ್ಲಿ ಈ ಶತಮಾನದ ಉತ್ತರಾರ್ಧದಲ್ಲಿ ಕೇಳಿಬರುತ್ತಿರುವ ಪ್ರಶ್ನೆ ಏನೆಂದರೆ - ಅದರಲ್ಲಿ ಅವನಲ್ಲಿ/ಅವಳಲ್ಲಿ ಸಾಮಾಜಿಕ ಪ್ರಜ್ಞೆ ಎಷ್ಟು ಇದೆ ಎಂದೂ, ಏನು ಇದೆ ಎಂದೂ, ಹೇಗೆ ಇದೆ ಎಂದೂ ಕುಣಿತ-ಗಣಿತಗಳಿವೆ ಎಂದೂ, ಕೇಳುಗರಲ್ಲಿಯೇ ಪ್ರಜ್ಞೆಯ ಅರ್ಥ ಸರಿಯಾಗಿ ಆಗದಿರುವಿಕೆ ಕಾಣುತ್ತಿರುತ್ತದೆ. ಮಾನವ ಪ್ರಜ್ಞಾ ಪ್ರಖ್ಯಾತಿಯ ಕನ್ನಡದ ಲೇಖಕ ಡಾ. ಶಂ.ಬಾ. ಜೋಶಿಯವರು ಬುದ್ಧಿಗೆ ನಮ್ಮವರು ಪ್ರಜ್ಞೆ ಎಂದು ತಿಳಿದು ಪ್ರಜ್ಞೆಯನ್ನೇ ನಷ್ಟ ಮಾಡಿದ್ದಾರೆ ಎಂದು ತಿಳಿಸುತ್ತಿರುವುದು ನೆನಪಿಗೆ ಬರುತ್ತಿದೆ.) (ಜಾತವೇದ) ಅಗ್ನಿಯು ವಾಕ್‌ರೂಪ ಧರಿಸಿ ಮುಖವನ್ನು ಪ್ರವೇಶಿಸಿದವನು) ಪ್ರಸ್ತುತ ಗ್ರಹಿಸಿಕೊಳ್ಳಬೇಕಾದ ಸಂಗತಿ, ಈ ಅಗ್ನಿ-ಇವನು ಭಾಷೆಯನ್ನು ಪ್ರಚೋದಿಸುವ ಅಗ್ನಿ- ಜಾತವೇದ; ಅಂದರೆ-ಪ್ರಜ್ಞೆ. ಇದು ಮನುಜರೊಡನೆಯೇ ಪ್ರಾದುರ್ಭವಿಸಿರಬೇಕಷ್ಟೆ, ? ಆದಕಾರಣ (Nous) ಪ್ರಜ್ಞೆ ಇದು ಮಾನವ ಸಂಸ್ಕೃತಿಯ ಆದಿ ಕಾರಣ ತತ್ವ ಎಂದು ಅರಿಸ್ಟಾಟಲ್ ಹೇಳಿದ್ದು ವಾಸ್ತವ ಸತ್ಯ ಎಂಬಲ್ಲಿ ಸಂದೇಹವಿಲ್ಲ. (ಬಿತ್ತಿದ್ದನ್ನುಬೆಳಕೊ-೪೩) ಪ್ರಜ್ಞಾತತ್ವವೆಂದರೆ - ಪ್ರಕಾಶ ತತ್ವವೆಂದು ಸ್ಪಷ್ಟವಾದ ಅರ್ಥವನ್ನು ಅವರು ನೀಡುತ್ತಿದ್ದರು. ವೈವಸ್ವತಮನು ಪ್ರಣೀತ ಮಾನವ ಧರ್ಮದ ಆಕೃತಿಯಿಂದ ಈ ಸೂರ್ಯ ಪ್ರಕಾಶ (ಪ್ರಜ್ಞೆ) ತಿಳಿದು ಬರುತ್ತದೆ. ಇಡೀ ಕನ್ನಡ ಸಾಹಿತ್ಯದಲ್ಲಿ ಸಾಮಾಜಿಕ ಪ್ರಜ್ಞೆ ಎಷ್ಟು ಮೂಡಿ ಬಂದಿದೆ

ಎಂದು ವಿಚಾರಿಸುತ್ತ ಹೋದರೆ, ಯುಗ ಧರ್ಮ ಮತ್ತು ಕನ್ನಡ ಸಾಹಿತ್ಯಸಾಮಾಜಿಕ ಪ್ರಜ್ಞೆಯ ಬಗೆಗೆ ಮಹಾ ಪ್ರಬಂಧವನ್ನೇ ಬರೆಯಬೇಕಾಗುವುದು. ಸಾಹಿತ್ಯ ಸಾಗಿ ಬರುತ್ತಲೇ ತನ್ನ ಕಾಲಧರ್ಮವನ್ನು ಬಿಂಬಿಸುತ್ತಲೇ ಬಂದಿದೆ. ಜಾನಪದ ಮತ್ತು ಮಾರ್ಗ ಸಾಹಿತ್ಯದ ಪರಂಪರೆಯಲ್ಲಿ ಸಾಮಾಜಿಕ ಪ್ರಜ್ಞೆಯ ಕಡೆಗೆ ತಿರುಗುವುದು ಅವಶ್ಯವಿದೆ.

ಆಧುನಿಕ ಸಾಹಿತ್ಯದಲ್ಲಿ ಲೇಖಕರು, ಕವಿವರ್ಯರು ತಮ್ಮ ಸಾಹಿತ್ಯರಚನೆ ಬೃಹದಾಕಾರದ ತತ್ವವನ್ನು ಪಡೆಯಬೇಕೆಂದು ಪ್ರಪಂಚದ ಪ್ರಜ್ಞೆಯನ್ನೇ ತುಂಬಲು ಹವಣಿಸುತ್ತಿದ್ದಾರೆ. ಸಮಾಜದ ಹಿತವೇ ತನ್ನ ಹಿತವೆಂದು ಬಗೆಯುವವರಿಗೆ ಸಮಾಜ ಪ್ರಜ್ಞೆ ಇರುತ್ತದೆ.' ಎಂಬುದೇನು ಸತ್ಯಕ್ಕೆ ದೂರವಾದುದಲ್ಲ! ರಾಷ್ಟ್ರದ ಹಿತ, ಪ್ರಪಂಚದ ಹಿತ ಎಂದು ಹೇಳುವವರೂ ಬರೆಯುವವರೂ ಉಂಟು. ಆದರೆ ರಾಷ್ಟ್ರದವರೂ - ಪ್ರಪಂಚದ ಗಣ್ಯರು ಒಪ್ಪಬೇಕಾದ ವೈಚಾರಿಕತೆ ಬೇಕು.

ಪ್ರಪಂಚದ ಅಂದರೆ ವಿಶ್ವದ ಒಂದಂಗವಾದ ಒಂದು ಸಮಾಜದ ಪ್ರಜ್ಞೆಯನ್ನು ಸಂಚರಿಸಿಯೋ, ದೇಶ ನೋಡಿಯೋ ಕೋಶ ಓದಿಯೋ ಅನುಭವಿಯಾಗಿ ಬರಹದ ಮೂಲಕ ಹೊರಹಾಕುವುದು ಅವಶ್ಯವಿದೆ. ಇಂತಹ ಲೇಖಕರಿಗೆ / ಕವಿಗಳಿಗೆ ಜ್ಞಾನಿ/ ವಿಜ್ಞಾನಿಗಳಿಗೆ ಇತಿಹಾಸ ಪ್ರಜ್ಞೆ, ಪರಂಪರೆಯ ಪ್ರಜ್ಞೆ, ಸೌಂದರ್ಯ ಪ್ರಜ್ಞೆ, ಪರಿಸರ ಪ್ರಜ್ಞೆ, ಸಮಾಜಿಕ ಪ್ರಜ್ಞೆ ಅವಶ್ಯವಾಗಿ ಅರಿವಿನಲ್ಲಿ ವಿವೇಕಗೊಂಡಿರ ಬೇಕಾಗುವುದು.ಕವಿ ಅಥವಾ ಲೇಖಕನ ಮೂಲ ಸಾಮಗ್ರಿ ಮತ್ತು ಅವರ ಸಂಶೋಧನೆ ಸಮಕಾಲೀನ ಜೀವನ ಮೌಲ್ಯದ ಅನುಭವಗಳು ಅವರವರ ದೃಷ್ಟಿಯಿಂದ -ಸೃಷ್ಟಿ ರೂಪಗೊಳ್ಳುತ್ತದೆ. ಕಾಲಕ್ಕನುಸರಿಸಿ, ಲೇಖಕರು /ಕವಿಗಳು ಜೀವನದ ಮೂಲ ಆಧಾರಕ್ಕೆ ಅಣಿಗೊಂಡು ಕೃತಿ ರಚನೆಗಳನ್ನು ಮಾಡಿದ್ದುಂಟು.

ಕನ್ನಡದ ಆದಿ ಕವಿ ಪಂಪನು ಮಾನವರ ತಿದ್ದುವಿಕೆಯ ಮೇಧಾವಿತನ - ವಿಚಾರವಂತಿಕೆಗೆ 'ಮಾನವ ಕುಲಂ ಒಂದೇ ವಲಂ' ಎಂಬ ಮಂತ್ರವನ್ನೇ ನುಡಿದು ಬರೆದುದನ್ನು ಸ್ಮರಿಸಿಕೊಳ್ಳಬೇಕು.

**ವಚನ ಸಾಹಿತ್ಯ**

ಕನ್ನಡ ಸಾಹಿತ್ಯದಲ್ಲಿ ಅದರಲ್ಲೂ ಹನ್ನೆರಡನೆಯ ಶತಮಾನದಲ್ಲಿ ಸಾಮಾಜಿಕ ಪ್ರಜ್ಞೆಯ ಮೌಲ್ಯವನ್ನು ವಚನಕಾರರು ಎತ್ತಿತೋರಿದವರು. ಅವರು ಸಾಮಾಜಿಕ ಪ್ರಜ್ಞೆಯನ್ನಷ್ಟೇ ಅಲ್ಲ ಯುಗಪ್ರಜ್ಞೆಯನ್ನೇ ನಿರ್ಮಿಸಿದರು. ಅಲ್ಲಮ ಪ್ರಭು ಮತ್ತು ಬಸವಣ್ಣನವರ ಮುಖ್ಯತ್ವದಲ್ಲಿಯ ಕಲ್ಯಾಣದ ಅನುಭವ ಮಂಟಪವು ಕೇಂದ್ರವಾಗಿ ಸಾಮಾಜಿಕ ಕಾಳಜಿಯ ಬೀಜವು ಅಂಕುರಿಸಿ ಯುಗಪ್ರಜ್ಞೆಯನ್ನೇ ಕಾಯಕತತ್ವದಿಂದ

ಸಾಮಾಜಿಕ ಪ್ರಜ್ಞೆಯು ಮರವನ್ನೇ ರಚಿಸಿಯಾಗಿದೆ. ಅಂದಿನ ವೈಚಾರಿಕತೆಯು ಬಹುಸಂಖ್ಯಾ ಪಂಡಿತಪಾಮರರಿಗೆ ತಿಳಿಯದೇ ಹೋದರೂ, ಬರಬರುತ್ತ ಪಂಡಿತಪಾಮರರೆಲ್ಲರೂ ಗೊಡ್ಡು ಸಂಪ್ರದಾಯಗಳ ವಿರುದ್ಧ ಹೋರಾಟ ನಡೆಯಿಸಿದ್ದನ್ನು ಕಾಣುತ್ತೇವೆ.

ವಚನಗಳನ್ನು ಅನುಭಾವಿಗಳ ಸಾಹಿತ್ಯವೆಂಬುದೂ, ಆತ್ಮಸಾಕ್ಷಿಯ ವಾಣಿವೆಂಬುದೂ, ವಿಚಾರ ಸಾಹಿತ್ಯವೆಂಬುದೂ, ಹೃದಯದ ಚಿಂತನೆಗಳೆಂಬುದೂ, ಜನರಿಂದ ಜನರಿಗಾಗಿ ಹುಟ್ಟಿದ ಬದುಕಿನ ಸಾಹಿತ್ಯವೆಂಬುದೂ ಸ್ಪಷ್ಟವಾಗುತ್ತಿದೆ.

ವಚನಗಳಿಂದ ಸಮಾಜ ಕಲ್ಯಾಣದ ಚಳುವಳಿಯನ್ನು ಶಿವಶರಣರ ಚಳುವಳಿ ಎಂಬುದಾಗಿ ಗುರುತಿಸುತ್ತಿದ್ದೇವೆ. 'ಸಕಲ ಜೀವಾತ್ಮರಿಗೆ ಲೇಸನ್ನು ಬಯಸುವವರನ್ನು ಶರಣರು' ಎಂಬ ಆತ್ಮದ ವೈಚಾರಿಕತೆ ಮೂಡಿಬಂದದ್ದು ಸಮಾಜದ ವಿವಿಧ ಕ್ಷೇತ್ರಗಳ ಅದ್ಭುತ ಪರಿವರ್ತನೆಯಾಗಿದೆ. ಬಸವಣ್ಣನವರ ಕ್ರಾಂತಿಕಾರಕ ಚಳುವಳಿ ಸಾರ್ವಜನಿಕವೆಂಬುದು ಬದುಕಿನ ತಲಸ್ಪರ್ಶಿಯಾಗಿ ಕಂಡು ಬಂದಿತು.

ವ್ಯಷ್ಟಿ ಮತ್ತು ಸಮಷ್ಟಿಯ ವಿಚಾರವನ್ನು ಬಿಡಿ-ಬಿಡಿಯಾಗಿ ಹೇಳಿ, ಸಮಾನತೆಯ ಕಲ್ಪನೆಯನ್ನು ರೂಢಿಸಿದವರಲ್ಲಿ ಶಿವಶರಣರೇ ಮೊದಲಿಗರು.

ಅನುಭವ ಮಂಟಪದಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಪಡೆದ ಶಿವಶರಣರು ವ್ಯಷ್ಟಿ-ಸಮಷ್ಟಿ ಸ್ವಾತಂತ್ರ್ಯದ ಬಗೆಗೆ, ಸಾಮಾಜಿಕ ಸ್ವಾತಂತ್ರ್ಯ, ಧಾರ್ಮಿಕ ಸ್ವಾತಂತ್ರ್ಯ, ವಿಚಾರ ಸ್ವಾತಂತ್ರ್ಯಗಳನ್ನು ರೂಢಿಸಿಕೊಂಡು ಸರ್ವ ಜನರಿಂದ ಮನ್ನಣೆ ಪಡೆದರು. ಈ ವಚನಕಾರರ ಸ್ವಾತಂತ್ರ್ಯ ಮತ್ತು ಸಮಾನತೆಯ ಪರಿಕಲ್ಪನೆಯು ಸರ್ವಕಾಲಕ್ಕೂ ನೂತನವಾದುದು ಮತ್ತು ಪ್ರಸ್ತುತವಾದುದು.

ಶರಣರು ನಾಸ್ತಿಕವಾದಿಗಳಲ್ಲ; ಆಸ್ತಿಕರು ದೇವತ್ವದ ಕಲ್ಪನೆ ಇದ್ದೂ, 'ದೇವನೊಬ್ಬ, ನಾಮ ಹಲವು' ಎಂಬ ಕಲ್ಪನೆಯ ಬೀಜ ಮಂತ್ರವನ್ನು ಜನಸಾಮಾನ್ಯರಲ್ಲಿ ಬಿಂಬಿಸಿದರೆನ್ನುವುದಕ್ಕಿಂತ ಬಿತ್ತಿದರು. 'ಅಯ್ಯಾ ಎಂದೊಡೆ ಸ್ವರ್ಗ, ಎಲವೋ ಎಂದೊಡೆ ನರಕ' 'ಸತ್ಯ ನುಡಿಯುವುದೇ ಸ್ವರ್ಗ' 'ಇದೇ ಸ್ವರ್ಗ ಇದೇ ನರಕ' ಎಂಬ ಆತ್ಮದ ಸಾಕ್ಷಿ ಮೂಡಿನಿಂತಿತು. ಹೀಗೆ ಸಾಮಾಜಿಕ ಜೀವನದ ವಿಕಾಸವಾದುದನ್ನು ಆ ಪರಿಸರವನ್ನು ಕಾಣುತ್ತೇವೆ.

ಕನ್ನಡ ಸಾಹಿತ್ಯದಲ್ಲಿ ದಾಸ ಸಾಹಿತ್ಯದ ಹರವಿನಲ್ಲಿ ಸಾಮಾಜಿಕ ಪ್ರಜ್ಞೆಯ ಘಟ್ಟವನ್ನು ಕಾಣುತ್ತೇವೆ. ಅದನ್ನೇ ಸರ್ವಜ್ಞನ ಸಾಮಾಜಿಕ ಚಿಂತನೆಗಳನ್ನು ಹಾಗೇ ಸರ್ವಜ್ಞ ಸಮಾಜದವರಿಗೆ ನೀಡಿದ ವಿಡಂಬನೆಗಳನ್ನು ತಿಳಿಯುತ್ತೇವೆ. ಈಬಗೆಯಿಂದ ಮುಂದೆ ಮುಂದೆ ನಡೆದಂತೆ ಇಪ್ಪತ್ತನೆಯ ಶತಮಾನದ ವಿವಿಧ ಸ್ವರೂಪಗಳಲ್ಲಿ

ಕನ್ನಡ ಸಾಹಿತ್ಯ ಹುಲುಸಾಗಿ ಬೆಳೆಯುತ್ತ ಸಾಮಾಜಿಕ ಪ್ರಜ್ಞೆಯ ಹಿತವನ್ನು ಓದಿ-ತಿಳಿದುಕೊಳ್ಳುವುದು ಅವಶ್ಯವಾಗಿದೆ.

## ಇಪ್ಪತ್ತನೆಯ ಶತಮಾನ

ಭಾರತದ ರಾಷ್ಟ್ರಪಿತ ಮಹಾತ್ಮಾಗಾಂಧೀಜಿಯವರು ತಮ್ಮ ವ್ಯಕ್ತಿತ್ವನ್ನು ಸತ್ಯ-ಅಹಿಂಸೆಗಳ ಮೂಲಕ ಸಾಧನೆಗೈದು, ಭಾರತ ಮತ್ತು ಪ್ರಪಂಚದಲ್ಲಿ ಹೆಸರುವಾಸಿಯಾದವರಾಗಿದ್ದಾರೆ. ಅವರ ಆತ್ಮಶ್ರೀಯು ಸರ್ವಕಡೆಗೆ ಪ್ರಭಾವವನ್ನು ಬೀರಿದೆ.'ಮಾನವನ ಮನಸ್ಸಾಗಲಿ, ಸಮಾಜವಾಗಲಿ, ರಾಜಕೀಯ, ಸಾಮಾಜಿಕ ಧಾರ್ಮಿಕ ಎಂಬ ಪ್ರತ್ಯೇಕ ವಿಭಾಗಗಳಾಗಿ ವಿಂಗಡನೆಯಾಗಿಲ್ಲ ಎಂಬುದು ನನ್ನ ವಿಶ್ವಾಸ, ಅವುಗಳ ನಡುವೆ ಕ್ರಿಯೆ-ಪ್ರತಿಕ್ರಿಯೆಗಳು ಇದ್ದೇ ಇವೆ.' (ಯಂಗ್ ಇಂಡಿಯಾ : ೨-೩-೧೯೨೨)

ಮಹಾತ್ಮಾಗಾಂಧೀಜಿಯವರ ಸರ್ವೋದಯ ಮಾರ್ಗ ರಾಷ್ಟ್ರದ ಜನತೆಗೆ ಒಪ್ಪಿಗೆಯನ್ನು ನೀಡುತ್ತ ಬಂದಿತು. ಸರ್ವೋದಯದಲ್ಲಿ ಸರ್ವರಿಗೂ ಸಮಾನತೆ ತರುವ ಎಲ್ಲ ಸಿದ್ಧಾಂತಗಳನ್ನು ಎರಕ ಹೊಯ್ಯಲಾಗಿದೆ.

ಈ ಶತಮಾನದ ಕನ್ನಡ ಕಾವ್ಯ, ಕಥೆ, ನಾಟಕ, ಕಾದಂಬರಿ, ಪ್ರಬಂಧ, ಸಂಶೋಧನೆ, ವೈಚಾರಿಕ, ಇತ್ಯಾದಿ ಇತ್ಯಾದಿ ಕೃತಿಗಳಲ್ಲಿ ಸಾಮಾಜಿಕ ಪ್ರಜ್ಞೆಯಿಂದ - ವಿಶ್ವ ಪ್ರಜ್ಞೆಯವರೆಗೆ ಸಾಹಿತ್ಯ ರಚನೆಯಾಗಿದೆ; ಆಗುತ್ತಲಿದೆ. ಕನ್ನಡ ಕಾವ್ಯ ಪ್ರಕಾರದಲ್ಲಿ ಅನೇಕ ರೂಪಗಳು ರಚನೆಯಾಗಿವೆ. ನವೋದಯ, ನವ್ಯ, ನವ್ಯೋತ್ತರ, ದಲಿತ, ಬಂಡಾಯ ಹೀಗೆ ರಚನೆಯಾದ ಪ್ರಕಾರಗಳಲ್ಲಿ ಸಾಮಾಜಿಕ ಪ್ರಜ್ಞೆ ಮೂಡಿ ನಿಂತಿದೆ. ಒಬ್ಬೊಬ್ಬ ಕೃತಿಕಾರರು ತಮ್ಮ ಜ್ಞಾನ-ವಿಜ್ಞಾನವನ್ನು ಸಾಹಿತ್ಯದಲ್ಲಿ ಹೊಸೆಯುತ್ತ ಬಂದಿದ್ದಾರೆ. ಸಾಹಿತ್ಯದ ಇತರ ಸ್ವರೂಪಗಳಲ್ಲಿ ಈ ಕುರಿತು ಮೂಡಿ ಬಂದುದು ಅತ್ಯಂತ ಮಹತ್ವದ ದಾಖಲೆಗಳು ಇವೆ. ಕನ್ನಡ ಸಾಹಿತ್ಯದ ಮೇಲೆ ಇಂಗ್ಲಿಷ್ ಸಾಹಿತ್ಯದ ಮತ್ತು ಬಂಗಾಲಿ ಸಾಹಿತ್ಯದ ಪ್ರಭಾವ ಬೀರಿರುವುದು ಸ್ಪಷ್ಟವಾಗಿ ಗುರುತಿಸಲಾಗಿದೆ. ಪ್ರಬಂಧ ಸಾಹಿತ್ಯವು ಲಲಿತ ಕಲೆಗಳಾಗಿ ರೂಪಗೊಂಡಿರುವುದು. ಸಾಹಿತ್ಯ ಕಲೆಯಾಗಿ, ಕಲೆಯು ಕಲೆಗಾಗಿ ಉಳಿಯದೇ, ಕಲೆಯು ಮಾನವರ ಬದುಕಿಗಾಗಿ ಎಂಬ ಸಿದ್ಧಾಂತವನ್ನು ಕೃತಿಕಾರರು ಎತ್ತಿತೋರಿಸಿದರು. ಕಲಾ ಕೃತಿಗಳೆಲ್ಲದವುಗಳಲ್ಲಿ ತೋರುತ್ತ ಬಂದರು. ಮಹಾವಿದ್ಯಾಲಯಗಳು ವಿಶ್ವವಿದ್ಯಾಲಯಗಳು ಈ ಕಾರ್ಯವನ್ನು ಸ್ವಾತಂತ್ರ್ಯದ ನಂತರ ತೀವ್ರಗತಿಯಿಂದ ಸಾಗಿಸಿಕೊಂಡು ಬಂದವು. ಪ್ರಾಧ್ಯಾಪಕ ವರ್ಗವು ಇಂಗ್ಲಿಷ್ ಸಾಹಿತ್ಯದ ಅನುಕರಣೆಯನ್ನು ಕೈಕೊಂಡರೂ ಭಾರತೀಯ ನೆಲಕ್ಕನುಗುಣವಾಗಿ ರಚನೆ ಮಾಡಿದ್ದು ಕಾಣುತ್ತದೆ. ಈ ಪ್ರಬಂಧ ಸಾಹಿತ್ಯ ಮೂಲತಃ ಫ್ರಾನ್ಸಿನಲ್ಲಿ

ಹುಟ್ಟಿಕೊಂಡುದುದು. ಫ್ರಾನ್ಸಿನ ಲೇಖಕ ಮೈಕೇಲ್ ಮಾಂಡೇನ್ (೧೫೩೩-೧೫೭೨) ಪ್ರಚಾರ ಪಡಿಸಿದನು. ಬಳಿಕ ಇಂಗ್ಲಿಷಿಗೆ ತಂದವನು ಪ್ಲೋರಿಯೊ. ನಂತರ ಲಾಕ್, ಮಕಾಲೆ, ಡ್ರೈಡನ್, ಅಬ್ರಾಹಿಮ್ ಕೌಲಿ, ಸ್ಟೀಲ್, ಅಡಿಸನ್, ಗೋಲ್ಡ್‌ಸ್ಮಿತ್, ಗಾರ್ಡಿನರ್, ಜಾನ್‌ಸನ್ ಮುಂತಾದವರ ರಚನೆಗಳು ಇತರ ಸಾಹಿತ್ಯದ ಮೇಲೆ ಪ್ರಭಾವ ಬೀರಿದ್ದುಂಟು. 'ಯುಗಧರ್ಮ ಮತ್ತು ಸಾಹಿತ್ಯ'ದ ಅಧ್ಯಯನಗಳಲ್ಲಿ ಸ್ಪಷ್ಟವಾಗಿ ಗುರುತಿಸಲಾಗುತ್ತಿದೆ. ಕನ್ನಡ ಸಾಹಿತ್ಯದಲ್ಲಿ ಕೃತಿಕಾರರ ಪಟ್ಟಿಯನ್ನು ಮಾಡಲು ಸ್ಥಳಸಾಲದು. ಪಂಪನಿಂದ ಕುವೆಂಪುವರೆಗಿನ ಯುಗಗಳಲ್ಲಿ ಸಾಹಿತ್ಯಿಕವಾಗಿ ಸಾಮಾಜಿಕ ಪ್ರಜ್ಞೆ ಹನ್ನೆರಡನೆಯ ಶತಮಾನವನ್ನು ಗುರುತಿಸಿದ ಬಳಿಕ ಈ ಯುಗವು ಶ್ರೀ ಕುವೆಂಪುಯುಗವಾಗಿ ತೋರುವುದು. 'ಯುಗದ ಕವಿ - ಜಗದಕವಿ' ಎಂದೂ. ರಾಷ್ಟ್ರಕವಿ, ಮಹಾಕವಿ, ವಿಶ್ವಕವಿ ಎಂಬುದಾಗಿ ಜನತಾ ಪ್ರಜ್ಞೆಯಿಂದ ದೊರಕಿದ ಬಿರುದುಗಳುಂಟು ಶ್ರೀ ಕುವೆಂಪು ಅವರಿಗೆ.

ಜನಜೀವನಕ್ಕೆ ಸಾಹಿತ್ಯದ ಮೂಲಕ ಸ್ಪಂದಿಸಿದ ಶ್ರೀಕುವೆಂಪು ಅವರು 'ಆತ್ಮಶ್ರೀಗಾಗಿ ನಿರಂಕುಶ ಮತಿಗಳಾಗಿ 'ಮನುಜಮತ-ವಿಶ್ವಪಥ', 'ಜನತಾ ಪ್ರಜ್ಞೆ ಮತ್ತು ವೈಚಾರಿಕ ಜಾಗ್ರತಿ' ಕೃತಿಗಳು ಸರ್ವಪ್ರಜ್ಞೆಗಳನ್ನು ನೀಡುತ್ತಿವೆ. ನವವಾಣಿಯಾಗಿ ಅವರು 'ಸರ್ವರಿಗೂ ಸಮಬಾಳು- ಸರ್ವರಿಗೂ ಸಮಪಾಲು' ಎಂಬ ವಿಚಾರವು ಸಾಮಾಜಿಕ ಪ್ರಜ್ಞೆಯಿಂದ ವಿಶ್ವಪ್ರಜ್ಞೆಯನ್ನೇ ತೆರೆದು ಮನುಜ ಮತ ಮಹತ್ವದ್ದಾಗಿದೆ. ಅವರ ಅನಿಕೇತನಗೀತೆ, ಮುಂದೊಂದುದಿನ ಮಹತ್ವಪಡೆಯಲಿದೆ.

'ಶ್ರೀ ಸಾಮಾನ್ಯ'ರ ದೀಕ್ಷಾ ಗೀತೆಯನ್ನು ನೋಡೋಣ -

'ಶ್ರೀ ಸಾಮಾನ್ಯ'ನೇ ಭಗವನ್ ಮಾನ್ಯಂ
'ಶ್ರೀ ಸಾಮಾನ್ಯನೇ ಭಗವದ್ ಧನ್ಯಂ!
ಸಾಮಾನ್ಯತೆ ಭಗವಂತನ ರೀತಿ;
ಸಾಮಾನ್ಯವೆ ದಿಟ ಭಗವತ್ ಪ್ರೀತಿ!

ನಿನ್ನದು ದಿಟಕೂ ನಿನ್ನಯ ತಾಯ್ ನಾಡು
ನಿನ್ನದೇ ನೆಲ! ನಿನ್ನದೇ ಹೊಲ!
ನಿನ್ನದೇ ಕಾನ್! ನಿನ್ನದೇ ಬಾನ್
ನಿನ್ನದೇ ನುಡಿ! ನಿನ್ನದೇ ಗುಡಿ!
ನಿನ್ನದೇ ಹೊಳೆ! ನಿನ್ನದೇ ಬೆಳೆ!
ನಿನಗಾಗಿಯೆ ನಿನ್ನೊಲವಿಗೆ
ಇನ್ ಮೀಸಲು ನೀ ಬೆಳವ ಬೆಳೆ !

ಓ ಬನ್ನಿಂ
ಸಾಮಾನ್ಯದ ಪೂಜೆಗೆ ದೀಕ್ಷೆಯ ಕೊಳ್ಳಿಂ
ನೀವೂ ! ನೀವೂ ! ನೀವೂ !

ಇದೇ ರೀತಿ ಶ್ರೀ ಕುವೆಂಪು ನೀಡಿದ ಮತ್ತೊಂದು ಸಾಮಾಜಿಕ ಪ್ರಜ್ಞೆ !

ಗುಡಿ, ಚರ್ಚು, ಮಸೀದೆಗಳ ಬಿಟ್ಟು ಹೊರಬನ್ನಿ,
ಬಡತನವ ಬುಡಮಟ್ಟ ಕೀಳಬನ್ನಿ,
ಮೌಢ್ಯತೆಯ ಮಾರಿಯನು ಹೊರದೂಡಲೈತನ್ನಿ,
ವಿಜ್ಞಾನದ ದೀವಿಗೆ ಹಿಡಿದು ಬನ್ನಿ
ಓ ಬನ್ನಿ ಸಹೋದರರೆ, ಬೇಗ ಬನ್ನಿ
ಸಿಲುಕದಿರಿ ಮತವೆಂಬ ಮೋಹದ ಜ್ಞಾನಕ್ಕೆ
ಮತಿಯಿಂದ ದುಡಿಯಿರೈ ಲೋಕಹಿತಕೆ.

** ** ** ** ** **

ನಮ್ಮ ಜನತೆ ನನಗೆ ರಾಷ್ಟ್ರ ಏನು ಮಾಡಿದೆ ಎಂಬುದನ್ನು ಕೇಳುಗರು ಮೊದಲು ರಾಷ್ಟ್ರಕ್ಕಾಗಿ ತಾವೇನು ಮಾಡಿದ್ದಾರೆಂಬ ಪ್ರಜ್ಞೆ ಮೂಡಿಸಿಕೊಳ್ಳುವುದಗತ್ಯ. ಅದೇ ರೀತಿ ಸಮಾಜಕ್ಕಾಗಿ ತಾವೇನು ಮಾಡಿದ್ದಾರೆ ಎಂಬುದನ್ನು ಅರಿವುದಗತ್ಯ. ಈ ರೀತಿಯ ಅರಿವು, ಅರಿವೇ ಗುರುವಾಗಿ ಪರಿಣಮಿಸುವುದು. ಅದೇ ಸಾಮಾಜಿಕ ಪ್ರಜ್ಞೆ, ಹೀಗಾದಲ್ಲಿ ಪ್ರಪಂಚದ ಪ್ರಜ್ಞೆ.

# ಸಾಹಿತ್ಯ ಪ್ರಚಾರದಲ್ಲಿ ವ್ಯಕ್ತಿಯ ಪಾತ್ರ

- ಆರ್. ಬಸವರಾಜ್

ಒಳ್ಳೆಯ ಸಾಹಿತ್ಯ ಅಪರೂಪವಾಗಿರುವಂತೆಯೇ ಅಂಥ ಸಾಹಿತ್ಯವನ್ನು ಓದಿ ಆನಂದಿಸುವವರು ಕೂಡ ಅಪರೂಪವೇ. 'ಕಟ್ಟಿಯುಮೇನೊ ಪೊಸ ಬಾಸಿಗಮಂ ಮುಡಿವ ಭೋಗಿಗಳಿಲ್ಲದೆ ಬಾಡಿಪೋಗದೆ?' ಎಂದು ಪ್ರಶ್ನಿಸಿದ್ದಾನೆ ನಮ್ಮ ಜನ್ನಕವಿ. ಒಳ್ಳೆಯ ಹಾರವನ್ನು ಕೊಂಡು ಮುಡಿಯುವ ಭೋಗಿಗಳಿಲ್ಲದಿದ್ದರೆ ಆ ಹಾರವು ಹೇಗೆ ವೃಥಾ ಬಾಡಿಹೋಗುತ್ತದೆಯೋ ಹಾಗೆಯೇ ಶ್ರೇಷ್ಠ ಸಾಹಿತ್ಯ ಕೃತಿಗಳಿದ್ದೂ ಅದನ್ನೋದಿ ಆನಂದಿಸುವ ಸ್ಪಹದಯರಿಲ್ಲದಿದ್ದರೆ ಪ್ರಯೋಜನವೇನು ? ಕವಿ ಎಷ್ಟೇ ಚೆನ್ನಾಗಿ ಕಾವ್ಯರಚನೆಮಾಡಿರಲಿ, ಅದು ಅವನಲ್ಲೇ ಉಳಿದರೆ ಪ್ರಯೋಜನವಿಲ್ಲ. ಅದನ್ನು ಮೆಚ್ಚಬಲ್ಲ ರಸಿಕರಿದ್ದರೆ ಮಾತ್ರ ಅದರ ರಚನೆ ಸಾರ್ಥಕ. ಕವಿ ಸಹೃದಯರನ್ನು ಹುಡುಕಿಕೊಂಡು ಹೋಗುವ ಬದಲು ಸಹೃದಯರೇ ಕವಿ ಕಾವ್ಯವನ್ನು ಅರಸುತ್ತ ಹೋಗುವಂತಾದರೆ ಅಂದೇ ಸಾಹಿತ್ಯದ ಶುಭೋದಯ.

ಶ್ರೇಷ್ಠ ಸಾಹಿತ್ಯವನ್ನು ರಚಿಸುವುದೆಷ್ಟು ಮುಖ್ಯವೋ ಅದರ ಬಗ್ಗೆ ಪ್ರಚಾರಮಾಡಿ ಕೃತಿಯನ್ನು ಕಾವ್ಯರಸಿಕರಿಗೆ ತಲುಪಿಸುವುದು ಕೂಡಾ ಅಷ್ಟೇ ಮುಖ್ಯವಾದದ್ದು. ನಮ್ಮ ಪುಣ್ಯಕ್ಕೆ ಕನ್ನಡದಲ್ಲಿ ಶ್ರೇಷ್ಠ ಸಾಹಿತ್ಯ ಕೃತಿಗಳಿಗೆ ಇಂದು ಕೊರತೆಯೇನೂ ಇಲ್ಲ. ಆರುಜ್ಞಾನಪೀಠ ಪ್ರಶಸ್ತಿಗಳನ್ನು ಗಳಿಸಿದ ಕನ್ನಡ ಸಾರಸ್ವತ ಲೋಕದ ದಿಗ್ಗಜರು ನಮ್ಮಲ್ಲಿದ್ದಾರೆ. ಬೇರಾವ ಭಾರತೀಯ ಭಾಷೆಗಳಲ್ಲೂ ಇಷ್ಟುಮಂದಿ ಜ್ಞಾನಪೀಠ ಪ್ರಶಸ್ತಿ ಪಡೆದವರಿಲ್ಲ. ಇವರಷ್ಟೇ ಅಲ್ಲದೆ ಜ್ಞಾನಪೀಠ ಪ್ರಶಸ್ತಿ ಪಡೆಯಬಲ್ಲಂತಹ ಇನ್ನೂ ಹಲವಾರು ಮಂದಿ ಸಾಹಿತ್ಯ ಶ್ರೇಷ್ಠರೂ ನಮಲ್ಲಿದ್ದಾರೆ. ನೊಬೆಲ್ ಪ್ರಶಸ್ತಿಗೆ ಕೂಡಾ ಅರ್ಹರಾದ ಬಹು ಮುಖಿ ಪ್ರತಿಭೆ? ಡಾ. ಶಿವರಾಮಕಾರಂತರಿದ್ದಾರೆ. ರಾಜ್ಯ ಮತ್ತು ಕೇಂದ್ರ ಸಾಹಿತ್ಯ ಅಕಾಡೆಮಿಯ ಪುರಸ್ಕೃತರಿದ್ದಾರೆ. ಆದರೆ ಸಾಕಷ್ಟು ಮಂದಿ ಸಾಹಿತ್ಯ ಪ್ರಚಾರಕರು- ಪ್ರಸಾರಕರು ನಮ್ಮಲ್ಲಿಲ್ಲದಿರುವುದೊಂದು ದೊಡ್ಡ ಕೊರತೆಯಾಗಿದೆ. ಬೇರೆಯವರ ಮಾತಿರಲಿ, ಜ್ಞಾನಪೀಠ ಪ್ರಶಸ್ತಿ ವಿಜೇತರೆಲ್ಲರ ಎಷ್ಟು ಕೃತಿಗಳು ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಭಾಷೆಗಳಿಗೆ ಭಾಷಾಂತರವಾಗಿವೆ ?

ಅವರ ಎಲ್ಲ ಕೃತಿಗಳೂ ಇಂಗ್ಲಿಷ್, ಫ್ರೆಂಚ್, ರಷ್ಯನ್ ಜರ್ಮನಿ ಇತ್ಯಾದಿ ಭಾಷೆಗಳಿಗೆ ತರ್ಜುಮೆಯಾಗುವ ಮಾತಿರಲಿ; ಅವು ಎಲ್ಲ ಭಾರತೀಯ ಭಾಷೆಗಳಿಗೆ ಕೂಡಾ ತರ್ಜುಮೆಯಾಗಿಲ್ಲ. ಪ್ರಪಂಚದ ಎಲ್ಲ ಭಾಷೆಗಳಿಗೆ ನಮ್ಮ ಶ್ರೇಷ್ಠ ಕೃತಿಗಳನ್ನು ಪರಿಚಯಿಸುವ ಅಥವಾ ನಮ್ಮ ಭಾರತೀಯ ಎಲ್ಲ ಭಾಷೆಗಳಿಗೆ ಅನುವಾದಿಸುವ ವಿಚಾರಗಳಿರಲಿ; ಕನ್ನಡದ ಸರ್ವಶ್ರೇಷ್ಠ ಕೃತಿಗಳನ್ನು ಕೂಡಾ ಇಂದು ಎಷ್ಟು ಜನ ಕನ್ನಡಿಗರು ಓದಿದ್ದಾರೆ ?

ವಿದ್ಯಾವಂತರ ಸಂಖ್ಯೆಯೇ ನಮ್ಮಲ್ಲೀಗ ಶೇಕಡಾ ೪೦ ರಷ್ಟು ಮಾತ್ರ. ಆ ೪೦ರಲ್ಲಿ ಸಾಹಿತ್ಯ ಗ್ರಂಥಗಳನ್ನು ಓದುವವರ ಸಂಖ್ಯೆ ಎಷ್ಟು ? ಓದುವವರಲ್ಲಿ ಕೂಡಾ ಪುಸ್ತಕಗಳನ್ನುಕೊಂಡು ಓದುವವರೆಷ್ಟು ಮಂದಿ ಇದ್ದಾರೆ ? ಇದನ್ನೆಲ್ಲಾ ಗಂಭೀರವಾಗಿ ಆಲೋಚಿಸಿದರೆ ನಮಗೆ ನಿರಾಸೆ ಕಟ್ಟಿಟ್ಟ ಬುತ್ತಿ. ಜಪಾನಿನಲ್ಲಿ ದೈನಿಕವೊಂದು ಪ್ರತಿದಿನ ಒಂದು ಕೋಟಿ ಪ್ರತಿಗಳನ್ನು ಮುದ್ರಿಸುತ್ತದೆಂದರೆ ನಮ್ಮಲ್ಲಿರುವ ಎರಡು ಮೂರು ದಿನ ಪತ್ರಿಕೆಗಳ ಪ್ರಸಾರ ಎರಡು ಅಥವಾ ಮೂರು ಲಕ್ಷ ಪ್ರತಿಗಳಿಗಿಂತ ಹೆಚ್ಚಿಲ್ಲ. ನಾಲ್ಕು ಕೋಟಿಗೂ ಮಿಕ್ಕು ಜನಸಂಖ್ಯೆ ಇರುವ ನಮ್ಮ ನಾಡಿಗೆ ಇಷ್ಟು ಪತ್ರಿಕೆ ಸಾಕೆ ? ಬೇರೆ ರಾಷ್ಟ್ರಗಳ ಪುಸ್ತಕಗಳ ಮೊದಲ ಮುದ್ರಣ ಪ್ರತಿಗಳು ೫೦ ಸಾವಿರ ಅಥವಾ ಒಂದು ಲಕ್ಷದಷ್ಟಾದರೆ ನಮ್ಮಲ್ಲಿ ಮೊದಲು ಮುದ್ರಣದ ಒಂದು ಸಾವಿರ ಪ್ರತಿಗಳು ಖರ್ಚಾಗಬೇಕಾದರೆ ನಾಲ್ಕೈದು ವರ್ಷಗಳೇ ಬೇಕಾಗುತ್ತದೆ. ಶ್ರೇಷ್ಠಕೃತಿಗಳಿದ್ದರೂ ಅವುಗಳ ಪ್ರಸಾರ ಸಂಖ್ಯೆ ಹೇಳಿಕೊಳ್ಳುವಂತಿಲ್ಲ. ಇದಕ್ಕೆ ಕಾರಣಗಳೇನಿರಬಹುದು?

ಹಳಗನ್ನಡದ ಪಂಪ, ರನ್ನ, ಪೊನ್ನ ನಾಗಚಂದ್ರರ ಕೃತಿಗಳು, ಅನಂತರದ ಹರಿಹರ, ರಾಘವಾಂಕ, ಕುಮಾರ ವ್ಯಾಸರ ಕೃತಿಗಳು, ವಚನ ಸಾಹಿತ್ಯ, ದಾಸ ಸಾಹಿತ್ಯ ಮತ್ತು ಈ ಶತಮಾನದ ಕುವೆಂಪು, ಬೇಂದ್ರೆ, ಶಿವರಾಮಕಾರಂತ, ಮಾಸ್ತಿ ವೆಂಕಟೇಶ ಅಯ್ಯಂಗಾರ್, ವಿ.ಕೃ. ಗೋಕಾಕ್, ಯು. ಆರ್ ಅನಂತಮೂರ್ತಿ ಮತ್ತು ಇನ್ನು ಅನೇಕರ ಕೃತಿಗಳು ಮೌಲಿಕವಾದವುಗಳು ಎಂಬುದರಲ್ಲಿ ಸಂದೇಹವಿಲ್ಲ. ಆದರೆ ಅಂಥ ಕೃತಿಗಳನ್ನು ಕೂಡಾ ಶೇಕಡಾ ೪೦ರಷ್ಟು ಜನ ಓದಿದ್ದಾರೆಯೆ ? ಯಥಾಪ್ರಕಾರ ನಮಗೆ ದೊರೆಯುವುದು ನಿರಾಶಾದಾಯಕ ಉತ್ತರವೇ.

ಟಿ.ವಿ., ರೇಡಿಯೊ, ವರ್ತಮಾನ ಪತ್ರಿಕೆ ಮತ್ತು ಸಿನಿಮಾಗಳಿಂದ ಸಾಹಿತ್ಯ ಗ್ರಂಥಗಳನ್ನು ಓದುವವರ ಸಂಖ್ಯೆ ಕಡಿಮೆಯಾಗಿದೆ ಎಂದು ಕೆಲವರ ಅಂಬೋಣ. ಸ್ವಲ್ಪ ಮಟ್ಟಿಗೆ ಈ ಅಭಿಪ್ರಾಯ ಸರಿ ಎನಿಸಬಹುದಾದರೂ ಅದು ಪೂರ್ತಿ ಸತ್ಯವಲ್ಲ; ಅರ್ಧ ಸತ್ಯ ಅಷ್ಟೇ. ಮೇಲಿನ ಸಮೂಹ ಮಾಧ್ಯಮಗಳು ವಿಜೃಂಭಿಸುವುದಕ್ಕಿಂತ ಮುಂಚೆಯೂ ಪರಿಸ್ಥಿತಿಯೇನೂ ಉತ್ತಮವಾಗಿರಲಿಲ್ಲ. ಅಲ್ಲದೆ ಯಾವುದೇ

ಸಮೂಹ ಮಾಧ್ಯಮವೂ ಸಾಹಿತ್ಯ ವಾಚನಾಭಿರುಚಿಯನ್ನು ನಾಶಗೊಳಿಸಲಾರವು. ಮುಖ್ಯವಾಗಿ ನಮ್ಮ ಭಾಷೆ ಮತ್ತು ಸಂಸ್ಕೃತಿಯ ಬಗ್ಗೆ ನಮಗೆ ಇರಬೇಕಾದಷ್ಟು ಅಭಿಮಾನ ಆಸಕ್ತಿಗಳಿಲ್ಲದಿರುವುದೇ ಇಂದಿನ ಈ ದುಸ್ಥಿತಿಗೆ ಕಾರಣವಾಗಿದೆ. ಅದಕ್ಕಿಂತ ಮುಖ್ಯವಾಗಿ ನಮ್ಮ ಸಾಹಿತ್ಯ ಸಂಪತ್ತನ್ನು ಸಾರ್ವಜನಿಕರಿಗೆ ಪರಿಚಯಿಸುವ ಪ್ರಚಾರದ ಕೊರತೆ ಕೂಡಾ ಇನ್ನೊಂದು ಪ್ರಮುಖ ಕಾರಣವಾಗಿದೆ. ಸಾಹಿತ್ಯ ಪ್ರಚಾರದಲ್ಲಿ ಪ್ರತಿಯೊಬ್ಬ ವ್ಯಕ್ತಿಯ ಪಾತ್ರವೂ ಪ್ರಮುಖವಾದದ್ದಾಗಿದೆ.

ಕನ್ನಡ ಪುಸ್ತಕ ಪ್ರಾಧಿಕಾರ, ರಾಜಾರಾಂ ಮೋಹನರಾಯ್ ಯೋಜನೆ- ಇವು ಪ್ರತಿವರ್ಷ ಪುಸ್ತಕಗಳನ್ನು ಲೇಖಕ ಪ್ರಕಾಶಕರಿಂದ ಕೊಳ್ಳುತ್ತವೆಯಾದರೂ ಹಾಗೆ ಕೊಳ್ಳುವ ಪ್ರತಿಗಳ ಸಂಖ್ಯೆ ೩೦೦ನ್ನೂ ದಾಟುವುದಿಲ್ಲ. ಕರ್ನಾಟಕದ ಸಾರ್ವಜನಿಕ ಗ್ರಂಥಾಲಯಗಳಿಗೆ ಸೇರುವ ಪುಸ್ತಕಗಳು ವಾಚನಾಭಿರುಚಿಯನ್ನು ಬೆಳೆಸುವುದು ನಿಜವಾದರೂ, ನಮ್ಮಲ್ಲಿರುವ ಪುಸ್ತಕ ಭಂಡಾರಗಳ ಸಂಖ್ಯೆಯೂ ತೀರಾ ಕಡಿಮೆ. ಪಟ್ಟಣ ಮತ್ತು ತಾಲ್ಲೂಕು ಕೇಂದ್ರಗಳಲ್ಲಿ ಪುಸ್ತಕ ಭಂಡಾರಗಳು ಇವೆಯಾದರೂ ಗ್ರಾಮೀಣ ಪ್ರದೇಶಗಳಲ್ಲಿ ಅವುಗಳ ಸುಳಿವೂ ಇಲ್ಲ. ಪಟ್ಟಣ ಮತ್ತು ತಾಲ್ಲೂಕು ಕೇಂದ್ರ ಗಳಲ್ಲಿರುವ ಗ್ರಂಥ ಭಂಡಾರಗಳಿಗೆ ಪ್ರತಿ ವರ್ಷ ಪ್ರಕಟವಾಗುವ ಎಲ್ಲ ಹೊಸ ಪುಸ್ತಕಗಳೂ ಆಯಾ ವರ್ಷವೇ ಸೇರ್ಪಡೆಯಾಗುವುದಿಲ್ಲ. ಶಾಲಾ ಕಾಲೇಜುಗಳಲ್ಲಿ ಪುಸ್ತಕ ಭಂಡಾರ ಇರುವುದು ನಿಜವಾದರೂ ಅವುಗಳಿಗೆ ಸಾಕಷ್ಟು ಮಂದಿ ಗ್ರಂಥಪಾಲಕರನ್ನು ನೇಮಕ ಮಾಡದಿರುವುದರಿಂದ ವಿದ್ಯಾರ್ಥಿಗಳಿಗೆ ಅವುಗಳಿಂದ ಪ್ರಯೋಜನವೇನೂ ಇಲ್ಲ. ೩೦-೪೦ ವರ್ಷಗಳ ಹಿಂದೆ ಮಾಧ್ಯಮಿಕ ಮತ್ತು ಪ್ರೌಢಶಾಲೆಗಳಲ್ಲಿ ಪ್ರತಿವಾರ ಒಂದು ಲೈಬ್ರರಿ ಪಿರಿಯಡ್ ನಿಯೋಜಿಸಿ ಆ ಅವಧಿಯಲ್ಲಿ ಅಧ್ಯಾಪಕರೇ ವಿದ್ಯಾರ್ಥಿಗಳಿಗೆ ಎರಡೆರಡು ಪುಸ್ತಕಗಳನ್ನು ನೀಡುತ್ತಿದ್ದರು.

ಜನಸಾಮಾನ್ಯರು ಪುಸ್ತಕಗಳನ್ನು ಜೀವನಾವಶ್ಯಕ ವಸ್ತುಗಳೆಂದು ಪರಿಗಣಿಸಿಲ್ಲ. ಅವರು ಮಕ್ಕಳಿಗೆ ಸಮವಸ್ತ್ರ ಬೂಟುಗಳನ್ನು ೫೦೦-೬೦೦ ರೂ. ಕೊಟ್ಟು ಖರೀದಿಸುತ್ತಾರೆ. ಆದರೆ ಹತ್ತಿಪ್ಪತ್ತು ರೂಪಾಯಿಗಳ ಪುಸ್ತಕ ಕೊಳ್ಳುವುದಿಲ್ಲ. ಒಂದು ವೇಳೆ ಅವರಿಗೆ ಕೊಳ್ಳಬೇಕೆಂಬ ಮನಸ್ಸಾದರೂ ಅವುಗಳ ಬೆಲೆ ಒಂದಕ್ಕೆ ನಾಲ್ಕರಷ್ಟು ೧೦೦ ಪುಟದ ಪುಸ್ತಕಕ್ಕೆ ೫೦ ರೂ. ಗಳವರೆಗೂ ಬೆಲೆ! ಒಂದು ಪುಸ್ತಕ ಮುದ್ರಣಕ್ಕೆ ೧೦ರೂ. ಖರ್ಚಾಗಿದ್ದರೆ ಅದಕ್ಕೆ ೪೦ರೂ ಬೆಲೆ ಇಡುವ ಪರಿಸ್ಥಿತಿ ಈಗ ಮುಂದುವರೆಯುತ್ತಿದೆ.

ಈ ೪೦ ರೂ. ನಲ್ಲಿ ಅಂಗಡಿಯಲ್ಲಿ ಕೂತು ಪುಸ್ತಕ ಮಾರಾಟಮಾಡುವವರಿಗೇ ೨೦ ರೂ. ಕಮಿಷನ್ ಹೋಗುತ್ತದೆ. ಪ್ರಕಾಶನಿಗೆ ದೊರೆಯುವುದು ಕೇವಲ ೨೦ ರೂ. ಅದರಲ್ಲಿ ತುಟ್ಟಿಯಾದ ಕಾಗದ, ಮುದ್ರಣ, ಮುಖಪುಟ ಚಿತ್ರ, ಸಾಗಾಣಿಕೆ,

ಲೇಖಕರ ಸಂಭಾವನೆ-ಇಷ್ಟೂ ಸೇರಿರುತ್ತದೆ. ಕೊಳ್ಳುವವರು ಮಾತ್ರ ಆ ಪುಸ್ತಕಕ್ಕೆ ೪೦ ರೂ ಕೊಟ್ಟೇ ಓದಬೇಕು. ಹೀಗಾಗಿ ಸಾಹಿತ್ಯ ಕೃತಿಗಳನ್ನು ಹಣಕೊಟ್ಟು ಕೊಳ್ಳುವವರ ಸಂಖ್ಯೆಯೇ ಇಳಿಮುಖವಾಗಿದೆ.

ಕೆಲವಾರು ವರ್ಷಗಳ ಹಿಂದೆ ಪ್ರತಿಯೊಂದು ಹಳ್ಳಿಯಲ್ಲೂ ರಾಮಾಯಣ, ಮಹಾಭಾರತ, ರಾಜಶೇಖರ ವಿಳಾಸ, ಶರಣ ಲೀಲಾಮೃತ, ಹರಿಶ್ಚಂದ್ರ ಕಾವ್ಯ ಇತ್ಯಾದಿ ಗ್ರಂಥಗಳನ್ನು ಮನೆ ಮನೆಗಳಲ್ಲೂ ಓದಿಸಿ ವ್ಯಾಖ್ಯಾನಿಸುವವರಿದ್ದರು. ಇಂದು ಅಂತಹ ಸಂಪ್ರದಾಯ ಸಂಪೂರ್ಣವಾಗಿ ನಿಂತುಹೋಗಿದೆ. ಅದಕ್ಕೆ ಬದಲು ಇಂದು ಟಿ.ವಿ. ನೋಡುತ್ತಾರೆ, ಅಥವಾ ಸಿನಿಮಾ ಮಂದಿರಗಳಿಗೆ ಹೋಗುತ್ತಾರೆ. ಕೆಂಗಲ್ ಹನುಮಂತಯ್ಯನವರು ಮುಖ್ಯ ಮಂತ್ರಿಯಾಗಿದ್ದಾಗ ಸಂಸ್ಕೃತಿ ಪ್ರಚಾರ ಯೋಜನೆಯನ್ವಯ ಹಳಗನ್ನಡ ಗ್ರಂಥಗಳನ್ನು ಬೃಹತ್ ಪ್ರಮಾಣದಲ್ಲಿ ಅಚ್ಚುಹಾಕಿಸಿ ತೀರಾ ಕಡಿಮೆ ಬೆಲೆಗೆ ಮಾರಾಟ ಮಾಡಿಸಿದರು. ಪಟ್ಟಣ ಹಳ್ಳಿಗಳೆನ್ನದೆ ನಾಡಿನೆಲ್ಲೆಡೆ ಸಂಸ್ಕೃತಿ ಪ್ರಚಾರದ ನೆಪದಲ್ಲಿಸಾಹಿತ್ಯ ಪ್ರೇಮವನ್ನು ಬೆಳೆಸಿದರು. ಅವರ ಕಾಲಕ್ಕೇ ಅದು ನಿಂತು ಹೋಯಿತು.

ಅ.ನ.ಕೃ. ನಿರಂಜನ, ತ.ರಾ.ಸು, ಬಸವರಾಜ ಕಟ್ಟಿಮನಿ, ಕೃಷ್ಣಮೂರ್ತಿ ಪುರಾಣಿಕ ಮುಂತಾದ ಕಾದಂಬರಿಕಾರರು ಜನಸಾಮಾನ್ಯರಲ್ಲಿ ಓದುವ ಅಭಿರುಚಿ ಬೆಳೆಸಿದವರಲ್ಲಿ ಪ್ರಮುಖರು ಮತ್ತು ಮೊದಲಿಗರು. ಅ.ನ.ಕೃ. ಅವರಂತೂ ನಾಡಿನ ಎಲ್ಲಕಡೆ ಸಂಚರಿಸಿ ಕನ್ನಡಸಾಹಿತ್ಯ ಕೃತಿಗಳ ಬಗ್ಗೆ ರಂಜನೀಯ ಉಪನ್ಯಾಸಗಳನ್ನಿತ್ತರು. ಅನಂತರ ವಿಶ್ವವಿದ್ಯಾಲಯಗಳ ಪ್ರಸಾರಾಂಗದ ವತಿಯಿಂದ ಯೋಜಿತರಾದ ಅಧ್ಯಾಪಕ ವಿದ್ವಾಂಸರು ಹಳ್ಳಿ ಹಳ್ಳಿಗೂ ಹೋಗಿ ನಮ್ಮ ಸಾಹಿತ್ಯ ಮತ್ತು ಸಂಸ್ಕೃತಿಗಳ ಬಗ್ಗೆ ಭಾಷಣ ಮಾಡಿ, ಆ ಭಾಷಣಗಳನ್ನು ಚಿಕ್ಕ ಚಿಕ್ಕ ನಾಲ್ಕಾಣೆ ಎಂಟಾಣೆಯ ಪುಸ್ತಕಗಳ ರೂಪದಲ್ಲಿ ಪ್ರಕಟಿಸಿ ಮಾರಾಟ ಮಾಡುವ ಕಾರ್ಯವೂ ಕೆಲವು ವರ್ಷ ನಡೆಯಿತು. ಅಂತಹ ನಾಲ್ಕಾಣೆ ಎಂಟಾಣೆಯ ಕಿರುಕೃತಿಗಳು ಇಂದಿಗೂ ಕೂಡ ಮಹತ್ವ ಪೂರ್ಣ ಕೃತಿಗಳೆನಿಸಿವೆ. ಈಗ ಅಂಥ ಪುಸ್ತಕಗಳ ಪ್ರಕಟನೆ ನಿಂತುಹೋಗಿದೆ.

ಕನ್ನಡದ ಆಚಾರ್ಯ ಪುರುಷರಾದ ಶ್ರೀ ಬಿ.ಎಂ. ಶ್ರೀಕಂಠಯ್ಯನವರು ಶ್ರೇಷ್ಠ ಆಂಗ್ಲ ಭಾಷಾ ಅಧ್ಯಾಪಕರಾಗಿದ್ದು ತಮ್ಮ ಜೀವತವನ್ನೆಲ್ಲಾ ಕನ್ನಡ ನಾಡು ನುಡಿಯ ಏಳ್ಗೆಗೆ ಮೀಸಲಿಟ್ಟವರು. ಭಾಷಣ ಬರವಣಿಗೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡವರು. ಅವರು ನಾಡಿನ ಉದ್ದಗಲಕ್ಕೂ ಸಂಚರಿಸಿ ನೂರಾರು ಕಡೆಗಳಲ್ಲಿ ಕನ್ನಡ ತಲೆ ಎತ್ತುವ ಬಗೆಗೆ ವಿದ್ವತ್ಪೂರ್ಣ ಉಪನ್ಯಾಸಗಳನ್ನು ನೀಡಿದವರು. ಎಲ್ಲರಲ್ಲೂ ಕನ್ನಡ ನಾಡು ನುಡಿಯ ಬಗ್ಗೆ ಪ್ರೀತ್ಯಾಭಿಮಾನಗಳು ವೃದ್ಧಿಸುವಂತೆ ಮಾಡಿದವರು. ಆದರೆ ಇಂದಿನ ದಿನಗಳಲ್ಲಿ ಕನ್ನಡದ ಏಳ್ಗೆಗಾಗಿಯೇ ಬದುಕಿದ ಅಂಥವರ ಸಂಖ್ಯೆ ವಿರಳವೆಂದೇ

ಹೇಳಬಹುದು. ವಿದ್ಯಾರ್ಥಿಗಳಲ್ಲಿ ಕನ್ನಡತನ ಮತ್ತು ಕನ್ನಡ ಮನಸ್ಸನ್ನು ನೆಲೆಗೊಳಿಸುವ ಅಂತಹ ಅಧ್ಯಾಪಕರು ಕೂಡಾ ಇಂದು ಎಷ್ಟು ಜನರಿದ್ದಾರೆ ? ಪಠ್ಯಗಳನ್ನು ಪಾಠ ಹೇಳುವುದಷ್ಟೇ ಅಲ್ಲ; ವಿದ್ಯಾರ್ಥಿಗಳಲ್ಲಿ ಸಾಹಿತ್ಯ ಕೃತಿಗಳನ್ನು ಓದಲೇಬೇಕೆಂಬ ಆಸೆ ಆಕಾಂಕ್ಷೆಗಳನ್ನು ಸ್ಥಿರಗೊಳಿಸುವ ಅಧ್ಯಾಪಕರುತಾನೆ ಎಷ್ಟುಮಂದಿ ಇದ್ದಾರೆ ? ಯೋಚಿಸಬೇಕಾದ ವಿಚಾರ.

ಮೇಲಿನ ಎಲ್ಲ ಕಾರಣಗಳಿಂದ ಆಲೋಚಿಸಿದಾಗ ಸಾಹಿತ್ಯಪ್ರಚಾರದಲ್ಲಿ ವ್ಯಕ್ತಿಯ ಪಾತ್ರ ಹಿಂದೆಂದಿಗಿಂತಲೂ ಇಂದು ಮಹತ್ವಪೂರ್ಣವೆನ್ನಿಸುತ್ತದೆ. ಪ್ರತಿಯೊಬ್ಬ ವ್ಯಕ್ತಿಯೂ - ಆತ ಅಧ್ಯಾಪಕನಾಗಿರಲಿ, ಭಾಷಣಕಾರನಿರಲಿ, ಸಾಮಾನ್ಯ ಸಾರ್ವಜನಿಕ ಅಥವಾ ಸಾಹಿತಿಯಾಗಿರಲಿ ಕನ್ನಡ ಸಾಹಿತ್ಯ ಸಂಸ್ಕೃತಿಯನ್ನು ಬೆಳೆಸುವತ್ತ ತೀವ್ರ ಗಮನ ಹರಿಸಬೇಕಾಗಿದೆ. ಕನ್ನಡ ಮನಸ್ಸುಳ್ಳ ವ್ಯಕ್ತಿಗಳ ದೊಡ್ಡ ಪಡೆಯೇ ಇಂದು ನಿರ್ಮಾಣವಾಗಬೇಕಾಗಿದೆ. ಈ ಪ್ರಯತ್ನದಲ್ಲಿ ನೂರಕ್ಕೆ ನೂರರಷ್ಟು ಮಂದಿಗೆ ಓದು ಬರಹ ಕಲಿಸುವುದೆಷ್ಟು ಮುಖ್ಯವೋ ಹಾಗೆಯೇ ಕನ್ನಡಿಗರೆಲ್ಲರಲ್ಲಿ ಹಳಗನ್ನಡ ಮತ್ತು ಹೊಸಗನ್ನಡ ಸಾಹಿತ್ಯದಲ್ಲಿ ಅವರ ಆಸಕ್ತಿ ಶ್ರದ್ಧೆಗಳನ್ನು ಬೆಳೆಸಬೇಕಾದದ್ದು ಕೂಡಾ ಅಷ್ಟೇ ಮುಖ್ಯವಾಗಿದೆ. ವಿದ್ಯಾರ್ಥಿಗಳಲ್ಲಿ ಪ್ರಾಥಮಿಕ ಹಂತದಿಂದಲೇ ಕನ್ನಡ ಮನಸ್ಸು ಸ್ಥಿರಗೊಳ್ಳಲು ಪ್ರತಿಯೊಬ್ಬ ಅಧ್ಯಾಪಕನೂ ಶ್ರಮಿಸಬೇಕಾಗಿದೆ. ಈ ನಿಟ್ಟಿನಲ್ಲಿ ವರ್ಷದುದ್ದಕ್ಕೂ ಎಲ್ಲೆಡೆಯಲ್ಲಿ ಕನ್ನಡ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಅಗತ್ಯವಿದೆ. ಶಾಲಾ ಕಾಲೇಜುಗಳಲ್ಲಿ ಮಾತ್ರವಲ್ಲ; ಎಲ್ಲಾ ಹಳ್ಳಿ ಪಟ್ಟಣಗಳಲ್ಲೂ ಕನ್ನಡ ಸಾಹಿತ್ಯ ಕಾರ್ಯಕ್ರಮಗಳನ್ನು ರಂಜನೀಯವಾಗಿಯೂ ಬೋಧಪ್ರದವಾಗಿಯೂ ನಡೆಸಬೇಕಾಗಿದೆ. ಕೇವಲ ನವೆಂಬರ್ ಕನ್ನಡಿಗರಾದರೆ ಪ್ರಯೋಜನವಿಲ್ಲ. ವರ್ಷದ ಮುನ್ನೂರ ಅರವತ್ತೈದು ದಿನವೂ ಕನ್ನಡ ಸಾಹಿತ್ಯ ಪ್ರಚಾರನಡೆಯಬೇಕಾಗಿದೆ. ಪ್ರಕಟವಾದ ಪುಸ್ತಕಗಳನ್ನು ಮನೆಮನೆಯ ಬಾಗಿಲಿಗೂ ಕೊಂಡೊಯ್ದು ಮಾರಾಟಮಾಡುವಂತಹ, ಅವುಗಳ ಬಗ್ಗೆ ಸಾರ್ವಜನಿಕ ಭಾಷಣಗಳನ್ನೇರ್ಪಡಿಸುವಂತಹ ಸಾಹಿತ್ಯ ಪ್ರಚಾರಕರು ನಮಗಿಂದು ಬೇಕಾಗಿದ್ದಾರೆ. ಈ ಕೆಲಸ ಯಾವುದೇ ಒಬ್ಬ ವ್ಯಕ್ತಿ ಅಥವಾ ಕೆಲವರು ವ್ಯಕ್ತಿಗಳು ಮಾತ್ರ ಮಾಡುವಂತಹುದಲ್ಲ. ಕನ್ನಡ ಪ್ರೇಮವುಳ್ಳ ಪ್ರತಿಯೊಬ್ಬ ವ್ಯಕ್ತಿಯೂ ಇಂದು ಈ ಗುರುತರ ಕಾರ್ಯದಲ್ಲಿ ಸ್ವಯಂಪ್ರೇರಣೆಯಿಂದ ಮುಂದಾಗಬೇಕಾಗಿದೆ. ವಾರ್ತಾ ಪತ್ರಿಕೆಗಳವರು, ದೂರದರ್ಶನ ಮತ್ತು ರೇಡಿಯೊ ಇತ್ಯಾದಿ ಸಮೂಹ ಮಾಧ್ಯಮಗಳವರೂ ಕೂಡಾ ಸಾಹಿತ್ಯ ಪ್ರಚಾರಕ್ಕೆ ಆದ್ಯತೆ ನೀಡಬೇಕಾಗಿದೆ. ಪುಸ್ತಕ ಪ್ರೀತಿಯನ್ನು ಬೆಳೆಸಿಕೊಂಡವರ ಸಂಖ್ಯೆ ಅಧಿಕವಾದರೆ ಆಗ ಒಂದು ಸಾವಿರಕ್ಕೆ ಬದಲು ನಾಲ್ಕೈದು ಸಾವಿರ ಪ್ರತಿಗಳನ್ನು ಮುದ್ರಿಸಿ ಕಡಿಮೆ ಬೆಲೆಗೆ ಮಾರಾಟಮಾಡಲು ಸಾಧ್ಯವಾಗುತ್ತದೆ. ಈ ಅಂಶಗಳನ್ನು ಗಮನದಲ್ಲಿಟ್ಟುಕೊಂಡು

ಎಲ್ಲ ವ್ಯಕ್ತಿಗಳೂ ಸಾಹಿತ್ಯ ಪ್ರಚಾರದಲ್ಲಿ ಗ್ರಂಥ ಪ್ರಸಾರದಲ್ಲಿ ಪಾಲ್ಗೊಂಡರೆ ಪುಸ್ತಕೋದ್ಯಮವನ್ನು ಅವಸಾನದ ಅಂಚಿನಿಂದ ತಪ್ಪಿಸುವುದು. ಸುಲಭವಾಗುತ್ತದೆ. ಅದು ಸಾಧ್ಯವಾಗದಿದ್ದರೆ ಈಗಿರುವ ಪರಿಸ್ಥಿತಿ ಇನ್ನು ಉಲ್ಬಣಗೊಂಡು ಪ್ರಕಟವಾದ ಪುಸ್ತಕಗಳು ಕೂಡಾ ಕೆಲವೇ ಗ್ರಂಥಾಲಯಗಳಲ್ಲಿ ಪಳೆಯುಳಿಕೆಗಳಾಗಿಬಿಡುತ್ತವೆ.

ಅಂಥ ಶೋಚನೀಯ ಪರಿಸ್ಥಿತಿಯ ನಿವಾರಣೆಗಾಗಿ ಸಾಹಿತ್ಯಾಸಕ್ತ ವ್ಯಕ್ತಿಗಳೆಲ್ಲರೂ ಇಂದು ನಿಷ್ಠೆ ಮತ್ತು ಪ್ರಾಮಾಣಿಕತೆಯಿಂದ ಕಾರ್ಯೋನ್ಮುಖರಾಗಬೇಕಾಗಿದೆ.

# ಕನ್ನಡಿಗರ ಧರ್ಮಸಮನ್ವಯ ದೃಷ್ಟಿ

- ಡಾ॥ ಎಸ್.ಎಂ. ವೃಷಭೇಂದ್ರ ಸ್ವಾಮಿ

ಭಾರತ ಹಲವು ವೈವಿಧ್ಯಗಳ ರಾಷ್ಟ್ರ 'ವಿವಿಧತೆಯಲ್ಲಿ ಏಕತೆ' ಅದರ ಜೀವನ ಸೂತ್ರ. ಭಾರತೀಯ ಜೀವನದ ತಳಹದಿ ಧರ್ಮ-'ಧರ್ಮ' ವೆಂದರೆ ಭಾರತೀಯರಿಗೆ ಅದು 'ದೇವರನ್ನು ತೋರುವ ವಿಧಾನ ಮಾತ್ರವಲ್ಲ, ಜೀವನ ನಿರ್ವಹಣೆಯೇ ಧರ್ಮ'. ಬದುಕೆಲ್ಲ ಭಗವದಾರಾಧನೆಯಾದಂತೆ, ಜೀವನ ಪ್ರೀತಿ, ಪರಸ್ಪರ ಸ್ನೇಹ - ಸಹಕಾರ, ಈ 'ಸಂಸಾರಹೇಯ' ವೆಂದರೂ, 'ಈಸಬೇಕು-ಇದ್ದು ಜೈಸಬೇಕು, ತ್ಯಾಗ-ದಯೆ-ಕರುಣೆಯೇ ಜೀವನ್ಮುಕ್ತಿಗೆ ಸಾಧನ ಎಂಬ 'ಸಹಬಾಳ್ವೆ'ಯ ತತ್ವ, ಭಾರತೀಯ ಜೀವನ ಸಿದ್ಧಾಂತ. ಭಾರತೀಯ ಸಂಸ್ಕೃತಿ ನಿಂತಿರುವುದೇ 'ಧರ್ಮ'ದ ನಾಲ್ಕು ಪಾದಗಳ ಮೇಲೆ, ಭಾರತೀಯರ ಸಾಹಿತ್ಯ, ಕಲೆ, ಸಂಗೀತ, ಧರ್ಮ ಮೂಲ ವಾದದು; ಧರ್ಮಪ್ರೇರಿತವಾದುದು. ಹಲವಾರು ಧರ್ಮಗಳು ನೆಲೆನಿಂತಿದ್ದರೂ, ಜನಜೀವನವನ್ನು ರೂಪಿಸಿದ್ದರೂ, ಅವುಗಳೆಲ್ಲ 'ವಿವಿಧತೆಯಲ್ಲಿ ಏಕತೆ'ಯ ಸೂತ್ರ ತಪ್ಪಿ ನಡೆದಿಲ್ಲ. ಶತ ಶತಮಾನಗಳ ಇತಿಹಾಸವನ್ನು ಪರಿಶೀಲಿಸಿದಾಗಲೂ ಈ 'ಧರ್ಮ ಸಮನ್ವಯ ದೃಷ್ಟಿ' ಭಾರತೀಯ ಜೀವನದೃಷ್ಟಿಯೇ ಆಗಿದೆ. ಇಂದಿಗೂ ಭಾರತ ರಾಷ್ಟ್ರದ, ಭಾರತೀಯ ಜೀವನದ ಒಳತಂತು, ನೂರು ವಿಧ, ನೂರು ಥರ ಆದರೂ ಪ್ರಾತಃಕಾಲದ ಪಕ್ಷಿಸಮುದಾಯದ 'ಗುಂಪು ಧ್ವನಿ' ಯಂತೆ, ಸರಸ - ಸಮನ್ವಯ-ಮಧುರ. ಕಾಶ್ಮೀರದಿಂದ ಹೊರಟು, ಪಂಜಾಬ-ದೆಹಲಿ, ರಾಜಾಸ್ಥಾನ, ಮಧ್ಯಪ್ರದೇಶದಾಟಿ-ದಕ್ಷಿಣದ ರಾಮೇಶ್ವರಕ್ಕೆ ಬಂದಾಗಲೂ, ಕಲ್ಕತ್ತಾದಿಂದ ಮುಂಬಯಿ-ಗುಜರಾತ್‌ವರೆಗೆ ಪ್ರಯಾಣಿಸಿದಾಗಲೂ, ಹಲವು ಭಾಷೆ, ಜನ, ಹಲವು ಧರ್ಮದೇವಾಲಯಗಳು, ಹಲವು ಜೀವನಶೈಲಿ, ವೈವಿಧ್ಯಮಯ ಉಡುಪು, ಕುಣಿತ, ಕಾಣಿಸಿದರೂ, ಒಂದೇ ರಾಷ್ಟ್ರದ ಒಂದೇ ಧರ್ಮಪರಂಪರೆಯ ಒಂದೇ ಸಂಸ್ಕೃತಿ ವೈವಿಧ್ಯವನ್ನು ಕಂಡು, ಆಶ್ಚರ್ಯ ಆದಂತೆ, ಆನಂದವೂಆಗುತ್ತದೆ. ಆಗ ಮೂಡುವ ಸತ್ಯ'ಅವಿಭಕ್ತಂ ವಿಭಕ್ತೇಷು'! 'ಸಮನ್ವಯಂ ಸಮಸ್ತೇಷು' 'ಶಾಂತಮಯಂ ಸಂಘರ್ಷೇಸು! ಇಂಥ ಭವ್ಯಭಾರತ ತನುಜಾತೆಯಾದ ಕರ್ನಾಟಕವೂ - ವಿಶೇಷಾರ್ಥದಲ್ಲಿ 'ಧರ್ಮ ಸಮನ್ವಯದ ನಾಡು; ರಸಋಷಿಗಳ ನಾಡಾದಂತೆ, ಧರ್ಮವೀರರ, ತ್ಯಾಗಶೀಲರ, ಕರ್ಮಧೀರರ ಸಮನ್ವಯ ನಾಡು.

## ಕನ್ನಡ ಸಂಸ್ಕೃತಿಯ ಸಮನ್ವಯ ದೃಷ್ಟಿ

ಉತ್ತರ ಹಾಗೂ ದಕ್ಷಿಣ ಭಾರತದ ಮಧ್ಯಂತರ ಪೀಠಭೂಮಿಯಾದ 'ಕರ್ನಾಟಕ' ವೈವಿಧ್ಯಮಯ ಬದುಕಿನ ಏಕತೆಗೆ, ಹಲವು ಧರ್ಮಗಳ ಆಡೊಂಬಲದಲ್ಲಿ ಕಾಣುವ 'ಐಕ್ಯ'ಕ್ಕೆ ಹಿಡಿದ ಕನ್ನಡಿಯಾಗಿದೆ. ಭಾರತೀಯವಾದ ಎಲ್ಲ ಮತ ಧರ್ಮಗಳು ಇಲ್ಲಿ ನೆಲಸಿವೆ. ಅತ್ಯಂತ ಸಮನ್ವಯ-ಸಮರಸದಿಂದ, ಕಾಶ್ಮೀರ ಶೈವದಂತೆ, ತಮಿಳುನಾಡಿನ 'ಶುದ್ಧ ಶೈವ' ಈ ನಾಡಿನ ಬದುಕನ್ನು ರೂಪಿಸಿದೆ. ಜೈನ-ಬೌದ್ಧ-ವೀರಶೈವ-ವೈಷ್ಣವದೊಡನೆ, ಮುಹಮ್ಮದೀಯ, ಕ್ರಿಶ್ಚಿಯನ್ ಧರ್ಮಗಳೂ ಸಹಬಾಳ್ವೆ ನಡೆಯಿಸಿವೆ, 'ಧರ್ಮ ಸಂಘರ್ಷ' ಗಳು ಆಗಾಗ ತೋರಿದ್ದರೂ ಅದು ತೃಜಿತ್, ಪಾಶ್ಚಾತ್ಯ ದೇಶಗಳ 'ಕ್ರಿಶ್ಚಿಯನ್ ಧರ್ಮ ಯುದ್ಧ ಪರಂಪರೆ' ಜಿಹಾದ್'ಗಳ ಕರಾಳ ಇತಿಹಾಸದೊಡನೆ ಹೋಲಿಸಿದರೆ, ಅದೇನೂ ಅಲ್ಲವೇ ಅಲ್ಲ, ಆದರೆ ಅದಕ್ಕಿಂತ ಹೆಚ್ಚಾಗಿ ಈ ಪರಸ್ಪರ ಧರ್ಮಗಳು ಜೊತೆಜೊತೆಯಾಗಿ ಉಂಡುಟ್ಟು ಬದುಕಿದ ಕಥೆ ರಮ್ಯವಾದುದು, ಅವು ರೂಪಿಸಿದ ಸಮನ್ವಯ ಜೀವನ ದೃಷ್ಟಿ ಆಶ್ಚರ್ಯಕರವಾದುದು. ಆದರೆ, ಪಾಶ್ಚಾತ್ಯರು ಬರೆದ, ನಮ್ಮ ಇತಿಹಾಸ, ಈ 'ಜೀವನ ಸಮರಸ'ವನ್ನು ಚಿತ್ರಿಸುವುದಕ್ಕಿಂತ ಹೆಚ್ಚಾಗಿ 'ವಿಭಕ್ತೇಷು' ಭಾವನೆಗಳನ್ನೇ ಬಿಂಬಿಸಿದೆ, ಧರ್ಮ-ಜಾತಿ-ರಾಜ್ಯ ಸಂಘರ್ಷದ ಕಥೆಯನ್ನೇ ಢಾಳವಾಗಿ ಚಿತ್ರಿಸಿದೆ. ಹೊಸ ಇತಿಹಾಸ, ನೂತನ ದೃಷ್ಟಿಯ ಚರಿತ್ರೆ, ಪೂರಿತವಾಗಬೇಕಾಗಿದೆ. ರಾಷ್ಟ್ರ ಮಧ್ಯದ ಪೀಠ ಭೂಮಿಯಾದ 'ಕರ್ನಾಟಕ', ಕವಿಕುವೆಂಪು ಹೇಳುವಂತೆ, 'ಶಂಕರ, ಮಧ್ವ ರಾಮಾನುಜ, ಬಸವೇಶ್ವರರ ಪುಣ್ಯಧಾಮ, ರಸಋಷಿಗಳ ಬೀಡಾದಂತೆ, ಡಂಕಣ, ಜಕಣರ ಕ್ರಿಯಾಭೂಮಿ, ಕನ್ನಡಿಗರು ಕಟ್ಟಿದ ನಾಡು, ಕವಿ ಗೋಪಾಲಕೃಷ್ಣ ಅಡಿಗರಂದಂತೆ, ನೂತನ ಸಮರಸ ಸಮನ್ವಯದ, ನವ ವಿಧಾತರ ನವನಾಡು.

ಕನ್ನಡಿಗರ, ಧರ್ಮ ಸಮನ್ವಯ ದೃಷ್ಟಿಯನ್ನು ಬಿಂಬಿಸುವ ಬೇಲೂರಿನ ಶಾಸನ ಸುಪ್ರಸಿದ್ಧವಾಗಿದೆ.

ಯಂ ಶೈವಾಃ ಸುಮುಪಾಸತೋ ಶಿವ ಇತಿ ಬ್ರಹ್ಮೇತಿ ವೇದಾಂತಿನೋ
ಬೌದ್ಧ ಬುದ್ಧ ಇತಿ ಪ್ರಮಾಣ ಪಟವಃ ಕರ್ತೇತಿ ನೈಯಾಯಿಕಾಃ
ಅರ್ಹಶ್ಚ ಇತಿ ಜೈನ ಶಾಸನಮತಿಃ ಕರ್ಮೇತಿ ಮೀಮಾಂಸಕಾಃ
ಸೋಯಂ ನೋ ವಿಧಧಾತು -ವಾಂಛಿತ ಫಲಂ ಶ್ರೀಕೇಶವಸ್ಸದಾ.

ಯಾವನನ್ನು ಶೈವರು ಶಿವನೆಂದೂ, ವೇದಾಂತಿಗಳು ಬ್ರಹ್ಮನೆಂದೂ, ಬೌದ್ಧರು ಬುದ್ಧನೆಂದೂ, ಪ್ರಮಾಣವನ್ನು ಹುಡುಕುವುದರಲ್ಲಿ ಗಟ್ಟಿಗರಾದ ನೈಯಾಯಿಕರು ಕರ್ತನೆಂದೂ, ಜೈನ ಶಾಸನದಲ್ಲಿ ನಿರತರಾದವರು 'ಅರ್ಹ'ನೆಂದೂ, ಮೀಮಾಂಸಕರು ಕರ್ಮವೆಂದೂ ಉಪಾಸಿಸುತ್ತಾರೋ ಆ ಈಶನಾದ ದೇವರು ನಮ್ಮ ಇಷ್ಟಾರ್ಥವನ್ನು

ಕೈಗೂಡಿಸಲಿ ಎಂಬ ಪಾರ್ಥನಾ ಪದ್ಯ ಕನ್ನಡಿಗರ ಧರ್ಮ ಸಮನ್ವಯ ದೃಷ್ಟಿಯ ಕೈಗನ್ನಡಿ. ಈ ವಿವಿಧ ದರ್ಶನಗಳು ಸಮನ್ವಯ-ಸಹಬಾಳ್ವೆ-'ಸಹನಾವವತು ಸಹನೌಭುನಕ್ತು ತತ್ವವನ್ನೇ ಸಾರುತ್ತಾ ಬಂದಿವೆ. ದ್ರಾವಿಡರ ಶೈವ ಧರ್ಮದಮೇಲೆ, ಉತ್ತರ ವೈದಿಕ ಧರ್ಮದ ದಟ್ಟಪ್ರಭಾವ ಮೂಡಿದೆ, ಜೈನ-ಬೌದ್ಧಧರ್ಮಗಳು, ಉತ್ತರದಿಂದ ಬಂದು, ಇಲ್ಲಿ ನೆಲೆನಿಂತಿವೆ. ಭಕ್ತಿ ಪಂಥದ ಶಿವಶರಣರ 'ವೀರಶೈವ' ಮತು ಶ್ರೀ ಹರಿ ಪಂಥದ 'ವಿಷ್ಣು ಉಪಾಸನೆ, ಸಮಸಮಾನಾಂತರವಾಗಿ ಬೆಳೆದಿವೆ ಕರ್ನಾಟಕದಲ್ಲಿ. ಬಂದುದನ್ನೆಲ್ಲ, ತನ್ನಲ್ಲಿ ಅಂತರ್ಗತ ಸಮನ್ವಯ ಗೊಳಿಸಬಲ್ಲ'ವಾತಾಪಿ ಜೀರ್ಣೋಭವ' ದೃಷ್ಟಿಯಿಂದಾಗಿ, ಮುಂದೆ, ಮಹಮ್ಮದೀಯ, ಕ್ರಿಶ್ಚಿಯನ್ ಧರ್ಮಗಳೂ ಆರಾಮವಾಗಿ ಬಂದು, ವ್ಯಾಪಕವಾಗಿ ಹಬ್ಬಿ, ಜನಮನದಲ್ಲಿ ಸಮರಸತೆಯನ್ನು ಮೂಡಿಸಿರುವುದು, ನೆಮ್ಮದಿಯಿಂದ ಬದುಕುತ್ತಿರುವುದು, ಭಾರತದ ಮುಖ್ಯವಾಗಿ ಕರ್ನಾಟಕದ 'ಧರ್ಮ ಸಮರಸ' ಭಾವದಿಂದಲೇ ಆಗಿದೆ.

ಉತ್ತರ ಭಾರತದಲ್ಲಿ ಮಹಾಕ್ಷಾಮ ಸಂಭವಿಸಿದಾಗ, 'ಬೌದ್ಧ ಧರ್ಮ' ದಕ್ಷಿಣಕ್ಕೆ ಬಂದು ನೆಲಸಿತು, ಕರ್ನಾಟಕದಲ್ಲಿ ನೆಲೆನಿಂತಿತು. ಅಶೋಕನ ಶಾಸನಗಳು, ಇಂದಿಗೂ ಉಳಿದಿರುವ ಮಂಗಳೂರಿನ ಕದ್ರಿ ಬೆಟ್ಟದ ದೇವಾಲಯ, ಇದಕ್ಕೆ ಮೂಕಸಾಕ್ಷಿ. ಜೈನಧರ್ಮಕ್ಕಂತೂ, ಇಂದಿಗೂ ಕರ್ನಾಟಕವೇ 'ತಾಯಿಮನೆ' - ಅನೇಕ ರಾಜಮನೆತನಗಳ 'ಧರ್ಮ'ವಾಗಿ, ಜನತೆಯ ವ್ಯಾಪಕ ಧರ್ಮವಾಗಿ ಬೆಳೆದಿರುವ 'ಜೈನ' ಧರ್ಮದ ಕೇಂದ್ರಗಳು ಶ್ರವಣಬೆಳಗೊಳ, ಕೊಪ್ಪಳ, ಮುಧೋಳ, ಹಾಗೂ ಸನ್ನತಿ ಹೊಯ್ಸಳ ರಾಜರುಗಳಿಗೆ 'ಚತುಸ್ಸಮಯ ಸಮುದ್ಧರಣ' ರೆಂಬ ಬಿರುದೇ ಇದ್ದಿತು. ಆ ನಾಲ್ಕು ಸಮಯಗಳೆಂದರೆ, ಬೌದ್ಧ, ಜೈನ, ಶೈವ ಮತ್ತು ವೈಷ್ಣವ. ಈ ಬೇಲೂರಿನ ಶಾಸನ ಕರ್ತೆ ಅಕ್ಕಾದೇವಿಯು ಜೈನ, ಬೌದ್ಧ, ಅನಂತ (ವಿಷ್ಣು) ಹಾಗೂ ರುದ್ರ - ಈ ಸಂಬಂಧವಾದ ಪ್ರಕಿಯೆಗಳಲ್ಲಿ ವಿಧಿಸಿರುವ ಪ್ರಕಾರ ವ್ರತಗಳನ್ನು ನಡೆಸುತ್ತಿದ್ದಳೆಂದು 'ವರ್ಣಿಸಲಾಗಿದೆ. ಅವಳು 'ತ್ರಿಪುರುಷ ದೇವಾಲಯ' ವನ್ನು ಕಟ್ಟಿಸಿದಳು. ಅಲ್ಲದೆ, ಹರಿ-ಹರ-ಕಮಲೀಸನ-ವೀತರಾಗ ಬೌದ್ಧಾಲಯಗಳ. ಪಂಚಮಠಗಳು ಆ ಪಟ್ಟಣದಲ್ಲಿದ್ದುದನ್ನು ವರ್ಣಿಸಿದೆ. ಇದೇ ರೀತಿ, ಕರ್ನಾಟಕದ ಇತಿಹಾಸದಲ್ಲಿ ಈ ಧರ್ಮ ಸಮನ್ವಯ ದೃಷ್ಟಿ ರಾಜಮಹಾರಾಣಿಯರಲ್ಲಿ ಅಷ್ಟೇ ಅಲ್ಲ, ಜನಸಾಮಾನ್ಯರಲ್ಲೂ ನೆಲೆಸಿದ್ದಿತು. ಎಲ್ಲವನ್ನೂ ಖಂಡಿಸುವ ಸರ್ವಜ್ಞ' ಕೊಲಲಾರದೆಂಬ ಜಿನಧರ್ಮ ತನ್ನ ತಲೆಯಮೇಲಿರಲಿ ಎಂದಿದ್ದಾನೆ. 'ಜೀವದಯೆ-ಜೈನ ಧರ್ಮಂ' ಎಂದು ವಿವರಿಸುವ ಪಂಪ ತನ್ನ ಕೃತಿಗಳಲ್ಲಿ, ಮಾನವ ಪ್ರೇಮ, ಸಹಬಾಳ್ವೆ, ಸಮನ್ವಯ ದೃಷ್ಟಿ ಬಿಂಬಿಸಿರುವ ಕಾವ್ಯಗಳನ್ನು ರಚಿಸಿ, ತನ್ನ 'ಸಮರಸ ಧರ್ಮ ದೃಷ್ಟಿ - ಧೋರಣೆ ತೋರಿರುವನು.

ಕರ್ನಾಟಕದ ಮಧ್ಯಕಾಲೀನ ಇತಿಹಾಸದಲ್ಲಿ 'ಇಂಥ ಧರ್ಮ ಸಹಿಷ್ಣುತೆ' ಮಾತ್ರವಲ್ಲ, ಧಾರ್ಮಿಕಾಚರಣೆಯ ಸ್ವಾತಂತ್ರ್ಯ ವಿದ್ದುದೂ ಇನ್ನು ವಿಶೇಷ ಹೊಯ್ಸಳ ಅರಸ ' ವಿಷ್ಣುವರ್ಧನ ಶ್ರೀ ರಾಮಾನುಜಾ ಚಾರ್ಯರ ಭಕ್ತ, ಆತನ ಪತ್ನಿ ಶಾಂತಲೆ 'ಜೈನ ಧರ್ಮ ಸಮುದ್ಧರಣೆ' ಆತನ ಇನ್ನೊಬ್ಬ ಪತ್ನಿ ಲಕ್ಷ್ಮಿ' ಆಳ್ವಾರ ಪರಂಪರೆಯವಳು, ಹೀಗೆ, ಒಂದು ಸಂಸಾರದಲ್ಲೇ ಅನೇಕ ಧರ್ಮದ ಅನುಯಾಯಿಗಳು ಕೂಡಿ ಬಾಳಿದುದು, ಅದೆಂತ ಸಮನ್ವಯ ದೃಷ್ಟಿ! ಜನಸಾಮಾನ್ಯರೂ ವಿವಿಧ ಧರ್ಮಗಳ ಉಪಾಸಕರಾಗಿದ್ದರು, ಬೇಧ-ಭಾವ ಮರೆತು, ಗುಡಿ ಗುಂಡಾರ ನಿರ್ಮಾಣ, ಜಾತ್ರೆ-ಉತ್ಸವಗಳಲ್ಲಿ ಸೇವೆ ಮಾಡುತ್ತಿದ್ದುದು ಇತಿಹಾಸದ ಪುಟಪುಟಗಳಲ್ಲಿ ನಮೂದಾಗಿದೆ.

ಕರ್ನಾಟಕದಲ್ಲಿ ಶಿವ ಮತ್ತು ವಿಷ್ಣು ಭಕ್ತಿ ಪರಂಪರೆ ಸಮಸಮಾನಾಂತರವಾಗಿ ಬೆಳೆದು ಬಂದಿರುವುದು, ಶಿವಶರಣರೂ ಹರಿದಾಸರು ಈ 'ಸಮನ್ವಯ ಜೀವನ ದೃಷ್ಟಿ'ಯನ್ನು ಜನತೆಯಲ್ಲಿ ಕುದುರಿಸಿದರು. ಕಾಳಿಮುಖ, ಕಾಪಾಲಿಕ, ಲಾಕುಳ, ಮಹಾವ್ರತ ಮುಂತಾದ ಶೈವ ಪರಂಪರೆಯ ಸಮನ್ವಯ ಧರ್ಮವಾಗಿ ಹನ್ನೆರಡನೆಯ ಶತಮಾನದ ಬಸವ, ಅಲ್ಲಮ, ಮಡಿವಾಳ ಮಾಚಯ್ಯ, ಸಿದ್ಧರಾಮ ಮುಂತಾದವರಿಂದ ಪ್ರಗತಿಹೊಂದಿತು. ವೀರಶೈವ ಪಾಷಂಡಿ ಧರ್ಮಗಳನ್ನೂ, ಪ್ರಾಣಿಹಿಂಸೆ, ಜನತೆಯ ಶೋಷಣೆಯ 'ಯಜ್ಞ' - ಯಾಗದ ಆಚರಣೆಗಳನ್ನು ಖಂಡಿಸಿ 'ದಯವೇ ಧರ್ಮದ ಮೂಲ. ಸಕಲ ಜೀವಾತ್ಮರ ಲೇಸ ಬಯಸುವನೇ ಕುಲಜ. ಹೆಣ್ಣು ರಾಕ್ಷಸಿಯಲ್ಲ. ಪ್ರತ್ಯಕ್ಷ ಕಪಿಲ ಸಿದ್ಧ ಮಲ್ಲಿಕಾರ್ಜುನ... ಕಾಯಕದಲ್ಲಿ ಮೇಲು -ಕೀಳಿಲ್ಲ' ಮುಂತಾದ ಮಾನವೀಯ ತತ್ವಗಳನ್ನು ನುಡಿದು ನಡೆದು ಜನಮನ್ನಣೆಯನ್ನು ಪಡೆದುದು, ಶಿವಶರಣರ ಧರ್ಮಸಮನ್ವಯ ಹಾಗೂ ಜಾತಿ ಸಮಾನತೆಯ ದೃಷ್ಟಿಯ ಫಲ, ಕನ್ನಡದ ಉಪನಿಷತ್ತುಗಳೆಂದೇ ಪ್ರಸಿದ್ಧವಾದ ಶಿವಶರಣರ ವಚನ ಸಾಹಿತ್ಯ ಹಾಗೂ ಶೂನ್ಯ ಸಂಪಾದನೆಯಂಥ ತಾತ್ವಿಕ ಕೃತಿಗಳಲ್ಲಿಈ ಪರಿಶುದ್ಧ ಮಾನವಧರ್ಮದ ಪ್ರತಿಪಾದನೆಯಿದೆ. ಸಮಾಜದ ಎಲ್ಲ ವರ್ಗದ ಜನ ಈ ಶಿವಶರಣ ಭಕ್ತಿಯ ಉಪಾಸಕರೂ, ಕಾಯಕ-ದಾಸೋಹದ ಅನುಷ್ಠಾನಕರೂ ಆಗಿದ್ದರೆಂಬುದು ಚಾರಿತ್ರಿಕ ಸತ್ಯ.

ಈ ಹಿನ್ನೆಲೆಯಲ್ಲಿ, ಶ್ರೀ ಶಂಕರಾಚಾರ್ಯರು, ಕರ್ನಾಟಕದಲ್ಲಿ ನೆಲೆನಿಂತು, ಶೃಂಗೇರಿಯ ಶಾರದಾ ಪೀಠವನ್ನು ಸ್ಥಾಪಿಸಿದ್ದು ಅತ್ಯಂತ ಮಹತ್ವದ ವಿಷಯ ಕೆಳದಿ ಅರಸರು ವೀರಶೈವರಾಗಿದ್ದರೂ, ಶೃಂಗೇರಿಯ ಮಠದ 'ಸಾಲ'ಗಳನ್ನು ತೀರಿಸಿ, ವೀರಶೈವ ಮಠದೊಡನೆ ಇದ್ದ ಸಮಸ್ಯೆಯನ್ನು ಬಗೆಹರಿಸಿ, ಶ್ರೀ ಮಠಕ್ಕೆ ದಾನ-ದತ್ತಿ ನೀಡಿದುದನ್ನು ಇತಿಹಾಸ ಹೇಳುತ್ತದೆ. ಶೃಂಗೇರಿ ಮತ್ತು ಬಾಳೆಹೊನ್ನೂರಿನ ವೀರಶೈವ ಸಂಸ್ಥಾನಗಳಿಗೆ ಸಮಾನ ರೀತಿಯ ಕೈಂಕರ್ಯ ತೋರಿಸಿ, ಅಗ್ರಹಾರ, ಮಠ, ಪುರಗಳನ್ನು

ಸ್ಥಾಪಿಸಿರುವುದು ಗಮನಾರ್ಹ. ಅಷ್ಟೇ ಅಲ್ಲ, ಕೆಳದಿ ಶಿವಪ್ಪನಾಯಕನು 'ಕ್ರೈಸ್ತರು ಮತಾಂತರ ಮಾಡಲೂ ಅನುಮತಿ ನೀಡಿದ್ದಷ್ಟೇ ಅಲ್ಲದೆ, ತನ್ನ ರಾಜ್ಯದ ಕ್ರೈಸ್ತ ಪ್ರಜೆಗಳಿಗೆ ಸೇವೆಸಲ್ಲಿಸಲು ಭಾರತೀಯ ಪಾದ್ರಿಯೊಬ್ಬನನ್ನು ನೇಮಿಸಬೇಕೆಂದು ಕೇಳಿಕೊಂಡನಂತೆ! ಇನ್ನೂ ಮುಂದೆ ಹೋಗಿ, ತನ್ನ ರಾಜ್ಯದ ಭುವನಗಿರಿ ದುರ್ಗದಲ್ಲಿದ್ದ ಮಸೀದಿಗೆ ದತ್ತಿ ನೀಡಿದನಂತೆ! (ಕ.ಪರಂಪರೆ, ಸಂಪುಟ-೨) ಅದೇ ರೀತಿ, ಮುಂದೆ ಟಿಪ್ಪು ಸುಲ್ತಾನನು ಶೃಂಗೇರಿ ಜಗದ್ಗುರುಗಳಿಗೆ ಪತ್ರಬರೆದು ಧಾನ್ಯಧಾನ್ಯಗಳನ್ನು ಶಾರದಾ ದೇವಿಗೆ ಒಪ್ಪಿಸಿ ನೀವು ಜಗದ್ಗುರುಗಳು ಮಾನವ ಕಲ್ಯಾಣಕ್ಕಾಗಿ ತಪಸ್ಸು ಮಾಡುವವರು. ನಾಡಿಗೆ ಮಳೆ -ಬೆಳೆ ಆಶೀರ್ವದಿಸಿರಿ' ಎಂದು ಬೇಡಿಕೊಂಡಿದ್ದು ಐತಿಹಾಸಿಕ ಸತ್ಯ. ಅತನೂ, ಚಾಮುಂಡೇಶ್ವರಿ, ಶ್ರೀರಂಗನಾಥ ದೇವಾಲಯಗಳಿಗೆ 'ಕಾಣಿಕೆ' ಸಲ್ಲಿಸಿದಂತೆ, ಹಿಂದೂ ಸೈನಿಕರ ಬಗೆಗೆ ಉದಾರಿಯಾಗಿ ಉನ್ನತ ಹುದ್ದೆಗಳನ್ನು ನೀಡಿದ್ದನಂತೆ. ಟಿಪ್ಪುವಿನ ತಂದೆ ಹೈದರನನ್ನು 'ದೈವ-ಬ್ರಾಹ್ಮಣ ದ್ವೇಷರಹಿತ'ನೆಂದೂ ವರ್ಣಿಸಿದೆ!

ಕರ್ನಾಟಕದ ಹರಿದಾಸ ಪಂಥವೂ, ತನ್ನ ಪರಂಪರೆಯನ್ನು ಕಾಯ್ದುಕೊಂಡು, ಭಕ್ತಿಯನ್ನು, ತಮ್ಮ ಹಾಡುಗಳ ಮೂಲಕ, ಕಾಲುನಡಿಗೆಯಲ್ಲಿ ನಡೆದೂ ತಾಳತಂಬೂರಿ ಹಿಡಿದು, ಕುಣಿದು ಹಾಡಿ ಜನಮನಕ್ಕೆ, ಮನೆಬಾಗಿಲಿಗೆ ಮುಟ್ಟಿಸಿದರು. ಹರಿದಾಸ ಸಾಹಿತ್ಯದಲ್ಲಿ ಎಲ್ಲಿಯೂ ಪರಮತ ವಿಡಂಬನೆ, ಟೀಕೆ ಇಲ್ಲದಿರುವುದು ಅತ್ಯಂತ ಗಮನಾರ್ಹ ವಿಷಯ. ಅನೇಕ ಹಾಡುಗಳಲ್ಲಿ ಹರಿ-ಹರ ವಿಭೇದ ಮಾಡದ ಸಮನ್ವಯದೃಷ್ಟಿಯೂ ವ್ಯಕ್ತವಾಗಿದೆ. ಪುರಂದರ, ಕನಕ ದಾಸರು, ಜನಮನದಲ್ಲಿ ಧರ್ಮ ಸಮನ್ವಯ ಹಾಗೂ ಭಕ್ತಿ, ತ್ಯಾಗ, ಸೇವೆಗಳ ಮೌಲ್ಯಗಳನ್ನು ಬೆಳೆಯಿಸಿದರು. ಶ್ರೀ ಮಧ್ವಾಚಾರ್ಯರು'ಉಡುಪಿ' ಯನ್ನೇ ಕೇಂದ್ರವಾಗಿಸಿಕೊಂಡರು. ಮುಂದೆ, ಹಂಪೆ, ಮುಳಬಾಗಿಲು, ಮಂತ್ರಾಲಯಗಳಲ್ಲಿ ಹರಿಭಕ್ತಿ ಪರಂಪರೆ ಮುಂದುವರಿಯಿತು.

ಇದೇ ರೀತಿ, ದಕ್ಷಿಣ ಕರ್ನಾಟಕದಲ್ಲಿ ಶ್ರೀ ರಾಮಾನುಜ ಪಂಥವೂ ಭಕ್ತಿ ಪ್ರಸಾರ ಮಾಡಿ, ಜನತೆಯಲ್ಲಿ ಸಾಮರಸ್ಯರೂಪಿಸಿತು. ಧರ್ಮ ಸಮನ್ವಯ ಮೂಡಿಸಿತು. ಅಲ್ಲದೆ ಶಕ್ತಿ ದೇವತೆಗಳ ಉಪಾಸನೆ, ಕಾಲಕಾಲಕ್ಕೆ ಆಗಿ ಹೋದ ಮಹಾಪುರುಷರ ಆರಾಧನೆ ಶ್ರೀ ಸಾಮಾನ್ಯರಲ್ಲಿ 'ಜೀವನ ಸಮರಸ' ಭಾವವನ್ನು ರೂಪಿಸಿರುವುದು ಕಾಣುತ್ತದೆ.

ಹದಿನೇಳನೆಯ ಶತಮಾನದ ಸುಮಾರಿನಲ್ಲಿ ಕರ್ನಾಟಕದ ಗಡಿ ರಾಜ್ಯಗಳಿಗೆ ಕಾಲಿರಿಸಿದ, ಕ್ರೈಸ್ತ ಧರ್ಮವೂ, ಈ ಕನ್ನಡಿಗರ ಧರ್ಮ ಸಮನ್ವಯದ ದೃಷ್ಟಿಯಿಂದ ಬೆಳೆದು, ಬಾಳಿರುವುದು ಉಲ್ಲೇಖನೀಯ. ಹಿಂದಿನಿಂದಲೂ ಪ್ಯಾಲೆಸ್ಟೈನ್ ಮತ್ತು ಭಾರತಗಳಲ್ಲಿ ಐತಿಹಾಸಿಕ ಮಹತ್ವದ ಸಂಬಂಧಗಳಿದ್ದವು. ವಿಜಯನಗರದ

ಅರಸರು, ಧರ್ಮ ಸಮನ್ವಯ ಭಾವದ ಉಪಾಸಕರು, ಹಿಂದೂ ಧರ್ಮದ ಪುನರುತ್ಥಾನಕ್ಕೆ ದುಡಿದವರು. ಅಂಥ, ವಿಜಯನಗರ ಅರಸರ ರಾಜ್ಯದಲ್ಲಿ ೩೦,೦೦೦ ಜನ ಕ್ರೈಸ್ತರಿದ್ದರೆಂಬುದನ್ನು ಇತಿಹಾಸ ದಾಖಲಿಸಿದೆ. ಏಸು ಕ್ರಿಸ್ತನ ಹನ್ನೆರಡು ಜನ ಅನುಯಾಯಿಗಳಲ್ಲಿ ಒಬ್ಬನಾದ 'ಸಂತಥಾಮಸ್' ಭಾರತಕ್ಕೆ ಬಂದು, ಹುತಾತ್ಮನಾದನು. ಅನಂತರ ಬಂದ ಪಾದ್ರಿಗಳು, ತಮ್ಮ ಧರ್ಮ ಪ್ರಸಾರ ಮಾಡಿದರು. ಚರ್ಚುಗಳನ್ನು, ಶಿಕ್ಷಣ ಸಂಸ್ಥೆಗಳನ್ನು ಕಟ್ಟಿದರು. ಲಂಡನ್ ಮಿಷನ್, ಬಾಸೆಲ್ ಮಿಷನ್, ವೆಸ್ಲಿಯನ್ ಮಿಷನ್‌ಗಳು ಮೂಡಿಸಿದ ಧರ್ಮ ಪ್ರಜ್ಞೆ-ಕನ್ನಡಿಗರ ಸಮನ್ವಯ ದೃಷ್ಟಿ ಹಾಗೂ ಸಹಬಾಳ್ವೆಯ ಕುರುಹು. ವಿಜಾಪುರ ಸುಲ್ತಾನನ ಆಹ್ವಾನದ ಮೇಲೆ, ಗೋವೆಯ ಆರ್ಚ್‌ಬಿಷಪ್ ಮೆನಜಿಸ್ ತನ್ನಲ್ಲಿದ್ದ ಯಹೂದಿ ಪಂಡಿತರನ್ನು, ಬಿಜಾಪುರಕ್ಕೆ ಕಳಿಸಿಕೊಟ್ಟಿದ್ದನಂತೆ. ಅಂತೆಯೇ ಕೆಳದಿ - ಇಕ್ಕೇರೀ ಅರಸರು, ಪೋರ್ಚುಗೀಸ್ ಪಾದ್ರಿಗಳು ಚರ್ಚ್‌ಗಳನ್ನು ನಿರ್ಮಿಸಲೂ, ರಾಜ್ಯದಲ್ಲಿ ಮುಕ್ತವಾಗಿ ಸಂಚರಿಸಲೂ ಪರವಾನಗಿ ನೀಡಿದ ಉದಾಹರಣೆಗಳಿವೆ.

ಹೀಗೆ, ಕನ್ನಡಿಗರ ಧರ್ಮ ಸಮನ್ವಯ ದೃಷ್ಟಿ, ಶತ ಶತಮಾನಗಳಿಂದ ಬೆಳೆದು ಬಂದಿದೆ. ವಿವಿಧ ಧರ್ಮಗಳು ಇಲ್ಲಿ ನೆಲಸಿ ತತ್ವ ಪ್ರಸಾರ ಮಾಡಿ,ಕನ್ನಡಿಗರು ಜೀವನ ಸಮರಸ ಸಂಸ್ಕೃತಿಯನ್ನು ರೂಪಿಸಿಕೊಳ್ಳುವಂತಾದುದು ಚಾರಿತ್ರಿಕ ಸತ್ಯ. ಇಂದಿಗೂ, ಕನ್ನಡ ನಾಡಿನ ಶಿಲ್ಪ, ಸ್ಮಾರಕ, ಸಂಘ-ಸಂಸ್ಥೆಗಳಲ್ಲಿ ಈ ಧರ್ಮ ಸಮನ್ವಯದ ಸಂಕೇತವಾಗಿ, ಕಲಬುರ್ಗಿಯ ಬಂದೇನವಾಜ್, ಬೀದರದ ನಾನಕ ಝರಾ, ವಿಜಾಪುರದ ಗೋಳಗುಮ್ಮಟ ಸೌಂದತ್ತಿ ಎಲ್ಲಮ್ಮ, ಮಂತ್ರಾಲಯ, ಶ್ರೀರಂಗಪಟ್ಟಣ, ಸಾವಳಗಿಯ ಶಿವಲಿಂಗೇಶ್ವರ, ಶಿರಹಟ್ಟಿ ಫಕೀರೇಶ್ವರ ದೇವಸ್ಥಾನಗಳು ಅಲ್ಲಲ್ಲಿ ನಡೆವ ಜಾತ್ರೆ, ಉರುಸು, ಮೇಳಗಳು ಕನ್ನಡ ನಾಡಿನಲ್ಲಿ ಪ್ರಸಿದ್ಧವಾಗಿದೆ. ಸಮನ್ವಯ- ಸಮ್ಮಿಶ್ರ ಸಂಸ್ಕೃತಿಯ ವಿಶಾಲ ಭಾರತದಲ್ಲಿ, ಕರ್ನಾಟಕವೂ ಒಂದು ಧರ್ಮ ಸಮನ್ವಯದ ಬೀಡಾಗಿದೆ, ಭಾರತದಲ್ಲೇ ಹೆಸರಾಗಿದೆ. 'ಅವಿಭಕ್ತಂ ವಿಭಕ್ತೇಷು' 'ಅನೇಕತೆಯಲ್ಲಿ ಏಕತೆ' ಎಂಬ ಭಾರತೀಯ ಸಂಸ್ಕೃತಿಯ ಸಂಕೇತವಾಗಿದೆ ಈ ಅಖಂಡ ಕರ್ನಾಟಕ, ಸಮೃದ್ಧ ಕರ್ನಾಟಕ.

# ನಡುಗನ್ನಡ ಕಾವ್ಯ ಪರಿಸರ

– ಪ್ರೊ. ವಸಂತಕುಷ್ಟಗಿ

ಕನ್ನಡ ಸಾಹಿತ್ಯಕ್ಕೆ ಸುಮಾರು ೧೫೦೦ ವರ್ಷಗಳಷ್ಟುಹಳಮೆಯ ಗರಿಮೆ ಇರುವುದನ್ನು ಗಮನಿಸಿದಾಗ, ಕನ್ನಡ ನುಡಿಯ ಬೆಳವಣಿಗೆಗೆ ಕನಿಷ್ಠ ೨೦೦೦ ವರ್ಷಗಳ ಕಾಲಕ್ರಮೇಣವು ಇದೆಯೆಂಬುದನ್ನು ಪರಿಗಣಿಸಲೇಬೇಕಾಗುವುದು. ಇದು ಹೀಗಿರುವಾಗ ಇನ್ನು ಕನ್ನಡ ಜನಪದ ನಡಗೆ ಅದೆಷ್ಟು ಹಳಮೆಯದೆಂಬುದನ್ನು ನಿರ್ಧರಿಸಿ ಹೇಳುವುದು ಕಷ್ಟದ ಕೆಲಸ. ಆದ್ದರಿಂದ ಬಹು ದೀರ್ಘವಾದ, ಬಹು ಆಳವಾದ, ಬಹು ಎತ್ತರವಾದ, ಬಹು ವಿಸ್ತಾರವಾದ ಕನ್ನಡ ಬದುಕಿಗೆ ಅಮೂಲ್ಯವಾದ ಪರಂಪರೆಯಿದೆ ಎಂಬುದನ್ನು ಅಲ್ಲಗಳೆಯುವಂತಿಲ್ಲ. ಏಕೆಂದರೆ, ಬದುಕಿನ ಪ್ರತಿಬಿಂಬವೇ ಸಾಹಿತ್ಯ. ಆ ಸಾಹಿತ್ಯವು ಮುಂಬರುವ ಸ್ವವಿಮರ್ಶೆಗೆ ಬೆಳಕಿನ ಕಿಂಡಿಗಳನ್ನೇ ತೆರೆದಿಟ್ಟು ಪ್ರಕಾಶಬೀರುವ ಸಾಮರ್ಥ್ಯವನ್ನು ಈ ಹಿನ್ನೆಲೆಯಲ್ಲಿ, ಕನ್ನಡ ಬದುಕಿನ ಸಾಮರ್ಥ್ಯವನ್ನು ಸದಾಕಾಲಕ್ಕೆ ಮಾರ್ಗದರ್ಶಿಯಾಗಿರುವಂತೆ, ಕನ್ನಡ ಸಾಹಿತ್ಯವು ಸೆರೆಹಿಡಿದಿಟ್ಟಿರುವುದು ಕನ್ನಡ ಜನಪದದ ಸವೆಯದ ಸಮಯ ಭಂಡಾರವಾಗಿದೆ. ಇಂತಹ ಅಮೂಲ್ಯ ಭಂಡಾರವನ್ನು ಒದಗಿಸಿಕೊಟ್ಟಿರುವ ಕನ್ನಡ ಕವಿಗಳಿಗೆ ತ್ರಿಕಾಲಗಳಲ್ಲಿಯೂ ಕನ್ನಡ ಜನತೆಯು ಋಣಿಯಾಗಿರಲೇಬೇಕು. ಅಮೂಲ್ಯವಾದ ಕನ್ನಡ ಸಾಹಿತ್ಯ ಭಂಡಾರದ ಪರಿಚಯವನ್ನು ನಮ್ಮ ಹಿರಿಯರು ಆಗಾಗ ಮಾಡಿಸುತ್ತಲೇ ಬಂದಿದ್ದಾರೆ. ಈ ಭಂಡಾರದಲ್ಲಿ ನಮಗೆ ಸಧ್ಯದ ಸಂಶೋಧನೆಯ ಪ್ರಕಾರ ದೊರೆಯುವ ಪ್ರಥಮ ಗ್ರಂಥವು ರಾಷ್ಟ್ರಕೂಟರ ನೃಪತುಂಗನ ಸಭಾಸದನಾಗಿದ್ದ ಶ್ರೀ ವಿಜಯನು ಬರೆದ 'ಕವಿರಾಜ ಮಾರ್ಗ'. ಇದು ಲಕ್ಷಣ ಗ್ರಂಥ. ಇದರಲ್ಲಿ ಶ್ರೀ ವಿಜಯನಿಗಿಂತ ಮುನ್ನ ಗದ್ಯ ಮತ್ತು ಪದ್ಯ ಕೃತಿಕಾರರ ಹೆಸರುಗಳ ಉಲ್ಲೇಖವಿದೆ. ಇದರ ಜಾಡನ್ನು ಹಿಡಿದು ಸಿಂಹಾವಲೋಕನವನ್ನು ಮಾಡಿದಾಗ ಇನ್ನೂ ಅನೇಕ ಕೃತಿರತ್ನಗಳು ದೊರೆಯಬಹುದು. ಏಕೆಂದರೆ, ಯಾವುದೇ ಒಂದು ಭಾಷೆಯು ಬೆಳೆದು ತುಂಬ ಪ್ರಗಲ್ಭಸ್ಥಿತಿಗೆ ಬಂದಾಗ ಅಕ್ಷರಗಳಲ್ಲಿ ಭಾವವು ನೆಲೆ ನಿಲ್ಲಲು ಶಕ್ತಿ ಪಡೆದಾಗ ಮಾತ್ರ ವ್ಯವಸ್ಥಿತವಾದ ರೀತಿಯಲ್ಲಿ ಲಕ್ಷಣ ಗ್ರಂಥಗಳ ಉದಯ. ಆದ್ದರಿಂದ ಕನ್ನಡ ಸಾಹಿತ್ಯೋದಯವು ಕವಿರಾಜಮಾರ್ಗಕ್ಕಿಂತ ಮುಂಚೆ ಕೆಲವು ಶತಮಾನಗಳ ಮೊದಲೇ ಆಗಿರಬೇಕು. ಏಕೆಂದರೆ, ಕವಿರಾಜಮಾರ್ಗಕ್ಕಿಂತ ಮುನ್ನಿನ ಶಾಸನ ಸಂಪದವು ಈ ಮಾತಿಗೆ ಬೆಂಬಲವನ್ನು ನೀಡುತ್ತದೆ. ಆ ಶಾಸನ

ಸಂಪದದಲ್ಲಿ ಕನ್ನಡ ಭಾಷೆಯು ಪ್ರಗಲ್ಭ ರೀತಿಯ ಸಾಹಿತ್ಯ ಶಕ್ತಿಯನ್ನು ಪಡೆದಿತ್ತೆಂಬುದಕ್ಕೆ ಸತ್ಯಸಾಕ್ಷಿಯು ದೊರೆಯುತ್ತದೆ. ಇಂತಹ ಶಕ್ತಿಯು ಪ್ರಕಟಗೊಂಡಲ್ಲೆಲ್ಲ ಕನ್ನಡ ಜನತೆಯ ಮನೋಧರ್ಮವು ಸ್ಫುಟವಾಗಿ, ಕನ್ನಡ ಜನತೆಯ ಸಂಸ್ಕೃತಿಯ ನೃಪತುಂಗತ್ತ್ವವು ಅಂತಃಕರಣೆಗೆ ನಿವೇದ್ಯವಾಗತೊಡಗುತ್ತದೆ. ಬದುಕು ಇನ್ನಷ್ಟು ಫಲಪ್ರದವಾಗುತ್ತ ಸ್ಫುರಣಗೊಳ್ಳುತ್ತದೆ. ನಿದರ್ಶನಕ್ಕೆಂದು ಅನೇಕ ರೀತಿಯಿಂದ ಸ್ಮರಣೀಯವಾಗಿರುವ ಕ್ರಿ.ಶ. ಏಳನೆಯ ಶತಮಾನದಲ್ಲಿ ಮೂಡಿಬಂದ ಬಾದಾಮಿ ಶಾಸನದಲ್ಲಿ ಕಪ್ಪೆ ಆರೆಭಟ್ಟನ ಸ್ವಭಾವ ಚಿತ್ರವನ್ನು ಓದಿಕೊಳ್ಳಬಹುದು.

'ಸಾಧುಗೆ ಸಾಧು ಮಾಧುರ್ಯನ್ಗೆ ಮಾಧುರ್ಯಂ
ಬಾಧಿಪ್ಪಕಲಿಗೆ ಕಲಿಯುಗ ವಿಪರೀತನ್
ಮಾಧವನೀತನ್ ಪೆಱನಲ್ಲ:

ಒಳ್ಳಿತ್ತಕೆಯ್ವೊರಾರ್ ಪೊಲ್ಲದುಮದ ಅಂತೆ
ಬಲ್ಲಿತ್ತುಕಲಿಗೆ ವಿಪರೀತಾ ಪುರಾಕೃತ
ಮಿಲ್ಲಿ ಸಂದಿಕ್ಕುಮದು ಬಂದು :

ಕಟ್ಟಿದ ಸಿಂಘಮನ್ ಕೆಟ್ಟೊದೇನೆಮಗೆಂದು
ಬಿಟ್ಟವೋಲ್ ಕಲಿಗೆ ವಿಪರೀತಂಗಹಿತರ್ಕಳ್
ಕೆಟ್ಟರ್ ಮೇಣ್ ಸತ್ತರವಿಚಾರಂ' ॥

ಈ ಸ್ವಭಾವ ಚಿತ್ರವು ಕೇವಲ ಆ ಕಪ್ಪೆ ಅರಭಟ್ಟನದಲ್ಲ. ಇದು ಸಮಸ್ತ ಕನ್ನಡ ಕುಲಕೋಟಿ ರಕ್ತ ಸಂಬಂಧದಲ್ಲಿಯ ಬದುಕಿನ ಗುಣಗೌರವದ ಧ್ವನಿರಮ್ಯಚಿತ್ರ. ಇಂಥ ಅರ್ಥಪೂರ್ಣ ಬದುಕಿನ ಚಿತ್ರವು ಶಾಸನದಲ್ಲಿಯೇ ಇಷ್ಟೊಂದು ಅಪರೂಪವಾಗಿ ಸಾಹಿತ್ಯ ಶಕ್ತಿಯು ಸ್ಫುಟವಾಗಿ ಚಿಲುಮೆಯಾಗಿ ಚಿಮ್ಮಿರುವಾಗ ಆ ಕಾಲದಲ್ಲಿ ಅದೆಷ್ಟು ಸಾಹಿತ್ಯ ಕೃತಿಗಳು ಜನಪದದ ಬದುಕಿಗೆ ಸೌಂದರ್ಯವನ್ನು ತರಲು ಪ್ರಯತ್ನಿಸಿರಬೇಕು. ಅಂತೆಯೇ ಕವಿರಾಜಮಾರ್ಗಕ್ಕಿಂತ ಮುನ್ನಿನ ಕಾಲದ ಸಾಹಿತ್ಯ ಸಂಪತ್ತು. ಕಾಲನ ದವಡೆಯಿಂದ ಲಾಲಾರಸವಾಗಿಯೋ ಇಲ್ಲವೇ ಮತ್ತೇನಾಗಿಯೋ ಚಿಮ್ಮಿ ಬಂದಾಗ, ಅಥವಾ ಸಂಶೋಧಕರ ಅಚಲ ಪ್ರಯತ್ನದಿಂದ ಆ ಸಾಹಿತ್ಯ ಸಂಪತ್ತು ನಮಗೆ ಚಿಂತಾಮಣಿಯಾಗಿ ಕೈಗೆ ನಿಲುಕಿದಾಗ ಕಣ್ಣು ಓದಿ: ಕಿವಿ ಕೇಳಿ ಮನತಣಿದಾಗ ಆಗುವ ಆನಂದದ ಸಂಸ್ಕಾರಕ್ಕೆ ಕಾದು ಕುಳಿತು ಕೊಳ್ಳಬೇಕಷ್ಟೆ. ಆದರೆ ಈಗ ಉಪಲಬ್ಧವಿರುವ ಸಾಹಿತ್ಯ ಸಂಪತ್ತೇನು ಕಡಿಮೆ ಮಟ್ಟದ್ದಲ್ಲ. ಕಡಿಮೆ ಲೆಕ್ಕದ್ದಲ್ಲ.

ಉಪಲಬ್ಧವಿರುವ ಕನ್ನಡ ಸಾಹಿತ್ಯ ವೈವಿಧ್ಯತೆಯನ್ನು ಗಮನಿಸಿದರೆ, ಕರ್ನಾಟಕ ಜನಪದವು ವೇದಗಳ ಪೂರ್ವ ಕಾಲದಿಂದಲೇ ತನ್ನ ಅಸ್ತಿತ್ವವನ್ನು ಇಟ್ಟುಕೊಂಡು

ಬೆಳೆದು ಬಂದ ಪ್ರದೇಶ. ಕ್ರಿ.ಶ. ಪೂರ್ವ ೩ನೆಯ ಶತಮಾನದಿಂದಲೇ ಮೌರ್ಯರ ಆಳ್ವಿಕೆಗೆ ಆಶ್ರಯ ಕೊಟ್ಟ ನೆಲೆಗಟ್ಟು ಜನ ಬದುಕಿಗೆ ಅಶೋಕನ ಶಾಸನಗಳು ಬುದ್ಧನ ಸಂದೇಶವನ್ನು ಹೊತ್ತು ಅಲ್ಲಲ್ಲಿ ನಿಂತಾಗ ಕರ್ನಾಟಕದ ಮಸ್ಕಿ, ಸಿದ್ಧಾಪೂರ, ಕೊಪ್ಪಳ ಸನ್ನತಿ ಮೊದಲಾದ ನೆಲೆಗಳು ಇನ್ನೂ ಆ ಸಂದೇಶವನ್ನು ಸಾರುವ ಅವಶೇಷಗಳಿಂದ ಕೂಡಿದ್ದು, ಹಿಂದಿನ ಕಾಲದ ಕಥೆಯನ್ನು ನೆನಪಿಸಿಕೊಟ್ಟು ಇಂದಿನ ಬದುಕಿಗೆ ಸ್ಫೂರ್ತಿಯನ್ನು ನೀಡುತ್ತದೆ. ಮುಂದೆ ಶಾತವಾಹನರು, ಕದಂಬರು, ಪಲ್ಲವರು, ಗಂಗರೂ ಕೂಡ ಈ ಪ್ರದೇಶದಲ್ಲಿ ತಮ್ಮ ಅರಸೊತ್ತಿಗೆಗೆ ಇಂಬನ್ನು ಒದಗಿಸಿಕೊಂಡರು. ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ಕಲಚೂರ್ಯರು ಮೊದಲಾದವರು ಕನ್ನಡ ನಾಡು ನುಡಿಯ ಸೇವೆಯನ್ನು ಮಾಡಿ ಕನ್ನಡದ ಸೌಭಾಗ್ಯವನ್ನು ತಮ್ಮ ಸೌಭಾಗ್ಯವೆಂದು ಬಗೆದು ಕನ್ನಡದ ಬದುಕಿಗೆ ಸುಂದರವಾದ ಇತಿಹಾಸವನ್ನು ನಿರ್ಮಿಸಿದರು. ವಿಜಯನಗರ ಕಾಲವಂತೂ ಕರ್ನಾಟಕ ಸಾಮ್ರಾಜ್ಯದ ಬಂಗಾರದ ಕಾಲ. ಇಡೀ ಭರತ ಖಂಡದ ಸಂಸ್ಕೃತಿಯನ್ನು ಉಳಿಸಿ ಬೆಳೆಸಲು ಸ್ಫೂರ್ತಿ ನೀಡಿ ಕಾಲ. ವಿಶ್ವವನ್ನೇ ತನ್ನೆಡೆಗೆ ಬರಮಾಡಿಕೊಂಡು, ತನ್ನ ವಿಶಾಲ ಮನೋಧರ್ಮದಿಂದ ವಿಶ್ವಬಂಧುತ್ವವನ್ನು ಮೆರೆದ ಕಾಲ. ಇದೇ ಸಂದರ್ಭದಲ್ಲಿ ಬಹಮನೀ ರಾಜ್ಯದ ಉದಯವು ಕಲಬುರಗಿಯಲ್ಲಾಗಿ, ಬೀದರ ಮತ್ತು ವಿಜಾಪುರಗಳಲ್ಲಿ ತನ್ನ ಮುದ್ರೆಯನ್ನು ವಿಶೇಷವಾಗಿ ಮೂಡಿಸಿ, ಮತಸಹಿಷ್ಣುತೆ ಹಾಗೂ ವಿದ್ಯಾಸಂಪನ್ನತೆಗೆ ಆದ್ಯತೆಯನ್ನು ನೀಡಿ ತನ್ನ ವೈಶಿಷ್ಟ್ಯವನ್ನು ಉಳಿಸಿಕೊಂಡ ಕಾಲ. ಮುಂದೆ ಬ್ರಿಟೀಷರು, ಮೈಸೂರು ಸಂಸ್ಥಾನದ ಅರಸರು ಮತ್ತು ನಿಜಾಂಶಾಹಿ ದೊರೆಗಳು ತಮ್ಮ ತಮ್ಮ ಅರಸೊತ್ತಿಗೆಯಿಂದ ಸಾಕಷ್ಟು ಲಾಭ ಮಾಡಿಕೊಂಡರೂ ನೆಲದ ಜನದ ಬದುಕಿನಲ್ಲಿ ಸಾಹಿತ್ಯಧರ್ಮದ ವಿಕಾಸಕ್ಕೆ ಹೊಸ ತಿರುವನ್ನು ನೀಡಲು ಪ್ರೇರಣೆಯನ್ನು ಒದಗಿಸಿದರು.. ಈ ನೆಲದ ಧರ್ಮ ಸಿದ್ಧಾಂತಗಳಾದ ಬೌದ್ಧ, ಜೈನ, ಶೈವ, ವೈಷ್ಣವ ಮೊದಲಾದ ವಿಚಾರ ಧಾರೆಗಳು ಜೀವನ ಮೌಲ್ಯಗಳನ್ನು ಎಚ್ಚರಿಸುವಲ್ಲಿಯೂ, ಎತ್ತರಿಸುವಲ್ಲಿಯೂ ಹೆಣಗಾಡಿ ಬದುಕಿಗೆ ಮತ್ತು ಅದರ ಪ್ರತಿಬಿಂಬವಾದ ಸಾಹಿತ್ಯಕ್ಕೆ ಆಯಾಕಾಲದ ಪರಿಸರದ ಹಿನ್ನೆಲೆಯಲ್ಲಿ ಜೀವಂತಿಕೆಯನ್ನು ಉಳಿಸಿಕೊಂಡು ಬೆಳೆಸಿಕೊಂಡು ಬರುವಲ್ಲಿ ಶ್ರಮಿಸಿದವು. ಆದರೆ ಅವು ಕೇವಲ ಕರ್ಮಠವೆನಿಸಿದಾಗ, ಜನರ ಒಲವಿನಿಂದ ತನ್ನಷ್ಟಕ್ಕೆ ತಾನೇ ದೂರವಾಗಿ ಸಾಮಾನ್ಯನ ವಿಚಾರಧಾರೆಯಲ್ಲಿ ಪರಿವರ್ತನೆಯಾಗಿ, ಸಂಘರ್ಷದಲ್ಲಿ ವಿಶ್ವದ ಬದುಕೆಲ್ಲ ಒಂದೇ ಎಂಬುದನ್ನು ಕಂಡು ನೆಮ್ಮದಿಯಾಗಿ ಹಾತೊರೆದದ್ದು ಉಂಟು. ಹಾಗಾಗಿ ಅಂತರಂಗ ಪರಿಶೀಲನೆ ಸಮಾಜ ವಿಮರ್ಶೆ ಮುಂತಾದವು ಸಾಹಿತ್ಯದ ಪುಟಗಳಲ್ಲಿ ಎದ್ದುಕಾಣುತ್ತವೆ.

ಧರ್ಮಸಿದ್ಧಾಂತಗಳ ಜೊತೆಗೆ, ರಾಜಕೀಯ ಏರುಪೇರುಗಳಾದಾಗಲೆಲ್ಲ, ಸುತ್ತುಮುತ್ತಲ ಭಾಷೆಗಳಷ್ಟೆ ಅಲ್ಲ, ಪರರಾಷ್ಟ್ರಗಳ ಭಾಷೆಗಳ ಸಂಪರ್ಕವೂ ಬಂದು ಆ ಎಲ್ಲ ಭಾಷೆಗಳು ಕೊಡುಕೊಳ್ಳುವಲ್ಲಿ ಕನ್ನಡ ಜನಮನದ ಭಾಷೆಯ ಮೇಲೆಯೂ

ಪರಿಣಾಮವನ್ನು ಬೀರಿದವು. ಅದರಂತೆ ಲೋಕದ ವ್ಯವಹಾರದಲ್ಲಿಯೂ ಕೊಡುಕೊಳ್ಳುವಿಕೆ ನಡೆದು ನಾಗರಿಕತೆ ಹಾಗೂ ಸಂಸ್ಕೃತಿಗಳ ಸಂವರ್ಧನೆಗೂ ದಾರಿಮಾಡಿಕೊಟ್ಟವು. ಮತ್ತು ಇಂಥ ಈ ಕ್ರಿಯೆಯು ಅವ್ಯಾಹತವಾಗಿ ನಡೆಯುತ್ತಿರುವ ನಡೆ. ಇದರಿಂದಾಗಿ ಕನ್ನಡ ವಸ್ತುಕೋಶ ದೊಡ್ಡದಾಗುತ್ತ ಸಾಗಿದೆ. ಕನ್ನಡ ಸಾಹಿತ್ಯ ಸಂಪದ ವಿಸ್ತಾರವಾಗುತ್ತಸಾಗಿದೆ. ಸಾಮಾನ್ಯವಾಗಿ ಜಗತ್ತಿನಲ್ಲಿ ವೈವಿಧ್ಯತೆಗಳನ್ನೆಲ್ಲ ಅಳವಡಿಸಿಕೊಂಡು ಎಲ್ಲಕಡೆಗೂ ತನ್ನ ಅಸ್ತಿತ್ವವನ್ನು ಕಾಯ್ದುಕೊಂಡೇ ಬಂದಿದೆ. ತನ್ನ ಅಧಿಕ್ಯದೊಂದಿಗೆ ಸ್ವಾಭಿಮಾನಕ್ಕೆ ಗರಿಮೂಡಿಸಿಕೊಂಡೇ ಬಾಳುತ್ತಬಂದಿದೆ.

ಇಂಥ ವಿಸ್ತಾರವಾದ ಕರ್ನಾಟಕದ ಬದುಕನ್ನು ಪ್ರತಿಬಿಂಬಿಸುವ ಸಾಹಿತ್ಯವನ್ನು ಅಭ್ಯಾಸದ ದೃಷ್ಟಿಯಿಂದ ಸ್ಥೂಲವಾಗಿ ಹಳಗನ್ನಡ (ಕ್ರಿ.ಶ. ೮೦೦-೧೨೦೦), ನಡುಗನ್ನಡ (ಕ್ರಿ.ಶ. ೧೨೦೦-೧೯೦೦), ಹೊಸಗನ್ನಡ (ಕ್ರಿ.ಶ। ೧೯೦೦ರ ಮುಂದೆ) ಎಂದು ವಿಭಾಗ ಮಾಡಿಕೊಳ್ಳಬಹುದು. ಹೀಗೆಮಾಡಿಕೊಂಡ ವಿಭಾಗಕ್ರಮವು ಇದಮಿತ್ಥಂ ಅಲ್ಲ. ಕಾಲವು ಸರಿದಂತೆ, ಸಂಪರ್ಕಗಳು ನಾನಾ ತರಹದಿಂದ ಒತ್ತರಿಸಿದಾಗ, ಈಗ ಹೊಸದೆನ್ನಿಸಿದೆ. ಮುಂದೆ ಹಳೆಯದಾಗುತ್ತ ಸಾಗುತ್ತಲೇ ಇರುತ್ತದೆ. ಆದ್ದರಿಂದ ಈಗ 'ಹೊಸಗನ್ನಡ' ಎಂದು ಎನ್ನಿಸಿಕೊಳ್ಳುತ್ತಿರುವುದನ್ನು ಮುಂದೆ ಒಂದು ಹಂತದಲ್ಲಿ ಅದನ್ನು ಹೊಸಗನ್ನಡ ಎಂದೇ ಗುರುತಿಸುವುದು ಔಚಿತ್ಯ ಪೂರ್ಣವಾಗಿರುವುದಿಲ್ಲ. ಇದೇ ಅನುಭವವು ಇಂದು ನಾವು ಗುರುತಿಸುತ್ತಿರುವ ಹಳೆಗನ್ನಡ ಮತ್ತು ನಡುಗನ್ನಡ ಪ್ರಕಾರದ್ದೂ ಕೂಡ. ಅವು ಹಿಂದೊಮ್ಮೆ 'ಹೊಸಗನ್ನಡ' ಎಂದೇ ಗುರುತಿಸಿಕೊಂಡಿರಲಿಕ್ಕೆ ಸಾಕು. ಹೀಗೆ ನಡೆದು ಬಂದ ದಾರಿಯಲ್ಲಿ ಹಳೆಗನ್ನಡವನ್ನು ಪಂಪಯುಗ, ಚಂಪುಯುಗ, ವೀರಯುಗ, ಕ್ಷಾತ್ರಯುಗ, ಜೈನಯುಗವೆಂದು ವಿಭಿನ್ನ ಹೆಸರುಗಳಿಂದ ಕರೆಯಬಹುದು. ಈ ಯುಗದಲ್ಲಿ ಆದಿಕವಿ ಎಂದು ಹೆಸರು ಪಡೆದ ಮಹಾಕವಿ ಪಂಪನು ಒಂದು ಕಾವ್ಯಮಾರ್ಗವನ್ನೇ ನಿರ್ಮಾಣ ಮಾಡಿದನು. ಈ ಮಾರ್ಗದಲ್ಲಿ ಆತನು ಧಾರ್ಮಿಕ ಕಾವ್ಯ ರಚನೆಗೆ ಜೈನಧರ್ಮಕ್ಕೆ ಸಂಬಂಧ ಪಟ್ಟ ತೀರ್ಥಂಕರ ಹಾಗೂ ಚಕ್ರವರ್ತಿಗಳ ಚರಿತ್ರೆಗಳಿಂದ ಆಕಾರವನ್ನು ಪಡೆದರೆ, ಲೌಕಿಕ ಕಾವ್ಯಗಳಿಗೆ ಜನಪ್ರಿಯವಾದ ರಾಮಾಯಣ, ಮಹಾಭಾರತಗಳಿಂದ ಆಕರಗಳನ್ನು ಪಡೆದು ಕಾವ್ಯ ರಚನೆಗೆ ಹೆದ್ದಾರಿಯನ್ನು ಮಾಡಿಕೊಟ್ಟನು. ಈ ಪರಂಪರೆಯಲ್ಲಿ ಅನೇಕ ಜೈನ ಕವಿಗಳು ಚಂಪೂ ಶೈಲಿಯಲ್ಲಿ ಕಾವ್ಯಗಳನ್ನು ನೀಡಿದರು. ಅವರಲ್ಲಿ ಪ್ರಮುಖರು ರನ್ನ, ಪೊನ್ನ, ಚಾವುಂಡರಾಯ, ನಾಗಚಂದ್ರ ಮೊದಲಾದವರು. ಈ ಕಾಲದಲ್ಲಿ ಕೃತಿಗಳ ಸಂಖ್ಯೆ ಕಡಿಮೆ ಎನಿಸಿದರೂ ಗುಣ ಗೌರವದ ದೃಷ್ಟಿಯಿಂದ ಮಹತ್ವದ್ದಾಗಿವೆ, ಮತ್ತು ಚಂಪೂಕಾವ್ಯಗಳೇ ವಿಶೇಷವಾಗಿರುವ ಈ ಕಾಲದಲ್ಲಿ ಪಂಪನಕ್ಕಿಂತ ಕಿಂಚಿತ್ ಮುನ್ನ ವಡ್ಡಾರಾಧನೆಯಂತಹ ಗದ್ಯ ಕೃತಿಗಳು ಬಂದಿದ್ದು, ಕನ್ನಡ ಸಾಹಿತ್ಯದ ವೈವಿಧ್ಯಮಯ ಬೆಳವಣಿಗೆಯ ಶ್ರೀಮಂತಿಕೆಯ ಕುರುಹಾಗಿದೆ. ಸಾಹಿತ್ಯದ ದೃಷ್ಟಿಯಿಂದ ಹಳಗನ್ನಡ

ಕಾಲವು, ಮಾರ್ಗ ಅರ್ಥಾತ್ ಪ್ರೌಢ ಸಂಪ್ರದಾಯದ ಸ್ಥಿರತೆ ಮತ್ತು ಘನತೆಗಳನ್ನು ಚಿತ್ರಿಸುವುದರಲ್ಲಿ ಬಹುಶಃ ಏಕರೂಪವಾಗಿ ಕಂಡರೂ ಅಲ್ಲಿ ಪರಿವರ್ತನೆಗೆ ನಾಂದಿಯಾಗಿರುವ ಲಕ್ಷಣಗಳು ತೋರದೆ ಇಲ್ಲ. ಈ ಕಾಲದಲ್ಲಿ ದೇಸಿಮಾರ್ಗಗಳ ಸುಮಧುರ ಸಂಗಮವು ಎದ್ದು ಕಾಣುತ್ತಿದ್ದರೂ ಮುಂದೆ ದೇಸಿಯದೇ ಜಯಭೇರಿಯಾಗಲಿರುವ ನಸುಕಿನ ಮುಸುಕು ಕಾಣಿಸದೇ ಬಿಡದು. ಕಾವ್ಯಗಳ ಜೊತೆಗೆ ಜ್ಯೋತಿಷ್ಯ, ವೈದ್ಯಕೀಯ, ಛಂದಸ್ಸು, ವ್ಯಾಕರಣ, ಅಲಂಕಾರ, ವಸ್ತುಕೋಶಗಳಿಗೆ ಸಂಬಂಧಪಟ್ಟ ಗ್ರಂಥಗಳೂ ಉದಯವಾದವು. ಚಂಪೂಕಾವ್ಯ ಶೈಲಿಯು ಸಂಸ್ಕೃತ ಮಹಾಕಾವ್ಯ ಪ್ರಮುಖ ಲಕ್ಷಣಗಳನ್ನು ಅಳವಡಿಸಿಕೊಂಡಿದ್ದರೂ, ಕಂದ, ವೃತ್ತಗಳ ವಿಶಿಷ್ಟಸೇರ್ಪಡೆಯಿಂದಲೂ, ರಗಳೆ, ಅಕ್ಕರ, ತ್ರಿಪದಿ ಮೊದಲಾದ ಜಾನಪದ ಛಂದಸ್ಸಿನ ಸೇರುವಿಕೆಯಿಂದಲೂ ಕನ್ನಡತನದ ವೈಶಿಷ್ಟವನ್ನು ಸಾಧಿಸುತ್ತ ಕನ್ನಡಕ್ಕೆಆದಷ್ಟುಎಲ್ಲಿಯೂ ಊನಬಾರದಂತೆ ನಡೆಯಿತು. ಆದರೆ ಬರಬರುತ್ತ ಕೆಲವು ಕಡೆಗೆ ಅಂಧಾನುಕರಣೆಯು ಸಂಭವಿಸಿದುದರಿಂದ ಅಂತಹಕಡೆಗಳಲ್ಲಿ ಕಾವ್ಯದ ಸೊಗಸು ಕಿಂಚಿತ್ ಮುಗ್ಗರಿಸಿತೆಂದೇ ಹೇಳಬೇಕು. ಅಂತೆಯೇ ಸಂಸ್ಕೃತ ಭೂಯಿಷ್ಠವಾದ ಪಾಂಡಿತ್ಯ ಪ್ರಾಚುರ್ಯದ ಕಾವ್ಯಗಳು ಅತಿಯಾಗತೊಡಗಿದಾಗ, ನಯಸೇನನು ಮಿಸುಕದ ಸಕ್ಕದದ ವಿರುದ್ಧ ಬಂಡೆಬ್ಬಿಸಿ ಪೊಸಗನ್ನಡದ ಅರ್ಥಾತ್ ನಡುಗನ್ನಡದ ಕಹಳೆಯನ್ನು ಊದಿದನು. ತತ್ ಪರಿಣಾಮವಾಗಿ ಸುಲಭ ಹಾಗೂ ಗದ್ಯ ಪ್ರಚುರವಾದ ಕಥಾ ಸಾಹಿತ್ಯದ ನಿರ್ಮಿತಿಯಾಗಿ ಕನ್ನಡ ಸಾಹಿತ್ಯ ಶೈಲಿಯ ಪ್ರವಾಹಕ್ಕೆ ಹೊಸ ನೀರು ಬಂದು ಸೇರತೊಡಗಿತು. ಪಂಪ ಕವಿಯ 'ವಿಕ್ರಮಾರ್ಜುನ ವಿಜಯ' ಹಾಗೂ 'ಆದಿಪುರಾಣ'ಗಳು ಒಂದು ತೂಕದ ಕನ್ನಡವನ್ನು ಕೊಟ್ಟರೆ, ಪಂಚತಂತ್ರಹಾಗೂ ಧರ್ಮಾಮೃತಗಳು ನವೀನತೆಯನ್ನು ತಂದುಕೊಡಲು ಪ್ರಯತ್ನಿಸಿದುವು. ಬಹುಶಃ ಇದೇ ಕಾಲದಲ್ಲಿ ಜೀವನ ಮೌಲ್ಯಗಳ ಬೆಳಗುವಿಕೆಗೆ ಸಾಧ್ಯವಾಗುವಂತೆ ಉತ್ತೇಜಿಸಲು ವಚನ ಸಾಹಿತ್ಯದ ಹುಟ್ಟಿನ ಕಿರಣಗಳೂ ಇದೇ ಕಾರಣದಿಂದಾಗಿ, ದೇವರ (ಜೇಡರ) ದಾಸಿಮಯ್ಯನ ಮೂಲಕ ಪರಿಸರದಲ್ಲಿ ಚಿಮ್ಮತೊಡಗಿದವು. ಹೊಸಕಾಲದ ಉಗಮವು ಹಳೆಯ ಕಾಲದ ಅಂಚುಗಳಲ್ಲಿಯೇ ತನ್ನ ತಪ್ಪು ಹೆಜ್ಜೆಗಳನ್ನುಹಾಕಿ ಮುಂದೆ ಭದ್ರ ನೆಲೆಗಟ್ಟನ್ನು ನಿರ್ಮಿಸಿಕೊಂಡು ನಡೆದಾಡಲು ಪ್ರಚೋದನೆಗೊಳ್ಳುವುದು ನಿಸರ್ಗದ ಸಹಜ ನಿಯಮ. ಈ ನಿಟ್ಟಿನಲ್ಲಿ ಈ ಬಗೆಯ ಹೊಸ ಬೆಳವಣಿಗೆಯ ಚಿಗುರು, ಈ ನಿಯಮದಲ್ಲಿಯ ಸ್ವಾಭಾವಿಕತೆಗೆ ದಾಖಲೆ ನಿರ್ಮಿಸಿದಂತೆ, ಹಳೆಗನ್ನಡ ಕಾಲದ ಕವಿಗಳೆಲ್ಲ ಬಹುತೇಕ ಗುಣ ಗುಣಾಂಕಿತವಾದ ಪ್ರೌಢ ಸಾಹಿತ್ಯವನ್ನು ನಿರ್ಮಿಸಿದ್ದರೂ ಬದುಕಿನ ಗೆಲುವಿಗೆ ಬೇಕಾದ ಸಹಜ ಸೊಬಗಿಗೆ ಅಲ್ಲಿ ಗೌಣವುಂಟು ಮಾಡುವುದಿಲ್ಲ. ಅವರಲ್ಲಿ ಅನೇಕರು ರಾಜಾಶ್ರಯವನ್ನುಪಡೆದು ತಮ್ಮ ತಮ್ಮ ಕೃತಿ ರಚನೆಯಲ್ಲಿಯೇ ಸಾಧ್ಯವಾದ ಕಡೆಗಳಲ್ಲೆಲ್ಲ ಆಶ್ರಯದಾತನಾದ ಅರಸನ ಚರಿತ್ರೆ ತತ್ಕಾಲೀನ ರಾಜಕೀಯ ಹಾಗೂ

ಇತರ ಸಾಮಾಜಿಕ ಚೆಲುವು ಒಲವುಗಳನ್ನು ಸೂಚ್ಯವಾಗಿಯಾದರೂ ಚಿತ್ರಿಸುವುದರಲ್ಲಿ ಹಿಂದೆ ಬೀಳುವುದಿಲ್ಲ. ಇಂಥಲ್ಲೆಲ್ಲ ಚಾರಿತ್ರಿಕಾಂಶಗಳು ಧ್ವನಿಕಾವ್ಯವಾಗುತ್ತ ಒಂದು ಬಗೆಯ ಮೋಹಕತೆಯನ್ನುಂಟು ಮಾಡಿವೆ. ಆದರೂ ಮನುಷ್ಯನ ಮುಕ್ತ ಬೆಳವಣಿಗೆಗೆ ಸಾಹಿತ್ಯವು ಎಂದಿಗೂ ಅಡ್ಡಿಯಾಗಿ ಬರಲು ಹವಣಿಸಿಲ್ಲ. 'ಮಾನವಕುಲಂ ಒಂದೇ ವಲಂ! ಬೇರಮೆ ಕುಲಂ; ಫಲಮೆ ಕುಲಂ' ಇತ್ಯಾದಿ ಬದುಕಿನ ಅಮೌಲ್ಯ ಸತ್ವಗಳನ್ನು ತುಂಬಿಕೊಂಡೇ ಬಾಳ್ವಿಗೆ ಅರ್ಥ ನೀಡಿದೆ. ಮತ್ತು ಮುಂದಿನ ಶತಮಾನಗಳಲ್ಲಿ ಸ್ವಂತಿಕೆಯಿಂದ ಕೂಡಿದ ಅಭಿವ್ಯಕ್ತಿ ಸ್ವಾತಂತ್ರ್ಯವು ಇನ್ನು ಸುಳಿದೆಗೆದು ಹಬ್ಬುವುದಿದೆಯೆಂಬುದಕ್ಕೆ ಮುನ್ಸೂಚನೆಯನ್ನು ನೀಡುವಂತಿದೆ. ಇದು ಹೌದು ಎನ್ನುವಂತೆ ೧೨ನೆಯ ಶತಮಾನಕ್ಕೆ ಬಂದಾಗ ರಾಜಾಶ್ರಯವು ಕಳಚಿ ಜನಾಶ್ರಯವು ಕವಿಗಳಿಗೆ ಆಹ್ವಾನವಾಗಿ ಪರಿಣಮಿಸಿದಾಗ, ಸಾಹಿತ್ಯಸೃಷ್ಟಿಯಲ್ಲಿ ನಿರಾಡಂಬರವಾದ ಜನಪರ ಧೋರಣೆಗೆ ಒತ್ತು ಬಿದ್ದು ಆ ಮೂಲಕ, ಬದುಕಿನ ವಿಸ್ತಾರವನ್ನು ಕವಿಗಳು ತಮ್ಮ ಪ್ರತಿಭೆಯಲ್ಲಿ ಹಿಡಿದು, ನವಚೈತನ್ಯವನ್ನು ಬದುಕಿಗೆ ತಂದುಕೊಡುವ ಸಾರ್ಥಕ ಪ್ರಯತ್ನಕ್ಕೆ ಮುಂಬರುವ ನಡುಗನ್ನಡ ಕಾಲದಲ್ಲಿ ಇಂಬು ದೊರೆತಿರುವುದು ಸತ್ಯ.

ನಡುಗನ್ನಡ ಕಾಲವೆಂದರೆ, ಕ್ರಿ.ಶ. ೧೨೦೦-೧೯೦೦ ರವರೆಗೆ ಹಬ್ಬಿಕೊಂಡಿರುವ ವಿಸ್ತಾರ ಕಾಲ. ಇಷ್ಟು ಸುದೀರ್ಘವಾದ ಜನಪದದ ನಡೆಯಲ್ಲಿ ಪರಂಪರೆಯ ಜಡತನದ ಭಾಗವನ್ನು ದೂರತಳ್ಳಿ ಚೈತನ್ಯವನ್ನು ಇನ್ನಷ್ಟುಚೇತನಗೊಳಿಸಿಕೊಂಡು ವಿಶಾಲವಾದ ಮನಸ್ಸಿನಿಂದ ಬದುಕನ್ನು ಅಲಂಗಿಸಿಕೊಂಡ ಸೌಜನ್ಯವು ಕಾಣಿಸುತ್ತದೆ. ಆ ಸೌಜನ್ಯದಲ್ಲಿ ಪ್ರಯತ್ನವಾದಿತ್ವ, ಪ್ರಗತಿಶೀಲ ವಿಚಾರವಾಹಿನಿ, ಸ್ವಾಭಿಮಾನ ಸ್ವಾಲಂಬನ ತತ್ವಗಳು ಎಲ್ಲ ನಿಟ್ಟುಗಳಲ್ಲಿಯೂ ಪರಿಮಳಿಸಿರುವುದನ್ನು ಕಂಡುಂಡು ಆನಂದಿಸಬಹುದಾಗಿದೆ. ಈ ಸಂದರ್ಭದಲ್ಲಿ ಬಸವಣ್ಣನು ಧಾರ್ಮಿಕ ಮತ್ತು ಸಾಮಾಜಿಕ ಕ್ರಾಂತಿಯನ್ನುಂಟು ಮಾಡಿ ವಚನ ಚಳುವಳಿಯ ಮುಖಾಂತರ ಸಾಹಿತ್ಯ ರಚನೆಯಲ್ಲಿಯೂ ಸ್ವಾತಂತ್ರ್ಯದ ಝೇಂಕಾರಕ್ಕೆ ಪ್ರೇರಕನಾದನು. ಈ ಅವಧಿಯಲ್ಲಿ ಅನೇಕ ರೀತಿಯಾಗಿ ರಾಜಕೀಯ ಸ್ಥಿತ್ಯಂತರಗಳಾದರೂ ಕವಿಗಳು ಅಳುಕುಗೊಳ್ಳದೆ ತಮ್ಮ ಸ್ವಂತಿಕೆಯ ಮೇಲೆ ಬದುಕಿನ ಲವಲವಿಕೆಯನ್ನು ಉಳಿಸಿಕೊಂಡು ಅಂತಹ ಸಾಹಿತ್ಯ ರಚನೆಗೆ ಹುಟ್ಟು ಹಾಕಿದರು. ಅಂತೆಯೇ ದೇಸಿಗೆ ವಿಶಿಷ್ಟವಾದ ಸ್ಥಾನ ಲಭ್ಯವಾಯಿತು. ವಿಷಯ, ಛಂದಸ್ಸು, ಭಾಷೆ ಎಲ್ಲೆಡೆಯೂ ಸ್ವಂತಿಕೆಯ ತೃಪ್ತಿ ರಾರಾಜಿಸಿತ್ತು. ಹೊಸ ಬಗೆಯ ಆಧ್ಯಾತ್ಮಿಕ ತೇಜಸ್ಸು, ಧಾರ್ಮಿಕ ಶ್ರದ್ಧೆ, ಪ್ರಾಯೋಗಿಕ ಬುದ್ಧಿಗಳು ನಿರಾತಂಕವಾಗಿ ಪ್ರಸ್ಫುರಣಗೊಂಡು ಬದುಕಿನ ಬುತ್ತಿಯಾದಾಗ, ಆ ಪರಿಸರದಲ್ಲಿ ಮೂಡಿ ಬಂದ ಸಾಹಿತ್ಯವು ಅಷ್ಟೇ ಹುಲುಸಾಗಿ ನಿರಾತಂಕವಾಗಿ ಬೆಳೆದು ಬದುಕಿನ ಸತ್ವಕ್ಕೆ ಸಾಮರಸ್ಯವನ್ನು ಒದಗಿಸಿದುವು. ಸಂಘರ್ಷಗಳಿದ್ದರೂ ಜನಪರವಾಗಿ ಅರಳಿಬಂದ ಸಾಹಿತ್ಯವು, ಬದುಕನ್ನು ಹತ್ತು ಹಲವಾರು ರೀತಿಯಲ್ಲಿ ಕಂಡು,

ಬದುಕಿನ ಒಟ್ಟು ಸೊಬಗಿಗೆ ಹೊಸ ಬಗೆಯನ್ನು ನೀಡಿ ಕ್ರಿಯಾಶೀಲವಾಯಿತು. ಕನ್ನಡಕ್ಕೆ, ಕನ್ನಡತನಕ್ಕೆ ಹೊಸ ಮೆರಗು ಧಾವಿಸಿತು. ಚಂಪೂಕಾವ್ಯಗಳಲ್ಲಿ ಹಿಂದೆ ಆಗೊಮ್ಮೆ ಈಗೊಮ್ಮೆ ರುಚಿಯ ವೈವಿಧ್ಯತೆಗಾಗಿ ಬಳಕೆಯಾಗುತ್ತಿದ್ದ, ರಗಳೆ, ತ್ರಿಪದಿ, ಷಟ್ಪದಿ, ಸಾಂಗತ್ಯ ಮೊದಲಾದ ದೇಸೀಯ ಛಂದೋರೂಪಗಳಲ್ಲಿ ಇಡಿಯಾಗಿ ಗ್ರಂಥ ರಚನೆಗಳಾದವು. ಚಂಪೂವಿನಂತೆ ಇವೆಲ್ಲ ಸ್ವತಂತ್ರವಾದ ಕಾವ್ಯ ಪ್ರಕಾರಗಳಾದವು. ಕಾಲ ಜ್ಞಾನ, ಬಿರುದಿನ ಮತ್ತು ನೀತಿಯ ಪದ್ಯ, ವ್ಯಾಖ್ಯಾನ ಗದ್ಯ, ಸೀಸ ಪದ್ಯ, ನಾಮಾವಳಿ ಮೊದಲಾದ ಕಿರು ರಚನೆಗಳು ಮೂಡಿಬಂದವು. ಶಿವಶರಣರ ವಚನಗಳು, ಹರಿದಾಸರ ಕೀರ್ತನೆಗಳು ಜನಾಂದೋಲನವನ್ನು ಕೈಗೊಂಡು ಬದುಕಿನಲ್ಲಿ ಶ್ರದ್ಧೆ ಮೂಡಿಸಿ, ಎಲ್ಲ ದೃಷ್ಟಿಯಿಂದಲೂ ಬದುಕನ್ನು ರುಚಿಗೊಳಿಸಲು ಪ್ರಯತ್ನಿಸಿದವು. ಬಡವ - ಬಲ್ಲಿದರು, ಸ್ತ್ರೀ-ಪುರುಷರು, ಉಚ್ಚ-ನೀಚ ಮೊದಲಾದ ಪರಿಕಲ್ಪನೆಯಲ್ಲಿಯ ಭೇದಗಳನ್ನಳಿಸಿ ಸಮಾನ ಅವಕಾಶ ಮತ್ತು ಸಮಾನ ಪ್ರಯತ್ನಗಳಿಗೆ ಅವಕಾಶ ಮಾಡಿಕೊಟ್ಟು, ನರಕ ಸ್ವರ್ಗಗಳ ನಿರ್ಮಿತಿಯು ಇಲ್ಲಿಯೇ ನಮ್ಮ ಅಂಗೈಯ ಕೌಶಲದಲ್ಲಿದೆ ಎಂಬುದನ್ನು ಪ್ರಚುರಗೊಳಿಸಿದುವು. ಈ ಪ್ರಸಾರಕ್ಕೆ ಜನರು ಒಲಿದು, ಪ್ರಗತಿಪರರಾಗಿ ಹೆಜ್ಜೆಗಳನ್ನಿಟ್ಟು, 'ಕೂಡಿ ಬಾಳುವ' ಬದುಕಿನ ನೀತಿಗೆ ಧ್ವನಿಯಾಗಿ ಬೆಳೆದದ್ದು ನಿಜ. ಮತ್ತು ಕೆಲವು ಸಲ ಕುಸಿದದ್ದು ಹೌದು. ಆ ಕುಸಿತದ ಅಘಾತದಿಂದಾಗಿ, ವ್ಯವಸ್ಥೆಗೊಂಡಿದ್ದ ಬದುಕಿನ ರೀತಿಯೇ ನುಚ್ಚುನುರಿಯಾಗಿ ಹೋದದ್ದೂ ಸತ್ಯ. ಆದರೂ ಬದುಕು ಸದಾ ಹೊಸ ಬಗೆಗಳನ್ನು ಅಳವಡಿಸಿಕೊಳ್ಳುತ್ತಲೇ ಹೊಸ ಹುರುಪಿನಿಂದಲೇ ಸಾಗಿದೆ.

ಸಾಹಿತ್ಯವು ಕೂಡ ಬದುಕಿನ ಪ್ರತಿಸ್ಪಂದಿಯಾಗಿ ಹೊಸ ಬಗೆಯ ರೆಕ್ಕೆಗಳನ್ನು ಬಿಚ್ಚಿಕೊಂಡು ಇನ್ನೂ ವಿಸ್ತಾರವಾದ ಕ್ಷಿತಿಜಗಳನ್ನು ನಿರ್ಮಿಸುತ್ತಲೇ ಸಾಗಿದೆ. ಅಂತೆಯೇ ಅನೇಕ ಸಂದಿಗ್ಧತೆಗಳಲ್ಲಿಯೂ ಉತ್ತೇಜಿತರಾಗಿ ಹರಿಹರ, ರಾಘವಾಂಕ, ಕುಮಾರವ್ಯಾಸ, ಕುಮಾರ ವಾಲ್ಮೀಕಿ, ಲಕ್ಷ್ಮೀಶ, ರತ್ನಾಕರವರ್ಣಿ, ವಿರೂಪಾಕ್ಷ ಪಂಡಿತ ಷಡಕ್ಷರದೇವ, ಸರ್ವಜ್ಞ, ಕೆಂಪುನಾರಾಯಣ, ಮುದ್ದಣ, ಮೊದಲಾದವರು ಹೊಸ ಹೊಸ ಪ್ರಗಾಥಗಳನ್ನೇ ನಿರ್ಮಾಣ ಮಾಡಿದರು. ಅಲ್ಲಮ ಪ್ರಭು, ಬಸವಣ್ಣ, ಚೆನ್ನಬಸವಣ್ಣ, ಸಿದ್ಧರಾಮ, ಅಕ್ಕಮಹಾದೇವಿ, ಮೊದಲಾದವರು ಅನೇಕ ವಚನಕಾರರಿಗೆ ಪ್ರೇರಣೆಯಾಗಿ ಸಾವಿರದ ಅಸಂಖ್ಯ ವಚನಗಳ ನಿರ್ಮಿತಿಗೆ ಕಾರಣರಾದರು. ಮಾತು ಮಾತು ಮಥಿಸಿ ಬಂದ ಈ ತತ್ವ ನವನೀತವು ಬಾಳಿಗೆ ಸ್ವಂತಿಕೆಯ ಸತ್ವವನ್ನು ನೀಡಿತು. ಇದಕ್ಕೆ ಕಾರಣ ವಚನಕಾರರು ಸಂಪೂರ್ಣವಾಗಿ ರಾಜಾಶ್ರಯವನ್ನು ದೂರ ಚಿಮ್ಮಿ, ರಾಜಸ್ಥಾನದ ಚೌಕಟ್ಟಿನ ಹೊರಗೆ ಚೆಲ್ಲುವ ರೆದಿರುವ ಬೃಹತ್ ಬದುಕಿನ ನಾನಾ ಮುಖಗಳನ್ನು ಕಂಡು ಅಂತರಂಗದ ಅಂತಸ್ಸಿನೊಳಗೆ ಹೊಕ್ಕು, ಆಂದೋಲನವಾಗಿ ಹೊರಚಿಮ್ಮಿ ಸತ್ಯದ ನಿಚ್ಚಳ ಸ್ವರೂಪವನ್ನು ಬಿಚ್ಚಿತೋರಿಸಲು ಹವಣಿಸಿದಾಗ, ಆ ಶೈಲಿಗೆ ತಕ್ಕಂತೆ ಪರಿಸರದ ಭಾಷೆಯು ದುಡಿದು

ಘನಶಕ್ತಿಯನ್ನು ಪಡೆಯಿತು. ಸಾಹಿತ್ಯದಲ್ಲಿಯ ಕೇವಲ ಕಾಲ್ಪನಿಕ ಚಿತ್ರಗಳು ಮಾಯಯವಾಗತೊಡಗಿ, ನಿಜ ಜೀವನದ ಚಿತ್ರಗಳು ಮೂಡಲು ತೊಡಗಿದಾಗ, ಬದುಕು ಸಹಜವೇ ಹೊಸ ಹುಮ್ಮಸ್ಸಿನಿಂದ ಪರಿಮಳಿಸಿತು. ಬದುಕಿನ ಕುಲುಮೆಯಲ್ಲಿ ಪುಟಪಡೆದು ಬಂದ ಇಷ್ಟಲಿಂಗ ಪೂಜೆ, ಷಟ್‌ಸ್ಥಲ ಸೋಪಾನದ ಭಕ್ತಿಯ ನಿಲುವಿನ ನವೀನ ಶೈಲಿಗೆ ಕಲ್ಯಾಣದಲ್ಲಿ ಆಸೇತು ಹಿಮಾಚಲ ಇಂಬು ಪಡೆಯಿತು. ಆದರೆ ಈ ಸಂಸ್ಕಾರದ ತೀವ್ರತೆಗೆ ಪೂರ್ಣ ಒಪ್ಪುಗೊಳ್ಳಲಿಲ್ಲವೇನೋ, ಅಂತೆಯೇ ಕಲ್ಯಾಣ ಕ್ರಾಂತಿಯವರೆಗೆ ಸಂಪನ್ನವಾದ ಸುಖೀ ಸಮಾಜ ಚಿತ್ರದಲ್ಲಿ ಕಪ್ಪು ಕಲೆಗಳು ಮೂಡಿದ್ದು ಹಿಂದೆಮೂಡಿ ಬಂದಿದ್ದ ತೇಜ: ಪುಂಜವಾದ ಬಣ್ಣಗಳು ಮಾಸಿಹೋದವು. ಆದರೆ ಆ ಪರಂಪರೆಯೇನೋ ಈವರೆಗೂ ಸಾಗಿ ಬಂದಿದ್ದರೂ ಆ ಹಿಂದಿನ ಬೆಸುಗೆ ಮಾತ್ರ ಶಿಥಿಲವಾಗಿದೆ. ಹೀಗಿದ್ದರೂ ಆ ಶೈಲಿಯ ಶೀಲವು ಇತಿಹಾಸದಲ್ಲಿ ಉತ್ತುಂಗ ಶಿಖರವಾಗಿ ಉಳಿದಿದೆ. ಅದನ್ನೇ ವಚನ ಸಾಹಿತ್ಯ ಶೈಲಿಯೆಂದು ಕರೆದರೆ ತಪ್ಪಿಲ್ಲ.

ಇಂತಹ ವಚನ ಸಾಹಿತ್ಯವೆಂದರೆ, ನಡುಗನ್ನಡ ಶೈಲಿಯಲ್ಲಿ ಅನುಭಾವ ಗದ್ಯಗೀತ ಸಾಹಿತ್ಯ. ಇವು ಸ್ವಚ್ಛಂದ ಲಯದಿಂದಕೂಡಿದ ಗದ್ಯ, ಕವನ ಸಾಹಿತ್ಯ. ಈ ಸಾಹಿತ್ಯದ ಉಸಿರು ಆಧ್ಯಾತ್ಮ ಈ ಸಾಹಿತ್ಯದ ದೃಷ್ಟಿ 'ಜನತಾ ದೃಷ್ಟಿ'. ಇಂಥ ಈ ಸಾಹಿತ್ಯವು ಶಾಸ್ತ್ರವೂ ಹೌದು, ಸಾಹಿತ್ಯವೂ ಹೌದು; ಗದ್ಯವು ಹೌದು, ಪದ್ಯವೂ ಹೌದು. ಯಾರಿಗೂ ಕೇಡಿಲ್ಲದಂತೆ ಒಲಿದು ಹಾಡಿದ ಸಂಪತ್ತು ಇದು. ಕಾಯಕ ನಿಷ್ಠೆಯನ್ನು ಬೆಳೆಸಿಕೊಂಡು ಸ್ವಾನುಭವವನ್ನು ಸಹಜ ನಿಲುವಿನ ಭಾಷೆಯಲ್ಲಿ ಅನುಭಾವ ಸಂಸ್ಕೃತಿಯ ಸೌಂದರ್ಯವನ್ನು ಪರಿಚಯಿಸಿದೆ. ಇದರ ವಿಶಿಷ್ಠ ವೈಖರಿ. ಮಾನವ ಕುಲವೆಲ್ಲ ಒಂದೇ ಒಂದು ಎಂದು ನೀಲಿ ಛತ್ರದಡಿಯಲ್ಲಿ, ಎಲ್ಲ ಜಾತಿ ಮತ ಪಂಥಗಳನ್ನು ಒಂದೆಡೆ ತರಲು ಹವಣಿಸಿದ್ದು ಇದರ ಧರ್ಮ. ಹೀಗೆ ವಚನ ಸಾಹಿತ್ಯದ ಆತ್ಮ, ವಚನಧರ್ಮ. ವಚನ ಧರ್ಮ ಸ್ವರೂಪ, ವಚನ ಸಾಹಿತ್ಯ. ಇಂತಹ ವಚನ ಸಾಹಿತ್ಯ ಧರ್ಮಕ್ಕೆ ಸ್ಫೂರ್ತಿ ಸೆರೆಯಾಗಿದ್ದ ಬಸವಣ್ಣನ ವ್ಯಕ್ತಿತ್ವಕ್ಕೆ ಹರಿಹರನು ಮಾರುಹೋಗಿದ್ದನು. ಬಸವಣ್ಣನ ಕ್ರಾಂತಿಕಾರಿ ವಿಚಾರಗಳು ಆತನಿಗೆ ಹಿಡಿಸಿದ್ದುವು. ಬಸವಣ್ಣನು ಅನುಸರಿಸಿದ ಭಕ್ತಿಮಾರ್ಗವು ಹರಿಹರನನ್ನೂ ಆಕರ್ಷಿಸಿ, ಹರಿಹರನನ್ನು ಒಬ್ಬ ಶ್ರೇಷ್ಠಭಕ್ತಿ ಕವಿಯನ್ನಾಗಿಸಿತು. ಈ ಹಿನ್ನೆಲೆಯಿತ್ತೆಂದೇ ಬದುಕಿ ಹಣ್ಣಾಗಿ, ಹಣ್ಣನಿತ್ತ ಪುರಾತನರ ಹಾಗೂ ಶಿವಶರಣರ ಸುಮಾರು ೧೧೦-೧೨೦ ರಗಳೆಗಳನ್ನು ಬರೆದು ಹಾಡಿ ಕುಣಿದಾಡಿದನು. ಈ ರಗಳೆಯ ಸಾಹಿತ್ಯದಿಂದಾಗಿ ಭಕ್ತಿ ರಸದ ಕಡಲೇ ಕನ್ನಡ ಸಾಹಿತ್ಯದಲ್ಲಿ ನಿರ್ಮಾಣವಾಯಿತು. ರಗಳೆಗಳಿಗೂ ಕನ್ನಡ ಸಾಹಿತ್ಯದಲ್ಲಿ ಒಂದು ವಿಶಿಷ್ಟಸ್ಥಾನವೂ ಸಂಪನ್ನವಾಯಿತು. ರಗಳೆಯು ಕಥನ ಶೈಲಿಗೆ ಅಪರೂಪವಾದ ಛಂದೋಬಂಧವೆಂದು ಜನಪ್ರಿಯವಾಯಿತು. 'ಱ' ದಂತಹ ಅಸ್ತಿತ್ವವನ್ನು ಕಳೆದುಕೊಂಡ ಅಕ್ಷರಗಳನ್ನು ಪೂರ್ಣ ಕೈಬಿಟ್ಟನು. ಹೀಗೆ ಅನೇಕ ದೃಷ್ಟಿಯಿಂದ ಪಂಪನ ಅನಂತರ ಹೊಸ ಕಾವ್ಯಮಾರ್ಗವನ್ನು ನಿರ್ಮಾಣ ಮಾಡಿದ

ಘನತೆಯು ಹರಿಹರನದಾಗುತ್ತದೆ. ಆದ್ದರಿಂದ ಈ ಮಾರ್ಗಕ್ಕೆ ಹರಿಹರ ಮಾರ್ಗವೆಂದು ಹೆಸರು. ಇದು ಸಾಹಿತ್ಯದಲ್ಲಿ ಇತಿಹಾಸದಲ್ಲಿ ಚಿರಸ್ಥಾಯಿಯಾಗಿ ನಿಂತಿದೆ. ಹೀಗೆಂದ ಮಾತ್ರಕ್ಕೆ ಹರಿಹರನನ್ನು ರಗಳೆಗಳಿಗಷ್ಟೆ ಸೀಮಿತಗೊಳಿಸಲಾಗಿದೆ, ಏಕೆಂದರೆ, ಜನರು ಈತನನ್ನು 'ರಗಳೆಯ ಕವಿ' ಎಂದು ಕರೆಯುವ ಉಪಹಾಸ್ಯಕ್ಕೆ ಎಡೆಕೊಡಬಾರದೆಂದೋ ಏನೋ ಒಟ್ಟಾರೆ ಈ ಕವಿ ''ಗಿರಿಜಾ ಕಲ್ಯಾಣ' ಎಂಬ ಚಂಪೂಕಾವ್ಯವನ್ನೂ, ರಕ್ಷಾಶತಕ, ಪಂಪಾ ಶತಕಗಳನ್ನು ಮುಡಿಗೆಯ ಅಷ್ಟಕವನ್ನೂ ಬರೆದಿದ್ದಾನೆ. ಹೀಗಾಗಿ 'ರಗಳೆಯ ಕವಿ' ಎಂಬ ಅಪವಾದದಿಂದ ಪಾರಾಗಿರುವುದಂತೂ ಸತ್ಯ.

ನಡುಗನ್ನಡ ಕಾಲದ ಸಾಹಿತ್ಯದ ಸಂಪತ್ತಿನಲ್ಲಿ ಹರಿಹರನ ರಗಳೆಗಳದೇ ಒಂದು ಸೊಬಗಿನ ಸ್ಥಾನ. ಅಲ್ಲಿ ಹೃದಯಗಳನ್ನೇ ತುಂಬಿ ತುಳುಕಿಸುವ ಭಾವ ಸಂಪತ್ತು ಇದೆ. ಆತನ ರಗಳೆಗಳಲ್ಲಿ, 'ಬಸವರಾಜ ದೇವರ ರಗಳೆ' ಎಂಬುದು ರಗಳೆಗಳಲ್ಲಿಯೇ ಕಲಶಪ್ರಾಯ. ಹರಿಹರನ ವ್ಯಕ್ತಿತ್ವಸಿದ್ಧಿಯ ಪತಾಕೆ ಅದು. ಅಲ್ಲಿ ಬಸವಣ್ಣ, ಹರಿಹರರ ಭಕ್ತಿಯ ಪರಾಕಾಷ್ಠತೆಯ ಚಿತ್ರವು ಹಾಸುಹೊಕ್ಕಾಗಿದೆ. ಅವರಿಬ್ಬರ ವ್ಯಕ್ತಿತ್ವಗಳು ಒಂದೇ ಎಂಬಂತಾಗಿದ್ದು, ಆ ಮುಖಾಂತರಮೂಡಿ ಬಂದ ಬಸವರಾಜ ದೇವರ ರಗಳೆಯು, ಅನುಭಾವ ಸಾಹಿತ್ಯದ ಉನ್ನತ ಕೃತಿ. ಈ ಕೃತಿಯು ನೀಡುವ ಸಂಸ್ಕಾರವನ್ನು ಶಬ್ದಗಳಲ್ಲಿ ಸಂಪೂರ್ಣವಾಗಿ ಹಿಡಿದಿಡುವುದು ಒಂದು ಹಂತದಲ್ಲಿ ಅಸಾಧ್ಯವೇ ಸರಿ. ಆದರೆ ವಿಶೇಷವಾಗಿ ಇಲ್ಲಿ ಸತಿ ಪತಿ ಭಕ್ತಿ ಭಾವವು ಆಧ್ಯಾತ್ಮದ ತುತ್ತ ತುದಿಯನ್ನು ಮುಟ್ಟಿರುವುದರಿಂದ ಬಸವಣ್ಣ ಹರಿಹರರ ಭಕ್ತಿಪಾರಮ್ಯದಲ್ಲಿ ಅಂಬಕತ್ರಯನನ್ನು ಸಂಪೂರ್ಣವಾಗಿ ಕಾಣಬಹುದು. ಆದ್ದರಿಂದಲೇ ಇಲ್ಲಿ ತ್ರಿವಿಧ ದಾಸೋಹದ ಸಿದ್ಧಿಯಿದೆ.

ಹರಿಹರನಂತೆ ಈ ಕಾಲದಲ್ಲಿ ಮತ್ತೊಬ್ಬ ಹಿರಿಯ ಪ್ರಾತಿನಿಧಿಕ ಮಹಾಕವಿ ಎಂದರೆ, ರಾಘವಾಂಕ, ಆತನು ಹರಿಹನ ಸೋದರಳಿಯ ಮತ್ತು ಶಿಷ್ಯ. ಹೀಗಿದ್ದೂ ಹರಿಹರನ ರಗಳೆಯ ಶೈಲಿಗೆ ಒಲಿಯದೆ, ಹರಿಹರನ ಸಾಹಿತ್ಯದ ಹೃದಯ ಸಂಪತ್ತಿಗೆ ಒಲಿದು ಹರಿಹರಮಾರ್ಗದಲ್ಲಿ ನಡೆದು ವಾರ್ಧಕ ಷಟ್ಪದಿಯಲ್ಲಿ ಹರಿಶ್ಚಂದ್ರ ಕಾವ್ಯ, ಸೋಮನಾಥ ಚರಿತೆ, ಸಿದ್ಧರಾಮ ಪುರಾಣ, ಶರಭ ಚಾರಿತ್ರ್ಯ, ಹರಿಹರ ಮಹತ್ವಗಳನ್ನು ರಚನೆ ಮಾಡಿದನು. ಈತನ ಇನ್ನೊಂದು ಕಾವ್ಯ ವೀರೇಶ ಚರಿತೆ. ಇದನ್ನು ಉದ್ದಂಡ ಷಟ್ಪದಿಯಲ್ಲಿ ಬರೆದಿದ್ದಾನೆ. ಹೀಗೆ ಈತನ ಕೃತಿಗಳೆಲ್ಲಾ ಷಟ್ಪದಿಯಲ್ಲಿವೆ. ಆದರೆ ಈ ಮುನ್ನ ಷಟ್ಪದಿಯಲ್ಲಿ ಕಾವ್ಯಗಳನ್ನು ಬರೆದಿಲ್ಲವಾದಕಾರಣ ಷಟ್ಪದಿ ಪ್ರಕಾರದ ಕಾವ್ಯಗಳ ರಚನೆಗೆ ಮೊದಲಿಗನೆಂದರೆ, ರಾಘವಾಂಕನೇ ಹೌದು. ಈತನ ಕಾವ್ಯಸಿದ್ಧಿಯ ಹೆಗ್ಗುರುತೆಂದರೆ, 'ಹರಿಶ್ಚಂದ್ರ ಕಾವ್ಯ' ಅವನೇ ಹೇಳಿಕೊಂಡಿರುವಂತೆ 'ಈ ಕೃತಿಗೆ ಪ್ರತಿಯಿಲ್ಲ' ಇಲ್ಲಿ ಹರಿಶ್ಚಂದ್ರನ ವ್ಯಕ್ತಿತ್ವ ಸತ್ಯಕ್ಕೆ ಮತ್ತೊಂದು ಅಪರೂಪದ ಹೆಸರಾಗಿ ನಿರೂಪಿತವಾಗಿದೆ. ಇಂಥ ವ್ಯಕ್ತಿತ್ವವು ವಿಶ್ವಾಮಿತ್ರನ ಕಠೋರ

ಕರುಣೆಯಿಂದಾಗಿ ಪುಟವಿಟ್ಟಮಿಸುನಿಯಾಗಿದೆ. ಈ ಕಾವ್ಯದಲ್ಲಿಬರುವ ರಾಜ್ಯ ಸಮರ್ಪಣಾ ಭಾಗವಂತೂ, ಮನುಷ್ಯನ ಮನಸ್ಸಿನ ಸದೃಢತೆಯ ಪರೀಕ್ಷೆಗೆ ಒಡ್ಡಿದ ಒರೆಗಲ್ಲೇ ಸರಿ. ಶೈಲಿಯ ದೃಷ್ಟಿಯಿಂದ ಹೇಳಬೇಕಾದರೆ ದೈವೀಪ್ರೇರಣೆಯ ಪದಪ್ರಯೋಗ, ಧ್ವನಿ ರಮ್ಯತೆ, ತೇಜಸ್ಸಿನ ವೈಖರಿ ಇವೆಲ್ಲ ಇಲ್ಲಿ ತುಂಬಿ ತುಳುಕಿದೆ. ನಾಟ್ಯ ಪ್ರತಿಭೆಯಿಂದೊಡಗೂಡಿದ ಸಂಭಾಷಣಾ ಚಾತುರ‍್ಯದ ಮಿಂಚಿನಲ್ಲಿ ಸತ್ಯದ ಛಲವೇ ಹೊಳೆಯುತ್ತಿದ್ದು ಆ ಛಲವು ಹರನೆಂಬುದೇ ಸತ್ಯ; ಸತ್ಯವೆಂಬುದೇ ಹರನು - ಎಂಬ ಉಕ್ತಿಯನ್ನು ಸ್ಪಷ್ಟಗೊಳಿಸಿದೆ. ಆ ಉಕ್ತಿಯು ತ್ರಿಕಾಲಗಳಿಗೂ ಬದುಕಿನ ಘೋಷವಾಕ್ಯ; ಇಂತಹ ಪುರುಷಾರ್ಥವನ್ನು ಸಾಧಿಸಿಕೊಡುವ ಈ ಕವಿಕಾವ್ಯ ಪರಿಚಯ ನಾಡಿನ ಜನತೆಗೆ ಪ್ರಿಯವಾದುದು ಮತ್ತು ಅತ್ಯವಶ್ಯವಾದುದು.

ನಡುಗನ್ನಡ ಕಾಲದ ಕವಿಗಳಲ್ಲಿ ಬಹುತೇಕ ಜನ ಕವಿಗಳು ಜನಸಮ್ಮುಖವಾದ ಸಾಹಿತ್ಯದ ನಿರ್ಮಾಣದಲ್ಲಿ ನವೀನ ಪ್ರಯೋಗಗಳಿಗೆ ಎಡೆಮಾಡಿಕೊಟ್ಟಿದ್ದಾರೆ. ಮತ್ತು ಆ ಮೂಲಕ ಯಶಸ್ಸು ಸಾಧಿಸಿದ್ದಾರೆ. ಅಂತಹ ಪ್ರಮುಖರಲ್ಲಿ ರಾಘವಾಂಕನೂ ಒಬ್ಬನು. 'ವಿಸ್ತಾರ ಮಾತು ಸಾವಧಾನವಾದ ಕಥನ, ಎಕ್ಕೆ ಎಕ್ಕೆಯಾಗಿ ಬರುವ ಕಲ್ಪನೆ, ತರತರದಿಂದ ಬಣ್ಣಿಸುವ ಮಾತಿನ ಜಾಣತನ, ನಾಟಕ ಯೋಗ್ಯವಾದ ಸಂಭಾಷಣೆ' ಇವುಗಳ ಅಭಿವ್ಯಕ್ತಿಗೆ ಈತನಲ್ಲಿ ವಾರ್ಧಕ ಷಟ್ಪದಿಯು ಉತ್ತಮ ಸಾಧನವಾಗಿ ಪರಿಣಮಿಸಿತು. ಈತನಿಂದ ಮುಂದೆ ಇದೇ ವಾರ್ಧಕ ಷಟ್ಪದಿಯಲ್ಲಿ ಕಾವ್ಯ ರಚನೆಯನ್ನು ಮಾಡಿದ ಕವಿಗಳ ತಂಡ ನಿರ್ಮಾಣವಾಯಿತು. ಆ ತಂಡದಲ್ಲಿ ಕೆರೆಯ ಪದ್ಮರಸ, ಪದ್ಮಣಾಂಕ, ಲಕ್ಕಣ ದಂಡೇಶ, ಬೊಮ್ಮರಸ, ಸಿಂಗಿರಾಜ, ೩ನೆಯ ಮಂಗರಸ, ಲಕ್ಷ್ಮೀಶ, ವಿರೂಪಾಕ್ಷಪಂಡಿತ, ಗೋಪಕವಿ, ಮುದ್ದಣ ಮೊದಲಾದವರು ಬರುತ್ತಾರೆ. ಅದೇ ರೀತಿ ಭಾಮಿನಿ ಷಟ್ಪದಿಯಲ್ಲಿ ಕಾವ್ಯ ರಚನೆಯನ್ನು ಮಾಡಿದ ಕವಿಗಳ ತಂಡವೊಂದು ನಿರ್ಮಾಣವಾಯಿತು. ಆ ತಂಡದಲ್ಲಿಭೀಮಕವಿ, ಕುಮಾರವ್ಯಾಸ, ಭಾಸ್ಕರ ಚಾಮರಸ, ಕುಮಾರ ವಾಲ್ಮೀಕಿ, ತಿಮ್ಮಣ್ಣಕವಿ, ಚಾಟುವಿಠ್ಠಲನಾಥ, ಸಾಳ್ವ, ವಾದಿರಾಜ, ನಾಗರಸ, ರಂಗನಾಥ, ಜಗನ್ನಾಥ ವಿಟ್ಠಲ ಮೊದಲಾದವರು ಬರುತ್ತಾರೆ. ಕಾವ್ಯಾರಾಮದಲ್ಲಿವಾರ್ಧಕ ಷಟ್ಪದಿಯನ್ನು ರಾಘವಾಂಕನು ಅಜರಾಮರಗೊಳಿಸಿದಂತೆ, ಕುಮಾರವ್ಯಾಸನು ಭಾಮಿನಿ ಷಟ್ಪದಿಯನ್ನು ಅಜರಾಮರಗೊಳಿಸಿದ್ದಾನೆ.

ಕುಮಾರ ವ್ಯಾಸನು ನಡುಗನ್ನಡ ಕಾಲದ ಮಧ್ಯದಲ್ಲಿ ಎಂದರೆ ಕ್ರಿ.ಶ. ೧೪೦೦ ರಲ್ಲಿಬದುಕಿಬಾಳಿದವನು. ಈತನ ಕಾಲದಿಂದ ಮುಂದೆ ಆಧುನಿಕ ಕಾಲವು ಬರುವವರೆಗೆ ಕನ್ನಡಸಾಹಿತ್ಯ ಸಂಪದವು ಎಲ್ಲ ಮತದ ಎಲ್ಲ ಪ್ರಕಾರದ ಗ್ರಂಥಗಳಿಂದ ಸಂಭ್ರಮಿಸಿ ಹೆಚ್ಚು ಸಮ್ಮಿಶ್ರತೆಗೆ ಅನುವು ಮಾಡಿಕೊಟ್ಟಿದೆ. ಈತನ ಪ್ರಭಾವವು ಮುಂದಿನ ಕವಿಗಳಲ್ಲಿ ವಿಶೇಷವಾಗಿ ಕಂಡುಬಂದಿದ್ದು ಈತನು ದೇಸಿನಿಷ್ಠತೆಯ ಶ್ರೇಷ್ಠ ಪ್ರತಿನಿಧಿಯಾಗಿದ್ದಾನೆ. ಈತನ ಕಾಲದಿಂದಮುಂದೆ ಕವಿಕಾವ್ಯ ಪರಂಪರೆಯನ್ನು

ಹುಲುಸಾಗಿ ಬೆಳೆಸಲು ವಿಜಯನಗರದ ಅರಸರು ಮತ್ತು ಮೈಸೂರು ಒಡೆಯರು ಸಹಕಾರವನ್ನು ನೀಡಿದ್ದಾರೆ. ಇವರ ಕಾಲದಲ್ಲಿ ದೇಸಿಯ ಮುಖ್ಯ ಅಂಶಗಳಾದ ಅಭಿವ್ಯಕ್ತಿಯ ಸ್ವಾತಂತ್ರ್ಯ ಹಾಗೂ ಜನತಾ ದೃಷ್ಟಿಗಳು ಯಾವ ರೀತಿಯಿಂದಲೂ ಹ್ರಾಸವಾಗದೆ ಮೊದಲಿನ ಶತಮಾನಗಳಿಗಿಂತ ಹೆಚ್ಚು ಪ್ರಮಾಣದಲ್ಲಿ ಕಾರ್ಯಸಾಧನೆ ಮಾಡಿದೆ. ಜೊತೆಗೆ ಕವಿಗಳೆಲ್ಲರೂ ಜನ ಭಾಷೆಯನ್ನು ದುಡಿಸಿಕೊಂಡು ಕನ್ನಡ ಶ್ರದ್ಧೆಯನ್ನುಬಲಪಡಿಸಿದರು. ಸಾಹಿತ್ಯವು ಮಡಿವಂತಿಕೆಯಿಂದ ಹೊರಬಂದು ಶ್ರೀ ಸಾಮಾನ್ಯನ ಹೊಸ್ತಿಲಿನಿಂದ ಅಡುಗೆಯ ಮನೆಯ ಒಳಗೂ ಮಟ್ಟಿ,ಅಂತರಂಗದ ಕದವನ್ನುತೆರೆಸುವುದರಲ್ಲಿ ಸಿದ್ಧಿಯ ತುದಿಯನ್ನು ಮುಟ್ಟಲು ಹವಣಿಸಿರುವುದು ಮೆಚ್ಚುವ ಸಂಗತಿ, ಪ್ರಗತಿಯನ್ನು ಸಾಧಿಸಿದ ಶ್ರೀ ಶಿಖರ.

ಈ ಹಿನ್ನೆಲೆಯಲ್ಲಿ ಕುಮಾರವ್ಯಾಸನು ತಲೆಮಣಿ, ನಾಯಕ ರತ್ನ, ವಿಶಾಲ ಮನೋವೃತ್ತಿಯ ಭಾಗವತ ಕವಿ, ಕೃಷ್ಣಭಕ್ತ; ಗದುಗಿನ ವೀರನಾರಾಯಣನು ಇಷ್ಟದೈವ. ಈತನ ಕೃತಿ 'ಕರ್ನಾಟಕ ಭಾರತ ಕಥಾಮಂಜರಿ' ಇದೊಂದು ರಸವತ್ತಾದ ಮಹಾಕಾವ್ಯ. ಈ ಕಾವ್ಯದ ಮುಖಾಂತರ ವ್ಯಾಸಭಾರತವನ್ನು ಕರ್ನಾಟಕ ಭಾರತವನ್ನಾಗಿಸಿದ ಕೀರ್ತಿ ಈ ಕುಮಾರವ್ಯಾಸನದು. ಈತನ ಮೂಲ ಹೆಸರು ನಾರಣಪ್ಪ ಎಂದು. ಈತನು 'ಕರ್ನಾಟಕ ಭಾರತ ಕಥಾ ಮಂಜರಿ' ಯ ಜೊತೆಗೆ 'ಐರಾವತ್' ಎಂಬ ಎಂಟು ಸಂಧಿಗಳ ಕಾವ್ಯವನ್ನು ಬರೆದಂತೆ ಪ್ರತೀತಿ.

'ಕರ್ನಾಟಕ ಭಾರತ ಕಥಾಮಂಜರಿ' ಯು ಕೃಷ್ಣನನ್ನು ಕೇಂದ್ರ ಬಿಂದುವಾಗಿಟ್ಟುಕೊಂಡು, ಮಹಾಭಾರತದ ಕಥೆಯನ್ನೇ ಹೇಳುತ್ತಿದ್ದರೂ, ಮಹಾಭಾರತ ಕಾಲದ ಅನೇಕ ಕಥೆಗಳು ಇಲ್ಲಿ ಮೂಲ ಮಹಾಭಾರತದ ಕಥೆಯನ್ನು ಹೆಚ್ಚು ಪ್ರಕಾಶಮಾನವಾಗಿಸಲು, ಸಹಜವಾಗಿಯೇ ಹೆಣೆದುಕೊಂಡು ಕಾವ್ಯ ಸೌಂದರ್ಯವನ್ನು ಭೌಮವಾಗಿಸಿವೆ. ಪ್ರತಿಪರ್ವದಲ್ಲಿಯೂ ರಸಮಯವಾದ ಜೀವನ ದರ್ಶನವನ್ನು ನೀಡುವ ಕಥಾಗೊಂಚಲಿನ ಅನುಭವವನ್ನು ಪಡೆಯಬಹುದು ಹೀಗೆ ಅರಣ್ಯಪರ್ವದ ಗೊಂಚಲಿನಲ್ಲಿ, ಭೀಮಾಂಜನೇಯ ದರ್ಶನ, ಸೌಗಂಧಿಕಾ ಪುಷ್ಪ ಸಂಚಯ, ಯಕ್ಷಪ್ರಶ್ನೆ ಮೊದಲಾದವು ಇವೆಯೆಂಬುದನ್ನು ಇಲ್ಲಿ ನೆನೆಯಬಹುದು. ಇದೇ ರೀತಿ ಎಲ್ಲ ಪರ್ವಗಳಲ್ಲಿಯ ಕಥೆಗಳನ್ನು ಲೆಕ್ಕ ಹಾಕಿದರೆ ಅವು ನೂರಾರು ಆಗುತ್ತವೆ. ಇಂತಹ ಕಥಾಪರಿಸರದ ಮಧ್ಯೆ ಮಹಾ ಭಾರತದ ಕತೆಗಳನ್ನು ಆತನು ಹತ್ತು ಪರ್ವಗಳಿಗೆ ಮೀಸಲಿಟ್ಟಂತೆ ಬರೆದು ಮುಗಿಸಿದನು. ಆದರೆ ಈ ಮಹಾಭಾರತದ ಮುಂದಿನ ಎಂಟು ಪರ್ವಗಳನ್ನು ಮುಂದೆ ತಿಮ್ಮಣ್ಣ ಕವಿಯು ಬರೆದು ಮುಗಿಸಿದನು. ಬಹುಶಃ ಕುಮಾರವ್ಯಾಸನಿಗೆ ಗಧಾಪರ್ವವಾದ ಮೇಲೆ ಮುಂದಿನ ಭಾಗವು ಅಷ್ಟು ಸ್ವಾರಸ್ಯವೆನಿಸಿರಲಿಕ್ಕಿಲ್ಲ ಅಂತೆಯೇ ಗಧಾಪರ್ವಕ್ಕೆ ಮಂಗಳ ಹಾಡಿದ್ದಾನೆ ಕುಮಾರವ್ಯಾಸ.

ಕುಮಾರವ್ಯಾಸನ ಕಥನ ಶೈಲಿಯ ಬಗ್ಗೆ ಹೇಳುವುದಾದರೆ, 'ಕಲಿಯುಗ ದ್ವಾಪರ' ಮಾಡುವ ಶೈಲಿಯನ್ನು ಈತ ಹೊಂದಿದ್ದಾನೆ. ಅಂದಿನ ಮಹಾಭಾರತವು ಇಂದಿನವರ ಕಣ್ಣ ಮುಂದೆ ಕುಣಿಯುವಂತೆ ಮಾಡುವ ಕಾಲವೈಚಿತ್ರವು ಈತನ ಪ್ರತಿಭಾಕುಂಚದಲ್ಲಿ ತುಂಬಿ ತುಳುಕಿದೆ. ಯಾವುದೇ ಸನ್ನಿವೇಶವನ್ನು ತೆಗೆದುಕೊಂಡರೂ ಜನಭಾಷೆಯನ್ನು, ಜನಭಾಷೆಯಲ್ಲಿ ಹುದುಗಿದ ರೂಪಕಗಳನ್ನು ಸವ್ಯಸಾಚಿಯಾಗಿ ಬಳಸಿ ಸಾಮಾನ್ಯರ ಸಖನಾಗಿ, ಸಾಹಿತ್ಯ ಸಂಸ್ಕಾರದ ಮೂಲಕ ಜೀವನವನ್ನು, ಸುಖದ ಬಿನದವಾಗಿಸುತ್ತಾನೆ. ಓದುಗನಲ್ಲಿ ಕರ್ಮಯೋಗದ ಮೂಲಕ ಮಾನವತಾ ದೃಷ್ಟಿಯನ್ನು ಅರಳಿಸಿ ವಿರಾಟ ಸ್ವರೂಪವನ್ನು ನೋಡಿ ಅರಗಿಸಿಕೊಳ್ಳುವ ಶಕ್ತಿಯನ್ನು ಕರುಣಿಸುತ್ತಾನೆ. ಆ ಮೂಲಕ ಪಂಚಮ ವೇದವಾಗಿರುವ ಬದುಕು ಅಪ್ಯಾಯಮಾನವಾಗಿ ಬಿಡುತ್ತದೆ. ನವರಸಗಳಿಂದ ಪರಿಪೂರ್ಣವಾಗಿರುವ ಈ ಕೃತಿಯಿಂದಾಗಿ ಭಕ್ತಿ ಗಂಗೆಯು ಎಲ್ಲೆಡೆಯೂ ಉಕ್ಕಿಹರಿದು ಯುಗ ಯುಗಗಳನ್ನು ಪಾವನಗೊಳಿಸುವ ಧೀಮಂತಿಕೆಯನ್ನು ಇಲ್ಲಿ ಕಾಣಬಹುದಾಗಿದೆ. ಕವಿ ತನ್ನ ಬದುಕಿನ ಸ್ಪಷ್ಟತೆಯಿಂದಾಗಿ ಸಮನ್ವಯವನ್ನು ಸಮರಸವನ್ನು ಲೀಲಾಜಾಲವಾಗಿ ತುಂಬಿ ಈ ಕೃತಿಯನ್ನು ಲೋಕದ ಕೃತಿಯನ್ನಾಗಿಸಿ ತಾನು ಲೋಕದ ಮಹಾಕವಿಗಳ ಮುಂಚೂಣಿಯಲ್ಲಿ ನಿಲ್ಲುತ್ತಾನೆ. ಸಾಹಿತ್ಯಕ ದೃಷ್ಟಿಯಿಂದ ಈ ಕಾವ್ಯವು ಎಷ್ಟು ಮಹತ್ವವನ್ನು ಪಡೆದಿದೆಯೋ ಅಷ್ಟೇ ಮಹತ್ವವನ್ನು ಕನ್ನಡ ಶಬ್ಧಕೋಶದ ದೃಷ್ಟಿಯಿಂದಲೂ ಪಡೆದಿದೆ. ಹೀಗಾಗಿ ಈ ಕಾವ್ಯವು ಕನ್ನಡ ಶಬ್ಧಕೋಶದ ಕಣಜ. ಏಕೆಂದರೆ ಈ ಕವಿಯು ನೆರೆಯ ಭಾಷೆಗಳ ಶಬ್ದಗಳಿಗೆ ಧಾರಾಳವಾಗಿ ಕನ್ನಡ ದೀಕ್ಷೆಯನ್ನು ಕೊಟ್ಟು, ಕನ್ನಡ ಶಬ್ಧಕೋಶವನ್ನು ತನ್ನ ಶಕ್ತಿಮೀರಿ ಹಿಗ್ಗಿಸಿರುವುದನ್ನು ಕಾವ್ಯದುದ್ದಕ್ಕೂ ಮನಗಾಣುತ್ತೇವೆ. ಹೀಗೆ ಶಬ್ಧಕೋಶವನ್ನು ಬೆಳಸುವುದು ಕೂಡ ಭಾಷೆಯ ಜೀವಂತಿಕೆಯ ಲಕ್ಷಣವೆಂದೇ ಕುಮಾರವ್ಯಾಸನು ತಿಳಿದಿರಬೇಕು. ಒಟ್ಟಾರೆ ಕುಮಾರವ್ಯಾಸನು ಜನ ಬದುಕಲೆಂಬ ದೃಷ್ಟಿಯಿಟ್ಟುಕೊಂಡು ಕಾವ್ಯ ರಚನೆ ಮಾಡಿದ ಜನಕವಿ. ಜನಜೀವನದ ಕವಿ. ಅಂತೆಯೇ ಶತ ಶತಮಾನಗಳು ಕಳೆದರೂ ಈ ಕಾವ್ಯವು ಗಮಕದಲ್ಲಿ ಅರ್ಥವತ್ತಾಗಿ ಚಿರಂಜೀವಿಯಾಗಿದೆ. ಜೊತೆಗೆ ಈ ಕಾವ್ಯವನ್ನು ಕೇಳಿದವರು, ಓದಿದವರು ಧೀಮಂತಿಕೆಯನ್ನು ಪಡೆಯುತ್ತಾರೆ. ಬಹು ವಿಸ್ತಾರವಾಗಿರುವ ಈ ನಡುಗನ್ನಡ ಕಾಲದಲ್ಲಿ ಕೃತಿ ರತ್ನಗಳು ಹಲವಾರು, ಕುಮಾರವ್ಯಾಸನ ಅನಂತರವೂ ಅಂತಹ ರತ್ನಗಳು ಹಲವಾರು. ಆದ್ದರಿಂದ ಅಂತಹ ರತ್ನಗಳನ್ನು ಅರ್ಥಾತ್ ಕನ್ನಡದ ಶ್ರೀಮಂತ ಬದುಕಿನ ಕಾವ್ಯರತ್ನಗಳ ಲೆಕ್ಕವನ್ನಿಡುವುದು ಸಾಮರ್ಥ್ಯದ ಕೆಲಸವೇ ಸರಿ. ಆ ದಿಸೆಯಲ್ಲಿ ವಿರೂಪಾಕ್ಷ ಪಂಡಿತನ ಚೆನ್ನಬಸವ ಪುರಾಣವೂ ಒಂದು. ಇದು ವಾರ್ಧಕ ಷಟ್ಪದಿಯಲ್ಲಿದ್ದು ಚೆನ್ನ ಬಸವಣ್ಣನ ಚರಿತೆಗಾಗಿಯೇ ಮೀಸಲಾಗಿರುವ ಮೊದಲ ಕಾವ್ಯ. ಚೆನ್ನ ಬಸವಣ್ಣನು ವಚನ ಸಾಹಿತ್ಯ ಪರಂಪರೆಯಲ್ಲಿ ಶ್ರೇಷ್ಠಜ್ಞಾನಯೋಗಿ. ಆತನ ಚರಿತ್ರೆಯನ್ನು ಬಳಸಿಕೊಂಡು

ಶಿವಲೀಲೆಗಳನ್ನೂ ಶರಣರ ಚರಿತೆಗಳನ್ನು ವೀರಶೈವ ಸಿದ್ಧಾಂತ ಸಂಪ್ರದಾಯಗಳನ್ನು ತಿಳಿಸಿ ಕೊಡಲು ಪ್ರಯತ್ನಿಸಿರುವ ಕಾವ್ಯ ಇದು. ಹೀಗಿರುವುದರಿಂದ ಇದು ವೀರಶೈವ ಮತದ ಕೈಪಿಡಿಯೆಂದು ಹೇಳಿದರೆ, ತಪ್ಪಾಗುವುದಿಲ್ಲ. ಈ ಕಾವ್ಯವನ್ನು ಮನಸ್ಸುಕೊಟ್ಟು ಓದುವವರಿಂದ ಚೆನ್ನ ಬಸವಣ್ಣನ ವ್ಯಕ್ತಿತ್ವ ದರ್ಶನ ಹಾಗೂ ವೀರಶೈವ ಧರ್ಮದ ಸೂಕ್ಷ್ಮತೆಗಳು ಗೊತ್ತಾಗುತ್ತವೆ. ಇದರಿಂದಾಗಿ ವೀರಶೈವ ಧರ್ಮವೂ ವಿಶ್ವಧರ್ಮದ ಅಂಶಗಳಿಂದ ಕೂಡಿದ್ದು, ಮಾನವ ಕಲ್ಯಾಣವನ್ನೇ ಬಯಸುವ ಧರ್ಮಗಳಲ್ಲಿ ಒಂದು ಎಂಬುದು ಮನದಟ್ಟಾಗುತ್ತದೆ.

ಈ ನಡುಗನ್ನಡದ ಕಾಲದಲ್ಲಿ ಸಂಕೀರ್ಣತೆಯೂ ವೈವಿಧ್ಯತೆಯೂ ದಟ್ಟವಾಗಿ ಎದ್ದು ಕಾಣುವುದರಿಂದ, ಈ ಕಾಲದ ಕವಿಗಳು ರಗಳೆ, ಷಟ್ಪದಿಗಳನ್ನು ಕಾವ್ಯಾಭಿವ್ಯಕ್ತಿಗೆ ಬಳಸಿಕೊಂಡಂತೆ, ಸಾಂಗತ್ಯವನ್ನೂ ಬಳಸಿ ಬಹುಮೌಲಿಕ ಕೃತಿಗಳನ್ನು ನಮ್ಮ ಕವಿಗಳು ನೀಡಿರುವರೆಂಬುದನ್ನು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ದೇವರಾಜನ 'ಸೊಬಗಿನ ಸೋನೆ', ತೆರಕಣಾಂಬಿ ಬೊಮ್ಮರಸನ 'ಜೀವಂಧರ ಸಾಂಗತ್ಯ', ಶಿಶುಮಾಯಣನ 'ತ್ರಿಪುರದಹನ' ಸಾಂಗತ್ಯ ಹಾಗೂ ಅಂಜನಾ ಚರಿತ್ರೆ'. ಇನೆಯ ಮಂಗರಸನ 'ಪ್ರಭಂಜನ ಚರಿತೆ' 'ಶ್ರೀಪಾದ ಚರಿತೆ,' ನೇಮಿಜಿನೇಶ ಚರಿತೆ', ನಂಜುಂಡ ಕವಿಯ 'ಕುಮಾರ ರಾಮನ ಕಥೆ.' 'ಕನಕದಾಸ ಕೃತ 'ಮೋಹನ ತರಂಗಿಣಿ' ರತ್ನಾಕರವರ್ಣಿಯ 'ಭರತೇಶ ವೈಭವ', ವಾದಿರಾಜಕೃತ 'ವೈಕುಂಠವರ್ಣನೆ', ಹೊನ್ನಮ್ಮನ ಹದಿಬದೆಯ ಧರ್ಮ', ಮೊದಲಾದವು ಹೆಸರಿಸಬಹುದಾದಂತಹ ಸಾಂಗತ್ಯ ಕಾವ್ಯಗಳು. ಅದೇ ರೀತಿ ಈ ಕಾಲದಲ್ಲಿ ತ್ರಿಪದಿಯನ್ನು ಬಳಸಿಕೊಂಡು ಅಕ್ಕಮಹಾದೇವಿಯು 'ಯೋಗಾಂಗ ತ್ರಿವಿಧಿ' ಎಂಬ ಕೃತಿಯನ್ನು ನೀಡಿದರೆ, ಸರ್ವಜ್ಞನಂತೂ ತ್ರಿಪದಿಯಲ್ಲಿಯೇ ಅಸಂಖ್ಯಾತ ವಚನಗಳನ್ನು ನೀಡಿದ್ದಾನೆ. ಹೀಗೆ ಈ ಎಲ್ಲ ಕೃತಿಗಳೂ ವ್ಯಕ್ತಿತ್ವದ ವಿಕಸನಕ್ಕೆ ಸಾಕಷ್ಟು ಸತ್ವವನ್ನು ನೀಡುತ್ತವೆ ಮತ್ತು ನಡುಗನ್ನಡ ಕಾಲದ ಸಾಹಿತ್ಯದ ಬೆಲೆಯಲ್ಲಿ ಇಂತಹ ಕಸುವು ತುಂಬಿರುವುದರಿಂದಲೇ, ಆ ಕಾಲದ ಕಾವ್ಯಗಳಲ್ಲಿ ಅನೇಕವು ನಿತ್ಯನೂತನವಾಗಿದೆ.

ಈ ನಡುಗನ್ನಡ ಕಾಲದ ಸಾಹಿತ್ಯದ ಒಳ-ಹೊರಗಿನ ಪದರುಗಳನ್ನು ಬಿಡಿಸಿ ನೋಡಿದಾಗ ಎಲ್ಲೆಡೆಯೂ ಭಕ್ತಿ ತರಂಗಿಣಿಯು ಸೂಸಿರುವುದು ಗೋಚರವಾಗುತ್ತದೆ. ಕೆಲವೆಡೆ ಅದು ಅವ್ಯಕ್ತವಾಗಿಯೂ ಮತ್ತೆ ಕೆಲವೆಡೆ ಅದು ಗುಪ್ತಗಾಮಿನಿಯಾಗಿಯೂ ಇದ್ದು ಮನುಷ್ಯನ ಒಟ್ಟಂದದ ಬದುಕನ್ನು ಸುಮಧುರಗೊಳಿಸುವಲ್ಲಿ ಶಕ್ತಿಮೀರಿ ಹವಣಿಸಿರುವುದನ್ನು ಕಾಣಬಹುದು. ಭಕ್ತಿಯ ಸತ್ವವು ಕಾವ್ಯಗಳಲ್ಲಿ ಕಥಾವಸ್ತುವಿನ ಹಿನ್ನೆಲೆಯಲ್ಲಿ ವಿಜೃಂಭಿಸಿದ್ದರೆ, ಅದು ಶಿವಶರಣರ ಮತ್ತು ಹರಿದಾಸರ ಸಾಹಿತ್ಯದಲ್ಲಿ ನೇರವಾಗಿ ತನ್ನ ಪ್ರಭುತ್ವವನ್ನು ತೋರಿದೆ. ಹರಿದಾಸ ಸಾಹಿತ್ಯದಲ್ಲಿಯಂತೂ ಭಕ್ತಿಯು ನಾದ ಮಾಧುರ್ಯದಿಂದ ತುಂಬಿ ಹಾಡಾಗಿ ಹರಿದು ಹೃದಯಗಳನ್ನು ಅಂತರಂಗ ಪರಿಶೀಲನೆಗೆ ತೊಡಗಿಸಿ, ಪಾವನಗೊಳಿಸಲು ಪ್ರಯತ್ನಿಸಿರುವುದು

ಗಮನಾರ್ಹವಾದ ಸಂಗತಿ. ಇಂಥ ಹರಿದಾಸ ಸಾಹಿತ್ಯಕ್ಕೆ ಮೂಲ ಪ್ರೇರಣೆ ಮಧ್ವಾಚಾರ್ಯರು ಪ್ರತಿಪಾದಿಸಿದ ದ್ವೈತ ಸಿದ್ಧಾಂತ. ಈ ಸಿದ್ಧಾಂತವು ಬದುಕು (ಜೀವ) ಮತ್ತುಪರಮಾತ್ಮ ಎರಡೂ ಸತ್ಯವೆಂಬುದನ್ನು ಪ್ರತಿಪಾದಿಸಿ, ಜೀವ-ಜೀವ; ಜೀವ-ಜಡ; ಜಡ-ಜಡ; ಈಶ್ವರ - ಜೀವ; ಈಶ್ವರ-ಜಡ; ಎಂಬ ಪಂಚಭೇದಗಳನ್ನು ವ್ಯವಹಾರಿಕ ಸತ್ಯದ ಜಾಡಿನಲ್ಲಿ ತಿಳಿಸಿಕೊಡಲು ಪ್ರಯತ್ನಿಸಿದೆ. ಆ ದಾರಿಯಲ್ಲಿ ದತ್ತ ಸ್ವಾತಂತ್ರ್ಯವನ್ನು ಬಳಸಿಕೊಂಡು ವಿವೇಕದ ಬೆಳಕಿನಲ್ಲಿ ಸಾಧನಾಮಯ ಜೀವಿಯು ನವವಿಧಿ ಭಕ್ತಿಯ ಮುಖಾಂತರ ಸ್ವರೂಪ ಜ್ಞಾನವನ್ನು ಪಡೆದು ಬದುಕನ್ನು ಪಾವನಗೊಳಿಸಿಕೊಳ್ಳುತ್ತಾನೆ. ಇಂತಹ ಹರಹಿನಲ್ಲಿ ಕನ್ನಡ ಹರಿದಾಸ ಸಾಹಿತ್ಯವು ತನ್ನ ವಿಶಿಷ್ಟವಾದ ಕೊಡುಗೆಗಳನ್ನು ಕೊಟ್ಟಿದೆ. ಹರಿದಾಸ ಸಾಹಿತ್ಯದ ಚಳುವಳಿಯು ಕನ್ನಡದಲ್ಲಿಬರುವ ಮುನ್ನ ಈ ಸಿದ್ಧಾಂತವು ಕೇವಲ ಸಂಸ್ಕೃತದಲ್ಲಿ ಪ್ರತಿಪಾದಿತವಾಗುತ್ತಿತ್ತು. ಹೀಗಾಗಿ ಅದು ಕೇವಲ ಪಂಡಿತರ ಸೊತ್ತಾಗಿತ್ತು. ಆದರೆ ಶ್ರೀಪಾದರಾಯರ ಕಾಲದಿಂದ ಎಂದರೆ ಕ್ರಿ.ಶ. ಸುಮಾರು ೧೫೦೦ರಿಂದ ಈ ಸಿದ್ಧಾಂತದ ಪ್ರಮೇಯಗಳೆಲ್ಲ ಸುಲಲಿತವಾದ ಕನ್ನಡದಲ್ಲಿ ಹಾಡಾಗಿ ಹರಿದು ಕನ್ನಡಿಗರ ಬದುಕಿನಲ್ಲಿ ನೆಮ್ಮದಿಯನ್ನು ತರುವ ಸಾಹಿತ್ಯ ಶಕ್ತಿಯಾಯಿತು. ಕನ್ನಡ ದೇಸೀಯ ಛಂದೋ ವೈವಿಧ್ಯಗಳನ್ನು ಬಳಸಿಕೊಂಡು ಕೀರ್ತನೆ, ಉಗಾಭೋಗ ಸುಳಾದಿಗಳೆಂಬ ವಿಶಿಷ್ಟ ಪ್ರಕಾರಗಳಲ್ಲಿ ಈ ಸಾಹಿತ್ಯ ಶಕ್ತಿಯು ಪ್ರಕಟವಾಗಿ ಕನ್ನಡ ತವನಿಧಿಯನ್ನು ಶ್ರೀಮಂತಗೊಳಿಸಿತು

ಹರಿದಾಸ ಸಾಹಿತ್ಯದ ಈ ವಿಶಿಷ್ಟ ಪ್ರಕಾರಗಳಲ್ಲಿ 'ಕೀರ್ತನೆಗಳು' ವಿಶಿಷ್ಟ ಆಕರ್ಷಣೆಯಿಂದ ಕೂಡಿವೆ. ಅವುಗಳನ್ನು ದೇವರ ನಾಮಗಳಿಂದೂ ಪದಗಳೆಂದೂ ಕರೆಯುತ್ತಾರೆ. ರಚನೆಯ ದೃಷ್ಟಿಯಿಂದ ಪಲ್ಲವಿ, ಅನುಪಲ್ಲವಿ ಮತ್ತು ನುಡಿಗಳು ಎಂಬ ತ್ರಿಧಾತುಗಳಿಂದ ಕೂಡಿದ್ದು ಕೀರ್ತನೆಯ ಬಾಹ್ಯಸ್ವರೂಪ. ಹರಿದಾಸರು ತಾವು ಕಂಡುಂಡ ಸತ್ಯವನ್ನು ಪಲ್ಲವಿಯಲ್ಲಿ ಹೇಳಿ ಮುಂದೆ ಅನುಪಲ್ಲವಿ ಹಾಗೂ ನುಡಿಗಳಲ್ಲಿ ಆ ಸತ್ಯವನ್ನು ಸಮರ್ಥಿಸಲು ಯತ್ನಿಸುತ್ತಾರೆ. ಈಪ್ರಯತ್ನದಲ್ಲಿ ಅವರ ಮನಸ್ಸು ಸಹಜವಾಗಿಯೇ ಜಾನಪದ ಧಾಟಿಗೆ ಒಲಿದು, ಜನಪರವಾಗಿಯೇ ಅವರ ಸಾಹಿತ್ಯವು ರೂಪತಾಳಿ ಬದುಕಿಗೆ ಅರ್ಥವನ್ನು ಕಲ್ಪಿಸಿಕೊಡುತ್ತದೆ. ಈ ಹರಹಿನಲ್ಲಿಕೀರ್ತನೆಗಳು ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಮತ್ತು ಆತ್ಮ ನಿವೇದನಗಳೆಂಬ ನವವಿಧ ಭಕ್ತಿಯನ್ನೊಳಗೊಂಡು ದಾಸ್ಯ, ಸಖ್ಯ, ಮಧುರ, ವಾತ್ಸಲ್ಯ ಮತ್ತು ಶಾಂತಗಳೆಂಬ ಪಂಚವಿಧ ಭಾಗಗಳನ್ನು ಪ್ರತಿಪಾದಿಸುತ್ತಲೇ ಆಧ್ಯಾತ್ಮಿಕ ದೃಷ್ಟಿಯನ್ನು ಬೆಳೆಸುತ್ತವೆ. ಜೊತೆಗೆ ಜನಸಾಮಾನ್ಯರ ಲೋಪ ದೋಷಗಳನ್ನೂ, ಆಚಾರ ವಿಚಾರಗಳಲ್ಲಿಯ ಕುಂದು ಕೊರತೆಗಳನ್ನೂ ನಿರ್ದಾಕ್ಷಿಣ್ಯವಾಗಿ ಎತ್ತಿ ತೋರಿಸುತ್ತವೆ. ಇಲ್ಲಿರುವ ಶೃತಿ ಸುಭಗವಾದ ಮಾತುಗಳು, ಮನಮಿಡಿವ ನಾದ ಮಾಧುರ್ಯ ಮತ್ತು ಆಧ್ಯಾತ್ಮಿಕ

ದೃಷ್ಟಿಗಳು ತ್ರಿವೇಣಿ ಸಂಗಮವಾಗಿ ಸಾಧಕನಿಗೆ ನಿಚ್ಚಳ ಮಾರ್ಗದರ್ಶನವನ್ನು ನೀಡುತ್ತವೆ. ಈ ಕೀರ್ತನೆಗಳಲ್ಲಿ ಬಹುಪಾಲು ಭಕ್ತಿಯ ಭಾವಗೀತೆಗಳೇ ಆಗಿರುವುದರಿಂದ, ಸಾಧಕನು ಸಂಪೂರ್ಣವಾಗಿ ಭಕ್ತಿ ತರಂಗಿಣಿಯಲ್ಲಿ ಮುಳುಗಿ ಎದ್ದು ಬಂದವನಾಗುತ್ತಾನೆ. ಇಂಥ ವಿಶಿಷ್ಟವಾದ ಸಂಸ್ಕಾರದಿಂದಾಗಿ ಸಾಧಕನು ಆತ್ಮ ಪರಿಶೀಲನೆಗೆ ತೊಡಗಿ ತನ್ನ ಮುಂದಿನ ಬದುಕನ್ನು ಇನ್ನಷ್ಟು ಚೇತೋಹಾರಿಯಾಗಿ ಇಟ್ಟುಕೊಳ್ಳುತ್ತಾನೆ. ಉಪಲಬ್ಧತೆಯನ್ನು ಅನುಸರಿಸಿ ಈ ಪರಂಪರೆಯಲ್ಲಿ ಶ್ರೀಪಾದ ರಾಯರ ಹೆಸರನ್ನೇ ಮೊದಗೆ ತೆಗೆದುಕೊಂಡರೂ ಪುರಂದರ, ಕನಕರು, ಈ ಪರಂಪರೆಯನ್ನು ಅಪಾರವಾಗಿ ವಿಸ್ತರಿಸಿದರು. ಮುಂದೆ ಅದು ಮಹಿಪತಿರಾಯರ ಹಾಗೂ ವಿಜಯದಾಸರ ಕಾಲದಲ್ಲಿ ಈ ಸಾಹಿತ್ಯವು ಇನ್ನಷ್ಟುವಿಸ್ತಾರಗೊಂಡು, ಅನುಕಾಲದ ಬದುಕಿನ ಉದ್ದ ಅಗಲಗಳಿಗೆ, ಆಳ, ಎತ್ತರಗಳಿಗೆ ಅಂತರಂಗದ ಕದವನ್ನು ತೆಗೆಯಿಸುವುದರಲ್ಲಿ ಸಮರ್ಥವಾದ ನೆರವನ್ನು ನೀಡಲು ಸಾಧ್ಯವಾಯಿತು. ಅಂತೆಯೇ ಈ ಪರಂಪರೆಯು ಇಂದಿಗೂ ಒಮ್ಮೊಮ್ಮೆ ಗುಪ್ತಗಾಮಿನಿಯಾಗಿ, ಮತ್ತೊಮ್ಮೆ ಪ್ರಕಟವಾಗಿ ತನ್ನ ಸತ್ವವನ್ನು ಬೀರುತ್ತಾ ಜನ ಬದುಕಿಗೆ ಸ್ಪಂದಿಸಿ ಇಂಬು ನೀಡುವಲ್ಲಿ ಹಿಂದೆ ಬಿದ್ದಿಲ್ಲ.

ಹರಿದಾಸ ಸಾಹಿತ್ಯದಲ್ಲಿ ಜನಪ್ರಿಯವಾದ ಎರಡನೆಯ ಪ್ರಕಾರ ಉಗಾಭೋಗ. ಹರಿದಾಸರು ತಮ್ಮ ಭಕ್ತಿ ಹಾಗೂ ಅನುಭವಗಳನ್ನು ಬಣ್ಣಿಸಲು ಬಳಸಿಕೊಂಡ ಗಾಯನ ರೂಪದ ಮಾಧ್ಯಮ. ರಚನೆಯ ದೃಷ್ಟಿಯಿಂದ ಕೀರ್ತನೆ ಮತ್ತು ಸುಳಾದಿಗಿಂತ ಭಿನ್ನ ಸ್ವರೂಪ- ರಾಗದ ಕಟ್ಟಿಗಾಗಲೀ ತಾಳದ ಬಂಧನಕ್ಕಾಗಲೀ ಒಳಪಟ್ಟಿಲ್ಲ. ನುಡಿಗಳ ಅಡಿಪಡೆಗಳಿಲ್ಲ. ಪಾದಗಳ ನಿಯತತೆ ಇಲ್ಲ. ರಾಗ ಪ್ರಧಾನವಾದ ಸಂಗೀತದ ತಳಹದಿಯ ಮೇಲೆ ರೂಪಿತವಾದ ಪುಟ್ಟ ರಸಘಟ್ಟಿ : ದ್ವಿತೀಯ ಪ್ರಾಸದಿಂದ ಭಾವದ ಓಟಕ್ಕೆ ಚೆಲುವು, ಇಲ್ಲಿದೆ. ಇಂತಹ ಉಗಾಭೋಗಗಳು ಒಂದೊಂದು ಒಂದೊಂದು ಪ್ರತ್ಯೇಕ ಮುಕ್ತಕಗಳು. ಇವು ಶುದ್ಧ ಸಾಹಿತ್ಯದ ದೃಷ್ಟಿಯಿಂದ ಅಮೂಲ್ಯವಾದುವು. ಏಕೆಂದರೆ, ಉಗಾಭೋಗಗಳಲ್ಲಿ ಮಿತವಾದ ಮಾತು, ಹಿತವಾದ ರೀತಿ, ಉತ್ಕಟವಾದ ಅನುಭವ ಇವುಗಳಿಂದ ಕೂಡಿ ಆತ್ಮ ಸಂಸ್ಕಾರಕ್ಕೂ ಎಡೆಮಾಡಿಕೊಡುತ್ತದೆ. ಇದರಿಂದಾಗಿ ಪರಿಣಾಮ ಆನಂದಬಾಷ್ಪ, ಈ ಪ್ರಕಾರವನ್ನು ಸಾಧಾರಣವಾಗಿ ಎಲ್ಲ ಹರಿದಾಸರು ಬಳಸಿದ್ದಾರೆ. ಹರಿದಾಸ ಸಾಹಿತ್ಯದಲ್ಲಿ ಜನಪ್ರಿಯವಾದ ಮೂರನೆಯ ಪ್ರಕಾರವೆಂದರೆ 'ಸುಳಾದಿ! ಕೀರ್ತನೆಗಳು. ಉಗಾಭೋಗಗಳಂತೆ ಹರಿದಾಸ ಸಾಹಿತ್ಯದ ಸುಳಾದಿಗಳು ಕನ್ನಡಸಾಹಿತ್ಯಕ್ಕೆ ಹರಿದಾಸರ ವಿಶಿಷ್ಟ ಕೊಡುಗೆಗಳು. 'ಸುಳಾದಿ' ಎಂದರೆ 'ಪರಮಾತ್ಮನನ್ನು ಕಾಣುವ ಸುಲಭವಾದ ಹಾದಿ' ಎಂದು ಸುಲಭವಾಗಿಯೇ ಹೇಳಿಬಿಡುತ್ತಾರೆ. ಆದರೆ ಇಷ್ಟೇ ಅರ್ಥದಿಂದ ಸುಳಾದಿಗೆ ಸೊಗಸು ಬರಲಾರದು. ಏಕೆಂದರೆ ಸುಳಾದಿಗೆ ಸಂಗೀತಶಾಸ್ತ್ರದ, ದೊಡ್ಡ ಹಿನ್ನೆಲೆಯೇ ಇದೆ ಸಂಗೀತ ಶಾಸ್ತ್ರದ

ಪ್ರಕಾರ ತಾಳ ಪ್ರಧಾನವಾದ ಸುಳಾದಿಯ ಬಂಧವು ಧ್ರುವ, ಮಠ್ಯ, ರೂಪಕ, ಝಂಪಕ, ತ್ರಿಪುಟ, ಅಟ್ಟತಾಳ ಮತ್ತು ಏಕತಾಳ ಎಂಬ ಸಪ್ತ ತಾಳಗಳಿಂದ ಕೂಡಿರುತ್ತದೆ. ಹಲವು ಬಾರಿ ಐದು ತಾಳಗಳಲ್ಲಿಯೇ ಈ ಬಂಧವು ಸೊಗಸು ನೀಡುತ್ತದೆ. ಈ ಸುಳಾದಿಯ ಬಂಧದ ಕೊನೆಯಲ್ಲಿ ಜತೆ ಎಂಬ ಎರಡು ಸಾಲುಗಳಿರುತ್ತದೆ. ಈ ಸಾಲುಗಳಲ್ಲಿಸುಳಾದಿಯ ಸಾರವೆಲ್ಲ ಅಡಕಗೊಂಡಿರುತ್ತದೆ. ಇಲ್ಲಿಯೂ ಉಗಾಭೋಗಗಳಂತೆ ಪಾದಗಳನಿಯತಿ ಇಲ್ಲ. ಈ ಬಂಧದಲ್ಲಿ ಜಟಿಲವಾದ ತತ್ವಾರ್ಥವು ಸಾಹಿತ್ಯವು ಸುಧಾರಿಸಿದೊಡನೆ ಬೆರೆತು ಅದು ಬುದ್ಧಿಗೆ ಕಾವನ್ನು ಮುಟ್ಟಿಸುತ್ತದೆ. ಚಿಂತನದ ಮುಖಾಂತರ ಹೃದಯಕ್ಕೆ ತತ್ವಾರ್ಥಭಾವವು ಅಪ್ಯಾಯಮಾನವಾಗುತ್ತದೆ. ಸರಳ ರಗಳೆಯಂತೆ ಈ ಬಂಧದ ಓಟವಿದ್ದು, ಇದರ ನಡಿಗೆಯಲ್ಲಿ ವೇದೋಪನಿಷತ್ತುಗಳ ಸಾರಸಂಗ್ರಹವೇ ಸುಳಿಸುಳಿಯಾಗಿ ಬಿಟ್ಟಿರುವುದರಿಂದ ಪೂರ್ಣಪ್ರಜ್ಞೆಯ ಕಡೆಗೆ ಸಾಧಕನನ್ನು ನಿರಾಯಾಸವಾಗಿ ನಡೆಸುತ್ತದೆ. ಇಲ್ಲಿಯ ಎಲ್ಲ ಮಾತುಗಳು ಸೂತ್ರಪ್ರಾಯವಾಗಿದ್ದು ಮುಂಬರುವ ಬದುಕಿನ ಬೆಳಕಿನ ಕಿರಣಗಳಾಗಿ, ಸದಾ ಬೆಳಕು ನೀಡುತ್ತದೆ. ಈ ಬಂಧದ ವಿಸ್ತಾರದಲ್ಲಿ ಹರಿದಾಸರ ಮಧುರಭಾವ, ದಾಸ್ಯಭಾವ ಪರಮಾತ್ಮನ ಮಹತ್ವ, ಗುರು ಕರುಣೆಯ ಮಹತ್ವ, ಹರಿನಾಮ ಮಹಿಮೆ, ನಿಂದಾಸ್ತುತಿ, ಆತ್ಮ ನಿವೇದನೆ ಮೊದಲಾದವು ಧಾರಾಳವಾಗಿ ಮಿಳಿತವಾಗಿದ್ದು ಹರಿದಾಸರ ಸ್ವಾನುಭಾವದ ಆಲೋಚನಾಪರ ನಿಶ್ಚಿತತೆಗೆ ಸ್ಪಷ್ಟ ನಿಲುವನ್ನು ತೋರಿಸುತ್ತವೆ.

ಹೀಗೆ ಹರಿದಾಸ ಸಾಹಿತ್ಯವು ವಿಶೇಷವಾಗಿ ಈ ಮೂರು ಪ್ರಕಾರಗಳಲ್ಲಿ ಅಸಂಖ್ಯಾತ ರಚನೆಗಳನ್ನು ನೀಡಿದ್ದು, ಇದೆಲ್ಲ ಕನ್ನಡ ತವನಿಧಿಯ ವಿಶಿಷ್ಟ ಸಂಪತ್ತು. ರಾಜಾಶ್ರಯವಿಲ್ಲದೆ ಗುಡಿಸಲಿನಲ್ಲಿಯೂ ಬದುಕಿನ ಬಗ್ಗೆ ವಿಶ್ವಾಸವನ್ನು ಮೂಡಿಸಿದ ಆಗಾಧ ಶಕ್ತಿ. ಈ ದಿಸೆಯಲ್ಲಿ ಸುಮಾರು ಕ್ರಿ.ಶ. ೧೫೦೦ ರಿಂದ ೧೬೪೦ರ ಅವಧಿಯಲ್ಲಿ ಶ್ರೀಪಾದರಾಯರು, ವ್ಯಾಸರಾಯರು, ವಾದಿರಾಜರು, ಪುರಂದರದಾಸರು, ಕನಕದಾಸರು, ವೈಕುಂಠದಾಸರು ಮೊದಲಾದವರು ತಮ್ಮ ಕೊಡುಗೆಗಳನ್ನು ನೀಡಿ ಹರಿದಾಸ ಸಾಹಿತ್ಯ ಪರಂಪರೆಗೆ ಭದ್ರ ಬುನಾದಿಯನ್ನು ಹಾಕಿದರು. ಮುಂದೆ ಮಹಿಪತಿರಾಯರು ದೇಸಿಯ ಭಾಷಾ ಸಂಪತ್ತಿನಿಂದ ತಮ್ಮ ಕೊಡುಗೆಗಳನ್ನು ನೀಡುತ್ತ ಈ ಪರಂಪರೆಯನ್ನು ಮುಂದುವರೆಸಿದರು. ಇದೇ ಸಂದರ್ಭದಲ್ಲಿ ವಿಜಯದಾಸರು ದೊಡ್ಡದಾದ ಹರಿದಾಸರ ಬಳಗವನ್ನೇ ನಿರ್ಮಾಣ ಮಾಡಿದರು. ಗೋಪಾಲದಾಸರು, ಮೋಹನದಾಸರು, ಹೆಳವನ ಕಟ್ಟೆ ಗಿರಿಯಮ್ಮ, ಪ್ರಸನ್ನವೆಂಕಟದಾಸರು, ಪ್ರಾಣೇಶದಾಸರು, ಆನಂದದಾಸರು ಮೊದಲಾದವರು ಆ ಬಳಗವನ್ನು ಮುಂದೆ ಸಾಗಿಸಿಕೊಂಡೇ ಬಂದರು. ಮುಂದುವರೆದು ಆಧುನಿಕ ಕಾಲವೆಂದು ಕರೆಸಿಕೊಳ್ಳುವ ಈ ಕಾಲದಲ್ಲಿಯೂ ಗುರುಗೋವಿಂದ ದಾಸರು, ಶ್ಯಾಮಸುಂದರ ದಾಸರು, ಆಸಗಿ ಹಾಳದಾಸರು, ಪಿಂಜಾರ ಬಡೇಸಾಬರು (ರಾಮದಾಸರು) ಆ ಪರಂಪರೆಯನ್ನು ಬೆಳೆಸಿಕೊಂಡು ಬಂದಿದ್ದಾರೆ.

ಇದುವರೆಗಿನ ಹರಿದಾಸ ಸಾಹಿತ್ಯದ ವಿಶ್ಲೇಷಣೆಯಲ್ಲಿ ಬಂದ ಹರಿದಾಸರೆಲ್ಲರೂ ಶಾಸ್ತ್ರಾರ್ಥಗಳನ್ನು ತಿಳಿದುಕೊಂಡ ಸಾಹಿತ್ಯವನ್ನು ನಿರ್ಮಿಸಿ ಹಾಡಿದವರು. ತತ್ಪರಿಣಾಮವಾಗಿ ಇವರ ರಚನೆಗಳನ್ನು 'ಹರಿದಾಸರು' ಇಲ್ಲವೆ 'ದಾಸರು' ಎಂಬ ಪಂಗಡದವರು ಏಕತಾರಿಯ ಹಿನ್ನೆಲೆಯಲ್ಲಿ ಕೇರಿಕೇರಿಗೆ ಹೋಗಿ ಹಾಡುತ್ತ ಬದುಕಿನ ಮೌಲ್ಯವನ್ನು ತಿಳಿಸುವ ಲೋಕ ಕಾರ್ಯವನ್ನು ಮಾಡುತ್ತ ಬಂದರು. ಆದರೆ ಈ ಪಂಗಡದವರಿಂದು ಮಾಯವಾಗತೊಡಗಿದ್ದಾರೆ. ಈ ಪಂಗಡದವರ ಸ್ವಂತ ರಚನೆಗಳಿನ್ನೂ ಲಭ್ಯವಾಗಿಲ್ಲ.

ವಿಶೇಷವಾಗಿ ನಡುಗನ್ನಡ ಸಾಹಿತ್ಯದ ವಿಸ್ತಾರದ ಹರಹಿನಲ್ಲಿ ಅಸಂಖ್ಯಾತವಾಗಿ ಹರಿದಾಸರು ಕಾಣುತ್ತಾರೆ. ಅವರೆಲ್ಲರೂ ವೇದೋಪನಿಷತ್ತು, ರಾಮಾಯಣ, ಭಾಗವತ ಮತ್ತು ಮಹಾಭಾರತಗಳನ್ನು ತಿಳಿದುಕೊಂಡವರು. ಚಿಂತನೆಗೆ ತೊಡಗಿ ಆ ಎಲ್ಲದರ ಮತಿತಾರ್ಥವನ್ನು ಕಂಡುಂಡು ಅದನ್ನೆಲ್ಲ ಪ್ರಪಂಚದ ಜನ ಬದುಕಿನ ಸೊಗಸಿಗಾಗಿ ಜನಪದ ಭಾಷೆಯಲ್ಲಿ ಹರಿದಾಸ ಸಾಹಿತ್ಯದ ಮುಖಾಂತರ ಹಂಚಿಬಿಟ್ಟವರು. ಹೀಗೆ ತಮ್ಮ ಅನುಭವಗಳನ್ನು ಸಾಹಿತ್ಯಕ್ಕಿಳಿಸಿ ಹಂಚಿಬಿಡುವಾಗ ಆ ಎಲ್ಲರಲ್ಲಿ ಸರ್ವಸಮರ್ಪಣಾ ಭಾವವು ತುಂಬಿ ತುಳುಕುತ್ತಿರುತ್ತದೆ. ಅದೇ ಅವರ ಸಾಹಿತ್ಯದಲ್ಲಿಯೂ ಛಾಪಿಸಿ ಅಪರೂಪವಾದ ಅನುಭವವನ್ನು ನೀಡುತ್ತದೆ.ಹೀಗೆ ಇದೆಲ್ಲ ಬತ್ತದ ತುಂಗಭದ್ರೆಯಾಗಿದ್ದುದು ಕಂಡುಬರುತ್ತದೆ. ಅದು ಹೇಗೆ ಎಂದರೆ, ಹರಿದಾಸರು ತಮ್ಮ ಕೃತಿಗಳನ್ನು ಮುಗಿಸುವಾಗ ಕೊನೆಗೆ ತಮ್ಮ ತಮ್ಮ ಅಂಕಿತಗಳನ್ನು ಹೇಳಿರುತ್ತಾರೆ. ಆ ಅಂಕಿತವೆಂದರೆ, ಜನಸ್ವರೂಪಿಯಾಗಿರುವ ಅರ್ಥಾತ್ ಜನನಾರಾಯಣನಾದ ವಿಟ್ಠಲನು ಅವರ ಆರಾಧ್ಯ ದೇವತೆ. ಆ ವಿಟ್ಠಲನಲ್ಲಿ ಜಗತ್ತನ್ನೆ ಕಾಣುವ ದೃಷ್ಟಿ ಹರಿದಾಸರದು. ಅಂತೆಯೇ ಅವರ ಕೃತಿಗಳೆಲ್ಲ ಆ ಅಂಕಿತ ಸ್ವರೂಪಿ ಪರಮಾತ್ಮನಿಗೆ ಸಮರ್ಪಿತ: ಇದು ಸಂಕುಚಿತ ಮನೋಭಾವನೆಗಳನ್ನು ಮೆಟ್ಟಿನಿಂತ ವಿಶಾಲ ಮನೋ ವೈಶಾಲ್ಯದ ಪ್ರತೀಕ.

# ದಿಕ್ಕು ತಪ್ಪಿಸಿದ ದಾರಿಗಳು

- ದು.ನಿಂ. ಬೆಳಗಲಿ

ನಮ್ಮ ದೇಶದಲ್ಲಿರುವಷ್ಟು ಧರ್ಮವೈವಿಧ್ಯತೆ ಜಗತ್ತಿನ ಬೇರಾವ ದೇಶಗಳಲ್ಲಿಯೂ ಇಲ್ಲ. ಈಮಾತು ಕೇವಲ ಧರ್ಮಕಷ್ಟೇ ಸೀಮಿತವಾಗಿಲ್ಲ. ವಿವಿಧ ಸಂಸ್ಕೃತಿ, ವಿವಿಧ ಭಾಷೆ, ವಿವಿಧ ವೇಷ, ವಿವಿಧ ಆಹಾರ ಹೀಗೆ ವೈವಿಧ್ಯಮಯ ವರ್ಣರಂಜಿತವಾದ ಭಾರತ ದೇಶವು ಧಾರ್ಮಿಕ ಅರ್ಥದಲ್ಲಿ ದಾರಿತಪ್ಪಿ ನಡೆದಂತಿದೆ. ಈ ಹಿಂದೆ ಕೂಡ ಧರ್ಮದ ಹೆಸರಿನಲ್ಲಿ ದೇಶಕ್ಕೆ ಆದ ಹಿತಕ್ಕಿಂತ ಅಹಿತವೇ ಹೆಚ್ಚಾಗಿದೆ. ಭಾರತೀಯ ಧರ್ಮಗಳೇ ಆಗಲಿ, ವಿಶ್ವದ ಇನ್ನಾವ ಧರ್ಮಗಳೇ ಆಗಲಿ ಮೂಲ ಸೂತ್ರದಲ್ಲಿ ನೀತಿಮಾರ್ಗವನ್ನೇ ಹೇಳುತ್ತದೆ ಹೊರತು, ಮನುಷ್ಯ ಧರ್ಮಕ್ಕೆ ಅಹಿತಕಾರಕ ಮಾತನ್ನು ಎಲ್ಲಿಯೂ ಹೇಳಿಲ್ಲ. ಜನಾಂಗ ವಿಭೇದ ನೀತಿಯ ಬಗೆಗೂ ಉಸುರಿಲ್ಲ. ಭೇದ-ಭಾವ, ಉಚ್ಛ-ನೀಚ ನೀತಿಯನ್ನೂ ಎತ್ತಿಲ್ಲ. ಆದರೂ ಕೂಡ ನಾವಿಂದು ಧರ್ಮದ ಹೆಸರಿನಲ್ಲಿ ಹೆಚ್ಚಾಗಿ ಅಧಾರ್ಮಿಕ ಕೃತ್ಯಗಳನ್ನು ಎಸಗುತ್ತಿದ್ದೇವೆ. ಈ ಧರ್ಮದ ದಾರಿಗಳು ನಮ್ಮ ದಿಕ್ಕನ್ನು ತಪ್ಪಿಸಿ ಎತ್ತಲೋ ಸಾಗಿಸಿಕೊಂಡು ನಡೆದಿವೆ. ಇದಕ್ಕೆಲ್ಲ ಮೂಲ ಕಾರಣ ಪ್ರಾಮಾಣಿಕ ಪ್ರಜ್ಞೆಯ ಅಭಾವ. ನಾವು ಧರ್ಮಗಳನ್ನು ವಿಶ್ಲೇಷಿಸಿ, ಅವುಗಳ ತಿರುಳನ್ನು ಅರಿತು ಪ್ರಾಮಾಣಿಕವಾಗಿ ನಡೆದರೆ ಮಾತ್ರ ಮಹಾನುಭಾವರಾದ ಧರ್ಮ ಸಂಸ್ಥಾಪಕರ ಹೃದಯವನ್ನು ತಿಳಿದಂತೆ ಸರಿ. ಈಗ ಜಾತಿಯ ಹೆಸರಿನಲ್ಲಿ ಧರ್ಮಲಂಡರಾಗಿ ನಡೆಯುತ್ತಿರುವುದು ಹೇಗೊ ನಮಗೆ ವೈಯಕ್ತಿಕವಾಗಿ ಹಾನಿಯಾಗಿದ್ದು, ಇದರಿಂದ ನಮ್ಮ ರಾಷ್ಟ್ರಕ್ಕೂ ಘಾತಕ ಎಂಬುದನ್ನು ಮರೆತು ನಡೆದಿದ್ದೇವೆ. ಈ ಬಗೆಗೆ ಅರಿವಿದ್ದರೂ ಕೂಡ, ಸಂಕುಚಿತ ದೃಷ್ಟಿಯನ್ನು ತೊಡೆದು ಹಾಕದಂತಹ ಜಾತಿಯ ದುರಭಿಮಾನಕ್ಕೆ ಪಕ್ಕಾಗಿದ್ದೇವೆ.

ಧರ್ಮದ ಮಾತು ಬಂದರೆ ಜಾತಿಯ ಪರಿಮಿತಿ ಹಾಕುವ ರೂಢಿ ಬೆಳೆದು ಬಂದಿದೆ. ಇಂದು ಭಾರತ ದೇಶ ಜಾತ್ಯಾತೀತ ರಾಷ್ಟ್ರ. ಆದರೂ ಎಲ್ಲ ಕೋಮಿನವರು ತಮ್ಮ ತಮ್ಮ ಜಾತಿಯ ಸಂಪ್ರದಾಯಗಳನ್ನು ಅನುಸರಿಸುವ ಸ್ವಾತಂತ್ರ್ಯವಿದೆ. ಆದರೆ ಧರ್ಮದ ಹೆಸರಿನಲ್ಲಿ ಜಾತಿ ಮುಂದೆ ಮಾಡಿಕೊಂಡು ಸಾಗುತ್ತಿರುವ ಈ ಜನತಾ ಪ್ರವಾಹದ ನೀರು ತಿಳಿ ಮತ್ತು ಪರಿಶುದ್ಧವಾಗಿಲ್ಲ. ಧರ್ಮ-ಜಾತಿಗಳ ಹೆಸರಿನಿಂದ ಅಪ್ರಾಮಾಣಿಕತೆ, ಮೋಸ ತುಂಬಿಕೊಂಡು ಈ ಮಹಾ ಪ್ರವಾಹ ರಾಡಿ

ರೊಜ್ಜು ಕೊಳಚೆಯಾಗಿ ಉಸಿರುಗಟ್ಟುವಂತೆ ದುರ್ನಾತ ಬೀರುತ್ತಲಿದೆ. ಇದಕ್ಕೆ ತತ್‌ಕ್ಷಣ ಬೇಕಾದ ಚಿಕಿತ್ಸೆ ಅಂದರೆ, ಪ್ರಾಮಾಣಿಕತೆ, ಸತ್ಯವಂತಿಕೆಯ ಔಷಧವೇ ಹೊರತು ಬೇರೆ ಮತ್ತೇನಲ್ಲ.

ನಮ್ಮ ದೇಶವಲ್ಲಿ ಬುದ್ಧನನ್ನು ಮೊದಲು ಮಾಡಿಕೊಂಡು, ಬಸವಣ್ಣನವರಿಂದ ಗಾಂಧೀಜಿವರಗೆ ಇದೇ ರೀತಿ ಧಾರ್ಮಿಕ ಪರಿಶುದ್ಧತೆಗಾಗಿ ಚಿಕಿತ್ಸೆ ನಡೆದರೂ ಕೂಡ, ಧರ್ಮಕ್ಕೆ ಅಂಟಿಕೊಂಡ ಈ ಏಡಿಗಂತಿ ರೋಗಕ್ಕೆ ಜಾತಿ-ಒಳಜಾತಿಗಳ ಪೂರಕವಾಗಿ ರೋಗವನ್ನು ಇನ್ನೂ ಬೆಳೆಸುತ್ತವೆ.

ಪ್ರಮಾಣಿಕವಾಗಿ ಮಾನವ ಜಾತಿಯ ಕಲ್ಯಾಣವನ್ನು ಬಯಸುವವರು, ನಿಜವಾದ ದರ್ಮದ ತಿರುಳನ್ನು ಅರಿತು ಜಾತಿಯ ಅಂಟು ರೋಗದಿಂದ ನಮ್ಮ ದೇಶವನ್ನು ವಿಮುಕ್ತಗೊಳಿಸಬೇಕಾಗಿದೆ. ಅದರಂತೆ ಧರ್ಮದ ಸತ್ಯತೆಯನ್ನು ಅರಿಯುವುದು ಪ್ರಜ್ಞಾವಂತ ನಾಗರಿಕರ ಕರ್ತವ್ಯವೂ ಆಗಿದೆ. ಈಗ ದಿಕ್ಕುತಪ್ಪಿದ ದಾರಿಗಳಿಂದ ನಾವು ಜನತಾ ಕಲ್ಯಾಣದ ನೇರ ರಸ್ತೆಗೆ ಬರಬೇಕಾಗಿದೆ.

ಭಾರತೀಯರಿಗೂ ತಮ್ಮ ಧರ್ಮಾಚರಣೆಯ ಸ್ವಾತಂತ್ರ್ಯವಿದೆ. ಅವರ ಧಾರ್ಮಿಕ ಆಚರಣೆ ಬೇರೊಬ್ಬರಿಗೆ ಧಕ್ಕೆಯನ್ನುಂಟು ಮಾಡಬಾರದು. ಸರಿ ಆದರೆ ಬಹಳಷ್ಟುಜನ ಧಾರ್ಮಿಕರು ಉದರ-ವಿರಾಗಿಗಳು, ಢಾಂಬಿಕ ವೃತ್ತಿಯವರು. ಆಡಂಬರಕ್ಕೆ ಸೋಗು ಹಾಕುವ ಈ ವೃತ್ತಿ ಅವರಿಗೆ ಅರಿಯದೇನೊ, ಅರಿಯದೇನು? ಅರಿತೂ ಅಷ್ಟು ವಿಚಿತ್ರವಾಗಿ ವರ್ತಿಸುತ್ತಾರೆ ಈ ಧರ್ಮನಿಷ್ಟ ಪಾತ್ರದಾರಿ ವ್ಯಕ್ತಿಗಳು

ಓರ್ವ ಅಧಿಕಾರಿ ತುಂಬ ಧರ್ಮನಿಷ್ಠ. ಸ್ನಾನ-ಪೂಜೆ, ಪುನಸ್ಕಾರ, ಮಡಿ-ಮೈಲಿಗೆ ಚಾಚೂ ತಪ್ಪದೆ ಆಚರಿಸುವ ಶ್ರದ್ಧಾಳು. ಆರಾಧ್ಯ ದೈವದ ಪೂಜೆಯಿಲ್ಲದೆ ಬಾಯಲ್ಲಿ ಒಂದು ಹನಿ ನೀರು ಕೂಡ ಹಾಕದಂಥ ಶಿಷ್ಟಾ ಆಚಾರವಂತ. ಒಮ್ಮೆ ಕರ್ತವ್ಯದ ಮೇಲೆ ಒಬ್ಬರಲ್ಲಿ ಹೋಗಿದ್ದು, ಸ್ನಾನ ಮುಗಿಸಿ, ಲಿಂಗ ಪೂಜೆಗೆ ಸಿದ್ಧಮಾಡಿಕೊಂಡು ವಿಭೂತಿ ಪಡೆದು 'ಈ ವಿಭೂತಿಗೆ ಸಂಸ್ಕಾರವಾಗಿದೆಯೆ ?' ಎಂದು ಮನೆಯವರನ್ನು ಕೇಳಿದ. ವಿಭೂತಿಗೆ ಸಂಸ್ಕಾರ ಮಾಡುವ ರೀತಿಯನ್ನು ಅರಿಯದವರು 'ಇಲ್ಲ' ಎಂದು ಹೇಳಿದರು.

'ಛೇ !, ಸಂಸ್ಕಾರವಾಗದ ಈ ವಿಭೂತಿಯನ್ನು ಧರಿಸಲಾರೆ, ಸಂಸ್ಕಾರವಿಲ್ಲದೆ ವಿಭೂತಿ ಧರಿಸುವುದು ಧರ್ಮಕ್ಕೆ ನಿಷಿದ್ಧ. ಹೀಗೆ ಮಾಡಬೇಡಿರಿ. ಯಾರಾದರೂ ಸ್ವಾಮಿಗಳಿಂದ ವಿಭೂತಿಗೆ ಸಂಸ್ಕಾರ ಮಾಡಿಸಿಕೊಂಡು ಬಿಡಿರಿ' ಎಂದು ಉಪದೇಶವನ್ನು ನಿರರ್ಗಳವಾಗಿ ತೂರಿ ಅನಂತರ ಹೇಗೊ ಲಿಂಗ ಪೂಜೆಯನ್ನು ಮುಗಿಸಿ ಆಮೇಲೆ ತನ್ನ ಉದರ ಪೂಜೆ ಪೂರೈಸಿಕೊಂಡ, ಇದರಲ್ಲಿ ಒಂದು ಮೂಲಭೂತ ಪ್ರಶ್ನೆ ಮೂಡಿ ನಿಂತಿದೆ.'ಇಂಥ' ಧರ್ಮ ಶ್ರದ್ಧಾಳುಗಳದು ಎಂಥ ಮೋಸಗಾರಿಕೆ. ಸಂಸ್ಕಾರವಾಗದ

ಆ ವಿಭೂತಿ ಧರಿಸಲು ನಿಷಿದ್ಧ ಎಂದು ಹೇಳುವ ಪ್ರಜ್ಞಾವಂತ, ಪ್ರಮಾಣಿಕನಾಗಿದ್ದರೆ ಆತನ ಆಚಾರ ವಿಚಾರ ನೀತಿಗೆ ಬೆಲೆ ಬರುತ್ತಲಿತ್ತು. ಆದರೆ ಆತ ಅಪ್ರಾಮಾಣಿಕ. ಅಂದ ಬಳಿಕ ಆತನ ಧಾರ್ಮಿಕ ಆಚರಣೆಗಳೆಲ್ಲ ತೋರಿಕೆಯವು. ಆತ ಸರಕಾರಿ ಅಧಿಕಾರಿ, ಆತನಿಗೆ ಸರಕಾರ ಪ್ರಯಾಣ ಭತ್ಯೆ, ಇತರವೆಚ್ಚ ಎಲ್ಲವನ್ನೂ ಪೂರೈಸುತ್ತಲಿದ್ದರೂ ಕೂಡ, ಆತ ಅಪ್ರಾಮಾಣಿಕನಾಗಿ ಆ ಭತ್ಯೆಯನ್ನು ಪರರಿಂದ ಪಡೆದು ಜೇಬಿಗೆ ಸೇರಿಸುತ್ತಾನೆ. ಹೀಗೆ ಲಂಚ, ರುಷುವತ್ತುಗಳನ್ನು ಕಬಳಿಸುವ ಗಜಗಾತ್ರದ ಸರಕಾರಿ ನೌಕರರು ದೇವರು, ದಿಂಡರು, ಪೂಜೆ ಪುನಸ್ಕಾರವೆಂದು ಮಹಾಭಕ್ತರ ಸೋಗು ಹಾಕುವುದಿಲ್ಲವೆ ?

ಅಂದಬಳಿಕ ಜನ ಸಾಮಾನ್ಯರಲ್ಲಿ ಧರ್ಮದ ಬಗೆಗೆ ರೋಸಿಹೋಗಿ, ಪ್ರಾಮಾಣಿಕರನ್ನೂ ಕೂಡ ಸಂದೇಹ ದೃಷ್ಟಿಯಿಂದ ಕಾಣಲು ಅವಕಾಶವಾಗುತ್ತದೆ. ಹಾಗಾದರೆ ಈ ಅಧಿಕಾರಿಗಳು ಧರ್ಮದಲ್ಲಿ ನಿಷ್ಠೆ ಇಟ್ಟಂತೆ ಜನತೆಯ ಹಣವನ್ನು ಪ್ರಾಮಾಣಿಕವಾಗಿ ಉಪಯೋಗಿಸುತ್ತಿದ್ದರೆ, ಅವರು ನಿಜವಾದ ಧರ್ಮವಂತರು. ಪ್ರಾಮಾಣಿಕರಾದ ಧರ್ಮವಂತರು ನಮ್ಮ ದೇಶದಲ್ಲಿ ಅದೆಷ್ಟು ಜನರಿದ್ದಾರೆ? ಇಲ್ಲ, ಬಹಳಷ್ಟುಧರ್ಮನಿಷ್ಠ ಅಪ್ರಾಮಾಣಿಕರು ತುಂಬಿದ್ದಾರೆ. ಮೂಲಭೂತವಾದ ಪ್ರಾಮಾಣಿಕತೆಯ ನೀತಿಯನ್ನು ಅರಿಯದ (ಅರಿಯದೇನು ?) ಅರಿತೂ ಪ್ರಜೆಗಳ ಹಣಕ್ಕೆ ಮೋಸಮಾಡುವ ಇಂಥ ಅಪ್ರಾಮಾಣಿಕರಿಂದ ಯಾವ ಧರ್ಮ ಉದ್ಧಾರವಾಗಬಲ್ಲದು ? ಎಲ್ಲ ಧಾರ್ಮಿಕ ಮಹಾಪುರುಷರು ಹೇಳಿದ್ದು ಪರಿಶುದ್ಧ ಆಚರಣೆಯ ಬಗೆಗೆ ಹೊರತು ಅಧಾರ್ಮಿಕ ವೃತ್ತಿಯನ್ನಲ್ಲ. ಸರಕಾರಿ ಹಣ, ಪ್ರಜೆಗಳ ದುಡ್ಡು ಮೋಸಮಾಡಿ, ಧರ್ಮ ನಿಷ್ಠರಾಗಬೇಕೆಂದು ಯಾವ ಧರ್ಮವೂ ಉಪದೇಶಿಸಿಲ್ಲ. ಎಲ್ಲಿಯೂ ಹೇಳಿಲ್ಲ.

ಕೇವಲ ಮುಗ್ಧ ಮನಸ್ಸನ್ನು ಕೊಂದುಹಾಕಿ, ಧರ್ಮ ನಿಷ್ಠರಾಗಿ ನಡೆಯುವವರು ನಿಜವಾದ ಧಾರ್ಮಿಕ ಪುರುಷಲ್ಲ. ಅವರು ಇನ್ನೊಂದು ಅರ್ಥದಲ್ಲಿ ಕೊಲೆಘಾತಕರೆಂದರೆ, ಒಂದಿಷ್ಟುಬಿರುಸಾಗಬಹುದೇನೋ. ಆದರೂ ಈ ಮಾತು ದಿಟ, ಹಲವು ದಿನಗಳ ಹಿಂದೆ ವೇದವನ್ನೋದಿದ ಪ್ರಕಾಂಡ ಪಂಡಿತರೊಬ್ಬರು ತಮ್ಮ ಚಿಕ್ಕ ವಯಸ್ಸಿನ ವಿಧವಾ ಸೊಸೆಯ ತಲೆಗೂದಲುಗಳನ್ನು ಒತ್ತಾಯ ಪೂರ್ವಕವಾಗಿ ತೆಗೆಸಿ ಹಾಕಿದರಂತೆ. ಇದು ತಮ್ಮ ಧಾರ್ಮಿಕ ರೀತ್ಯ ಅನುಗುಣವಾಗಿರಬಹುದು. ಅವರ ಸಂಪ್ರದಾಯದಲ್ಲಿ ಅವಕಾಶವಿರಬಹುದು ಸರಿ. ಆದರೆ ಮನುಷ್ಯನೆಂದ ಬಳಿಕ ಮನುಷ್ಯರ ಮಾನಸಿಕ ತುಡಿತಕ್ಕೂ ಬೆಲೆ ಕೊಡದೆ ಇದ್ದರೆ, ಈ ರೀತಿ ಉದ್ದೇಶಿಸುವ ಧಾರ್ಮಿಕ ಗ್ರಂಥಗಳನ್ನು ಹೊಳೆಯಲ್ಲಿ ಮುಳುಗಿಸಬೇಕು.

ಕಾಲಾಂತರದಂತೆ ಧರ್ಮ ಪರಿವರ್ತನೆ ಆಗುತ್ತಲೆ ಇರುತ್ತದೆ. ರೂಢಿ ಸಂಪ್ರದಾಯಗಳೂ, ಆಚಾರ ವಿಚಾರಗಳೂ ಬದಲಾಗುತ್ತಲೇ ಇರುತ್ತವೆ. ಇಂದಿನ

ಆಧುನಿಕ ಯುಗದಲ್ಲಿಯೂ ಕೂಡ, ಮಾಸಿ ನಶಿಸಿ ಹೋದ ರೂಢಿಗತ ಆಚಾರಗಳನ್ನೇ ನಿಷ್ಠುರವಾಗಿ ಅನುಸರಿಸುವುದು ಯಾರಿಗೂ ಸಾಧ್ಯವಿಲ್ಲ. ಸಾಧ್ಯ ಮಾಡಿಕೊಂಡರೂ ಅದು ದುಸ್ತರ, ಹಾಗೂ ತೋರಿಕೆ. ಆ ಪ್ರಕಾಂಡ ಪಂಡಿತರ ಸೊಸೆ ಇಂದಿನವಳು. ಚಿಕ್ಕ ವಯಸ್ಸಿನಲ್ಲಿ ಗಂಡನನ್ನು ಕಳೆದುಕೊಂಡರೂ ಬದುಕುವ ಬಯಕೆ ಆಕೆಗಿದೆ. ಆದರೆ ದೈವದತ್ತ ನೈಸರ್ಗಿಕ ರೂಪವನ್ನು ವಿರೂಪಗೊಳಿಸಿಕೊಂಡು ಬದುಕಲು ಆಕೆಗೆ ಇಚ್ಛೆಯಿರಲಿಕ್ಕಿಲ್ಲ. ಆದರೆ ಗೊಡ್ಡು ವಿಚಾರದ ಈ ಧರ್ಮ ನಿಷ್ಠುರ, ಇಂಥ ತರುಣ ಹೃದಯಗಳ ಭಾವನೆಗಳನ್ನು ಅರಿಯುವುದಿಲ್ಲ. ಆಕೆ ತಾನಾಗಿಯೇ ತನ್ನ ಕೇಶ ತೆಗೆಸಿಕೊಂಡಿದ್ದರೆ ಅಡ್ಡಿಯಿಲ್ಲ. ಅದು ಆಕೆಯ ವೈಯಕ್ತಿಕ ವಿಚಾರ. ಆದರೆ ಒತ್ತಾಯ ಪೂರ್ವಕ ತೆಗೆಸಿ ಹಾಕುವುದು ಎಂಥ ಕ್ರೂರ ಸಂಪ್ರದಾಯ. ಹಲವು ಸಂಪ್ರದಾಯ, ಹಲವು ಸಮಾಜಗಳಲ್ಲಿ ವಿಧವೆಯರು ತಮ್ಮ ನೈಸರ್ಗಿಕ ರೂಪವನ್ನು ವಿರೂಪಗೊಳಿಸಿಕೊಂಡು ಇರುವಂತೆ ಧರ್ಮಾಚರಣೆ ರೂಪಿಸುವುದು ಕೂಡ ಗಂಡಸಿನ ಸ್ವಾರ್ಥವೇ ಹೊರತು ಇನ್ನೇನಿಲ್ಲ. ಹೆಂಡತಿ ಸತ್ತರೆ ಗಂಡ ಮತ್ತೆ ಲಗ್ನವಾಗಬಹುದು. ಹಲವರಲ್ಲಿ, ಅದೇ ಅಧಿಕಾರ ಹೆಣ್ಣಿಗಿಲ್ಲ. ಈ ಗಂಡಸಿನ ಸ್ವಾರ್ಥ ಮನೋಭಾವನೆ ಬದಲಾಗುತ್ತಿರುವ ಈ ಕಾಲದಲ್ಲಿ ಕೂಡ ಧರ್ಮದ ಹೆಸರಿನಲ್ಲಿ ಕೋಮಲ ಭಾವನೆಗಳ ಕೊಲೆನಡೆದಿವೆ. ತಮ್ಮ ಸೊಸೆಯ ಸೌಂದರ್ಯಕ್ಕೆ ಅಗ್ನಿ ಸಂಸ್ಕಾರ ಮಾಡಹೊರಟ, ಆ ಪ್ರಕಾಂಡ ಪಂಡಿತರ ದಿವಂಗತನಾದ ಮಗ ಆಧುನಿಕ ಯುವಕನಿದ್ದಿರಬೇಕು. ಹಾಗಿದ್ದರೆ ಆತ ಕೂಡ ಧಾರ್ಮಿಕ ರೀತ್ಯ ತಲೆ ಬೋಳಿಸಿಕೊಂಡು, ಮುಂದು ಹೊದ್ದುಕೊಳ್ಳಬೇಕಿತ್ತು. ಹಾಗಿರಲಿಕ್ಕಿಲ್ಲ. ಇಂಥ ಆಚಾರವಂತರ ಧಾರ್ಮಿಕರ ಬಹುಜನ ಮಕ್ಕಳು, ತಮ್ಮ ಹಿರಿಯರ ಧರ್ಮ ಸತ್ವ ಪರೀಕ್ಷೆ ಮಾಡಿದಂತೆ, ಧಾರ್ಮಿಕ ಸಂಸ್ಕಾರ ಸೂತ್ರ ತಮಗೇನೂ ಸಂಬಂಧವಿಲ್ಲವೆಂದು, ಮನುಷ್ಯರಾಗದೆ, ಅಧಾರ್ಮಿಕರೂ ಅನೀತಿವಂತರೂ ಆಗುತ್ತಲಿದ್ದಾರೆ. ಆ ಹಿರಿಯರೂ ದಿಕ್ಕು ತಪ್ಪಿಸಿಕೊಂಡು ದಾರಿ ಸಾಗಿದ್ದಾರೆ ಎನ್ನುವುದಕ್ಕೆ ಇನ್ನೇನು ಬೇಕು ? ಅವರೆಲ್ಲ ಪ್ರಾಮಾಣಿಕವಾಗಿ ಮಾನವ ಬದುಕನ್ನು ಬಾಳಿದರೆ ಮಾತ್ರ ಧಮ, ಹೊರತು ಆಚಾರ ಹೇಳಿ ಬದನೆಕಾಯಿ ತಿನ್ನುವ ಧರ್ಮ ಇಂದು ಬೇಡವಾಗಿದೆ.

ಕೋಮಲ ಭಾವನೆಗಳಿಗೆ ಬೆಂಕಿ ಹಾಕುತ್ತಿರುವ ಇಂಥ ಧರ್ಮ ನಿಷ್ಠರಿಂದ ಯಾವ ಧರ್ಮವೂ ಉದ್ಧಾರವಾಗದು. ಧಾರ್ಮಿಕ ಪೀಳಿಗೆಯಲ್ಲಿಯೇ ಅನೈತಿಕತೆ ಬೆಳೆಯಲು ಇಂಥ ಧರ್ಮಾಂಧತೆಯೇ ಕಾರಣವಾಗಿದೆ. ಈ ಪಟ್ಟಭದ್ರ ಪುರೋಹಿತ ಶಾಹಿ ಇನ್ನೂ ಕಣ್ಣುಮುಚ್ಚಿದ್ದು ಅಚ್ಚರಿ.

ಧರ್ಮ ಮತ್ತುಜಾತಿಯ ಆಚರಣೆಗಳು ಸಾಮಾಜಿಕ ಆರೋಗ್ಯಕ್ಕೆ ಮಾನವೀಯತೆಯ ಬೆಳವಣಿಗೆಗೆ ಪೂರಕವಾಗಿರಬೇಕೆ ಹೊರತು ಮಾರಕವಾಗಬಾರದು. ಅಂಧರಾಗಿ ಜಾತನಿಷ್ಠರಾಗಬಾರದು. ಅದೂಕೂಡ ಒಂದು ಬಗೆಯಲ್ಲಿ ಅಧರ್ಮ.

ಇಂದಿನ ದಿನ ಕೂಡ ಓರ್ವಳು ಹಿಂದಿನ ಸಂಪ್ರದಾಯಶೀಲೆ, ಮಡಿ, ಮೈಲಿಗೆಗಳಲ್ಲಿ ತುಂಬ ನಿಷ್ಠಳು. ಅದೇ ಆಕೆಯ ಸೀಮಿತ ಬುದ್ಧಿಗೆ ಸ್ವರ್ಗ ಸಮಾನ. ಒಂದು ದಿನ ಸ್ಟವ್ ಹೊತ್ತಿಸಿ ಅಡುಗೆ ಮಾಡುತ್ತಲಿದ್ದಾಳೆ. ಆ ಅಡುಗೆಕೋಣೆ ಹೊರಬದಿಗೆ ಕೆಲಸದವಳು ಪಾತ್ರೆ ಬೆಳಗುತ್ತಲಿದ್ದಾಳೆ. ಆಕೆ ಬಡ ಮುಸ್ಲಿಮಳು, ಒಡತಿ ಉಚ್ಚ ವರ್ಣೀಯಳು, ಕೆಲಸದಾಳಿನ ಬಗೆಗೆ ಒಡತಿಯಲ್ಲಿ ಅನುಕಂಪವಿದೆ. ಕಳಕಳಿಯಿದೆ, ಕರುಣೆಯಿದೆ, ಆದರೆ ಇದೆಲ್ಲ ಅರ್ಥಹೀನವೆಂದು ಸಾರಲು, ಈ ಭಾವನೆಗಳಿಗೆ ಬೆಲೆಯಿಲ್ಲವೆಂದು ಹೇಳಲು ಜಾತಿಯ ಅಡ್ಡಗೋಡೆಯೊಂದು ಬೃಹದಾಕಾರವಾಗಿ ಇಬ್ಬರ ನಡುವೆ ನಿಂತಿದೆ. ಉಚ್ಚ ವರ್ಣೀಯ ಒಡತಿ, ಬಡ ಸೇವಕಿಯನ್ನು ಮುಟ್ಟಲಾರಳು. ಈ ದಾರಿಗೆ ಧಾರ್ಮಿಕ ನಂಬುಗೆಗಳ ಬೇಲಿಯಿದೆ. ಅವರ ವರ್ತನೆ ಸೀಮಿತ, ಈ ಉಚ್ಚ ವರ್ಣೀಯಳ ಅನುಕಂಪ, ಕಳಕಳಿ, ಕರುಣೆ ಹೊಸಲು ದಾಡಿ ಹೊರಬರಲಾರವು.

ಸ್ಟವ್ ಹೊತ್ತಿಸಿ ಕುಳಿತ ಒಡತಿ ಹಿಂದಿರುಗಿ ಯಾವುದೋ ವಸ್ತು ತೆಗೆದುಕೊಳ್ಳುವುದರಲ್ಲಿ ಆಕೆಯ ಸೆರಗಿಗೆ ಸ್ಟವ್ ಉರಿನಾಲಿಗೆ ಸ್ಪರ್ಶಿಸಿತು. ಸೀರೆಗೆ ಬೆಂಕಿ ಆವರಿಸಿತ್ತು. ಪಾತ್ರೆ ಬೆಳಗುತ್ತಲಿದ್ದ ಆ ಸೇವಕಿ ಭ್ರಾಂತಳಾಗಿ 'ಅವ್ವಾ ಸೀರೆಗ ಬೆಂಕಿ' ಎಂದು ಆರಿಸಲು ಬರುತ್ತಿರುವಲ್ಲಿ.

'ನೀ ನಿಲ್ಲು, ಒಳಗೆಬಂದು ಮೈಲಿಗೆ ಮಾಡಬೇಡ, ನಾ ಆರಿಸಿಕೊಳ್ಳುವೆ.' ಎಂದು ಒಡತಿ, ತನ್ನ ಮೈಮೇಲೆ ಆವರಿಸಿರುವ ಜ್ವಾಲೆಯತ್ತ ಗಮನವೀಯದೆ ಪರಜಾತಿಯವಳು ಒಳಗೆಬಂದು ಮೈಲಿಗೆಯಾಗಬಾರದೆಂದು, ಎದ್ದುನಿಂತು ಸೇವಕಿಯನ್ನು ಅಲ್ಲೇ ತಡೆದಳು. ಒಡತಿಯ ಧರ್ಮನಿಷ್ಠೆಯನ್ನರಿತ ಆ ಬಡಪಾಯಿ ಸೇವಕಿ, ಆಕೆಯ ಅಪಾಯ ಒದಗಿ ಪರಿತಾಪದಿಂದ ಕೈ ಕೈ ಹಿಸುಕಿಕೊಳ್ಳುವುದರಲ್ಲಿ ಬೆಂಕಿ ಒಡತಿಯನ್ನು ಸಂಪೂರ್ಣವಾಗಿ ಆವರಿಸಿತು. ಸೇವಕಿಯ ಕೂಗಿಗೆ ಬೇರೆ ಜನ ಓಡಿಬಂದು ಉಪಚರಿಸಿದರೂ ಕೂಡ ಯಾವ ಪರಿಣಾಮವಾಗಲಿಲ್ಲ. ಸಮಯ ಮೀರಿ ಹೋಗಿತ್ತು. ಆ ಕಾರಣದಿಂದಾಗಿ ಆಕೆ ಪ್ರಾಣ ತೆರಬೇಕಾಯಿತು.

ಧರ್ಮ, ಜಾತಿ ಎಂಬ ಭ್ರಾಮಕ ಕಲ್ಪನೆಗೆ ಆಕೆ ತನ್ನ ಪ್ರಾಣವನ್ನು ಅಕಾರಣವಾಗಿ ತೆರಬೇಕಾಯಿತು. ಅಂಥ ಧರ್ಮನಿಷ್ಠಳಿದ್ದರೂ ಕೂಡ ಆ ಒಡತಿ, ಪರಧರ್ಮೀಯಳು ಸ್ಪರ್ಶಿಸಿದಾಗ ಇನ್ನೊಮ್ಮೆ ಸ್ನಾನ ಮಾಡಬಹುದಿತ್ತು. ಅಡುಗೆ ಕೋಣೆ ಶುದ್ಧಗೊಳಿಸಬಹುದಿತ್ತು. ಹೇಗೂ ಮಾನಸಿಕ ಸಮಾಧಾನ ಪಡೆಯಬಹುದಿತ್ತು. ಆದರೆ ಆಕೆಗೆ ತನ್ನ ಬದುಕಿಗಿಂತ ಜಾತಿ ಧರ್ಮವೇ ದೊಡ್ಡದಾಗಿ ಕಂಡಿತು. ಜೀವಕ್ಕೆ ಮೂಲವಾದ ಇಂಥಭ್ರಾಮಕ ಧರ್ಮನಿಷ್ಠೆ ತೆಗೆದುಕೊಂಡು ಯಾವ ಸ್ವರ್ಗ (ಇದ್ದರೆ?) ಸೇರಬೇಕಾಗಿದೆ ? ಯಾವ ಮುಕ್ತಿ ಪಡೆಯಬೇಕಾಗಿದೆ ? ಇದೂ ಕೂಡ ದಿಕ್ಕು

ತಪ್ಪಿಸುವ ಧಾರ್ಮಿಕ ದಾರಿಯೇ ಆಗಿದೆ. ಈ ಉಚ್ಚ ವರ್ಣೀಯಳು ತನ್ನ ಪತಿಗೆ ಅನುಕೂಲೆಯಾದ ಸತಿಯಾಗಿ, ಮಕ್ಕಳಿಗೆ ಒಲವಿನ ತಾಯಾಗಿ, ಓರಿಕಿರಿಯರಿಗೆ ಬೇಕಾದವಳಾಗಿ, ತನ್ನ ಸ್ತ್ರೀ ಧರ್ಮವನ್ನು ಅನುಸರಿಸಿ ಈ ದಾರಿ ತಪ್ಪಿಸುವ ಧರ್ಮವನ್ನು ತ್ಯಜಿಸಿದ್ದರೆ, ಆಕೆಯೇನು ನರಕ (ಇದ್ದರೆ ?) ಸೇರುತ್ತಿರಲಿಲ್ಲ. ಉತ್ತಮ ಗೃಹಿಣಿಯಾಗಿದ್ದರೆ ಸಾಕು, ಆಕೆಯ ಸಾರ್ಥಕ ಬದುಕಿಗೆ ಬೆಲೆಯಿತ್ತು. ಆದರೆ ಆಕೆಯ ಧಾರ್ಮಿಕ ಮೌಢ್ಯವು ಆಕೆಯನ್ನು ಬದುಕಲು ಬಿಡಲಿಲ್ಲ. ಈ ಧಾರ್ಮಿಕ ಮೌಢ್ಯಕ್ಕಿಂತ ನಾವು ಮಾನವ ಧರ್ಮವನ್ನು ಅರಿತರೆ ಸಾಕು. ಆದರೂ ಈ ಮೌಢ್ಯ ಸುಶಿಕ್ಷಿತರನ್ನೂ ಬಿಡದಂತೆ ಕಾಡುತ್ತಲಿದೆ.

ಭಾರತದಲ್ಲಿ ಕಾಡುವಷ್ಟು ಜಾತಿಗಳು ಬೇರೆ ಯಾವ ದೇಶದಲ್ಲಿಯೂ ಕಾಡುವುದಿಲ್ಲ. ಈ ವರ್ಗ ಭೇದವನ್ನಳಿಸಲು ಗೌತಮಬುದ್ಧನಿಂದ ಪ್ರಯತ್ನ ಪ್ರಾರಂಭಿಸಿದರೂ, ಹೊಸ ಧರ್ಮಗಳೂ ಕೂಡ ಜಾತಿಯ ಸಂಕುಚಿತ ಹಣೆ ಪಟ್ಟಿಗಳನ್ನೇ ಕಟ್ಟಿಕೊಂಡವು. ವರ್ಗ, ಕಲಹ, ಬೆಳೆಸಿಕೊಂಡವು, ನಮ್ಮ ದೇಶದಲ್ಲಿ ಅನೇಕ ಮಹಾಪುರುಷರು ಶತಮಾನಗಳಿಂದ ಈ ಜಾತಿ ಪದ್ಧತಿಯ ನಿರ್ಮೂಲನೆಗಾಗಿ ಹೋರಾಡುತ್ತ ಬಂದರೂ ಕೂಡ, ನಾವೆಲ್ಲ ಧರ್ಮವಂತರಾಗದೆ ಜಾತಿವಂತರಾಗಿ ಬಾಳುತ್ತಿದ್ದೇವೆ. 'ಧರ್ಮ' ವೆಂಬ ವ್ಯಾಪಕ ವಿಶಾಲವಾದ ಅರ್ಥಕ್ಕೆ ಜಾತಿ ಎಂಬ ಸಂಕುಚಿತ ಸೀಮೆ ಕೊರೆದು ಈ ಪರಿಧಿಯಲ್ಲಿ ಗಾಣದೆತ್ತಾಗಿ ಕಣ್ಣುಕಟ್ಟಿಕೊಂಡು ಸುತ್ತುತ್ತಿದ್ದೇವೆ, ಇನ್ನೂ ಸುತ್ತುತ್ತಲೇ ಇದ್ದೇವೆ.

ಬಸವಣ್ಣನವರ ವಿಶಾಲವಾದ ಮಾನವ ಮನೋದರ್ಮ ಕೂಡ ನಮ್ಮ ನಾಡಿನಲ್ಲಿ ಈಗ ಆಕುಂಚನ ಗೊಂಡು ಜಂಗಮ, ಪಂಚಮಸಾಲಿ, ಸಾದ, ಆದಿಬಣಜಿಗ, ಬಣಜಿಗ, ಶಿಂಪಿ, ನಾಗಲಿಕ, ಚೆಟ್ಟಿ, ನೇಕಾರ, ಅಗಸ, ನಾಪಿತ ಎಂದು ಮುಂತಾಗಿ ಹಲವು ಗುಂಪುಗಳಿವೆ ಇವುಗಳಲ್ಲಿಯೂ ಕೂಡ ಅಂತರ್ಭೇದದ ಅನೇಕ ತುಂಡುಗಳು, ಒಳಪಂಗಡಗಳಲ್ಲಿ ಇನ್ನೂ ಒಳಪಂಗಡಗಳ ದೇಹ ಚಿದ್ರ ಚಿದ್ರವಾದಂತೆ ಆಗಿದೆ. ಕ್ರಿಶ್ಚಿಯನ್ ಯಹೂದಿಯಲ್ಲ. ಹಿಂದು-ಮುಸ್ಲಿಂ ಅಲ್ಲ, ಬ್ರಾಹ್ಮಣ-ಲಿಂಗಾಯತನಲ್ಲ, ಮೇಲು ಕೀಳು ವರ್ಗಕಲಹವಲ್ಲ. ಆದರೆ ವೀರಶೈವ ಒಳಪಂಗಡವಾದ ಒತ್ತಂಡ ನೇಕಾರರ ಇತ್ತಂಡವೊಂದು, ಹಟಗಾರ-ಕುರುಹಿನ ಶೆಟ್ಟರೆಂದು ಎರಡು ಪಕ್ಷಗಳಲ್ಲಿ ವಿಂಗಡಿಸಿಕೊಂಡು ಒಂದೂರಿನಲ್ಲಿ ಬಹಳ ಪೂರ್ವ ಕಾಲದಲ್ಲಿ ಅಲ್ಲ ನಿನ್ನೆ ಮೊನ್ನೆಯೇ, ಬೇಕಾದರೆ ಇಂದೇ ಎನ್ನಿರಿ ತೋಳೇರಿಸಿ ಹೋರಾಟಕ್ಕೆ ಇಳಿದು ಇಡೀ ಊರಿನ ಶಾಂತ ಚಿತ್ತವನ್ನೇ, ನೆಮ್ಮದಿಯ ಬದುಕನ್ನೇ ಭಂಗಗೊಳಿಸುವುದನ್ನು ನೋಡಿದರೆ, ಇನ್ನೂ ನಾವು ಶಿಲಾಯುಗದ ಮಾನವರಾಗಿಯೇ ಬಾಳುತ್ತಿದ್ದೇವೆ, ಎಂಬುದಕ್ಕೆ ಇನ್ನಾವ ಆಧಾರಬೇಕು ? ಸಂಕುಚಿತ ಮನೋಭಾವನೆಗಳು ನಮ್ಮನ್ನು ಹಿಂಡುತ್ತಲಿವೆ. ಒಂದೇ ತಂಡ ಇತ್ತಂಡವಾಗಿ

ಹೋರಾಡುವುದೆಂದರೆ ಇದಕ್ಕೂ ಲಜ್ಜಾಸ್ಪದವಾದ ಸಂಗತಿ ಇನ್ನೇನಿದೆ ? ಹಿರಿಯರೇ ಸನ್ನದ್ಧರಾಗಿ ನಿಂತಾಗ ಬಡಪಾಯಿ ನಿರಪರಾಧಿಗಳು ಯಾರ ಮೊರೆ ಹೋಗಬೇಕು ?

ಇದು ಒಂದು ಊರಿನ ಕತೆಯಲ್ಲ. ಭಾರತದ ಎಲ್ಲ ಊರಿನ ಕಥೆಯೂ ಆಗಿದೆ. ಹಿಂದೂಗಳಲ್ಲಿ, ಮುಸ್ಲಿಂರಲ್ಲಿ ಕ್ರಿಶ್ಚಿಯನ್ನರಲ್ಲಿ ಪರಸ್ಪರ ಉಪ ಪಂಗಡಗಳಾಗಿ ಅವರು ಕೂಡ ತಮ್ಮಲ್ಲಿಯೇ ಅದೆಷ್ಟು ಹೋರಾಡುವುದಿಲ್ಲ. ಇದು ಹಿಂದಿನ ಕತೆಯಲ್ಲಿ ಇಂದಿನದೂ ಆಗಿದೆ. ಮುಂದಿನದು ಆಗುತ್ತದೆ. ನಿಜವಾದ ಧರ್ಮದ ಅರಿವಿಲ್ಲದವರ ಜಾತಿ, ಸಂಕುಚಿತ ಭಾವನೆಯವರ, ಒಳ ಪಂಗಡಗಳ ದುರಾಭಿಮಾನಿಗಳ ಶಕುನಿ ಸೂತ್ರ ಸಾಗುವವರೆಗೆ, ಮನೆ ಮನೆಗಳಲ್ಲಿ ಮನ-ಮನಗಳಲ್ಲಿ ಹಾನಿಕರವಾದ ಹೋರಾಟ ಇದ್ದುದೇ.

ಇದಕ್ಕೆ ಪೂರಕವಾಗಿ ಇನ್ನೂ ಒಂದು ಕಥೆಯಿದೆ. ರಾಜಸ್ಥಾನದಲ್ಲಿ ಕಂಡ ಕಥೆ. ನಾಲ್ಕು ವರ್ಷಗಳ ಹಿಂದೆ ನಾಗೋರ ಜಿಲ್ಲೆಯ ನೋಕಾ ಮಂಡಿ ಎಂಬ ಊರಿಗೆ ಹೋದಾಗ, ಆ ದಿನ ತುಂಬಿದ ಪೇಟೆಯಲ್ಲಿಯೇ ಸಶಸ್ತ್ರ ಹೋರಾಟ, ಆ ರಕ್ತದೋಕುಳಿ ಕಂಡಾಗ ಕಾವ್ಯದಲ್ಲಿಯ ಕುರುಕ್ಷೇತ್ರ ಸ್ಮರಣೆಗೆ ಬಂದಿತು. ಆ ಹೋರಾಟಕ್ಕೆಬೇರೊಂದು ದೇಶದ ಸೈನ್ಯ ಬಂದಿರಲಿಲ್ಲ. ಅದೇ ಊರಿನ ಜಾಟರು, ರಜಪೂತರಲ್ಲಿ ಒಂದು ಸಣ್ಣ ವಿಷಯಕ್ಕೆ ತಂಟೆ ಬಂದು, ಆ ಕಿಡಿ ಇಡೀ ಊರನ್ನೇ ಆವರಿಸಿತ್ತು. ರಜಪೂತರ ರಕ್ತದಲ್ಲಿ ಶೌರ್ಯ ತುಂಬಿ ತುಳುಕುತ್ತಲಿದ್ದರೆ, ಜಾಟರಲ್ಲಿ ಅದೇನು ಕಡಿಮೆಯಿರಲಿಲ್ಲ. ಆದರೆ ನಾವೆಲ್ಲ ಬಂಧುಗಳು, ಒಂದೇ ಊರಿನವರು, ಭಾರತೀಯರು ಎಂಬ ರಾಷ್ಟ್ರೀಯ ಮನೋಧರ್ಮ ಗೊತ್ತಿಲ್ಲದಿದ್ದರೆ, ಇಂಥ ವೀರವೃತ್ತಿ, ಸಾಹಸ ತೆಗೆದುಕೊಂಡೇನು ಮಾಡುವುದು ? ಈ ರಜಪೂತರ ಒಳ ಜಗಳವೇ ನಮ್ಮ ದೇಶವನ್ನು ಪರಕೀಯರಿಗೆ ಅರ್ಪಿಸಿ, ಈಗ ಸ್ವತಂತ್ರರಾಗಿ ಚೇತರಿಸಿಕೊಳ್ಳುತ್ತಲಿದ್ದೇವೆ ಎಂಬ ಇತಿಹಾಸ ಇನ್ನೂ ಹಸಿಯಾಗಿಯೇ ಇದೆ.

ರಾಷ್ಟ್ರೀಯ ಧರ್ಮ ಗೊತ್ತಿಲ್ಲದ ಶೂರರಾದ ರಜಪೂತರು ಜಾಟರು ಸಂಕುಚಿತ ಜಾತಿಯ ಧರ್ಮ ಅನುಸರಿಸಿದರೆ ನಮ್ಮ ದೇಶಕ್ಕೆ ಬಂದ ಭಾಗ್ಯವೇನು ? ಇದು ಸಾಹಸ ಶಕ್ತಿಯ ಹ್ರಾಸವಲ್ಲವೇ ?

ಭಾರತದ ನೆಮ್ಮದಿಯ ಬದುಕಿಗೆ ಇಂದು ಒಗ್ಗಟ್ಟುಬೇಕಾಗಿದೆ. ಸಂಕುಚಿತ ಜಾತಿಯ ಜಗಳವಲ್ಲ. ಅದೂ ಒಂದೇ ತಂಡದಲ್ಲಿ ಇತ್ತಂಡವಾಗಿ ಹೋರಾಡುತ್ತಿರುವ ಪ್ರಜ್ಞಾವಂತರಿಗೆ ಬೌದ್ಧಿಕ ಬೋಧನೆಯನ್ನೀಯಲು ಗಾಂಧೀಜಿ, ಬಸವಣ್ಣ ಅಲ್ಲಮ ಆ ಗೌತಮ ಬುದ್ಧನೇ ಭೂಮಿಗಿಳಿದು ಬಂದರೂ ಆತನು ಈಗ ಗೆಲ್ಲಲಾರನೇನೋ. ಈ ರೀತಿ ದಿಕ್ಕು ತಪ್ಪಿಸಿ ಬುದ್ಧಿವಂತರನ್ನು (?) ಅಡ್ಡ ದಾರಿಗೆ ನೂಕುತ್ತಿರುವಲ್ಲಿ

ಕೆಲವು ಮುಖಂಡರೂ ಇರುವುದು ತುಂಬಾ ಶೋಚನೀಯ ಸಂಗತಿಯಾಗಿದೆ. ಹಾಗಿದ್ದರೆ ಭಾವೈಕ್ಯತೆಗೆ ಯಾರ ಮೊರೆ ಹೋಗಬೇಕು ? ಬರೀ ಘೋಷಣೆಗಳು ಯಾವ ಫಲವನ್ನೂ ನೀಡಲಾರವು.

ಹಿಂದುಳಿದವರ, ಅಸ್ಪೃಶ್ಯರ, ದಲಿತರ ಸಮಸ್ಯೆ ಇಂದು ನಿನ್ನೆಯದಲ್ಲ. ವೇದ ಕಾಲದಿಂದಲೂ ಅನೂಚಾನವಾಗಿ ಈ ಸಮಸ್ಯೆ ಹಬ್ಬಾಗುತ್ತಲೇ ಬಂದಿದೆ. ಸಾಮಾಜಿಕ ಆರೋಗ್ಯಕ್ಕೆ ಕ್ಷಯರೋಗವಾದ ಈ ಜಾತಿ ಪದ್ಧತಿ ಅಳಿಸಿಹಾಕಲು ಪ್ರಯತ್ನಗಳು ನಡದೇ ಇವೆ. ಈಗ ಸರಕಾರ ಕೂಡ ದಲಿತರ ಉದ್ಧಾರಕ್ಕಾಗಿ ಅನೇಕ ಸೂತ್ರಗಳನ್ನು ಹಮ್ಮಿಕೊಂಡಿದೆ. ಆದರೆ ನಿಮ್ನ ವರ್ಗ, ಉಚ್ಚವರ್ಗ, ಆಡಳಿತ ವರ್ಗ, ಈ ಮೂರರಲ್ಲಿ ನಿಜವಾದ ಅರಿವು ಬಂದರೆ ಮಾತ್ರ ಈ ಸಮಸ್ಯೆ ಸುಲಭವಾಗಿ ಅಳಿಯಬಹುದು. ಈ ವಿರಾಟ್ ಸಮಸ್ಯೆ ನಿರ್ನಾಮವಾಗಬಹುದು.

ತಮ್ಮ ಕೀಳು ಬದುಕಿನ ಬಗೆಗೆ ಮೇಲ್ವರ್ಗದ ದೌರ್ಜನ್ಯಕ್ಕೆ ರೋಸಿ ಬೇಸತ್ತ ಹಲವು ಜನ ಕೆಳವರ್ಗದವರು ಈ ಹಿಂದೆ ಹಲವರ ಪ್ರೇರಣೆಯಂತೆ ಅನ್ಯಧರ್ಮ ಸ್ವೀಕರಿಸಿದ್ದಾರೆ. ಹಲವರು ಬೌದ್ಧಧರ್ಮ ಅವಲಂಬಿಸಿದರೆ, ಕೆಲವರು ಕ್ರೈಸ್ತ ಧರ್ಮಾವಲಂಬಿಗಳಾಗಿದ್ದಾರೆ. ಇನ್ನುಳಿದವರು ಹಾಗೇ ಇದ್ದಾರೆ. ತಮ್ಮ ಕೀಳರಿಮೆಗೆ ರೋಸಿದ ಈ ಜನ ನಿಜವಾದ ಕ್ರೈಸ್ತ ಧರ್ಮದ ತತ್ವಗಳನ್ನು ಅರಿತುಕೊಂಡಿದ್ದರೆ ಸಾರ್ಥಕವಾಗಬಹುದಿತ್ತು. ಧರ್ಮಾಂತರ ಹೊಂದಿದ ಬಹುಸಂಖ್ಯೆಯ ಬೌದ್ಧರು, ಕ್ರೈಸ್ಥರು ಮೊದಲಿನ ಸ್ಥಿತಿಯಲ್ಲಿಯೇ ಇದ್ದಾರೆ. ಸೆರೆ ಕುಡಿದು ಬದುಕನ್ನು ಹಾಳುಮಾಡಿಕೊಳ್ಳಬೇಕೆಂದು ಬುದ್ಧ ಎಲ್ಲಿಯೂ ಹೇಳಿಲ್ಲ. ಸೋಮಾರಿಗಳಾಗಿ ಕರ್ತವ್ಯ ಚ್ಯುತರಾಗಬೇಕೆಂದು ಕ್ರಿಸ್ತ ಎಲ್ಲಿಯೂ ಉಪದೇಶಿಸಿಲ್ಲ. ಆದರೂ ಇವರು ತಮ್ಮ ಏಳ್ಗೆಯ ಬಗೆಗೆ ವಿಚಾರಿಸಲು ಅವಕಾಶವಿಲ್ಲದಂತೆ ಪರಿಸ್ಥಿತಿಯನ್ನು ನಿರ್ಮಿಸಿಕೊಳ್ಳುತ್ತಲಿದ್ದಾರೆ. ಇನ್ನೂ ಅಧೋಗತಿಯ ದಾರಿಗಳಿದಿದ್ದಾರೆ.

ಅನೇಕ ಬಗೆಯಾಗಿ ಈ ಹಿಂದುಳಿದವರ ಏಳಿಗೆಗೆ ಹಿಂದುಳಿದ ಮುಖಂಡರು ಹೆಣಗುತ್ತಲಿದ್ದಾರೆ. ಈಗ ದಲಿತ ಸಮಾಜವನ್ನು ಮೇಲೆತ್ತಬೇಕಾದರೆ, ಅವರ ಅಶಿಕ್ಷಿತತೆ, ಮೌಢ್ಯವನ್ನು ಅಳಿಯಬೇಕಾಗಿದೆ. ಈ ಸಮಾಜದಲ್ಲಿನ ಕೆಲವು ಮುಖಂಡರು ತಮ್ಮ ಬಂಧುಗಳ ಬಗೆಗೆ ಕಳಕಳಿಯಿಂದ ಕಾರ್ಯಮಾಡಬೇಕಾಗಿದೆ. ಬರೀ ಭಾಷಣ -ಘೋಷಣೆಗಳಿಂದ ಈ ದಲಿತರ ಸಮಸ್ಯೆ ಬಗೆಹರಿಯದು, ರೊಚ್ಚಿನಿಂದ ಪಾರಾಗಿ ಅವರು ಬರಲಾರರು.

ಇಂದೂ ಕೂಡ ಈ ದಲಿತರ ಸಮಾಜದ ಅನೇಕ ಜನ ತರುಣಿಯರು ವೇಶ್ಯಾವೃತ್ತಿಗಾಗಿ ಮುಂಬಯಿಯಂಥ ನಗರಗಳನ್ನು ಸೇರುತ್ತಲಿದ್ದಾರೆ. ಪತ್ರಿಕೆಗಳಲ್ಲಿ

ಹಲವು ಪ್ರಕರಣಗಳನ್ನುಕಾಣುವಂತೆ ಇದೇನು ಮೋಸದ ವ್ಯವಹಾರವಲ್ಲ. ಈ ತರುಣಿಯರು ವೇಶ್ಯಾವೃತ್ತಿಗಾಗಿ, ಮುಂಬಯಿಯಂತಹ ನಗರಗಳನ್ನು ಸೇರುತ್ತಲಿದ್ದಾರೆ. ಪತ್ರಿಕೆಗಳಲ್ಲಿ ಹಲವು ಪ್ರಕರಣಗಳನ್ನು ಕಾಣುವಂತೆ ಇದೇನೂ ಮೋಸದ ವ್ಯವಹಾರವಲ್ಲ. ಈ ತರುಣಿಯರನ್ನು ಕದ್ದು ಒಯ್ದು ಪ್ರಸಂಗಳೂ ಇಲ್ಲ. ದೇವರ ಹೆಸರಿನಲ್ಲಿ ವೇಶ್ಯಾವೃತ್ತಿಗೆ ಬಿಡುತ್ತಲಿದ್ದಾರೆ. ಇವರ ಸಹೋದರರೇ ಹಣಗಳಿಸಲು ತಮ್ಮ ಸಹೋದರಿಯರನ್ನು ನಗರಗಳಿಗೆ ಕಳುಹಿಸುತ್ತಲಿದ್ದಾರೆ. ಮೈಮಾರಿಕೊಂಡು ಹಣಗಳಿಸುವ ಈ ಹೀನವೃತ್ತಿಯ ಬಗೆಗೆ ಇದನ್ನು ನಿವಾರಿಸಲು ಎತ್ತರದ ಧ್ವನಿಯಲ್ಲಿ ರೋಷದುಂಬಿ ಕುಣಿದರೆ ಪರಿಹಾರ ಕಾಣದು. ಈ ಸಮಸ್ಯೆ ಬಗೆಹರಿಯದು. ಪ್ರತ್ಯಕ್ಷವಾಗಿ ಈ ದಲಿತರ ಕೇರಿಗೆ ಬಂದು, ಇಂಥ ತರುಣಿಯರಿಗೂ, ಅವರ ಪಾಲಕರಿಗೂ ಈ ಅನಾಹುತದ ದುಷ್ಪರಿಣಾಮದ ಬಗೆಗೆ ಬಿಂಬಿಸಿ ತಿಳಿಹೇಳುವ ಸಮಾಜ ಸುಧಾರಕರು ಯಾರಿದ್ದಾರೆ?

# ಕನ್ನಡ ಕಾವ್ಯಗಳಲ್ಲಿ ಕಂಡುಬರುವಂತೆ ಚಾರಿತ್ರಿಕ ಅಂಶಗಳು

- ಡಾ. ಕೆಳದಿ ವೆಂಕಟೇಶ್ ಜೋಯಿಸ್

ಒಂದು ನಿರ್ದಿಷ್ಟ ಕಾಲದಲ್ಲಿ ರಚಿತವಾದ ಸಾಹಿತ್ಯ ಅದರ ಸುತ್ತಲಿನ ಇತರ ಕ್ಷೇತ್ರಗಳ ಪ್ರಭಾವದಿಂದ ತಪ್ಪಿಸಿಕೊಳ್ಳುವುದು ಅಷ್ಟು ಸುಲಭವಲ್ಲ ತನಗರಿವಿಲ್ಲದಂತೆಯೇ ಆ ಸಾಹಿತ್ಯ ತನ್ನ ಕಾಲದ ಜನ ಜೀವನ ಸಮಕಾಲೀನ ಚಾರಿತ್ರಿಕ ಸಂಗತಿಗಳು, ಸಾಮಾಜಿಕ ನಡೆ-ನುಡಿಗಳನ್ನು ಒಳಗೊಂಡು ರಚಿತವಾಗಿರುತ್ತದೆ. ಇನ್ನು ಸಾಹಿತ್ಯ ರಚನೆಯಾಗುವ ಸಂದರ್ಭ. ರಚನಾಕಾರರಿಗೆ ದೊರೆತ ಆಶ್ರಯ ಇವು ಆಶ್ರಯದಾತರ ವಂಶ, ಜೀವನ, ಪರಂಪರೆ, ಕಾರ್ಯ, ಔದಾರ್ಯ, ಸಮದರ್ಶಿತ್ವವನ್ನು ಪ್ರದರ್ಶಿಸುವ ಉದ್ದೇಶದಿಂದಲೂ ಕೃತಿ ರಚನೆಯಾಗುತ್ತಿತ್ತು. ಇಂತಹ ಕೃತಿಗಳಲ್ಲಿ ಸಮಕಾಲೀನ ಸಂಗತಿಗಳು, ವೈಭವೀಕರಣದ ಜೊತೆಗೆ ಸಾಹಿತ್ಯವೆಂದು ಸಾಬೀತು ಪಡಿಸಲಗತ್ಯವಿರುವ ಉತ್ಪ್ರೇಕ್ಷೆಯಿಂದ ಕೂಡಿದ, ಕಾಲ್ಪನಿಕ ಸಂಗತಿಗಳಿಂದ ಕಾವ್ಯ-ಇತಿಹಾಸವನ್ನು ಸೇರಿಸಿ 'ಕಾವ್ಯೇತಿಹಾಸವಾಗಿ' ರೂಪಿಸುವ ಪ್ರಯತ್ನ ನಡೆಯುತ್ತಿತ್ತು. ಇದು ಮೇಲುನೋಟಕ್ಕೆ ಕಾವ್ಯವೆಂದು ಕಂಡುಬಂದರೂ, ಆ ಕಾಲದ ಚಾರಿತ್ರಿಕ ಅಂಶಗಳ ಹೆಚ್ಚಾಗಿ ಹೊಂದಿರುವುದಿದೆ. ಚಾರಿತ್ರಿಕ ಮಹತ್ವ, ಸಾಹಿತ್ಯಕ ಮಹತ್ವ ಎರಡೂ ಇಲ್ಲಿ ಪ್ರಮುಖವಾಗುತ್ತವೆ.

ಭಾರತದ ಸಾಹಿತ್ಯದ ಬೆಳವಣಿಗೆಯಲ್ಲಿ ರಾಜಾಶ್ರಯಕ್ಕೆ ದೊರೆತ ಪ್ರಭಾವ ಗಮನೀಯವಾದದು. ಸಾಹಿತ್ಯ, ರಾಜ-ಮಹಾರಾಜರ, ಪ್ರಭಾವದಿಂದಾಗಿ, ಉಲ್ಲಾಸಕ್ಕಾಗಿ ರಚಿತವಾಗುತ್ತಿದ್ದರಿಂದ ಈ ಸಾಹಿತ್ಯ ಕೃತಿಗಳಲ್ಲಿ ಅಲ್ಲಲ್ಲಿ ಸಾಹಿತ್ಯದ ಜೊತೆಗೆ ಚಾರಿತ್ರಿಕ ಸಂಗತಿಯೂ ಹಾಸುಹೊಕ್ಕಾಗಿ ಬರಲು ಇದೂ ಕಾರಣವಾಗಿರಬಹುದು. ಹತ್ತನೆಯ ಶತಮಾನದಲ್ಲಿ ಅಲ್ಬೆರೂನಿ ಎಂಬುವನ ಭಾರತೀಯರಿಗೆ ಐತಿಹಾಸಿಕ ಪ್ರಜ್ಞೆ ಕಡಿಮೆ' ಎಂಬ ಮಾತು ಸತ್ಯಕ್ಕೆ ದೂರವೆಂದು ಹೇಳುವಂತಿಲ್ಲದಿದ್ದರೂ ಸಾಹಿತ್ಯ ಕೃತಿಗಳಲ್ಲಿ ಕಾಣಬರುವ ಚಾರಿತ್ರಿಕ ಅಂಶಗಳು ಈ ಮಾತಿನ ಬಗ್ಗೆ ಮತ್ತೊಮ್ಮೆ ಯೋಚನೆಗೆ ಎಡೆಮಾಡಿಕೊಡುತ್ತವೆ. ಸಾಹಿತ್ಯದಲ್ಲಿ ವಾಸ್ತವಿಕಾಂಶದಷ್ಟೇ ಉತ್ಪ್ರೇಕ್ಷೆಯೂ ತುಂಬಿರುವುದನ್ನು ಸೂಕ್ಷ್ಮ ಅಧ್ಯಯನಗಳಿಂದ ಗುರುತಿಸಬೇಕಾಗಿರುತ್ತದೆ. ಇದಕ್ಕೆ ಶಾಸನಗಳ ಆಧರವನ್ನು ಬಳಸಿಕೊಳ್ಳಬೇಕಾಗುತ್ತದೆ.

ಕನ್ನಡ ಸಾಹಿತ್ಯ ಕೃತಿಗಳಲ್ಲಿ ಐತಿಹಾಸಿಕ ಅಂಶಗಳು ಹೆಚ್ಚಾಗಿದ್ದರೂ ಅವುಗಳ ಕುರಿತ ಅಧ್ಯಯನ ನಡೆದಿರುವುದು ಕಡಿಮೆಯೆ. ಇವುಗಳಲ್ಲಿ ಸಮಕಾಲೀನ ಜೀವನ, ಸಾಮಾಜಿಕ, ಆರ್ಥಿಕ ವ್ಯವಸ್ಥೆಯನ್ನು ರಾಜಕೀಯ ವ್ಯವಸ್ಥೆಯ ಜೊತೆ ಜೊತೆಗೇ ಸೂಕ್ಷ್ಮವಾಗಿ ಚರ್ಚಿಸಲಾಗಿರುತ್ತದೆ. ಆದರೆ ನಾವು ಮೇಲು ನೋಟಕ್ಕೆ ಕಾಣಬರುವಂತಹ ವಿಚಾರವನ್ನು ಮಾತ್ರ ಹೆಕ್ಕಿಕೊಂಡಿದ್ದೇವೆ. ಸಂಸ್ಕೃತ, ತಮಿಳು, ತೆಲುಗು ಮೊದಲಾದ ಇತರ ಭಾಷೆಯ ಕೃತಿಗಳಲ್ಲಿಯೂ ಚಾರಿತ್ರಿಕಾಂಶಗಳು ಬಹಳವಿವೆ. ಉದಾ. ಬಿಲ್ಹಣನ ವಿಕ್ರಮದೇವ ಚರಿತಂ, ಸೋಮೇಶ್ವರನ ವಿಕ್ರಮಾಂಕಾಭ್ಯುದಯ ಮಾನಸೋಲ್ಲಾಸ, ಬಿಲ್ಹಣನ ಮುಕ್ತಾವಳಿ, ಕನ್ನಡದವಳಾದ ಗಂಗಾದೇವಿಯ ಮಧುರ ವಿಜಯಂ, ಮೊದಲಾದವು. ತಮಿಳಿನ ಕೊಂಗು ದೇಶ ರಾಜ್ಯಕ್ಕಳ ಚರಿತ್ರಮ್, ಕಲಿಂಗುತ್ತು ಸ್ಯರಣಿ, ತೆಲುಗಿನ ಪಂಡಿತಾರಾಧ್ಯ ಚರಿತಮ್, ಪಾಲ್ಕುರಿಕೆ ಸೋಮನಾಥನ ಬಸವಪುರಾಣ, ಹೆಸರಿಸುವಂತಹವು. ತಮಿಳಿನ ಕೃತಿಗಳು ಚಾಲುಕ್ಯ ವಿಕ್ರಮಾದಿತ್ಯ (ಆರನೆಯ) ಹಾಗೂ ಚೋಳವಂಶದ ನಡುವಣ ಸಂಬಂಧವನ್ನು ಪರಿಚಯಿಸುತ್ತದೆ. ಈ ಲೇಖನದಲ್ಲಿ ಕೆಲವು ಕನ್ನಡ ಕೃತಿಗಳನ್ನು ಇಟ್ಟುಕೊಂಡು ಅದರಲ್ಲಿ ಕಂಡುಬರುವ ಚಾರಿತ್ರಿಕ ಅಂಶಗಳ ಕುರಿತು ಚರ್ಚಿಸಲಾಗಿದೆ.

ಕನ್ನಡ ಕಾವ್ಯಗಳಲ್ಲಿ ಚಾರಿತ್ರಿಕ ಸಂಗತಿಗಳನ್ನು ಹೊಂದಿರುವ ಮೊದಲ ಕೃತಿ ಶ್ರೀ ವಿಜಯನ ಕವಿರಾಜಮಾರ್ಗ. ಈ ಕೃತಿಯ ಕರ್ತೃ ಅಮೋಘವರ್ಷ ನೃಪತುಂಗ ಎಂದಿತ್ತು. ಈಗ ಶ್ರೀ ವಿಜಯನೇ ಕರ್ತೃ ಎಂಬುದನ್ನು ಒಪ್ಪಿಕೊಳ್ಳಲಾಗಿದೆ. ಪ್ರಮುಖ ಲಕ್ಷಣ ಗ್ರಂಥವಾದ ಈ ಕೃತಿಯಲ್ಲಿ ಐತಿಹಾಸಿಕ ಅಂಶಗಳೂ ಅಲ್ಲಲ್ಲಿ ಹಾಸುಹೊಕ್ಕಾಗಿ ಬಂದಿದೆ. ಕೃತಿಯಲ್ಲಿ ಕಂಡುಬರುವ ಕೀರ್ತಿನಾರಾಯಣ, ಗರುಢಧ್ವಜ ಎಂಬುವು ಕ್ರಮವಾಗಿ ಮೂರನೆ ಗೋವಿಂದನಿಗೂ, ಎಲ್ಲಾ ರಾಷ್ಟ್ರಕೂಟ ಅರಸರಿಗೂ ಸಲ್ಲುವುದೆಂದೂ, ವಾದವಿವಾದಗಳಿವೆ. ಕೃತಿಯಲ್ಲಿ ಉಕ್ತವಾಗಿರುವ 'ಲೋಕಪಾಲ'ನು ನೃಪತುಂಗನ ಸಾಮಂತ ಬಂಕರಸನಮಗ. ಈ ಬಗ್ಗೆಯೂ ವಾದ ವಿವಾದವಿದೆ. ಮೂರನೆಯ ಪರಿಚ್ಛೇದದಲ್ಲಿನ ಸಂಗತಿಗಳು ರಾಷ್ಟ್ರಕೂಟ ಲೋಕಾದಿತ್ಯನಿಗಿದ್ದ ಆಂತರಿಕ ಸಂಬಂಧದ ಬಗ್ಗೆ ಸೂಚಿಸುತ್ತದೆ. ಕನ್ನಡ ನಾಡಿನ ಸೀಮಾರೇಖೆಯನ್ನು ಚಿತ್ರಿಸುವ

'ಕಾವೇರಿಯಿಂದ ಮಾ ಗೋದಾವರಿ ವರಮಿರ್ದ

ನಾಡದಾ ಕನ್ನಡದೋಳ್ ಭಾವಿಸಿದ ಜನಪದಂ'

ಎಂಬ ಪದ್ಯ ಕನ್ನಡದ ಮೇರೆಯನ್ನು ಸ್ಪಷ್ಟಪಡಿಸುತ್ತದೆ. ಆ ಕಾಲದ ಸಾಮಾಜಿಕ ವ್ಯವಸ್ಥೆಯ ನೇರ ಚಿತ್ರಣವನ್ನು ಈಕೃತಿ ನೀಡುತ್ತದೆ. ಸುಮಾರು ೧೦-೧೧ನೇ ಶತಮಾನದಲ್ಲಿ ರಚಿತವಾದ ವಡ್ಡಾರಾಧನೆಯು ಅಂದಿನ ಸಾಮಾಜಿಕ

ಸಾಂಸ್ಕೃತಿಕ ಜೀವನದ ಕೆಲವು ಮಜಲುಗಳನ್ನು ವಿವರಿಸುತ್ತದೆ. ಆ ಕಾಲದ ವ್ಯಾಪಾರವ್ಯವಸ್ಥೆ, ವ್ಯವಸಾಯ, ಮಾರಾಟದ ತಂತ್ರಗಳು, ಮೊದಲಾದವುಗಳನ್ನು ಕಥೆಗಳು ಚಿತ್ರಿಸುತ್ತವೆ. ಕ್ರಿ.ಶ. ೯೪೧-೯೪೬ರ ಮಧ್ಯಭಾಗದಲ್ಲಿ ರಚಿತವಾದ ಪಂಪ ಕವಿಯ 'ಪಂಪಭಾರತವು' ವಿಕ್ರಮಾರ್ಜುನ ವಿಜಯವೆಂದೇ ಪ್ರಖ್ಯಾತವಾದುದು. ಪಂಪನ ಮೂಲನೆಲೆ, ವಂಶದ ವಿವರ, ತಂದೆ, ತಾಯಿಗಳ ವಿವರ, ಬನವಾಸಿ ಪ್ರಾಂತ್ಯದ ವಿವರ ಇದರಲ್ಲಿದೆ. ಪಂಪನ ಆಶ್ರಯದಾತ ಚಾಲುಕ್ಯಸಾಮಂತ ಇಮ್ಮಡಿ ಅರಿಕೇಸರಿಯೇ ಅವನ ಕೃತಿಯ ನಾಯಕ. ಅರಿಕೇಸರಿಯನ್ನು ಅರ್ಜುನನಿಗೆ ಹೋಲಿಸಿ ಚಿತ್ರಿಸಿದ್ದಾನೆ. ಕವಿಯಾಗಿ ಮಾತ್ರವಲ್ಲದೆ ದಂಡನಾಯಕನಾಗಿಯೇ ಕವಿ ಶ್ರಮಿಸಿದ್ದಾನೆ. ವೆಂಗಿನಾಡಿನ ವಿಜಯಾದಿತ್ಯನಿಗೆ ಆಶ್ರಯ ನೀಡಿದನೆಂಬ ಕಾರಣದಿಂದ ಅರಿಕೇಸರಿಯು ನಾಲ್ವಡಿಗೋವಿಂದನ ವೈರಿಯಾದ ಇವರ ಕದನದಲ್ಲಿ ಅರಿಕೇಸರಿಗೆ ಜಯ. ಅಂತಿಮವಾಗಿ ಅರಿಕೇಸರಿಯು ರಾಷ್ಟ್ರಕೂಟ ಮುಮ್ಮಡಿ ಅಮೋಘವರ್ಷನಿಗೆ ಪಟ್ಟಕಟ್ಟಿದ ಎಂಬ ವಿಚಾರಗಳು ವಿಕ್ರಮಾರ್ಜುನ ವಿಜಯದಿಂದ ತಿಳಿಯುತ್ತವೆ.

ಪಂಪನ ನಂತರ ಪೊನ್ನ. ಇವನು ರಾಷ್ಟ್ರಕೂಟರ ದೊರೆ ಮುಮ್ಮಡಿ ಕೃಷ್ಣನ ಸಮಕಾಲೀನ. ಶಾಂತಿ ಪುರಾಣ, ಭುವನೈಕರಾಮಾಭ್ಯುದಯ, ಇವನ ಕೃತಿಗಳು. ತನ್ನ ಎರಡನೆ ಕೃತಿ ಭುವನೈಕ ರಾಮಾಭ್ಯುದಯದಲ್ಲಿ ಮುಮ್ಮಡಿಕೃಷ್ಣನಿಗೆ ಹೆಚ್ಚಿನ ಮಹತ್ವ ನೀಡಿದ್ದಾನೆ. ಮುಮ್ಮಡಿ ಕೃಷ್ಣನ ಬಿರುದು 'ಭುವನೈಕ ರಾಮ' ಎಂದಿತ್ತು. ಕೃಷ್ಣನ ಸಾಮಂತ ಶಂಕರಗಂಡನಿಗೂ ಈ ಬಿರುದಿದ್ದು ಅವನೇ ಪೊನ್ನನ ಕೃತಿಗೆ ನಾಯಕನೆಂಬ ವಾದವಿದೆ. ಸರಿಯಾದ ಆಕರ ಲಭ್ಯವಿರುವವರಿಗೆ ಇದಮಿತ್ಥಂ ಎಂದು ಹೇಳುವುದು ಕಷ್ಟ.

ಪೊನ್ನನ ನಂತರ ಗಂಗರ ಸೇನಾಪತಿ ಚಾವುಂಡರಾಯ ಪ್ರಮುಖವಾಗುತ್ತಾನೆ. ಇವನು ಶ್ರವಣಬೆಳಗೊಳದ ಗೊಮ್ಮಟೇಶ್ವರನನ್ನು ಪ್ರತಿಷ್ಠಾಪಿಸಿದನು. ಚಾವುಂಡರಾಯಪುರಾಣದ ಕರ್ತೃವೂ ಇವನೇ ಆಗಿದ್ದಾನೆ. ಇವನ ಕಾರ್ಯ, ಸಾಧನೆಗಳು ಶ್ರವಣಬೆಳಗೊಳದ ಶಾಸನಗಳಲ್ಲಿಯೂ ಲಭ್ಯವಿವೆ. ಗಂಗ ಮನೆತನದ ಆಡಳಿತ ವ್ಯವಸ್ಥೆ, ವಿಸ್ತರಣೆ, ಶತ್ರು ನಿವಾರಣೆಯಲ್ಲಿರಾಯರ ಪಾತ್ರ, ಉಚ್ಚಂಗಿ ತೋಟ ನೃಪಕಾಮನ ಕೋಟೆ, ಬಾಗೆಯೂರು ಮೊದಲಾದ ಕಡೆ ನಡೆದ ಯುದ್ಧಗಳಲ್ಲಿ ಭಾಗಿಯಾಗಿ ಶತ್ರುಗಳನ್ನು ಎದುರಿಸಿದ ವಿವರಗಳು ಚಾವುಂಡರಾಯ ಪುರಾಣದಲ್ಲಿ ಚಿತ್ರಿತವಾಗಿದೆ. ರನ್ನನು ಚಾವುಂಡರಾಯನ ಸಹಪಾಠಿ. ಇವರಿಬ್ಬರೂ ಅಜಿತ ಸೇನಾಚಾರ್ಯರ ಶಿಷ್ಯರು. ಕೆಲವು ಕಾಲ ಚಾವುಂಡರಾಯನ ಆಸ್ಥಾನದಲ್ಲಿ ರನ್ನ ಇದ್ದನೆಂದು ತೋರುತ್ತದೆ. ಕವಿ ನಾಗವರ್ಮನ ಛಂದೋಂಬುಧಿ, ಕಾದಂಬರಿಗಳಲ್ಲಿಯೂ ಇನ್ನೊಬ್ಬ ನಾಗವರ್ಮನ ಕಾವ್ಯಾವಲೋಕನ, ಭಾಷಾಭೂಷಣ ಇವುಗಳಲ್ಲಿಯೂ ಚಾರಿತ್ರಿಕ ಅಂಶವಿದೆ. ಮೊದಲ ನಾಗರಸನು

ಸಯ್ಯದಿಯವನಾಗಿದ್ದು ಅವನು ಗಂಗರ ರಕ್ಕಸಗಂಗನ ಆಶ್ರಿತ. ಇವನು ಸಣ್ಣ ಪ್ರಾಂತ್ಯವೊಂದನ್ನು ನಾಲ್ವಡಿ ರಾಜಮಲ್ಲನ ನಂತರ ಆಳಿದನು. (ಕ್ರಿ.ಶ. ೧೦೨೦). ಕಾದಂಬರಿಯಲ್ಲಿ ಕಂಡುಬರುವ 'ಚಂದ್ರ' ಕೊಲ್ಲಾಪುರದ ಶಿಲಾಹಾರ ಮನೆತನದ ಅರಸನಾದ 'ಚಂದ್ರ' ಎಂಬುದಾಗಿ ಅಭಿಪ್ರಾಯವಿದೆ. ಅನಂತಪುರಾಣದಲ್ಲಿಯೂ ಜಗನ್ನಾಥಂ, ಮಲ್ಲನಲ್ಲಿ ಕಟಕೋಪಾಧ್ಯಯನಾ ನಾಗವರ್ಮಂ ಎಂಬ ಹೇಳಿಕೆಯ ಮಾತುಗಳು ಈ ಚಾಲುಕ್ಯಮಲ್ಲನು, ಚಾಲುಕ್ಯ ಜಗದೇಕಮಲ್ಲ, ಚಾಲುಕ್ಯ ಜಯಸಿಂಹ ಜಗದೇಕಮಲ್ಲ ಎಂಬುದಾಗಿಯೂ ಅಭಿಪ್ರಾಯವಿದೆ. ಕಾದಂಬರಿಯಲ್ಲಿ ಕಂಡುಬರುವ ಭೋಜ ಧಾರಾಪುರದ ಭೋಜನೇ ಆಗಿರಬಹುದೆಂಬ ಅಭಿಪ್ರಾಯವಿದೆ. ಕಾದಂಬರಿಯಲ್ಲಿ ಕಂಡುಬರುವ ಭೋಜ ಧಾರಾಪುರದ ಹನ್ನೊಂದನೇ ಶತಮಾನದ ಮೊದಲಲ್ಲಿ ಆಳಿದ ಈತನು ಜಯಸಿಂಹ ಜಗದೇಕಮಲ್ಲನೊಡನೆ ಕಾದುವ ಅವಕಾಶವಿತ್ತು. ಆಗ ಭೋಜ ಕೊಂಕಣವನ್ನು ತನ್ನ ವಶಮಾಡಿಕೊಂಡಿದ್ದ. ಆ ಸಮಯದಲ್ಲಿ ನಾಗವರ್ಮಭೋಜರ ಪರಿಚಯವಾಗಿ ಕಾದಂಬರಿ ರಚಿತವಾಗಿರಬಹುದು. ರತ್ನ ತ್ರಯರೆನಿಸಿಕೊಂಡವರಲ್ಲಿ ಕೊನೆಯವನು ರನ್ನ. ಇವನು ತನ್ನ ಗಧಾಯುದ್ಧದಲ್ಲಿ ಇಮ್ಮಡಿ ತೈಲಪ ಹಾಗೂ ಇರಿವ ಬೆಡಂಗ ಸತ್ಯಾಶ್ರಯರಿಗೆ ಪ್ರಾಶಸ್ತ ನೀಡಿದ್ದಾನೆ. ಸತ್ಯಾಶ್ರಯ ಇವನ ನಾಯಕ. ಗಂಗರ ಗೋವಿಂದನನ್ನು ಸತ್ಯಾಶ್ರಯ ಸೋಲಿಸಿದ ವಿವರ ರನ್ನನ ಅಜಿತಪುರಾಣದಲ್ಲಿ ಲಭಿಸುತ್ತದೆ. ಪಂಚತಂತ್ರದ ಕರ್ತೃ ಜಯಸಿಂಹ. ಚಂದ್ರರಾಜ ಚಾಲುಕ್ಯ ಇಮ್ಮಡಿ ಜಯಸಿಂಹನ ಅಧೀನದಲ್ಲಿದ್ದ ರೇಚನೃಪನ ಆಶ್ರಿತ. ಅರಸನ ಸಂಧಿವಿಗ್ರಹ, ದಂಡನಾಯಕನಾಗಿದ್ದ ಈತ, ಅರಸನ ಔದಾರ್ಯ, ಶೌರ್ಯವನ್ನು ಚಿತ್ರಿಸಿದ್ದಾನೆ. ವರ್ಧಮಾನ ಪುರಾಣದ ಕರ್ತೃ ಇಮ್ಮಡಿ ನಾಗವರ್ಮ 'ಜನನಾಥಂ ಜಗದೇಕನಲ್ಲಿ ಕಟಕೋಪಾಧ್ಯಾಯನಾಗಿದ್ದ'ನೆಂಬ ಹೇಳಿಕೆಯು ಅಂದಿನ ಚರಿತ್ರಾಂಶವನ್ನು ತಿಳಿಸುತ್ತದೆ. ದಿನಾಕರನಂದಿಯ ತತ್ವಾರ್ಥ ಸೂತ್ರ ಎಂಬ ವ್ಯಾಖ್ಯಾನ, ಶಾಂತಿನಾಥನ ಸುಕುಮಾರ ಚರಿತ್ರೆ, ಕ್ರಮವಾಗಿ ಶಾಸನಗಳ ಆಧಾರದಿಂದಲೂ ಒಪ್ಪಿತಗೊಳ್ಳುತ್ತವೆ. ಕೀರ್ತಿವರ್ಮ ಚಾಲುಕ್ಯ ಐದನೆ ವಿಕ್ರಮಾದಿತ್ಯನ ತಮ್ಮನೆಂಬುದನ್ನು ಈ ಕೃತಿ ತಿಳಿಸುತ್ತದೆ. ರಾಜಾದಿತ್ಯನ (ಕ್ರಿ.ಶ. ೧೧೯೦) ವ್ಯವಹಾರಗಣಿತದಲ್ಲಿ ಹೊಯ್ಸಳ ಇಮ್ಮಡಿ ಬಲ್ಲಾಳನ ಹಾಗೂ ಸೇವುಣ ಬಿಲ್ಲಮರ ನಡುವೆ ನಡೆದ ನೊರಟೂರ ಕದನದ ವಿವರವಿದೆ. ಅಂದಿನ ವ್ಯಾಪಾರ ವ್ಯವಹಾರದ ಬಗ್ಗೆ ವಿವರ ಇದರಲ್ಲಿ ಲಭ್ಯವಿದೆ. ಬ್ರಹ್ಮ ಶಿವನ ಸಮಯ ಪರೀಕ್ಷೆ (ಕ್ರಿ.ಶ. ೧೧೯೦) ಯಲ್ಲಿ ಚಾಲುಕ್ಯರ ಕಾಲದ ಜಾನಪದಕ್ಕೆ ಸಂಬಂಧಪಟ್ಟ ವಿವರವಿದೆ. ವ್ಯವಸಾಯ ಪದ್ಧತಿ, ನಂಬಿಕೆಗಳು, ಮೊದಲಾದ ವಿವರಗಳು ಲಭ್ಯವಿವೆ. ವಿಜಯನಗರದ ಕೃಷ್ಣದೇವರಾಯನ ದಿನಚರಿ ಈಚೆಗೆ ಲಭ್ಯವಾಗಿದೆ. ಅದು ತೆಲುಗಿನ 'ರಾಜವಚಕಮು'ವಿನ ಕನ್ನಡ ರೂಪಾಂತರ ಎಂಬ ಅಭಿಪ್ರಾಯವೂ ಇದೆ.

ಲಿಂಗಣ್ಣ ಕವಿಯ ಕೆಳದಿ ನೃಪವಿಜಯವು ಕೆಳದಿ ಅರಸರ ರಾಜಕೀಯ ಇತಿಹಾಸವನ್ನು ಸಾಕಷ್ಟು ಸಮಗ್ರವಾಗಿ ನಿರೂಪಿಸುತ್ತದೆ. ಇದರಲ್ಲಿ ದಿಲ್ಲಿ ಸಾಮ್ರಾಟರು ಬಹಮನಿ ಸುಲ್ತಾನರು, ಮರಾಠದೊರೆಗಳು, ಚಿತ್ರದುರ್ಗದ ಪಾಳೆಯಗಾರರು, ಮೊದಲಾದ ಸಮಕಾಲೀನ ಅರಸುಗಳ ವಿಜಯ ಪ್ರಸ್ತಾಪಿಸಲ್ಪಟ್ಟಿದೆ. ಅಂದಿನ ಸಣ್ಣಪುಟ್ಟ ಪಾಳೆಯ ಪಟ್ಟುಗಳಾದ ಬಿಳಗಿ, ಸೋದೆ ಮೊದಲಾದ ಅರಸು ಮನೆತನಗಳ ವಿವರವೂ ಇದರಲ್ಲಿ ಬರುತ್ತದೆ. ಗಂಗಾದೇವಿಯು ರಚಿಸಿದ ಕೆಳದಿಯ ರಾಜ್ಯಾಭ್ಯುದಯಂ ಒಂದು ಐತಿಹಾಸಿಕ ಕಾವ್ಯ. ಇದು ಕೆಳದಿ ಅರಸರ ಪೂರ್ವೋತ್ತರವನ್ನು ತಿಳಿಸುವ ಒಂದು ಕೃತಿ. ಬಿಳಗಿ ಅರಸರ ವಂಶಾವಳಿ, ಬಿಳಗಿ ಅರಸರ ಚರಿತ್ರೆ ಮೊದಲಾದವು ಬಿಳಗಿ ಅರಸುಗಳ ಆಡಳಿತ ವ್ಯವಸ್ಥೆಯನ್ನು ತಿಳಿಸುವ ಕೃತಿಗಳು. ಪಳೆಯಗಾರರುಗಳ ಇತಿಹಾಸಕ್ಕೆ ಸಂಬಂಧಪಟ್ಟಂತೆಯೂ ದೊಡ್ಡಯ್ಯನ ಚಂದ್ರಪ್ರಭಚರಿತ್ರೆ, ತಿರುಮಲಭಟ್ಟನ ಶಿವಗೀತೆ, ಮೊದಲಾದ ಕೃತಿಗಳು ಪ್ರಮುಖವಾಗುತ್ತವೆ. ಮೈಸೂರು ಅರಸರ ಇತಿಹಾಸವನ್ನು ಅಭ್ಯಸಿಸುವಲ್ಲಿ ಆ ಕಾಲದಲ್ಲಿ ರಚಿತವಾದ ಶ್ರೀರಂಗ ಮಹಾತ್ಮೆ, ಚಿಕ್ಕ ದೇವರಾಜ ವಂಶಾವಳಿ ಹೆಸರಿಸುವಂತಹವು.

ಕನ್ನಡ ಕಾವ್ಯಗಳು ಅಥವಾ ಕೃತಿಗಳು ಆಯಾ ಕಾಲದ ಚಾರಿತ್ರಿಕಾಂಶಗಳನ್ನು ತಿಳಿಯುವಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಆ ಕಾಲದ ಇತಿಹಾಸ ರಚನೆಗೆ ಇವು ಪ್ರಮುಖ ಆಕರವಾಗಿವೆ. ಸಮಕಾಲೀನ ಆರ್ಥಿಕ, ಧಾರ್ಮಿಕ, ಸಾಮಾಜಿಕ ಸ್ಥಿತಿಗತಿ, ವಿವರಗಳು ಅವುಗಳಲ್ಲಿ ಲಭ್ಯವಿವೆ. ಅವುಗಳ ಬಳಕೆ ಅಷ್ಟು ಸುಲಭದ ಮಾತಲ್ಲ. ಅದಕ್ಕೆ ಭಾಷೆ ಹಾಗೂ ಚರಿತ್ರೆಯ ಬಗೆಗೆ ತಿಳುವಳಿಕೆಯೂ ಇರಬೇಕಾಗುತ್ತದೆ. ಅಂತಿದ್ದವರು ಮಾತ್ರ ತಮ್ಮ ಏಕಾಗ್ರಚಿತ್ತತೆಯಿಂದ ಕಾವ್ಯಗಳಲ್ಲಿ ಚಾರಿತ್ರಿಕಾಂಶಗಳನ್ನು ತೆಗೆದು ಇತಿಹಾಸರಚನೆಗೆ ಬಳಸಿಕೊಳ್ಳಬಹುದು ಇಂತಹ ಪ್ರಯತ್ನ ನಡೆಯಬೇಕಾಗಿರುವುದು ಈಗಿನ ಯುವ ಸಂಶೋಧಕರಿಂದ. ಆದರತ್ತ ಪ್ರಯತ್ನ ಸಾಗಲಿ ಎಂಬುದು ಈ ಲೇಖನದ ಆಶಯ.

# ಮಲೆನಾಡಿನ ಜಾನಪದ ತೊಡುಗೆಗಳು

- ಡಾ॥ ಸುಶೀಲಾ ನೆಲ್ಲಿಸರ

ಆದಿಮಾನವ ಹೊಟ್ಟೆ ತುಂಬಿಸಿಕೊಳ್ಳಲಿಕ್ಕೆ, ಸ್ವರಕ್ಷಣೆಗೆ, ಹೋರಾಡುವ ಕಾಲದಲ್ಲಿ ತನ್ನ ಶಕ್ತಿಯುಕ್ತಿ ಸಾಮರ್ಥಗಳನ್ನೆಲ್ಲಾ ಉಪಯೋಗಿಸುತ್ತಿದ್ದ. ಬರಬರುತ್ತಾ ಸುತ್ತಲ ನಿಸರ್ಗಕ್ಕೆ ಒಗ್ಗಿಕೊಂಡಾಗ ಅಲೆಮಾರಿ ಜೀವನದಿಂದ ಒಂದೆಡೆ ನೆಲೆನಿಂತು ನೆಮ್ಮದಿಯ ಬದುಕು ಸಾಗಿಸತೊಡಗಿದಾಗ ಮನೆ, ಮಡದಿ-ಮಕ್ಕಳು ಇತ್ಯಾದಿ ಜಂಜಾಟಕ್ಕೆ ಬಿದ್ದ. ಮನುಷ್ಯ ಈ ಬಾಳನ್ನು ಬರೀ ಗೋಳು ಎನ್ನದೆ ಒಂದು ಬಗೆಯ ಬಣ್ಣದ ಲೇಪನ ಮಾಡಿದ. ಆ ಬಣ್ಣ ಆಕರ್ಷಕವಾದ ಉಡುಗೆ-ತೊಡುಗೆಗಳ ಮೂಲಕ ಕಣ್ಣು ತುಂಬಿದಾಗ ಆನಂದ ಪರವಶನಾದ. ನಿಸರ್ಗವನ್ನು ಅನುಕರಿಸಿ ಪ್ರಾಣಿಪಕ್ಷಿ, ಮರಗಿಡಗಳ, ಚೆಲುವನ್ನು ಧಾರಣ ಮಾಡತೊಡಗಿರಬೇಕು. ತಾನಿರುವ ತಾಣದಷ್ಟೇ ತಾನೂ ಸುಂದರವಾಗಿರಬೇಕೆಂಬ ಆಕಾಂಕ್ಷೆ ಉದಿಸಿರಬೇಕು. 'ತನ್ನ ಜೀವನದ ಅಸ್ತಿತ್ವಕ್ಕೆ ಆವಶ್ಯಕವಾದ ಕೆಲವು ವಸ್ತುಗಳಲ್ಲಿ ಮಾಂತ್ರಿಕ ಗುಣವಿದೆ ಎಂದು ಬಗೆದು ಅವುಗಳನ್ನು ಯಾವಾಗಲೂ ತನ್ನೊಡನೆಯೇ ಹೊತ್ತುಕೊಂಡು ತಿರುಗಾಡಲು ತೊಡಗಿದನು. ಅದಕ್ಕೆ ಅನುಕೂಲವಾಗುವಂತೆ ಅವುಗಳ ಆಕಾರ ಆಕೃತಿಗಳನ್ನು ನಿರ್ಮಿಸಿಕೊಂಡ. ಮಾಂತ್ರಿಕ ವಸ್ತುಗಳೇ ಬರಬರುತ್ತಾ ಆಭರಣಗಳಾದವು'. ಇಂದಿಗೂ ಹಲವಾರು ಆಭರಣಗಳಲ್ಲಿ ಮಾಂತ್ರಿಕ ಶಕ್ತಿ ಇದೆ ಎಂದು ನಂಬುತ್ತಾರೆ.

ಎಲ್ಲಾ ಜನಾಂಗದಲ್ಲೂ ಆಭರಣ ಧರಿಸುವುದು ಅವರ ಅಭಿರುಚಿ ಮತ್ತು ರಸಿಕತೆಯ ಕುರುಹಾಗಿಯೂ ಮೂಡಿಬಂದಿದೆ. ಪ್ರಾಣಿಗಳದ್ದೋ ಲೋಹದ್ದೋ, ಎಂಥದ್ದಾರೂ ಧರಿಸಬೇಕು. ಇದೊಂದು ಹುಚ್ಚು ಹಂಬಲ. ಹೆಣ್ಣಿಗೆ ಹೂ ಕಂಡರೆ ಮುಡಿಯಬೇಕೆಂಬ ಆಸೆ. ಹಾಗೆಯೇ 'ತಲೆ ತುರುಬು, ಕಿವಿ, ಮೂಗು, ಕೊರಳು, ಕೈ, ಸೊಂಟ, ಕಾಲ್ಬೆರಳು ಮುಂತಾಗಿ ಅವಯವಗಳ ರಚನೆಗೆ ಅನುಗುಣವಾಗಿ ಆಭರಣ ಧರಿಸುವುದು ವಾಡಿಕೆ. ನಯನಾಜೂಕಿನ ಆಭರಣಗಳನ್ನು ಭಗವಂತನಿಗೆ ತೊಡಿಸಿ ಭಕ್ತಿ ಪರವಶರಾಗುವ ಜನಪದರಿಗೆ ತಮ್ಮ ಸ್ವಂತ ಜೀವನದಲ್ಲಿ ಒಡವೆ ಎನ್ನುವುದು ಕೇವಲ ಒಂದು ಅಲಂಕಾರ ಸಾಧನವಾಗಿರದೆ ಜೀವನದ ಮೌಲ್ಯಗಳಿಗೆ ಸಂಕೇತವಾಗಿರುವ ಒಂದು ಪವಿತ್ರ ವಸ್ತುವೂ ಆಗಿದೆ. ಸ್ತ್ರೀಯರು ಅಲ್ಲದೆ

ಪುರುಷರೂ ಆಭರಣಗಳ ವ್ಯಾಮೋಹಕ್ಕೆ ಒಳಗಾಗಿರುವುದುಂಟು. ಮನುಷ್ಯ ಉಡುಗೆಗಿಂತಲೂ ಮೊದಲು ತೊಡುಗೆಗಳನ್ನು ಧರಿಸುತ್ತಿದ್ದನೆಂದು ಹೇಳುತ್ತಾರೆ. ಏಕೆಂದರೆ ಅವರು ವಾಸಿಸುವ ಭಾಗದಲ್ಲಿ ಏನೇನು ಸುಲಭವಾಗಿ ಸಿಕ್ಕಿತೋ, ಚೆಲುವಾಗಿ ಕಂಡಿತೋ, ಅಂತಹದ್ದನ್ನು ಧರಿಸಿರಲೇಬೇಕು. 'ಹೊಟ್ಟೆಗೆ ಹಿಟ್ಟಿಲ್ಲದಿದ್ದರೂ ಜುಟ್ಟಿಗೆ ಮಲ್ಲಿಗೆ ಹೂವು' ಎನ್ನುವ ಗಾದೆ ಇದನ್ನೇ ಸಮರ್ಥಿಸುತ್ತದೆ.

ಮೊದಮೊದಲು ಎಲೆ, ಹೂವು, ಕಾಯಿ, ಬಳ್ಳಿಗಳಿಂದ ಶೃಂಗರಿಸಿಕೊಳ್ಳುತ್ತಿದ್ದವ ಕ್ರಮೇಣ ಹಾರ, ಕಿರೀಟ, ಕಂಕಣಗಳನ್ನು ಮಾಡಿಕೊಳ್ಳಹತ್ತಿದ. ಇಂಥ ಆಭರಣ ಧರಿಸುವುದು ಕೂಡ ಭೌಗೋಳಿಕ ವಾತಾವರಣಕ್ಕೆ ತಕ್ಕಂತೆ ಅಂದರೆ ಮಲೆನಾಡು, ಬಯಲುಸೀಮೆ, ಕರಾವಳಿ ಸೀಮೆಗಳಿಗೆ ಅನುಗುಣವಾಗಿ ಬದಲಾಗಿರುವುದನ್ನು ಕಾಣಬಹುದು. ಇಂದು ತೊಡುಗೆಗಳು ಸೌಂದರ್ಯವರ್ಧಕಗಳಾಗಿದ್ದರೆ, ಹಿಂದೆ ಮಲೆನಾಡಿನಲ್ಲಿ ಆಭರಣಗಳನ್ನು ಧರಿಸುವುದು ಧಾರ್ಮಿಕ, ಸಾಮಾಜಿಕ ಮತ್ತು ಶ್ರೀಮಂತಿಕೆಯ ದ್ಯೋತಕವಾಗಿತ್ತೆಂದೂ, ಮಾನಮರ್ಯಾದೆಯ ಸಂಕೇತವಾಗಿ ಧರಿಸುತ್ತಿದ್ದರೆಂದೂ, ತಿಳಿದುಬರುತ್ತದೆ.

ಮಲೆನಾಡಿನಲ್ಲಿ ದೀವರು, ಲಂಬಾಣಿಗರು, ಜೋಗಿಗಳು, ಹಕ್ಕಿಪಿಕ್ಕಿಗಳು, ಒಕ್ಕಲಿಗರು, ಮಲೆಕುಡಿಯರು, ಕಟ್ಟೆಗೌಳಿಗರು, ಛಲವಾದಿಗರು, ಮುಂತಾದ ನೂರಾರು ಬಗೆಯ ಜಾತಿ ಜನಾಂಗಗಳನ್ನು ಕಾಣಬಹುದಾಗಿದೆ. ಇವರಲ್ಲಿ ಹೊಟ್ಟೆ ಬಟ್ಟೆಗೆ ಕೊರೆಯಿದ್ದರೂ ಅವರವರ ಅಂತಸ್ತಿಗನುಗುಣವಾಗಿಯೂ, ಮಾನ ಮರ್ಯಾದೆಯ ಸಂಕೇತವಾಗಿಯೂ ಕೆಲವೊಂದು ಬೆಳ್ಳಿ,ಬಂಗಾರ, ತಾಮ್ರ, ಹಿತ್ತಾಳೆ, ಮಣಿಸರಗಳ ತೊಡುಗೆಗಳನ್ನು ಮಾಡಿಕೊಳ್ಳುತ್ತಾರೆ. ಏನಿಲ್ಲವೆಂದರೂ ಮೈಮೇಲೆ ಸುಂದರ ನಮೂನೆಗಳ ಹಚ್ಚೆಯನ್ನಾದರೂ ಹಾಕಿಸಿಕೊಳ್ಳಲೇಬೇಕು. ಹಿಂದೆ ಮಲೆನಾಡಿನ ಲೋಹದ ಆಭರಣಗಳಿಗಿಂತಲೂ ಸುಲಭವಾಗಿ ದೊರೆಯುತ್ತಿದ್ದ ಶ್ರೀಗಂಧದ ಮರದ ಚಕ್ಕೆಯಿಂದ ಮೂಗಿಗೆ ಮೂಗುಬೊಟ್ಟು, ಕಿವಿಯೋಲೆ, ಸೊಂಟಕ್ಕೆ ಗಂಧದಮರದಲ್ಲಿ ನಾಗಪ್ರತಿಮೆ ಇರುವ ಪಟ್ಟಿ ಹಾಕುತ್ತಿದ್ದರಂತೆ. ಕಪ್ಪೆಚಿಪ್ಪು, ಕವಡೆ, ಗಾಜಿನಮಣಿ, ಗೇರುಬೀಜದ ಕಾಯಿ, ಮೊದಲಾದವುಗಳಿಂದ ಕೈಕಾಲಿನ ಆಭರಣಗಳನ್ನು ಮಾಡಿಕೊಳ್ಳುತ್ತಿದ್ದರಂತೆ. ಅದೇ ರೀತಿ ಮಲೆನಾಡಿನಲ್ಲಿ ಜಿಂಕೆ, ಸಾರಂಗ, ಹುಲಿ, ಸಿಂಹ, ನವಿಲು ಮುಂತಾದ ಪ್ರಾಣಿಗಳನ್ನು ಬೇಟೆಯಾಡುತ್ತಿದ್ದು, ಆ ಪ್ರಾಣಿಗಳ ಕೊಂಬಿನಿಂದ, ಉಗುರುಗಳಿಂದ, ನವಿಲುಗರಿಗಳಿಂದ, ಹಲ್ಲುಗಳಿಂದ ದೇಹವನ್ನು ಅಲಂಕರಿಸಿಕೊಳ್ಳುತ್ತಿದ್ದರಂತೆ. ಚಿನ್ನ ಬೆಳ್ಳಿ ಆಭರಣಗಳು ಕೂಡ ಮಲೆನಾಡಿನಲ್ಲಿ ಬೆಳೆವ ದವಸಧಾನ್ಯಗಳ ಇಲ್ಲವೇ ಮರ,ಗಿಡ, ಕಾಯಿಗಳ ಹೆಸರನ್ನೇ ಹೊತ್ತಿರುವುದು ಒಂದು ಸೋಜಿಗದ ಸಂಗತಿ. ಎಲೆಬುಗುಡಿಕಾಯಿ, ಅಕ್ಕಿಸರ, ಛತ್ತದ ಸರ, ಗೋಧಿಸರ, ನೆಲ್ಲಿಕಾಯಿಸರ, ದಾಸವಾಳದ ಅಂದುಗೆ, ತಲೆಗೆ

ಕಮಲದ ಹೂವು, ನಾಗರಹೂವು, ಮೀನು ಮಾಡ್ಲಿ, ಹುಲಿಮುಖ ಇತ್ಯಾದಿಗಳನ್ನು ಹೆಸರಿಸಬಹುದು. ಏನೇ ಆಗಿದ್ದರೂ ವ್ಯಕ್ತಿ, ಪ್ರಕೃತಿಯ ಸೃಷ್ಟಿಸೊಬಗಿನಿಂದಾಗಿ ಹಚ್ಚೆ ರಂಗವಲ್ಲಿಗಳಲ್ಲಿ, ವಸ್ತ್ರಾಭರಣಗಳ ವಿನ್ಯಾಸ ಕಂಡುಕೊಂಡ.

ಸ್ತ್ರೀಯು ದೇಹ ಮತ್ತು ಮುಖಗಳಿಗೆ ಗಂಧ, ಕುಂಕುಮ, ಅರಿಶಿಣ, ಕಾಡಿಗೆ, ಮದರಂಗಿ, ಅರಗಿನ ಬಣ್ಣ ಮುಂತಾದವುಗಳನ್ನು ಸೌಂದರ್ಯಕ್ಕಿಂತ ಹೆಚ್ಚಾಗಿ ಕಾಂತಿವರ್ಧಕಗಳಾಗಿ ಬಳಸುತ್ತಿದ್ದಳು. ಸೂರ್ಯಹಾರ, ಚಂದ್ರಹಾರ, ನಾಗಮುರಿಗೆಗಳು ಅವುಗಳ ಆರಾಧನೆಯಿಂದಾಗಿ ಬೆಳೆದು ಬಂದವು. ಮಲೆನಾಡಿನ ಜನರು ಎಲ್ಲಾ ಕಾಲದಲ್ಲೂ ಆಭರಣಗಳನ್ನು ಧರಿಸುತ್ತಾರಾದರೂ ಕೆಲವೊಂದನ್ನು ಮಾತ್ರ ಕೆಲವು ವೇಳೆ ಕಡ್ಡಾಯವಾಗಿ ಧರಿಸುತ್ತಾರೆ. ಮದುಮಗ,ಕಂಠೀಸರ, ಮುತ್ತಿನುಂಗುರ ಧರಿಸಲೇಬೇಕು. ಮದುಮಗಳು ಕಡಗವನ್ನು ಹಾಕಲೇಬೇಕು.

''ಕಡಗ ಇಲ್ಲದ ಕೈ ಕರುಣ ಇಲ್ಲದ ಪುರುಷ' ಎಂಬ ಗೀತೆ ಇದನ್ನೆ ಧ್ವನಿಸುತ್ತದೆ. ಹಾಗೆಯೇ ಹೆಣ್ಣಿಗೆ ಕಾಲುಂಗರವೂ ಅಷ್ಟೇ ಶ್ರೇಷ್ಠವಾದುದು. ಗಂಡಸರಿಗೆ, ಮಕ್ಕಳಿಗೆ, ಹೆಂಗಸರಿಗಿರುವಷ್ಟು ವೈವಿಧ್ಯಮಯವಾದ ಆಭರಣಗಳು ಅಷ್ಟಾಗಿ ಇರದ ಕಾರಣ ವಿವಿಧ ದೃಷ್ಟಿಕೋನಗಳ ಹಿನ್ನೆಲೆಯಲ್ಲಿ ಆಭರಣಗಳ ವಿಸ್ತೃತ ಪರಿಚಯಮಾಡಿಕೊಳ್ಳಬಹುದು. ಧಾರ್ಮಿಕ ದೃಷ್ಟಿ : ಹುಟ್ಟಿದ ಕೂಸುಗಳು ಸಾಯುತ್ತಿದ್ದರೆ, ಕಬ್ಬಿಣದ ಬಳೆ ಹಾಕುವುದು. ದೃಷ್ಟಿದೋಷಕ್ಕಾಗಿ ದೃಷ್ಠಿಮಣಿ, ಹವಳದ ಬಳೆ, ಬೆಳ್ಳಿ ಉಡುದಾರ ಹಾಕುವುದು, ಕಣ್ಣಂಚಿಗೆ ಕಾಡಿಗೆ, ಕಾಲಿಗೆ ಕಾಲ್ಗಡಗ ಹಾಕುವುದು. ಚೇಳು ಕಚ್ಚಬಾರದೆಂದು ಕಿವಿಗೆ ಮುರ, ಮುಟ್ಟುಚಟ್ಟು ಆಗಬಾರದೆಂದು ತೊಟ್ಲಿಗೆ ಕರಡಿಕೂದಲು ಕಟ್ಟುವುದು, ಬೆಚ್ಚಿಬೀಳುತ್ತಿದ್ದರೆ ಹುಲಿಯುಗುರು ಕಟ್ಟುವುದು ಇತ್ಯಾದಿಗಳಲ್ಲಿ ಆಚರಣೆ ವಿಧಿನಿಷೇಧಗಳ ಹಿನ್ನೆಲೆಯಲ್ಲಿರುವ ತೊಡುಗೆಗಳ ಪಾತ್ರ ಗಮನಾರ್ಹವಾದುದು. ಹಾಗೆಯೇ ಮಕ್ಕಳಾಗದಿದ್ದರೆ ನಾಗರ ಆಭರಣ ಮಾಡಿಸಿ ಹಾಕಿಕೊಳ್ಳುವುದು. ಮದುವೆಯಾಗದಿದ್ದರೆ ಮನೆದೇವರು ಹೇಳಿದ್ದು ಮಾಡಿಸುವುದು, ಗೃಹಪ್ರವೇಶ, ದೇವರ ಜಾತ್ರೆಗಳಿಗೆ, ದೇವರಿಗೆ, ಆಭರಣ ಮಾಡಿಸುವುದು ಇವುಗಳಿಗೆ ಆಚರಣಾತ್ಮಕವಾದ ಆಭರಣಗಳು ಗೋಚರಿಸುತ್ತವೆ.

ಕೆಲವು ಆಭರಣಗಳು ನಂಬಿಕೆಗಳ ಮೂಲಕವೇ ವ್ಯಕ್ತಿಗಂಟಿಕೊಂಡು ಬಂದಿವೆ. ನೀಲಿ ಉಂಗುರದಲ್ಲಿ ಶನಿ ಇದ್ದಾನೆ ಬಳಸಬಾರದೆಂದಿದ್ದರೆ, ಹವಳದ ಉಂಗುರ ತೊಟ್ಟರೆ ಅದೃಷ್ಟ ಎಂದು ನಂಬಲಾಗುತ್ತದೆ. ನೀಲಿ ಮೂಗುಬೊಟ್ಟು ಧರಿಸಿದರೆ ಅದೃಷ್ಟವೆಂದು ತಿಳಿಯುವುದು ಭೂತದ ಹೆಸರು ಹೇಳಿ, ಭೂತದ ಆಕಾರಮಾಡಿ ಕೊರಳಸರಕ್ಕೆ ಆ ದೈವದ ಪದಕವನ್ನು ಹಾಕಿಕೊಂಡರೆ ಮಾಟಮಂತ್ರ ತಾಯಿತಗಳನ್ನು,

ಉಂಗುರಗಳನ್ನು ಸ್ತ್ರೀ ವಶೀಕರಣಕ್ಕಾಗಿ ಧರಿಸುವುದಿದೆ. ಪಂಚಲೋಹದ ಬಳೆಮಾಡಿಸಿ ಹಾಕಿಕೊಂಡರೆ ಇತರರ ಗಮನ ಸೆಳೆಯುವುದಷ್ಟೇ ಅಲ್ಲದೆ ಅದರಿಂದ ದೇಹದ ಉಷ್ಣಸ್ಥಿತಿ ಸಮವಾಗಿರುತ್ತದೆಂಬ ನಂಬಿಕೆ ಇದೆ ಪ್ರತಿಷ್ಠೆ, ಗೌರವ, ಅಂತಸ್ತು ಹೆಗ್ಗಳಿಕೆಗಳ ಸಂಕೇತವಾಗಿ ಕೆಲವು ಆಭರಣಗಳು ಬಳಸಲ್ಪಡುತ್ತವೆ. ಉದಾಹರಣೆಗೆ ರಾಜಮಹಾರಾಜರು ಮುತ್ತಿನ ಕಿರೀಟಗಳನ್ನು ಬಳಸುವುದು. ಪಟೇಲರು ಗೌಡರುಗಳು ತಮ್ಮ ಕೋಟಿಗೆ ಅಥವಾ ತಲೆಯ ಪೇಟಕ್ಕೆ ಚಿನ್ನದ ಸರಪಳಿಗಳನ್ನು ಹಾಕಿಕೊಳ್ಳುವುದು. ಸ್ವಾಮಿಗಳು ತಲೆಗೆ ಚಿನ್ನದ ಕಿರೀಟ ತೊಡುವುದು, ರುದ್ರಾಕ್ಷಿ ಸರಗಳನ್ನು ಹಾಕಿಕೊಳ್ಳುವುದು ಪ್ರತಿಷ್ಠೆಯ ಸಂಕೇತಗಳಾಗಿವೆ.

ಶೃಂಗಾರದ ದೃಷ್ಟಿ : ಆಭರಣಗಳನ್ನು ಧರಿಸಿ ಸಿಂಗರಿಸಿಕೊಂಡು ಸುತ್ತಮುತ್ತಲಿನ ಜನರ ಲಕ್ಷ್ಯವನ್ನು ತನ್ನತ್ತ ಸೆಳೆಯುವಂತೆ ಮಾಡಿ ಲೈಂಗಿಕ ಹಾಗೂ ಮಾನಸಿಕ ತೃಪ್ತಿಹೊಂದುವುದು. ಎಲ್ಲಕಿಂತ ಮಾನ ಮರ್ಯಾದೆಗಾಗಿ ಎಂಥ ಕಡುಬಡವರೂ ಕೂಡ ಒಡವೆಗಳನ್ನು ಧರಿಸುತ್ತಾ ಬಂದಿದ್ದಾರೆ. ಉದಾ: ಗೊಲ್ಲರಲ್ಲಿ ಕರಿಮಣಿಸರಗಳನ್ನು ಹೆಣ್ಣುಮಕ್ಕಳಿಗೆ ತಂದೆ ತಾಯಿ ಹಾಕಲೇಬೇಕು. ವಯಸ್ಸಾದ ಹೆಂಗಸರು ಬೆಳ್ಳಿ ಕಾಲ್ಕಡಗ, ಕಿವಿ ಓಲೆಗಳನ್ನು ಇಡಲೇಬೇಕು. ಮದುವೆಯಾದವರು ಓಲೆ, ಮೂಗಬೊಟ್ಟು, ಸುತ್ತು ಕಾಲುಂಗುರ ಕುಂಕುಮಗಳನ್ನು ಮುತ್ತೈದೆ ಆಭರಣಗಳೆಂದು ಹಾಕಬೇಕು. ಲಂಬಾಣಿಗರಲ್ಲಿ ಮದುವೆ ಮಾಡಿಕೊಡುವಾಗ ತಾಯಿಯಾದವಳು ಮಗಳಿಗೆ ಒಂದು ಜೊತೆ ಬಟ್ಟೆ ಮತ್ತು ತಲೆಯ ಮೇಲೆ ಹಾಕಿಕೊಳ್ಳುವ ಮುಸುಕಿನ ಬಟ್ಟೆಗೆ ಬೆಳ್ಳಿಯ ಬಿಲ್ಲೆಗಳನ್ನು ಹೊಲಿದ ಸುಂದರವಸ್ತ್ರ ಕೊಡಲೇಬೇಕು. ಹೀಗೆ ಕೆಲವು ಕಡ್ಡಾಯವಾಗಿ ಕೊಡಬೇಕಾದ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಆಭರಣಗಳಾದರೆ, ಮತ್ತೆ ಕೆಲವು ಶ್ರೀಮಂತರು ಹಣವನ್ನು ಹೂತಿಟ್ಟದ್ದು ಸಾಕಾಗಿ ಚಿನ್ನದ ಒಡವೆಗಳನ್ನು ಮಾಡಿಸಿ ಹೆಂಡಿರು ಮಕ್ಕಳ ಮೈಮೇಲೆ ಹಾಕಿ ಬಿಡೋಣ ಎಂದಿದ್ದರಿಂದಲೂ ಹುಟ್ಟಿಕೊಂಡಂತಹುವಾಗಿವೆ. ಕಡು ಬಡವರಾದವರು ಹಣ ನಗದು ಇದ್ದರೆ ಇರುವುದಿಲ್ಲ ಎಂದು ಒಡವೆ ಮಾಡಿಸುವುದರಿಂದಲೂ, ಕೆಲವೊಮ್ಮೆ ಅಕ್ಕಸಾಲಿಗರೇ ಶ್ರೀಮಂತ ಮನೆಯ ಹೆಂಗಸರಿಗೆ ಬೇರೆ ಬೇರೆಯ ವಿನ್ಯಾಸದ ಒಡವೆಗಳನ್ನು ಮಾಡಿ ತೋರಿಸಿ ಆಸೆ ಹುಟ್ಟಿಸುವುದರಿಂದಲೂ ಆಭರಣಗಳು ಹುಟ್ಟಿಕೊಂಡವು. ಎಲ್ಲಾ ಕಡೆ ಬರುವ ಉಡುಗೆ ತೊಡುಗೆಗಳ ಕಾರ್ಯಗಳ ರೂಪಗಳನ್ನು, ಜನಾಂಗಿಕ, ಧಾರ್ಮಿಕ, ಸಾಮಾಜಿಕ, ವೃತ್ತಿಪರ, ದೇಶೀಯ ಪ್ರಾಯೋಗಿಕ, ಲಿಂಗಭೇದಾತ್ಮಕ ಮಕ್ಕಳಿಗೆ, ಸೌಂದರ್ಯಕ್ಕೆ ಹಾಗೂ ಆಧುನಿಕತೆಗೆ ಎಂದು ವಿಂಗಡಿಸಬಹುದು (ಹಿ.ಶಿ.ರಾ.ಚ.ಗೌ.ಪು.೧೨೩) ಇದು ಎಲ್ಲ ಭಾಗಕ್ಕೂ ಅನ್ವಯಿಸುತ್ತದೆ. ಕೆಲವು ತೊಡುಗೆಗಳು ನಿಸರ್ಗದ ನಿಕಟಸಂಪರ್ಕದಿಂದ ಬಂದಿರುತ್ತವೆ. ಮತ್ತೆ ಕೆಲವು ಧಾರ್ಮಿಕ ಮುಖಂಡರಿಂದ ಹೇರಲ್ಪಟ್ಟಿರುತ್ತವೆ. ಈಗ

ಮಲೆನಾಡಿನ ಭಾಗದ ತೊಡುಗೆಗಳು ಹಿಂದಿನಂತಿಲ್ಲ. ಕಾರಣ ಸಾಮಾಜಿಕ ರಾಜಕೀಯ, ಧಾರ್ಮಿಕ ಮೌಲ್ಯಗಳು ಬದಲಾದಂತೆಲ್ಲ ಜನಾಂಗ ಸಾಮಾಜಿಕ ಪರಿವರ್ತನೆಗೆ ಒಳಪಟ್ಟಂತೆಲ್ಲಾ ಪ್ರತಿಯೊಂದು ಸಮೂಹ ತನ್ನ ನೀತಿ ನಿಯಮಗಳಲ್ಲಿ ಬದಲಾಗುತ್ತದೆ. ಆದರೆ ಕೆಲವು ಬುಡಕಟ್ಟು ಜನಾಂಗಗಳಲ್ಲಿ ಬದಲಾಗದೆಯೇ ಉಳಿದು ಬಂದಿದೆ. ಈಗಲೂ ಹಳೆಯ ಕಾಲದ ಸ್ತ್ರೀಯ ಕಿವಿ ಮೂಗುಗಳನ್ನು ಪರೀಕ್ಷಿಸಿದರೆ ಎಷ್ಟು ರಂಧ್ರಗಳಿವೆ, ಅವರು ಎಷ್ಟು ಬಗೆಯ ಚಿನ್ನ ಬೆಳ್ಳಿ ತಾಮ್ರದ ವಡವೆಗಳನ್ನು ತಮ್ಮ ಮೈಮೇಲೆ ಹೊರುತ್ತಿದ್ದರು. ಅವುಗಳನ್ನು ತೊಟ್ಟ ಅವರ ವಿಜೃಂಭಣೆ ಏನು ಎಂಬುದನ್ನು ಕಲ್ಪಿಸಿಕೊಳ್ಳಲೂ ಸಾಧ್ಯವಾಗುವುದಿಲ್ಲ. ನಮ್ಮ ಹಳೆಯ ತಲೆಮಾರಿನ ಅಜ್ಜಿ ತಾಯಂದಿರಲ್ಲಿ ಮಾತ್ರ ಇಂಥ ವಡವೆಗಳನ್ನು ಗುರುತಿಸುತ್ತಿದ್ದೇವೆ. ಅವರೂ ಗತಿಸಿದರೆ ಈಗಿನವರು ಅವರ ವಡವೆಗಳನ್ನು ಮುರಿಸಿ ಬೇರೆ ವಿನ್ಯಾಸದವುಗಳನ್ನು ಮಾಡಿಸಿಕೊಳ್ಳುತ್ತಾರೆ; ಆಗ ಅವುಗಳ ಹೆಸರು ಕೂಡ ಮಾಯವಾಗುತ್ತದೆ.

ಮಲೆನಾಡಿನ ಕೆಲವು ಜನಾಂಗಗಳ ಹಿನ್ನೆಲೆಯಲ್ಲಿ ಆಭರಣಗಳ ವೈವಿಧ್ಯತೆಯನ್ನು ನೋಡಬಹುದು.

ಜೋಗಿಗಳು ತಮಗೇ ವಿಶಿಷ್ಟವಾದ ಆಭರಣಗಳನ್ನು ಧರಿಸುತ್ತಾ ಬಂದಿದ್ದಾರೆ. ಗಂಡಸರು ತಲೆಗೆ ಪೇಟ ಅದರ ಮೇಲೊಂದು ನವಿಲುಗರಿ, ಕಿವಿಗೆ ಮುರ, ಸೊಂಟಕ್ಕೆ ಬೆಳ್ಳಿಪಟ್ಟಿ, ಕಾಲಿಗೆ ಕಾಲುಂಗುರ ಹಾಕಿದರೆ, ಹೆಂಗಸರು ತೋಳ್ಬಂದಿ, ಕಾಲುಂಗರ, ಬುಗುಡಿ, ಸೊಂಟಪಟ್ಟಿ ಮೂಗಿಗೆ ಎರಡೂ ಬದಿಗೆ ಮೂಗುತಿ (ನತ್ತು) ತಲೆಗೆ ಕಣಗಲು ಹೂವುಗಳಿಂದ ಶೃಂಗರಿಸಿಕೊಂಡಿರುತ್ತಾರೆ. ಬುಡಬುಡಿಕೆಯವರು ಕೂಡ ಇದೇ ರೀತಿ ಇರುತ್ತಾರೆ. ಆದರೆ ಹೆಂಗಸರಿಗೆ ಹರಳಿನ ಮೂಗುತಿ ಇರುತ್ತದೆ.

ಗೊಲ್ಲರಾದರೆ, ಕೈಗೆ ಬೆಳ್ಳಿಬಳೆ, ಬೆರಳಿಗೆ ಬೆಳ್ಳಿಸುತ್ತಿನುಂಗುರ, ಹೆಗಲಮೇಲೆ ದಟ್ಟಿರುಮಾಲು, ಕೈಲಿ ಕೋಲು ಹಿಡಿದು ಎಮ್ಮೆ ಮೇಯಿಸುತ್ತಾರೆ. ಹೆಂಗಸರು ಸೊಂಟಕ್ಕೆ ಚರ್ಮದ ಅಥವಾ ಬೆಳ್ಳಿಪಟ್ಟಿ; ಕಾಲುಂಗುರ ಮೇಲ್ಮೈಗೆ ರವಿಕೆ ಇಲ್ಲದೆ ಹಾಲಕ್ಕಿ ಜನಾಂಗದ ಹೆಂಗಸರಂತೆ ಬರೀ ಮಣಿಸರಗಳಿಂದ ಅಲಂಕರಿಸಿಕೊಂಡಿರುತ್ತಾರೆ. ಕೈಗೆ ಹಿತ್ತಾಳೆ ಗೊಲ್ಲಗಡಗ, ಕಾಲಂದಿಗೆ, ಕಾಲುಮಿಂಚು, ಮೇಟಿ ಮುಂತಾದುವಿದ್ದು, ತಲೆಕೂದಲಿಗೆ ತುಪ್ಪ ಅಥವಾ ಬೆಣ್ಣೆಹಾಕಿ ಚೆನ್ನಾಗಿ ಬಾಚಿ ಉದ್ದಜಡೆ ಹಾಕಿ ಜಡೆಬಿಲ್ಲೆ ಇಟ್ಟು, ಕಣಗಲಹೂ ದಾಸವಾಳದ ಹೂ ಮುಡಿದಿರುತ್ತಾರೆ. ಗಂಡಸರು ಹೆಂಗಸರು ಕಾಡಿನಲ್ಲಿ ಎಮ್ಮೆ ಮೇಯಿಸುತ್ತಾ ತಿರುಗುವವರಾದ್ದರಿಂದ ನಿಸರ್ಗದ ಎಲ್ಲ ಬಗೆಯ ಹೂಗಳನ್ನು ಕೊಯ್ದು ಮುಡಿದು ಅಲಂಕಾರಗೊಳ್ಳುವುದೇ ಸಡಗರ.

ಮಲೆನಾಡಿನಲ್ಲಿ ಲಿಂಗವಂತರೂ ಬಹಳ ಸಂಖ್ಯೆಯಲ್ಲಿದ್ದಾರೆ. ಇವರ ಸಿರಿವಂತ ಹೆಣ್ಣುಮಕ್ಕಳ ಅಲಂಕಾರ ವಿಶೇಷವಾದ ದಿನಗಳಲ್ಲಿ ಗಮನಿಸುವಂಥಹುದು. ಬುಗುಡಿ

ಅಂಜಿನ ಸೀರೆ ಉಟ್ಟು, ನೆತ್ತಿ ಮೇಲೆ ಹರಳು ಬಂಗಾರ, ಅದರ ಕೆಳಗೆ ಕೇದಿಗೆ, ಅದರ ಕೆಳಗೆ ರಾಗಟೆ, ಕೇದಿಗೆ ನಾಗರ, ಅನಂತರ ಚೌಲಿಕಟ್ಟು ಜಡೆಗೆ, ಒಂದರ ಕೆಳಗೆ ಒಂದರಂತೆ ಆ ಜಡೆಗೆ ಏಳುತಿರುಪಿನ ಹೂವು ಇದಕ್ಕೆ ಜಡೆಬಂಗಾರ ಎನ್ನುತ್ತಾರೆ. ಇವರಲ್ಲೂ ಏಳು ವಿಧದ ಜಡೆ ಬಂಗಾರಗಳಿರುತ್ತವೆ. ಜಡೆಯ ಕೊನೆಗೆ ಶೃಂಗಾರದ ಕುಚ್ಚು ಹಾಕಿಕೊಂಡು ಜಡೆ ಹೆಣೆದಿರುತ್ತಾರೆ. ಕೊರಳಿಗೆ ಅಡ್ಡಿಕೆ ಇದರಲ್ಲೇ ಎರಡು ಗುಂಡಿನ ಅಡ್ಡಿಕೆ, ಮೂರು ಜೋಡಿಗುಂಡಿನ ಅಡ್ಡಿಕೆ,ಅಲ್ಲದೆ ಕುತ್ತಿಗೆಯನ್ನು ಬಂಧಿಸಿರುವಂತೆ ಹಾಕಿಕೊಳ್ಳುವ ಉಗುರು ಅಡ್ಡಿಕೆ ಎಂಬ ವಿವಿಧ ಬಗೆಗಳುಂಟು ಇದರಲ್ಲೊಂದಾವುದನ್ನಾದರೂ ಹಾಕಿಕೊಂಡು ಅನಂತರ ಏಳೆಳೆ ಕಟಾಣಿಸರ, ಬಂಗಾರದ ಸರಿಗೆ, ಪವನ್ ಸರ, ಎರಡು ಸಾಲಿನ ಅಡ್ಡಿಕೆ, ಮೂರು ಸಾಲಿನ ಅಡ್ಡಿಕೆ ಒಂದು ಪದಕದ ಸರ ಅನಂತರ ತಾಳಿಸರ ಹಾಕಿಕೊಂಡಿರುತ್ತಾರೆ.

ಕಿವಿಯನ್ನು ಸುತ್ತುವರಿದಂತೆ ಸುತ್ತಲೂ ಬುಗುಡಿ , ಬಾವುಲಿ, ವೊಗಬಾವುಲಿ, ತೊಟ್ಟು, ಬುರುಗಿನ ಬಾವುಲಿ, ಅನಂತರ ಮೂರು ಚಳ್ಳಿ ತುಂಬಿನ ವಾಲೆ, ಕಿವಿಯಿಂದ ಮೇಲ್ಭಾಗದ ಕೂದಲಿಗೆ ಸಿಕ್ಕಿಸೋದಕ್ಕೆ ಕಣಗಲಸರ, (ಕೆನ್ನೆ ಸರಪಳಿ) ಇವುಗಳನ್ನು ವಿಶೇಷವಾಗಿ ಜಾತ್ರೆ ಹಬ್ಬಗಳಲ್ಲಿ ಧರಿಸುತ್ತಾರೆ. ಬಿಡುವಿನ ದಿನಗಳಲ್ಲಿ ಬೆಂಡೋಲೆ ತೆಗೆದು ಸಣ್ಣವಾಲೆ ಜುಂಕಿ ಇಟ್ಟುಕೊಳ್ಳುತ್ತಾರೆ. ಇವೆಲ್ಲಾ ಐದು ಕಳಸ ಏಳು ಕಳಸದವು. ಕಿವಿಕಡ್ಡಿ (ಬಂಗಾರದ್ದು) ಬುರುಗಿನ ಬಾವುಲಿ. ತಟ್ಟು, ಬೆಂಡೋಲೆ ಇವನ್ನು ನಿತ್ಯವೂ ಇಟ್ಟುಕೊಳ್ಳುತ್ತಾರೆ. ಮೂಗಿಗೆ ಮೂರು ರಂಧ್ರ ಎರಡು ಮೂಗುಬೊಟ್ಟು ಒಂದು ಮುಕುರ ಇಡುತ್ತಾರೆ. ಶ್ರೀಮಂತರಾದರೆ ಬಲಗಡೆ ತೋಳಿಗೆ ಚಿನ್ನದ್ದೇ ತೋಳಬಂದಿ ಹಾಕುತ್ತಾರೆ. ಉಳಿದವರು ಬೆಳ್ಳಿ ತೋಳ್ಬಂದಿ, ಎಡತೋಳಿಗೆ ತೋಳಸರಿಗೆ ಹಾಕಿಕೊಳ್ಳುತ್ತಾರೆ. ಕಾಯಿಲೆ ಬಿದ್ದಾಗ ಅಥವಾ ಬಹಳ ಕೆಲಸದಿಂದ ತೋಳಿನ ಹೊಡೆತ ಬಂದಾಗ ದೇವಸ್ಥಾನಕ್ಕೆ ಹೋಗಿ ಪೂಜೆ ಮಾಡಿಸಿ ದೇವರ ಮುಂದೆ ನಿನ್ನ ಹೆಸರಿನಲ್ಲಿ ತೋಳ ಸರಿಗೆ ಮಾಡಿಸಿ ಹಾಕ್ಕೋತೀನಿ ಎಂದು ಹರಕೆ ಮಾಡಿಕೊಂಡ ಕೆಲವರು ಇದನ್ನು ಧರಿಸುತ್ತಾರೆ.

ಮುಂಗೈಗೆ ಹಿಂದಕ್ಕೆ ಗೀರುಬಳೆ, ನಡುವೆ ಗಾಜಿನ ಬಳೆ. ಅವು ಕರೀಬಣ್ಣದ್ದು, ನೀಲಿ ಬಣ್ಣದ್ದು ಅಥವಾ ಅಂಬಾರಿ ಬಣ್ಣದ್ದಿರುತ್ತವೆ.

ಸೊಂಟಕ್ಕೆ ಸಾದಾಪಟ್ಟಿ, ಗೆಜ್ಜೆಪಟ್ಟಿ, ವಂಕಿ ಪಟ್ಟಿ, ಅಂತ ಹಿಂದೆ ಹೆಂಗಸರು ಹಾಕಿಕೊಳ್ಳುತ್ತಿದ್ದರು. ಸೊಂಟದಲ್ಲಿ ಪಟ್ಟಿ ಇಲ್ಲವೆಂದರೆ ಸರಾಗ ಓಡಾಡಲು ಸಾಧ್ಯವಿಲ್ಲ ಎಂಬುದೊಂದಾದರೆ, ಸೊಂಟಪಟ್ಟಿ ಧರಿಸಿ ನಡುವಿನ ಸೌಂದರ್ಯವನ್ನು ಕಾಪಾಡಿಕೊಳ್ಳುವುದು ಅವರ ಉದ್ದೇಶವಾಗಿತ್ತು ನಾಲ್ಕು ತಿಂಗಳ ಗರ್ಭಿಣಿಯಾದಾಗ ಮಾತ್ರ ಸೊಂಟಪಟ್ಟಿ ತೆಗೆಯುತ್ತಿದ್ದರು ಹೆಣ್ಣು ಮಕ್ಕಳು ಗರ್ಭಿಣಿಯಿರುವುದನ್ನು

ತೀಳೆಯಲೂ ಈ ಸೊಂಟಪಟ್ಟಿ ಸಹಾಯಕವಾಗಿತ್ತು. ಕಾಲಿಗೆ ಕಾಲ್ಗಡಗ, ಗಗ್ಗರ (ಗಿಲ್ಲೆಸರ) ಕಾಲಿನ ಹೆಬ್ಬೆರಳನ್ನು ಹೊರತುಪಡಿಸಿ ಉಳಿದ ಬೆರಳುಗಳಿಗೆ ಸುತ್ತುಕಾಲುಂಗುರ, ಮೂರು ಕಳಸದ ಪಿಲ್ಲಿ, ಮಿಾನುಪಿಲ್ಲಿ, ವಾರಮಿಂಚು, ಹೀಗೆ ಕ್ರಮವಾಗಿ ನಾಲ್ಕುಬೆರಳುಗಳಿಗೂ ಇಡುತ್ತಿದ್ದರು. ಕಾಲಿನ ಅಂದ ಹೆಚ್ಚಿಸಲು ಇವೆಲ್ಲವನ್ನು ಇಚ್ಛಿಸುತ್ತಿದ್ದರು.

ಗಂಡಸತ್ತರೆ ಬುಗುಡಿ, ಮುಕುರ, ಮೂಗುತಿ ಇಡುವಂತಿರಲಿಲ್ಲ. ಕಿವಿಗೆ ಬೆಂಡೋಲೆ ಬಿಟ್ಟು ಇನ್ನೇನೂ ಇಡುವಂತಿಲ್ಲ. ಕೈಯಲ್ಲಿದ್ದ ಮಣ್ಣಿನ ಗಾಜಿನ ಬಳೆ ಒಡೆದು ಬರೀ ಬೆಳ್ಳಿಯ ದುಂಡು ಇಡುತ್ತಿದ್ದರು.

ಹೀಗೆ ಅಡಿಯಿಂದ ಮುಡಿಯವರೆಗೆ ಹೆಣ್ಣು ಗಂಡುಗಳನ್ನು ಸುತ್ತುವರಿಯುತ್ತಿದ್ದ ಆಭರಣಗಳ ಪಟ್ಟಿ ಹೇಳಿದಷ್ಟೂ ಮುಗಿಯುವುದಿಲ್ಲ. ಪ್ರಾಚೀನ ಕಾಲದಿಂದ ಅರ್ವಾಚೀನ ಕಾಲದವರೆಗೂ ಹೊಸ ಹೊಸ ರೂಪ, ಆಕಾರ, ವಿನ್ಯಾಸಗಳನ್ನು ಪಡೆಯುತ್ತಾ ಬದಲಾಗುತ್ತಾ ಇವು ಅಳಿಯದೆ ಉಳಿದು ಬರುತ್ತಲೇ ಇವೆ.

# ಗೀತಾ ದರ್ಶನ

- ವಿದ್ವಾನ್ ಎನ್. ರಂಗನಾಥ ಶರ್ಮ

ಮನುಷ್ಯನ ಪ್ರವೃತ್ತಿ ಸಹಜವಾಗಿ ವಿಷಯೋಪಭೋಗದ ಕಡೆಗೆ ಇರುತ್ತದೆ. ಇದೇನೂ ನಿಷಿದ್ಧವಲ್ಲ. ಉಪಭೋಗದಿಂದಾಗುವ ಸುಖಕ್ಕಾಗಿ ಅರ್ಥಕಾಮಗಳನ್ನು ಈತನು ಗಳಿಸುವಾಗ ಮುಗ್ಗರಿಸಬಹುದು. ಅಲ್ಲದೆ. ಈ ವಿಷಯಗಳು ಭೋಗೇಚ್ಛೆಯನ್ನು ತೀವ್ರಗೊಳಿಸುತ್ತಲೇ ಹೋಗಬಹುದು. ಈ ಕಾರಣಗಳಿಂದ ಅವನು ಅಧರ್ಮದಲ್ಲಿ ತೊಡಗುವುದು ಅನಿವಾರ್ಯವಾಗಿ, ಮಾನವನ ಅಧಃ ಪತನವು ಸಮೀಪಿಸುತ್ತದೆಯೆಂದೇ ಋಷಿಗಳು ಮಾನವನ ಹಿತಕ್ಕಾಗಿ - ಮಾರ್ಗದರ್ಶನಕ್ಕಾಗಿ ಶಾಸ್ತ್ರವಿಧಿಗಳನ್ನು ಪ್ರವರ್ತಿಸಿದರು. ಮಾನವನು ತನ್ನ ಇಂದ್ರಿಯಗಳನ್ನು ಹತೋಟಿಯಲ್ಲಿಟ್ಟುಕೊಳ್ಳದೇ ಹೋದರೆ ಅವನು ಕೆಡುತ್ತಾನಲ್ಲದೆ, ಕ್ರಮವಾಗಿ ಮಾನವ ಸಮಾಜವೂ ಕೆಟ್ಟ ಪರಿಣಾಮಕ್ಕೆ ಒಳಗಾಗುತ್ತದೆ. ಇದೆಲ್ಲವನ್ನು ಸರಿಪಡಿಸಿ ವ್ಯವಸ್ಥೆಗೊಳಿಸುವುದಕ್ಕೆ ಲೌಕಿಕ ನೀತಿ ಶಾಸ್ತ್ರವೇ ಸಮರ್ಥವಾದರೂ, ಆತ್ಮಚಿಂತನ ವಿಲ್ಲದ ಮನುಷ್ಯನ ಮೇಲೆ ನೀತಿ ಶಾಸ್ತ್ರದ ಪ್ರಭಾವ ಅತ್ಯಲ್ಪವೇ ಆದೀತು.

ಆತ್ಮಚಿಂತನದ ಮಾರ್ಗದಲ್ಲಿ ವೈಶೇಷಿಕವೇ ಮೊದಲಾದ ದರ್ಶನಗಳು ಪ್ರಶಂಸನೀಯವಾದ ಪ್ರಯತ್ನಗಳನ್ನು ಮಾಡಿವೆ. ಅವುಗಳಲ್ಲಿ ಶೇಖರಪ್ರಾಯವಾಗಿ ನಿಂತದ್ದು ವೇದಾಂತದರ್ಶನ. ವೇದಾಂತವೆಂದರೆ ಉಪನಿಷತ್ತು. ವೇದದ ಪೂರ್ವಕಾಂಡಗಳಲ್ಲಿ ಸೂಕ್ಷ್ಮವಾಗಿ ಪ್ರಸ್ತುತವಾದದ್ದು ವೇದಾಂತದಲ್ಲಿ ವಿಸ್ತಾರವನ್ನು ಪಡೆದು ಸರ್ವಮಾನ್ಯವಾಗಿರುತ್ತದೆ. ಈ ವೇದಾಂತ ವಾಕ್ಯಗಳನ್ನು ಗ್ರಥಿಸಿ, ಅವುಗಳ ಅರ್ಥವನ್ನು ನಿರ್ಣಯಿಸಿ, ಏಕವಾಕ್ಯತೆಯಿಂದ ಸಿದ್ಧಾಂತವನ್ನು ರೂಪಿಸಿರತಕ್ಕದ್ದು ಬಾದರಾಯಣಾಚಾರ್ಯರ ಶಾರೀರಕ ಸೂತ್ರ. ಆತ್ಮ ಸಾಕ್ಷಾತ್ಕಾರವೇ ಮೋಕ್ಷವಾದ್ದರಿಂದ ಅದನ್ನು ಪಡೆಯಲು ಬೇಕಾದ ಸಾಧನ ಸಂಪತ್ತುಗಳನ್ನು ವಿವರಿಸುವ ಗ್ರಂಥ ಭಗವದ್ಗೀತೆ.

ಸರ್ವೋಪನಿಷದೋ ಗಾವೋ ದೋಗ್ಧಾ ಗೋಪಾಲನಂದನಃ।
ಪಾರ್ಥೋ ವತ್ಸಃ ಸುಧೀರ್ಭೋಕ್ತಾ। ದುಗ್ಧಂ ಗೀತಾಮೃತಂ ಮಹತ್ ॥

'ಸಮಸ್ತ ಉಪನಿಷತ್ತುಗಳೂ ಹಸುಗಳು, ಗೋಪಾಲ ನಂದನನಾದ ಶ್ರೀಕೃಷ್ಣನು ಹಾಲು ಕರೆಯುವವನು. ಅರ್ಜುನನು ಹಸುವಿನ ಕರು. ಬುದ್ಧಿಶಾಲಿಯು ಈ ಹಾಲನ್ನು ಕುಡಿಯತಕ್ಕವನು. ಗೀತಾಮೃತವೆಂಬ ಈ ಹಾಲು ಮಹತ್ತ್ವವನ್ನು ಪಡೆದದ್ದು.'

ಗೀತಾಮಾಹಾತ್ಮ್ಯದ ಈ ಪ್ರಶಂಸೆ ಅರ್ಥವತ್ತಾದದ್ದು. ಗೊಂಡಾರಣ್ಯದಂತಿರುವ ಉಪನಿಷತ್ತುಗಳಲ್ಲಿ ನಮಗೆ ಬೇಕಾದ ಮೂಲಿಕೆಯನ್ನು ಹುಡುಕಿ ತೆಗೆಯುವುದು ಎಲ್ಲರಿಗೂ ಸಾಧ್ಯವಾದದ್ದಲ್ಲ. ಹುಡುಕಿ ತೆಗೆಯಲು ತತ್ತ್ವಜ್ಞನೂ ಸರ್ವಜ್ಞನೂ ಆದ ಶ್ರೀ ಕೃಷ್ಣನೇ ಸಮರ್ಥನಾದವನು. ಮೊಸರನ್ನು ಕಡೆದು ಬೆಣ್ಣೆಯನ್ನು ತೆಗೆಯುವಂತೆ, ಉಪನಿಷತ್ ಸಮುದ್ರವನ್ನು ಕಡೆದು ತೆಗೆದಿರುವ ಬೆಣ್ಣೆ ಈ ಭಗವದ್ಗೀತೆ. ಉಪನಿಷತ್ತು, ಶಾರೀರಕ ಸೂತ್ರ, ಭಗವದ್ಗೀತೆ - ಇವು ಮೂರನ್ನು ವೇದಾಂತದ ಪ್ರಸ್ಥಾನ ತ್ರಯವೆನ್ನುತ್ತಾರೆ. ಭಗವದ್ಗೀತೆ ಸಾಧನ ಪ್ರಸ್ಥಾನವೆನಿಸಿದೆ.

ಗೀತೆಯ ಸ್ವರೂಪ : ಭಾರತ ಯುದ್ಧಾರಂಭದಲ್ಲಿ ಶ್ರೀ ಕೃಷ್ಣನು ಅರ್ಜುನನ ರಥವನ್ನು ಕೌರವ ಸೇನೆಯ ಎದುರಿಗೆ ತಂದು ನಿಲ್ಲಿಸಿದಾಗ, ಅರ್ಜುನನು ತಾನು ಯಾರೊಡನೆ ಯುದ್ಧಮಾಡಬೇಕಾಗಿದೆಯೆಂಬುದನ್ನು ಗಮನಿಸಿ ನೋಡುತ್ತಾನೆ. ಭೀಷ್ಮ, ದ್ರೋಣ, ಶಲ್ಯ, ದುರ್ಯೋಧನ ಮೊದಲಾದವರು ಅವನ ಕಣ್ಣಿಗೆ ಬೀಳುತ್ತಾರೆ. ಈ ಗುರುಹಿರಿಯರನ್ನು, ಅಣ್ಣತಮ್ಮಂದಿರನ್ನು, ಬಂಧುಗಳನ್ನು ಮಿತ್ರರನ್ನು, ಕೊಲ್ಲಬೇಕಾಗಿ ಬಂದಿತೆಂಬ ಮರುಕ ಅವನನ್ನು ಆವರಿಸಿ ಬಿಡುತ್ತದೆ. ಈ ಮರುಕದಿಂದ ಶೋಕಮೋಹಗಳು ಪ್ರಬಲವಾಗಿ ತಾನು ಯುದ್ಧಮಾಡುವುದಿಲ್ಲವೆಂದು ಗಾಂಡೀವವನ್ನು ಕೆಳಗಿಟ್ಟು, ದೀನನಾಗಿ ಕುಳಿತಾಗ, ಶ್ರೀಕೃಷ್ಣನು ಅವನಿಗೆ ಉಪದೇಶಿಸಿದ್ದೇ ಭಗವದ್ಗೀತೆಯೆಂಬುದು ಸುಪ್ರಸಿದ್ಧವಾದದ್ದು.

ಇದರಲ್ಲಿ ಒಟ್ಟು ಏಳುನೂರು ಶ್ಲೋಕಗಳಿವೆ. ಅರ್ಜುನನಿಗೂ ಭಗವಂತನಿಗೂ ನಡೆದ ಸಂವಾದವಿದು. ಅರ್ಜುನನ ಶೋಕಮೋಹಗಳನ್ನು ನಿವಾರಿಸುವುದಕ್ಕಾಗಿ ಬೇರೆ ಉಪಾಯವನ್ನು ಕಾಣದೆ, ಪರಮಾರ್ಥ ತತ್ತ್ವವನ್ನೇ ಭಗವಂತನು ಬೋಧಿಸಬೇಕಾಯಿತು. ಆತನ ಬೋಧೆಯಲ್ಲಿ ಅರ್ಜುನನಿಗೆ ತುಂಬ ಆಸಕ್ತಿಯು ತಲೆದೋರಿ, ತನ್ನ ಸಂದೇಹಗಳನ್ನು ಶಂಕೆಗಳನ್ನು ಪರಿಹರಿಸಿಕೊಳ್ಳಲು, ಪ್ರಶ್ನೆಗಳನ್ನು ಕೇಳಬೇಕಾಗಿ ಬರುತ್ತದೆ. ಅವುಗಳಿಗೆ ಸರಿಯಾದ ಉತ್ತರಗಳನ್ನು ಶ್ರೀಕೃಷ್ಣನು ಕೊಟ್ಟಿದ್ದಾನೆ. ಗುರು ಶಿಷ್ಯಸಂವಾದ ರೂಪವಾಗಿರುವ ಈ ಗ್ರಂಥವು ಓದುಗರ ಆಸಕ್ತಿ ಕುತೂಹಲಗಳನ್ನು ಹೆಚ್ಚಿಸುತ್ತಾ ಹೋಗುತ್ತದೆ. ಹೇಗೆ ಒಬ್ಬ ಮಹಾಕವಿಯು ತನ್ನ ಕಾವ್ಯದಲ್ಲಿ ಸಹೃದಯರಾದ ವಾಚಕರ ಪ್ರೀತಿ ಕುತೂಹಲಗಳನ್ನು ಕೆರಳಿಸುತ್ತಾ ಮುಂದುವರಿಯುತ್ತಾನೋ, ಹಾಗೆಯೇ ಇದರಲ್ಲಿ ಜಿಜ್ಞಾಸುಗಳ ಆದರವನ್ನು

ಬೆಳೆಸುತ್ತ ಅವರನ್ನು ತನ್ನೆಡೆಗೆ ಆಕರ್ಷಿಸುತ್ತಾ ಮುಂದುವರಿಯುತ್ತದೆ. ಭಗವದ್ಗೀತೆ. ಕಾವ್ಯದಂತೆ ರಮಣೀಯವಾದ ಸಂಭಾಷಣೆಯ ಶೈಲಿಯು ಶಾಸ್ತ್ರದ ಕರ್ಕಶತೆಯನ್ನು ದೂರಮಾಡಿ, ಸಿಹಿಯಾದ ದಿವ್ಯೌಷಧವನ್ನು ಓದುಗರಿಗೆ ಕುಡಿಸುತ್ತದೆ. ಕೆಲವೆಡೆ ಸಮಸ್ಯಾತ್ಮಕವಾದ ಅಲಂಕಾರವನ್ನೊಳಗೊಂಡು ಕುತೂಹಲವನ್ನು ಅಧಿಕವಾಗಿ ಕೆರಳಿಸುವುದು ಉಂಟು. ಉದಾಹರಣೆಗೆ ಈ ಶ್ಲೋಕಗಳನ್ನು ನೋಡಬಹುದು.

ಯಾ ನಿಶಾ ಸರ್ವಭೂತಾನಾಂ। ತಸ್ಯಾಂ ಜಾಗರ್ತಿ ಸಂಯಮೀ ॥

ಯಸ್ಯಾಂ ಜಾಗ್ರತಿ ಭೂತಾನಿ । ಸಾ ನಿಶಾ ಪಶ್ಯತೋ ಮುನೇಃ ೨-೬೯

'ಸಕಲ ಪ್ರಾಣಿಗಳಿಗೂ ಯಾವುದು ರಾತ್ರಿಯೋ ಆ ರಾತ್ರಿಯಲ್ಲಿಯೋಗಿಯು ಎಚ್ಚರಿಸುತ್ತಾನೆ. ಯಾವಾಗ ಪ್ರಾಣಿಗಳು ಎಚ್ಚರವಾಗಿರುತ್ತವೋ ಆಗ ಜ್ಞಾನಿಯಾದ ಮುನಿಗೆ ರಾತ್ರಿಯಾಗಿರುತ್ತದೆ.'

ಕರ್ಮಣ್ಯಕರ್ಮಯಃ ಪಶ್ಯೋ। ದಕರ್ಮಣಿ ಚ ಕರ್ಮಯಃ॥

ಸ ಬುದ್ಧಿಮಾನ್ ಮನುಷ್ಯೇಷು। ಸ ಯುಕ್ತಃ ಕೃತ್ಸ್ನ ಕರ್ಮಕೃತ್ ॥ ೪-೧೮

'ಕರ್ಮದಲ್ಲಿ ಅಕರ್ಮವನ್ನು ಯಾವನು ನೋಡುತ್ತಾನೋ ಮತ್ತು ಅಕರ್ಮದಲ್ಲಿ ಕರ್ಮವನ್ನು ನೋಡುತ್ತಾನೋ ಅವನು ಯೋಗಿ. ಸಕಲಕರ್ಮಗಳನ್ನು ಮಾಡತಕ್ಕವನೆಂದರೆ ಅವನೇ'

ಇನ್ನು ಕೆಲವೆಡೆಯಲ್ಲಿ ಪೂರ್ವಾಪರ ವಿರೋಧಗಳಿರುವಂತೆ ಕಾಣುವದೂ ಉಂಟು. ಈ ವಿರೋಧವನ್ನು ಹೇಗೆ ಪರಿಹರಿಸಿಕೊಳ್ಳಬೇಕೆಂಬುದು ಕಷ್ಟವೇ ಆಗುತ್ತದೆ. ಅಲ್ಲದೆ ಗೀತೆಯಲ್ಲಿ ಬಳಸಿರುವ ಯೋಗ, ಕರ್ಮ, ಗುಣ, ಜ್ಞಾನ, ಸಾಂಖ್ಯ, ಸಂನ್ಯಾಸ, ತ್ಯಾಗ-ಮೊದಲಾದ ಶಬ್ದಗಳು ಒಂದೇ ಅರ್ಥದಲ್ಲಿರದೆ ಬೇರೆ ಬೇರೆ ಸಂದರ್ಭಗಳಲ್ಲಿ ವಿಭಿನ್ನಾರ್ಥಗಳನ್ನು ಕೊಡುತ್ತವೆ. ಆದ್ದರಿಂದ ಗೀತಾರ್ಥವಿವೇಚನೆ ಸುಲಭವಾದದ್ದಲ್ಲ. ಆಯಾ ಸಂಪ್ರದಾಯದಲ್ಲಿ ಪರಂಪರೆಯಿಂದ ಬಂದ ವ್ಯಾಖ್ಯಾನಗಳು ಈ ತೊಂದರೆಗಳನ್ನೆಲ್ಲಾ ಗಮನಿಸಿ ಹೀಗೆಯೇ ಗೀತಾಭಿಪ್ರಾಯವೆಂದು ನಿಷ್ಕರ್ಷೆ ಮಾಡಿವೆ. ಈ ಮಾತನ್ನು ಹೇಳಿದ್ದೇಕೆಂದರೆ, ಗೀತೆಯು ಸುಲಭವಾದ ಭಾಷೆಯಲ್ಲಿರುವುದರಿಂದ ನಾನೇ ಅರ್ಥ ಮಾಡಿಕೊಳ್ಳಬಹುದೆಂದು ಯಾರಾದರೂ ಪ್ರಯತ್ನಿಸಿದರೆ ಅಪಾರ್ಥವನ್ನು ಮಾಡಿಕೊಳ್ಳುವ ಸನ್ನಿವೇಶವೇ ಒದಗಿ, ತಪ್ಪು ಕಲ್ಪನೆಗಳಿಗೆ ದಾರಿಯಾಗುತ್ತದೆಯೆಂದು ತಿಳಿಸುವುದು ಆವಶ್ಯಕವಾದ್ದರಿಂದ, ಉಪನಿಷತ್ತು, ಬ್ರಹ್ಮಸೂತ್ರ, ಭಗವದ್ಗೀತೆ ಇವು ಮೂರು ವೇದಾಂತದ ಪ್ರಸ್ಥಾನತ್ರಯವೆಂದು ಅಂಗೀಕೃತವಾದ್ದರಿಂದ, ಮೂರರ ಸಿದ್ಧಾಂತವೂ ಒಂದೇ ಆಗಬೇಕು. ಮೂರರ ಪ್ರತಿಪಾದನೆಯೂ ಏಕಮುಖವಾಗಿರಬೇಕೆಂಬುದು

ಸ್ಪಷ್ಟವಾಗಿದೆ. ಕೆಲವು ಆಧುನಿಕ ವಿದ್ವಾಂಸರು ಹೇಳುವಂತೆ ಒಂದೊಂದು ಪ್ರಸ್ಥಾನದ ಆಶಯವು ಭಿನ್ನವಾಗಿದೆಯೆಂಬುದು ಯುಕ್ತವಲ್ಲ.

ಭಗವದ್ಗೀತೆಯ ಪ್ರತಿಯೊಂದು ಅಧ್ಯಾಯದ ಕಡೆಯಲ್ಲಿರುವ ಪುಷ್ಪಿಕೆಯಲ್ಲಿ 'ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ' ಎಂದು ಹೇಳಿದೆ. ಇದು ಬ್ರಹ್ಮವನ್ನು ತಿಳಿಸುವ ವಿದ್ಯೆ ಮತ್ತು ಯೋಗ ಶಾಸ್ತ್ರ ಎಂದು ಗೊತ್ತಾಗುತ್ತದೆ. ಇಲ್ಲಿ ಹೇಳಿರುವ ಕರ್ಮಯೋಗ, ಧ್ಯಾನಯೋಗ, ಭಕ್ತಿಯೋಗ ಮತ್ತುಜ್ಞಾನಯೋಗಗಳು. ಇನ್ನು ಶಾಸ್ತ್ರವೆಂದರೇನು ?

ಪ್ರವೃತ್ತಿರ್ವಾ ನಿವೃತ್ತಿರ್ವಾ। ನಿತ್ಯೇನ ಕೃತಕೇನ ವಾ।

ಪುಂಸಾಂ ಯೇನೋಪದಿಶ್ಯೇತ। ತಚ್ಛಾಸ್ತ್ರಮಭಿಧೀಯತೆ।

'ಒಂದಾನೊಂದು ಕರ್ತವ್ಯದಲ್ಲಿ ಪ್ರವೃತ್ತಿಯನ್ನಾಗಲಿ ಅಥವಾ ಹೇಯವಾದ ಒಂದು ವಸ್ತುವಿನಿಂದ ನಿವೃತ್ತಿಯನ್ನಾಗಲಿ ಯಾವುದು ಜನರಿಗೆ ತಿಳಿಸಿ ಕೊಡುತ್ತದೆಯೋ ಅದು ಶಾಸ್ತ್ರ.' ಎಂದು ಶಾಸ್ತ್ರದ ಲಕ್ಷಣವನ್ನು ಹೇಳಿದ್ದಾನೆ. 'ಶಂಸನಾತ್ ಶಾಸ್ತ್ರಂ' ಎಂದು ಹೇಳುವುದುಂಟು. ತಿಳಿಯಬೇಕಾದ ಒಂದು ವಸ್ತುವನ್ನು ಯಾವುದು ತಿಳಿಸಿ ಕೊಡುತ್ತದೆಯೋ ಅದು ಶಾಸ್ತ್ರವೆಂದರ್ಥ. ಈ ಎಲ್ಲ ಶಾಸ್ತ್ರಲಕ್ಷಣಗಳೂ ಗೀತೆಗೆ ಸರಿಯಾಗಿ ಅನ್ವಯಿಸುತ್ತವೆ. ಜ್ಞೇಯವಾದ ಬ್ರಹ್ಮಸ್ವರೂಪವನ್ನು ಇದು ತಿಳಿಸಿಕೊಡುತ್ತದೆ. ಕರ್ತವ್ಯದಲ್ಲಿಯೂ ತೊಡಗಿಸುತ್ತದೆ. ಕೆಲವು ವಿಷಯಗಳಿಂದ ನಿವೃತ್ತಿಯನ್ನೂ ಬೋಧಿಸುತ್ತದೆ.

ಭಗವದ್ಗೀತೆಯು ಏನನ್ನುಬೋಧಿಸುತ್ತದೆ ? ಒಟ್ಟು ಅದರ ಉಪದೇಶದ ಸಾರ ಸಂಗ್ರಹವೇನು ? ಎಂಬುದನ್ನರಿಯಬೇಕಾದರೆ, ಅದು ಯಾವ ಕಾರಣದಿಂದ ಪ್ರವೃತ್ತವಾಯಿತು. ? ಎನ್ನುವುದನ್ನು ತಿಳಿಯುವುದು ಆವಶ್ಯಕ. ಹಿಂದೆ ಹೇಳಿದಂತೆ ಅರ್ಜುನನಿಗೆ ಒದಗಿದ ಶೋಕಮೋಹಗಳನ್ನು ನಿವಾರಿಸುವುದಕ್ಕಾಗಿಯೇ ಗೀತೆ ಪ್ರವೃತ್ತವಾಗಿದೆ. ಅರ್ಜುನನ್ನು ಯುದ್ಧದಲ್ಲಿ ತೊಡಗಿಸುವುದು ಅದರ ಉದ್ದೇಶವಲ್ಲ. ಅರ್ಜುನನು ಯುದ್ಧದಲ್ಲಿ ತೊಡಗಿಯೇ ಇದ್ದವನು. ಯುದ್ಧ ಮಾಡುವುದಕ್ಕಾಗಿಯೇ ಸಜ್ಜಾಗಿ ಬಂದವನು. ಅವನು ಮಹಾವೀರನೂ ಧೀರನೂ ಆಗಿದ್ದನು, ಭೀಷ್ಮ ದ್ರೋಣಾದಿಗಳೊಡನೆ ಹೋರಾಡಲು ಅವನಿಗೆ ಭಯವೇನೂ ಇರಲಿಲ್ಲ. ಸಾಕ್ಷಾತ್ತಾಗಿ ಅವರನ್ನು ಎದುರಿಗೆ ಕಂಡಾಗ ಧೀರೋದಾತ್ತನಾದ ಆತನ ಹೃದಯದಲ್ಲಿ ಕಾರುಣ್ಯ ಉದಯಿಸಿತು. ಎಲ್ಲ ಯುದ್ಧಗಳಂತಲ್ಲದೆ ನಿರ್ಣಾಯಕ ಯುದ್ಧವಾದ್ದರಿಂದ ಕೌರವರೆಲ್ಲರೂ ಸಾಯಬೇಕು; ಇಲ್ಲವೆ, ಪಾಂಡವರೆಲ್ಲರೂ ಸಾಯಬೇಕು ಎಂಬ ಪರಿಸ್ಥಿತಿಯುಂಟಾಗಿತ್ತು. ಈ ಕಾರಣದಿಂದ ಅವನ ಧೀರ ಹೃದಯವು ದ್ರವಿಸಿ ಕರಗಿ ಹೋದ್ದರಿಂದ ಯುದ್ಧವನ್ನು ಮಾಡುವುದಿಲ್ಲವೆಂದನು. ಅಂತಹ ಪರಿಸ್ಥಿತಿಯಲ್ಲಿ

ವೇದಾಂತದ ತತ್ತ್ವವನ್ನು ಬೋಧಿಸದ ಹೊರತು ಅವನ ಅಜ್ಞಾನವು ಹೋಗುವುದಿಲ್ಲ., ಅಜ್ಞಾನ ಹೋಗದೆ ಶೋಕವು ನೀಗುವುದಿಲ್ಲ, ಎಂದು ಭಾವಿಸಿದ ಭಗವಂತನು ಪರಮಾರ್ಥತತ್ತ್ವವನ್ನೇ ಬೋಧಿಸಿ ಅವನ ಮೋಹವೆಂಬ ಅಜ್ಞಾನವನ್ನು ಕಳೆದಿದ್ದಾನೆ. ಇದು ಗೀತೆಯ ಅಂತ್ಯಭಾಗದಲ್ಲಿ ಅರ್ಜುನನು ಹೇಳುವ ಮಾತಿನಿಂದಲೇ ಗೊತ್ತಾಗುತ್ತದೆ.

ನಷ್ಟೋ ಮೋಹಃ ಸ್ಮೃತಿರ್ಲಬ್ಧಾ । ತ್ವತ್ಪ್ರಸಾದಾನ್ಮಯಾಚ್ಯುತ ।

ಸ್ಥಿತೋಸ್ಮಿ ಗತಸಂದೇಹಃ । ಕರಿಷ್ಯೇ ವಚನಂ ತವ ॥

'ಓ ಕೇಶವ, ನಿನ್ನ ಅನುಗ್ರಹದಿಂದ ನನ್ನ ಅಜ್ಞಾನವು ತೊಲಗಿತು. ಆತ್ಮಸ್ವರೂಪಜ್ಞಾನವಾಯಿತು. ನನ್ನ ಸಂದೇಹಗಳು ನಿವೃತ್ತವಾಗಿ ಹೋದವು. ನಿನ್ನ ಮಾತನ್ನು ನಡೆಸುತ್ತೇನೆ ಎನ್ನುತ್ತಾನೆ. ಶೋಕಮೋಹಗಳು ಹೋದೊಡನೆ, ತಾನು ಯಾವ ಕಾರ್ಯಕ್ಕಾಗಿ ಬಂದಿದ್ದನೋ ಅದರಲ್ಲಿ ತೊಡಗುತ್ತಾನೆ. ಶೋಕಮೋಹಗಳು ಅಡ್ಡಿಯಾಗಿದ್ದವು. ಅವು ನಿವೃತ್ತವಾದುವು. ಹರಿಯುವ ನೀರಿಗೆ ಅಡ್ಡಬಂದ ಕಲ್ಲನ್ನು ತೆಗೆದರೆ ನೀರು ತಾನಾಗಿ ಮುಂದೆ ಹರಿಯುತ್ತದೆ. ನೀರನ್ನೇನೂ ತಳ್ಳಬೇಕಾಗಿಲ್ಲ. ಆದ್ದರಿಂದ ಯುದ್ಧದಲ್ಲಿ ಅರ್ಜುನನ್ನು ಪ್ರವರ್ತಿಸುವುದು ಇಷ್ಟವಾದ್ದರಿಂದ ಶೋಕ ಮೋಹಗಳನ್ನು ಶ್ರೀಕೃಷ್ಣನು ದೂರಮಾಡಿದ್ದಾನೆ. ಗೀತೆಯ ಪರಮ ತಾತ್ಪರ್ಯವು ಮನುಷ್ಯನ ಅಜ್ಞಾನವನ್ನು ಹೋಗಲಾಡಿಸುವುದು ಮಾತ್ರವೆಂದು ಇದರಿಂದ ನಿರ್ಧರಿಸಬಹುದು. ಆದ್ದರಿಂದಲೇ ಶ್ರೀಕೃಷ್ಣನು ಮಾಟಮಾಡಿದ್ದಾನೆ. ಗೀತೆಯ ಪರಮ ತಾತ್ಪರ್ಯವು ಮನುಷ್ಯನ ಅಜ್ಞಾನವನ್ನು ಹೋಗಲಾಡಿಸುವುದು ಮಾತ್ರವೆಂದು ಇದರಿಂದ ನಿರ್ಧರಿಸಬಹುದು. ಆದ್ದರಿಂದಲೇ ಶ್ರೀ ಕೃಷ್ಣನು ಆತ್ಮನ ನಿತ್ಯತ್ವವನ್ನು ಬೋಧಿಸುತ್ತ. 'ಆತ್ಮನು ಸಾಯುವುದೂ ಇಲ್ಲ ಅವನನ್ನುನೀನು ಕೊಲ್ಲುವುದೂ ಇಲ್ಲ. ಪ್ರಕೃತಿ ತನ್ನ ಕೆಲಸವನ್ನು ಮಾಡುತ್ತದೆ.' ನೀನು ತಟಸ್ಥನಾಗಿ ಸಾಕ್ಷಿಯಾಗಿರತಕ್ಕವನು. ಪ್ರಕೃತಿ ನಿರ್ಮಿತವಾದ ದೇಹವನ್ನು ಪ್ರಕೃತಿಯು ನಾಶಮಾಡುತ್ತದೆ. ನೀನೇಕೆ ಚಿಂತಿಸುತ್ತೀಯೆ ?' ಎಂದು ಹೇಳುತ್ತಾ ಹೋಗಿದ್ದಾನೆ. ಮತ್ತೆ ಮತ್ತೆ 'ನಾನುಸೋಚಿತು ಮರ್ಹಸಿ' (೨-೨೫) 'ನೈವಂ ಶೋಚಿತುಮರ್ಹಸಿ' (೨-೨೬) 'ನ ತ್ವಂ ಶೋಚಿತು ಮರ್ಹನಿ' (೨-೨೭,೩೦) ಎಂದು ಹೇಳುತ್ತಲೇ ಬಂದಿದ್ದಾನೆ. ಆತ್ಮಜ್ಞಾನವಾದಾಗ ಯಾವ ಶೋಕವೂ ಇರುವುದಿಲ್ಲ. 'ತತ್ರ ಕೋ ಮೋಹಃ ಕಃ ಶೋಕಃ ಏಕತ್ವ ಮನುಪಶ್ಯತಃ' (ಈಶಾವಾಸ್ಯ) 'ತರತಿಶೋಕಮಾತ್ಮವಿತ್' (ಛಾಂ. ೭-೧-೩) ಎಂದು ಶ್ರುತಿಯು ಆತ್ಮಜ್ಞಾನದಿಂದಲೇ ಶೋಕ ಮೋಹಗಳ ನಿವೃತ್ತಿಯನ್ನು ಹೇಳಿದೆ.

ಭಗವದ್ಗೀತೆಯಲ್ಲಿ ಆತ್ಮಜ್ಞಾನವನ್ನು ಪಡೆಯುವುದಕ್ಕಾಗಿ ನಾಲ್ಕು ಯೋಗಗಳನ್ನು ಸೋಪಾನಕ್ರಮದಲ್ಲಿ ಬೋಧಿಸಿದ್ದಾರೆ. ಆತ್ಮಜ್ಞಾನವು

ಸುಲಭವಾದ್ದಲ್ಲ. ಗ್ರಂಥಗಳನ್ನೋದಿ, ಉಪನ್ಯಾಸಗಳನ್ನುಕೇಳಿ ಬರತಕ್ಕದ್ದು ಪರೋಕ್ಷವಾದ ಜ್ಞಾನ. ಅಪರೋಕ್ಷವಾದ ಆತ್ಮ ಸಾಕ್ಷಾತ್ಕಾರವೇ ಬೇರೆ, 'ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿತತ್ವತಃ' ಎಂದು ಶ್ರೀಕೃಷ್ಣನೇ ಹೇಳಿದ್ದಾನೆ. ಆತ್ಮದರ್ಶನಕ್ಕಾಗಿ ಪ್ರಯತ್ನಿಸತಕ್ಕವರೇ ವಿರಳ. ಪ್ರಯತ್ನಿಸತಕ್ಕವರಲ್ಲಿ ಸಾವಿರಕ್ಕೊಬ್ಬರು ಅಥವಾ ಲಕ್ಷಕೋಟಿಗಳಲ್ಲೊಬ್ಬರು ಆತ್ಮ ಸಾಕ್ಷಾತ್ಕಾರವನ್ನು ಮಾಡಿಕೊಳ್ಳುತ್ತಾರೆ. ಇದು ಕಠಿಣವಾದ್ದೆಂದು ಯಾರೂ ಪ್ರಯತ್ನಿಸದಿರಬಾರದು. ಇದು ತನ್ನ ಶ್ರೇಯಸ್ಸಿಗಾಗಿಯೇ ಇರುವುದರಿಂದ ಯಥಾಶಕ್ತಿಯಾಗಿ ಪ್ರತಿಯೊಬ್ಬ ಮಾನವನೂ ಆತ್ಮಜ್ಞಾನಕ್ಕಾಗಿ ಪ್ರಯತ್ನಿಸುತ್ತಲೇ ಇರಬೇಕು. 'ಇತಃ ಕೋನ್ವಸ್ತಿ ಮೂಢಾತ್ಮಾ ಯಸ್ತು ಸ್ವಾರ್ಥೇ ಪ್ರಮಾದ್ಯತಿ' ಎಂದು ಶ್ರೀ ಶಂಕರಾಚಾರ್ಯರು ವಿವೇಕ ಚೂಡಾಮಣಿಯಲ್ಲಿ, ವಿಷಯಭೋಗದಲ್ಲಿ ತೊಡಗಿ ಆತ್ಮ ದರ್ಶನಕ್ಕಾಗಿ ಯತ್ನಿಸದಿರುವವನನ್ನು ಹಳಿದಿದ್ದಾರೆ. 'ಯೋಗಃ ಕರ್ಮಸು ಕೌಸಲಂ' ಎಂದು ಗೀತೆಯಲ್ಲಿ ಹೇಳಿದೆ. ಕರ್ಮವನ್ನು ಮಾಡುವ ಒಂದು ಕೌಶಲವೇ ಯೋಗವೆನಿಸುತ್ತದೆ. ಸಹಜವಾಗಿ ಮನುಷ್ಯನು ಜೀವನೋಪಾಯಕ್ಕಾಗಿ ನಾನಾಕರ್ಮಗಳಲ್ಲಿ ಪ್ರವೃತ್ತನಾಗಿರುತ್ತಾನೆ. ಅವನಿಗೆ ಒಮ್ಮೆಯೇ ಧ್ಯಾನ ಯೋಗಾದಿಗಳನ್ನು ಬೋಧಿಸುವುದು ಫಲಕಾರಿಯಲ್ಲ. ಅಂತಹವರ ಹಿತಕ್ಕಾಗಿ ಗೀತೆಯು ಕರ್ಮಯೋಗವನ್ನು ವಿಸ್ತಾರವಾಗಿ ಬೋಧಿಸಿದೆ.

**ಕರ್ಮಯೋಗ :** ಕರ್ಮವೆಂದರೆ ಕ್ರಿಯೆ, ಕೆಲಸ, ಶರೀರದಿಂದಾಗುವ ವ್ಯಾಪಾರ ಎಂಬುದು ಸರ್ವರಿಗೂ ಗೊತ್ತಿದೆ. ಸಂಧ್ಯಾವಂದನೆ, ದೇವರ ಪೂಜೆ, ಹೋಮ ಮೊದಲಾದದ್ದು ಶಾಸ್ತ್ರವಿಹಿತವಾದ ಕರ್ಮ, ದೇಹಪೋಷಣೆಗಾಗಿ, ಗೃಹಕೃತ್ಯಕ್ಕಾಗಿ, ಸಮಾಜಕ್ಕಾಗಿ ಮಾಡತಕ್ಕ ಕರ್ಮಗಳೂ ಇವೆ. ಇವು ನಮ್ಮ ಆವಶ್ಯಕತೆಗಳನ್ನು ಅನುಸರಿಸುವುದರಿಂದ ಲೌಕಿಕ ಕರ್ಮಗಳೆನಿಸುತ್ತವೆ. ನಮ್ಮ ಇಚ್ಛೆಗೆ ಒಳಪಟ್ಟವು ಇವು. ಭಗವದ್ಗೀತೆಯಲ್ಲಿ ವಿಸ್ತಾರವಾಗಿ ಕರ್ಮದ ನಿರೂಪಣೆ ಬಂದಿದೆ. ಇಷ್ಟು ಪರಿಷ್ಕೃತವಾಗಿ ಇದರ ವಿವರಣೆಯನ್ನು ನಾವು ಇನ್ನು ಯಾವ ಗ್ರಂಥದಲ್ಲಿಯೂ ಕಾಣಲಾರೆವು. ಕರ್ಮಜಿಜ್ಞಾಸೆಯನ್ನು ವೇದಾಂತಭವನದ ಬೀಗದ ಕೈ ಎನ್ನಬಹುದು. ವೇದಾಂತ ವಿಷಯದಲ್ಲಿ ಪ್ರವೇಶ ಮಾಡುವಾಗಲೇ ಕರ್ಮದ ಸ್ವರೂಪವನ್ನರಿಯುವುದು ಅತ್ಯಾವಶ್ಯಕ. ಇದು ಇಷ್ಟು ಪ್ರಧಾನವಾಗುವುದಕ್ಕೆನಿಮಿತ್ತವೇನೆಂದರೆ: ಆತ್ಮಜ್ಞಾನದಿಂದಲೇ ಮೋಕ್ಷವು ದೊರೆಯುತ್ತದೆಯೆಂಬುದು ವೇದಾಂತದ ಸಿದ್ಧಾಂತ. ಕರ್ಮದಿಂದ ಮೋಕ್ಷವು ದೊರೆಯುವುದಿಲ್ಲವೆಂದು ನಿಶ್ಚಯಿಸಲ್ಪಟ್ಟಿದೆ. ವೇದವಾದರೋ ನಿತ್ಯಕರ್ಮಗಳನ್ನು ಮಾಡಲೇಬೇಕೆಂದು ವಿಧಿಸುತ್ತದೆ. ಗೃಹಸ್ಥನಾದವನು ಲೌಕಿಕಕರ್ಮವನ್ನು ಮಾಡಲೇಬೇಕಾಗುತ್ತದೆ. ವೈರಾಗ್ಯವೇನೂ ಸುಲಭವಾಗಿ ಬರತಕ್ಕದ್ದಲ್ಲ. ವೈರಾಗ್ಯವೂ ಬರುವುದಕ್ಕಾದರೂ ಏನು ಮಾಡಬೇಕು?

ಎಂಬ ಪ್ರಶ್ನೆ ಸಹಜವಾಗಿ ಏಳುತ್ತದೆ. ಸನ್ಯಾಸವು ಮನಸ್ಸಿನ ಒಂದು ಪರಿಪಾಕವನ್ನವಲಂಬಿಸುತ್ತದೆ. ಅದು ಎಲ್ಲರಿಗೂ ಲಭ್ಯವಿಲ್ಲ. ಗೃಹಸ್ಥನು ಕರ್ಮದಿಂದ ತಪ್ಪಿಸಿಕೊಳ್ಳಲಾರ.

ಕರ್ಮಗಳನ್ನು ಮಾಡುತ್ತಲೇ ಇರೋಣವೆಂದು ನಿಶ್ಚಯಿಸಿ ಸುಮ್ಮನಾಗುವಂತೆಯೂ ಇಲ್ಲ. ಕರ್ಮದ ಅನುಷ್ಠಾನದಿಂದ ಪಾಪವೋ ಪುಣ್ಯವೋ ಗಂಟುಬೀಳುವುದು. ತಪ್ಪಿದ್ದಲ್ಲ. ಪಾಪಪುಣ್ಯಗಳ ಫಲಭೋಗಕ್ಕಾಗಿ ಶರೀರ ಬೇಕು. ಶರೀರಕ್ಕಾಗಿ ಪುನರ್ಜನ್ಮವಾಗಬೇಕು. ಪುನರ್ಜನ್ಮವಾದೊಡನೆ ಕರ್ಮ. ಕರ್ಮದಿಂದ ಪುನರ್ಜನ್ಮ ಹೀಗೆ ತುದಿಯಿಲ್ಲದ ಕರ್ಮಚಕ್ರದಲ್ಲಿ ಸುತ್ತುತ್ತಲೇ ಇರಬೇಕಾಗುವುದರಿಂದ ಮೋಕ್ಷಶಾಸ್ತ್ರವು ಯಾರಿಗಾಗಿ ಎಂಬ ಶಂಕೆ ಹುಟ್ಟುತ್ತದೆ. ಅಲ್ಲದೆ, ಶಾಸ್ತ್ರವಿಹಿತಕರ್ಮವನ್ನು ಬಿಟ್ಟರೆ, ಪಾಪವು ಘಟಿಸುತ್ತದೆ. ಮಾಡಿದರೆ ಸಂಸಾರದಲ್ಲಿ ಅದೇ ಬಂಧಿಸುತ್ತದೆ. ಇಂತಹ ಇಕ್ಕಟ್ಟಿನಿಂದ ಪಾರಾಗುವುದು ಹೇಗೆ ? ಈ ಸಮಸ್ಯೆಗೆ, ಗೀತೆಯು ಸುಂದರವಾಗಿ ಪರಿಹಾರವನ್ನು ಹೇಳಿದೆ. ಗೀತೆಯ ಮಹತ್ವವಿರುವುದು ಇದರಲ್ಲಿಯೇ

ಸಮಸ್ಯೆಗೆ ಪರಿಹಾರ : ಶರೀರವಿರುವವರೆಗೆ ಕರ್ಮವನ್ನು ಬಿಡಲು ಯಾರಿಗೂ ಶಕ್ಯವಿಲ್ಲ. ತಿನ್ನುವುದು, ಕುಡಿಯುವುದು, ಉಸಿರಾಡುವುದು, ರೆಪ್ಪೆ ಹೊಡೆಯುವುದು ಸಹ ಕರ್ಮವೇ ಆಗಿರುವಾಗ ಕರ್ಮವನ್ನು ತ್ಯಜಿಸುವುದೆಂದರೇನು ? ಆದ್ದರಿಂದ ಶ್ರೇಯಸ್ಸನ್ನು ಬಯಸತಕ್ಕವನು ಯಾವ ಕರ್ಮವನ್ನು ತ್ಯಜಿಸಬೇಕೆಂದು ವ್ಯವಸ್ಥೆಮಾಡಿಗಕೊಳ್ಳಬೇಕು. ಕರ್ಮಗಳು ಬಂಧಕಗಳಾದ್ದರಿಂದ ಅವುಗಳ ತ್ಯಾಗ ಅವಶ್ಯಕ ಎಂಬ ವಿಚಾರವೀಗ ಪ್ರಾಪ್ತವಾಗಿದೆ. ಅವು ಸ್ವತಃ ಬಂಧಕಗಳಲ್ಲ. ಪಾಪ ಪುಣ್ಯಗಳ ದ್ವಾರಾ ಬಂಧಕಗಳು, ಪುಣ್ಯವೂ ಸಹ ಫಲಭೋಗಕ್ಕಾಗಿ ಜನ್ಮಾಂತರವನ್ನು ಕೊಡುವುದರಿಂದ ಬಂಧಕವೇ. ಹೀಗೆ ಕರ್ಮವು ಪಾಪಕ್ಕೋ ಪುಣ್ಯಕ್ಕೋ ಕಾರಣವಾಗುವುದಕ್ಕೆ ಅದನ್ನು ಆಚರಿಸತಕ್ಕವನ ಮನೋಭಾವವೇ ಕಾರಣವೆಂದು ಶಾಸ್ತ್ರವು ನಿಶ್ಚಯಿಸಿದೆ. ಮನೋಭಾವವೆಂದರೆ, ಕರ್ಮದಿಂದ ಬಯಸುವ ಫಲದ ಅಭಿಲಾಷೆಯೇ. ಆದ್ದರಿಂದ ಫಲಾಭಿಲಾಷೆಯೆಂಬ ಕಾಮವನ್ನು ವರ್ಜಿಸಿ ನಿಷ್ಕಾಮಕರ್ಮವನ್ನಾಚರಿಸಬೇಕೆಂದು ಭಗವಂತನು ಗೀತೆಯಲ್ಲಿ ಉಪದೇಶಿಸಿದ್ದಾನೆ.

ಕರ್ಮಣ್ಯೇವಾಧಿಕಾರಸ್ತೇ । ಮಾ ಫಲೇಷು ಕದಾಚನ।

ಮಾ ಕರ್ಮಫಲಹೇತುರ್ಭೂಃ । ಮಾ ತೇ ಸಂಗೋಸ್ತ್ವಕರ್ಮಣಿ ।೨-೪೭

''ಅರ್ಜುನ, ನಿನಗೆ ಕರ್ಮವನ್ನು ಮಾಡುವುದರಲ್ಲಿಯೇ ಅಧಿಕಾರ ಉಂಟು. ಅದರ ಫಲದಲ್ಲಿ ನಿನಗೆ ಆಸಕ್ತಿ ಬೇಡ. ಕರ್ಮಫಲವಾದ ಹುಟ್ಟುಸಾವುಗಳಿಗೆ ಕಾರಣನಾಗಬೇಡ. ಕರ್ತವ್ಯವನ್ನು ತ್ಯಜಿಸುವುದರಲ್ಲಿ ತೊಡಗಬೇಡ.'

ಅರ್ಜುನನು ಬಂಧುವಧೆಗೆ ಹೇಸಿದನೇ ಹೊರತು ಯುದ್ಧವೇ ಬೇಡವೆಂದು ವಿರಕ್ತನಾದವನಲ್ಲ. ಅವನಿಗೆ ಸಂಸಾರವು ಬೇಡವೆಂದು ವೈರಾಗ್ಯವೇನೂ ಹುಟ್ಟಿರಲಿಲ್ಲ. ಆದ್ದರಿಂದ ಅವನು ಚಿತ್ತಶುದ್ಧಿಯನ್ನು ಗಳಿಸಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಕರ್ಮತ್ಯಾಗ ಮಾಡುತ್ತೇನೆನ್ನುವುದೇ ಕೂಡುವುದಿಲ್ಲ. ಸ್ವಲ್ಪಕಾಲವಾದ ಮೇಲೆ ದ್ರೌಪದಿಯೋ ಭೀಮನೋ ಹಂಗಿಸಿದರೆ ಮತ್ತೆ ಹೋರಾಡತಕ್ಕವನೇ. ಅವನ ವೈರಾಗ್ಯ ತಾತ್ಕಾಲಿಕವಾದದು. ಆಪ್ತ ಬಂಧುವಿನ ಮರಣವಾದಾಗ, ಸ್ಮಶಾನದಲ್ಲಿ ಜನರಿಗೆ ಸ್ವಲ್ಪಹೊತ್ತು ಪ್ರಾಪ್ತವಾಗುವ ವೈರಾಗ್ಯವಿದ್ದಂತೆ ಅದು. ಆದ್ದರಿಂದ ಕ್ಷತ್ರಿಯನಾದ ಅರ್ಜುನನು ಕ್ಷುದ್ರವಾದ ಹೃದಯ ದೌರ್ಬಲ್ಯವನ್ನು ಬದಿಗೊತ್ತಿ ಯುದ್ಧ ಮಾಡುವುದೇ ಧರ್ಮವಾಗುತ್ತದೆ. ಆದ್ದರಿಂದಲೇ ಸ್ವಧರ್ಮೇ ನಿಧನಂ ಶ್ರೇಯಃ' ಎಂದು ಶ್ರೀಕೃಷ್ಣನು ತಿಳಿಸಿದ್ದಾನೆ. ನಿಜವಾದ ವಿರಕ್ತನ ಧರ್ಮವು ಸಂನ್ಯಾಸ. ಅದು ಅರ್ಜುನನಿಗೆ ಪರಧರ್ಮವಾಗುತ್ತದೆ. ಆದ್ದರಿಂದ ಫಲಾಸಕ್ತಿಯನ್ನು ತೊರೆದು ನಿಷ್ಕಾಮಕರ್ಮವನ್ನಾಚರಿಸುತ್ತ ಹೋಗುವುದೇ ಮುಮುಕ್ಷುವಿಗೆ ಪ್ರಥಮ ಕರ್ತವ್ಯ.

ಯುಕ್ತಃ ಕರ್ಮಫಲಂ ತ್ಯಕ್ತ್ವಾ, । ಶಾಂತಿ ಮಾಪ್ನೋತಿ ನೈಷ್ಠಿಕೀಂ ॥೫-೧೨

'ಕರ್ಮಯೋಗಿಯು ಕರ್ಮಫಲವನ್ನು ತ್ಯಜಿಸಿದರೆ ಸ್ಥಿರವಾದ ಶಾಂತಿನ್ನು ಪಡೆಯುತ್ತಾನೆ'

'ಫಲದ ಆಸೆಯಿಲ್ಲದೆ ಯಾರೂ ಕರ್ಮವನ್ನು ಮಾಡಲು ಸಾಧ್ಯವೇ ಇಲ್ಲ. ಮೋಕ್ಷವೆಂಬ ಫಲದ ಆಶೆಯಾದರೂ ಇದ್ದೇ ಇರುತ್ತದೆ' ಎಂದು ಕೆಲವರು ಹೇಳುವುದುಂಟು. ಅದು ನಿಜವೇ ಸರಿ. ಲೌಕಿಕ ಫಲದಲ್ಲಿ ಆಸೆಯಿಲ್ಲದೆ 'ಇದು ನನ್ನ ಕರ್ತವ್ಯ' ಇದು ಈಶ್ವರನ ಆಜ್ಞೆ. ಈಶ್ವರ ಪ್ರೀತಿಗಾಗಿ ಕರ್ಮವನ್ನು ಮಾಡುತ್ತೇನೆ. ಎಂದು ಕರ್ಮವನ್ನು ಮಾಡಲು ಸಾಧ್ಯವಿದೆ. ಈಶ್ವರ ಪ್ರೀತಿ ಅಥವಾ ಮೋಕ್ಷಫಲದಲ್ಲಿ ಆಸಕ್ತಿ ಇದ್ದರೂ ಅದು ನಿಷ್ಕಾಮ ಕರ್ಮವೇ, ಧನಾರ್ಜನೆ, ಕೀರ್ತಿಸಂಪಾದನೆ, ಶತ್ರುನಾಶ-ಮೊದಲಾದ ಲೌಕಿಕ ಫಲವನ್ನೇ ಇಲ್ಲಿ ಕರ್ಮಫಲವೆಂದು ತಿಳಿಯತಕ್ಕದ್ದು. ಆದ್ದರಿಂದಲೇ –

ಬ್ರಹ್ಮಣ್ಯಾಧಾಯ ಕರ್ಮಾಣಿ। ಸಂಗಂ ಪ್ಯಕ್ತ್ವಾ ಕರೋತಿಯಃ ।

ಲಿಪ್ಯತೇ ನ ಸ ಪಾಪೇನ । ಪದ್ಮಪತ್ರಮಿವಾಂಭ ಸಾ ॥ ೫-೧೦

ಎಂದು ಭಗವಂತನು ತಿಳಿಸಿದ್ದಾನೆ.'ಯಾವಾತನು ಫಲಾಸಕ್ತಿಯನ್ನು ತೊರೆದು ಎಲ್ಲ ಕರ್ಮಗಳನ್ನು ಈಶ್ವರಾರ್ಪಣವೆಂಬ ಬುದ್ಧಿಯಿಂದ ಆಚರಿಸುತ್ತಾನೋ ಅವನಿಗೆ ಪಾಪದ ಲೇಪವಿಲ್ಲ. ತಾವರೆಯ ಎಲೆಗೆ ನೀರು ಹೇಗೆ ಅಂಟುವುದಿಲ್ಲವೋ ಹಾಗೆ?

ಕರ್ಮಯೋಗಿಗೆ ಭಕ್ತಿಯೂ ಅವಶ್ಯಕ. ಭಕ್ತಿಯಿಲ್ಲದೆ ಈಶ್ವರಾರ್ಪಣಬುದ್ಧಿ ಬಾರದು. ಹೀಗೆ ಈಶ್ವರಾರ್ಪಣ ಬುದ್ಧಿಯಿಂದ ಕರ್ಮವನ್ನು ಮಾಡುತ್ತಿದ್ದರೆ ಅವನಿಗೆ ಚಿತ್ತ ಶುದ್ಧಿಯಾಗಿ ವೈರಾಗ್ಯಾದಿಗಳು ಪ್ರಾಪ್ತವಾಗಿ ಜ್ಞಾನ ನಿಷ್ಠಾಯೋಗ್ಯತೆಯು ಬರುತ್ತದೆಯೆಂದು ಗೀತೆಯು ನಿರ್ಣಯಿಸಿ ಹೇಳಿದೆ. ಎಲ್ಲಿಯವರೆಗೆ ಅವಿದ್ಯೆಯು ತೊಲಗಿಲ್ಲವೋ, ನಿತ್ಯಾನಿತ್ಯ ವಸ್ತುವಿವೇಕವು ಉದಯಿಸಿಲ್ಲವೋ, ನಾನು ನನ್ನದು-ಎಂಬ ಅಭಿಮಾನವು ನಾಶವಾಗಿಲ್ಲವೋ, ಕಾಮಕ್ರೋಧಗಳು ಅಲ್ಪ ಪ್ರಮಾಣದಲ್ಲಾದರೂ ಕಾಣಿಸಿಕೊಳ್ಳುತ್ತವೆಯೋ, ರಾಗದ್ವೇಷಾದಿಗಳು ಸಮೂಲವಾಗಿ ನಾಶವಾಗಿಲ್ಲವೋ ಅಲ್ಲಿಯವರೆಗೆ ಚಿತ್ತ ಶುದ್ಧಿಯಾಗಿಲ್ಲವೆಂದೇ ತಿಳಿಯಬೇಕು. ಸಾಧಕನಾದವನು ತನ್ನನ್ನು ತಾನೇ ಪರೀಕ್ಷಿಸಿಕೊಳ್ಳುತ್ತಿರಬೇಕು. ಕಾಮ್ಯ ಕರ್ಮವೆಲ್ಲವನ್ನು ಪರಿತ್ಯಜಿಸಿ ಈಶ್ವರಾರ್ಪಣ ಬುದ್ಧಿಯಿಂದ ಕರ್ತವ್ಯ ಕರ್ಮವನ್ನು ಈಶ್ವರಾಜ್ಞೆಯೆಂದು ತಿಳಿದು ಮಾಡುತ್ತಲೇ ಹೋಗುವುದು ಕರ್ಮಯೋಗದ ರಹಸ್ಯವಾಗಿದೆ.

ಧ್ಯಾನಯೋಗಃ ''ಧ್ಯಾನೇನಾತ್ಮನಿ ಪಶ್ಯಂತಿ ಕೇಚಿದಾತ್ಮಾನ ಮಾತ್ಮನಾ'' (೧೩-೨೪). ಇತ್ಯಾದಿಸ್ಥಳಗಳಲ್ಲಿ ಜ್ಞಾನವು ಆತ್ಮಜ್ಞಾನಕ್ಕೆ ಸಾಧನವೆಂದು ಹೇಳಿದೆ. ಧ್ಯಾನವೆಂದರೆ ಏಕಾಗ್ರವಾದ ಮನಸ್ಸಿನಿಂದ ಈಶ್ವರ ಚಿಂತನೆ. ಉಪಾಸನೆ ಎಂದರೂ ಇದೇ. ಈ ಉಪಾಸನೆ ವ್ಯಕ್ತೋಪಾಸನೆ, ಅವ್ಯಕ್ತೋಪಾಸನೆ - ಎಂದು ಎರಡು ವಿಧ. ನಾಮರೂಪರಹಿತವಾದ ನಿರ್ವಿಶೇಷ ಬ್ರಹ್ಮದ ಉಪಾಸನೆ ಅವ್ಯಕ್ತೋಪಾಸನೆ ಎನಿಸುತ್ತದೆ. ಇದು ಅತ್ಯಂತ ಕಠಿಣವಾದದ್ದು ಸಾಧಕಸ್ಥಿತಿಯಲ್ಲಿರತಕ್ಕವನಿಗೆ ಅಸಾಧ್ಯವಾದದ್ದು. ಆದ್ದರಿಂದ ಇದು ಕ್ಲಿಷ್ಟವೆಂದೂ ಸಾಧಕನು ವ್ಯಕ್ತೋಪಾಸನೆಯನ್ನು ಮಾಡುತ್ತಿರುವುದು ಆವಶ್ಯಕವೆಂದು ಶ್ರೀಕೃಷ್ಣನು 'ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ' ಇತ್ಯಾದಿ ವಚನಗಳಿಂದ ಉಪದೇಶಿಸಿದ್ದಾನೆ. ಯಾವುದಕ್ಕೆ ನಾಮರೂಪಗಳಿರುತ್ತವೆಯೋ ಅದು ವ್ಯಕ್ತವೆನಿಸುತ್ತದೆ. ಇದು ಉಪಾಧಿ ನಿಮಿತ್ತವಾಗಿ ಬುದ್ಧಿಕಲ್ಪಿತವಾದರೂ ಮನಸ್ಸಿಗೆ ಏಕಾಗ್ರತೆಯನ್ನು ಸಾಧಿಸಲು ಉಪಯುಕ್ತವಾಗಿದೆ. ಈ ವ್ಯಕ್ತಮೂರ್ತಿಯು ಭಾರತೀಯರಲ್ಲಿ ಪ್ರಾಧಾನ್ಯವನ್ನು ಕಲ್ಪಿಸಿಕೊಂಡಿವೆ. ಮೂರ್ತಿಪೂಜೆಯ ಮುಂದಿನ ಹಂತ ಧ್ಯಾನ. ಇದಕ್ಕೆ ಪೂಜಾಸಾಮಗ್ರಿಗಳೇನೂ ಬೇಕಾಗಿಲ್ಲ. ಏಕಾಂತಸ್ಥಳದಲ್ಲಿ ಕುಳಿತು ಬಹಳ ಹೊತ್ತು ಇಷ್ಟ ಮೂರ್ತಿಯು ಭಕ್ತನ ಇಚ್ಛೆಯಂತೆ ಯಾವುದಾದರೂ ಆಗಬಹುದು. ಆದ್ದರಿಂದಲೇ ಮೂರ್ತಿ ಪೂಜೆಯು ಭಾರತೀಯರಲ್ಲಿ ಪ್ರಾಧಾನ್ಯವನ್ನು ಕಲ್ಪಿಸಿಕೊಂಡಿವೆ. ಮೂರ್ತಿ ಪೂಜೆಯ ಮುಂದಿನ ಹಂತ ಧ್ಯಾನ. ಇದಕ್ಕೆ ಪೂಜಾಸಾಮಗ್ರಿಗಳೇನೂ ಬೇಕಾಗಿಲ್ಲ. ಏಕಾಂತಸ್ಥಳದಲ್ಲಿ ಕುಳಿತು ಬಹಳ ಹೊತ್ತು ಇಷ್ಟಮೂರ್ತಿಯ ಧ್ಯಾನದಲ್ಲಿ ತತ್ಪರನಾಗುತ್ತಾ ಹೋಗಬೇಕು. ಕರ್ಮಯೋಗ ಕಾಲದಲ್ಲಿಯೇ ಇದನ್ನು

ಆರಂಭಿಸತಕ್ಕದ್ದು. ಕ್ರಮೇಣ ಕರ್ಮಕಾಂಡವು ಮಿತವಾಗುತ್ತ ಧ್ಯಾನಯೋಗವು ಪ್ರಬಲಿಸುತ್ತಾ ಹೋಗುತ್ತದೆ. ಇದರಲ್ಲಿ ಭಕ್ತಿಯು ಇನ್ನೊ ಒಂದು ಹೆಜ್ಜೆ ಮುಂದೆ ಹೋಗಿರುತ್ತದೆ. ಹತ್ತನೆಯ ಅಧ್ಯಾಯದಲ್ಲಿ 'ಆದಿತ್ಯಾನಾಮಹಂ ವಿಷ್ಣುಃ, ಅಶ್ವತ್ಥಃ ಸರ್ವವೃಕ್ಷಾಣಾಂ, ವೈನತೇಯಶ್ಚ ಪಕ್ಷಿಣಾಂ' ಎಂದು ಆಯಾ ವರ್ಗಗಳಲ್ಲಿ ವಿಭೂತಿಮತ್ತಾದ ವಸ್ತುವನ್ನು' ಇದೇ ಪರಮೇಶ್ವರ' ಎಂಬ ಬುದ್ಧಿಯಿಂದ ಧ್ಯಾನ ಮಾಡಬೇಕೆಂದು ಉಪದೇಶಿಸಿಸಲಾಗಿದೆ. ಸರ್ವವೂ ಬ್ರಹ್ಮವೇ ಎಂಬ ಜ್ಞಾನಕ್ಕೆ ಕರೆದೊಯ್ಯಲು ವಿಭೂತಿಯೋಗವು ಗೀತೆಯಲ್ಲಿ ಉಪದಿಷ್ಟವಾಗಿದೆ. ಹೀಗೆ ಕರ್ಮಯೋಗ ಧ್ಯಾನಯೋಗಗಳಿಂದ ಚಿತ್ತದ ಕಶ್ಮಲಗಳೆಲ್ಲವೂ ನಾಶವಾಗುತ್ತ ಹೋಗಲಾಗಿ, ಭಕ್ತಿಯೋಗವು ಸಾಧಕನಿಗೆ ತಾನಾಗಿ ಪ್ರಾಪ್ತವಾಗುತ್ತದೆ.

**ಭಕ್ತಿಯೋಗ :** ಪೂಜ್ಯರಲ್ಲಿರುವ ಪ್ರೇಮವೇ ಭಕ್ತಿ. ಪಿತೃಭಕ್ತಿ, ಮಾತೃಭಕ್ತಿ ವೊದಲಾದವು ಎಲ್ಲರಿಗೂ ಪರಿಚಿತವಾದವು. ಪರಮಪೂಜ್ಯನಾದ ಭಗವಂತನಲ್ಲಿಡುವ ಪರಮಪ್ರೇಮವೇ ಸಾಧಕನಿಗೆ ಬೇಕಾದ ಭಕ್ತಿ. 'ಸಾತ್ವಸ್ಮಿನ್ ಪರಮಪ್ರೇಮರೂಪಾ' ಎಂದು ನಾರದ ಭಕ್ತಿ ಸೂತ್ರಹೇಳುತ್ತದೆ.'ಸಾ ಪರಾನುರಕ್ತಿರೀಶ್ವರೇ' ಎಂದು ಶಾಂಡಿಲ್ಯ ಭಕ್ತಿಸೂತ್ರವಿದೆ. ಅನುರಕ್ತಿ, ಅನುರಾಗ, ಪ್ರೇಮ ಇವೆಲ್ಲ ಒಂದೇ ಅರ್ಥದ ಶಬ್ದಗಳು. ಭಗವದ್ಗೀತೆಯಲ್ಲಿ ಭಕ್ತಿಯ ಪ್ರಶಂಸೆ ವಿಶೇಷವಾಗಿ ಬಂದಿದೆ.

'ಮತ್ಕರ್ಮಕೃತ್ ಮತ್ಪರಮೋ। ಮದ್ಭಕ್ತಃ ಸಂಗವರ್ಜಿತಃ।

ನಿರ್ವೈರಃ ಸರ್ವಭೂತೇಷು। ಯಃ ಸ ಮಾಮೇತಿ ಪಾಂಡವ ॥ ೧೧-೧೫

ಎಂದು ಭಕ್ತಿಯು ಭಗವತ್ ಪ್ರಾಪ್ತಿಗೆ ಸಾಧನವೆಂದು ಶ್ರೀಕೃಷ್ಣನು ತಿಳಿಸಿದ್ದಾನೆ. ಈ ಭಕ್ತಿಯೂ ಸಹ ಜ್ಞಾನದ ಮೂಲಕವಾಗಿ ಮೋಕ್ಷಕ್ಕೆ ಹೇತು, ಸಾಕ್ಷಾತ್ತಾಗಿ ಅಲ್ಲ. ಏಕೆಂದರೆ ಅಜ್ಞಾನವು ಜ್ಞಾನದಿಂದಲೇ ಹೋಗತಕ್ಕದ್ದು. ಆತ್ಮಜ್ಞಾನವಾದರೋ ಈಶ್ವರಾನುಗ್ರಹದಿಂದಲೇ ಪ್ರಾಪ್ತವಾಗುತ್ತದೆ. ಆದ್ದರಿಂದ

ಭಕ್ತ್ಯಾ ಮಾಮಭಿಜಾನಾತಿ । ಯಾವಾನ್ ಯಶ್ಚಾಸ್ಮಿ ತತ್ತ್ವತಃ।

ತತೋ ಮಾಂ ತತ್ವತೋಜ್ಞಾತ್ವಾ। ವಿಶತೇ ತದನಂತರಂ ॥ ೧೮-೫೫

ಭಕ್ತಿಯಿಂದಲೇ ಜ್ಞಾನಪ್ರಾಪ್ತಿಯೆಂದು ಈ ಶ್ಲೋಕದಲ್ಲಿ ಸ್ಫುಟವಾಗಿ ತಿಳಿಸಿದೆ. ಆತ್ಮ ತತ್ವಜ್ಞಾನವು ಈಶ್ವರ ಭಕ್ತಿಯಿಂದ ಲಭಿಸತಕ್ಕದ್ದು. ತತ್ವಜ್ಞಾನದಿಂದ 'ವಿಶತೇ ತದನಂತರಮ್' = 'ಆತನು ನನ್ನಲ್ಲಿ ಕೂಡಿ ಹೋಗುತ್ತಾನೆ.' ನಾರದ ಭಕ್ತಿ ಸೂತ್ರದಲ್ಲಿ ಮತ್ತು ಶಾಂಡಿಲ್ಯ ಭಕ್ತಿ ಸೂತ್ರದಲ್ಲಿ ಹೇಳಿದ ಪರಮಪ್ರೇಮವೇನುಂಟು ಅದು ಪರಾಭಕ್ತಿ. ಈ ಪರಾಭಕ್ತಿಯೇ ಜ್ಞಾನ ಸ್ವರೂಪವಾದದ್ದು. ಜ್ಞಾನಿಯು ಶ್ರೀ ಕೃಷ್ಣನ ಪರಮಭಕ್ತನೆಂದು ಗೀತೆಯೇ ಹೇಳಿದೆ.

ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ॥

ಜ್ಞಾನೀ ತ್ವಾತ್ಮೈವ ಮೇ ಮತಮ್ ॥ ೭-೧೬,೧೭

ಪ್ರಪತ್ತಿಯೆನ್ನುವುದು ಭಕ್ತಿಯ ಪರಾಕಾಷ್ಠಸ್ಥಿತಿಯೇ ಸರಿ. 'ಮಾಮೇವ ಯೆ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ. ॥೭-೧೪ ಇತ್ಯಾದಿ ಶ್ಲೋಕಗಳಲ್ಲಿ ಇದು ಪ್ರಸ್ತುತವಾಗಿದೆ.

ಕರ್ಮಯೋಗ, ಧ್ಯಾನಯೋಗಗಳೆರಡೂ ಭಕ್ತಿಯಿಂದ ಪರಿಪುಷ್ಟವಾಗಿ ಬಲಿಷ್ಠವಾಗುತ್ತವೆ. ಭಕ್ತಿಯಿಲ್ಲದಿದ್ದರೆ ಅವರೆಡು ಯೋಗಗಳು ದುರ್ಬಲಗಳೇ. ಪರಮ ಭಕ್ತನಾದವನ ಕ್ರಿಯೆಗಳೆಲ್ಲವೂ ಪರಮಾತ್ಮನಿಗೋಸ್ಕರವೇ ಇರುತ್ತವೆ. ಕರ್ಮಯೋಗಿಗೆ ಅಂಟಿಕೊಂಡ ವಿವಿಧ ಕರ್ಮಗಳು ಅವನನ್ನು ಬಿಟ್ಟು ಹೋಗಿರುತ್ತವೆ. ಸದಾ ಭಗವಚ್ಚಿಂತನೆಯಲ್ಲಿಯೇ ಅವನು ಮುಳುಗಿ ಹೋಗಿರುತ್ತಾನಾದ್ದರಿಂದ ಪ್ರತ್ಯೇಕವಾಗಿ ಕುಳಿತು ಧ್ಯಾನ ಮಾಡು ಪ್ರಸಂಗವು ಅವನಿಗಿರುವುದಿಲ್ಲ. ಅವರೆಡುಯೋಗಗಳಿಗಿಂತ ಮೇಲೇರಿದವನು ಭಕ್ತಿಯೋಗಿ.

ಜ್ಞಾನಯೋಗ : ಯುಜ್ಯತೇ ಅನೇನೇತಿ ಯೋಗಃ = ಯಾವುದರಿಂದ ಪರಮಾತ್ಮನಲ್ಲಿ ಐಕ್ಯವಾಗುವುದೋ ಅದು ಯೋಗ. ಜ್ಞಾನವೆಂಬ ಯೋಗ ಜ್ಞಾನಯೋಗ. ಮುಖ್ಯವಾದ ಅರ್ಥದಲ್ಲಿ ಇದೇ ಯೋಗವೆನ್ನಲು ಅರ್ಹವಾದದ್ದು. ಕರ್ಮ, ಧ್ಯಾನ ಭಕ್ತಿಗಳು ಜ್ಞಾನಕ್ಕೆ ಸಾಧನವಾಗಿ ಪರಂಪರೆಯಿಂದ ಮುಕ್ತಿಸಾಧನಗಳೆಂದು ಅವುಗಳನ್ನು ಯೋಗಗಳೆಂದು ಕರೆಯಲಾಗಿದೆ. ಹದಿಮೂರನೆಯ ಅಧ್ಯಾದಲ್ಲಿ ಅಮಾನಿತ್ವ, ಅಂದಭಿತ್ವ, ಅಹಂಕಾರರಾಹಿತ್ಯ, ಅವ್ಯಭಿಚರಿತವಾದ ಭಕ್ತಿ, ಆಧ್ಯಾತ್ಮವಿಷಯದಲ್ಲಿ ಸದಾ ತೊಡಗಿರುವುದು - ಮೊದಲಾದುವನ್ನು ತಿಳಿಸಿ

'ಏತ ಜ್ಞಾನ ಮಿತಿ ಪ್ರೋಕ್ತಮಜ್ಞಾನಂ ಯುದತೋನ್ಯಥಾ। 'ಇದಿಷ್ಟು ಜ್ಞಾನವೆನಿಸಿದೆ. ಉಳಿದದ್ದೆಲ್ಲ ಅಜ್ಞಾನ' ಎಂದು ಶ್ರೀಕೃಷ್ಣನು ತಿಳಿಸಿದ್ದಾನೆ. ಜ್ಞಾನವೆಂದರೆ, ಇಲ್ಲಿ ಜ್ಞಾನ ಸಾಧನವೆಂದರ್ಥ. ವೈರಾಗ್ಯ ಮೊದಲಾದವೇ ಜ್ಞಾನಗಳಲ್ಲ. ಹಾಗೆಯೇ ಎರಡನೆಯ ಅಧ್ಯಾಯದಲ್ಲಿ ಸ್ಥಿತ ಪ್ರಜ್ಞನ ಲಕ್ಷಣಗಳೇನಿವೆ, ಅವೆಲ್ಲವೂ ಸಾಧಕನು ಯತ್ನದಿಂದ ತನ್ನಲ್ಲಿ ಅಳವಡಿಸಿಕೊಳ್ಳಬೇಕಾದ ಗುಣಗಳು.

ಜ್ಞೇಯುವಾದ ಬ್ರಹ್ಮವಾದರೋ ಅನಾದಿಯೂ ಅನಂತವೂ ಸರ್ವವ್ಯಾಪಿಯೂ ಆದದ್ದು ಅದಕ್ಕೆ ಜಾತಿ, ಗುಣ, ರೂಪಗಳಾವುವೂ ಇಲ್ಲವಾದ್ದರಿಂದ ಮಾತಿಗಾಗಲಿ ಮನಸ್ಸಿಗಾಗಲಿ ನಿಲುಕದೇ ಹೋಗಿರುತ್ತದೆ. ಅದುಸತಅಲ್ಲ, ಅಸತ್ ಅಲ್ಲ.ಒಳಗೂ

ಇದೆ. ಹೊರಗೂ ಇದೆ. ಯಾವ ಇಂದ್ರಿಯಕ್ಕೂ ಗೋಚರವಲ್ಲ. ಹೀಗೆ ದುರ್ವಿಜ್ಞೇಯವಾಗಿರುವುದರಿಂದಲೇ ಬ್ರಹ್ಮಜ್ಞಾನವು ಸುಲಭವಾಗಿ ಲಭಿಸತಕ್ಕದ್ದಲ್ಲ. ಧ್ರುವ, ಪ್ರಹ್ಲಾದ ಮೊದಲಾದವರು ತಪಸ್ಸಿನಿಂದ ಭಕ್ತಿಯಿಂದ ಸುಲಭವಾಗಿ ಒಲಿಸಿಕೊಂಡದ್ದು ಸಗುಣನಾದ ಈಶ್ವರನನ್ನು, ಹಾಗೆಯೇ. ರಾವಣಾದಿರಾಕ್ಷಸರೂ ಪರಮೇಶ್ವರನನ್ನು ಒಲಿಸಿಕೊಂಡು, ವರಗಳನ್ನು ಪಡೆದರೆಂದು ಪುರಾಣಗಳಲ್ಲಿ ವರ್ಣನೆ ಇದೆ. ಅವರೆಲ್ಲರೂ ಅಹಂಕಾರಾದಿಗಳನ್ನು ಬಿಟ್ಟವರಲ್ಲ. ವೇದಾಂತದಲ್ಲಿ ವರ್ಣಿಸಿರುವುದು ನಿರ್ಗುಣವೂ, ನಿರ್ವಿಶೇಷವೂ ಆದ ಪರಬ್ರಹ್ಮ. ಇದರ ಸಾಕ್ಷಾತ್ಕಾರವಾದ ಹೊರತು ಮೋಕ್ಷವಿಲ್ಲ. ಆದ್ದರಿಂದ ಭಗವದ್ಗೀತೆ ಮೊದಲಾದ ಮೋಕ್ಷಶಾಸ್ತ್ರಗಳು ಕರ್ಮಯೋಗವೇ ಮುಂತಾದ ಕ್ಲಿಷ್ಟಸಾಧನಗಳನ್ನು ಬಹುಮುಖವಾಗಿ ಪ್ರತಿಪಾದಿಸಿಕೊಂಡು ಬಂದಿರುತ್ತವೆ. ಈ ಸಾಧನಗಳನ್ನು ತಿಳಿಸುವ ಗ್ರಂಥಗಳಲ್ಲಿ ಭಗವದ್ಗೀತೆಗೆ ಅಗ್ರಸ್ಥಾನವು ಸಲ್ಲುತ್ತದೆ. ಉಳಿದ ಗ್ರಂಥಗಳು ಋಷಿ ಪ್ರಣೀತವಾದವು. ಗೀತೆಯಾದರೋ ಸಾಕ್ಷಾತ್ ಭಗವಂತನಿಂದಲೇ ಉಪದಿಷ್ಟವಾದದ್ದು.

ಗೀತಾ ಸುಗೀತಾ ಕರ್ತವ್ಯಾ, ಕಿಮನ್ಯೈಃ ಶಾಸ್ತ್ರವಿಸ್ತರೈಃ

ಯಾ ಸ್ವಯಂ ಪದ್ಮನಾಭಸ್ಯ। ಮುಖ ಪದ್ಮಾದ್ವಿನಿಃ ಸೃತಾ ॥

# ಕನಕದಾಸರ ಕೀರ್ತನೆಗಳು : ಸಾಂಸ್ಕೃತಿಕ ಮಹತ್ವ

- ಡಾ॥ ಎಚ್.ಜೆ. ಲಕ್ಕಪ್ಪಗೌಡ

ಒಂದು ದೇಶದ ಜನತೆಯ ನಡೆನುಡಿಗಳು, ಆದರ್ಶ ಅಭೀಪ್ಸೆಗಳ, ಕನಸು ಕಲ್ಪನೆಗಳ, ವಿಚಾರವಿವೇಕಗಳ, ಸಾಧನೆ ಶೋಧನೆಗಳ ಕೆನೆ ಸಂಸ್ಕೃತಿ. ಇದು ಮನುಷ್ಯನನ್ನು ಬೆಳೆಸುವ ಬೆಳಗಿಸುವ ವಿಶಿಷ್ಟವನ್ನಾಗಿಸುವ ಜೀವ ದ್ರವ್ಯ. ಇದುಕೇವಲ ಬೆರಗುಗೊಳಿಸುವ ಬೌದಿಕ ವಿಲಾಸದಿಂದ ಚಿಮ್ಮಿ ಬಂದದ್ದಲ್ಲ; ಅನುಭವದ ಆಚರಣೆಯ ಅಂತರಾಳದಿಂದ ಹೊಮ್ಮಿ ಬಂದದ್ದು; ಜೀವಂತಿಕೆಯ ಲವಲವಿಕೆಯಿಂದ ಲಕಲಕಿಸುವಂಥದ್ದು; ಮುಟ್ಟಿದವರನ್ನು ತಟ್ಟಿ ಎಚ್ಚಿಸುಂಥದ್ದು. ಇದಕ್ಕೆ ಮುಖ್ಯವಾಗಿ ಎರಡು ಮುಖ ಒಂದು, ಕೇವಲ ನಂಬಿಕೆಯ ಆಳದಲ್ಲಿ ಅಸ್ತಿತ್ವ ಪಡೆದು ಮತ, ಧರ್ಮ ಬೌಗೋಳಿಕ ಪರಿಸರಕ್ಕೆ ಬದ್ಧವಾಗಿ, ಸಂದರ್ಭ ಸನ್ನಿವೇಶಗಳಿಂದ ಪೋಷಿತವಾಗಿ ಸಂಪ್ರದಾಯವಾಗಿ ಬಿಡುವ ಆದೂರಗಾಮಿಯಾದ ಪರಿಮಿತ ದೃಷ್ಟಿಯ ಫಲ, ಮತ್ತೊಂದು ಉನ್ನತವಾದ ವೈಚಾರಿಕ ಭೂಮಿಕೆಯಲ್ಲಿ ಮೊಳಕೆಯೊಡೆದು, ಹೃದಯಭಾವನೆಗಳ ಕಡೆತದಲ್ಲಿ ಮಿದುವಾಗಿ ಮೆರಗುಗೊಂಡು ಮೇಲೆದ್ದು ಮತ ಧರ್ಮ ಭಾಷೆ ದೇಶ ಕಾಲಗಳನ್ನು ಮೀರಿ ಮಾನವ ಸಮುದಾಯವನ್ನೇ ಇಡಿಯಾಗಿ ಆವರಿಸಿ ಅರಕ್ಷಿಸುವ ದಿವ್ಯವಾಸ್ತವ ಪ್ರಭೆ. ವಿಶ್ವದ ಎಲ್ಲಾ ಸಾಹಿತ್ಯದಲ್ಲೂ ಈ ಎರಡು ಮುಖಗಳು ಪ್ರತಿಫಲಿತವಾಗಿವೆ. ಕನ್ನಡದ ದಾಸ ಸಾಹಿತ್ಯವೂ ಇದಕ್ಕೆ ಹೊರತಲ್ಲ, ಹೊರತಾಗಿ ಉಳಿಯುವುದು ಸಾಧ್ಯವೂ ಇಲ್ಲ. ಆದರೆ ಪ್ರಮಾಣ ಬೇರೆ, ಆದ್ದರಿಂದ ಪರಿಣಾಮವೂ ಬೇರೆಯೇ.

ಕನ್ನಡ ಸಾಹಿತ್ಯದ ಸಂಸ್ಕೃತಿಯ ಸಂದರ್ಭದಲ್ಲಿ ಹನ್ನೆರಡು ಮತ್ತು ಹದಿನಾರನೆಯ ಶತಮಾನಗಳು ವಿಶಿಷ್ಟ ಉಲ್ಲೇಖಕ್ಕೆ ಅರ್ಹವಾದವುಗಳು. ಮೊದಲನೆಯದು, ಶತಮಾನಗಳ ಕಾಲದಿಂದ ರೂಢಮೂಲವಾಗಿದ್ದು, ಆ ಪ್ರಸ್ತುತ ಕಾಲದ ಅಗತ್ಯಗಳನ್ನು ಪೂರೈಸಲಾರದೆ ಹೆಳವಾಗಿ ಹೋಗಿದ್ದ ಭಾಷಿಕ ಧಾರ್ಮಿಕ ಸಾಹಿತ್ಯಕ ಹಾಗೂ ಸಾಂಸ್ಕೃತಿಕ ಬೇರುಗಳನ್ನು ಬಲವಾಗಿ ಅಲುಗಿಸಿ ಮೂಲೋತ್ಪಾಟನೆ ಮಾಡಿ, ಅವುಗಳ ಬದಲಾಗಿ ಹೊಸ ಮೌಲ್ಯಗಳನ್ನು ಬಿತ್ತುವ ಮೂಲಕ ಜನ

ಮಾನಸದಲ್ಲಿ ಅಭೂತಪೂರ್ವವಾದ ಮಿಂಚಿನ ಸಂಚಾರವನ್ನು ಮಾಡಿಸಿದ ಶರಣ ಆಂದೋಲನ, ಎರಡನೆಯದು, ಪರಂಪರೆಯನ್ನು ಪೂರ್ಣವಾಗಿ ಪ್ರಶ್ನಿಸದೆ, ಅದು ಚಾಚಿಕೊಂಡಿದ್ದ ಅನಗತ್ಯ ವಿಕಾರ ಕೋರೆಗಳನ್ನು ಕತ್ತರಿಸದೆ, ಆದರೆ ಅದರ ಹರಿತ ಮೊನಚುಗಳನ್ನು ಮಾತ್ರ ಕಡಿಮೆ ಮಾಡಿ ಮೃದುಗೊಳಿಸಲು ಮತ್ತು ಅದೇಕಾಲದಲ್ಲಿ ಕುಸಿಯುತ್ತಿದ್ದ ಮೂಲಭೂತ ಜೀವನ ನಂಬಿಕೆಗಳನ್ನು ತಮ್ಮ ಪ್ರಾಮಾಣಿಕ ಬದುಕಿನ ಬೆಂಬಲದಿಂದ ಮೇಲೆತ್ತಲು ಪ್ರಯತ್ನಿಸಿ ಸೀಮಿತ ಸಫಲತೆಯನ್ನು ಪಡೆದ ಹರಿದಾಸ ಅಂದೋಲನ, ನಿಜವಾದ ಅರ್ಥದಲ್ಲಿ ಇದನ್ನು ಒಂದು ಆಂದೋಲನವೆಂದು ಕರೆಯುವುದೂ ಸರಿಯಲ್ಲ. ಏಕೆಂದರೆ, ಆಂದೋಲನವೆಂದರೆ ಸಮಾಜದ ಸಮಗ್ರ ಸ್ತರಗಳಿಂದ ಸಿಡಿದೆದ್ದ ಜನಸಮುದಾಯ ಫಲದಾಯಕ ಬದಲಾವಣೆಗಾಗಿ ತಮ್ಮ ಸಮಸ್ತ ಚೇತನವನ್ನು ತೊಡಗಿಸಿ ಹೋರಾಡುವುದು. ಆದರೆ ಹರಿದಾಸಯುಗದ ಚಟುವಟಿಕೆಗಳಲ್ಲಿ ಸಕ್ರಿಯುವಾಗಿ ಪಾಲ್ಗೊಂಡವರುಸಮಾಜದಲ್ಲಿ ಮೇಲುವರ್ಗದವರೆನ್ನಿಸಿಕೊಂಡ ಜನ. ಇದಕ್ಕೆ ಬಹುಶಃ ಒಂದೇ ಅಪವಾದ ಕನಕದಾಸರು. ಇವರೆಲ್ಲರ ಕೃತಿ ಸಮುದಾಯದ ಪ್ರಧಾನ ಉದ್ದೇಶ ದೈವದರ್ಶನ, ಆತ್ಮ ಕಲ್ಯಾಣ, ಸಾಂಸ್ಕೃತಿಕ ಕ್ರಾಂತಿಯಲ್ಲ. ಆದರೆ ಇವರೆಲ್ಲ ಜನರ ನಡುವೆಯೇ ಬದುಕಬೇಕಾಗಿದ್ದುದರಿಂದ ಅವರ ಜೀವನದ ಏರಿಳಿತಗಳನ್ನು ಮತ್ತು ಅದಕ್ಕೆ ಕಾರಣವಾದ ದೋಷ ದೌರ್ಬಲ್ಯಗಳನ್ನು ತೆರೆದ ಕಣ್ಣಿನಿಂದ ನೋಡುತ್ತಿದ್ದುದರಿಂದ, ಅವುಗಳ ಅನಾರತೆಯನ್ನು ಸಾರಿ ಮುಕ್ತಿ ಮಾರ್ಗವನ್ನು ಕಂಡುಕೊಳ್ಳುವ ಬಗೆಯನ್ನು ತಮ್ಮ ರಚನೆಗಳಲ್ಲಿ ಬಿತ್ತರಿಸಿದರು. ಸ್ವಾನುಭವ ನಿವೇದನೆ ಮತ್ತು ಪರಾನುಕಂಪೆಗಳಿಂದ ತುಂಬಿದ ಈ ಕೀರ್ತನೆಗಳು ಆ ಕಾಲದ ನಂಬಿಕೆಗಳ, ಆಶಯಗಳ, ಆಚಾರಗಳ, ಪ್ರಾಮಾಣಿಕ ದಾಖಲೆಗಳಾಗಿವೆ ಎಂಬುದೂ ನಿಜವೇ. ಈ ಹಿನ್ನೆಲೆಯಲ್ಲಿ ಕನಕದಾಸರ ಕೀರ್ತನೆಗಳಲ್ಲಿ ಮಿಂಚುವ ಸಾಂಸ್ಕೃತಿಕ ರೇಖೆಗಳನ್ನುಗುರುತಿಸಬಹುದು.

**ಭಕ್ತಿ :**

ಪ್ರಾಚೀನ ಕಾಲದಿಂದಲೂ ಎಲ್ಲ ಜನಾಂಗಗಳನ್ನು ಸಮಾನವಾಗಿ ಆಳಿರುವ ಒಂದು ಚಿರಂತನ ಮೌಲ್ಯ ಭಕ್ತಿ. ಅಂತೆಯೇ ಎಲ್ಲಾ ಲಿಖಿತ ಮತ್ತುಮೌಖಿಕ ಸಾಹಿತ್ಯದಲ್ಲೂ ಇದು ಮತ್ತೆ ಮತ್ತೆ ಮಾರ್ದನಿಸುವ ಶಕ್ತಿಯಾಗಿದೆ. ಮಾನವನ ಬದುಕಿನ ಯಾತನೆಯ ಕ್ಷಣಗಳಲ್ಲಿ ಅವನಿಗೆ ಸಾಂತ್ವನ ನೀಡುವ, ಸುಖ ಸಂತೋಷದ ಸಂದರ್ಭಗಳಲ್ಲಿ ಅವನು ಹಮ್ಮಿನಲ್ಲಿ ಸೊಕ್ಕಿದಂತೆ ವಿನಯವನ್ನು ಮೂಡಿಸುವ, ಭಯದ ಹವೆಯಲ್ಲಿ ಅಭಯಹಸ್ತವಾಗಿ ಬೆಂಬಲಿಸುವ, ಅಹಂಕಾರ ದರ್ಪ ಅತಿರೇಕಗಳಲ್ಲಿ ಎಚ್ಚರಿಕೆಯ ಗಂಟೆಯಾಗಿ ಅಂಕಿತದಲ್ಲಿಡುವ ಮತ್ತು ಅವನ

ಪರಿಮಿತಿಗಳಿಗೆ ಕನ್ನಡಿ ಹಿಡಿದು ಅದರಾಚೆಗೆ ತುಡಿಯುವ ಬಯಕೆಯನ್ನು ಬಲಿಸುವ ಅಂತಃಚೈತನ್ಯವಾಗಿದೆ. ಇದು ಸಾಮಾನ್ಯನನ್ನು ಅಸಾಮಾನ್ಯತೆಗೆ ಏರಿಸುವ ಸಂಗತಿ ಇತಿಹಾಸ ಸತ್ಯವಾಗಿದೆ. ಸಮಾಜದ ಕೆಳಸ್ತರದಲ್ಲಿ ಜನ್ಮವೆತ್ತ ಕನಕದಾಸರು ತಮ್ಮ ಇಂಥ ಅಖಂಡ ಮತ್ತು ಪ್ರಾಮಾಣಿಕ ಭಕ್ತಿಯ ಕಾರಣದಿಂದಾಗಿಯೇ ಸಂತರಾದವರು, ಸನ್ಮಾನ್ಯರಾದವರು. ತಮಗೆ ಸಾಮಾಜಿಕ ಮಾನ್ಯತೆಯನ್ನು ದೊರಕಿಸಿಕೊಟ್ಟು ಅಧ್ಯಾತ್ಮ ಲೋಕದ ಅನಾವರಣವನ್ನು ಮಾಡಿಸಿದಂಥ ಭಕ್ತಿ ಸರ್ವರಿಗೂ ಅಗತ್ಯವೆನ್ನುವುದನ್ನು ಅವರು ತಮ್ಮ ಎಲ್ಲ ಕೀರ್ತನೆಗಳ ಬುನಾದಿಯನ್ನಾಗಿ ಮಾಡಿಕೊಂಡಿದ್ದಾರೆ.

ಭಜಿಸಿ ಬದುಕೆಲೊ ಮನುಜ ಮನಮುಟ್ಟಿ ಹರಿಯಾ
ಅಜಿಭವೇಂದ್ರಾದಿ ವಂದಿತ ಪರಯುಗವಾ
ಕೇಶವ ಎನ್ನಿರೋ ಕ್ಲೇಶನಾಶನವ ಕೇಶವ ಎನ್ನಿರೋ
ತನ್ನ ಆಸೆಪಟ್ಟವನಿಗೆ ಅಧಿಕ ಫಲವೀವನ
ಸಂಸಾರ ಸಾಗರವನುದ್ಧರಿಸುವಡೆ
ಕಂಸಾರಿನಾಮವೊಂದೇ ಸಾಕುಮನವೇ.

ಇಂಥ ಕೀರ್ತನೆಗಳಲ್ಲಿ, ಇಹದ ಬದುಕಿನಾಚೆ ನಿಂತು ಇಹದ ಬದುಕನ್ನು ನಿಯಂತ್ರಿಸುವ ಭಗವಂತನನ್ನು ನೆನೆದಲ್ಲದೆ ಮನುಜನಿಗೆ ಅನ್ಯ ಮಾರ್ಗವಿಲ್ಲ, ಹಾಗೆ ನೆನೆದಾಗ ಅವನು ತನ್ನನ್ನು ಸುತ್ತಿರುವ ಕಷ್ಟಕಾರ್ಪಣ್ಯಗಳ ಮುಳ್ಳು ಕೋರೆಗಳಿಂದ ತನ್ನನ್ನು ರಕ್ಷಿಸಿಕೊಳ್ಳಬಲ್ಲ ಎಂದು ನಿಶ್ಯಂಕವಾಗಿ ಸಾರುತ್ತಾರೆ ಕನಕದಾಸರು. ಇಂಥ ಭಕ್ತಿ ಅಂಥ ಕಷ್ಟದ ಕಾಯಕವಲ್ಲ, ಇದು ದುರವಗಾಹ್ಯ ದೇಹದಂಡನೆಯಿಂದ ಸಂಸಾರ ಸುಖತ್ಯಾಗದಿಂದ ಹಲವು ಬಗೆಯ ಕ್ಲೇಶಗಳಿಗೆ ತನ್ನನ್ನು ಒಡ್ಡಿಕೊಳ್ಳುವುದರಿಂದ ಮಾತ್ರ ಇದು ಸಾಧ್ಯ ಎಂದು ಹಲವರು ಭಾವಿಸಿ ಹೆದರಿ ಅದರಿಂದ ದೂರ ಸರಿಯುತ್ತಾರೆಂದು ಭಾವಿಸುವ ದಾಸರು ಅದು ಅತ್ಯಂತ ಸರಳವೆಂದು ಜನರಿಗೆ ಮನದಟ್ಟು ಮಾಡಿಸಲು ಪ್ರಯತ್ನಿಸುತ್ತಾರೆ.

ಯತಿಯಾಗಬೇಡ ನೀ ವೈರಾಗ್ಯವನೆ ಹಿಡಿದು
ಸತತ ವ್ರತವ ಮಾಡಿದೆನೆಂಬ ಹಮ್ಮು ಬೇಡ
ಶ್ರುತಿ ಸ್ಮೃತಿಗಳನರಿತು ನಡೆವೆನೆನಬೇಡ
ರತಿಪತಿ ಪಿತನಾಮವೊಂದೇ ಸಾಕು ಮನವೆ

ತನುವದಂಡಿಸಿ ತುದಿಯ ಕೋಡುಗಲ್ಲಿನ ಮೇಲೆ
ವನಿತೆಯನು ಬಿಟ್ಟು ತಪವಿರಲು ಬೇಡ
ಅನುದಿನವು ನೀರೊಳಗೆ ಮುಳುಗಿ ನಡುಗಲು ಬೇಡ
ವನಜನಾಭನ ನಾಮ ನೆನೆ ಕಂಡ್ಯಮನವೇ

ತೀರ್ಥಯಾತ್ರೆಯ ಮಾಡಿ ಬಹು ವಿಧದಿ ಬಳಲಿ ಕೃ
ತಾರ್ಥನಾದನೆಂಬೊ ಹೆಮ್ಮೆ ಬೇಡ
ಪಾರ್ಥಸಾರಥಿ ಕಾಗಿನೆಲೆಯಾದಿ ಕೇಶವನ ಸಂ
ಕೀರ್ತನೆಯ ಮಾಡಿ ಸುಖಿಯಾಗೋ ಮನವೆ

ನೂರಾರು ಬಗೆಯ ಬಹಿರಂಗದ ಪ್ರಯತ್ನ ಪರಿವೇಷಗಳಿಂದ ತಾವು ಕೃತಾರ್ಥರಾದೆವೆಂದು ಭಾವಿಸಿ ಆತ್ಮವಂಚನೆ ಮಾಡಿಕೊಳ್ಳುವ, ಅದರಿಂದ ಸಂತೃಪ್ತಿ ಸಿಕ್ಕಿತೆಂದು ಬರಿದೇ ಅಂದುಕೊಳ್ಳುವ ವ್ಯರ್ಥಕಾಯಕವನ್ನು ಕೈಬಿಟ್ಟು, ಕೇವಲ ಮನನೆಟ್ಟು ಆದಿಕೇಶವನನ್ನು ಭಜಿಸುವುದರಿಂದ ಆತ್ಮಸುಖವನ್ನು ಪಡೆಯಬಹುದೆಂದು ದಾಸರು ಒತ್ತಿ ಹೇಳುತ್ತಾರೆ. ಇದೇ ರೀತಿ 'ಶ್ರೀ ರಾಮ ಎನ್ನಿ ಮೂಜಗದವರೆಲ್ಲ ಶ್ರೀ ರಾಮ ಎನ್ನಿರೇ, ಈ ಪರಿಯ ನಂಬಿ ಹಿಗ್ಗಲು ಬೇಡ ಮನವೆ : ವಾಸುದೇವನ ಭಜಿಸೋ ಒರಟು ಜೀವನವೆ, ಮರೆಯದಿರು ಮರೆಯದಿರು ಎಲೆ ಮಾನವಾ' ಎಂಬಂಥ ಕೀರ್ತನೆಗಳಲ್ಲಿ ಭಕ್ತರಾಗಲು ಜನಸ್ತೋಮಕ್ಕೆ ಕಳಕಳಿಯ ಕರೆಕೊಡುತ್ತಾರೆ. ಹೀಗೆ ಕರೆ ಕೊಡುವಾಗ, ಹರಿ ಯಾವ ಯಾವ ಭಕ್ತರ ಮೊರೆಯನ್ನು ಕೇಳಿ ಕಾಯ್ದ ಎಂಬುದರ ಕುರುಹಾಗಿ ಕರಿರಾಜ ಪ್ರಹ್ಲಾದ ದ್ರೌಪದಿ ಅಜಮಿಳ ಮುಂತಾದ ಭಕ್ತರನ್ನು ಉದ್ಧರಿಸಿ ಸಾದಾರವಾಗಿ ಪ್ರತಿಪಾದಿಸುತ್ತಾರೆ. ಅಪನಂಬಿಕೆಗಳು ತಾಂಡವವಾಡುತ್ತಾ ಜನರು ಬದುಕು ಮೂರಾಬಟ್ಟೆಯಾಗುತ್ತಿರುವುದನ್ನು ಕಂಡು ಸಹಿಸದ ದಾಸರು ಜನರ ಅಂತರಂಗ ಶುದ್ಧಿಗೆ ಭಕ್ತಿಯೇ ತಾರಕ, ಪೂರಕ ಗತಿ ಮತಿ ಎಂಬುದನ್ನು ಸರಳವಾದ ಅರ್ಥಪೂರ್ಣವಾದ ಪರಿಣಾಮಕಾರಿಯಾದ ಮಾತುಗಳಲ್ಲಿ ಅತ್ಯಂತ ಸಚಿತ್ರವಾಗಿ ಸಜೀವವಾಗಿ ಸಾಮಾನ್ಯ ಜನರ ಮನಸ್ಸಿಗೂ ಮುಟ್ಟುವಂತೆ ನಿರೂಪಿಸಿದ್ದಾರೆ. ಕನಕದಾಸರ ಭಕ್ತಿಗೆ ಆ ದೇವ ಈ ದೇವನೆಂಬ ಭೇದವಿಲ್ಲ. ಅವರ ದೃಷ್ಟಿಯಲ್ಲಿ ಹರಿಹರರೆಲ್ಲ ಒಂದೇ. ಭಕ್ತಿ ಮುಖ್ಯ, ಆ ಭಕ್ತಿಗೆ ಗುರಿಯಾಗುವ ದೇವ ಯಾರಾದರೂ ಸರಿ ಎಂಬುದೇ ಅವರ ನಿಲುವು. ಕನಕದಾಸರ ಭಕ್ತಿ ಸಂಕುಚಿತ ಮನಸ್ಸಿನ ಕುರುಡು ಭಕ್ತಿಯಾಗದೆ ನಿರ್ಮಲ ವಿಶಾಲ ಮನಸ್ಥಿತಿಯ ಪರಿಮಳವಾಗಿರುವುದೇ ಇದಕ್ಕೆ ಕಾರಣ. ಅವರ ಬಹುಪಾಲು ಕೀರ್ತನೆಗಳು ಹರಿಸರ್ವೋತ್ತಮತ್ವವನ್ನೇ ಸ್ಪಂದಿಸಿದರೂ ಅವರದು ಪ್ರಧಾನತಃ ಉದಾತ್ತವಾದ ಭಾಗವತ ಮನೋಧರ್ಮವೆಂಬುದನ್ನು ಅವು ನಿರ್ವಿವಾದವಾಗಿ ಧ್ವನಿಸುತ್ತವೆ. ಆದ್ದರಿಂದಲೇ ಅವರ ಈ ಭಕ್ತಿ ಮತಾಚಾರದ ಶುಷ್ಕ ಸರಕಾರಗದೆ ಉತ್ತಮ ಸಂಸ್ಕೃತಿಯ ಸದಂಶವಾಗಿದೆ.

ಪ್ರಾರ್ಥನೆ ಭಕ್ತಿಗಳಂತೆಯೇ ಆತ್ಮ ಶೋಧನೆ ಮತ್ತು ಆತ್ಮನಿವೇದನೆಗಳೂ ಮಾನವನ ಒಳ ಬದುಕನ್ನು ರೂಪಿಸುವ ಸಂಸ್ಕೃತಿಯ ಜೀವಂತ ಝರಿಗಳೇ ಆಗಿವೆ.

ಇತರದಾಸರ ಕೀರ್ತನೆಗಳಿಗಿಂತ ತೀವ್ರತರವಾದ ಆತ್ಮ ಶೋಧನೆ ಮತ್ತು ನಿವೇದನೆಗಳು ಕನಕರ ಕೀರ್ತನೆಗಳಲ್ಲಿ ಲಭ್ಯವಾಗುತ್ತವೆ. ಸಂಸ್ಕೃತಿ ತಮ್ಮ ಪರಮಾಗತವಾದ ಸಹಜ ಸ್ವತ್ತೆಂದು ಭಾವಿಸಿ ಅದಕ್ಕಾಗಿ ಸ್ವತಃ ಪರಿಶ್ರಮಪಡದ ಕಾರಣದಿಂದಾಗಿ ಅದರ ತಿರುಳಿನ ರುಚಿಯನ್ನೇ ಅನುಭವಿಸದ ಮತ್ತು ಸಾಮಾಜಿಕವಾಗಿ ಕೂಡ ಈಗಾಗಲೇ ಒಂದು ಮಟ್ಟವನ್ನು ಮುಟ್ಟಿರುವ ಕಾರಣದಿಂದಾಗಿ ಬಹಿರ್ಮುಖಿ ಬದುಕಿಗೇ ಹೆಚ್ಚು ವಾಲುವ ಮೇಲು ವರ್ಗದವರಿಗಿಂತ ತಾನು ಹಿಂದುಳಿದವನು ಕೀಳು ಎಂಬ ದೈನ್ಯತೆ ಕಣಕಣವನ್ನು ವ್ಯಾಪಿಸಿದ್ದ ಕನಕದಾಸರು ತಮ್ಮೊಳಗನ್ನು ಪರಿಪರಿಯಾಗಿ ಶೋಧಿಸಿಕೊಂಡಿರುವ, ಆ ಮೂಲಕವಾಗಿ ಅದನ್ನು ಶುದ್ಧೀಕರಿಸಿ ಭಗವಂತನ ಆವಾಸಸ್ಥಾನವಾಗಿಸಲು ಪ್ರಯತ್ನಿಸಿರುವ ಅಂಶಗಳು ಇಲ್ಲಿ ಜೀವಂತವಾಗಿ ಮಿಡಿಯುತ್ತವೆ.

ಈರೇಳು ಜನುಮದಿಂ ದಾಸನಾಗಿಹೆ ನಾನು
ಸೇರಿದನೋ ಸರ್ವ ಶರಣರ ಸೇವೆಗ
ಘೋರ ದುರಿತಗಳೆಂಬ ವಾರಿಧಿಯ ಬತ್ತಿಸಿ
ನಾರಸಿಂಹನೆ ದಯದಿ ಸಲಹೆನ್ನಸ್ವಾಮಿ,
ರಂಗನಾಥನೆ ನಿನ್ನ ಡಿಂಗರಿಗನೇ ನಾನು
ಡಂಗುರವ ಹೊಯಿಸಯ್ಯ ದಾಸನೆಂದು
ಮನವಚನದಲ್ಲಿ ಮಾಡಿದ ಪುಣ್ಯ ಪಾಪಗಳ
ನಿನಗರ್ಪಿಸುವೆ ಕಾಲ ಕಾಲದಲ್ಲಿ
.. .. .. .. ..
ಗುಟ್ಟು ಮಾಡಿಕೊಂಡಿರದೆ ಕಂಡವರಿಗೆ ಕಾರ್ಪಣ್ಯ
ಬಿಟ್ಟು ಬಡವನಾದೆನಲ್ಲಯ್ಯ
.. .. .. .. ..
ಒಡಲ ಆಸೆಗಾಗಿ ನೊಣವು ಕೊಡದ ಜೇನಿನಲ್ಲಿ ಬಿದ್ದು
ತೊಡಕಿದಂತೆ ಪಾಶದಲ್ಲಿ ಬಿದ್ದು ಬಾಯ ಬಿಡುತಿಹೆನು.

ಮುಂತಾದ ಕೀರ್ತನೆಗಳ ಪದಪದಗಳಲ್ಲಿ ದಾಸರ ಹೃದಯದೊಳಗಿನ ನೋವು ಕಾವುಗಳು ಕೈಯಲ್ಲಿ ಮುಟ್ಟಬಹುದಾದಷ್ಟುಗಟ್ಟಿಯಾಗಿ ಮಿಡಿಯುವುದನ್ನು ಗಮನಿಸಬಹುದು, ಇಂಥ ಆತ್ಮ ನಿವೇದನೆಯಲ್ಲದೆ ಮನಸ್ಸು ಶುದ್ಧವಾಗದು, ಮನಸ್ಸು ಶುದ್ಧವಾಗದೆ ಭಕ್ತಿ ಅದರಲ್ಲಿ ತುಂಬದು, ಭಕ್ತಿ ತುಂಬದೆ ಬದುಕು ಕೃತಾರ್ಥವಾಗದು, ಇದು ಅವರ ಅಚಲ ನಿಲುವು.

**ವಿನಯ :**

ವಿನಯ ಸಂಸ್ಕೃತಿಯ ಮತ್ತೊಂದು ಮೂಲಾಂಶ. ಇದು ಆತ್ಮವಿಕಾಸದ ಅಹಂಕಾರನಿರಸನದ ಪ್ರೀತಿ ಸ್ನೇಹ ವರ್ಧನೆಯ ಮುಖ್ಯ ಮಾಧ್ಯಮ. ಮನಸ್ಸಿನ ಕ್ರೌರ್ಯ, ಒರಟು ಬಿಗಿ ಹಮ್ಮು ಬಿಮ್ಮುಗಳು ಇದರ ಸ್ಪರ್ಶದಿಂದ ಕರಗಿ ಹೋಗುತ್ತವೆ. ಸರಳತೆ ವಿಶಾಲತೆ ವಿಶ್ವ ಪ್ರೇಮಗಳು ಚಿಗುರುತ್ತವೆ. ಅಲ್ಲಿ ಭಗವಂತನ ಚರಣ ಚಿಹ್ನೆಗಳು ಮೂಡುತ್ತವೆ. ಸಾಧಕನಿಗಿರಬೇಕಾದ ಮೊದಲ ಗುಣ ಈ ವಿನಯ ಬಸವಾದಿಗಳ ವಚನದಲ್ಲಿರುವಂತೆಯೇ ದಾಸರ ಕೀರ್ತನೆಗಳಲ್ಲೂ ವಿನಯಶೀಲತೆಯ ಪ್ರತಿಪಾದನೆ ಅತ್ಯಂತ ಸೊಗಸಾಗಿ ಆರ್ದ್ರವಾಗಿ ದಟ್ಟವಾಗಿ ತುಂಬಿ ನಿಂತಿದೆ. 'ದಾಸಾರ್ಯರ ದಾಸರ ದಾಸ ನಾನು ಬಾಡದೀಶ ಕಾಯ್ದುಕೊಳ್ಳು, ದಾಸದಾಸರ ಮನೆಯ ದಾಸಿಯರ ಮಗ ನಾನು: ಹಲವು ದಾಸರ ಮನೆಯ ಹೊಲೆದಾಸ ನಾನಯ್ಯ; ದಾಸರ ದಾಸನಯ್ಯ ರಂಗಯ್ಯ ಕರ್ಮಪಾಶಗಳ ವಿಮೋಚನೆ ಮಾಡೋ ರಂಗಯ್ಯ' ಎಂಬಂಥ ಕನಕರ ಕೀರ್ತನೆಗಳು ಇದಕ್ಕೆ ಸಾಕ್ಷಿಯಾಗಿವೆ.

**ನಂಬಿಕೆ :**

ನಂಬಿಕೆಯಿಂದ ಬದುಕು, ನಂಬಿಕೆಯಿಂದ ಜಗತ್ತು. ಈ ನಂಬಿಕೆಯಿಲ್ಲದೆ ಯಾವ ವ್ಯವಹಾರವೂ ಸುಗಮವಾಗದು. ನಮ್ಮ ಎಲ್ಲಾ ಶಾಂತಿ ಸಮಾಧಾನ ಭರವಸೆ ನಿರೀಕ್ಷೆ ಸುಖ ಸಂತೃಪ್ತಿಗಳಿಗೆ ಇದು ಬುನಾದಿ. ಉತ್ತಮ ಸಂಸ್ಕೃತಿಯ ಸಲ್ಲಕ್ಷಣಗಳಲ್ಲಿ ಇದು ಮಹತ್ವದ್ದಾದುದು. ಆದ್ದರಿಂದಲೇ ದಾಸರು ಜನಮನದಲ್ಲಿ ಇದನ್ನು ನಾಟಿ ಹಾಕಲು ತಮ್ಮ ಕೀರ್ತನೆಗಳಲ್ಲಿ ಪ್ರಯತ್ನಿಸಿದ್ದಾರೆ. ಈ ನಂಬಿಕೆಯ ಮೊದಲ ಹಾಗೂ ಮುಖ್ಯ ಹಂತ ಭಗವಂತನಲ್ಲಿ ವಿಶ್ವಾಸವಿರಿಸುವುದು ಏಕೆಂದರೆ ಆತ ನಂಬಿಕೆಯ ನೆಲೆ. ಆತನನ್ನು ನಂಬಿದವರಿಗೆ ಯಾವ ಯಾರ ಭಯವೂ ಇಲ್ಲ. 'ತಲ್ಲಣಿಸದಿರು ಕಂಡ್ಯ ತಾಳು ಮನವೇ' ಎಂಬ ಪ್ರಸಿದ್ಧ ಕೃತಿಯ ಮೂಲಕ ದಾಸರು ಇದನ್ನು ಅನ್ಯಾದೃಶವಾಗಿ ನಿರೂಪಿಸಿದ್ದಾರೆ. ಈ ಕೀರ್ತನೆಯ ಉಳಿದ ನುಡಿಗಳಲ್ಲಿ ಅವರು ಕೊಡುವ ನಿದರ್ಶನಗಳು ಅವರ ಕಾವ್ಯ ಸತ್ವಕ್ಕೆ ಮಾತ್ರವಲ್ಲದೆ, ಅವರ ಪ್ರತಿಪಾದನಾ ಸಾಮರ್ಥ್ಯದ ದ್ಯೋತಕ ಕೂಡಾ ಆಗಿವೆ. ಇದೇ ಕೀರ್ತನೆ ಆಶಾವಾದವನ್ನೂ ನಿರ್ಭೀತಿಯನ್ನು ಧ್ವನಿಸುತ್ತದೆ.

**ನೀತಿ :**

ಕನಕದಾಸರ ಕೆಲವು ಕೀರ್ತನೆಗಳು ನೀತಿ ಮಂಜರಿಯೇ ಆಗಿವೆ. ನೀತಿ ಬದುಕಿನ ಜೀವಂತಿಕೆಗೆ ಸೌಹಾರ್ದ ಸಾಮರಸ್ಯಗಳಿಗೆ ನೆಮ್ಮದಿ ನಿರುಮ್ಮಳಗಳಿಗೆ ನಿರಸೂಯೆ ನಿರ್ಮಲತೆಗಳಿಗೆ ಅರ್ಥಪೂರ್ಣ ಧ್ಯೇಯ ಸಾಧನೆಗೆ ಅತ್ಯಗತ್ಯ. ಆದ್ದರಿಂದ ಮನುಷ್ಯ

ತನ್ನ ಜೀವನ ಸಾರ್ಥಕತೆಗಾಗಿ ಮೈಗೂಡಿಸಿ ಕೊಳ್ಳಬೇಕಾದ ಕೆಲವು ಮೌಲ್ಯಗಳನ್ನು ದಾಸರು ಸರಳವಾಗಿ ನೇರವಾಗಿ ಮನಮುಟ್ಟುವಂತೆ ಪ್ರತಿಪಾದಿಸುತ್ತಾರೆ.

ಹಸಿದು ಬಂದವರಿಗೆ ಅಶನವೀಯಲು ಬೇಕು
ಶಿಶುಗಳಿಗೆ ಪಾಲ್ಪಣ್ಣುಗಳ ಉಣಿಸಬೇಕು
ಹಸನಾದ ಭೂಮಿಯನು ಧಾರೆಯೆರೆಯಲುಬೇಕು
ಪುಸಿಯಾಡದೇ ಭಾಷೆ ನಡೆಸಲೇ ಬೇಕು.

ಕಳ್ಳತನಗಳ ಮಾಡಿ ಒಡಲು ಹೊರೆಯಲು ಬೇಡ
ಕುಳ್ಳಿರ್ದ ಸ್ಥಳದಿ ಕುತ್ಸಿತವು ಬೇಡ
ಒಳ್ಳೆಯವ ನಾನೆಂದು ಬಲು ಹೆಮ್ಮೆ ಬೇಡ
ಬಾಳ್ವೆ ಸ್ಥಿರವೆಂದು ನೀ ನಂಬಿ ಕೆಡಬೇಡ.

ದೊರೆತನವು ಬಂದಾಗ ಕೆಟ್ಟುನುಡಿಯಲುಬೇಡ
ಸಿರಿ ಬಂದ ಕಾಲಕ್ಕೆಬಲು ಮೆರೆಯಬೇಡ
ಅಷ್ಟಮದದಿ ಮೆರೆಯದಿರು: ನಷ್ಟಕ್ಕೆಗುರಿಯಾಗದಿರು
ದುಷ್ಟಸಂಗವನ್ನು ಮಾಡಿ ಭ್ರಷ್ಟನಾಗಬೇಡ ಮನವೆ
ಕಾಯವನು ನಂಬದಿರು ಮಾಯಕ್ಕೆ ಮರುಳಾಗದಿರು
ಸ್ತ್ರೀಯರನು ಕಂಡು ನೀನು ಬಯಸದಿರು ಮರುಳು ಮನವೆ

ಈ ವಿಷಯಗಳ ಬಗ್ಗೆ ದಾಸರ ಹೃದಯ ಮಿಡಿತದ ತೀವ್ರತೆ ಎಷ್ಟಿದೆಯೆಂದರೆ ಸಾರಿ ಡೂರಿ ಹೇಳುತ್ತೇನೆ ಕೆಟ್ಟ ಕಂಡ್ಯ ಬಡ್ಡಿ ಮನವೆ' ಎಂದು ಶೂದ್ರ ಸಹಜ ಒರಟು ಭಾಷೆಯಲ್ಲಿ ಕಿಡಿವಿದ್ದಾರೆ. ಸಿರಿ ನಮ್ಮ ಪತನಕ್ಕೆ ಬಹುಮುಖ್ಯ ಕಾರಣವಾಗುವುದರಿಂದ ಅದನ್ನು ಏನೇ ಆದರೂ ನಂಬಬಾರದೆಂಬ ಅಂಶವನ್ನು ಬೇರೆ ಕೀರ್ತನೆಗಳಲ್ಲಿ ಒತ್ತಿ ಒತ್ತಿ ಹೇಳುವ ಮೂಲಕ ದಾಸರು ಮನಂಬುಗಿಸುತ್ತಾರೆ.

ಹೆಣ್ಣು ಹೆತ್ತವರು ಮನೆಯಲ್ಲಿ ತಳವೂರಿ ಅವರನ್ನು ಸರ್ವವಿಧದಲ್ಲೂ ಸುಲಿಗೆ ಮಾಡುವ ಪ್ರವೃತ್ತಿ ಇತ್ತೀಚೆಗೆ ಅಧಿಕವಾಗುತ್ತಿರುವುದು ಎಲ್ಲರಿಗೂ ಗೊತ್ತಿರುವ ಸಂಗತಿಯೇ. ಆದರೆ ಇದು ಸುಸಂಸ್ಕೃತಿಯ ಲಕ್ಷಣವೆ ? ಸ್ವಾಭಿಮಾನ ಶೀಲತೆಯೆ ? ನಾನೂರು ವರ್ಷಗಳ ಹಿಂದೆಯೇ ದಾಸರು ಈ ಅಂಶದ ಕಡೆಗೆ ನಮ್ಮ ಗಮನ ಸೆಳೆದು ಮೊನಚಾಗಿ ಚುಚ್ಚಿದ್ದಾರೆ.

ಮಾವನ ಮನೆಯೊಳಗೆ ಇರಬಹುದೆ ಕೋವಿದರು:
ಹಾವು ಹಿಡಿಯಲುಬಹುದು ಹರಣ ಕೊಡಲೂ ಬಹುದು
ಜೀವ ಕಿಚ್ಚನ್ನು ಹಿಡಿದು ನುಂಗಬಹುದು
ಭಾಮೆಯಳ ಮನೆಯಲ್ಲಿ ಜೀವಿಸುವುದಕ್ಕಿಂತ
ಸಾಯುವುದೇ ಲೇಸು ಅಭಿಮಾನಿಗಳಿಗೆ

ಈ ಸ್ವಾಭಿಮಾನವೆಂಬ ಗುಣ ಸುಸಂಸ್ಕೃತ ಜನತೆಯ ಅಸ್ತಿತ್ವದ ಅವಿಭಾಜ್ಯಭಾಗ. ಇದು ಲುಪ್ತವಾದರೆ ಅಂಥವರನ್ನು ಸುಸಂಸ್ಕೃತರೆಂದು ಕರೆಯಬಹುದೆ ? ಹಾಗೆಯೇ ಜನರು ವಿವಿಧ ಸಂದರ್ಭಗಳಲ್ಲಿ ನಡೆದುಕೊಳ್ಳಬೇಕಾದ ರೀತಿಯನ್ನು ತಮ್ಮ ಸಮೃದ್ಧ ಜೀವನಾನುಭವದ ಹಿನ್ನೆಲೆಯಿಂದ ನಿದರ್ಶನಗಳನ್ನು ನೀಡುವ ಮೂಲಕ ಸ್ಪಷ್ಟವಾಗಿ ಸಾರುತ್ತಾರೆ ದಾಸರು. ವಾಸ್ತವ ಬದುಕಿನ ಹೂರಣ ಅವುಗಳಲ್ಲಿ ಅತ್ಯಂತ ಸಾಂದ್ರವಾಗಿ ತುಂಬಿಕೊಂಡಿರುವುದರಿಂದ ನಮ್ಮ ಮನಸ್ಸನ್ನು ಗಾಢವಾಗಿ ತಾಕುವುದಲ್ಲದೆ ನಮ್ಮನ್ನು ನಮ್ಮೆದುರೇ ಹಿಡಿದು ನಿಲ್ಲಿಸುತ್ತವೆ.

ವರಕವಿಗಳ ಮುಂದೆ ನರಕವಿಗಳ ವಿದ್ಯೆಯ ತೋರಬಾರದು
ಧರಣಿಯ ಕಲ್ಲಿಗೆ ಶರಣೆಂದು ಪೂಜೆಯ ಮಾಡಬಾರದು
ಪಾಪಿಗಳಿದ್ದಲ್ಲಿರೂಪುಳ್ಳ ವಸ್ತುವ ತೋರಬಾರದು
ಕೋಪಿಗಳಿದ್ದಲ್ಲಿ ಅನುಭವಗೋಷ್ಠಿಯ ಮಾಡಬಾರದು
ಅಡಿಸತ್ತಮಡಕೆಗೆ ಜೋಡಿಸಿ ಒಲೆಗುಂಡು ಹೂಡಬಾರದು
ಬಡತನ ಬಂದಾಗ ನೆಂಟರ ಬಾಗಿಲ ಸೇರಬಾರದು

ಇಂಥ ಕೀರ್ತನೆಗಳಲ್ಲಿ ನಮ್ಮ ಬದುಕನ್ನು ತಿದ್ದುವ ತೀಡುವ ನೇರ್ಪುಗೊಳಿಸುವ ದಾಸರ ಹೃದಯಾಂತರಾಳದ ಕಳಕಳಿ ಸುವ್ಯಕ್ತವಾಗುತ್ತದೆ.

ಇಹದ ಬದುಕಿನ ಸಮಗ್ರತೆಗೆ ಬೇಕಾದುದೆಲ್ಲ ನಮ್ಮಲ್ಲಿದೆ, ಆದರೆ ಬೇಕಾದ ರೀತಿಯಲ್ಲಿ ಇಲ್ಲ ಎಂಬುದೇ ನಮ್ಮ ದುಃಖಕ್ಕೆಕಾರಣ, ನಮ್ಮ ಸುತ್ತಮುತ್ತಣ ವಾತಾವರಣವನ್ನೇ ನಮ್ಮ ಮುಂದೆ ಸಹಜವಾಗಿ ನೇರವಾಗಿ ಬಿಚ್ಚಿಟ್ಟು ಆ ಮೂಲಕ ದೋಷವೆಲ್ಲಿದೆ ಎಂಬುದು ನಮಗೇ ಸ್ಪಷ್ಟಗೋಚರವಾಗುವಂತೆ ಮಾಡುವುದು ದಾಸರ ಮತ್ತೊಂದು ವೈಶಿಷ್ಟ್ಯ. ಈ ಕೀರ್ತನೆಯನ್ನು ಗಮನಿಸಿ :

ತಾನೂ ಉಣದೆ ಪರರಿಗಿಕ್ಕದ ಧನವಿನ್ಯಾತಕೆ
ಮಾನಹೀನನಾಗಿ ಬಾಳ್ವ ಮನುಜನ್ಯಾತಕೆ
ಜ್ಞಾನವಿಲ್ಲದೆ ನೂರು ಕಾಲ ಬದುಕಲೇತಕೆ
ಮಾನಿನಿಯ ತೊರೆದ ಮೇಲೆ ಭೋಗವೇತಕೆ
ಮಾತು ಕೇಳದೆ ಮರೆತು ನಡೆವ ಮಕ್ಕಳ್ಯಾತಕೆ
ಪ್ರೀತಿಯಿಲ್ಲದೆ ಎಡೆಯಲಿಕ್ಕಿದ ಅನ್ನವೇತಕೆ
ನೀತಿಯರಿತು ನಡೆಯದಿರಲು ಬಂಟನ್ಯಾತಕೆ
ಸನ್ನೆಯರಿತು ನಡೆಯದಿರುವ ಸತಿಯುಯಾತಕೆ

ಇತ್ಯಾದಿ...

ನಮಗೆ ಬೇಕಾದ ವ್ಯಕ್ತಿಗಳು ವಸ್ತುಗಳು ಗುಣಗಳು ನಮ್ಮಲ್ಲಿ ಕೇವಲ ಇದ್ದರೆ ಮಾತ್ರ ಸಾಲದು. ಅವುಗಳ ಸಾರ್ಥಕತೆ ಅವು ಕ್ರಿಯಾ ರೂಪದಲ್ಲಿ ಅಭಿವ್ಯಕ್ತಿಗೊಂಡಾಗ ಮಾತ್ರ ಈ ಅರ್ಥಪೂರ್ಣವಾದ, ಬದುಕಿನೊಳಗೆ ಹಾಸುಹೊಕ್ಕಾಗಿ ನೈಜವಾಗಿ

ಜೀವಂತವಾಗಿ ನೆಯ್ಗೆಗೊಂಡು ಮಿಂಚುವ ಗುಣ ವಿಶೇಷವೇ ಸಂಸ್ಕೃತಿ, ಅರಿವು ಇರವಾಗುವುದೇ ಸಂಸ್ಕೃತಿ, ಇದನ್ನು ಮೇಲಿನ ಸಾಲುಗಳಲ್ಲಿ ನಿಸ್ಸಂದಿಗ್ಧವಾಗಿ ನಿರೂಪಿಸಿದ್ದಾರೆ ದಾಸರು.

## ಸ್ವಾಭಿಮಾನ

ಹಿಂದೆಯೇ ಹೇಳಿದಂತೆ ಸ್ವಾಭಿಮಾನ, ಸುಸಂಸ್ಕೃತ ವ್ಯಕ್ತಿಯ ಬದುಕಿನ ಅವಿಭಾಜ್ಯ ಜೀವಸತ್ವ ಇದಿಲ್ಲದಿದ್ದರೆ ಅವನು ಬದುಕಿದ್ದುಸತ್ತಂತೆ. ತುರ್ತು ಅಗತ್ಯದ ಪೂರ್ತಿಗಾಗಿ ಸ್ವಾಭಿಮಾನವನ್ನು ಮಾರಿಕೊಂಡು ಹೇಗಾದರೂ ಬದುಕಬೇಕೆಂಬ ಆಸೆ ಅನರ್ಥಗಳ ಮೂಲಕ ನಮಗೆ ಮನದಟ್ಟು ಮಾಡಿಸಲು ಕನಕದಾಸರು ತಮ್ಮ ಕೆಲವು ಕೀರ್ತನೆಗಳಲ್ಲಿ ಪ್ರಯತ್ನಿಸಿದ್ದಾರೆ.

ಅಜ್ಞಾನಿಗಳಕೂಡ ಅಧಿಕ ಸ್ನೇಹಕ್ಕಿಂತ
ಸುಜ್ಞಾನಿಗಳ ಕೂಡ ಜಗಳವೇ ಲೇಸು
ಉಂಬುವನು ಮಾನವಾದ ಅರಸನೋಲಗಕ್ಕಿಂತ
ತುಂಬಿದೂರೊಳಗೆ ತಿರಿದುಂಬುವುದೆ ಲೇಸು
ಒಡನೆ ಹಂಗಿಸುವ ಓಗರವನುಂಬುದಕ್ಕಿಂತ
ಕುಡಿನೀರು ಕುಡಿದುಕೊಂಡಿರುವುದೇ ಲೇಸು
ಮಸೆಯುತಿಹ ಮತ್ಸರದ ನೆರೆಯೊಳಿರುವುದಕಿಂತ
ಹಸನಿಲ್ಲದ ಹಾಳು ಗುಡಿಯೇ ಲೇಸು

ಇಲ್ಲಿ ಯಾವುದು ಸಂಸ್ಕೃತಿಯನ್ನು ರೂಪಿಸುವ ನೈತಿಕ ಮೌಲ್ಯ: ಯಾವುದು ಅಲ್ಲ ಎಂಬುದು ತಿಳಿಜಲದಷ್ಟೇ ಸ್ಪಷ್ಟ, ಈ ಮಾರ್ಗದರ್ಶನದಂತೆ ನಡೆದರೆ ಮನುಷ್ಯನ ಬದುಕು ವಿಶಿಷ್ಟವೂ ಗೌರವಾನ್ವಿತವೂ ಪ್ರಭಾವಕಾರಿಯೂ ಸತ್ವ ಸಂಪನ್ನವೂ ಆಗುತ್ತದೆಂಬುದೇ ದಾಸರ ಇಂಗಿತ.

ಸಾಮಾನ್ಯ ಜನತೆಯ ಸುಖ ದುಃಖಗಳಲ್ಲಿ ಸಾಮರಸ್ಯದಿಂದ ಬೆರೆತು ಅವರ ಜೀವನದ ಅನೇಕ ನಿರುಪಯುಕ್ತ ನಿಸ್ಸಾರ ಅಂಶಗಳನ್ನು ಮನಗಂಡ ದಾಸರು ಅವರ ಮಧ್ಯದಲ್ಲಿಯೇ ನಿಂತು ಅವುಗಳ ಕಂತೆಯನ್ನು ಬಿಚ್ಚುತ್ತ ಅವರಿಂದ ಅವಕ್ಕೆಉತ್ತರವನ್ನು ಹೇಳಿಸುವ ಚಾತುರ್ಯದ ಮೂಲಕ ಅವರ ಆಪ್ತತೆಯನ್ನುಗಳಿಸಿ ಅವರ ಲೋಪವನ್ನು ಅಳಿಸುವ ತಂತ್ರವನ್ನು ಈ ಕೀರ್ತನೆಯಲ್ಲಿ ಕಾಣಬಹುದು.

ಅಹುದಾದರಹುದೆನ್ನಿ ಇಲವಾದರಿಲ್ಲವೆನ್ನಿ
ಬಹು ಜನರು ನೆರೆ ತಿಳಿದು ಪೇಳಿ ಮತ್ತಿದನು ॥
ದೇವರಿಲ್ಲದ ಗುಡಿಯು ಹಾಳುಬಿದ್ದಂಗಡಿಯು
ಭಾವಿಲ್ಲದ ಭಕುತಿ ಅದು ಕುಹಕ ಯುಕುತಿ

ಧರ್ಮವಿಲ್ಲದ ಅರಸು ಮುರಿದ ಕಾಲಿನಗೊರಸು
ನಿರ್ಮಲವಿಲ್ಲದ ಮನಸು ತಾ ಕೊಳಚೆ ಹೊಲಸು
ಮಕ್ಕಳಿಲ್ಲದ ಸಿರಿಯು ಕೊಳೆತ ತೆಂಗಿನ ತುರಿಯು
ಸೌಖ್ಯವಿಲ್ಲದ ಊಟ ಅದು ಕಾಳಕೂಟ

ಇತ್ಯಾದಿ...

ಈ ಕೀರ್ತನೆಯ ಸಾಲುಗಳ ಮೊದಲ ಭಾಗ ನಮ್ಮ ಸದ್ಯದ ಸ್ಥಿತಿಯ ನಗ್ನತೆಯನ್ನೂ ಎರಡನೆಯ ಭಾಗ ಅದರ ಪರಿಣಾಮ ಮತ್ತು ನಿರುಪಯುಕ್ತತೆಯನ್ನೂ ಅತ್ಯಂತ ಶಕ್ತಿಯುತವಾಗಿ ಸಾದರಪಡಿಸುತ್ತವೆ. ನಮ್ಮಲ್ಲಿ ಗುಡಿಯಿದೆ, ದೇವರಿಲ್ಲ, ಭಕ್ತಿಯಿದೆ, ಭಾವವಿಲ್ಲ, ಅರಸಿದ್ದಾನೆ, ಧರ್ಮವಿಲ್ಲ, ಮನಸ್ಸಿದೆ ನಿರ್ಮಲವಾಗಿಲ್ಲ, ಸಿರಿಯಿದೆ, ಮಕ್ಕಳಿಲ್ಲ, ಊಟವಿದೆ, ಸೌಖ್ಯವಿಲ್ಲ. ಎರಡನೆಯ ಭಾಗ ಲೋಪವಾಗಿರುವುದರಿಂದ ಮೊದಲನೆಯವು ಇದ್ದು ಫಲವಿಲ್ಲ. ಮೊದಲನೆಯದು ಹೊರಬದುಕನ್ನು, ಎರಡನೆಯದು ಒಳಬದುಕನ್ನು ಸೂಚಿಸುತ್ತದೆ. ಇವೆರಡೂ ಒಂದಾದಾಗಲೇ ಬಾಳು, ಸಂಸ್ಕೃತಿ ಸಂಪನ್ನ, ಸತ್ವಯುತ, ಸಾರ್ಥಕವೆಂಬುದನ್ನು ಈ ಸರಳ ಸಾಲುಗಳು ಅನನ್ಯವಾಗಿ ಬಿಂಬಿಸುತ್ತವೆ.

**ಸಾಮರಸ್ಯ :**

ಆಚಾರವಿಚಾರಗಳ ಸಾಮರಸ್ಯ ಬದುಕಿನಲ್ಲಿ ಸಾಧಿತವಾದಾಗಲೇ ಅದು ಅರ್ಥಪೂರ್ಣ, ಆದರ್ಶಮಯ. ನಮ್ಮ ಇಂದಿನ ಜೀವನದ ವಿಚ್ಛಿದ್ರತೆಗೆ ಪರಿಣಾಮರಾಹಿತ್ಯಕ್ಕೆ ದುರಂತಕ್ಕೆನಮ್ಮ ನಡೆ ನುಡಿಗಳಲ್ಲಿನ ಬಿರುಕೇ ಕಾರಣವೆಂಬುದನ್ನು ಕನಕದಾಸರು ಮೇಲಿಂದ ಮೇಲೆ ಕೇಳುತ್ತಾರೆ.

ಜಪವ ಮಾಡಿದರೇನು ತಪವಮಾಡಿದರೇನು
ಕಪಟಗುಣವಿಪರೀತ ಕಲುಷವಿದ್ದವರು.
ಮೋಸದಿ ಜೀವರ ಘಾಸಿ ಮಾಡಿದ ಪಾಪ
ಕಾಶಿಗೆ ಹೋದರೆ ಹೋದೀತೆ
ಭಾಷೆಯ ಕೊಟ್ಟು ನಿರಾಸೆ ಮಾಡಿದ ಫಲ
ಕ್ಲೇಶವಗೊಳಿಸದೆ ಇದ್ದೀತೆ

**ದ್ವಂದ್ವ :**

ಹೀಗೆ ಸಾರುತ್ತ ನಮ್ಮೊಳಗೆ ಆಪ್ತವಾಗಿ ನೆಲಯೂರುತ್ತ ನಮ್ಮಂತರಂಗವನ್ನು ಗಾಢವಾಗಿ ಕಲಕುತ್ತ ಪರಿವರ್ತನೆಯ ಬೀಜವನ್ನು ಬಿತ್ತುತ್ತ ಹೋಗುವ ದಾಸರು ಇದಕ್ಕಿದ್ದಂತೆ,

ಹೀನ ಮನುಜಗೆ ಜ್ಞಾನವ ಬೋಧಿಸೆ
ಹೀನ ವಿಷಯವಳಿದು ಹೋದೀತೆ

ಎಂದಾಗ ದಡಕ್ಕನೆ ಎಸೆದಂತಾಗುತ್ತದೆ. ಹೀನ ಮನುಜನನ್ನು ಉತ್ತಮ ಮನುಜನನ್ನಾಗಿ ಮಾಡುವುದೇ ಜ್ಞಾನ, ಅದೇ ಸಂಸ್ಕೃತಿ ಕೂಡ. ಹೀಗಿರುವಾಗ ಹೀನರನ್ನು ಹೀನರನ್ನಾಗಿಯೇ ಉಳಿಯಗೊಡಬೇಕೆನ್ನುವ, ಅವರಿಗೆ ಬೋಧಿಸುವುದು ವ್ಯರ್ಥವೆನ್ನುವ ಇಂಥ ಮಾತು ಕನಕದಾಸರ ಬಾಯಿಂದ ಬಂದಿರುವುದು ನಿಜಕ್ಕೂ ಆಶ್ಚರ್ಯಕರ. ಮೂಢ ಮತ್ತು ಸ್ವಾರ್ಥಪರಂಪರೆಯ ನೆರಳು ಪ್ರಗತಿ ಗಾಮಿಗಳನ್ನು ಒಮ್ಮೊಮ್ಮೆ ಹೇಗೆ ಅವರಿಗರಿವಿಲ್ಲದಂತೆಯೇ ಆವರಿಸಿ ಪ್ರತಿಗಾಮಿತನದ ನಂಜನ್ನೂಡುತ್ತದೆ ಎಂಬುದಕ್ಕೆ ಇದು ಸಮರ್ಥ ಸಾಕ್ಷಿಯಾಗಿದೆ.

**ಪರಿಸರ:**

ನಮ್ಮ ಮಾತು ಕೃತಿ ಮಾತ್ರವಲ್ಲದೆ ನಮ್ಮ ಪರಿಸರ ಕೂಡ ನಮ್ಮ ಸಂಸ್ಕೃತಿಯನ್ನಳೆಯುವ ಮಾನದಂಡವಾಗುತ್ತದೆ. ಆದ್ದರಿಂದ ಸನ್ಮಾರ್ಗ ಗಾಮಿಯಾಗುವ ಮಾನವ ಯಾವ ಯಾವ ಬಗೆಯ ಜನರ ಸಹವಾಸ ಮಾಡಲಾರದೆನ್ನುವ ನಿಷೇಧಗಳ ಒಂದು ಪಟ್ಟಿಯನ್ನೇ ಸಂಸ್ಕೃತಿ ಪ್ರಿಯರಿಗಾಗಿ ದಾಸರು ಈ ಕೀರ್ತನೆಯಲ್ಲಿ ನೀಡಿರುವುದನ್ನು ನೋಡಿ :

ಕೂಡಿರುವ ಸಭೆಯಲ್ಲಿ ಕುತ್ಸಿತವ ನುಡಿವನ ಸಂಗ
ನಾಡಿನೊಳಗನ್ಯಾಯ ಮಾಡುವನ ಸಂಗ
ಬೇಡಿದರು ಕೊಡದಿರುವ ಕಡುಲೋಭಿಯ ಸಂಗ
ಮೂಢ ಮೂರ್ಖರ ಸಂಘ ಬಲು ಭಂಗ ಎಲೆ ರಂಗ

ಇತ್ಯಾದಿ....

**ಜ್ಞಾನ :**

ಮನುಷ್ಯನ ಉದ್ಧಾರಕ್ಕೆಜ್ಞಾನ ಅತ್ಯಮೂಲ್ಯ ಮತ್ತು ಅತ್ಯಗತ್ಯ ಸಾಧನ. ಅದು ಸಂಸ್ಕೃತಿಯನ್ನು ಪರಿಪಕ್ವಗೊಳಿಸಬಲ್ಲ ಪ್ರಬಲ ಮಾಧ್ಯಮವೂ ಹೌದು. ಅದಿಲ್ಲದ ಬದುಕು ನಿರರ್ಥಕವಾಗುತ್ತದೆ. ಇಂಥ ಜ್ಞಾನ ಸಂಪಾದನೆಯನ್ನು ಅಡಿಗೆ ಮಾಡುವ ಕ್ರಿಯೆಗೆ ಹೋಲಿಸಿ, ಅದರ ಸಾಧನಾವಿಧಾನಗಳನ್ನು ಅತ್ಯಂತ ಸುಂದರವಾಗಿ ಚಿತ್ರವತ್ತಾಗಿ ಮನಸ್ಸಿಗೆ ನಾಟುವಂತೆ ಹೇಳುವಲ್ಲಿ ದಾಸರು ಯಶಸ್ವಿಯಾಗಿದ್ದಾರೆ.

ಅಡಿಗೆಯನ್ನು ಮಾಡಬೇಕಣ್ಣ
ನಾನೀಗ ಜ್ಞಾನದಡಿಗೆಯನ್ನು ಮಾಡಬೇಕಣ್ಣ
ತತ್ವ ಭಾಂಡವ ತೊಳೆಯಬೇಕಣ್ಣ
ಸತ್ಯಾತ್ಮನಾಗಿ

ಆರ್ತಿ ಅಕ್ಕಿಯ ಮಥಿಸಬೇಕಣ್ಣ
ಕತ್ತರಿ ಮನವೆಂಬ ಹೊಟ್ಟನು
ಎತ್ತಿ ಎಸರ ಇಂಗಿಸುತಲಿ
ಜ್ಞಾನದಡಿಗೆಯನ್ನು ಮಾಡಬೇಕಣ್ಣ

ಎಂದು ಆತ್ಮೀಯವಾಗಿ ಸಾರಿ ಸಾರಿ ನಮ್ಮೊಳಗನ್ನು ಶುದ್ಧೀಕರಿಸಲು ಪ್ರಯತ್ನಿಸುತ್ತಾರೆ.

**ವ್ಯಾಮೋಹ ನಾಶನ :**

ದೇಹ ಕ್ಷಣಿಕ, ಹಾಗೆಯೇ ಈ ಸಂಸಾರವೂ ಕ್ಷಣಿಕ. ಆದುದರಿಂದ ಇವುಗಳ ವ್ಯಾಮೋಹವನ್ನು ತೊರೆದು ಅಂಟಿಯೂ ಅಂಟದಂತೆ ಬದುಕಬೇಕು. ಈ ವ್ಯಾಮೋಹನಾಶನ ಉದ್ಧಾರದ ಸಂಕೇತ, ಎಂಬುದು ದಾಸರ ಅಭಿಮತ ಈ ಬಗ್ಗೆಹಲವಾರು ಕೀರ್ತನೆಗಳಲ್ಲಿ ಅವರು ನಿರಂತರವಾಗಿ ಪ್ರಸ್ತಾಪಿಸುತ್ತಲೇ ಹೋಗಿದ್ದಾರೆ.

ಡಿಂಬದಲ್ಲಿರುವ ಜೀವ ಕಂಬಸೂತ್ರ ಬೊಂಬೆಯಂತೆ
ಎಂದು ಇದ್ದರೊಂದು ದಿನ ಸಾವು ತಪ್ಪದು
ಹುಟ್ಟುತೇನು ತರಲಿಲ್ಲ ಸಾಯುತೇನು ಒಯ್ಯಲಿಲ್ಲ
ಸುಟ್ಟು ಸುಟ್ಟು ಸುಣ್ಣದರಳು ಆಯಿತೀದೇಹ
ಹೊಟ್ಟೆ ಬಲು ಕೆಟ್ಟುದೆಂದು ಎಷ್ಟು ಕಷ್ಟ ಮಾಡಿದರು
ಬಿಟ್ಟುಹೋಗುವಾಗ ಗೇಣು ಬಟ್ಟೆಕಾಣದು
ಹಳ್ಳಹರಿದು ಹೋಗುವಾಗ ಗುಳ್ಳೆಬಂದು ಒಡೆಯುವಂತೆ
ಉಳ್ಳಿಪೊರೆಯಂತೆ ಕಾಣೋ ಸಂಸಾರದಾಟವು.

ಅತ್ಯಂತ ಸರಳವಾದ ನಿತ್ಯಪರಿಚಿತವಾದ, ಆದರೂ ಅರ್ಥಪೂರ್ಣವಾದ ಉಪಮೆಗಳಿಂದ, ಸಹಜತೆ ಮತ್ತುಜೀವಂತಿಕೆಗಳಿಂದ ಲಕಲಕಿಸುವ ಬನಿಯಾದ ಗ್ರಾಮಭಾಷೆಯಿಂದ ರಿಂಗಣಗುಣಿಯುವ ನಾದಮಯ ಪದಶಯ್ಯೆಯಿಂದ ತಾವು ಹೇಳುವ ತತ್ವವನ್ನು ತುಂಬ ಸಮರ್ಥವಾಗಿ ಸಂವಹಿಸುವ ಈ ದಾಸವಾಣಿಗೆ ನಾವು ಮನದೆರೆಯಬೇಕು.

**ಮೌಲ್ಯಗಳ ಅಧಃಪತನ :**

ಸತ್ಯ, ಧರ್ಮ, ನೀತಿ, ಮೌಲಿಕ, ಸಾಂಸ್ಕೃತಿಕ ಬದುಕಿನ ಮೂಲ ಸೆಲೆಗಳು. ಇವುಗಳ ಪ್ರಾಮಾಣಿಕ ಅನುಷ್ಠಾನದಿಂದ ಬದುಕು ಸಹನೀಯವೂ ಆನಂದಮಯವೂ ಸಮರಸಪೂರ್ಣವೂ ಆಗುತ್ತದೆ. ಆದರೆ ತಮ್ಮ ಕಾಲಕ್ಕಾಗಲೇ ಈ ಮೌಲ್ಯಗಳು

ಕುಸಿಯುತ್ತಿರುವುದನ್ನು ದಾಸರು ತೀವ್ರ ದುಃಖದಿಂದ ಗಮನಿಸಿದ್ದಾರೆ. ತುಂಬು ಯಾತನೆಯಿಂದ ಉದ್ಗರಿಸಿದ್ದಾರೆ ಹೀಗೆ :

ಸತ್ಯಧರ್ಮಗಳೆಲ್ಲ ಎತ್ತಹೋದವೂ ಕಾಣೆ
ಉತ್ತಮರ ಜೀವನಕೆ ದಾರಿಯಿಲ್ಲ
ನಿತ್ಯದಲಿ ಕಳವು ವ್ಯಭಿಚಾರ ಉಳ್ಳವರೆಲ್ಲ
ಅರ್ಥಸಂಪನ್ನರಾಗನುಭವಿಸುತಿಹರು.

ಈ ಕೀರ್ತನೆ ಈ ಕಾಲಕ್ಕೆ ಮತ್ತಷ್ಟು ಚೆನ್ನಾಗಿ ಅನ್ವಯಿಸುತ್ತದೆಂಬುದೂ ನಿಜವೇ. ಇಂಥದೇ ಭಾವ 'ಕಲಿ ಹೆಚ್ಚಿ ಬಂದಿತಲ್ಲ' ಎಂಬ ಹಾಡಿನಲ್ಲೂ ಹರಿದಿದೆ.

**ಜಾತಿ - ಮತ :**

ಭಾರತದ ಜಾತಿ ವ್ಯವಸ್ಥೆ ಸಾಮಾಜಿಕ ಸಮಸ್ಯೆಯಾಗಿರುವಂತೆ ಸಾಂಸ್ಕೃತಿಕ ಸಮಸ್ಯೆಯೂ ಆಗಿದೆ. ಜಾತೀಯ ಸಂಪ್ರದಾಯಗಳನ್ನು ಕಟ್ಟುನಿಟ್ಟಾಗಿ ಪಾಲಿಸುವುದೇ ಸಂಸ್ಕೃತಿ ಎಂದು ಭ್ರಮಿಸಿದವರೂ ಇದ್ದಾರೆ. ಆದರೆ ನಮ್ಮ ರಾಷ್ಟ್ರದ ಅಭ್ಯುದಯಕ್ಕೆ ಇದು ಅರ್ಬುದ ರೋಗವಾಗಿ ಕಾಡುತ್ತಿರುವುದು ಸರ್ವವೇದ್ಯ. ವ್ಯಕ್ತಿಯ ಗುಣಶೀಲ ಜ್ಞಾನ ಸಾಧನೆಗಳೆಲ್ಲವನ್ನೂ ನುಂಗಿ ನೊಣೆದು ಕತ್ತಲೆಯ ಕಮರಿಯಲ್ಲಿ ಅವನನ್ನು ತಳ್ಳುವ, ಬದುಕಿದರೂ ಜೀವಚ್ಛವವಾಗಿಸುವ, ಆತ ಮೇಲೇರಲು ಮಾಡು ಪ್ರಯತ್ನಗಳನ್ನು ನಿಷ್ಫಲ ಗೊಳಿಸುವ ಭಯಂಕರ ಗೊಂಡಾರಣ್ಯವಾಗಿ ಹಬ್ಬಿರುವ ರಾಕ್ಷಸ ವೃಕ್ಷವಿದು. ಇದರೆದುರು ಗುಣವಂತರು ಗುಣಹೀನರಾಗುತ್ತಾರೆ. ಜ್ಞಾನಿಗಳು ಅಜ್ಞಾನಿಗಳಾಗುತ್ತಾರೆ. ಮಹಾತ್ಮರು ಮೋಸಗಾರರಾಗುತ್ತಾರೆ. ಇದರ ವಿರುದ್ಧ ಸಂಗತಿಗಳೂ ಇಷ್ಟೇ ನಿಜ. ಇದು ಕಾಲದಿಂದ ಕಾಲಕ್ಕೆ ಭಿನ್ನ ಭಿನ್ನ ರೂಪಗಳಲ್ಲಿ ಒಮ್ಮೆ ಪ್ರಚ್ಛನ್ನವಾಗಿ ಮತ್ತೊಮ್ಮೆ ಸರ್ವಗೋಚರವಾಗಿ ಪ್ರಕಟವಾಗುತ್ತ ಬರುತ್ತಿದೆ. ಅಂತಃ ಪ್ರತಿಭೆಯಿಂದ,ಸ್ವಯಂ ಪ್ರಯತ್ನ ಸಾಧನೆಗಳಿಂದ, ಆಧ್ಯಾತ್ಮ ಲೋಕದಲ್ಲಿ ಮೇಲು ಮೇಲಕ್ಕೇರಿ ಎಲ್ಲರ ಕಣ್ಣುಗಳನ್ನು ಕೋರೈಸಿದ ಕನಕದಾಸರು ಈ ಜಾತಿ ಭೂತದ ಕರಾಳ ವಿಜೃಂಭಣೆಯಿಂದ ಬಹುವಾಗಿ ನೊಂದಿರಬೇಕು. ಈ ನೋವು ಕಾವು ಅವರ ಕೀರ್ತನೆಗಳಲ್ಲಿ ಜಾತಿ ವಿಮರ್ಶೆಯಾಗಿ ಹೊಮ್ಮಿ, ಅವರ ಸಾಂಸ್ಕೃತಿಕ ಒಳನೋಟಕ್ಕೆ ಕನ್ನಡಿ ಹಿಡಿಯುತ್ತದೆ.

'ಹೊಲೆಯನಾರು' ಎನ್ನುವಾಗ 'ಪಿಸುಣನಿಗಿನ್ನಧಿಕ ಹೊಲೆಯುಂಟೆ' ಎಂದು ಪ್ರಶ್ನಿಸುತ್ತಾರೆ. 'ಕುಲಕುಲ ಕುಲವೆಂದು ಏಕೆ ಹೊಡೆದಾಡುತ್ತೀರಿ' ಎಂದು ಪ್ರಶ್ನಿಸುವುದರಲ್ಲೇ ವಿರಮಿಸದೆ, ನಿಮ್ಮ ಕುಲದ ನೆಲೆಯನೇನಾದರೂ ಬಲ್ಲಿರಾ ಎಂದು ಜಾತಿವಾದಿಗಳಿಗೆ ಸವಾಲು ಹಾಕುತ್ತಾರೆ. 'ಆತ್ಮ ಯಾವ ಕುಲ ಜೀವ ಯಾವ ಕುಲ ಹೇಳಬಲ್ಲಿರಾ' ಎಂದು ಚುಚ್ಚುತ್ತಾರೆ. 'ಹುಟ್ಟದ ಯೋನಿಗಳಿಲ್ಲ, ಮೆಟ್ಟದ

ಭೂಮಿಗಳಿಲ್ಲ, ಅಟ್ಟುಉಣ್ಣದ ವಸ್ತುಗಳಿಲ್ಲ', 'ಇದರಲ್ಲಿ ಹಿರಿದು ಕಿರಿದು, ಎಂಬ ಭೇದವೇತಕ್ಕೆ ? ಜಲವೇ ಸಕಲ ಕುಲದ ಆದಿಯಲ್ಲವೆ, ತಾಯಿಯಲ್ಲವೆ' ಎಂದು ಮೃದುವಾಗಿಯೂ ಕೇಳುತ್ತಾ ಜಾತ್ಯಂಧ ಮನುಷ್ಯನನ್ನು ಒಲಿಸುವ ಆ ಮೂಲಕ ಅವರ ಉದಯವನ್ನು ಸಂಸ್ಕರಿಸುವ ಪ್ರಯತ್ನವನ್ನೂ ಮಾಡುತ್ತಾರೆ. ಕುಲಕ್ಕೆಮಾತ್ರವೇ ಮನ್ನಣೆಯ ಮಣೆ ಹಾಕುವುದಾದರೆ ಜಗತ್ತಿನ ಜ್ಞಾನ ಭಂಡಾರದ ಬಹುಭಾಗ-ಕೀಳು ಕುಲದವರೆನಿಸಿಕೊಂಡವರಿಂದ ಸೃಷ್ಟಿತವಾಗಿರುವುದರಿಂದ ಅದನ್ನು ಅಸ್ಪೃಶ್ಯವೆಂದು ತಿರಸ್ಕರಿಸಬೇಕಾಗುತ್ತದೆ. ಭಾರತೀಯ ಸಂಸ್ಕೃತಿಯ ತಲೆಮಣೆಗಳಾದ ನಾರದ ವ್ಯಾಸ, ವಾಲ್ಮೀಕಿ ಮುಂತಾದ ಮಹನೀಯರ ಕುಲಮೂಲವನ್ನೇ ಅರಸಿದರೆ ಅವರ ಭಕ್ತಿ ಸೂತ್ರ ಮಹಾಭಾರತ ರಾಮಾಯಣಗಳನ್ನು ಅಪವಿತ್ರವೆಂದು ಅಸಂಸ್ಕೃತವೆಂದು ಅನಾದರಣೀಯವೆಂದು ಕೈಬಿಡಬೇಕಾಗುತ್ತದೆ. ರಾಮಾಯಣ ಮಹಾಭಾರತಗಳನ್ನು ಹೊರತುಪಡಿಸಿದ ಸಂಸ್ಕೃತಿ ಎಲ್ಲಿರುತ್ತದೆ ಹೇಗಿರುತ್ತದೆ ? ಆದ್ದರಿಂದ ಗುಣಶೀಲ ಜ್ಞಾನಗಳೇ ಸಂಸ್ಕೃತಿ, ಅವುಗಳ ಅಭಾವವೇ ಅಸಂಸ್ಕೃತಿ.

ಈ ಕಾರಣದಿಂದ ಗುಣವಂತರ ಕುಲವನ್ನರಸಬಾರದು ಎಂದು ದಾಸರು ಮತ್ತೆಮತ್ತೆ ಒತ್ತಿ ಒತ್ತಿ ಹೇಳುತ್ತಾರೆ. ಇದು ಆ ಕಾಲಕ್ಕೆಕ್ರಾಂತಿಕಾರಕವಾದ ಒಂದು ಸಾಂಸ್ಕೃತಿಕ ದೃಷ್ಟಿ ಎನ್ನಿಸಿದರೂ, ದಾಸರು ಮುಂದೆ 'ಕೇಶವರಾಯನ ಚರಣ ಕಮಲ ಕೀರ್ತಿಸುವವನೆ ಕುಲಜ' ಎಂದು ಇಟ್ಟಿರುವುದರಿಂದ ದೈವಭಕ್ತರು ಮಾತ್ರ ಹೀನ ಕುಲದವರಾದರೂ ಉತ್ತಮ ಕುಲಜರೇ, ಉಳಿದ ಹೀನ ಕುಲದವರು ಎಂದೂ ಹೀನ ಕುಲದವರೇ ಎಂಬ ಧ್ವನಿ ಆದರಿಂದ ಹೊಮ್ಮುವುದರಿಂದ ದಾಸರ ವಾದದ ಮೊನೆ ಮೊಂಡಾಗಿ ನಿಜವಾದ ಉದ್ದೇಶವನ್ನು ಸಾಧಿಸಲಾರದೆ ಹೋಗಿದೆಯೆನ್ನಿಸುತ್ತದೆ. ಅಷ್ಟೇ ಅಲ್ಲ, ದಾಸರು ಗುಣ ಮುಖ್ಯ, ಕುಲಮುಖ್ಯವಲ್ಲ ಎಂದಿರುವರೇ ಹೊರತು ಜಾತಿ ವ್ಯವಸ್ಥೆಯನ್ನೇ ಅವರು ವಿರೋಧಿಸಲಿಲ್ಲ ಮತ್ತು ವಿರೋಧಿಸುವಷ್ಟು ಸಮರ್ಥ ಬೆಂಬಲ ಅವರಿಗಿರಲಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಈ ಜಾತಿ ಸಮಸ್ಯೆ ಮೂಲತಃ ಸಾಂಸ್ಕೃತಿಕ ಸಮಸ್ಯೆಯೆಂದು ಪರಿಗಣಿತವಾದುದರಿಂದಲೇ ಸಾಮಾಜಿಕ ಸಮಸ್ಯೆಯಾಗಿ ಭಯಂಕರ ವ್ರಣವಾಗಿ ಉಲ್ಬಣಿಸಿತು ಎಂಬುದನ್ನು ಈ ಸಂದರ್ಭದಲ್ಲಿ ಮರೆಯುವಂತಿಲ್ಲ.

**ಕರ್ಮಸಿದ್ಧಾಂತ :**

ಕನಕದಾಸರು ವ್ಯಕ್ತಿಗತವಾಗಿ ಬಿದ್ದ ಹೊಡೆತಗಳಿಂದ ಆಗಾಗ ಕೆರಳಿದಂತೆ ಬಂಡಾಯವೆದ್ದಂತೆ ತಮ್ಮ ಕೀರ್ತನೆಗಳಲ್ಲಿ ಕಾಣಿಸಿಕೊಂಡರೂ ಮೂಲತಃ ಅವರೂ ಸಂಪ್ರದಾಯಪ್ರಿಯರೇ ಎನ್ನುವುದು ನಿಜ. ಅವೈಜ್ಞಾನಿಕವೂ, ಅವ್ಯವಸ್ಥೆ ಮತ್ತು

ಪ್ರತಿಗಾಮಿ ಧೋರಣೆಯ ಮೂಲ ಮಾತೃಕೆಯೂ ಆಗಿರುವ ಕರ್ಮಸಿದ್ಧಾಂತವನ್ನು ದಾಸರು ಪ್ರತಿ ಮಾತಿಲ್ಲದೆ ಒಪ್ಪಿಕೊಂಡಿರುವುದೇ ಇದಕ್ಕೆ ನಿದರ್ಶನ.

ತನ್ನ ಪ್ರಾಪ್ತಿಯ ಫಲವ ತಾನರಿಯದೆ ಅನ್ಯರಿಗೆ ಆಡುವುದು
ಆವಗುಣವು ಮರುಳೆ ಸರಸಿಜೋದ್ಭವನು ಫಣೆಯಲಿ
ಬರೆದು ನಿರ್ಮಿಸಿದ
ತೆರನೊಂದು ಬೇರುಂಟು ತಾನರಿಯದೆ.

ಈ ತೆರನ ಕೀರ್ತನೆಗಳು ಅವುಗಳನ್ನು ಯಾವುದೇ ಸಂದರ್ಭದಲ್ಲಿ ರಚಿಸಿರಲಿ, ಪ್ರಗತಿಯ ಚಕ್ರವನ್ನು ಹಿಂದೂಡುವ ಪ್ರಯತ್ನಗಳು ಮತ್ತು ಆಧುನಿಕ ಯುಗಕ್ಕೆಅಸಂಗತವಾದವುಗಳನ್ನು ಎಂದು ಹೇಳದೆ ವಿಧಿಯಿಲ್ಲ.

**ವಾಸ್ತವನಿಷ್ಠುರತೆ :**

ಆದರೆ ಕನಕದಾಸರ ಚಿಂತನ ಧಾಟಿ ಮತ್ತು ಹೃದಯಧರ್ಮ ಈ ಪರಂಪರೆಯ ನೆರಳಿನ ಹೆಣಭಾರವನ್ನುಹೊರುವುದರಲ್ಲೇ ಪರ್ಯವಸಾನವಾಗದೆ - ತಮ್ಮ ಸುತ್ತ ಮುತ್ತ ತನ್ನೆಲ್ಲ ವಿಕೃತಿ ಮತ್ತು ಸಹಜತೆಗಳೊಡನೆ ನಗ್ನವಾಗಿ ತೆರೆದುಕೊಂಡಿದ್ದ ವಾಸ್ತವ ಬದುಕಿನ ಒಳ ಪದರಗಳನ್ನು ಪ್ರವೇಶಿಸಿದ್ದರಿಂದ, ತೋರಿಕೆಯ ಸಂಸ್ಕೃತಿಯ ಹಿಂದೆ ಬರ್ಬರತೆ ಲಂಪಟತನ ನೀಚತನಗಳನ್ನು ನಿರ್ದಾಕ್ಷಿಣ್ಯವಾಗಿ ಬಯಲಿಗೆಳೆಯುವ ಮೂಲಕ ಅವರ ಶೂದ್ರ ಸಹಜವಾದ ಬಂಡುಕೋರ ಪ್ರವೃತ್ತಿ ಅತ್ಯಂತ ಹರಿತವಾಗಿ ಪರಿಣಾಮಕಾರಿಯಾಗಿ ಶಸ್ತ್ರಕ್ರಿಯೆ ನಡೆಸುತ್ತದೆ. ನಮ್ಮ ಬಹಿಃಚಟುವಟಿಕೆಗಳ ಮೂಲವನ್ನು ಹಿಡಿದಲ್ಲಾಡಿಸಿ ನಮ್ಮ ಅಂತರ್ಯವನ್ನು ಬೆತ್ತಲೆಗೊಳಿಸಿ ನಮ್ಮನ್ನು ನಮಗೆ ಮುಖಾಮುಖಿಯಾಗಿಸುತ್ತಾರೆ.

ವೇದಶಾಸ್ತ್ರ ಪಂಚಾಂಗ ಓದಿಕೊಂಡು ಪರರಿಗೆ
ಬೋಧನೆಯ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ
ಬಂಡ ಭಟರಾಗಿ ನಡೆದು ಕತ್ತಿ ಢಾಲು ಕೈಲಿ ಹಿಡಿದು
ಖಂಡ ತುಂಡ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ
ಅಂಗಡಿಗಳನ್ನು ಹೂಡಿ ವ್ಯಂಗ್ಯಮಾತುಗಳಾಡಿ
ಭಂಗ ಬಿದ್ದು ಗಳಿಸುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ

ಹೀಗೆ ಹೇಳುತ್ತ ರೈತರು ಕಾರ್ಮಿಕರು ವಕೀಲರು ದಾಸರು ಸನ್ಯಾಸಿಗಳು ಜಂಗಮರು ಜಟ್ಟಿಗಳು ಬೈರಾಗಿಗಳು ಕಳ್ಳರು ರಾಜರು - ಎಲ್ಲರೂ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ಎಂದು ತೀರ್ಮಾನಿಸಿ ನಮ್ಮನ್ನು ದಿಗ್ಭ್ರಮೆಗೊಳಿಸುತ್ತಾರೆ. ಅಶನ ವಸನದ ವ್ಯಸನಗಳೇ ನಮ್ಮ ಲೌಕಿಕ ಚಟುವಟಿಕೆಗಳ

ಮೂಲಸ್ತರ, ಎಂಬದಾಸರ ಈ ಹೇಳಿಕೆ ನಮಗೆ ಅಪ್ರಿಯವಾದರೂ ಮೀರಲಾರದ ವಾಸ್ತವತೆ ಎಂಬುದು ಸತ್ಯಸ್ಯಸತ್ಯ.

ಕನಕದಾಸರ ಕೀರ್ತನೆಗಳಲ್ಲಿ ಮೇಲೆ ನೋಡಿದಂತೆ ಭಕ್ತಿ, ದೈವದ ಅಭೇದ ಕಲ್ಪನೆ, ಆತ್ಮಶೋಧನೆ- ನಿವೇದನೆ, ವಿನಯಶೀಲತೆ, ಸರ್ವಸಮಾನತ್ವ, ನಂಬಿಕೆ, ನಿರ್ಭೀತಿ, ಆಶಾವಾದ, ಅಂತರಂಗ ಶುದ್ಧಿ ನಡೆ ನುಡಿಯ ಸಾಮರಸ್ಯ. ಜ್ಞಾನ ಸಾಧನೆ, ದೇಹಮೋಹ, ಸಂಸಾರ ಮೋಹಗಳ ವಿಸರ್ಜನೆ, ದಾನ, ಸಜ್ಜನ ಸಹವಾಸ, ಸಂಪ್ರದಾಯ ವಿರೋಧ, ಸೇವಾವಿಮರ್ಶೆ, ದೋಷ ವಿಶ್ಲೇಷಣೆ ಮುಂತಾದ ಸಂಸ್ಕೃತಿಯ ಹಲವು ಮುಖಗಳ ದಟ್ಟವಾದ ಸ್ಪರ್ಶ ಕಂಡು ಬರುತ್ತದೆ. ಅವುಗಳನ್ನು ವರ್ಣಿಸುವ ಧಾಟಿ, ವಿಶ್ಲೇಷಿಸುವ ದೃಷ್ಟಿ, ಪ್ರತಿಪಾದಿಸುವ ರೀತಿಗಳಲ್ಲಿ ಕನಕದಾಸರದೇ ಆದ ಅನನ್ಯ ವಿಶಿಷ್ಟತೆಯ ಛಾಪು ಎದ್ದು ಕಾಣುತ್ತದೆ. ಹದಿನಾರನೆಯ ಶತಮಾನದಲ್ಲಿ ನಿಂತು ದಾಸರು ಕಂಡ, ಉಂಡ, ಅನುಭವಿಸಿದ, ವಿಮರ್ಶಿಸಿದ, ಬೋಧಿಸಿದ, ಬಯಸಿದ, ಈ ಸಾಂಸ್ಕೃತಿಕ ಮೌಲ್ಯಗಳು ಇಂದಿನ ಇಪ್ಪತ್ತನೇ ಶತಮಾನಕ್ಕೂ ಹೆಚ್ಚು ಬದಲಾವಣೆಗೊಳಗಾಗದೆ ಉಳಿದು ಬಂದಿವೆ ಎಂಬುದನ್ನು ಅನುಲಕ್ಷಿಬೇಕು. ಆ ಶತಮಾನದ ಭಾವುಕ ವಾತಾವರಣಕ್ಕೆ ಅನುಸಾರವಾಗಿ ಮತ್ತು ಪರಂಪರಾಗತವಾಗಿ ಮುಗ್ಧತೆ, ಕ್ರಮಬದ್ಧ ಶಿಕ್ಷಣ ಸಾಹಿತ್ಯ, ಸ್ವಾಭಿಕ ಜೀವನದೃಷಿಗಳ ಪರ್ವತಭಾರವನ್ನು ಹೊತ್ತ ಕುಟುಂಬದ ಸಮಾಜದ ವಾರಸುದಾರವಾಗಿ ಕನಕರ ಮನಸ್ಸಿನ ತುಂಬ ತುಂಬಿಕೊಂಡಿದ್ದ ಸಂಪ್ರದಾಯದ ಸಾಂದ್ರ ಜಗತ್ತಿಗೂ ಮತ್ತು ಅವರ ಹೃದಯದಲ್ಲಿ ಮೊಳಕೆಯೊಡೆದು, ಮೆದುಳಲ್ಲಿಪೋಷಣೆ ಪಡೆದು, ಅನುಭವದಲ್ಲಿ ಹುರಿಗೊಂಡ ವೈಚಾರಿಕ ಜಗತ್ತಿಗೂ ನಿರಂತರ ಸಂಘರ್ಷ ಏರ್ಪಟ್ಟಿದ್ದರಿಂದ ಅವರ ಅಭಿಪ್ರಾಯಗಳು ಒಮ್ಮೆ ಆ ಕಡೆಗೂ ಒಮ್ಮೆ ಈ ಕಡೆಗೂ ಓಲುತ್ತವೆ ಎಂಬುದನ್ನು ಗಮನಿಸುವುದು ಅಗತ್ಯ. ಆದ್ದರಿಂದ ಅವರು ದಾಖಲು ಮಾಡಿದ ಸಂದರ್ಭ ಮತ್ತು ಅಂಶಗಳಲ್ಲಿ ಕೆಲವು ಪ್ರಸ್ತುತ ಕಾಲ ಮಾನಗಳಿಗನುಗುಣವಾಗಿ ತೀವ್ರವಾಗಿ ಬದಲಾಗಬೇಕಾದ ಅಗತ್ಯವಿದೆಯೆಂಬುದನ್ನು ಮರೆಯುವಂತಿಲ್ಲ. ಹೀಗೆ ಪರಿವರ್ತಿತವಾಗಬೇಕಾದವುಗಳು ಮೊದಲೇ ತಿಳಿಸಿರುವಂತೆ ಕಾಲಬದ್ಧ ದೇಶಬದ್ಧ ಮೌಲ್ಯಗಳು, ವಿಶ್ವಮಾನವ ಸಾಂಸ್ಕೃತಿಕಮೌಲ್ಯಗಳಲ್ಲ, ಹಾಗೆಯೇ ಇಲ್ಲಿ ವಿಶ್ಲೇಷಣೆಗೆ ಒಳಪಡಿಸಿದ ಕನಕದಾಸರ ಕೀರ್ತನೆಗಳಲ್ಲಿ ರೇಖಿತವಾದ ಸಾಂಸ್ಕೃತಿಕ ಮೌಲ್ಯಗಳು ಕೇವಲ ಕನಕದಾಸರು ಮಾತ್ರವೇ ಸಾರಿದ ಮೌಲ್ಯಗಳಲ್ಲ, ಇಡೀ ದಾಸ ಸಂಪ್ರದಾಯದ ಮೌಲ್ಯಗಳೂ ಕೂಡ. ಇದನ್ನೇ ಮುಂದುವರಿಸಿ ಹೇಳುವುದಾದರೆ ಇವು ನಮ್ಮ ವಚನಕಾರರು ಸಾರಿದ ಮೌಲ್ಯಗಳೂ ಹೌದು; ಭಾರತೀಯ ಪರಂಪರೆಯ ಮೌಲ್ಯಗಳೂ ಹೌದು.

ಆದರೂ ಕನದಾಸರು ಸಂಪ್ರದಾಯದ ಒಳಗಿನಿಂದಲೇ ಚಿಮ್ಮಿದ ಬಂಡಾಯದ ಕಿಡಿ ಎಂಬುದನ್ನು, ಆ ಕಿಡಿಯು ಅಗ್ನಿದ್ರವ್ಯ ಸಾಂಸ್ಕೃತಿಕ ಮೌಲ್ಯಾಧಾರಿತವಾದ ಅವರ ಕೀರ್ತನೆಗಳಲ್ಲಿ ಪರಿಣಾಮಕಾರಿಯಾಗಿಯೇ ಪ್ರವಹಿಸಿದೆಯೆಂಬುದನ್ನು ಮರೆಯುವುದು ಸಾಧ್ಯವಿಲ್ಲ.

# ಜಗನ್ನಾಥದಾಸರು ಹಾಗೂ ಅವರ ಶಿಷ್ಯರು

- ಡಾ || ಮಲ್ಲಿಕಾ ಘಂಟಿ

ಕನ್ನಡ ಸಾಹಿತ್ಯಕ್ಕೆ ವಚನಕಾರರ ನಂತರ ಅಪಾರವಾದ ಕೊಡುಗೆಯನ್ನು ಕೊಟ್ಟವರು ದಾಸರು. ಧಾರ್ಮಿಕ ನೆಲೆಯಿಂದ ಸಾಮಾಜಿಕ ಸುಧಾರಣೆಗೆ ಹೊರಟ, ಶರಣರು ಮತ್ತು ದಾಸರು ಕ್ರಮಿಸಿದ ಬದುಕಿನ ಹಾದಿ ಒಂದೇ ಆಗಿತ್ತು. ಬಸವಾದಿ ಪ್ರಮಥರು ವಚನಗಳ ಮೂಲಕ ಜನಪರ ಭಾಷೆಯನ್ನು ಎತ್ತಿಹಿಡಿಯುತ್ತ. ಕಷ್ಟದ ದೇವರುಗಳನ್ನುದೂರವಿಟ್ಟು ಇಷ್ಟಲಿಂಗದ ಮೂಲಕ ಇಹಪರಗಳ ಅರ್ಥಕಲ್ಪಿಸಿದವರು. ಅದೇ ರೀತಿ ದಾಸರು ಜನಪರ ಭಾಷೆಯಲ್ಲಿಯೇ ಹರಿಸರ್ವೋತ್ತಮನೆಂದು ಸಾರುತ್ತ ಸಾಮಾಜಿಕ ಬದುಕನ್ನು ಹಸನು ಮಾಡಿಕೊಳ್ಳುವ ಕ್ರಿಯಾಶೀಲತೆಯ ಜೊತೆಗೆ ಇಹಮೀರಿ ಪರದ ನೆಲೆಯನ್ನು ನಿಲುಕಿಸಲು ಪ್ರಯತ್ನಿಸಿದವರು. ಹೀಗೆ ಸಮಾಜಾಭಿಮುಖಿಗಳಾಗಿ ಹೊರಟ ಇವರು ಏಕಾಂಗಿಗಳಲ್ಲ. ಜನಸಂಘಟನೆಯ ಮೂಲಕ ತಮ್ಮ ತತ್ವಗಳನ್ನು ಬಿತ್ತಲು ಸಾಮೂಹಿಕ ನೇಗಿಲನ್ನು ಬಳಸಿದವರು. ಹೀಗಾಗಿ ೧೨ನೇ ಶತಮಾನದಲ್ಲಿ ಬಸವಣ್ಣ, ಅಲ್ಲಮಪ್ರಭು, ಚನ್ನಬಸವಣ್ಣ ಅಕ್ಕಮಹಾದೇವಿಯಾದಿಯಾಗಿ ಹೊಲೆಯ ಹದಿನೆಂಟು ಜಾತಿಯಿಂದ ಬಂದವರೆಲ್ಲ ಶರಣ ಕುಲಕ್ಕೆ ಸಂದು, ಸಾಮೂಹಿಕವಾಗಿಯೇ ತಮ್ಮ ತಮ್ಮ ವಿಚಾರಧಾರೆಯನ್ನು ತಮ್ಮ ತಮ್ಮದೇ ಆದ ನೆಲೆಯಲ್ಲಿ ಬಿತ್ತಲು ಪ್ರಯತ್ನಪಟ್ಟವರು. ನಂತರ ಬಂದ ದಾಸರು ಇದೇ ಕ್ರಮ ಮುಂದುವರಿಸಿದ್ದರೂ ಶರಣಧರ್ಮದ ಹಾಗೇ, ದಾಸಧರ್ಮ ಪ್ರಾರಂಭದಲ್ಲಿ ಮನುಷ್ಯರೆಲ್ಲರನ್ನೂ ಅಪ್ಪಿಕೊಳ್ಳುವ ಉದಾರತೆಯನ್ನು ತೋರಿಸದೇ ಹೋಗಿರುವುದರಿಂದ ಆಂದೋಲನದ ಸ್ವರೂಪ, ಚಳುವಳಿಯ ಸ್ವರೂಪ ಅದಕ್ಕೆ ದಕ್ಕದೆ ಹೋಗಿರಬಹುದು. ನಂತರದ ಅವಧಿಯಲ್ಲಿ ವೈದಿಕರ ಅಗ್ನಿಪರೀಕ್ಷೆಗಳಿಗೆಲ್ಲ ಸಮರ್ಪಕ ಉತ್ತರ ನೀಡಿದ ತಿಮ್ಮಪ್ಪನಾಯಕನಂತಹವರು ಹುಟ್ಟಿನ ನೆಲೆಯ ಶ್ರೇಷ್ಠತೆಯನ್ನು ಮೆಟ್ಟಿ ಕನಕದಾಸರಾದದ್ದು ದಾಸಧರ್ಮದ ಉದಾರತೆಯ ಹಿಂದಿರುವ ವೈದಿಕ ನೆಲೆಯ ಸಂಕುಚಿತ ಮನೋಭಾವವನ್ನು ತೋರಿಸುವಂತಹದ್ದಾಗಿದೆ.

ಪುರಂದರದಾಸ, ಕನಕದಾಸ, ವ್ಯಾಸರಾಯರಂಥವರು ಪ್ರಥಮ ಘಟ್ಟದ ದಾಸರೆಂದು ಕರೆಯಿಸಿಕೊಂಡರೆ, ವಿಜಯ, ಪ್ರಸನ್ನವೆಂಕಟದಾಸ, ಗೋಪಾಲದಾಸ, ಜಗನ್ನಾಥದಾಸ, ಹೆಳವನಕಟ್ಟೆಗಿರಿಯಮ್ಮ ಮೊದಲಾದವರು ದ್ವಿತೀಯ ಘಟ್ಟದ ದಾಸರೆಂದು ಗುರುತಿಸಲಾಗಿದೆ. ವಚನಕಾರರ ನಂತರ ಸಮಾಜ ಮತ್ತೆ

ಸ್ಥಾವರಕ್ಕೊಳಪಟ್ಟು, ಪಟ್ಟಭದ್ರ ಶಕ್ತಿಗಳ ಕೈಯಲ್ಲಿ ಸಿಕ್ಕಿತು. ಅವರ ಸ್ವಾರ್ಥದ ಮಾರುಕಟ್ಟೆಯಲ್ಲಿ ಮೂಢನಂಬಿಕೆ, ಅಜ್ಞಾನ, ಕಂದಾಚಾರ, ಗೊಡ್ಡು ಸಂಪ್ರದಾಯ, ಪಾಪಭೀರುತನಗಳೆಲ್ಲ ಮುಕ್ತವಾಗಿಯೇ ಮಾರಲ್ಪಡುತ್ತಿದ್ದವು. ಇದರಿಂದ ಜನಸಾಮಾನ್ಯರ ಬದುಕು ಅತ್ಯಂತ ನಿಕೃಷ್ಟಸ್ಥಿತಿಗೆ ದೂಡಲ್ಪಟ್ಟಿತ್ತು. ಇಂತಹ ಸ್ಥಾವರಗೊಂಡ ಸಮಾಜದಲ್ಲಿ ಚಲನಶೀಲತೆಯನ್ನು ತರುವ ಸಲುವಾಗಿ ದಾಸರು ಪ್ರಯತ್ನಿಸಿದರು. ಜನರ ಮನೆಮನೆಯ ಬಾಗಿಲಿಗೆ ಹೋಗಿ ಅಜ್ಞಾನ, ಮೂಢನಂಬಿಕೆಗಳ ಬಗ್ಗೆ ಕೀರ್ತನೆಗಳ ಮೂಲಕ ತಿಳಿಸಲು ಪ್ರಯತ್ನಿಸಿದರು. 'ಹರಿದಾಸರೆಂದರೆ ಭಗವದ್ಭಕ್ತರು. ಇವರ ಇರುವಿಕೆಯು ನಮ್ಮ ನಿಮ್ಮಂತೆ ಕಂಡರೂ ಜನರ ಜೀವಕ್ಕಿಂತ ಬೇರೆಯಾದುದು. ಅವರಲ್ಲಿ ಕೆಲವರು ದೇವೋನ್ಮಾದಿಗಳಾಗಿ ಜಡಭರತರಂತೆ ಇರುತ್ತಾರೆ. ಮತ್ತೆ ಕೆಲವರು ಪಕ್ವಕಾಲ ಬಂದಾಗ ಒಮ್ಮೆಂದೊಮ್ಮೆಲೆ ಜಿಗಿದೇಳುತ್ತಾರೆ. ಕೆಲವರು ತಮ್ಮ ಮೊದಲಿನ ಜೀವನ ಕ್ರಮದಲ್ಲಿ ಪುರಂದರ ದಾಸರಂತೆ ಜಿಪುಣರೂ, ಶ್ರೀಮಂತರೂ ಆಗಿರಬಹುದು. ವಿಜಯದಾಸರು, ಗೋಪಾಲದಾಸರಂತೆ ಕಡುಬಡವರಾಗಿರಬಹುದು. ಮೋಹನದಾಸರಂತೆ ಕಡುರೋಗಿಗಳಾಗಿರಬಹುದು. ಜಗನ್ನಾಥದಾಸರಂತೆ ಉದ್ದಾಮಪಂಡಿತರೂ, ಪ್ರಸನ್ನ ವೆಂಕಟದಾಸರಂತೆ ಶತದಡ್ಡರೂ ಆಗಿರಬಹುದು. ಆದರೆ ಈ ಎಲ್ಲ ಬಗೆಯ ಭಕ್ತ ಹೃದಯ ಶತದಳವು ನಳನಳಿಸಬೇಕಾದರೆ ಪಕ್ವಕಾಲ ಅಥವಾ ಪರ್ವಕಾಲ ಬಂದು ಅಪರೋಕ್ಷಿಗಳಾದಾಗ ಎಲ್ಲ ದಾಸರ ಜೀವನವೂ ಒಂದೇ ಆಗುತ್ತದೆ.''[1] ಹೀಗೆ ವಿವಿಧ ಕಾರಣಕ್ಕಾಗಿ, ವಿವಿಧ ಮೂಲದಿಂದ ಬಂದವರೆಲ್ಲ ದಾಸತ್ವವನ್ನು ಪಡೆದು 'ಹರಿ' ಉಪಾಸನೆಯಿಂದ ಮುಕ್ತಿಯನ್ನು ಪಡೆಯುವ ಸಾಧನಾ ಪಥದಲ್ಲಿ ಜನರ ನೋವು ನಲಿವುಗಳಿಗೆ ಸ್ಪಂದಿಸಿದರು.

ಕರ್ನಾಟಕದ ಹರಿದಾಸ ಪರಂಪರೆಯಲ್ಲಿ ಜಗನ್ನಾಥದಾಸರಿಗೆ ಒಂದು ವಿಶಿಷ್ಟವಾದ ಸ್ಥಾನವಿದೆ. ಹುಟ್ಟಿನ ಮೂಲದ ಶ್ರೇಷ್ಠತೆ, ಸಂಸ್ಕೃತ ಪಾಂಡಿತ್ಯದ ಅಹಂಕಾರದಿಂದ ಬೀಗಿದ ಜಗನ್ನಾಥದಾಸರು ದಾಸವರೇಣ್ಯರಾದ ಬಗ್ಗೆ ಕುತೂಹಲಕರವಾದ ಕತೆ-ಹೇಳುತ್ತಾರೆ. ಮನುಷ್ಯನ ಅಹಂಮ್ಮಿಕೆಗೆ, ಭ್ರಮನಿರಸನಕ್ಕೆ ಏನಾದರೊಂದು ಕಾರಣಗಳಿರಲೇಬೇಕಲ್ಲ. ಹೀಗೆ ಭ್ರಮನಿರಸನಾದವನು ಸಾಮಾನ್ಯರಿಗಿಂತಲೂ ಮಿಗಿಲಾಗಿ ಏನಾದರೂ ಸಾಧಿಸಿದರೆ ಅವರ ಬಗ್ಗೆ ಭಕ್ತಿ ಭಾವದ ಹಿನ್ನೆಲೆಯಲ್ಲಿ ಕತೆಗಳು ಹುಟ್ಟಿಕೊಂಡಿರಬಹುದು. ಜಗನ್ನಾಥದಾಸರನ್ನು ಕುರಿತು ಡಾ. ಬೆಟಗೇರಿಕೃಷ್ಣಶರ್ಮ ಅವರು 'ಕನ್ನಡ ನಾಡಿನ ಹರಿದಾಸ ಸಾಹಿತ್ಯಗಗನದಲ್ಲಿ ಶ್ರೀ ಜಗನ್ನಾಥದಾಸರು ಶುಕ್ರಗ್ರಹದಂತೆ-ಸ್ವಪ್ರಕಾಶದಿಂದ ಮಿರುಗುವರು'[2] ಎನ್ನುವ ಮಾತು ದಾಸಸಾಹಿತ್ಯದಲ್ಲಿ ಜಗನ್ನಾಥದಾಸರಿಗಿರುವ

---

೧ ದಾಸಸಾಹಿತ್ಯ : ದ್ವಿತೀಯ ಘಟ್ಟದ ಸಾಧನೆ; ಕ.ವಿ.ವಿ. ಧಾರವಾಡ ಪು. ೯೮

೨. ಜಗನ್ನಾಥದಾಸರ ಹಾಡುಗಳು : (ಸಂ) ಕಾವ್ಯಪ್ರೇಮಿ ಪು. ೧೭

ಸ್ಥಾನ ಸೂಚಿಸುವಂಥದ್ದಾಗಿದೆ. ನಾಡಿನ ಮೂಲೆ ಮೂಲೆಯನ್ನೆಲ್ಲಾ ಸುತ್ತಾಡಿದ ಜಗನ್ನಾಥದಾಸರು ಹರಿಭಕ್ತಿ ತತ್ವವನ್ನು ಜನಸಾಮಾನ್ಯರಿಗೆ ಮುಟ್ಟಿಸುತ್ತಲೇ ಅನೇಕ ಜನರಿಗೆ ದಾಸದೀಕ್ಷೆಯನ್ನಿತ್ತು, ತಮ್ಮ ಶಿಷ್ಯಬಳಗವನ್ನು ವಿಸ್ತರಿಸಿಕೊಂಡರು. ರಾಯಚೂರು ಜಿಲ್ಲೆಯ ಮಾನವಿ ತಾಲೂಕಿನ ಬ್ಯಾಗವಟ್ಟಿ ಗ್ರಾಮದ ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದ ಶ್ರೀನಿವಾಸ ಮುಂದೆ ಜಗನ್ನಾಥ ದಾಸನಾದ ಪ್ರಸಂಗ ಕುತೂಹಲಕರವಾದದ್ದು.

ಬ್ರಾಹ್ಮಣ ಮನೆತನದಲ್ಲಿ ಹುಟ್ಟಿರುವುದರಿಂದ ಸಹಜವಾಗಿಯೇ ಸಂಸ್ಕೃತ ಭಾಷೆ ಕಲಿಯುವ ಪ್ರಸಂಗ ಬಂದಂತಿದೆ. ತೀಕ್ಷ್ಣಮತಿಯಾದ ಶ್ರೀನಿವಾಸ ಸಂಸ್ಕೃತ ಭಾಷೆ, ಸಾಹಿತ್ಯವನ್ನು ಬಹುಬೇಗನೆ ಒಳಹೊಕ್ಕು ನೋಡುವ ಅವಕಾಶ ಸಿಕ್ಕಿದೆ. ಲೌಕಿಕ ಶಿಕ್ಷಣಕ್ಕಿಂತಲೂ ಸಂಸ್ಕೃತ ಭಾಷಾಧ್ಯಯನ, ಧರ್ಮಜಿಜ್ಞಾಸೆ, ವೇದಾಂತ ಪಾಠಗಳಿಗಾಗಿ ತಂದೆ ಶ್ರೀನಿವಾಸನನ್ನು ಮಂತ್ರಾಲಯದ ಮಠಕ್ಕೆ ಕಳಿಸಿದರು. ಶ್ರೀನಿವಾಸನ ಪಾಂಡಿತ್ಯಕ್ಕೆ ಮೆಚ್ಚಿದ ಶ್ರೀ ವರದೇಂದ್ರ ಶ್ರೀಗಳು ಶ್ರೀನಿವಾಸನಿಗೆ ಆಚಾರ್ಯಪದವಿಯನ್ನಿತ್ತು ಗೌರವಿಸಿದರು. ಸಂಸ್ಕೃತ ಪಾಂಡಿತ್ಯ, ವೇದಾಂತದ ವ್ಯಾಸಂಗ, ಹಿರಿಯರು ಆಸ್ತಿಯ ವಾರಸುದಾರನಾದವನಿಗೆ ಅಹಂಕಾರ ಇರುವುದು ಸಹಜತಾನೆ. ಗರ್ವಿಷ್ಟ ಅಹಂಕಾರಿಯಾದ ಶ್ರೀನಿವಾಸ ಕನ್ನಡ ಭಾಷೆ, ಸಾಹಿತ್ಯವನ್ನು ಹೀಯಾಳಿಸುತ್ತಿದ್ದ. ಇದು ಸಂಸ್ಕೃತದ ಸಂಸ್ಕೃತಿ. ಪಾಂಡಿತ್ಯದಿಂದ ಬೀಗುತ್ತಿದ್ದ ಶ್ರೀನಿವಾಸ ಅನೇಕ ಜನರನ್ನು ಇದೇ ಕಾರಣಕ್ಕಾಗಿ ನಿಂದಿಸುತ್ತಿದ್ದ. ಈ ಮನೋಭಾವದಿಂದಲೇ ಶ್ರೀವಿಜಯದಾಸರಂತವರು ಕೂಡಾ 'ಕೂಸೀಮಗದಾಸ' ಎನಿಸಿಕೊಳ್ಳಬೇಕಾಯಿತು. ತನ್ನ ಸಮಕಾಲೀನ ದಾಸರನ್ನು ಹೀಗಳಿಯುವ ಪ್ರವೃತ್ತಿಯಿಂದಲೇ ಶ್ರೀನಿವಾಸ ಜನರ ಪ್ರೀತಿ, ವಿಶ್ವಾಸ ಕಳೆದುಕೊಳ್ಳಬೇಕಾಯಿತು.

ಶ್ರೀ ವಿಜಯದಾಸರು ಶ್ರೀನಿವಾಸನ ಈ ದುರಂಹಕಾರವನ್ನು ಅರಿತವರಾಗಿದ್ದರು. ಈ ಒಂದು ದೌರ್ಬಲ್ಯದಿಂದ ಶ್ರೀನಿವಾಸ ಹಾಳಾಗುವುದನ್ನು ತಪ್ಪಿಸುವ ಸಲುವಾಗಿ ಅವನಿದ್ದಲ್ಲಿಗೇನೆ ಬಂದರು. ವಿಜಯದಾಸರ ಬರುವಿಕೆಗಾಗಿ ಊರಿಗೆ ಊರೇ ಎದುರು ನೋಡುತ್ತಿತ್ತು. ಅವರು ಬಂದಾಗ ಎಲ್ಲರೂ ಅವರನ್ನು ಭಕ್ತಿಗೌರವಗಳಿಂದ ಸ್ವಾಗತಿಸಿದರು. ಜನರು ಈ ಸಂದರ್ಭದಲ್ಲಿ ಕರೆಯಲು ಹೋದರೆ ಸರಿಯಾಗಿ ಪ್ರತಿಕ್ರಿಯಿಸಲಿಲ್ಲ. ಶ್ರೀ ವಿಜಯದಾಸರೆ ಶ್ರೀನಿವಾಸನ ಮನೆಗೆ ಬಂದು 'ಆಚಾರ್ಯರೇ ಇಂದು ನಮ್ಮಲ್ಲಿಗೆ ತೀರ್ಥಪ್ರಸಾದವನ್ನು ಸ್ವೀಕರಿಸಲು ಬರಬೇಕು' ಎಂದು ಆಮಂತ್ರಣವಿತ್ತರು. ಶ್ರೀನಿವಾಸ ಅಹಂಕಾರದಿಂದಲೇ 'ಹೂಂ' ಎಂದು ಹೂಂಕರಿಸಿದ. ದಾಸರ ಬಿಡಾರದಲ್ಲಿ ಊಟ ಮಾಡುವುದೆಂದರೆ ತನ್ನ ಪ್ರತಿಷ್ಠೆಗೆ, ತನ್ನ ವಿದ್ವತ್ತಿಗೆ ಸಲ್ಲದೆಂದು ಭಾವಿಸಿದ. ಹೀಗಾಗಿ ಊಟಕ್ಕೆ ಹೋಗಲಿಲ್ಲ. ಕರೆಯಲು ಬಂದ

ಸೇವಕನಿಗೆ 'ಹೊತ್ತಾಗಿ ಊಟ ಮಾಡಿದರೆ ಹೊಟ್ಟೆ ನೋವು ಬರುತ್ತದೆ. ಅದಕ್ಕಾಗಿ ನಾನು ಊಟ ಮಾಡಿದೆ' ಎಂದು ಹೇಳಿಕಳಿಸಿದ. ಮೊದಲೇ ಅವರ ಒಳಮನಸ್ಸನ್ನು ಬಗೆದು ನೋಡಿದ್ದರಿಂದ ಸೇವಕ ಬಂದು ಶ್ರೀನಿವಾಸನ ಮಾತನ್ನು ಹೇಳಿದ್ದು ಕೇಳಿ ಅವರ ಬಾಯಿಯಿಂದ 'ಅಂದಂತೆ ಆಗಲಿ' ಎಂದರು. ಶ್ರೀನಿವಾಸನಿಗೆ ಅವರ ಮಾತಿನಂತೆ ಉದರಶೂಲೆ ಪ್ರಾರಂಭವಾಯಿತಂತೆ. ಏನು ಮಾಡಿದರೂ ಕಡಿಮೆಯಾಗದೆ ಇದ್ದಾಗ ಮಂತ್ರಾಲಯಕ್ಕೆ ಬಂದು ಶ್ರೀರಾಘವೇಂದ್ರ ಸ್ವಾಮಿಗಳ ಸೇವೆಗೆ ನಿಂತರಂತೆ. ಅದರಿಂದಲೂ ಏನು ಪ್ರಯೋಜನವಾಗದೆ ಇದ್ದಾಗ ನೋವು ತಾಳಲಾರದೆ ಆತ್ಮಹತ್ಯೆಗೂ ಪ್ರಯತ್ನಿಸಿದರಂತೆ. ಅದು ಕೈಗೂಡದೆ ಸ್ವಪ್ನದಲ್ಲಿ ಶ್ರೀರಾಘವೇಂದ್ರರ ದರ್ಶನವಾಗಿ 'ಶ್ರೀವಿಜಯದಾಸರಲ್ಲಿಗೆ ಹೋಗಿ ಕ್ಷಮೆಯಾಚಿಸು ಎಂದರಂತೆ! ಇದರಿಂದ ಎಚ್ಚತ್ತು ಚಿಲಕ ಪರಿಯಲ್ಲಿದ್ದ ವಿಜಯದಾಸರಲ್ಲಿ ಹೋಗಿ ಕ್ಷಮೆ ಕೇಳಿದ ಮೇಲೆ ಉದರ ಶೂಲೆ ಕಡಿಮೆಯಾಯಿತಂತೆ. ಆಗ ಶ್ರೀವಿಜಯದಾಸರು ಶ್ರೀನಿವಾಸನಿಗೆ 'ನಿನ್ನ ಅಜ್ಞಾನವನ್ನು ಕಳೆಯಲೆಂದೇ ನಾನು ಮಾನ್ವಿಗೆ ಬಂದಿದ್ದೆನು. ನಿನಗೆ 'ಹರಿ'ಕೃಪೆಯಾಗಿದೆ ಎಂದು ಅಭಯನೀಡಿದರಂತೆ ; ವಿಜಯದಾಸರು ಹೇಳಿದ ಹಾಗೇ ಉತ್ತನೂರಿಗೆ ಹೋಗಿ ಅಲ್ಲಿಯ ಗೋಪಾಲದಾಸರ ಶಿಷ್ಯರಾದರಂತೆ. ಗೋಪಾಲದಾಸರು ಶಿಷ್ಯನಾದ ಶ್ರೀನಿವಾಸನನ್ನು ಕರೆದುಕೊಂಡು ಒಮ್ಮೆ ತಿಮ್ಮಪ್ಪನ ದರ್ಶನಕ್ಕೆಹೋಗುತ್ತಿರುವಾಗ ದಾರಿಯಲ್ಲಿ ಶ್ರೀನಿವಾಸನಿಗೆ ಪ್ರಜ್ಞೆ ತಪ್ಪಿ ಜೀವನ್ಮರಣದ ಸ್ಥಿತಿಯಲ್ಲಿದ್ದಾಗ ಗೋಪಾಲದಾಸರು ತಮ್ಮ ಗುರುವಿನ ಪ್ರೇರಣೆಯಂತೆ ತಮ್ಮ ಆಯುಷ್ಯದ ನಲವತ್ತು ವರ್ಷಗಳನ್ನು ಶ್ರೀನಿವಾಸನಿಗೆ ದಾನ ಮಾಡಿದರಂತೆ. ಈ ಘಟನೆಗಳಿಂದ ಶ್ರೀನಿವಾಸನಲ್ಲಿದ್ದ ಅಹಂಮಿಕೆಗಳೆಲ್ಲಾ ಸೋರಿ ಹೋಗಿದ್ದರೂ ದಾಸನಾಗುವ ಯೋಗ ಕೂಡಿಬರಲಿಲ್ಲ. ಅದಕ್ಕಾಗಿ ಇನ್ನೊಂದು ಪ್ರಸಂಗವನ್ನು ಹೇಳುತ್ತಾರೆ. 'ಪಂಡರಪುರಕ್ಕೆ ಹೋಗಿ ವಿಠಲನನ್ನು ಧ್ಯಾನಿಸುವ ಸಂದರ್ಭದಲ್ಲಿ ಸ್ನಾನಮಾಡುವಾಗ ಚಂದ್ರಭಾಗೆಯಲ್ಲಿ ಒಂದು ಶಿಲೆಯು ದೊರಕಿತಂತೆ. ಅದರಲ್ಲಿ 'ಜಗನ್ನಾಥವಿಠಲ' ಎಂಬ ಅಂಕಿತವಿದ್ದಿತಂತೆ. ಅದನ್ನು ಓದಿದಂದಿನಿಂದ 'ಶ್ರೀನಿವಾಸಚಾರ್ಯರು ಜಗನ್ನಾಥ'ದಾಸ'ರೆಂಬ ನಾಮಾಂಕಿತ ಪಡೆದು ತಮ್ಮಕೃತಿಗಳನ್ನು 'ಜಗನ್ನಾಥವಿಠಲ' ಎಂಬ ಅಂಕಿತದಲ್ಲಿ ರಚಿಸಲಾರಂಭಿಸಿದರಂತೆ. ಈ ಕಾರಣದಿಂದ ಶ್ರೀನಿವಾಸಾಚಾರ್ಯನಲ್ಲಿದ್ದ ಸಂಸ್ಕೃತದ ಮೇಲಿನ ಮೋಹವೆಲ್ಲಕರಗಿ ಕನ್ನಡ ಭಾಷೆಯಲ್ಲಿ ಜನಸಾಮಾನ್ಯರಿಗೆ ತಿಳಿಯುವಂತೆ ಕವಿತೆ, ಕೀರ್ತನೆಗಳನ್ನು ಹಾಡಲು ಪ್ರಾರಂಭಿಸಿದರಂತೆ.

ಶ್ರೀನಿವಾಸಾಚಾರ್ಯರು ತಮ್ಮ ಮೂಲದ ವ್ಯಕ್ತಿತ್ವವನ್ನು ಎಲ್ಲ ನೆಲೆಗಳಿಂದ ಬಿಡಿಸಿಕೊಂಡು ದಾಸರಾದ ಮೇಲೆ ಒಂದೆಡೆ ನೆಲೆನಿಲ್ಲಲು ಸಾಧ್ಯವೆ ? ದಾಸ ಮತ್ತು

ಜಂಗಮ ಈ ಎರಡು ಶಕ್ತಿಗಳು ಚಲನಶೀಲವಾಗಿರುವುದರಿಂದಲೇ ಅಂದಂದಿನ ಕಾಲದ ತತ್ವಗಳನ್ನು ಜನರ ಮನೆ ಮನದ ಬಾಗಿಲು ಬಡಿಯಲು ಸಾಧ್ಯವಾಗಿದೆ. ದೇಶ ಸಂಚಾರಿಗಳಾದ ಜಗನ್ನಾಥದಾಸರಿಗೆ ಅನೇಕ ಜನ ಶಿಷ್ಯರು ಲಭಿಸಿದರು. ಈ ಸಂಚಾರಕಾಲದಲ್ಲಿ ಸವಣೂರಿಗೆ ಬಂದಾಗ ಶ್ರೀ ಸತ್ಯಬೋಧಸ್ವಾಮಿಗಳ ಕೃಪೆಗೆ ಪಾತ್ರರಾದರಂತೆ. ತಮ್ಮ ಭಕ್ತಿಯ ಕಾಣಿಕೆಯಾಗಿ ಒಂದು ತಟ್ಟೆಯನ್ನು ಅರ್ಪಿಸಿದಾಗ ಶ್ರೀ ಸತ್ಯಭೋದ ಸ್ವಾಮಿಗಳು ತಮ್ಮ ಪಾದುಕೆಗಳನ್ನು ಉಡುಗೊರೆಯಾಗಿ ನೀಡಿದರೆಂದು ಹೇಳಲಾಗುತ್ತದೆ. ಈ ಸಂದರ್ಭದಲ್ಲಿ ಸವಣೂರಿನ ಅಕ್ಕಪಕ್ಕದ ಹಳ್ಳಿಗಳಿಗೆಲ್ಲ ಭೆಟ್ಟಿಕೊಟ್ಟಹಾಗಿದೆ. ಶ್ರೀ ಸತ್ಯಭೋದಸ್ವಾಮಿಗಳಿಗೆ ಕಾಣಿಕೆ ಕೊಟ್ಟಿದ್ದಾಗಲಿ, ಅವರಿಂದ ಪಡೆದುಕೊಂಡಿದ್ದಕ್ಕಿಂತಲೂ ಈ ಸಮಯದಲ್ಲಿ ಜನ ಸಾಮಾನ್ಯರಿಂದ ಅವರು ಪಡೆದುಕೊಂಡದ್ದು ಮತ್ತು ಜನಸಾಮಾನ್ಯರಿಗೆಅವರು ಕೊಟ್ಟದ್ದು ತುಂಬಾ ಗಂಭೀರವಾದದ್ದು. ಕರಜಿಗೆಯಲ್ಲಿ ದಾಸಪ್ಪನೆಂಬ ವ್ಯಕ್ತಿ ವಿಷಯಲಂಪಟನಾಗಿದ್ದ. ಇಂತಹ ವ್ಯಕ್ತಿಯನ್ನು ತಮ್ಮ ಉಪದೇಶದಿಂದ ತಿದ್ದಿ, ಅವನನನ್ನು ಹೊಸ ಮನುಷ್ಯ ನನ್ನಾಗಿಸಿದ್ದು ದೊಡ್ಡ ವಿಚಾರ. ಜಗನ್ನಾಥದಾಸರ ಶಿಷ್ಯರಲ್ಲೊಬ್ಬರಾದ ಪ್ರಾಣೇಶದಾಸರು ದಾಸಪ್ಪನಿಗೆ ಬುದ್ಧಿ ಹೇಳಿದ್ದು ಹೀಗೆ.

'ಆದದ್ದಾಯಿತು ಇನ್ನಾದರೂ ಒಳ್ಳೆ
ಹಾದಿ ಹಿಡಿಯೋ ಪ್ರಾಣೀ ॥ಪ॥
ಈ ದುರ್ನಡತೆ-ತಿಂದ್ಯೋದರಿಹಪರದಿ
ಮೋದೆಂದಿಗೂ ಕಾಣೆ ಪ್ರಾಣೀ
ನೆಲಸತಿ-ಧನದೊಳನವರತ
ಹುಳುವಾಗಿರುವೆಯಲ್ಲೋ
ಸ್ಥಳಾಸ್ಥಳವರಿಯದೆ ಕಲಾಪ ಮಾಡ್ಯಫ
ಕೊಳಲಾಗುವುದು ಸಲ್ಲೋ
ಹಲಾಪಿಡಿದು ವಿಧಿಕುಲಾಚರಣೆ ಬಿಡೆ
ಫಲಾತೆಗುವರೆಲ್ಲೋ
ಎಲಾ ಕೇಳು ಒಂದು ತಿಲಾಮಾತ್ರ ನೀ
ಗೆಲಾಹ ಬಗೆಯಲ್ಲೋ ಪ್ರಾಣೀ'

ಇದರಿಂದ ದಾಸಪ್ಪನ ಮನಪರಿವರ್ತನೆಯಾಗಿ ಜಗನ್ನಾಥದಾಸರ ಶಿಷ್ಯನಾದ. ಅವನಿಗೆ ಜಗನ್ನಾಥದಾಸರು ದಾಸದೀಕ್ಷೆಯಿತ್ತು 'ಶ್ರೀದವಿಠಲ' ಎಂಬ ಅಂಕಿತವನ್ನು ನೀಡಿದರಂತೆ. ತಮ್ಮ ಗುರುವಿಗೆ ದಾಸಪ್ಪ ಇಪ್ಪತ್ತನಾಲ್ಕು ಷಟ್ಪದಿಗಳನ್ನು ಬರೆದು ಜಗನ್ನಾಥದಾಸರ 'ಹರಿಕಥಾ ಮೃತಸಾರ' ಗ್ರಂಥಕ್ಕೆ ಮೂವತ್ತಮೂರನೆಯ 'ಫಲಶ್ರುತಿ'

ಸಂಧಿಯಾಗಿ ಸೇರ್ಪಡೆಯಾಗಿಸಿದ್ದಾರೆ. ಕಜಣಗಿಯಿಂದ ಹುಬ್ಬಳ್ಳಿ, ಗದಗ, ಅಣ್ಣಿಗೆರೆ, ಕೋಣನ ತಂಬಿಗೆ, ಬೆಳಗಾವಿ, ಚಿಕ್ಕೋಡಿ, ಹುಕ್ಕೇರಿ ಮುಂತಾದ ಪ್ರದೇಶಗಳಲ್ಲಿ ಸಂಚರಿಸಿದ್ದಾರೆ. ತಮ್ಮ ಸಂಚಾರದ ಅವಧಿಯಲ್ಲಿ ಹಲವಾರು ಪವಾಡಸದೃಶ ಘಟನೆಗಳಿಗೆ ಕಾರಣರಾಗಿದ್ದಾರೆ. ನಾಡಿನಾದ್ಯಾಂತ ಸಂಚರಿಸುತ್ತ, ಕೀರ್ತನೆಗಳ ಮೂಲಕ ಜನರ ಮನಸ್ಸನ್ನು ಭಕ್ತಿ ಮಾರ್ಗದತ್ತ ತಿರುಗಿಸಿ, ಸನ್ಮಾರ್ಗದಲ್ಲಿ ನಡೆಯಲು ಉಪದೇಶಿಸಿದರು. ಈ ಸಂಚಾರಿ ಸಂದರ್ಭದಲ್ಲಿಯೇ ಅನೇಕ ಜನಶಿಷ್ಯರು ದೊರೆತಿದ್ದಾರೆ. ತಮ್ಮ ತತ್ವಗಳ ಪ್ರಭಾವಕ್ಕೆ ಒಳಗಾಗಿ ಬಂದವರಿಗೆಲ್ಲಾ ದಾಸದೀಕ್ಷೆಯನ್ನಿತ್ತು, ಜನೋಪಕಾರ್ಯಗಳಲ್ಲಿ ಭಾಗಿಯಾಗಿಸಿದ್ದಾರೆ. ಇವರ ಶಿಷ್ಯಪರಂಪರೆಯಲ್ಲಿ ಪ್ರಾಣೇಶವಿಠಲ, ಶ್ರೀದವಿಠಲ, ವೆಂಕಟವಿಠಲ, ಗೋಪತಿವಿಠಲ, ಜ್ಞಾನಮಯವಿಠಲ, ಆನಂದಮಯವಿಠಲ ಎಂಬ ಅಂಕಿತಗಳನ್ನುಳ್ಳವರು ಪ್ರಮುಖರು. ಜಗನ್ನಾಥದಾಸರು ಬದುಕಿದ ಕಾಲಾವಧಿ ಎಂಭತ್ತೊಂದು ವರ್ಷ. ಅವರು ವಾಸಿಸುತ್ತಿದ್ದರು ಎನ್ನುವ ಮನೆಯಿಂದು ಮಂದಿರವಾಗಿದೆ. ಇಂದಿಗೂ ಅವರು ಬಳಸುತ್ತಿದ್ದರು ಎನ್ನುವ ವಸ್ತುಗಳನ್ನು ಕಾಯ್ದಿಟ್ಟಿದ್ದಾರೆ. ಜನರು ಭಕ್ತಿಯಿಂದ ಅವುಗಳನ್ನು ಪೂಜಿಸುತ್ತಿರುವುದನ್ನು ನೋಡಬಹುದು.

ಬಾಲ್ಯದಲ್ಲಿ ಸಂಸ್ಕೃತ ಅಭ್ಯಾಸದಿಂದ ಗಳಿಸಿದ್ದ ಪಾಂಡಿತ್ಯ ಜನಸಾಮಾನ್ಯರಿಗೆ ಉಪಯೋಗವಾಗದು ಎಂಬುದು ಮನವರಿಕೆಯಾದ ಮೇಲೆ ಸಂಸ್ಕೃತದ ಹುಸಿ ಪ್ರತಿಷ್ಠೆಯನ್ನು ಕೊಡವಿಕೊಂಡು ತಮ್ಮ ಸಂಚಿತ ಬೌದ್ಧಿಕ ವಿಚಾರಗಳನ್ನು, ತತ್ವಗಳನ್ನು, ಜನಸಾಮಾನ್ಯರಿಗೆ ಮುಟ್ಟಿಸುವ ಸಲುವಾಗಿ ಜನಪರ ಭಾಷೆಯನ್ನು ಬಳಸಿ ಕೀರ್ತನೆ, ಸುಳ್ಳಾದಿ, ಮುಂತಾದ ಕೃತಿಗಳನ್ನು ರಚಿಸತೊಡಗಿದರು. ಪುರಂದರದಾಸರು, ಕನಕದಾಸರು, ವಿಜಯದಾಸರು, ಗೋಪಾಲದಾಸರು, ಮೋಹನದಾಸರುಗಳಂತೆ ಜನರಾಡುವ ಭಾಷೆಯಲ್ಲಿಯೆ ಕೀರ್ತನೆಗಳನ್ನು ರಚಿಸಿ ಹಾಡಿದರು. ಜಗನ್ನಾಥದಾಸರನ್ನು ಹರಿದಾಸ ಸಾಹಿತ್ಯ ಕ್ಷೇತ್ರದಲ್ಲಿ ನೆಲೆಯೂರಿಸಿದ್ದು ಅವರ 'ಹರಿಕಥಾಮೃತಸಾರ' ಜಗನ್ನಾಥದಾಸರು ಎಂತಹ ಪ್ರತಿಭಾನ್ವಿತರೆಂದರೆ, ನಾಡಿನಾದ್ಯಾಂತ ಸಂಚರಿಸುವ ಸಂದರ್ಭದಲ್ಲಿ, ನಿಂತಲ್ಲಿ ಕುಂತಲ್ಲಿ ಸಂದರ್ಭಕ್ಕನುಸಾರ ಕೀರ್ತನೆಗಳನ್ನು ರಚಿಸಿ ಹಾಡುತ್ತಿದ್ದರಂತೆ. ನಂತರ ಅವರ ಶಿಷ್ಯರು ಬರೆದಿಡುತ್ತಿದ್ದರಂತೆ. ಆದರೆ 'ಹರಿಕಥಾಮೃತಸಾರವನ್ನು ಜಗನ್ನಾಥದಾಸರೇ ಕುಳಿತು ರಚಿಸಿರಬೇಕು. ಏಕೆಂದರೆ ಇದು ಕೀರ್ತನೆಗಳಂತೆ ಚಿಕ್ಕ ಕೃತಿಯಲ್ಲ 'ಜಗನ್ನಾಥವಿಠಲ' ಅಂಕಿತ ದೊರೆತ ಮೇಲೆ ಜಗನ್ನಾಥದಾಸರು ತಮ್ಮೆಲ್ಲ ಕೃತಿಗಳಿಗೂ ಅದೇ ಅಂಕಿತವನ್ನು ಬಳಸಿದ್ದಾರೆ. ಇವರ ಈವರೆಗಿನ ಉಪಲಬ್ಧ ಕೃತಿಗಳು ತಂತ್ರಸಾರ, ಸುಳಾದಿಗಳು, ಸುಳ್ಳಾದಿಗಳು, ಉಗಾಭೋಗಗಳು, ಕೀರ್ತನೆಗಳು ಮತ್ತು 'ಹರಿಕಥಾಮೃತಸಾರ'.

ತತ್ತ್ವ ವಿಚಾರಗಳನ್ನು ಪ್ರಮುಖವಾಗಿ ಪ್ರತಿಪಾದಿಸುವ ಸುಳಾದಿ, ಉಗಾಭೋಗಗಳು ಸಂಗೀತದಿಂದ ಒಳಗೊಂಡಿದೆ. ಬಿಡಿಯಾದ ಅನುಭವದ ಉತ್ಕಟ ನಿರೂಪಣೆಗೆ ಸಂಗೀತ ಗ್ರಂಥಗಳಲ್ಲಿ, ಹೇಳಿರುವ ಉದ್ಗ್ರಾಹ ಅಭೋಗಗಳ ತದ್ಭವವಾದ ಉಗಾಭೋಗಗಳು[೬]

'ಆರುವಂದಿಸಲೇನು ಆರು ನಿಂದಿಸಲೇನು
ಆರು ಶಾಪಿಸಲೇನು ಆರು ಕೋಪಿಸಲೇನು
ಆರು ಮುನಿದು ಮಾತನಾಡದಿದ್ದರೆ ಏನು
ಮಾರುತಾಂತರ್ಯಾಮಿ ಜಗನ್ನಾಥ ವಿಠಲನ
ಕಾರುಣ್ಯಪಾತ್ರರ ಕರುಣವೆನ್ನೊಳಗಿರೆ
ಆರು ವಂದಿಸಲೇನು ಆರು ನಿಂದಿಸಲೇನು'

ಈ ಉಗಾಭೋಗದ ಮೇಲೆ ಬಸವಣ್ಣನವರ ವಚನದ ಪ್ರಭಾವವಿರುವುದನ್ನು ಕಾಣಬಹುದು.

ಮೂರು ಸಾಲಿನ ಪದ್ಯಗಳು ನೋಡಲು ತ್ರಿಪದಿಯಂತೆ ಕಾಣಿಸುವ ದಾಸರ ರಚನೆಗಳನ್ನು ಸುವ್ವಾಲಿಗಳು ಎಂದು ಕರೆದಿರುವರು. ಸಮಾಜದಲ್ಲಿರುವ ಅಂಕುಡೊಂಕುಗಳನ್ನು ಸರ್ವಜ್ಞ ತನ್ನ ವಚನಗಳ ಮೂಲಕ ತೋರಿಸಿಕೊಟ್ಟ. ಹಾಗೇ ದಾಸರಿಂದ ರಚಿತವಾದ ಸುವ್ವಾಲಿಗಳು ಸಮಾಜದ ಓರೆಕೋರೆಗಳನ್ನು ತಿದ್ದುವ, ತೀಡುವ ದೃಷ್ಟಿಯಿಂದ ದೇಸಿ ಛಂದಸ್ಸಿನ ಹಿನ್ನೆಲೆಯಲ್ಲಿ ರಚನೆಗೊಂಡಿವೆ. 'ಹರಿಭಕ್ತಿ', ನಿರೂಪಣೆಗಾಗಿಯೂ ಬಳಸಿರುವುದನ್ನು ಕಾಣಬಹುದು. ಮತಗಳಲ್ಲಿಯೇ 'ಮಧ್ವ' ಮತ ಶ್ರೇಷ್ಠವಾದುದು ಎಂಬುದನ್ನು ಸಾರುವ ಈ ಸುವ್ವಾಲಿ ಹೀಗಿದೆ.

'ಮತದೊಳಗೆ ಮಧ್ವಮತ ವ್ರತದೊಳಗೆ ಹರಿದಿನವು
ಕಥೆಯೊಳಗೆ ಭಾಗವತ ಕಥೆಯೆನ್ನಿ। ಕಥೆಯೆನ್ನಿ ಮೂಲೋಕ
ಕತಿಶಯ ಶ್ರೀ ಕೃಷ್ಣ ಪ್ರತಿಮೆನ್ನಿ.

ಪ್ರಪಂಚದಲ್ಲಿ ದೈವವನ್ನುಳಿದು ಯಾವ ನರಪ್ರಾಣಿಯನ್ನು, ಹೊಗಳುವುದು, ನಂಬುವುದು ಅರ್ಥವಿಲ್ಲದ್ದು ಎಂದಿರುವರು. ಸ್ವಾರ್ಥಿ ಮನುಷ್ಯ ಬದುಕಿನಲ್ಲಿ ನಡೆದುಕೊಳ್ಳುವ ರೀತಿಕಂಡು ಈ ತೀರ್ಮಾನಕ್ಕೆ ಬಂದಿರುವ ಹಾಗಿದೆ. ಅದನ್ನು

'ನರರ ಕೊಂಡಾಡಿ ದಿನ ಬರಿದೆ ಕಳೆಯಲು ಬೇಡ
ನರನ ಸಖನಾದ ಸಿರಿಕೃಷ್ಣ। ಸಿರಿಕೃಷ್ಣ ಮಾರುತಿಯ
ಚರಿತೆಯ ಕೊಂಡಾಡೊ ಮನವುಬ್ಬಿ.

---

೬. ದಾಸಸಾಹಿತ್ಯ ದರ್ಶನ: (ಸಂ) ಎಚ್ಚೆಸ್ಕೆ : ಪು. ೩೨೧

ಅಸತ್ಯವೇ ನಮ್ಮ ಬದುಕನ್ನು ಆಳುತ್ತಿರುವ ಸಂದರ್ಭದಲ್ಲಿ ಸತ್ಯದ ಮನವರಿಕೆ ಮಾಡಿಕೊಡುವುದು ಪ್ರಯಾಸದ ಕೆಲಸ. ಇದು ದಾಸರನ್ನು ಕಾಡಿರುವ ಹಾಗೆ ಎಲ್ಲ ಕಾಲದ ಸಮಾಜಪರ ಚಿಂತಕರನ್ನು ಕಾಡಿರುವ ಸಮಸ್ಯೆ ಸುಳ್ಳಿನಿಂದಲೇ ಸುಖ ಅಪೇಕ್ಷಿಸುವ ಜನರು ಹಲವಾರು ತೊಂದರೆಗಳನ್ನು ತಂದುಕೊಂಡಿರುವುದನ್ನುಕಂಡು ಕನಿಕರಿಸಿ, ಜಗನ್ನಾಥದಾಸರು ಈ ರೀತಿಯಾಗಿ ವಿಡಂಬಿಸಿದ್ದಾರೆ.

'ಸುಳ್ಳಿಗಿಂತಧಿಕ ಮತ್ತಿಲ್ಲವೋ ಮಹಪಾಪ
ಸುಳ್ಳು ಕಳ್ಳತನವು ನಿನ್ನಲ್ಲಿ । ನಿನ್ನಲ್ಲಿ ಉಂಟಾಯಿ
ತಲ್ಲೊ ಜಾರತ್ವ ಇದರಂತೆ.

ಸುಳ್ಳಿನ ಬಗ್ಗೆ ಈ ರೀತಿಯಾಗಿ ಹೇಳುತ್ತಲೇ ಸತ್ಯ ದರ್ಶನವನ್ನು ಮಾಡಿಸುವ ಪರಿ ತುಂಬಾ ಸೊಗಸಾದುದು ಮತ್ತು ಅರ್ಥಪೂರ್ಣವಾದುದು

'ಸತ್ಯವೆಂದರೆ ಖರೆಯು ಮಿಥ್ಯೆಯೆಂದರೆ ಸುಳ್ಳು
ಸತ್ಯಮಿಥ್ಯಗಳು ಏಕತ್ರ । ಏಕತ್ರವಿಹುದೆ ಉ
ನ್ಮತ್ತ ಈ ಮಾತು ನಿಜವೆಲ್ಲಿ

ದಾಸರ ಸುಳ್ಳಾದಿಗಳಲ್ಲಿ ತಮ್ಮ ಅನುಭವಗಳನ್ನು ಲೋಕಾನುಭವಗಳಾಗಿ ನಿರೂಪಿಸಿದ್ದು ವಸ್ತು ಸತ್ಯಗಳನ್ನು ಬಿಚ್ಚಿಇಟ್ಟಕೆಲಸವೆನ್ನಬಹುದು.

ಕನಕ ಪುರಂದರರಂತೆ ಕುಲಗೋತ್ರದ ಬಗ್ಗೆ, ಮಡಿಮೈಲಿಗೆಯ ಬಗ್ಗೆಯೂ ಅತ್ಯಂತ ಮಾರ್ಮಿಕವಾಗಿ ಹೇಳಿದ್ದಾರೆ. ಆದರೂ ಈ ಅನಿಷ್ಟಪದ್ಧತಿಯನ್ನು ಆಮೂಲಾಗ್ರವಾಗಿ ನಿರ್ಮೂಲನ ಮಾಡಲು ಸಾಧ್ಯವಾಗಿಲ್ಲ. ಕುಲಾಚಾರ, ಮಡಿವಂತರ ಆಚಾರ ವಿಚಾರಗಳನ್ನುಕಂಡು ಕನಲಿದ್ದಾರೆ.

ಓಡಿಹೋಗುವ ಮಡಿಯ ಮಾಡಿದಣಿಯಲು ಬೇಡ
ನೋಡು ಸರ್ವಜ್ಞ ಹರಿರೂಪ। ಹರಿರೂಪ ನೋಡಿಕೊಂ
ಡಾಡಿ ಸುಖಿಯಾಗು ಮನವುಬ್ಬಿ.

ವಚನಕಾರರು, ದಾಸರು, ಸಾಹಿತ್ಯವನ್ನು ಅಸ್ತ್ರವನ್ನಾಗಿಸಿಕೊಂಡು ಸಾಮಾಜಿಕ ಸುಧಾರಣೆಗಳಿಸಿದವರು. ಹೀಗಾಗಿ ವಚನಗಳು ಮತ್ತು ಕೀರ್ತನೆಗಳಲ್ಲಿ ಸಮಾಜ ವಿಶ್ಲೇಷಣೆ ಕಾಣಿಸದೆ ಇರದು. ಇಹದಲ್ಲಿದ್ದರೂ ಸಾಮಾನ್ಯನ ಹಾಗೇ ಭ್ರಮಾತ್ಮಕವಾಗಿ ಪರ ಬಯಸಿದವರಲ್ಲ. ಹಾಗೇನೇ ಬದುಕಿಗೆ ಹಪಹಪಿಸಿದವರೂ ಅಲ್ಲ. ಸಂಸಾರ ಬಿಟ್ಟು ಸನ್ಯಾಸಿಗಳಾಗಿ ತತ್ವಬೋಧನೆ ಮಾಡಿದವರಲ್ಲ. ಸಂಸಾರದಲ್ಲಿದ್ದು

ಪಾರಮಾರ್ಥಿಕತೆಯ ಬಗ್ಗೆ ಹಂಬಲಿಸಿದವರು. ಹೀಗಾಗಿಯೆ ಶರಣರ, ದಾಸರ ಬದುಕು ಉದಾತ್ತ ನೆಲೆಗೇರಲು ಸಾಧ್ಯವಾಗಿರುವುದು.

ದಾಸರೆಲ್ಲರೂ ಕೀರ್ತನೆಗಳ ಮೂಲಕವೇ ಜನಮನ ಸೂರೆಗೊಂಡವರಾಗಿದ್ದರೂ ಸಹ ಕೆಲವರು ಇದಕ್ಕೆ ಅಪವಾದವಾಗಿ ಕಾವ್ಯಗಳನ್ನು ರಚಿಸಿರುವರು. ಕನಕ ದಾಸರು, ಜಗನ್ನಾಥ'ದಾಸರಂತವರು ಉತ್ಕೃಷ್ಟಕಾವ್ಯಗಳನ್ನು ರಚಿಸಿ ಕಾವ್ಯಕ್ಷೇತ್ರದಲ್ಲಿಯೂ ಮೈಲುಗಲ್ಲುಗಳನ್ನಿರಿಸಿದ್ದಾರೆ. ಕನಕದಾಸರ ರಾಮಧಾನ್ಯ ಚರಿತೆ, ನಳಚರಿತ್ರೆ, ಹರಿಭಕ್ತಿಸಾರಗಳಂತೆ, ಜಗನ್ನಾಥದಾಸರ 'ಹರಿಕಥಾಮೃತಸಾರ'ವೂ ಪ್ರಸಿದ್ಧಿ ಪಡೆದಿರುವ ಕೃತಿ. ಮಧ್ವಾಚಾರ್ಯರ ದ್ವೈತ ಸಿದ್ಧಾಂತವನ್ನು ಪ್ರತಿಪಾದಿಸುವ ಹರಿಭಕ್ತಿಸಾರದಲ್ಲಿ ಶುಷ್ಕ ತತ್ವ ಬೋಧನೆ ಮಾತ್ರವಿಲ್ಲ. ಭಾಮಿನಿಷಟ್ಪದಿಯಲ್ಲಿ ರಚಿಸಿದ ಈ ಕೃತಿಯಲ್ಲಿ ಮೂವತ್ತೆರಡು ಸಂಧಿಗಳಿವೆ. 'ಹರಿಕಥಾಮೃತಸಾರ'ದ ಬಗ್ಗೆ ಜಗನ್ನಾಥ ದಾಸರೇ ಹೀಗೆ ಹೇಳಿಕೊಂಡಿದ್ದಾರೆ.

'ತಾರಕವಿದು ಹರಿಕಥಾಮೃತಸಾರ ಜನಕೆ ॥ಪ॥
ಘೋರತರ ಅಸಾರಸಂಸಾರವೆಂಬ ವನಧಿಗೆ ನವ ॥ ಅ.ಪ ॥

ಈ ಕಾವ್ಯದಲ್ಲಿ ಬರುವ ಒಂದೊಂದು ಪದ್ಯಕ್ಕೂ ಶಾಸ್ತ್ರಪುರಾಣಗಳ ಹಿನ್ನೆಲೆ ಇದೆ. ಸಂಸ್ಕೃತ ಮೂಲದಿಂದಲೇ ಬಂದ ಜಗನ್ನಾಥದಾಸರ ಪಾಂಡಿತ್ಯಕ್ಕೆ ಸಂಸ್ಕೃತಿ ಕಲೆಗಳ ಒಳಹೊರಗಿನ ತಿರುಳಿನ ಅರಿವು ಸ್ಪಷ್ಟವಾಗಿತ್ತು. ಹೀಗಾಗಿ ಅವರು ವೇದಶಾಸ್ತ್ರಗಳ ತಿರುಳನ್ನರಿಯದೆ ಓದುವ ಜನರ ಬಗ್ಗೆಯೂ ಕನಿಕರವಿತ್ತು, ಮತ್ತು ಅಸಹನೆಯೂ ಇತ್ತು ಹೀಗಾಗಿ ಇಂತಹ ವಿಷಯಗಳ ಬಗ್ಗೆ

'ವೇದ ಶಾಸ್ತ್ರಪುರಾಣ ಕತೆಗಳ
ಓದಿ ಪೇಳಿದರೇನು ಸಕಲ ನಿ
ಷೇಧ ಕರ್ಮವ ತೊರೆದು ಸತ್ಕರ್ಮಗಳ ಮಾಡೇನು
ಓ ಧನಂಗಳ ಜರಿದು ಶ್ವಾಸನಿ
ರೋಧಗೈಸಿದರೇನು ಕಾಮ
ಕ್ರೋಧವಳಿಯದೆ ನಾನು ನನ್ನದು ಎಂಬ ಮಾನವನು.''

ಬರೀ ಬಾಹ್ಯಾಡಂಬರಕ್ಕೆಳಸುವ ವ್ಯಕ್ತಿಗಳನ್ನು ಕುರಿತು ಅತ್ಯಂತ ಮಾರ್ಮಿಕವಾಗಿ ನುಡಿದಿದ್ದಾರೆ. ಮನುಷ್ಯನಿಗೆ ಮನಸ್ಸಿನ ಮೇಲೆ ಇರಬೇಕಾದ ನಿಗ್ರಹ, ಇರದೆ ಇದ್ದರೆ ಎಷ್ಟು ಜಪತಪ, ವೇದಶಾಸ್ತ್ರ ಓದಿದರೂ ಪ್ರಯೋಜನವಿಲ್ಲವೆಂದಿರುವರು.

'ಜಗನ್ನಾಥದಾಸರು ಉದ್ದಾಮ ವೇದಾಂತಶಾಸ್ತ್ರ ಪಂಡಿತರಾಗಿದ್ದುದರಿಂದ ಶಾಸ್ತ್ರದಲ್ಲಿಯ ತತ್ವಸೂಕ್ಷ್ಮಗಳೆಲ್ಲವೂ ಹರಿಕಥಾಮೃತಸಾರದಲ್ಲಿ ಹರಿದು ಬಂದಿದೆ.

ದಾಸರ ಆಳವಾದ ಅನುಭವದ ಜೊತೆಗೆ ಕಾವ್ಯಸತ್ವವನ್ನು ಮೈಗೂಡಿಸಿಕೊಂಡುದರಿಂದ ಇವು ಜನಪರಗೊಳ್ಳಲು ಸಾಧ್ಯವಾಯಿತು. ಆದರೂ ವೇದಾಂತ ತತ್ವಗಳ ಸಾರ ಸರ್ವಸ್ವವೆನಿಸಿದ 'ಹರಿಕಥಾಮೃತಸಾರ'ದ ಒಂದೊಂದು ಶಬ್ದದಿಂದಲೂ ಪ್ರಮೇಯಕಿಡಿಗಳು ಚಿಮ್ಮುತ್ತವೆ. ಇದು ದ್ವೈತ ಸಿದ್ಧಾಂತ ನಿರೂಪಣೆಯ ಸಮಗ್ರ ದಾಸಸಾಹಿತ್ಯದ ಪ್ರತಿ ನಿಧಿ ಎನಿಸಿದೆ. ವೇದಾಂತ ವಿಚಾರಗಳ ರಹಸ್ಯ - ಸ್ವಾರಸ್ಯಗಳೆಲ್ಲ ಮಡುಗಟ್ಟಿ ಮಧ್ವಸಿದ್ಧಾಂತದ ಕೈಪಿಡಿ ಎನಿಸಿದೆ. ಇಂತಹ ಮೌಲಿಕ ಕೃತಿಯನ್ನು ನೀಡಿದ ಜಗನ್ನಾಥದಾಸರಿಗೆ ಕನ್ನಡ ಸಾಹಿತ್ಯ ಋಣಿಯಾಗಿದೆ.'* ಎನ್ನುವ ಡಾ. ಆರ್.ಜಿ. ಗುಡಿಯವರ ಮಾತನ್ನು ಅಲ್ಲಗಳೆಯಲಾಗದು

---

* ದಾಸಸಾಹಿತ್ಯ : ಡಾ. ಆರ್.ಜಿ.ಗುಡಿ. ಪು. ೩೦೫

ಸಹಾಯಕ ಗ್ರಂಥಗಳು :

೧) ದಾಸ ಸಾಹಿತ್ಯ : ಡಾ. ಆರ್.ಜಿ. ಗುಡಿ

೨) ದಾಸ ಸಾಹಿತ್ಯ ದರ್ಶನ : ಸಂ. ಎಚ್ಚೆಸ್ಕೆ

ಇಲ್ಲಿಯ ಪದ್ಯಗಳನ್ನು ಕೆ.ಎಸ್.ಶೇಷಗಿರಿ ಅವರ ಜಗನ್ನಾಥದಾಸರು ಲೇಖನದಿಂದ ಆಯ್ದುಕೊಂಡಿರುವೆ

# ಕನ್ನಡ : ಕೆಲವು ಚಿಂತನೆಗಳು

**– ಟಿ.ಪಿ. ಅಶೋಕ**

ನಾವು ಇಂದು ತುಂಬಾ ಸಂಕೀರ್ಣವಾದ ಸನ್ನಿವೇಶದಲ್ಲಿ ಬದುಕುತ್ತಿದ್ದೇವೆ. ನಮ್ಮ ಸುತ್ತಣ ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ವಿದ್ಯಮಾನಗಳು ಎಷ್ಟು ಕ್ಷಿಪ್ರಗತಿಯಲ್ಲಿ ಇವೆ ಎಂದರೆ ಅವುಗಳ ಒಳ ಹಣಿಗೆಗಳ ಸ್ವರೂಪವನ್ನೇ ನಮಗೆ ಸರಿಯಾಗಿ ಮನದಟ್ಟು ಮಾಡಿಕೊಳ್ಳಲು ಆಗುತ್ತಿಲ್ಲ. ಒಂದೆಡೆ ಆರ್ಥಿಕ ಉದಾರೀಕರಣ, ಇನ್ನೊಂದು ಕಡೆ ಸಮಾಜವಾದ, ಸಾಮಾಜಿಕ ನ್ಯಾಯಗಳ ಮಾತು; ಒಂದು ಕಡೆ ತೀವ್ರಗತಿಯ ಕೈಗಾರಿಕೀಕರಣ ತನ್ಮೂಲಕ ಆಧುನಿಕೀಕರಣದ ಪ್ರಕ್ರಿಯೆಗಳು, ಇನ್ನೊಂದು ಕಡೆ ಬಲಿಷ್ಟವಾಗುತ್ತಿರುವ ರೈತ ಚಳುವಳಿ, ಪರಿಸರ ಚಳುವಳಿಗಳು. ಒಂದು ಕಡೆ ಬಹುರಾಷ್ಟ್ರೀಯ ಕಂಪೆನಿಗಳಿಗಾಗಿ ಆಹ್ವಾನ, ಸ್ವಾಗತ, ಬೇಡಿಕೆ; ಇನ್ನೊಂದು ಕಡೆ ಸ್ವದೇಶಿ, ಸ್ವರಾಜ್ಯಗಳ ಮಾತು. ಒಂದು ಕಡೆ ಏಕತೆ, ಐಕ್ಯತೆಗಳ ಕೂಗು, ಇನ್ನೊಂದೆಡೆ ಸಾಂಸ್ಕೃತಿಕ ಅನನ್ಯತೆಯ, ವಿಕೇಂದ್ರೀಕರಣಗಳ ಹಂಬಲ. ಹೀಗೆ, ತದ್ವಿರುದ್ಧ ಸೆಳೆತಗಳಲ್ಲಿ ನಮ್ಮ ಜೀವನ ಸಾಗಿದೆ. ಕನ್ನಡ ಚಳುವಳಿ ಹೆಚ್ಚು ವಿಸ್ತೃತವಾಗುತ್ತಿದೆ, ವ್ಯಾಪಕವಾಗುತ್ತಿದೆ, ನಿಜ. ಆದರೆ ಇಂಗ್ಲಿಷ್ ಮೀಡಿಯಂ ಸ್ಕೂಲುಗಳು, ವಿದೇಶಿ ಸಂಸ್ಕೃತಿಯನ್ನು ನಮ್ಮ ನಡುಮನೆಗೇ ತಂದಿರುವ ದೂರದರ್ಶನದ ಹಲವು ಚಾನೆಲ್‌ಗಳು ಕನ್ನಡ ಚಳುವಳಿಗಿಂತ ಹೆಚ್ಚು ಜನಪ್ರಿಯವೂ, ಪ್ರಭಾವಶಾಲಿಯೂ ಆಗಿವೆ. ದಲಿತ ಸಂಘರ್ಷಸಮಿತಿಯು ಒಂದು ಕಡೆ ಬಲಿಷ್ಟವಾಗುತ್ತಿದ್ದರೆ, ಇನ್ನೊಂದೆಡೆ ಸಂಘ ಪರಿವಾರ ವಿರಾಟ್ ಸ್ವರೂಪದಲ್ಲಿ ಬೆಳೆಯುತ್ತಿದೆ. ಒಟ್ಟಿನಲ್ಲಿ ಹೇಳಬೇಕಾದರೆ ಇಂಥ ಸಂಕೀರ್ಣ ಸನ್ನಿವೇಶದಲ್ಲಿ ಕನ್ನಡತನದ – ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಗಳ – ಪ್ರಶ್ನೆಗಳನ್ನು ಉಳಿದ ಗಂಭೀರ ಪ್ರಶ್ನೆಗಳಿಂದ ಪ್ರತ್ಯೇಕಿಸಿ ಅಲಾಯಿದ ಚಿಂತಿಸಲು ಬರುವುದಿಲ್ಲ. ಕನ್ನಡ ಕ್ರಮೇಣ ತನ್ನ ಶಕ್ತಿಯನ್ನು ಕಳೆದುಕೊಳ್ಳುತ್ತಿದೆ ಎಂದು ಹೇಳುವಾಗ ಅದೇ ಸಂದರ್ಭದಲ್ಲಿ ನಮ್ಮ ಜೀವನಕ್ರಮ ಆಶೋತ್ತರಗಳೇ ನಿರ್ಣಾಯಕವಾಗಿ ಬದಲಾಗುತ್ತಿರುವ ಪರಿಯನ್ನು ಗಣನೆಗೆ ತೆಗೆದುಕೊಳ್ಳದೇ ಇರಲು ಸಾಧ್ಯವಿಲ್ಲ. ಏಕೆಂದರೆ ಸದ್ಯದ ಸಂದರ್ಭದಲ್ಲಿ ಅಪಾಯಕ್ಕೆ ಒಳಗಾಗುತ್ತಿರುವುದು ಕನ್ನಡ ಮಾತ್ರ ಅಲ್ಲ. ಕನ್ನಡ ನಾಡು ಇಂದು ತನ್ನ ಗ್ರಾನೈಟ್‌ನ್ನು ಕಳೆದುಕೊಳ್ಳುತ್ತಿದೆ. ಕರ್ನಾಟಕ ತನ್ನ ಪಶ್ಚಿಮ ಘಟ್ಟಗಳಲ್ಲಿನ ಪ್ರಾಕೃತಿಕ ಸಂಪತ್ತನ್ನು ಕಳೆದುಕೊಳ್ಳುತ್ತಿದೆ.

ಖಾಸಗೀಕರಣದಿಂದ ಕಾರ್ಮಿಕರು ತಮ್ಮ ಕನಿಷ್ಠ ಸವಲತ್ತುಗಳಿಂದ ವಂಚಿತರಾಗುತ್ತಿದ್ದಾರೆ. ಗ್ಯಾಟ್‌ನಿಂದ ನಮ್ಮ ಜನಪದ ಬಹುಕಷ್ಟದಿಂದ ರೂಪಿಸಿಕೊಂಡು ಬಂದ ಸಾಮಾಜಿಕ ನ್ಯಾಯದ ಕಲ್ಪನೆ ಅಪ್ರಸ್ತುತವಾಗುತ್ತಿದೆ. ಹಿಂದೆ 'ನಮ್ಮನ್ನು ದಿಲ್ಲಿಯವರು ಆಳುತ್ತಿದ್ದಾರೆ, ಎಂದು ಹೇಳುತ್ತಿದ್ದೆವು. ಆದರೆ ಈಗ ನಮ್ಮ ದೇಶವೇ ಅಮೆರಿಕ - ಯೂರೋಪುಗಳಿಂದ ನಿರ್ದೇಶನಗಳನ್ನು ಪಡೆಯುತ್ತದೆ. ವಿಶ್ವಬ್ಯಾಂಕ್. ಐ.ಎಂ. ಎಫ್.ಗಳು ನಮ್ಮ ದೇಶದ ಯೋಜನೆಗಳನ್ನು ನಿರೂಪಿಸುತ್ತಿವೆ. ನಿರ್ದೇಶಿಸುತ್ತಿವೆ. ನಾವು ಯಾವ ಪುಸ್ತಕಗಳನ್ನು ಓದಬೇಕು; ಯಾವ ಸಿನೆಮಾ ನೋಡಬೇಕು; ಯಾವ ಹಾಡು ಕೇಳಬೇಕು ಎಂಬ ಸಾಂಸ್ಕೃತಿಕ ವಿಷಯಗಳಲ್ಲಿ ಮಾತ್ರವಲ್ಲ, ನಮ್ಮ ರೈತರು ಯಾವ ಬೀಜಗಳನ್ನು ಬಿತ್ತಬೇಕು, ಯಾವ ಬೆಳೆಗಳನ್ನು ಬೆಳೆಯಬೇಕು, ನಮ್ಮ ಕೈಗಾರಿಕೆಗಳು ಯಾವ ಉತ್ಪನ್ನಗಳನ್ನು ಉತ್ಪಾದಿಸಬೇಕು ನಮ್ಮ ವ್ಯಾಪಾರಿಗಳು ಏನನ್ನು ಎಷ್ಟಕ್ಕೆ ಮಾರಬೇಕು, ಗ್ರಾಹಕರು ಏನನ್ನು ಕೊಳ್ಳಬೇಕು ಎಲ್ಲವನ್ನೂ ಹೊರಗಿನ ಶಕ್ತಿಗಳು ನಿಯಂತ್ರಿಸುವ ಕಾಲದಲ್ಲಿ ನಾವು ಬದುಕುತ್ತಿದ್ದೇವೆ. ಕೊನೆಗೆ ನಾವು ಯಾವ ಕೋಳಿಯನ್ನು ತಿನ್ನಬೇಕು, ಯಾವ ಬಟ್ಟೆಗಳನ್ನು ಹಾಕಿಕೊಳ್ಳಬೇಕು ಎಂದು ದೈನಿಕಗಳೂ ಸಂಪೂರ್ಣ ನಮ್ಮ ಆಯ್ಕೆಯ ವಿಷಯಗಳಾಗಿ ಉಳಿದಿಲ್ಲ. ಈ ದೇಶದ ನೌಕರರ, ಕಾರ್ಮಿಕ ವೇತನ - ಭತ್ಯೆಗಳನ್ನೂ, ಈ ದೇಶ ಉತ್ಪಾದಿಸಿದ ವಸ್ತುಗಳಿಗೆ ಬೆಲೆಗಳನ್ನೂ ಹೊರಗಿನವರೇ ನಿರ್ಧರಿಸುವ ಕಾಲದಲ್ಲಿ ಕನ್ನಡದ ಪ್ರಶ್ನೆಯನ್ನು ಉಳಿದ ಜ್ವಲಂತ ಪ್ರಶ್ನೆಗಳಿಂದ ಪ್ರತ್ಯೇಕಿಸಿ, ಏಕೈಕ ಮುಖವಾದ ಪ್ರಶ್ನೆಯಾಗಿ ಚರ್ಚಿಸಲು ಸಾಧ್ಯವಾಗುವುದಿಲ್ಲ. ಅಂದರೆ ಕನ್ನಡದ ಪ್ರಶ್ನೆಯನ್ನು ಕೇವಲ ಅಭಿಮಾನದ ಪ್ರಶ್ನೆಯಾಗಿ, ಭಾವನಾತ್ಮಕ ನೆಲೆಯಲ್ಲಿ ಸರಳೀಕರಿಸದೆ ನಮ್ಮ ಎಲ್ಲ ಬಿಕ್ಕಟ್ಟುಗಳ ಒಟ್ಟಂದದಲ್ಲಿ ಒಂದು ಸಮಗ್ರ ಚಿಂತನೆ - ಹೋರಾಟಗಳ ನೆಲೆಯಲ್ಲಿ ಪರಿಭಾವಿಸಿದಾಗ ಮಾತ್ರ ನಮ್ಮ ಮುಂದಿನ ಹೆಜ್ಜೆಗಳು ಹೆಚ್ಚು ಖಚಿತವೂ, ಧೃಢವೂ ಅರ್ಥಪೂರ್ಣವೂ ಆದಾವು. ಕನ್ನಡವನ್ನು ಕೇವಲ ಒಂದು ಭಾಷೆಯಾಗಿ ನೋಡದೆ ಸಮಸ್ತ ಕನ್ನಡ ಪರಿಸರದ, ಜನಗಳ, ರಾಜಕೀಯ - ಸಾಂಸ್ಕೃತಿಕ - ಆರ್ಥಿಕ - ಸಾಮಾಜಿಕ ಆಶೋತ್ತರಗಳ ಕೇಂದ್ರವಾಗಿ ಕಲ್ಪಿಸಿಕೊಳ್ಳಲು ಸಾಧ್ಯವಾದಾಗ ಮಾತ್ರ ಕನ್ನಡ ಚಳುವಳಿ ಬಲಗೊಳ್ಳುವುದು. ಇಲ್ಲದ್ದಿರೆ ಅದು ಒಂದು ಲೋಕಾಭಿರಾಮದ, ಹೆಚ್ಚೆಂದರೆ ಸೀಮಿತವಾದ ಸಾಂದರ್ಭಿಕ ಸ್ಫೋಟವಾಗಿ ಉಳಿದು ಬಿಡುತ್ತದೆ. ಪ್ರತ್ಯೇಕ - ಪ್ರತ್ಯೇಕವಾಗಿ ಅಲ್ಲಲ್ಲಿ ಪರಸ್ಪರ ಸಂಬಂಧವೇ ಇಲ್ಲವೇನೋ ಎಂಬಂತೆ ನಡೆಯುತ್ತಿರುವ ಕನ್ನಡ ಚಳುವಳಿ ದಲಿತ ಚಳುವಳಿ, ರೈತರ ಚಳುವಳಿ, ಪರಿಸರ ಚಳುವಳಿ, ಸ್ವದೇಶಿ ಚಳುವಳಿ, ಕಾರ್ಮಿಕ ಚಳುವಳಿಗಳು ತಮ್ಮ ಸಮಾನ ವೈರಿಗಳನ್ನು ಒಟ್ಟಿಗೇ ಎದುರಿಸುವ ಅಗತ್ಯವನ್ನು ಕಂಡುಕೊಳ್ಳುವವರೆಗೆ ಅವು ಬಿಡಿ ಬಿಡಿ ಲಾಬಿಗಳಾಗಿ ಮಾತ್ರ ಉಳಿದುಕೊಳ್ಳುವುವು. ಈ ಚಳುವಳಿಗಳ

ನಡುವೆ ಅರ್ಥಪೂರ್ಣವಾದ ಸಂವಾದ ಇಂದಿನ ತುರ್ತು ಅಗತ್ಯವಾಗಿದೆ. ಇಂಥದೊಂದು ಸಂವಾದಕ್ಕೆ ಕನ್ನಡ ಸಾಹಿತ್ಯ ಪರಿಷತ್ತು ವೇದಿಕೆಯಾಗಬೇಕು. ವಿವಿಧ ಅಕಾಡೆಮಿಗಳು, ವಿಶ್ವವಿದ್ಯಾನಿಲಯಗಳು, ಕನ್ನಡಸಂಸ್ಕೃತಿ ಇಲಾಖೆ ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಕನ್ನಡ ಪುಸ್ತಕ ಪ್ರಾಧಿಕಾರ ಇವುಗಳಿಗೆಲ್ಲ ತಮ್ಮದೇ ಆದ ಘೋಷಿತ ಕಾರ್ಯಸೂಚಿ, ಕಾರ್ಯವಿಧಾನ ಇವೆ. ಆದರೆ ಕನ್ನಡ ಸಾಹಿತ್ಯ ಪರಿಷತ್ತಿಗೆ ಇವೆಲ್ಲವುಗಳಿಗಿಂತ ದೀರ್ಘವಾದ ಇತಿಹಾಸವಿದೆ; ಇವೆಲ್ಲವುಗಳಿಗಿಂತ ಹೆಚ್ಚು ಮುಕ್ತವೂ, ವಿಸ್ತೃತವಾದ ಕೆಲಸಗಳನ್ನುಮಾಡಲು ಅದರ ಸ್ವರೂಪದಲ್ಲಿಯೇಹೆಚ್ಚಿನ ಅವಕಾಶಗಳಿವೆ. ಹಿಂದೆ ಕೂಡ ಕನ್ನಡ ಸಾಹಿತ್ಯ ಪರಿಷತ್ತು ಸಾಹಿತ್ಯಕ್ಕಷ್ಟೇ ತನ್ನನ್ನು ಮಿತಿಗೊಳಿಸಿಕೊಂಡ ಸಂಸ್ಥೆಯಾಗಿರಲಿಲ್ಲ. ಸಾಹಿತ್ಯದ ಪ್ರಕಟಣೆ, ಚರ್ಚೆ, ಪ್ರಸಾರಗಳಿಗೆ ಈಗ ಹಲವು ಹತ್ತು ಸಂಸ್ಥೆಗಳಿವೆ. ಆದರೆ ಕನ್ನಡವನ್ನು ಒಟ್ಟು ಕನ್ನಡ ಪರಿಸರವಾಗಿ ಕಾಣಬಲ್ಲ ಒಂದು ಮಹತ್ವಾಕಾಂಕ್ಷಿ ವೇದಿಕೆ ಈಗ ಬೇಕಾಗಿದೆ. ಕನ್ನಡ ಸಾಹಿತ್ಯ ಪರಿಷತ್ತು ಇಂಥ ಒಂದು ವೇದಿಕೆಯಾಗಬೇಕಾಗಿದೆ. ಆಗ ಮಾತ್ರ ಅದು ತನ್ನ ಅನನ್ಯತೆಯನ್ನು ಉಳಿಸಿಕೊಳ್ಳಲು ಸಾಧ್ಯ; ತನ್ನ ಕಾರ್ಯಸೂಚಿ, ಕಾರ್ಯವಿಧಾನಗಳನ್ನು ಪುನರ್ ನಿರೂಪಿಸಿಕೊಳ್ಳಲು ಸಾಧ್ಯ. ಈ ಹಿಂದೆ ಪರಿಷತ್ತು ಕನ್ನಡ ನಾಡಿನ ನೆಲ - ಜಲ ಸಮಸ್ಯೆಗಳನ್ನು ತನ್ನ ಚಟುವಟಿಕೆಗಳ ಪರಿಧಿಗೆ ತಂದುಕೊಂಡಿರಲಿಲ್ಲವೆಂದಲ್ಲ. ಆದರೆ ಕನ್ನಡ ನಾಡಿನ ನೆಲ - ಜಲಗಳಿಗೆ ನಿಜಕ್ಕೂಕುತ್ತು ಬಂದಿರುವುದು, ನೆರೆಯ ತಮಿಳ್ನಾಡು, ಮಹಾರಾಷ್ಟ್ರ, ಆಂಧ್ರ, ಕೇರಳಗಳಿಂದಲ್ಲ. ಅಥವಾ ಅವುಗಳಿಂದ ಮಾತ್ರ ಅಲ್ಲ. ಹೆಚ್ಚೆಂದರೆ ಅದು ಹಂಚಿಕೆಯ ಪ್ರಶ್ನೆ ಮಾತ್ರ, ಕೇವಲ ಹಂಚಿಕೆಯ ಪ್ರಶ್ನೆಯಾದ ಕಾವೇರಿ ನೀರಿನ ವಿವಾದವನ್ನು ನಾವು ದೊಡ್ಡದು ಮಾಡಿದ್ದೇವೆ. ಆದರೆ ತುಂಗಾ ಮೂಲವೇ ಬತ್ತಿ ಹೋಗುವ ಅಪಾಯಕಾರಿ ವಿದ್ಯಮಾನದ ಬಗ್ಗೆ ನಾವು ಆಗಬೇಕಾದಷ್ಟು ಜಾಗೃತರಾಗಿಲ್ಲ. ಎಂ.ಆರ್.ಪಿ.ಎಲ್.ನಿಂದ ದಕ್ಷಿಣಕನ್ನಡದ ಕಡಲು ತೀವ್ರವಾದ ಮಾಲಿನ್ಯಕ್ಕೆ ಒಳಗಾಗುತ್ತಿರುವುದು ನಮ್ಮಲ್ಲಿ ಎಷ್ಟೋಜನಕ್ಕೆ ಗಮನಕ್ಕೇ ಬಂದಿಲ್ಲ. ನೆಲದ ಪ್ರಶ್ನೆಯೂ ಅಷ್ಟೇ. ಭೂಸುಧಾರಣೆಯ ಮೂಲತತ್ತ್ವಕ್ಕೇ ನಾವಿಂದು ಕೊಡಲಿ ಇಡುತ್ತಿದ್ದೇವೆ. ನೆರೆ ಭಾಷಿಕರು ಕನ್ನಡದ ನೆಲವನ್ನು ಕೊಳ್ಳುತ್ತಿರುವ ಬಗ್ಗೆ ಹುಯ್ಯಲೆಬ್ಬಿಸುತ್ತಿರುವ ನಮಗೆ ಇಡೀ ದೇಶ ಮತ್ತೆ ಅಮೆರಿಕಾ -ಯುರೋಪುಗಳ ವಸಾಹತಾಗಿ ಪರಿವರ್ತಿತವಾಗುತ್ತಿರುವ ಭೀಕರ ಸತ್ಯದ ಪರಿವೇ ಇದ್ದಂತಿಲ್ಲ. ಉದಾಹರಣೆಗಳನ್ನು ಬೆಳೆಸದೆ ಒಟ್ಟಿನಲ್ಲಿ ಸೂತ್ರೀಕರಿಸುವುದಾದರೆ ಒಂದು ನವಸಾಮ್ರಾಜ್ಯಶಾಹಿ, ನವ ವಸಾಹತು ಶಾಹಿ ಸಂದರ್ಭದಲ್ಲಿ ಕನ್ನಡ ನೆಲ-ಜಲಗಳ ಸಂರಕ್ಷಣೆಯ ಪ್ರಶ್ನೆಗಳನ್ನೂ ಸಂಸ್ಕೃತಿ - ಪರಿಸರಗಳ ಮಾಲಿನ್ಯದ ಪ್ರಶ್ನೆಗಳನ್ನೂ ನಾವು ಆಳವಾಗಿ, ಸೂಕ್ಷ್ಮವಾಗಿ, ಸಮಗ್ರವಾಗಿ ಚಿಂತಿಸಿ ಕಾರ್ಯಪ್ರವೃತ್ತರಾಗಬೇಕಾಗಿದೆ.

ವ್ಯಾಪಾರಕ್ಕಾಗಿ ಬಂದ ಬ್ರಿಟಿಷರು ಇಂಡಿಯಾದಲ್ಲಿ ಈಸ್ಟ್ ಇಂಡಿಯಾ ಕಂಪೆನಿಯನ್ನು ಸ್ಥಾಪಿಸಿದರು. ಅದರ ಮುಂದಿನ ಇತಿಹಾಸವನ್ನು ನಾವು ಬಲ್ಲೆವು. ವಸಾಹತುಶಾಹಿ ಆಕ್ಷಿಕ ಮುಂದೆ ಈ ಉಪಖಂಡದ ಸಾಂಸ್ಕೃತಿಕ ಸಾಮಾಜಿಕ, ರಾಜಕೀಯ, ಆರ್ಥಿಕ ವಿದ್ಯಮಾನಗಳನ್ನು ನಿಯಂತ್ರಿಸಿದ ಬಗೆಯೂ ಚರಿತ್ರೆಯಲ್ಲಿ ದಾಖಲಾಗಿ ಹೋಗಿದೆ. ಆದರೆ ನಾವು ಇತಿಹಾಸದಿಂದ ಕಲಿಯಬೇಕಾದ ಪಾಠಗಳನ್ನು ಇನ್ನೂ ಕಲಿತಿಲ್ಲ. ಬದಲಾಗಿ ನವ ವಸಾಹತುಶಾಹಿ, ನವ ಸಾಮ್ರಾಜ್ಯಶಾಹಿ ರಾಜಕಾರಣಕ್ಕೆ ನಮ್ಮನ್ನು ಒಪ್ಪಿಸಿಕೊಳ್ಳುತ್ತಿದ್ದೇವೆ. ಅದ್ದರಿಂದಲೇ ಇಂದು 'ಕನ್ನಡ ಪ್ರಜ್ಞೆ' ಎಂದರೆ ಇವೆಲ್ಲ ಸಂಕೀರ್ಣ ಸತ್ಯಗಳಿಗೆ ಜಾಗ್ರತರಾಗಿ ನಮ್ಮ ಬಾಳನ್ನು ಹೊಸದಾಗಿ ರೂಪಿಸಿಕೊಳ್ಳುವತ್ತ ಸನ್ನದ್ಧರಾಗುವುದೇ ಆಗಿದೆ. ವಸಾಹತುಶಾಹಿ ಪೂರ್ವದ ಭಾರತದಲ್ಲಿ ಎಲ್ಲವೂ ಸರಿಯಾಗಿತ್ತು ಎಂಬುದು ಈ ಮಾತಿನ ಅರ್ಥವಲ್ಲ. ನಾವು ಭೂತಕಾಲಕ್ಕೆ ಮರಳುವುದು ಸಾಧ್ಯವೂ ಇಲ್ಲ, ಅಪೇಕ್ಷಣೀಯವೂ ಅಲ್ಲ. ಆದರೆ ಅಲ್ಲಮ ಹೇಳುವಂತೆ ಹಿಂದಣ ಹೆಜ್ಜೆಯನರಿಯದೆ ಮುಂದಣ ಹೆಜ್ಜೆಯನಿಡಲಾಗದು.

ಈ ಹಿನ್ನೆಲೆಯಲ್ಲಿ ಕನ್ನಡ ಸಾಹಿತ್ಯದ ಅಭ್ಯಾಸವನ್ನು ಹೊಸ ರೀತಿಗಳಲ್ಲಿ ಮಾಡಬೇಕಾದದ್ದು ಇಂದಿನ ಸಾಂಸ್ಕೃತಿಕ ಅನಿವಾರ್ಯತೆಯಾಗಿದೆ. ಇತಿಹಾಸದ ಪ್ರತಿಯೊಂದು ಘಟ್ಟವೂ ಚರಿತ್ರೆಯನ್ನು ಪರಿಭಾವಿಸಿಕೊಳ್ಳುವ ಹೊಸ ನೆಲೆಗಳನ್ನು ಒತ್ತಾಯಿಸುತ್ತಿರುತ್ತದೆ. ಈ ನವ ವಸಾಹತುಶಾಹಿ ಸಂದರ್ಭದಲ್ಲಿ ಆಧುನಿಕತೆ ಮತ್ತು ವಸಾಹತು ಪ್ರಶ್ನೆಗಳು ವೈಚಾರಿಕ ಜಿಜ್ಞಾಸೆಯ ಕೇಂದ್ರಕ್ಕೆ ಬಂದು ನಿಂತಿವೆ. ಹಾಗಾಗಿ ಕೇವಲ ಕಾಲಾನುಕ್ರಮಣಿಕೆಯ ನೆಲೆಯಲ್ಲಿ ನಡೆಸುವ ಅಧ್ಯಯನಗಳು ತಮ್ಮ ಪರಿಮಿತಿಯನ್ನು ತೋರಿ ಬಿಟ್ಟಿವೆ. ಜೈನ ಸಾಹಿತ್ಯ, ವೀರಶೈವ ಸಾಹಿತ್ಯ, ಬ್ರಾಹ್ಮಣ ಸಾಹಿತ್ಯ ಎಂಬ ವರ್ಗೀಕರಣ, ಇಲ್ಲವೇ ಸಾಹಿತ್ಯ ಪ್ರಕಾರಗಳ ನೆಲೆಯ ವರ್ಗೀಕರಣಗಳೂ ಇಂದಿನ ಸಾಂಸ್ಕೃತಿಕ ಅಗತ್ಯಗಳನ್ನು ಪೂರೈಸಲಾರವು. ಆಧುನಿಕ ಕನ್ನಡ ಸಾಹಿತ್ಯದ ಸಂದರ್ಭಕ್ಕೆ ಬಂದರೂ ನವೋದಯ, ಪ್ರಗತಿಶೀಲ, ನವ್ಯ, ನವ್ಯೋತ್ತರ, ದಲಿತ, ಬಂಡಾಯ ಎಂಬ ವರ್ಗೀಕರಣಗಳ ಸೀಮಿತತೆಯ ಬಗ್ಗೆಯೂ ಅತೃಪ್ತತೆ ಬೆಳೆಯುತ್ತಿದೆ. ವಸಾಹತುಶಾಹಿ ಪೂರ್ವ, ವಸಾಹತುಶಾಹಿ ಸಂದರ್ಭ ಮತ್ತು ನವವಸಾಹತುಶಾಹಿ ಸಂದರ್ಭಗಳ ಹಿನ್ನೆಲೆಯಲ್ಲಿ ನಡೆಸುವ ಅಧ್ಯಯನಗಳು ಹೆಚ್ಚು ಪ್ರಸ್ತುತವೂ, ವ್ಯಾಪಕವೂ ಆಗಬಲ್ಲವು. ಇಂಥ ಅಧ್ಯಯನಗಳು ಕೇವಲ ಸಾಹಿತ್ಯಿಕ ಅಧ್ಯಯನಗಳಾಗಿರದೆ ವಿಶಾಲವಾದ ಅರ್ಥದಲ್ಲಿ ಸಂಸ್ಕೃತಿಯ ಅಧ್ಯಯನಗಳೇ ಆಗಿರುತ್ತವೆ ಎಂಬ ಮಾತನ್ನು ಒತ್ತಿ ಹೇಳಬೇಕಾಗಿಲ್ಲ.

ಕನ್ನಡ ಸಾಹಿತ್ಯವು ಮೊದಲಿನಿಂದಲೂ ಪ್ರಖರವಾದ ಸಾಮಾಜಿಕ ಮತ್ತು ರಾಜಕೀಯ ಪ್ರಜ್ಞೆಯನ್ನು ಒಳಗೊಂಡಿದೆ. ನಮ್ಮ ಆದಿ ಕವಿಯಾದ ಪಂಪನಲ್ಲೇ

ಜಾತಿಯ ಪ್ರಶ್ನೆ, ಪ್ರಭುತ್ವದ ಪ್ರಶ್ನೆಗಳು ಕಾವ್ಯದ ಕೇಂದ್ರದಲ್ಲಿದೆ. ಸಾಮಾಜಿಕ, ರಾಜಕೀಯ ವಿಷಮ ಸ್ಥಿತಿಗಳ ಮಂಡನೆ ಮತ್ತು ಅವುಗಳನ್ನು ದಾಟಬಹುದಾದ ಸಾಧ್ಯತೆಗಳ ಬಗ್ಗೆ ಪಂಪನ ಕಾವ್ಯ ಗಾಢವಾಗಿ ಚಿಂತಿಸಿದೆ. ಅದು ಕೇವಲ ಹಿಂದಿನ ಮಹಾಭಾರತದ ಕನ್ನಡ ರೂಪವಲ್ಲ. ಅಥವಾ ಜೈನ ಮತದ ಸರಳ ಮಂಡನೆಯಲ್ಲ. ಮನುಷ್ಯನ ಸ್ಥಿತಿ ಸಾಧ್ಯತೆಗಳನ್ನು ಆಳವಾಗಿ ಧ್ಯಾನಿಸುವ, ಆ ಕಾಲದ ಸಾಮಾಜಿಕ, ರಾಜಕೀಯ, ಧಾರ್ಮಿಕ ಆಕೃತಿಗಳನ್ನು ವಿಮರ್ಶೆಗೆ ಒಡ್ಡುವ ಪಂಪನ ಪ್ರತಿಭೆಯ ಮರು ಪರಿಶೀಲನೆಯಿಂದ ಅವನನ್ನು ಹೆಚ್ಚು ಪ್ರಸ್ತುತಗೊಳಿಸಿಕೊಳ್ಳಬಹುದಾಗಿದೆ. ಅಂದಿನಿಂದ ಇಂದಿನವರೆಗೆ ಕನ್ನಡ ಲೇಖಕ ಎಲ್ಲ ಸಾಂಸ್ಥಿಕ ಮೌಲ್ಯಗಳನ್ನು, ಆಕೃತಿಗಳನ್ನು ಪ್ರಶ್ನಿಸಿಕೊಂಡೇ ಬಂದಿದ್ದಾನೆ. ತನ್ನ ಕಾಲದ ವಾಸ್ತವಗಳಿಗೆ ಕುರುಡಾಗದೆ, ಆದರೆ ಕೇವಲ ವರದಿಗಾರ ಅಥವಾ ನಿರೂಪಕನಾಗದೆ ಕನ್ನಡ ಲೇಖಕ ಉದ್ದಕ್ಕೂ ಗಾಢವಾದ ವಾಸ್ತವ ಪ್ರಜ್ಞೆ, ಪ್ರತಿಭಟನೆ, ಪ್ರಗತಿಶೀಲತೆಗಳನ್ನು ತನ್ನ ಬರವಣಿಗೆಗಳಲ್ಲಿ ತೋರುತ್ತ ಬಂದಿದ್ದಾನೆ. ಧಾರ್ಮಿಕ ಪರಿಭಾಷೆಯಲ್ಲಿ ಮಾತನಾಡಿದರೂ ಸಾಂಸ್ಥಿಕ ಧರ್ಮವನ್ನು ಎತ್ತಿ ಹಿಡಿಯದ, ಪರಂಪರೆಯೊಂದಿಗೆ ಅನುಸಂಧಾನ ನಡೆಸಿಯೂ ಅದಕ್ಕೆ ಜೋತುಬೀಳದ, ಆಧ್ಯಾತ್ಮಿಕ ಎತ್ತರಗಳಿಗೆ ತಲುಪಿದಾಗಲೂ ಪಲಾಯನವಾದಿಯಾಗದ, ನಿರಂತರತೆಯನ್ನು ಗಮನಿಸಿಯೂ ಯಥಾಸ್ಥಿತಿಯಾಗದ ಸಂಕೀರ್ಣ ರೀತಿ ಇದು. ಕುಮಾರ ವ್ಯಾಸನು ಕೃಷ್ಣಕತೆಯನ್ನು ಹೇಳಹೊರಟಿದ್ದರೂ ಅಂತಿಮವಾಗಿ ಒಂದು ಶ್ರೇಷ್ಠ ರಾಜಕೀಯ ಕಾವ್ಯವನ್ನೇ ಬರೆದಿದ್ದಾನೆ. ಸಂಸರು ಮೈಸೂರು ಮಹಾರಾಜರ ವಂಶಾವಳಿಗಳ ಬಗ್ಗೆ ಬರೆದರೂ ಅದು ರಾಜರ ಕೀರ್ತನೆಯಾಗದೆ ರಾಜಪ್ರಭುತ್ವದ ತೀಕ್ಷ್ಣ ವಿಮರ್ಶೆಯೇ ಆಗುತ್ತದೆ. ಪಂಪ - ಕುಮಾರವ್ಯಾಸರು ಮಹಾಭಾರತದ ಕಥೆಯನ್ನೇ ತಮ್ಮ ಕಾವ್ಯದ ಮೂಲಭಿತ್ತಿಯನ್ನಾಗಿ ಮಾಡಿಕೊಂಡರೂ ಅದನ್ನು ತಮ್ಮ ಸಮಕಾಲೀನ ತುರ್ತು ತುಡಿತಗಳನ್ನು ಹೇಳಿಕೊಳ್ಳಲು ಸೃಜನಶೀಲ ರೂಪಾಂತರಗಳನ್ನು ಮಾಡಿಕೊಂಡರು. ಕುವೆಂಪು ರಾಮಾಯಣದ ಕಥೆಯನ್ನು ತೆಗೆದುಕೊಂಡಾಗ ತಮ್ಮ 'ಶ್ರೀ ರಾಮಾಯಣ ದರ್ಶನಂ' ನ್ನು ಇಪ್ಪತ್ತನೆಯ ಶತಮಾನದ ಮಹಾಕಾವ್ಯವನ್ನಾಗಿ ಮಾಡಿದರು. ಅಂದರೆ ತಮ್ಮ ವೈಯಕ್ತಿಕ ಅಗತ್ಯಗಳಿಗೆ, ತಮ್ಮ ಕಾಲದ ಅಗತ್ಯಗಳಿಗೆ ಒದಗಿ ಬರುವಂತೆಯೇ ಕನ್ನಡ ಲೇಖಕರು ತಮ್ಮ ಪರಂಪರೆಯನ್ನು ಪ್ರಸ್ತುತಗೊಳಿಸಿಕೊಂಡದ್ದು. ಇಂಥ ಹದ ಇಂದಿನ ವಿಮರ್ಶೆಗೂ ಬರಬೇಕಾಗಿದೆ. ಪ್ರಭುತ್ವಕ್ಕೆ ಇದಿರಾಗಿ ಅದರ ಸ್ವರೂಪ ಮತ್ತು ಮಿತಿಗಳನ್ನು ನಿರ್ದಯವಾಗಿ ಬಯಲಿಗೆಳೆದ ಕನ್ನಡ ಲೇಖಕ ತನ್ಮೂಲಕ ನಮ್ಮೆಲ್ಲರ ವೈಯಕ್ತಿಕ ಮತ್ತು ಸಾಮೂಹಿಕ ಜವಾಬ್ದಾರಿಗಳನ್ನೇ ಪರೋಕ್ಷವಾಗಿ ಸೂಚಿಸಿದ್ದಾನೆ.

ಅರಸು ರಾಕ್ಷಸ, ಮಂತ್ರಿಯೆಂಬುವ
ಮೊರವ ಹುಲಿ ಪರಿವಾರ ಹದ್ದಿನ
ನೆರವಿ ಬಡವರ ಬಿನ್ನಪವನಿನ್ನಾರು ಕೇಳುವರು ?
ಉರಿವುರಿವುತಿದೆ ದೇಶನಾವಿ
ನ್ನಿರಲುಬಾರದೆನುತ್ತ - ಜನಬೇ
ಸರಿಸ ಬೇಗಯುಲಿರದಲೇ ಭೂಪಾಲ ಕೇಳೆಂದ (ಸಭಾಪರ್ವ ೧-೬೨)

ಎಂದು ಕುಮಾರವ್ಯಾಸ ಬರೆದಾಗ ಅವನು ಮಹಾಭಾರತದ ಕಥೆಯಷ್ಟನ್ನೇ ಹೇಳುತ್ತಿದ್ದಾನೆಯೆ ? ಅವನು 'ತನ್ನ' ಕಾಲದ ದುಗುಡಗಳನ್ನು ಹೇಳುತ್ತಿದ್ದಾನೋ 'ನಮ್ಮ' ಕಾಲದ ದುಗುಡಗಳನ್ನು ಹೇಳುತ್ತಿದ್ದಾನೊ. ಇನ್ನು ವಚನಕಾರರಂತೂ ನಮ್ಮ ಸಂಸ್ಕೃತಿಯ ಮೂಲಭೂತ ಸಂರಚನೆಗಳನ್ನೇ ಪ್ರಶ್ನಿಸಿದರು. ಎಲ್ಲ ಬಗೆಯ ಯಾಜಮಾನ್ಯವನ್ನು ಧಿಕ್ಕರಿಸಿದರು. ಸಂದೇಹ, ಪ್ರತಿಭಟನೆಯ, ಭಿನ್ನಮತದ ನೆಲೆಗಳಲ್ಲಿ ಎಲ್ಲ ಬಗೆಯ ಪ್ರಭುತ್ವಗಳನ್ನು ವಿಮರ್ಶಿಸಿದರು. ಅಷ್ಟೇ ಅಲ್ಲ ಹೊಸ ಸಾಮಾಜಿಕ, ವ್ಯವಸ್ಥೆಯ, ಅಧ್ಯಾತ್ಮಿಕತೆಯ, ನೈತಿಕತೆಯ ಕನಸುಗಳನ್ನು ಕಂಡರು. ಅವುಗಳನ್ನು ಈಡೇರಿಸಿಕೊಳ್ಳಲು ಬೌದ್ಧಿಕ ಚಿಂತನೆಯ ಜೊತೆಜೊತೆಗೆ ಸಾಂಘಿಕ ಹೋರಾಟದ ನೆಲೆಗಳನ್ನೂ ರೂಢಿಸಿಕೊಂಡರು. ಹನ್ನೆರಡನೆಯ ಶತಮಾನದ ಈ ಚಳುವಳಿ ಏಕಕಾಲದಲ್ಲಿ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ಧಾರ್ಮಿಕ, ಆಧ್ಯಾತ್ಮಿಕ ಪ್ರಶ್ನೆಗಳನ್ನು ಒಳಗೊಂಡಿತ್ತು. ನಮ್ಮ ಕಾಲದ ಕನ್ನಡ ಚಳುವಳಿಗೆ ಇಂಥ ವ್ಯಾಪಕವಾದ, ಸಮಗ್ರವಾದ ಕಲ್ಪನೆ ಇರದಿದ್ದರೆ ಅದು ಸಾಂದರ್ಭಿಕ ಘೋಷಣೆಗಳಲ್ಲಿ, ಓಟಿನ ರಾಜಕಾರಣದಲ್ಲಿ, ಅರ್ಥಹೀನ ಅಬ್ಬರಗಳಲ್ಲಿ ಒಂದು ಚಳುವಳಿಯ ಕ್ರೂರ ಅಪಹಾಸ್ಯವಾಗಿ ಉಳಿದುಕೊಳ್ಳುವುದು. ಹನ್ನೆರಡನೆಯ ಶತಮಾನದ ನೆನಪು ಓಂದೆಂದಿಗಿಂತ ಈಗ ಹೆಚ್ಚು ಪ್ರಸ್ತುತವಾಗಿದೆ. ಸಮಾಜದ ಎಲ್ಲ ಸ್ತರಗಳಿಂದ ಬಂದವರು ಚಳುವಳಿಯಲ್ಲಿ ಪಾಲ್ಗೊಂಡಂತೆ, ವಚನಗಳನ್ನು ರಚಿಸಿದಂತೆ ಇಂದು ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಒಂದು ಹೊಸ ಉತ್ಕರ್ಷವನ್ನೇ ಕಾಣುತ್ತಿದ್ದೇವೆ. ಹಲವು ಬಗೆಯ ಸಾಮಾಜಿಕ - ಸಾಂಸ್ಕೃತಿಕ ಹಿನ್ನೆಲೆಯಿಂದ ಬಂದ ನೂರಾರು ತರುಣ- ತರುಣಿಯರು ಇಂದು ಸಾಹಿತ್ಯರಚನೆಯಲ್ಲಿ ತೊಡಗಿಕೊಂಡಿದ್ದಾರೆ. ಈ ಪ್ರಮಾಣದಲ್ಲಿ ದಲಿತರು, ಹಿಂದುಳಿದ ಜಾತಿ-ವರ್ಗಗಳಿಗೆ ಸೇರಿದವರು ಮತ್ತು ಮಹಿಳೆಯರು ಸಾಹಿತ್ಯ ರಚನೆಗೆ ತೊಡಗಿಕೊಂಡಿರುವುದು ಹನ್ನೆರಡನೆಯ ಶತಮಾನವನ್ನು ಬಿಟ್ಟರೆ ಈಗಲೇ. ಈ ನವೋತ್ಸಾಹವು ಕನ್ನಡ ವಚನಕಾರರಿಂದ ಅನೇಕ ಪಾಠಗಳನ್ನು ಕಲಿಯಬಹುದಾಗಿದೆ, ಕಲಿಯಬೇಕಾಗಿದೆ; ಅಂದರೆ ವಚನಸಾಹಿತ್ಯವನ್ನು ಕೇವಲ ಹನ್ನೆರಡನೆಯ ಶತಮಾನದ ವಿದ್ಯಮಾನವೆಂದು ಬಗೆಯದೆ ಇಂದಿನ ಅಗತ್ಯಗಳಿಗೂ ಪ್ರಸ್ತುತಗೊಳಿಸಿಕೊಳ್ಳಬೇಕಾಗಿದೆ. ಇಂದಿನ ಅಗತ್ಯಗಳಿಗೆ

ಪ್ರಸ್ತುತಗೊಳಿಸಿಕೊಳ್ಳುವುದೆಂದರೆ ಕೆಲವು ಬಿಡಿ ಪದಗಳು, ಸಾಲುಗಳು, ಯೋಚನೆಗಳನ್ನು ಹೆಕ್ಕಿಕೊಳ್ಳುವುದಲ್ಲ. ನಮ್ಮ ಒಟ್ಟಾರೆ ಓದಿನ, ಗ್ರಹಿಕೆಯ ಕ್ರಮಗಳನ್ನು ಬದಲಾಯಿಸಿಕೊಳ್ಳುವುದು; ಹೊಸದಾಗಿ ರೂಪಿಸಿಕೊಳ್ಳುವುದು.

ನವ ವಸಾಹತುಸಾಹಿ ಸಂದರ್ಭದಲ್ಲಿ ಸಾಹಿತ್ಯದ ಅಧ್ಯಯನವೆಂದರೆ ನವ ವಸಾಹತುಶಾಹಿ ಅನುಭವ ನಮ್ಮ ಸಾಹಿತ್ಯದಲ್ಲಿ ಪ್ರತಿಫಲಿತವಾಗಿರುವ ನೆಲೆಯ ಅಧ್ಯಯನವಷ್ಟೇ ಅಲ್ಲ. ಅದು ದೇಶೀಯ ಗ್ರಹಿಕೆಯ ಕ್ರಮಗಳ, ಅಭಿವ್ಯಕ್ತಿಕ್ರಮಗಳ, ಆಶೋತ್ತರಗಳ ಸ್ವರೂಪದ ಅಧ್ಯಯನವೂ ಹೌದು. ನಮ್ಮ ಸಂಸ್ಕೃತಿಯನ್ನು ವಸಾಹತುಶಾಹಿ-ನವವಸಾಹತುಶಾಹಿ ಕಣ್ಣುಗಳಿಂದ ನೋಡದೆ ಒಳಗಿನವರಾಗಿ ನೋಡುವುದು, ಪ್ರಶ್ನಿಸುವುದು, ಪರಿಶೀಲಿಸುವುದು. ಆಧುನಿಕತೆ ಎಂಬುದು, ವೈಚಾರಿಕತೆ ಎಂಬುದು, ಅಥವಾ ಜ್ಞಾನ ಎನ್ನುವುದು ಪಾಶ್ಚಾತ್ಯ ಮೂಲದಿಂದ ಮಾತ್ರ ಬಂದದ್ದಲ್ಲ. ಕರ್ನಾಟಕದ ಸಂಧರ್ಭವನ್ನೇ ನೋಡಿದರೂ ಹನ್ನೆರಡನೆಯ ಶತಮಾನದ ಚಳುವಳಿ ಹೇಗೆ ತನ್ನ ಕಾಲದ ಚೌಕಟ್ಟುಗಳಿಗೆ ಒಳಗಿನಿಂದಲೇ ಪ್ರತಿಕ್ರಿಯಿಸಿತು ಎಂಬುದು ವಿಶ್ವಕಲ್ಪನೆಯನ್ನೇ ತನ್ನ ಒಳಗಿನಿಂದ ರೂಪಿಸಿಕೊಳ್ಳಲು ಅದು ಶಕ್ತವಾಯಿತು. ಅದು ರೂಪಿಸಿಕೊಂಡ ವೈಚಾರಿಕ ಆಕೃತಿಗಳು ಮುಂದೆ ಹತ್ತೊಂಭತ್ತು ಇಪ್ಪತ್ತನೆಯ ಶತಮಾನದಲ್ಲಿ ನಾವು ಪಾಶ್ಚಾತ್ಯ ಮೂಲಗಳಿಂದ ಗ್ರಹಿಸಿದ ಉದಾರವಾದೀ ಮತ್ತು ಸಮಾಜವಾದೀ ವೈಚಾರಿಕ ಆಕೃತಿಗಳಷ್ಟೇ ಅರ್ಥಪೂರ್ಣವಾಗಿದ್ದವು. ಒಂದು ಸಂಸ್ಕೃತಿಯು ತನ್ನ ದೌರ್ಬಲ್ಯ., ವೈರುಧ್ಯಗಳನ್ನು ತಾವೇ ಗುರುತಿಸಿಕೊಂಡು ಅವುಗಳನ್ನು ದಾಟಲು ತನ್ನ ಒಳಗಿನಿಂದಲೇ ಮಾರ್ಗಗಳನ್ನು ರೂಪಿಸಿಕೊಂಡ ಒಂದು ಮಹತ್ತ್ವಪೂರ್ಣ ಮಾದರಿ ಅದು. ಹೀಗೆ ತಮ್ಮ ಕಾಲದ ಬಿಕ್ಕಟ್ಟುಗಳನ್ನು ವಸಾಹತುಶಾಹಿ ಪೂರ್ವದ ನಮ್ಮ ಪೂರ್ವಿಕರು ಪರಿಭಾವಿಸಿಕೊಂಡ ಮತ್ತು ಅವುಗಳಿಗೆ ಮುಖಾಮುಖಿಯಾದ ಕ್ರಮಗಳನ್ನು ಅರ್ಥಮಾಡಿಕೊಳ್ಳುವುದು ಸದ್ಯದ ನಮ್ಮ ಹುಡುಕಾಟಗಳಿಗೆ ಹೊಸ ಆಯಾಮಗಳನ್ನು ತಂದುಕೊಳ್ಳುವ ಕ್ರಿಯೆಯೇ ಆಗುತ್ತದೆ. ಇದು ಪುನರುತ್ಥಾನವಾದೀ ಚಟುವಟಿಕೆಯೇನೂ ಆಗಬೇಕಿಲ್ಲ. ಈ ಹಿಂದೆಯೇ ಸೂಚಿಸಿದಂತೆ ಭೂತವನ್ನು ಅರ್ಥ ಮಾಡಿಕೊಳ್ಳುವುದೆಂದರೆ ಭೂತಕ್ಕೆ ಮರಳುವುದು, ಅದಕ್ಕಾಗಿ ಹಪಹಪಿಸುವುದು ಎಂದೇನೂ ಅಲ್ಲ. ಬದಲಾಗಿ ಒಂದು ಸಂಸ್ಕೃತಿಯನ್ನು ಅದರ ತಲ್ಲಣ, ಬಿಕ್ಕಟ್ಟು, ದೌರ್ಬಲ್ಯ ಮತ್ತು ಚೈತನ್ಯಗಳೊಂದಿಗೆ ಒಳಗಿನಿಂದ ಅರಿಯುವ ಪ್ರಯತ್ನ. ಸಾಹಿತ್ಯ ವಿಮರ್ಶೆಗೆ, ಹೊಸ ಸೃಜನಶೀಲ ಅಭಿವ್ಯಕ್ತಿಗಳಿಗೆ ದೇಶೀಯ ಮಾದರಿಗಳನ್ನು ಪುನರ್ರೂಪಿಸಿಕೊಳ್ಳುವಂತೆ ನಮ್ಮದೇ ಆದ ಅರ್ಥಶಾಸ್ತ್ರ, ಸಮಾಜಶಾಸ್ತ್ರ, ಚರಿತ್ರೆಗಳನ್ನು ರಚಿಸಿಕೊಳ್ಳಬೇಕೆಂಬ ನಮ್ಮ ಇಂದಿನ ಹಂಬಲಗಳಿಗೂ ಇಂಥ ಅಧ್ಯಯನಗಳಿಂದ ಹೊಸ ಪ್ರೇರಣೆಗಳನ್ನು ಪಡೆಯಲು ಸಾಧ್ಯ. ಪಾಶ್ಚಾತ್ಯ

ವಿಚಾರಗಳನ್ನಾಗಲೀ, ಸಾಧನೆಗಳನ್ನಾಗಲೀ ಏಕಮುಖವಾಗಿ ಅಲ್ಲಗಳೆಯಬೇಕೆಂದೇನೂ ಅಲ್ಲ. ಇಂದಿನ ಜಾಗತಿಕ ಪರಿಸ್ಥಿತಿಯಲ್ಲಿ ಮತ್ತು ನಮ್ಮ ಇಂದಿನ ಒಟ್ಟಾರೆ ಜೀವನ ಸಂದರ್ಭದಲ್ಲೂ ಪಶ್ಚಿಮಕ್ಕೆ ಸಂಪೂರ್ಣವಾಗಿ ಮುಖ ತಿರುಗಿಸಿಕೊಳ್ಳಲು ಸಾಧ್ಯವಿಲ್ಲ. ಆಧುನಿಕ ಕನ್ನಡ ಸಾಹಿತ್ಯದಲ್ಲೇ ಪೂರ್ವ ಪಶ್ಚಿಮಗಳ ನಡುವೆ ನಮಗೆ ಬೇಕಾದ ಪಾಕವೊಂದನ್ನು ಸೃಷ್ಟಿಸಿಕೊಳ್ಳುವ ಮಹತ್ವದ ಮಾದರಿಗಳು ಕುವೆಂಪು - ಕಾರಂತರ ಜೀವನಶೈಲಿಗಳಲ್ಲಿಯೂ, ಸಾಹಿತ್ಯ ರಚನೆಗಳಲ್ಲೂ ಕಂಡುಬರುತ್ತವೆ. ಇವರ ಮುಂದಿನ ಪೀಳಿಗೆಯ ಪೂರ್ಣಚಂದ್ರತೇಜಸ್ವಿ ಕೆ.ವಿ. ಸುಬ್ಬಣ್ಣನವರ ಬಹುಮುಖಿ ಚಟುವಟಿಕೆಗಳಲ್ಲೂ ಅವು ಸೂಚಿತವಾಗುತ್ತವೆ. ಅಡಿಗ, ಅನಂತಮೂರ್ತಿ, ಲಂಕೇಶರ ಬರವಣಿಗೆಗಳಲ್ಲೂ ಇಂಥ ಮಾದರಿಗಳು ವ್ಯಕ್ತವಾಗಿವೆ. ಅನಂತಮೂರ್ತಿಯವರ 'ಕ್ಲಿಪ್‌ಜಾಯಿಂಟ್' ಕತೆಯಲ್ಲಿ ಸೂಚಿತವಾಗುವಂತೆ ಭಾರತದ ಕೇಶವನಿಗೆ ಬಿಕ್ಕಟ್ಟುಗಳು ಇರುವಂತೆ ಇಂಗ್ಲೆಂಡಿನ ಸ್ಟ್ಯಾಲರ್‌ಗೂ ಇವೆ. ಅವರ ಸಮಸ್ಯೆಗಳಿಗೆ ಪೂರ್ವವೂ ಸಿದ್ಧ ಉತ್ತರವಲ್ಲ. ಪಶ್ಚಿಮವೂ ಸಿದ್ಧ ಉತ್ತರವಲ್ಲ. ಪ್ರಾಯಶಃ ಅವರಿಬ್ಬರೂ ಕೂಡಿ ಇವೆರಡಕ್ಕಿಂತ ಭಿನ್ನವಾದ ಇನ್ನೊಂದು ಹೊಸ ಜೀವನಕ್ರಮವನ್ನೇ ಶೋಧಿಸಬೇಕಾಗಿದೆ. ಅಥವಾ ತೇಜಸ್ವಿಯವರ 'ಕರ್ವಾಲೊ' ಕಾದಂಬರಿಯಲ್ಲಿ ಸೂಚಿತವಾಗುವಂತೆ ಮಂದಣ್ಣನಿಲ್ಲದೆ ಕರ್ವಾಲೋನ ಯಾತ್ರೆ ಪೂರ್ಣಗೊಳ್ಳುವುದಿಲ್ಲ. ಹಾಗೆಯೇ ಮಂದಣ್ಣನ ಸತ್ವ ಹೊರಬರುವುದೂ ಕರ್ವಾಲೋನ ಸ್ಪರ್ಶದಿಂದ. ಪೂರ್ವದಿಂದ ಏನನ್ನು ಪಡೆಯಬೇಕು; ಪಶ್ಚಿಮದಿಂದ ಏನನ್ನು ಪಡೆಯಬೇಕು ಎಂದು ನಿರ್ಧರಿಸುವ ಹಕ್ಕು ನಮ್ಮದೇ, ಇತರರು ನಮ್ಮ ಪರವಾಗಿ ಆದ್ಯತೆಗಳನ್ನು ಸೂಚಿಸಬೇಕಾಗಿಲ್ಲ. ಅಂದರೆ ಒಂದು ಸಮಾನ ನೆಲೆಯಲ್ಲಿ ಮಾತ್ರ ಇತರರೊಂದಿಗೆ ವ್ಯವಹರಿಸುವ ದೃಢತೆ, ಆತ್ಮವಿಶ್ವಾಸಗಳನ್ನು ನಾವು ರೂಢಿಸಿಕೊಳ್ಳಬೇಕಾಗಿದೆ. ಪುನರುತ್ಥಾನವಾದಿಗಳೂ ಆಗದೆ ಪಶ್ಚಿಮದ ಕುರುಡು ಹಿಂಬಾಲಕರೂ ಆಗದೆ ತೃತೀಯ ಪರ್ಯಾಯವನ್ನು ಹುಡುಕಿಕೊಳ್ಳುವ ಬಗೆ ಇದು.

ಹಡಗ ತಾಗಿಸು ಪ್ರತೀ ಬಂದರಿಗು, ಯಾವೊಂದು
ತಿಮಿಂಗಲ ತೊಡೆಯು ಕೂಡ ನುಂಗಿ ಕೊಳಸದ ಹಾಗೆ
ನಡೆಸು ಬಂದರಿನಿಂದ ಬಂದರಿಗೆ. ಆಮದು ರಫ್ತು
ಸಾಗುತ್ತಲಿರಲಿ ಕೊನೆವರೆಗೆ. ಆದರೂ
ಫರಂಗಿರೋಗ ತಗಲದ ಹಾಗೆ
ಉಳಿಸು ಪೂರ್ವಾರ್ಜಿತದ ರತಿವಿವೇಕದ ಶಿಖೆಯ.

ಇದು ಅಡಿಗರ 'ಪ್ರಾರ್ಥನೆ' ಹಾಗೆಯೇ 'ಸ್ವಾತಂತ್ರ್ಯ : ೧೯೫೦ರ ಪಾಠ' ಕೂಡ ಇಷ್ಟೇ ಮಹತ್ವಪೂರ್ಣ :

ಮನೆಯ ಮಕ್ಕಳ ಕೂಡೆ ಆಡ ಬಂದರೆ ಊರ
ಹುಡುಗ ಪಾಳೆಯ, ತಿಂಡಿ ಕೊಟ್ಟು ನಗಿಸು;
ಅಲ್ಲೆ ತಳವೂರಿಸಲು ಬಯಸಿ ತೆಳ್ಳಗೆ ಮಾದ
ಬೇಡ ಇರುವಷ್ಟು ತಂಬಾಲು ಗುಟುಕು.
ಕಟ್ಟೆಯೊಳಗಡೆ ನೀರ ಹಣಿಸಿದರೆ ಬೆಳೆವ ಮರ
ತಲೆಮೇಲೆ ತಳೆಯುವುದು ಗೂಡ ಮಾಲೆ.
ಅದರೊಳಗೆ ಬಂದಳಿಕೆ ಬೆಳೆವ ವಿಶ್ವವಿಶಾಲ
ಭಾವವೇ ಬಿಡುಗಡೆಗೆ ಬಿಟ್ಟ ಕೂಳೆ.
ಇಲ್ಲದಿದ್ದರು ಸರಿಯೆ ಮನೆಗೆ ತೊದಲಿನ ರಕ್ಷೆ
ತರಬೇಡ ದತ್ತುಗಳ ಜಿಗಣೆಯೊಲುಮೆ.
ನಿನ್ನ ಬೀಜದ ಫಲಕೆ ಕಾದು ಕುಳಿತಿರು ಬರುವ
ವರೆಗೆ ಹಣ್ಣನುಣ್ಣದ ಅಮರ ಪಕ್ಷಿ.

ಇದೇ ರೀತಿ ಮಾಸ್ತಿಯವರ ಹಲವು ಕತೆಗಳು, 'ಚಿಕವೀರರಾಜೇಂದ್ರ' ಕಾದಂಬರಿ; ಕುವೆಂಪುರವರ ಎರಡೂ ಕಾದಂಬರಿಗಳು; ಕಾರಂತರ 'ಚೋಮನದುಡಿ', 'ಮರಳಿ ಮಣ್ಣಿಗೆ' ಮುಂತಾದ ಆಧುನಿಕ ಕನ್ನಡದ ಹಲವು ಕೃತಿಗಳು ವಸಾಹತುಶಾಹೀ ಅನುಭವವನ್ನು ಅದರ ಎಲ್ಲ ಸಂಕೀರ್ಣತೆಯಲ್ಲಿ ಆಳವಾಗಿ ಗ್ರಹಿಸಿವೆ. ನವ ವಸಾಹತುಸಾಹಿ ಸಂದರ್ಭದಲ್ಲಿ ಇಂಥ ಕೃತಿಗಳ ಹೊಸ ಓದು ನಮ್ಮ ಇಂದಿನ ಬಿಕ್ಕಟ್ಟುಗಳನ್ನು ಅರ್ಥಮಾಡಿಕೊಳ್ಳಲು ನಮ್ಮ ಸಾಹಿತ್ಯ ಪರಂಪರೆಯ ಒಳಗಿನಿಂದಲೇ ಅಗತ್ಯವಾದ ಪರಿಕರಗಳನ್ನು ಒದಗಿಸುವಂತಿವೆ. ತೇಜಸ್ವಿಯವರ 'ಪರಿಸರದ ಕತೆ', 'ಜುಗಾರಿಕ್ರಾಸ್', 'ಚಿದಂಬರ ರಹಸ್ಯ' ಮೊದಲಾದ ಕೃತಿಗಳು; ಅನಂತಮೂರ್ತಿಯರ 'ಸೂರ್ಯನ ಕುದುರೆ', 'ಅಕ್ಕಯ್ಯ' ತರಹದ ಕತೆಗಳು, ವಿವೇಕ ಶಾನಭಾಗ ಅವರ ತೀರಾ ಇತ್ತೀಚಿನ 'ಹುಲಿಯ ಸವಾರಿ' ಕಥಾಸಂಕಲನ; ಕುರ್ತಕೋಟಿ, ಜಿ. ರಾಜಶೇಖರ, ಕೆ.ವಿ. ಸುಬ್ಬಣ್ಣ, ಅನಂತಮೂರ್ತಿ ಮುಂತಾದವರ ಹಲವು ವಿಮರ್ಶಾ ಬರಹಗಳು ನವವಸಾಹತುಶಾಹಿ ಸಂದರ್ಭಕ್ಕೆ ನೇರವಾಗಿಯೇ ಮುಖಾಮುಖಿಯಾಗಿವೆ. ಚಂದ್ರಶೇಖರ ಕಂಬಾರ, ದೇವನೂರ ಮಹಾದೇವ, ಎಚ್.ಎಸ್. ಶಿವಪ್ರಕಾಶ ಮುಂತಾದವರ ಸೃಜನಶೀಲ ಪ್ರಯೋಗಗಳು ಅವುಗಳ ಸತ್ವದಲ್ಲಿ ಇದೇ ಬಗೆಯವು. ಇಂಥ ಕೃತಿಗಳನ್ನು ನಾವು ಹೊಸಬಗೆಯ ಓದುಗಳಲ್ಲಿ ನಮ್ಮದಾಗಿಸಿಕೊಳ್ಳಬೇಕು. ಆಗ ನವವಸಾಹತುಸಾಹಿ, ನವ ಸಾಮ್ರಾಜ್ಯಶಾಹಿ ಸಂದರ್ಭದ ಸಂಕೀರ್ಣ ಒಳಸುಳಿಗಳ ಸ್ವರೂಪ ನಿಧಾನವಾಗಿ ಬಿಚ್ಚಿಕೊಳ್ಳುತ್ತದೆ. ಅಷ್ಟೇ ಅಲ್ಲ, ಅದು ನಮ್ಮ - ಮೇಲುನೋಟಕ್ಕೆ ಭಿನ್ನ ಭಿನ್ನವೆನ್ನಿಸುವ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಹಾಗೂ ಸಾಹಿತ್ಯಿಕ - ಚಟುವಟಿಕೆಗಳಿಗೆ ಒಂದು ಬಗೆಯ ಒಟ್ಟಂದವನ್ನೂ ಸಮಗ್ರತೆಯನ್ನೂ ತಂದುಕೊಡುತ್ತದೆ.

ಈ ಹಿನ್ನೆಲೆಯುಲ್ಲಿ ನಡೆದಿರುವ ಕೆಲವು ಸಂಘಟಿತ ಪ್ರಯತ್ನಗಳನ್ನು ನೆನೆದುಕೊಳ್ಳುವುದು ನಮಗೆಲ್ಲ ಹೊಸ ಸ್ಫೂರ್ತಿಯನ್ನು ತಂದುಕೊಡಬಲ್ಲದು. ಹಂಪಿಯ ಕನ್ನಡ ವಿಶ್ವವಿದ್ಯಾಲಯ ಈ ಕಾಲದ ಹೊಸ ಕನಸುಗಳಿಂದಲೇ ಸೃಷ್ಟಿಯಾದ ಒಂದು ಸಂಸ್ಥೆಯಾಗಿದೆ.ಹಲವು ತೊಂದರೆಗಳ ನಡುವೆಯೂ ಅದು ಕನ್ನಡಿಗರ ಆಶೋತ್ತರಗಳನ್ನು ಪ್ರತಿನಿಧಿಸುವಂಥ ಒಂದು ವಿಶ್ವವಿದ್ಯಾಲಯವಾಗಿ ಬೆಳೆಯುತ್ತದೆ.ಹಲವು ವಿರೋಧಾಭಾಸಗಳ ನಡುವೆ 'ಲಂಕೇಶ್ ಪತ್ರಿಕೆ' ಇದೇ ಬಗೆಯ ಕೆಲಸವನ್ನು ಇನ್ನೊಂದು ರೀತಿಯಲ್ಲಿ ಮಾಡುತ್ತದೆ. ಹೆಗ್ಗೋಡಿನ ನೀನಾಸಂ ಮತ್ತು ಅಕ್ಷರ ಪ್ರಕಾಶನ ಸಂಸ್ಥೆಗಳು ಮೊದಲಿನಿಂದ ಕನ್ನಡಪ್ರಜ್ಞೆಯನ್ನು ರೂಪಿಸಿ ಬೆಳೆಸುತ್ತಿವೆ. ಬೆಂಗಳೂರಿನ ಕ್ರೈಸ್ಟ್ ಕಾಲೇಜು ಕನ್ನಡಸಂಘ ಪುತ್ತೂರಿನ ಕರ್ನಾಟಕ ಸಂಘ, ಬೆಂಗಳೂರಿನ ಪ್ರತಿಭಾ ಯುವವೇದಿಕೆ ಮುಂತಾದ ಹಲವು ಚಿಕ್ಕ ಚಿಕ್ಕ ಸಂಸ್ಥೆಗಳು ತಮ್ಮ ತಮ್ಮ ಮಿತವಾದ ಸಂಪನ್ಮೂಲಗಳಿಂದಲೇ ಹಲವು ವಿಶ್ವವಿದ್ಯಾಲಯ- ಅಕಾಡೆಮಿಗಳಿಗೆ ಸಾಧ್ಯವಾಗದ ಕೆಲಸಗಳನ್ನು ಸದ್ದಿಲ್ಲದೆ ಮಾಡುತ್ತಿವೆ. ಕನ್ನಡದ ಚಟುವಟಿಕೆಗಳು ಸಾಕಷ್ಟು ವಿಕೇಂದ್ರೀಕರಣಗೊಂಡು ನಾಡಿನ ಮೂಲೆಮೂಲೆಗಳಲ್ಲಿ - ಮುಖ್ಯವಾಗಿ ಗ್ರಾಮೀಣ ಪ್ರದೇಶಗಳಲ್ಲಿ ಸಂಸ್ಕೃತಿ ಜೀವಂತವಾಗಿದೆ. ಎಂಥ ದೊಡ್ಡ ಬಿಕ್ಕಟ್ಟುಗಳ ನಡುವೆಯೂ ಇಂಥ ಚಿಕ್ಕಚಿಕ್ಕ ಪ್ರಯತ್ನಗಳು ಹೊಸ ಆಶಾಕಿರಣಗಳನ್ನು ಬೀರುತ್ತಿವೆ.ಅಲ್ಪ ತೃಪ್ತಿಯಿಂದ ನಾವು ಬೀಗಬೇಕಾಗಿಲ್ಲ. ಆದರೆ 'ಉದಯವಾಗಲಿ ಚೆಲುವ ಕನ್ನಡನಾಡು' ಎಂದು ಹೊಸರಾಗ, ಭಾವಗಳಲ್ಲಿ ಹಾಡೋಣ.

# ಬೇಂದ್ರೆಯವರ ಕಾವ್ಯದಲ್ಲಿ ಅನ್ನ-ಚಿನ್ನ-ಕಾಂಚಾಣ

- ಪ್ರೊ. ಎಂ.ಕೆ. ರೇಣುಕಪ್ಪ ಗೌಡ

''ಹೂ ಆ, ಹೂ ಆ, ಹೂಆ, ಹೂಆ। ಅಹಮಹ ಮನ್ನಂ ಅಹಮನ್ನಾದೋ। ಅಹಮನ್ನಾದಃ'' ಎಂದು ಆಂಭವಾಗುವ ಬೇಂದ್ರೆಯವರ ''ಕೆಲಸವಿಲ್ಲದವರ ಹಾಡು'', ''ಅನ್ನವೇ ಧರ್ಮದ ಮೂಲ'' ಎಂದು ಸಾರುವ ಅವರ ''ಭೈರಾಗಿಯ ಹಾಡು'', ''ಅನ್ನ ದಾಟಿ, ಮುಪ್ಪಮೀರಿ, ಸತ್ಯ ಸೇರಿದಾಗ ಆತ್ಮದ ಉದಯ'' ಎಂದು ಕೊನೆಗಾಣುವ'' ಬಿಡುಗಡೆ'', ಈ ವಿಷಯದ ಅವರ ಪ್ರಸಿದ್ಧ ಕವಿತೆಯೆಂದು ಕರೆಯುವ ''ತುತ್ತಿನ ಚೀಲ'' ದ 'ಅನ್ನ ಬ್ರಹ್ಮದ ದೇಗುಲದಲ್ಲಿ', 'ನಾದಬ್ರಹ್ಮದ ಕಗ್ಗವಿಯಲ್ಲಿ', 'ಶಬ್ಧಬ್ರಹ್ಮದ ಗುಮ್ಮಟದಲ್ಲಿ' ಪರಿಕಲ್ಪನೆಗಳು, 'ಅನ್ನ ದೇವರು ಮಾತ್ರ ಇನ್ನೂ ಬರಲಿಲ್ಲೋ ಇನ್ನೂ ಬರಲಿಲ್ಲಾ' ಎಂದು ಕೊನೆಯಾಗುವ 'ಅನ್ನಾವತಾರ' ಮತ್ತು 'ಅನ್ನದಾನ ಮಹಾಯಜ್ಞ! ಅನ್ನಹೀನ ಆಳನು.' ಎಂದು ನಿರ್ದಿಷ್ಟ ನಿಲವು ತಾಳುವ ಬೇಂದ್ರೆಯವರ ಅನ್ನಯಜ್ಞ' ಮುಂತಾದ ಕವಿತೆಗಳ ಅನ್ನ-ಪರಿಕಲ್ಪನೆ ನಮ್ಮ ದೊಡ್ಡ ಪರಂಪರೆಯಲ್ಲಿ ಬೇರು ಬಿಟ್ಟದ್ದು. ನನ್ನ ದೃಷ್ಟಿಯಿಲ್ಲ ಅನ್ನದ ಸಮಸ್ಯೆಯನ್ನು ಅದರ ಎಲ್ಲ ಆಯಾಮಗಳಿಂದ ಗ್ರಹಿಸಿ ಕಾವ್ಯವಾಗಿಸಿ ಕವಿತೆ'ಕೆಲಸವಿಲ್ಲದವರ ಹಾಡು' ಆರಂಭವಾಗುವುದೇ ತೈತ್ತಿರೀಯ ಉಪನಿಷತ್ತಿನ ಭೃಗುವಲ್ಲೀ ಭಾಗದ ಹತ್ತನೆಯ ಅನುವಾಕದ ಪ್ರಸಿದ್ಧ ಮಂತ್ರದಿಂದ. ಈ ಭಾಗದಲ್ಲಿ ಭೃಗು ಋಷಿಗೆ ಅವನ ತಂದೆ ವರುಣನು ಅನ್ನದ ಮಹತ್ವವನ್ನು ಎಲ್ಲ ಕಾಲಕ್ಕೂ ಅಧಿಕೃತವಾಗುವ ರೀತಿಯಲ್ಲಿ ಬೋಧಿಸುತ್ತಾನೆ. ಮೈಸೂರಿನ ಶ್ರೀ ರಾಮಕೃಷ್ಣಾಶ್ರಮ ಪ್ರಕಟಿಸಿದ, ಶ್ರೀ ಸ್ವಾಮಿ ಆದಿದೇವಾನಂದರು ಮೂಲ, ಪ್ರತಿಪದಾರ್ಥ, ತಾತ್ಪರ್ಯ ಟಿಪ್ಪಣಿಗಳೊಡನೆ ರಚಿಸಿದ ತೈತ್ತಿರೀಯೋಪನಿಷತ್ತಿನ ಭೃಗವಲ್ಲೀ ಭಾಗದ ಕೆಲವು ಅನುವಾಕಗಳ ಕನ್ನಡ ಅನುವಾದಗಳನ್ನು ಗಮನಿಸೋಣ:

**ಅನುವಾಕ : ೨**

ಅನ್ನವು ಬ್ರಹ್ಮ ಎಂದು ತಿಳಿದುಕೊಂಡನು; ಏಕೆಂದರೆ ಅನ್ನದಿಂದಲೇ ಈ ಪ್ರಾಣಗಳು ಹುಟ್ಟುತ್ತವೆ; ಹುಟ್ಟಿದವುಗಳು ಅನ್ನದಿಂದಲೇ ಜೀವಿಸುತ್ತವೆ ಮತ್ತುಅನ್ನವನ್ನು ಕುರಿತುಹೋಗಿ ಪ್ರವೇಶಿಸುತ್ತವೆ.

**ಅನುವಾಕ : ೭**

ಅನ್ನವು ಬ್ರಹ್ಮಜ್ಞಾನಕ್ಕೆ ದ್ವಾರವಾಗಿರುವುದರಿಂದ ಅನ್ನವನ್ನು ನಿಂದಿಸಕೂಡದು; ಅದು ವ್ರತ, ಪ್ರಾಣವೇ ಅನ್ನವು; ಶರೀರವು ಅನ್ನಾದವು

**ಅನುವಾಕ : ೮**

ಅನ್ನವನ್ನು ನಿರಾಕರಿಸಕೂಡದು. ಅದು ವ್ರತ.

**ಅನುವಾಕ : ೯**

ಅನ್ನವನ್ನು ಬಹುವಾಗಿ ಮಾಡಬೇಕು; ಅದು ವ್ರತ.

**ಅನುವಾಕ : ೧೦**

ಅಹೋ ಅಹೋ ಅಹೋ ! ನಾನು ಅನ್ನ; ನಾನು ಅನ್ನ; ನಾನು ಅನ್ನ !! ನಾನು ಅನ್ನಾದ; ನಾನು ಅನ್ನಾದ; ನಾನು ಅನ್ನಾದ!!!

ಬೇಂದ್ರೆಯವರು ನಮ್ಮ ಪರಂಪರೆಯ ಆದರ್ಶಮಯವಾದ ಮತ್ತು ಆಧ್ಯಾತ್ಮಿಕವಾದ ಅನ್ನ ವಿಚಾರದಲ್ಲಿಯೇ ಮುಳುಗಿ ಮುಕ್ತಾಯವಾಗುತ್ತಾರೆ ಎಂದು ತಿಳಿಯಬೇಕಿಲ್ಲ. ಮತ್ತು ನಮ್ಮ ಪರಂಪರೆಯ ಅನ್ನ ಕುರಿತ ತಿಳುವಳಿಕೆ ಕೈಗೆ ಹತ್ತದ, ವಾಸ್ತವಕ್ಕೆ ಇಳಿಯದ, ಅಮೂರ್ತ ವಿಚಾರವೂ ಆಗಿರಲಿಲ್ಲ. ಎಲ್ಲ ಬಗೆಯ ಅರಳುವಿಕೆಗೆ ಅನ್ನವೇ ಮೂಲ ಮತ್ತು ಅದರ ಸರಿಯಾದ ವಿತರಣೆಯ ವ್ಯವಸ್ಥೆಯಿಂದ ವ್ಯಕ್ತಿ ಮತ್ತು ಸಮಾಜದ ಜೀವಂತ ವಿಕಾಸ ಸಾಧ್ಯ; ಅದ್ದರಿಂದ ಅನ್ನವೇ ಬ್ರಹ್ಮ, ಅನ್ನವೇ ದೇವರು, ಅನ್ನವೇ ಪ್ರಾಣ ಎಂಬ ಬೇಂದ್ರೆಯವರ ನಿಲುವು ಬಹುಶಃ ಸಾರ್ವಕಾಲಿಕ ಅನ್ನದ ಬಗೆಗಿನ ಆಧ್ಯಾತ್ಮಿಕ ಎನ್ನಬಹುದಾದ ಈ ಶ್ರದ್ಧೆ ಮತ್ತು ವಿಶ್ವಾಸವನ್ನು ಮನುಷ್ಯ ಕಳೆದುಕೊಂಡುದೇ ಅವನ ಬಾಳಿನ ಎಲ್ಲ ಗೋಳಿನ ಮೂಲವೆಂಬುದು ಬೇಂದ್ರೆಯವರ ಮುಖ್ಯವಾದ ದರ್ಶನ. ಯಾಕೆಂದರೆ ಅನ್ನದ ಉತ್ಪಾದನೆ ಮತ್ತು ವಿತರಣೆಯಲ್ಲಿ ಸಕಲ ಜೀವಿಗಳಿಗೆ ಲೇಸುಂಟಾಗುವ ಮತ್ತು ಪ್ರಾಣೋತ್ಕರ್ಷವಾದ ವ್ಯವಸ್ಥೆಯ ಅಭಾವವೇ ಸಾಮಾಜಿಕ ಅಸ್ವಸ್ಥತೆಗೆ ಮತ್ತು ಮನುಷ್ಯನ ಪರಮಾವಧಿ ಬೆಳವಣಿಗೆಗೆ ಅಡ್ಡಿಯಾಗಿದೆಯೆನ್ನುವುದು ಅನ್ನವಸ್ತುವಾಗುಳ್ಳ ಬೇಂದ್ರೆಯವರ ಎಲ್ಲ ಕವಿತೆಗಳ ಮೂಲದನಿ. ಹಸಿವನ್ನು ಅದರ ಎಲ್ಲ ಮಗ್ಗುಲಿನಿಂದ ಬೇಂದ್ರೆ ಕಾವ್ಯ ಗ್ರಹಿಸುತ್ತದೆ. ಬೇಂದ್ರೆ ಹೊಲದ ಕವಿಯಾಗುವುದು ಇಂತಹ ಮುಖಾಮುಖಿಯಿಂದಲೇ. ಮಂತ್ರಮಟ್ಟದ, ತುಸು ವಾಚಾಳಿಯಾಯಿತೇನೋ ಎನ್ನಿಸುವ ಅವರ 'ಬಿಡುಗಡೆ'ಯೆಂಬ ಕವಿತೆಯಲ್ಲಿ ಅವರ ಈ ದರ್ಶನ ಮುಖಪಡೆಯುವ ರೀತಿಯಿದು :

೧ ಹಸಿವೆಯು ಸೆರೆಯಿರುವ ವರೆಗೆ
- ಮೈಗೆ ಬಿಡುಗಡೆಯಿಲ್ಲ;
ಅನ್ನವು ಸ್ವಾದೀನವಾಗಲಿ !

೨. ಅನ್ನದ ಮೇಲೆ ಅನ್ಯರ ಅಧಿಕಾರಬೇಡ;
ಅನ್ನವು ಸ್ವತಂತ್ರವಾಗಲಿ
ತನ್ನ ಅನ್ನವ ಪಡೆವುದೇ ಒಕ್ಕಲುಧರ್ಮ !

ಬೇಂದ್ರೆಯವರ ಮೌಲ್ಯವ್ಯವಸ್ಥೆಯಲ್ಲಿ ಅನ್ನಕ್ಕೆ ಕೇಂದ್ರ ಸ್ಥಾನ. ಅನ್ನವಿಲ್ಲದಾಗಿ ಕೆರಳುವ ಹಸಿವು ಮನುಷ್ಯನ ಎಲ್ಲ ಕರ್ತೃತ್ವಶಕ್ತಿಯನ್ನೂ ನಾಶಮಾಡುತ್ತದೆ. ಅವನ ಸಹಜ ಚೈತನ್ಯವನ್ನು ಕಮರಿಸುತ್ತದೆ. ಅವನನ್ನು ದಾಸ್ಯಕ್ಕೆ ಪಶುತ್ವಕ್ಕೆ ತಳ್ಳುತ್ತದೆ. ಹಸಿವು ಸೃಜನ ವಿರೋಧಿ. ಜೀವಪರ ಚಟುವಟಿಕೆಗಳನ್ನೆಲ್ಲ ಚಿವುಟಿಹಾಕಬಲ್ಲ ಹಸಿವು ಸಮಾಜವನ್ನು ಕಬಳಿಸಿದಂತೆಲ್ಲ ಮೌಲ್ಯಗಳು ತಿರುಗು ಮುರುಗಾಗುತ್ತವೆ. ಅಮಂಗಳ ಹರಿದಾಡಲು ಹವಣಿಸುತ್ತದೆ. ಜೀವಪೋಷಕ ಸಾಮಾಜಿಕ ನೆಲೆಗಳೆಲ್ಲ ಅಸ್ತವ್ಯಸ್ತಗೊಳ್ಳುತ್ತವೆ. ಬೇಂದ್ರೆಯವರ 'ತುತ್ತಿನ ಚೀಲ'' ಕವನ ಈ ಆವರಣವನ್ನೇ ಕಂಡರಿಸುತ್ತದೆ. ಅನ್ನಬ್ರಹ್ಮ ನಾದ ಬ್ರಹ್ಮ, ಮತ್ತು ಶಬ್ದ ಬ್ರಹ್ಮದ, ಶುಭ ಆವಿಷ್ಕಾರದ ಉದ್ದೇಶವೇ, ತುತ್ತಿನ ಚೀಲವಾದ ಹೊಟ್ಟೆಯ ನೀಗದ ಹಸಿವಿನಿಂದಾಗಿ ಅಶುಭಗೊಂಡು, ಅಪಮೌಲ್ಯಕ್ಕೆ ಗುರಿಯಾದ ಅನುಭವವನ್ನು ಕವನ ಕಟ್ಟುತ್ತದೆ. ಅನ್ನಬಹ್ಮದ ದೇಗುಲದಲ್ಲಿ ಡೊಂಬರ ಪೂಜೆ, ಕಾಗೆಯ ಮಂತ್ರ; ನಾದ ಬ್ರಹ್ಮದ ಕಗ್ಗವಿಯಲ್ಲಿ ಮೌನದ ವೀಣೆಗೆ ಕರುಳಿನ ತಂತಿ; ಶಬ್ದಬ್ರಹ್ಮದ ಗುಮ್ಮಟದಲ್ಲಿ ವೇದದ ವಾದದಿಂದ ಪಾಪಪುಣ್ಯಗಳ ಜಾಳಿಗೆಯಲ್ಲಿ ನೇತು ಜೋತ ಜೀವದ ಜೇಡ-ಮುಂತಾದ ವಾಮಾಚಾರ ಚಿತ್ರಗಳೆಲ್ಲ. ಆಗಬಾರದ್ದು, ತುತ್ತಿನ ಚೀಲದ ಹಸಿದ ಸ್ಥಿತಿಯಿಂದ, ಆಗಿಬಿಟ್ಟಿದೆಯೆಂಬ ಆತಂಕವನ್ನೇ ಅಭಿವ್ಯಕ್ತಿಸುತ್ತವೆ.

ಈ ಪರಿಸ್ಥಿತಿಗೆ ಕೂಳಿನ ಅಭಾವ ಕಾರಣ ಎಂದು ಬೇಂದ್ರೆ ತಿಳಿಯುವುದಿಲ್ಲ. ಕೂಳಿನ ವಿತರಣೆಯಲ್ಲಿನ ಅಮಾನವೀಯ ದೋಷ ಸಾಮಾಜಿಕ ವಿಷಮತೆಗೆ ಕಾರಣ ಎಂದು ತಿಳಿಯುತ್ತಾರೆ. ಸಂಗ್ರಹಿಸಿಡುವ ಮನುಷ್ಯನ ಆಮಿಷ, ಪ್ರಕೃತಿ ನಿರ್ಮಿತವಲ್ಲ: ಮನುಷ್ಯನಿರ್ಮಿತ.

ಅನ್ನವಾಮಿಷವಾಗೆ ಗಂಟಲಿಗೆ ಗಾಳ
ತಿನ್ನುವವನೆ ತಿನ್ನಲು ಯತ್ನಿಸುವ ಕಾಳ

ಆಮಿಷ : (ಗರಿ)

ಅನ್ನ ಬೆಳೆಯುವುದರಲ್ಲಿ ಭೂಮಿ ಎಂದೂ ಬಂಜೆಯಲ್ಲ ''ಬೆಳೆವಗೆ ನೆಲವೆಲ್ಲ ಹೊಲ' - ಎನ್ನುತ್ತಾರೆ 'ವೈರಾಗಿಯ ಹಾಡು' ಕವಿತೆಯಲ್ಲಿ ಬೇಂದ್ರೆ ನಿರ್ವಂಚನೆಯಿಂದ

ಭೂತಾಯಿ ಅನ್ನ ಒದಗಿಸಬಲ್ಲಳು ಮತ್ತು ಒದಗಿಸುತ್ತಿದ್ದಾಳೆ. ಆದರೆ ನೆಲದಾಯಿ ಕೊಟ್ಟ ಸರ್ವಜೀವಸಂರಕ್ಷಣಾರ್ಥ ಕೂಳು ಶಕ್ತಿವಂತರ ಒಡ್ಡಿ ಸೇರಿ ಸಂಗ್ರಹವಾದ್ದರಿಂದ ಇಲ್ಲದ ಬಹುಪಾಲು ಜನ ಬಾಯಿಬಾಯಿ ಬಿಡುವಂತಾಗಿದೆ: ಅವರ ಬೆಳೆಯುವ ಶಕ್ತಿಯನ್ನೇ ಸಾಯಿಸಿದೆ. ಈ ಸಂಗತಿ ಬೇಂದ್ರೆಯವರ 'ತುತ್ತಿನ ಚೀಲ' ಕವಿತೆಯಲ್ಲಿ ಪ್ರಕಟವಾಗುವ ಬಗೆಯಿದು :

೧. ದೈವುಳ್ಳವರಿಗೆ । ದಯವೇ ಇಲ್ಲ
ತಿತ್ತಿರಿ ತುಂಬಿದೆ । ಕೂಳಿನ ಕೋಟೆ !
ಬಿಡುಗಣ್ಣವರಿಗೆ । ಕಾಣುವುದಿಲ್ಲ
ಅಮೃತದ ತೇಗಿನ । ಮದವಂತಹದು !
ದವ ಬಲ್ಲ। ಹಸವೆಯ ಶೂಲಿ !

೨. ಕಿಕ್ಕಿರಿ ತುಂಬಿದೆ । ಭೂಮಿಯ ಕಣಜ
ಕಕ್ಕಸ ಬಡುತಿದೆ । ಬೊಕ್ಕಸದೊಡಲು
ಬಾಳಿಗಿಂತಲೂ । ಕೂಳೇ ಮೇಲೋ ?
ಬರಿದೋ ಬರಿದು । ತೆರವೋ ತೆರವೋ
ಬಡವರ ಬಗ್ಗರ । ತುತ್ತಿನ ಚೀಲಾ

ಉಣ್ಣುವ ಬಾಯಿಗಳಿಗೆ ಅನ್ನ ಸಿಗದಂತೆ ಮಾಡಿದ ಸಾಮಾಜಿಕ ಕೆಟ್ಟ ಏರ್ಪಾಡಿನ ವ್ಯಂಗ್ಯ 'ಅನ್ನಬಕಾಸುರ' ರಾಜ್ಯದಲ್ಲಿ' ಸಮರ್ಥವಾಗಿ ರೂಪುತಾಳಿದೆ. ಸಮಾಜದ ಅಂಗಗಳೆಲ್ಲ ತೀರ ದುರ್ಬಲವಾದಾಗ ಅನ್ನವೂ ದುರ್ಬಳಕೆಯಾಗಿ ತನ್ನ ಜೀವದಾಯಿನೀ ಗುಣವನ್ನು ಕಳೆದುಕೊಳ್ಳುತ್ತದೆ

ಅನ್ನಬಕಾಸುರ ರಾಜ್ಯದಲ್ಲಿ
ಅನ್ನಕೆ ಕೊರತೆಯು ಇರಲಿಲ್ಲ
ಎಷ್ಟು ತಿಂದರೂ ಏನು ತಿಂದರೂ
ಕೊನೆಗೂ ಬುದ್ಧಿಯು ಬರಲಿಲ್ಲ
ಮೊದಲೇ ಬುದ್ಧಿಯು ಇರಲಿಲ್ಲ

'ಅನ್ನಬಕಾಸುರ' ಎಂಬ ರೂಪಕವೇ ತುಂಬ ರಮ್ಯ ಮತ್ತು ಅರ್ಥಪೂರ್ಣ. ಏಕಚಕ್ರ ನಗರದ ಅರಸ ದುರ್ಬಲ. ಪ್ರಾಣವುಳಿಸಿಕೊಳ್ಳುವ ಛಲವನ್ನು ಬಿಟ್ಟು ಕೊಟ್ಟಿರುವ ಅಲ್ಲಿಯ ಪ್ರಜೆಗಳೋ ಇನ್ನಷ್ಟು ಶಕ್ತಿಹೀನರು. ಆದರೆ ಇಲ್ಲಿ ಅನ್ನದ ಸಮೃದ್ಧಿ. ಹೊಲಹರುಗಿಯೇ ಅನ್ನ ಉತ್ಪಾದಿಸಿರಬೇಕು. ಆದ್ದರಿಂದ ಏಕಚಕ್ರನಗರದ ಜನ ಶ್ರಮಜೀವಿಗಳೇ, ನೆಲದ ಮಕ್ಕಳೇ. ಎಲ್ಲ ಇದ್ದೂ ಆಡಳಿತ ಮತ್ತು ಆಡಳಿತಕ್ಕೊಳಪಟ್ಟವರು ಉಳಿಸಿಕೊಳ್ಳುವ ಮತ್ತು ವಿತರಿಸಿಕೊಳ್ಳುವ ಜನಸಮ್ಮುಖ ವ್ಯವಸ್ಥೆಯ ಬಲವನ್ನು ರೂಢಿಸಿಕೊಳ್ಳದಿದ್ದರೆ ಅನ್ನಬಕಾಸುರನ ಉದಯವಾಗುತ್ತದೆ.

ಸಾಮಾಜಿಕವಾದ ಇಂತಹ ಅತಂತ್ರ ಪರಿಸ್ಥಿತಿಯಲ್ಲಿ ಅನ್ನಸಂಗ್ರಹಿಸಿ ಕಬಳಿಸುವವರೂ ಹೊರಗಿನವರೇ ಮತ್ತು ಬಕಾಸುರನನ್ನು ವಧೆಮಾಡಿ ಅನ್ನಧರ್ಮಕ್ಕೆ ಮತ್ತೆ ಚಾಲನೆಕೊಡುವವರೂ ಹೊರಗಿನವರೇ. ಆದರೆ ಬಕಾಸುರನನ್ನು ವಿರೋತ್ಸಾಹದಿಂದ ವಧಿಸುವ ಭೀಮನ ಅನ್ನ ದುರಾಸೆಯನ್ನು ಹೇಗೆ ಮರೆಯುವುದು ?

ಹಸಿವಿನ ಸಮಸ್ಯೆ ಅನಾದಿಯಾದದ್ದು : ಭೂಮಿ ವಸುಂಧರೆಯಾದರೂ ಅವಳ ಮೇಲಿನ ಜೀವಿಗಳು ದರಿದ್ರರು. ಸಮುದ್ರ ರತ್ನಾಕರನಾದರೂ ಅವನನಡುವೆ ಬಾಳುವ ಮನುಷ್ಯ ನಿರ್ಗತಿಕ. ಇತಿಹಾಸದುದ್ದಕ್ಕೂ ಅವತಾರಗಳುದ್ದಕ್ಕೂ ಇದೇ ಭವಣೆ. ಧರ್ಮಗ್ಲಾನಿಯಾದಾಗ ದೇವರ ಅವತಾರ ಎಂದು ಘೋಷಿಸಿಕೊಂಡ ಹತ್ತು ಅವತಾರಗಳೂ ಅನ್ನಧರ್ಮವನ್ನು ನೆಲೆಯೂರಿಸುವುದರಲ್ಲಿ ಸೋತವು. ಅನ್ನ ಸಮೃದ್ಧಿ ಮತ್ತು ಅನ್ನ ಬೇಕಾದವರಿಗೆ ತಕ್ಕ ಕಾಲದಲ್ಲಿ ಅದರ ಸರಬರಾಜೇ ನಿಜವಾದ ಧರ್ಮ; ಉಳಿದದ್ದೆಲ್ಲ ಧರ್ಮಗ್ಲಾನಿಯೆಂಬ ಸತ್ಯ ದೇವರಿಗೂ ಹೊಳೆಯಲಿಲ್ಲ ಎಂಬ ಕೊರಗು ಬೇಂದ್ರೆಯವರಿಗೆ ತನ್ನ ಯಾಂತ್ರಿಕಅಭಿವ್ಯಕ್ತಿಯಿಂದಾಗಿ ಕವನವಾಗಿ ಸಾಮಾನ್ಯವೆನಿಸುವ 'ಅನ್ನಾವತಾರ' ಮತ್ತು ಕವನವಾಗಿ ಯಶಸ್ವಿಯಾಗುವ ' ಮಕ್ಕಳು' ಅನ್ನತಾರದ ವಿರುದ್ಧದ ಬೇಂದ್ರೆಯವರ ವಿದ್ರೋಹದ ನಿಲುವಿಗೆ ಸ್ಪಷ್ಟ ಸಾಕ್ಷಿ.

೧. ಪ್ರಾಣದೇವನು ನಿ
ತ್ರಾಣನಾಗುತ ಅಂದಃ
'ಅನ್ನದೇವರು ಮಾತ್ರ-ಇನ್ನೂ ಬರಲಿಲ್ಲೋ
ಇನ್ನೂ ಬರಲಿಲ್ಲಾ'
-ಅನ್ನಾವತಾರ

೨. ಜೀವದೇವನೇ ಮೈವೆತ್ತು
ನೀನೇ ತಲೆಯೆತ್ತು
ವೇದಾಂತಿಯ ಮುಖಮುದ್ರೆಯ ನೋಡಿ
ಕನಿಕರ ಹುಟ್ಟುವುದು
ಹತ್ತವತಾರದ ಹೇಡಿತನಕ್ಕೆ
ಮನಗೊಣಗುಟ್ಟುವುದು
- ಮನುವಿನ ಮಕ್ಕಳು

ಬೇಂದ್ರೆ ಕಾವ್ಯ ಶ್ರದ್ಧೆಯ ಕಾವ್ಯ. ದೈವದ ವಿರುದ್ಧ ಬಂಡಾಯದ ದನಿ ಅವರ ಸಾಮಾಜಿಕ ಕವಿತೆಗಳಲ್ಲಿ ಮಾತ್ರ ಹೆಚ್ಚಾಗಿ ಕೇಳಿಸುತ್ತದೆ. ನಮ್ಮ ಸಾಮಾಜಿಕ ವಿಷಮತೆಗಳು ಎಂತವರ ನಂಬುಗೆಯನ್ನೂ ಬುಡಮೇಲು ಮಾಡುವಂಥವು!

ಬೇಂದ್ರೆಯವರ ಅನ್ನಕುರಿತ ಕವನಗಳಲ್ಲೆಲ್ಲ ಸಾಮಾನ್ಯವಾಗಿ ಚಿನ್ನದ ಪ್ರಸ್ತಾಪವಿರುತ್ತದೆ. ಅನ್ನದ ಸಮಸ್ಯೆಗೆ ಏನೇನೂ ಸಂಬಂಧವಿಲ್ಲದ 'ಹೆಣದ ಹಿಂದೆ'

ಯಂತಹ ಕವನದಲ್ಲಿಯೂ 'ಅನ್ನವನ್ನು ಚಿನ್ನಗೊಳಿಸಿ। ಉಣ್ಣಬರದ ಹಾಗೆ ಮಾಡಿ' ಯಂತಹ ಶಕ್ತ ಸಾಲುಗಳು ಕೇಳುತ್ತವೆ. ಅನ್ನ ಹಸಿದ ಬಾಯಿಗಳಿಗೆ ಸಮರ್ಪಕವಾಗಿ ದಕ್ಕದೇ ಇರುವುದಕ್ಕೆ ಅದನ್ನು ಚಿನ್ನವಾಗಿ ಪರಿವರ್ತಿಸಿ ಸಂಗ್ರಹಿಸುವ ಮನುಷ್ಯನ ದುರಾಸೆಯೇ ಕಾರಣವೆಂದು ಬೇಂದ್ರೆ ಕಾವ್ಯ ಸಾರುತ್ತದೆ. ಬೇಂದ್ರೆ ಕಾವ್ಯದ ಮೌಲ್ಯವ್ಯವಸ್ಥೆಯಲ್ಲಿ ಚಿನ್ನ ಜೀವನಾವಶ್ಯಕವಲ್ಲದುದಕ್ಕೆ, ಬರೀ ಭೋಗ ಸಾಮಗ್ರಿಗಳಿಗೆ ಸಂಕೇತ. ಅಲ್ಲದೆ ಚಿನ್ನ ಉಳ್ಳವರ, ಬಾಚುವ ಶಕ್ತಿಯಿದ್ದ ಬಲಾಢ್ಯರ ಕಾಲುಕಳೆದುಕೊಂಡ ಲಕ್ಷ್ಮಿ. ಆಧುನಿಕ ಪರಿಭಾಷೆಯನ್ನು ಬಳಸಿ ಹೇಳುವುದಾದರೆ ಬಂಡವಾಳಶಾಹಿ ಸೊತ್ತು. ಚಲನಶೀಲ ಗುಣವನ್ನು ಕಳೆದುಕೊಂಡು ರೆಕ್ಕೆ ಮುರಿದ ಹಕ್ಕಿ. ಈ ಅನುಭವವನ್ನು ಅತ್ಯುತ್ತಮವಾಗಿ ಕಟ್ಟಿಕೊಡುವ ಕವನ 'ಕೆಲಸವಿಲ್ಲದವರ ಹಾಡು.' ತೈತ್ತಿರೀಯ ಉಪನಿಷತ್ತಿನ ಅನ್ನ ಕುರಿತ ಆವಾಹನೆಯೊಂದಿಗೆ ಆರಂಭವಾಗುವ ಈ ಕವಿತೆ' ಅನ್ನವೆಲ್ಲವೂ ಆಯಿತು ಚಿನ್ನ !' ಎಂದು ಸಾರುತ್ತ ಅದಕ್ಕೆ ಕಾರಣಗಳನ್ನು ಪ್ರತೀಕಗಳ ಮೂಲಕ ಅರಸುತ್ತದೆ. ಚಿನ್ನದ ಮೊಟ್ಟೆಯಿಡುವ ಕೋಳಿ, ಚಿನ್ನದ ಭಸ್ಮಾಸುರ, ಚಿನ್ನದ ಹುಚ್ಚಿಗೆ ಬಲಿಯಾದ ಮಿಡಾಸ, ಕಾಲಭೈರವ ಮತ್ತು ರೆಕ್ಕೆ ಕಿತ್ತ ಚಿನ್ನದ ಹಕ್ಕಿಯ ಪ್ರತಿಮೆಗಳು ಒಂದರೊಡನೊಂದು ತಳುಕುಹಾಕಿಕೊಂಡು ಮನೆಮಾಡುತ್ತ ಸಂಗ್ರಹ ಶೀಲ ಸಂಸ್ಕೃತಿ ಹೇಗೆ ಜೀವ ವಿರೋಧಿಯಾದದ್ದು ಎಂಬ ಪ್ರಮೇಯವನ್ನು ಕಾವ್ಯಾನುಭವವಾಗಿ ಪರಿವರ್ತಿಸುತ್ತದೆ. ಕವನದ ರುಚಿಗೆ ಅದರ ನಾಲ್ಕನೆಯ ಭಾಗವನ್ನು ಗಮನಿಸಬಹುದು.

ಏತರಾಸೆಯನೊ ಹೇಗೋ ಹಚ್ಚಿ
ಆಡುತಾಡುತಲೆ ಹಿಡಿದರು ಕಚ್ಚಿ
ತಲೆಯಲಿ ಮಾಟದ ಮುಳ್ಳನು ಚುಚ್ಚಿ
ನೆಲಮಾಲಿಗೆಯೊಳು ಕತ್ತಲೆ ಹೊಚ್ಚಿ
ಸೆರೆಹಿಡಿದರು ಎಲೆ ಚಿನ್ನದ ಹಕ್ಕಿ !
ಬೊಕ್ಕಸದುಕ್ಕಿನ ಬಾಗಿಲವಿಕ್ಕಿ
ಒಗೆದರು ಕೂಡಲೆ ರೆಕ್ಕೆಯ ಕಿತ್ತು
ಸುಮ್ಮನೆ ನೋಡುವೆ ಸುತ್ತೂ ಮುತ್ತು
ಹಕ್ಕಿಯೇ ನೀ ಸೆರೆಯಲಿ ಸಿಕ್ಕಿರಲು
ಧರ್ಮದ ಕೊರಳಿಗೆ ಅನ್ನದ ಉರಲು
ಅನ್ನS ಅನ್ನS ಪ್ರಾಣದ ಕೂಗು
ಪ್ರಳಯವೆ ಔತಣ ಹಾಗೂ ಹೀಗೂ
ಈ ಹಸಿವೆಯ ಕೊಲ್ಲುವ ಸುತ್ರಾಣ
ಎಲ್ಲಿದೆ ಎಲ್ಲಿದೆ ಬಿಲ್ಲೂ ಬಾಣ ?
ಚಿನ್ನದ ಸೆರೆಯನು ಮೊದಲೇ ಬಿಡಿಸಿ !
ಅನ್ನ ಕಲ್ಪವೃಕ್ಷವ ಚಿಗುರಿಡಿಸಿ

ಅಲ್ಲಿಯವರಿಗೆ ಅನ್ನs ಅನ್ನs
ಒಂದೇ ಹಾಡು ಕೇಳೆಲ ಚಿನ್ನ

ಅನ್ನ ಚಿನ್ನವಾಗಿ ಬೊಕ್ಕಸದಲ್ಲಿ ಸೆರೆಯಾಗುವ ವ್ಯವಸ್ಥೆ ಬಿಗಿಯಾದಂತೆಲ್ಲ ಕಾಂಚಾಣವುಳ್ಳವರ ಅಮಾನವೀಯ ಶೋಷಣೆ ಮತ್ತು ಜೀವ ವಿರೋಧಿ ಅಟ್ಟಹಾಸಗಳು ವಿಜೃಂಭಿಸುತ್ತವೆ. ಬಾಳಿನ ಮೂಲಕ್ಕೆ ಇಂತಹ ವ್ಯವಸ್ಥೆ ಬೆಂಕಿ ಹಚ್ಚುತ್ತದೆ. ಅನ್ನ ವಂಚಿತರು ಸೃಷ್ಟಿವಂಚಿತರೂ ಆಗುತ್ತಾರೆ. ಅವರಿಗೆ ಬಿಡುಗಡೆಯ ಬಾಗಿಲುಗಳೇ ಮುಚ್ಚಿಹೋಗುತ್ತವೆ. ಹಸಿವೆಯ ಸೆರೆಯಿಂದಾಗಿ ಮೈಗೇ ಬಿಡುಗಡೆ ಇಲ್ಲದಿರುವಾಗ ಇಂತಹ ಅತಂತ್ರ ಜೀವಿಗಳ ಪರಿಪೂರ್ಣ ಉದ್ಧಾರ ಕನಸಿನ ಮಾತು. ಅನ್ನವನ್ನೇ ದಾಟಲಾರದವರು ಮತ್ತೇನನ್ನು ಸಾಧಿಸಿ ಸ್ವತಂತ್ರವಾಗಲು ಸಾಧ್ಯವಾದೀತು ? ಜೀವ ಬೀಜವಾಗಿ ಅಂಕುರಿಸುವ ಕ್ಷಣದಿಂದಲೇ ಕೈಕೊಡಲು ಶುರುಮಾಡುವ ಕಾಂಚಾಣವಾಗಿ ಮಾರ್ಪಟ್ಟ ಅನ್ನಜೀವಿಯನ್ನು ಸದಾ ದಾಸ್ಯದಲ್ಲೇ ಇಡುವ ನನ್ನ ಸಮಾಜದ ನಗ್ನ ಸತ್ಯವನ್ನು ಬೇಂದ್ರೆಯವರ ಪ್ರಸಿದ್ಧ ಕವಿತೆ 'ಕುರುಡು ಕಾಂಚಾಣ' ಅಸ್ಪಾದೃಶವಾಗಿ ಗ್ರಹಿಸುತ್ತದೆ. ಇಲ್ಲಿಯೂ ಮನುಷ್ಯನ ಸಂಗ್ರಹಗುಣ ಬಾಳಿನ ಗೋಳಿಗೆ ಮೂಲವಾಗಿರುವುದರತ್ತಲೇ ಬೇಂದ್ರೆಯವರ ಒತ್ತು. ಗುಡಿ, ಅಂಗಡಿ ಮತ್ತು ಮಹಡಿಯಲ್ಲಿ ಕಾಂಚಾಣವಾಗಿ ಮಾರ್ಪಟ್ಟ ಅನ್ನದ ಕಣಜಗಳೇ ಇವೆ. ಆದರೆ ಅವುಗಳ ಹೃದಯ ಕುರುಡು. ಹೀರಬಲ್ಲವು; ದ್ರವಿಸಲಾರವು. ಬಂಡವಾಳಿಗರ ಅನ್ನ ವಿರೋಧಿ ನಿಲುವು, ಜನ ವಿರೋಧಿ ನಿಲುವು; ಜನ ವಿರೋಧಿ ನಿಲುವು ಜೀವ ವಿರೋಧಿ ನಿಲುವು; ಎಲ್ಲ ಜೀವ ವಿರೋಧಿ ನಿಲುವುಗಳೂ ಧರ್ಮ ವಿರೋಧವೆಂಬುದು ಬೇಂದ್ರೆ ದರ್ಶನ.

ಅನ್ನಾವತಾರದ ಗೈರುಹಾಜರಿಯಿಂದ ಇತಿಹಾಸದ ಉದ್ದಕ್ಕೂ ಉಂಟಾದ ವಿಷಮ ಪರಿಸ್ಥಿತಿಯ ಅರಿವಿದ್ದೂ ಬೇಂದ್ರೆ ಭರವಸೆ ಕಳೆದುಕೊಂಡವರಲ್ಲ. ಬೇಂದ್ರೆಯವರದು ಭರವಸೆಯ ಕಾವ್ಯ; ಆಶಾವಾದದ ಕಾವ್ಯ. ಅನ್ನದ ಸಮಸ್ಯೆ ಒಂದಿಲ್ಲೊಂದು ದಿನ ಬಗೆಹರಿದು ಪ್ರಾಣೋನ್ನತಿಯಾಗುತ್ತದೆಯೆಂದು ನಂಬಿದ ಕಾವ್ಯ. ಎಂತಹ ಕೆಟ್ಟ ಪರಿಸ್ಥಿತಿಯಲ್ಲೂ ಅನ್ನ ಮತ್ತು ಪ್ರಾಣವನ್ನು ಸಾವು ಮುಟ್ಟಲಾರದು ಎಂಬಂತಹ ಆಧ್ಯಾತ್ಮಿಕ ನಿಲುವು ಬೇಂದ್ರೆಯವರದು. ಅನ್ನ ಪ್ರಾಣಗಳು ಬ್ರಹ್ಮನ ಆವಿಷ್ಕಾರಗಳೇ ಆಗಿರುವುದರಿಂದ ಅವು ಅವಿನಾಶಿ. ಆದ್ದರಿಂದ ಇಂದಲ್ಲ ನಾಳೆ ತಿನ್ನಬಲ್ಲ ಹೊಟ್ಟೆಗಳಿಗೆಲ್ಲ ಅನ್ನ ಸಿಕ್ಕಿ ಪ್ರಾಣೋತ್ಕರ್ಷವಾಗುತ್ತದೆಯಂದು ನಂಬಿದ ಕಾವ್ಯ 'ಯಜ್ಞ' ಎಂಬ ಕವಿತೆ ಈ ಭರವಸೆಯನ್ನು ಹೊತ್ತು ನಿಂತ ಬಗೆಯಿದು:

೧. ಪ್ರಾಣವೊಂದು ಮೂಕಪ್ರಾಣಿ
ಎನುವ ಹಾಗೆ ಬಲಿಯು ಎಂದು
ಬಡಿಸಿಕೊಂಡು ಬಾಡಿಸುವೆನು
ಎಂಬ ಜಂಬ ಸಾವಿಗಿಹುದೆ ?
ಹರಣವಹುದು ಹೊತ್ತ ಹಂಚು
ಹುರಿದ ಅರಳು ಸಾವುಗೀವು
ಬೆದರಿಅಂಜಿ ಸಾಯಲಿಕ್ಕೆ
ಪ್ರಾಣ ಪುಕ್ಕ ಹಕ್ಕಿಯಲ್ಲ.

೨. ಬೆಳಕಬಾಳ ಬೆಳಸಲಿಕ್ಕೆ
ಬೆಳೆಯಬಾಳು ಬೆಳೆದು ಬಂತು
ಉಳಿದ ಹಾಳು ಬಾಯಿಗಳಿಗೆ
ಕಾಳು ಕಡಿಯು ಹುಟ್ಟಲಿಲ್ಲ
ಅನ್ನವಮೃತವಿದ್ದ ಹಾಗೆ
ಯಾರ ಬಾಯಿಯಲ್ಲಿ ಕೂಡ
ಕರಗಲಿಲ್ಲ; ಅರಗಲಿಲ್ಲ
ಅನ್ನಗಿನ್ನವೇಕೆ ಬೇಕು ?
ಪ್ರಾಣವಾಯುವನ್ನು ಕುಡಿದು
ಪ್ರಾಣದೀಪ ಬೆಳಗದೇನು ?

ಅನ್ನ ವಂಚನೆಯಿಂದ ರೋಸಿಹೋಗಿ ನೆಲಕಚ್ಚಿದ ಜೀವಿಗಳಲ್ಲಿ ಪ್ರತಿಭಟನೆಯ ಕ್ರಾಂತಿಯ ಒಳಸುಳಿಗಳನ್ನು ಬೇಂದ್ರೆ ಕಾವ್ಯ ಸೂಕ್ಷ್ಮವಾಗಿ ಗುರುತಿಸಿದೆ. ಅನ್ನ ಕಸಿದುಕೊಂಡ ವ್ಯವಸ್ಥೆಯನ್ನು ಬರೆದು ನಾಶ ಮಾಡುವ ಮೂಕ ರೋಷ 'ತುತ್ತಿನ ಚೀಲ' ಕವಿತೆಯ ಕೊನೆಯ ಭಾಗದಲ್ಲಿ ನಿಚ್ಚಳವಾಗಿ ಪ್ರಕಟವಾಗುತ್ತದೆ.

ದೇವರದೊಂದು । ಗೋರಿಯ ಕಟ್ಟಿ
ಧರ್ಮದ ಧೂಪಕೆ । ಬೆಂಕಿಯನಿಕ್ಕಿ
ಗಣಗಣಬಾರಿಸಿ । ಪ್ರಾಣದ ಗಂಟೆಯ
ಸಾವಿನ ನೋವಿಗೆ । ಕಲಮಲವೆದ್ದು
ನೆಲವನ್ನೆಲ್ಲಾ । ತುತ್ತುವೆನೆಂದು
ಗದರುತ್ತಿಹುದು । ಗರ್ಜಿಸುತಿಹುದು
ಬಡವರ ಬಗ್ಗರ। ತುತ್ತಿನ ಚೀಲದ
ಒಳಗಿನ ಒಳಗಿನ । ಒಳದನಿಯೊಂದು !

'ಕುರುಡು ಕಾಂಚಾಣ' ಕವಿತೆಯಲ್ಲಿ ಸಾಮಾಜಿಕ ಬದಲಾವಣೆಯ ಸ್ವರೂಪ ಮೈದೋರುವ ರೀತಿ ಬೇರೆಯೇ ತೆರ:

ಹ್ಯಾಂಗಾರ ಕುಣಕುಣದು
ಮಂಗಾಟ ನಡೆದಾಗ
ಅಂಗಾತ ಬಿತ್ತ್ಯೋ, ಹೆಗಲಾಲಿ ಎತ್ತ್ಯೋ

ಈ ನುಡಿಯ ಬಗೆಗೆ ಬಹಳ ಚರ್ಚೆಗಳಾಗಿವೆ. ಕೆಲವರು ಕ್ರಾಂತಿಕಾರಿ ಎಂದು ಅರ್ಥೈಸಿದರೆ ಇನ್ನು ಕೆಲವರು ಯಥಾಸ್ಥಿತಿಯನ್ನು ಪುರಸ್ಕರಿಸುವುದೆಂದು ವ್ಯಾಖ್ಯಾನಿಸಿದ್ದಾರೆ. ನನ್ನ ಮಟ್ಟಿಗೆ ಈ ನುಡಿ ಇತಿಹಾಸದ ಒಂದು ವ್ಯಂಗ್ಯವನ್ನೇ ಧ್ವನಿಸುತ್ತದೆ. ಹ್ಯಾಂಗಾರ ಕುಣಿಯುವುದು ಯಾವುದು ? ಕುರುಡು ಕಾಂಚಾಣ. ಅದು ಎಲ್ಲಿ ಕುಣಿಯುತ್ತದೆ ?

ಗುಡಿಯೊಳಗ ಗಣಣ, ಮ
ಹಡಿಯೊಳಗೆ ತನನ, ಅಂ
ಗಡಿಯೊಳಗೆ ಝಣ ಣಣ ನುಡಿಗೊಡುತ್ತಿತ್ತೋ

ಈ ಗುಡಿ,ಅಂಗಡಿ, ಮಹಡಿ ಏನನ್ನುಸೂಚಿಸುತ್ತವೆ ? ಬಂಡವಾಳಶಾಯಿ ಮನೋವೃತ್ತಿಯನ್ನು ಸೂಚಿಸುತ್ತವೆ. ಬಂಡವಾಳಶಾಯಿ ತನ್ನ ಗೋರಿಯನ್ನು ತಾನೇ ತೋಡಿಕೊಳ್ಳುತ್ತದೆಯೆಂಬ ಪ್ರಸಿದ್ಧ ಪ್ರಮೇಯವನ್ನು ನೆನಪಿಸಿಕೊಳ್ಳುವ ಕುರುಡು ಕಾಂಚಾಣ ಅಂತಹ ಗೋರಿ ತೋಡಿಕೊಳ್ಳುತ್ತದೆಯೆಂಬ ಧ್ವನಿ ಹುಟ್ಟುವುದಿಲ್ಲವೇ ? ಆ ಗೋರಿಯೇ ಹೊಸ ಬದುಕಿಗೆ, ಅನ್ನಾಧಾರಿತ ಬದುಕಿಗೆ, ಶುಭೋದಯಕ್ಕೆ ಗೊಬ್ಬರವಾದೀತೆಂಬ ಸೂಚನೆ ಹೊರಡುವುದಿಲ್ಲವೇ ? ಆದರೆ ಬೀಳುವವರೆಗೆ ಕಾಯಬೇಕ ? ಇತಿಹಾಸವೆಲ್ಲ ಕಾಯುತ್ತಲೇ ಕಟ್ಟಿದ್ದಲ್ಲವೆ'

ಅನ್ನ-ಚಿನ್ನ-ಕಾಂಚಾಣ ವಸ್ತುವಾಗುಳ್ಳ ಬೇಂದ್ರೆಯವರ ಕವನಗಳನ್ನೆಲ್ಲ ಮುಂದಿಟ್ಟುಕೊಂಡು ಗ್ಯಾನ ಮಾಡಿದಾಗ ಒಂದಂಶ ಸ್ಪಷ್ಟವಾಗುತ್ತದೆ: ವ್ಯವಸಾಯ ಪ್ರಧಾನ ಜೀವನ ಪದ್ಧತಿಯಿಂದ ವ್ಯಾಪಾರ ಪ್ರಧಾನ ಜೀವನ ಪದ್ಧತಿಗೆ ಹೊರಳಿಕೊಳ್ಳುವ ಸಂಧಿಕಾಲದಲ್ಲಿನ ತಲ್ಲಣಗಳನ್ನು ನವೋದಯ ಕಾವ್ಯದಲ್ಲಿ ಗುರುತಿಸುತ್ತೇವೆ. ಬೇಸಾಯವೇ ಮೌಲ್ಯವಾಗಿದ್ದಾಗಲೂ ಆಹಾರವಸ್ತುಗಳ ವಿನಿಮಯ ನಡೆಯುತ್ತಿತ್ತು. ಆದರೆ ಆ ವಿನಿಮಯ ವ್ಯಾವಹಾರಿಕವಾಗಿರಲಿಲ್ಲ: ಜೀವಪರವಾಗಿತ್ತು; ಜನಪರವಾಗಿತ್ತು. ಆದರೆ ಮಾರುಕಟ್ಟೆ ಸಂಸ್ಕೃತಿಯಲ್ಲಿ ಜೀವಪರವಾದ ಮಾನವೀಯ ಚಟುವಟಿಕೆಗಿಂತ ಸಂಗ್ರಹಪರವಾದ ಬಂಡವಾಳಶಾಯಿ ಮನೋಭಾವವೇ ಜಾಸ್ತಿಯಾಗಿರುತ್ತದೆ. ಆಗ ಶಕ್ತಿಯಿದ್ದವನು ಸಂಗ್ರಹಿಸಬಲ್ಲವನಾಗಿ ಬಲಿಷ್ಟನಾಗುತ್ತಾನೆ. ಮುಗ್ಧರು ವಂಚನೆಗೊಳಗಾಗಿ ಬರಿದಾಗುತ್ತ ನೆಲಹಿಡಿಯುತ್ತಾರೆ. ಆಗ 'ಅನ್ನದಾಟಿ, ಮುಪ್ಪ ಮೀರಿ ಸತ್ಯ ಸೇರಿದಾಗ ಆತ್ಮದ ಉದಯ' ಆಗುವುದು ಹೇಗೆ ? ಕೇಂದ್ರೀಕೃತ ಅರ್ಥವ್ಯವಸ್ಥೆ, ಅನ್ನ ತಿನ್ನಬಾರದ ಚಿನ್ನವಾಗಲು ಚಿನ್ನ ಅಂತಃ ಕರಣವನ್ನೇ ಕಳೆದುಕೊಂಡ ಕುರುಡು ಕಾಂಚಾಣವಾಗಿರಲು, ಕಾರಣವಾಗಿ ಸಾಮಾಜಿಕವಾದ ಎಲ್ಲ ರೋಗಗಳಿಗೂ ಮೂಲವಾಗುತ್ತದೆಯೆಂದು ಬಹುಶಃ ಬೇಂದ್ರೆಯವರ ನಿಲುವು. ಅನ್ನವನ್ನುಕುರಿತ ಬೇಂದ್ರೆಯವರ ಕವಿತೆಗಳು ವೇದ, ಉಪನಿಷತ್ತು ಮತ್ತು ಪುರಾಣಗಳ ನೆನಪುಗಳಿಂದ ದಟ್ಟವಾಗಿರುವುದು ಹೌದು.

ಆದರೆ ಅವರ ಕವಿತೆಗಳು ಅನ್ನ- ವಾಸ್ತವಕ್ಕೆ ಮುಖ ತಿರುಗಿಸಿದವುಗಳಲ್ಲ.

ಅನ್ನ ಸಮಸ್ಯೆಯನ್ನು ಕುರಿತಂತೆ ಬೇಂದ್ರೆಯವರ ಪ್ರಣಾಲಿಕೆಯಂತಿರುವ 'ಅನ್ನಯಜ್ಞ' ಕವಿತೆಯ ಕೊನೆಯ ಎರಡುನುಡಿಗಳ ಉದ್ಧರಣದೊಂದಿಗೆ ಈ ವಿಷಯ ಮುಗಿಸಬಹುದು.

೧. ಇದ್ದ ನೆಲವ ಹೊಲವ ಮಾಡಿ ಬಿತ್ತಬೇಕು ಕಾಳನು
ಬದುಕಲಿರುವ ಬಾಯಿಗಳಿಗೆ ತುತ್ತಬೇಕು
- ಕೂಳನು
ಅನ್ನದಾನ ಮಹಾಯಜ್ಞ ! ಅನ್ನಹೀನ ಆಳನು
ಅನ್ನಮುಚ್ಚಿಬಾಳಲೆಳಸುವವನು ಮಹಾಖೂಳನು
ನೆಲದ ಹುರಡಿನಲ್ಲಿ ಹುರುಳಿಗಿಂತ ಜೊಳ್ಳೆಹೆಚ್ಚಿಗೆ
ಗದ್ದು ಸತ್ತುಪಡೆಯುವವರು ಹುಚ್ಚ ಜನರ
- ಮೆಚ್ಚಿಗೆ

೨. ಮತ್ತೆನೆಲದ ಎದೆಯ ಮೇಲೆ ತೆನೆಯ
- ಧ್ವಜವು ನಿಲ್ಲಲಿ
ಸಾವಿಗಿಂತ ಬಾಳು ಮೇಲು ಎಂಬ ಮಾತು
- ಗೆಲ್ಲಲಿ
ವಿಷದ ಒಡಲಿನಿಂದ ರಸದ ಊಟ ಚಿಮ್ಮಿ
- ಚೆಲ್ಲಲಿ
ಪ್ರೇಮವೇ ಹಣ್ಣಾಗಿ ಬರಲಿ ಕವಿಯ ಬಲ್ಲ
- ಸೊಲ್ಲಲಿ
ಹೊನ್ನ ನೆಕ್ಕಿ ಬಾಳ್ವರಿಲ್ಲ, ಅನ್ನಸೂರೆ ಮಾಡಿರಿ
ಅಣ್ಣಗಳಿರಾ ಅನ್ನದಲ್ಲಿ ಮಣ್ಣ ಕಲಸಬೇಡಿರಿ

''ಮಾನವನ ದೀನತೆಯೂ ಧರ್ಮದ ಅತಂತ್ರತೆಯೂ ಅನ್ನದ ಅವ್ಯವಸ್ಥೆಯ ಮೂಲಕವಾಗಿಯೇ ಇವೆ'' - ದ.ರಾ.ಬೇಂದ್ರೆ. 'ಅನ್ನ' ಎಂಬ ಲೇಖನದಲ್ಲಿ.

**ಆಧರಿಸಿದ ಕವನಗಳು :**

೧. ತುತ್ತಿನ ಚೀಲ : ಗರಿ

೨. ಕೆಲಸವಿಲ್ಲದವರ ಹಾಡು : ಗರಿ

೩. ಅನ್ನಾವತಾರ : ನಾದಲೀಲೆ

೪. ಅನ್ನಯಜ್ಞ : ಗಂಗಾವತರಣ

೫. ಅನ್ನ ಬಕಾಸುರ ರಾಜ್ಯದಲ್ಲಿ : ಬಾ ಹತ್ತರ

೬. ಬೈರಾಗಿಯ ಹಾಡು : ಸಖೀಗೀತ

೭. ದರಿದ್ರನಾರಾಯಣ : ಸೂರ್ಯಪಾನ

೮. ಅನ್ನ ಬೇಕು : ಯಕ್ಷ-ಯಕ್ಷಿ

೯. ಬಿಡುಗಡೆ : ಬಾ ಹತ್ತರ

೧೦. ಯೌವನದ ಕನಸು : ಅರಳು - ಮರುಳು

೧೧. ನೃತ್ಯಯಜ್ಞ : ಸೂರ್ಯಪಾನ

೧೨. ಯಜ್ಞ : ನಾದಲೀಲೆ

೧೩. ಕುರುಡು ಕಾಂಚಾಣ : ನಾದಲೀಲೆ

೧೪. ಭೂಮಿತಾಯಿಯ ಚೊಚ್ಚಿಲ ಮಗ : ನಾದಲೀಲೆ

# ಕುಮಾರ ವ್ಯಾಸ

- ಡಾ. ಮಳಲಿ ವಸಂತಕುಮಾರ್

ಭಾರತೀಯ ಸಂಸ್ಕೃತಿಯ ಸಾಹಿತ್ಯ ಪರಂಪರೆಯ ಅರ್ಥಪೂರ್ಣ ಧ್ವನಿಯಾಗಿ ಮೂಡಿ ಬಂದವನು ಕುಮಾರವ್ಯಾಸ. ಕನ್ನಡ ಸಾಹಿತ್ಯದ ಸಾರ್ವಭೌಮ ಎಂಬ ಹೆಸರು ಇವನಿಗೆ ನ್ಯಾಯವಾಗಿ ಸಲ್ಲುವಂತಹದು. ಸಮಷ್ಟಿ ಪ್ರಜ್ಞೆಯಲ್ಲಿ ಪರಿಭಾವಿಸಿದಾಗ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಈತನ ಸ್ಥಾನ ಉನ್ನತೋನ್ನತವಾದುದು.

**ಕವಿ :**

ಕುಮಾರವ್ಯಾಸನಿಗೆ ನಾರಣಪ್ಪ ಎಂಬ ಇನ್ನೊಂದು ಹೆಸರು ಪ್ರಚಲಿತವಾಗಿದೆ. 'ಯೋಗೀಂದ್ರ' ನೆಂದು, 'ಶುಕರೂಪ' ನೆಂದು ಆತ ತನ್ನನ್ನು ಕರೆದುಕೊಂಡಿದ್ದಾನೆ. ಕುಮಾರವ್ಯಾಸನೆಂಬುದು ಅವನ ಬಿರುದೆಂದೂ ನಾರಣಪ್ಪ ಎಂಬುದು ಅವನ ನಿಜವಾದ ಹೆಸರೆಂದೂ ಕೆಲವರ ವಾದ. ಬಿರುದು ಸಾಮಾನ್ಯವಾಗಿ ಬೇರೆಯವರು ಕೊಟ್ಟಿದ್ದು. ಆದರೆ ಅದಕ್ಕೆ ಆಧಾರಗಳಿಲ್ಲ. ಕುಮಾರವ್ಯಾಸ ಅವನ ಕಾವ್ಯನಾಮ ಎಂಬುದು ಮಾಸ್ತಿಯವರ ಅಭಿಪ್ರಾಯ (ನೋಡಿ : ಮಾಸ್ತಿ ವೆಂಕಟೇಶ ಐಯ್ಯಂಗಾರ್, ಕುಮಾರವ್ಯಾಸ ಕನ್ನಡವಿಶ್ವಕೋಶ, ನಂ. ೪, ಪುಟ ೭೨). ತೊರವೆ ನರಹರಿ ವಾಲ್ಮೀಕಿಯ ಮೇಲಣ ಭಕ್ತಿಯಿಂದ ತನ್ನನ್ನು ಕುಮಾರ ವಾಲ್ಮೀಕಿ ಎಂದು ಕರೆದುಕೊಂಡಂತೆ, ನಾಗಚಂದ್ರ ಪಂಪನ ಮೇಲಣ ಗೌರವದಿಂದ ತನ್ನನ್ನು ಅಭಿನವ ಪಂಪ ಎಂದು ಕರೆದುಕೊಂಡಂತೆ, ನಾರಣಪ್ಪ, ವ್ಯಾಸರ ಬಗ್ಗೆ ತನಗಿರುವ ಪ್ರೀತಿಯಿಂದ ತನ್ನನ್ನು ಕುಮಾರವ್ಯಾಸ ಎಂದು ಕರೆದುಕೊಂಡಿರಬಹುದು. ನಾರಣಪ್ಪ ಎಂಬ ಹೆಸರು ಕವಿ ಕೃತಿಯಲ್ಲಾಗಲಿ ಶಾಸನಗಳಲ್ಲಾಗಲಿ ಕಂಡು ಬಂದಿಲ್ಲ. ಇತ್ತೀಚೆಗೆ ಗದುಗಿನ ಕೋಳಿವಾಡ ಗ್ರಾಮದಲ್ಲಿ ಕುಮಾರವ್ಯಾಸನ ಮನೆತನಕ್ಕೆ ಸೇರಿದವರೆಂದು ಹೇಳಲಾದವರ ಮನೆಯಲ್ಲಿ ಕುಮಾರವ್ಯಾಸನನ್ನು ಕುರಿತ ಪ್ರಾಚೀನ ಕಾಗದ ಪತ್ರಗಳಿವೆ. ವೀರ ನಾರಾಯಣಯ್ಯನು ಗದುಗಿನ ವೀರಾನಾರಾಯಣನ ವರಪ್ರಸಾದಿಂದ ಹುಟ್ಟಿದನೆಂದೂ ಅದಕ್ಕಾಗಿ ಅವನಿಗೆ ಆ ಹೆಸರನ್ನಿಡಲಾಯಿತೆಂದೂ ಒಂದು ಬಖೈರಿನಲ್ಲಿದೆ. ಈ ಹೆಸರಿನ ಸಂಕ್ಷಿಪ್ತರೂಪವೇ 'ನಾರಣಪ್ಪ' (ಡಾ॥ ಟಿ.ವಿ. ವೆಂಕಟಾಚಲ ಶಾಸ್ತ್ರೀ, ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ, ಸಂ. ೫, ಪು. ೬೧೮) ಎಂದು ಭಾವಿಸಲಾಗಿದೆ. ಆದರೆ ಐನೂರು ವರ್ಷಗಳ ಹಿಂದಿನ

ಕವಿಯನ್ನು ಕುರಿತ ಇಂತಹ ಪತ್ರಗಳ ವಾಸ್ತವಾಂಶದ ಬಗ್ಗೆ ವಿದ್ವಾಂಸರಲ್ಲಿ ಸಂದೇಹವಿದೆ. ಈ ಪತ್ರಗಳು ಸ್ವಕಲ್ಪಿತ ಸೃಷ್ಟಿಯಾಗಿರಬಹುದೆಂಬ ಅಭಿಪ್ರಾಯವೂ ಇದೆ. ಆದರೆ ಸ್ವಯಂ ಕುಮಾರವ್ಯಾಸನೇ ಗದುಗಿನ ವೀರನಾರಾಯಣನನ್ನು ತನ್ನ ಕೃತಿಯಲ್ಲಿ ಸ್ತುತಿಸಿರುವುದರಿಂದಲೂ, ಅವನು ಗದುಗಿನ ವೀರನಾರಾಯಣನ ಕಿಂಕರನಾದುದರಿಂದಲೂ ಜನರ 'ಸರಸ ಸಂಗ್ರಹ'ದಲ್ಲಿ ಅವನಿಗೆ ನಾರಣಪ್ಪ ಎಂಬ ಹೆಸರು ಉಳಿದು ಬಂದಿರಬೇಕು. ಅಥವಾ ಕುಮಾರವ್ಯಾಸ ಬದುಕಿದ್ದ ಕಾಲದಲ್ಲಿ ಜನ ಅವನನ್ನು ನಾರಣಪ್ಪ ಎಂದು ಸಂಬೋಧಿಸುತ್ತಿದ್ದು ಅದು ಹಾಗೆಯೇ ಉಳಿದು ಬಂದಿರಬೇಕು. ಕವಿ ತನ್ನನ್ನು ಕುಮಾರವ್ಯಾಸ ಎಂದು ತನ್ನ ಗ್ರಂಥದಲ್ಲಿ ಕರೆದುಕೊಂಡಿದ್ದಾನೆ. ಗದುಗಿನಲ್ಲಿರುವ ಒಂದು ಶಾಸನದಲ್ಲಿ (ಶಾ.ಶ. ೧೪೬೧) ವಿಜಯನಗರದ ವೀರಪ್ರತಾಪ ಅಚ್ಯುತ ರಾಯನು, ಕುಮಾರವ್ಯಾಸ ಇಷ್ಟದೇವತೆಯಾದ ವೀರನಾರಾಯಣಸ್ವಾಮಿಯ ದೇಗುಲಕ್ಕೆ ದತ್ತಿಕೊಟ್ಟನೆಂದಿದೆ. ಇನ್ನು 'ಶುಕರೂಪ' ಎಂದು ಅವರ ಪಾಲಿಗಿರುವ ಇನ್ನೊಂದು ಹೆಸರು. ಕವಿ ತನ್ನನ್ನು ಬಣ್ಣಿಸಿಕೊಂಡಿರುವ ರೀತಿಯೇ ಹೊರತು ನಿಜವಾದ ಹೆಸರಲ್ಲ. ಅಲ್ಲದೆ ತನ್ನ ಭಾರತದ ಪ್ರತಿ ಪರ್ವದ ಕೊನೆಯಲ್ಲಿ ಬರುವ ಗದ್ಯದಲ್ಲಿ ಈತ 'ಶ್ರೀಮತ್ಕುಮಾರವ್ಯಾಸಯೋಗೀಂದ್ರ' ಎಂದು ತನ್ನನ್ನು ಸಂಬೋಧಿಸಿಕೊಂಡಿದ್ದಾನೆ. ಯೋಗೀಂದ್ರ ಎಂಬುದು ಕುಮಾರವ್ಯಾಸನೆಂಬ ಹೆಸರಿನ ತುದಿಗೆ ಸೇರಿಕೊಂಡಿದ್ದು ಕವಿಯ ಪರಿವ್ರಾಜಕ ಭಾವನೆಯ ಆಧ್ಯಾತ್ಮಿಕ ಹಿರಿಮೆಗೆ ಸಾಕ್ಷಿಯಾಗಿದೆಯೆ ಹೊರತು ಅದು ಕವಿಯ ನಿಜ ನಾಮವಲ್ಲ.

ಕುಮಾರವ್ಯಾಸನ ಕೃತಿ 'ಕರ್ನಾಟಕ ಭಾರತ ಕಥಾ ಮಂಜರಿ'. ಅದು 'ಗದುಗಿನ ಭಾರತ', ಕುಮಾರವ್ಯಾಸ ಭಾರತ', 'ಕನ್ನಡ ಭಾರತ' ಮುಂತಾಗಿ ಖ್ಯಾತಿಯನ್ನು ಪಡೆದಿದೆ. 'ಕರ್ನಾಟಕ ಮಹಾಭಾರತ' ಎಂದೂ ಸಹ ಕರೆಯುತ್ತಾರೆ. ತಾನು ಬರೆದ ಒಂದೇ ಗ್ರಂಥದಿಂದ ಜಗತ್ತಿನ ಮಹಾ ಕವಿಗಳ ಸಾಲಿಗೆ ಸೇರಿದ್ದು ಕುಮಾರ ವ್ಯಾಸನ ಹೆಗ್ಗಳಿಕೆ. ನಡುಗನ್ನಡ ಭಾಮಿನಿ ಷಟ್ಪದಿಯಲ್ಲಿರುವ ಈ ಕಾವ್ಯ ಹತ್ತು ಪರ್ವಗಳಲ್ಲಿ ೧೫೨ ಸಂಧಿಗಳನ್ನೊಳಗೊಂಡಿದೆ. ಇದರಲ್ಲಿ ಸುಮಾರು ೮೧೮೪ ಪದ್ಯಗಳಿವೆ. ಕುಮಾರವ್ಯಾಸ 'ಐರಾವತ' ಎಂಬ ಮತ್ತೊಂದು ಕೃತಿಯನ್ನು ಬರೆದಿದ್ದಾನೆ ಎಂಬ ಹೇಳಿಕೆ ಇದೆ. ಆ ಗ್ರಂಥದ ಕರ್ತೃತ್ವಕ್ಕೆ ಮೂರು ಕವಿಗಳ ಹೆಸರುಗಳು ಅಂಟಿಕೊಂಡಿವೆ. ಎಂಟು ಸಂಧಿಗಳ ಈಕಾವ್ಯದ ಹಸ್ತಲಿಖಿತ ಪ್ರತಿಗಳಕೊನೆಯಲ್ಲಿ ಬರುವ ಗದುಗಿನ ವೀರ ನಾರಾಯಣನ ಅಂಕಿತ ಇರುವುದು. ಇದು ಕುಮಾರವ್ಯಾಸ ಬರೆದುದೆಂದು ಹೇಳಲು ಕಾರಣವಾಗಿದೆ. ಆರ್.ಎಸ್. ಪಂಚಮುಖಿ 'ಐರಾವತ' ಕುಮಾರವ್ಯಾಸ ವಿರಚಿತವೆಂದು ಅದರ ಉಪೋದ್ಘಾತದಲ್ಲಿ ಹೇಳುತ್ತಾರೆ. ಆದರೆ. ರಂ.ಶ್ರೀ ಮುಗಳಿ ಅವರು 'ಕುಮಾರವ್ಯಾಸನು ಈ ಕಾವ್ಯದ ಕರ್ತೃವಾಗಿರಲಾರನೆಂದೂ ಬೇರೊಬ್ಬ ತರುವಾಯದ ಸಾಧಾರಣ ಕವಿ ಕುಮಾರವ್ಯಾಸನ ಆದಿ ಪರ್ವದ 'ಐರಾವತ'

ಭಾಗವನ್ನು ತನಗೆ ತೋರಿದಂತೆ ವಿಸ್ತರಿಸಿ ಬರೆದಿರಬಹುದೆಂದೂ ನಮಗೆ ತೋರುತ್ತದೆ. ಏಕೆಂದರೆ ಭಾವಭಾಷೆಗಳಲ್ಲಿ ಕುಮಾರವ್ಯಾಸನ ಉಜ್ವಲತೆ ಸಹಜತೆಗಳ ಅನುಭಾತಿ ಇದರಲ್ಲಿ ಆಗುವುದಿಲ್ಲ' (ರಂ.ಶ್ರೀ. ಮುಗಳಿ, ಕನ್ನಡ ಸಾಹಿತ್ಯ ಚರಿತ್ರೆ, ಪು. ೨೩೦-೩೧) ಎಂಬ ಅಭಿಪ್ರಾಯಪಡುತ್ತಾರೆ. ಐರಾವತ ಕರ್ತೃವಿನ ಬಗ್ಗೆ ವಿದ್ವಾಂಸರಲ್ಲಿ ಚರ್ಚೆ ನಡೆದಿದ್ದು ಅದು ಕುಮಾರ ವ್ಯಾಸ ಬರೆದುದಲ್ಲ ಎಂಬುದರ ಬಗ್ಗೆಯೇ ಹೆಚ್ಚು ಒಲವಿರುವಂತೆ ಕಂಡುಬಂದಿದೆ.

ಗದುಗಿನ ಬಳಿಯ ಕೋಳಿವಾಡ ಗ್ರಾಮ ಕುಮಾರವ್ಯಾಸನ ಊರು. ಆ ಪ್ರದೇಶದಲ್ಲಿ ನೆಲಸಿರುವ ಜನಾಭಿಪ್ರಾಯದಂತೆ ಆ ಗ್ರಾಮ ಕುಮಾರವ್ಯಾಸನ ವಂಶಸ್ಥರಿಗೆ ಉಂಬಳಿಯಾಗಿ ಬಂದುದು. ಈತನ ತಂದೆಯಾದ ಲಕ್ಕರಸ ಅಥವಾ ಲಕ್ಷ್ಮಣ ದೇವ ಎಂಬುವನು ವಿಜಯನಗರದ ದೇವರಾಯನಲ್ಲಿ (ಕ್ರಿ.ಶ. ೧೪೦೬-೧೪೨೨) ಮಂತ್ರಿಯಾಗಿದ್ದ. ಆ ಲಕ್ಕರಸನ ಐವರು ಗಂಡು ಮಕ್ಕಳಲ್ಲಿ ಹಿರಿಯವ ವೀರ ನಾರಾಯಣ. ಈತನೇ ಕುಮಾರ ವ್ಯಾಸ. ಕುಮಾರವ್ಯಾಸನ ಕಾಲ ಮತ್ತು ಮತ ಧರ್ಮದ ಬಗ್ಗೆ ಸಾಕಷ್ಟು ಮತಭೇದಗಳಿವೆ. ಈತ ಬ್ರಾಹ್ಮಣ, ಗೌಡ ಮತ್ತು ವೀರಶೈವ ಧರ್ಮಗಳಿಗೆ ಸೇರಿದವನೆಂದು ಪರ ಮತ್ತು ವಿರೋಧವಾದ ಚರ್ಚೆಗಳು ನಡೆದಿವೆ. ಶ್ರೀ ಶ.ಕ. ಕೋಳಿವಾಡ ಎಂಬುವರು 'ಕೋಳಿವಾಡ ಗೌಡರ ಮೂಲ ಪುರುಷನು ಚಿನ್ನದ ಕೈಯ ಮಾಧವರಸನು. ಈತನ ಮಗ ತಿರುಮಲಯ್ಯನು. ಆತನ ಮಗನು ಲಕ್ಷ್ಮಣದೇವ (ಲಕ್ಕರಸಯ್ಯ). ಈತನ ಮಗನೇ ವೀರನಾರಾಯಣ (ಕುಮಾರವ್ಯಾಸ). ಈ ಲಕ್ಷಣದೇವನು ವಿಜಯನಗರದ ಅರಸರಲ್ಲಿ ಮಂತ್ರಿಯಾಗಿದ್ದನೆಂದು ಗೌಡರ ಇತಿಹಾಸದಿಂದ ತಿಳಿಯುತ್ತದೆ.' ( ಶ್ರೀಮಾನ್ ಶ.ಕ. ಕೋಳಿವಾಡ, ಧಾರವಾಡ 'ಶಾರದೆ' ಸಂ. ೩ - ಸಂಚಿಕೆ-೪, ಉದ್ಧೃತ : ಕು.ವ್ಯಾ. ಪ್ರಶಸ್ತಿ) ಎಂದಿದ್ದಾರೆ. ಲೂಯಿ ರೈಸ್ ಕೂಡ ಈತ ಕೋಡಿವಾಳ (ಕೋಳಿವಾಡ)ದ ಗೌಡನೆಂದೂ ಇವನ ಹೆಸರು ನಾರಣಪ್ಪನೆಂದು ಇರಬಹುದೆಂದೂ ಬರೆದಿದ್ದಾರೆ. ( Karnataka - Bhashabhushana 1884, Intro P xxvii Karnataka - Sabdanushasana - 1890 Intro p- 41) ಎಸ್.ವಿ. ರಂಗಣ್ಣನವರು ಕುಮಾರವ್ಯಾಸ 'ಗೌಡರ ಅಥವಾ ಶಾನುಭೋಗರ ಕುಲಕ್ಕೆ ಸೇರಿದವನು' ಎಂಬ ತೀರ್ಮಾನಕ್ಕೆ ಬರುತ್ತಾರೆ (ಎಸ್.ವಿ. ರಂಗಣ್ಣ ಕುಮಾರವ್ಯಾಸ, ಪು. ೩೨)

ಕುಮಾರವ್ಯಾಸನನ್ನು ವೀರಶೈವನನ್ನಾಗಿಸುವ ದಂತ ಕಥೆಗಳು ಹುಟ್ಟಿಕೊಂಡಿವೆ. (ಗುರುರಾಜ ಚಾರಿತ್ರ ಸು. ೧೬೫೦) : ಚೋರ ಬಸವ ಚರಿತ್ರೆ (೧೭೬೩). ಇವು ಕುಮಾರ ವ್ಯಾಸನ ನಂತರ ಇನ್ನೂರು ಮುನ್ನೂರು ವರ್ಷಗಳ ತರುವಾಯ ರಚಿತವಾದವು. ವೀರಶೈವ ಗ್ರಂಥಗಳಲ್ಲಿ ಕುಮಾರವ್ಯಾಸನನ್ನು ಪ್ರಭು ಲಿಂಗ

ಲೀಲೆಯ ಕರ್ತೃವಾದ ಚಾಮರಸನ ತಂಗಿಯ ಗಂಡನೆಂದು ಕರೆಯಲಾಗಿದೆ. ರಾಜಾಜ್ಞೆಯಂತೆ ಕುಮಾರವ್ಯಾಸನೂ, ಚಾಮರಸನೂ ಒಂದೊಂದು ಮಹಾಭಾರತ ಕೃತಿಗಳನ್ನು ಬರೆದರಂತೆ. ಇತಿ ಕುಮಾರವ್ಯಾಸನನ್ನು ವೀರಶೈವ ಮತಕ್ಕೆ ಸೇರಿದವನೆಂದು ತೋರಿಸುವ ಉದ್ದೇಶದಿಂದ ಹುಟ್ಟಿಕೊಂಡ ಸ್ವಕಲ್ಪಿತ ಕಟ್ಟುಕತೆಗಳೆನ್ನುವುದರ ಬಗ್ಗೆ ಅನುಮಾನವಿಲ್ಲ. ಕೆಲವು ವಿದ್ವಾಸಂರುಗಳು ಇದನ್ನೇ ಆಧರಿಸಿ ಹಾಗಿದ್ದರೆ ಚಾಮರಸ ಮೊದಲಿಗೆ ಭಾರತ ಬರೆಯುವಾಗ ಬ್ರಾಹ್ಮಣನಾಗಿದ್ದು ತರುವಾಯ ಪ್ರಭುಲಿಂಗ ಲೀಲೆಯನ್ನು ಬರೆಯುವ ಹೊತ್ತಿಗೆ ವೀರಶೈವನಾಗಿರಬೇಕೆಂಬ ಇನ್ನೊಂದುವಾದವನ್ನು ಮುಂದಿಟ್ಟಿದ್ದಾರೆ. ಅವರಿಬ್ಬರೂ ಸಮಕಾಲೀನರಿರಬಹುದು, ಆದರೆ ಸಮಾನ ಪ್ರತಿಭೆಯವರಲ್ಲ. ಕುಮಾರವ್ಯಾಸ ಚಾಮರಸನಿಗಿಂತ ಬಹಳ ಎತ್ತರದ ಕವಿ.

ಕುಮಾರವ್ಯಾಸ ಬ್ರಾಹ್ಮಣ ಮತಕ್ಕೆ ಸೇರಿದವನು ಎಂಬುದಕ್ಕೆ ಆಧಾರಗಳು ಹೆಚ್ಚಾಗಿವೆ. ಆತ ಕರಣಿಕ ವಂಶಸ್ಥನಾಗಿರುವುದು, ಕೋಳಿವಾಡ ಗ್ರಾಮ ಅವರ ವಂಶಸ್ಥರಿಗೆ ಉಂಬಳಿಯಾಗಿ ಬಂದುದು, ಅವನು ಹರಿಪಾರಮ್ಯದ ಯೋಗೀಂದ್ರನೆನಿಸಿ ಕೊಂಡಿರುವುದು, ಕಾವ್ಯದಲ್ಲಿ ವೈದಿಕ ಧರ್ಮಕ್ಕೆ ಹೆಚ್ಚು ಒತ್ತು ಬಿದ್ದಿರುವುದು, ಮತ್ತು ಬ್ರಾಹ್ಮಣರ ಅಗ್ಗಳಿಕೆಯನ್ನು ವಿಶೇಷವಾಗಿ ಎತ್ತಿಹಿಡಿದಿರುವುದು, ಇದಕ್ಕೆ ಪ್ರಬಲ ಕಾರಣಗಳಾಗಿವೆ. ಅಲ್ಲದೆ ಇಂದಿಗೂ ಕೋಳಿವಾಡ ಗ್ರಾಮದಲ್ಲಿ ಕವಿಯ ಮನೆತನಕ್ಕೆ ಸೇರಿದವರೆಂಬ ಬ್ರಾಹ್ಮಣರಿರುವುದು ಅವರಲ್ಲಿ ಈ ಕುರಿತು ಪ್ರಾಚೀನ ಕಾಗದ ಪತ್ರಗಳು (ವಾದವಿವಾದವೇನೇ ಇದ್ದರೂ) ಇದಕ್ಕೆ ಬೆಂಬಲವಾಗಿವೆ (ಈ ಬಗೆಯ ವಿವರವಾದ ತಿಳುವಳಿಕೆಗೆ ನೋಡಿ : ಡಾ.ಟಿ.ವಿ. ವೆಂಕಟಾಚಲಶಾಸ್ತ್ರೀ, ಕ.ಅ. ಕನ್ನಡಸಾಹಿತ್ಯಚರಿತ್ರೆ ನಂ. ೫, ಪು. ೬೧೮). ಕುಮಾರವ್ಯಾಸ ಗದುಗಿನ ವೀರನಾರಾಯಣನ ಪರಮ ಭಕ್ತನಾಗಿದ್ದು ನಿತ್ಯವೂ ಮಿಂದು ಬಂದು ಒದ್ದೆ ಬಟ್ಟೆಯಲ್ಲಿ ವೀರನಾರಾಯಣನ ಗುಡಿಯ ಒಂದು ಕಂಬಕ್ಕೊರಗಿ ಕುಳಿತು ಒದ್ದೆ ಆರುವವರೆಗೆ ಭಾರತವನ್ನು ಬರೆಯುತ್ತಿದ್ದನೆಂದು ಆ ಪ್ರಾಂತದ ಜನರಲ್ಲಿ ಪ್ರತೀತಿ ಇದೆ. ಇಂದಿಗೂ ಆ ಕಂಬಕ್ಕೆ ನಾರಣಪ್ಪನ ಕಂಬ ಎಂದು ಕರೆಯುವ ರೂಢಿಯಲ್ಲಿದೆ. ವೀರನಾರಾಯಣನ ಕವಿಯಾಗಿ ಲಿಪಿಕಾರ ಕುಮಾರವ್ಯಾಸನಾದ. ಕುಮಾರವ್ಯಾಸ ತನ್ನ ಕಾವ್ಯವನ್ನು ಗಮಕದಲ್ಲಿಯೇ ಹೇಳುತ್ತಿದ್ದನೆಂದೇ ಗದುಗಿನ ಪ್ರಾಂತದಲ್ಲಿ ಪ್ರತೀತಿ ಇತ್ತು ' ಎಂದು ಮಾಸ್ತಿಯವರು ಅಭಿಪ್ರಾಯ ಪಡುತ್ತಾರೆ. ಈ ಭಾರತ, ಗಮಕದಿಂದಾಗಿ ಕನ್ನಡಿಗರ ಮನೆಮಾತಾಯಿತು : ಕಲಿತವರಿಗೆ ಮಾತ್ರವಲ್ಲದೆ ಕಲಿಯದವರಿಗೂ ಕಾಮಧೇನುವಾಯಿತು. ಸಂಸ್ಕೃತಿ ಮತ್ತು ಕಲೆಯ ಪುನರುಜ್ಜೀವನಕ್ಕೆ ನಾಂದಿಯಾಯಿತು.

ಸ್ವತಂತ್ರ ಪ್ರವೃತ್ತಿಯ ಪರಿವ್ರಾಜಕ ಮನೋಧರ್ಮದವನಾದ ಕುಮಾರ ವ್ಯಾಸ ಯಾವ ರಾಜಾಶ್ರಯವನ್ನೂ ಪಡೆದಂತೆ ಕಂಡುಬರುವುದಿಲ್ಲ. ತನ್ನ ಕೃತಿಯಲ್ಲಿ

'ಅರಮನೆಯ ನಾಯ್ಗಳು' ಎಂದು ಬೈದಿರುವುದನ್ನು ನೋಡಿದರೆ ಈ ಕವಿಗೆ ರಾಜರುಗಳ ಬಗ್ಗೆ ಗೌರವವಿದ್ದಂತೆ ತೋರುವುದಿಲ್ಲ. ಈತನ ಕಾಲ ಕೂಡ ಚರ್ಚೆಗೆ ಒಳಗಾಗಿದೆ. ಕ್ರಿ.ಶ. ೧೧೬೫ ರಿಂದ ಕ್ರಿ.ಶ. ೧೫೦೦ ವರೆಗೆ ರಾಘವಾಂಕ ಮತ್ತು ಕೆರೆಯ ಪದ್ಮರಸರ ಜೊತೆಗೆ ಕುಮಾರವ್ಯಾಸನ ಹೆಸರು ಕೇಳಿಬರುವುದರಿಂದ ಇವನ ಕಾಲವನ್ನು ೧೧೬೫ ಎಂದು ಕೆಲವರು ಸೂಚಿರುವುದು ಸರಿಯಲ್ಲವೆಂದು ಕಾಣುತ್ತದೆ. ಇವನು ಹದಿನೈದನೆಯ ಶತಮಾನದ ಮಧ್ಯ ಭಾಗದಲ್ಲಿದ್ದವನು ಎಂಬುದಕ್ಕೆ ನಂಬಲರ್ಹವಾದ ಬಲವಾದ ಆಧಾರಗಳಿವೆ. ಈ ಹಿಂದೆ ನಾವು ಗಮನಿಸಿರುವಂತೆ ಗದುಗಿನ ವೀರನಾರಾಯಣನ ಗುಡಿಯ ಒಂದು ಶಾಸನದಲ್ಲಿ ವಿಜಯನಗರದ ವೀರ ಪ್ರತಾಪ ಅಚ್ಯುತರಾಯನು ಶಾ.ಸ. ೧೪೬೧ರಲ್ಲಿ ಕುಮಾರವ್ಯಾಸನ ಇಷ್ಟದೇವತೆಯಾದ ವೀರನಾರಾಯಣ ಸ್ವಾಮಿ ದೇಗುಲಕ್ಕೆ ದತ್ತಿ ಬಿಟ್ಟನೆಂದಿದೆ. ಇದರಲ್ಲಿ ಕುಮಾರವ್ಯಾಸನ ಹೆಸರಿನ ಉಲ್ಲೇಖವಿದೆ. ಇದರಿಂದ ಕುಮಾರವ್ಯಾಸ ೧೫೩೯ ಕ್ಕಿಂತ ಹಿಂದಿನವನೆಂದು ಸ್ಪಷ್ಟವಾಗುತ್ತದೆ. (ನೋಡಿ : ಗೋವಿಂದ ಪೈ, ಕಾಲವಿಚಾರ, ಕುಮಾರವ್ಯಾಸ ಪ್ರಶಸ್ತಿ, ಪು. ೧-೨೦), ಅಲ್ಲದೆ ವಿಜಯನಗರದ ಅರಸು ಒಂದನೇ ದೇವರಾಯನಲ್ಲಿ ಕುಮಾರವ್ಯಾಸನ ತಂದೆಯಾದ ಲಕ್ಷ್ಮಣದೇವ (ಲಕ್ಕರಸ - ೧೪೦೬-೧೪೨೨) ಮಂತ್ರಿಯಾಗಿದ್ದ ವಿಷಯ ವಿಜಯನಗರದ ಇತಿಹಾಸದಿಂದ ತಿಳಿಯುತ್ತದೆ. ಒಂದನೇ ದೇವರಾಯ ಮರಣ ಹೊಂದಿದ ಬಳಿಕ ಲಕ್ಷ್ಮಣದೇವ ತನ್ನ ಉಂಬಳಿ ಗ್ರಾಮವಾದ ಕುರ್ತಕೋಟೆಗಳ ಕಡೆಗೆ ಕ್ರಿ.ಶ. ೧೪೨೪ರ ಸುಮಾರಿಗೆ ಬಂದ. ಆದ್ದರಿಂದ ಕುಮಾರವ್ಯಾಸನ ಕಾಲ ೧೪೨೫ ರಿಂದ ೧೪೫೫ ಇರಬಹುದು ಎಂದು ಒಂದು ಅಭಿಪ್ರಾಯವಿದೆ. (ನೋಡಿ : ಕುಮಾರವ್ಯಾಸ ಪ್ರಶಸ್ತಿ, ಪು. ೨೧) ಅಲ್ಲದೆ ವಿಜಯನಗರದ ಶ್ರೀ ಕೃಷ್ಣದೇವರಾಯ (ಕ್ರಿ.ಶ. ೧೫೦೯-೧೫೨೬) ತಿಮ್ಮಣ್ಣ ಕವಿಗೆ 'ಲೇಸೆನಿಸಿ ಮೊದಲಾ ಕುಮಾರವ್ಯಾಸ ದಶಪರ್ವಗಳ ಹೇಳಿದ ಭಾರತದ ಉಳಿದ ಪರ್ವಗಳ ನೀ ಸಕಲಜನ ಮೆಚ್ಚುವಂತೆ ಪೇಳು' ಎಂದು ಹೇಳಿದ. ಇದರಿಂದ ಕುಮಾರವ್ಯಾಸ ೧೫೦೦ಕ್ಕಿಂತ ಹಿಂದಿನವನೆಂದಾಯಿತು. ಕವಿ ಚರಿತೆಕಾರರು ಸಹ ಈತನ ಕಾಲವನ್ನು ೧೪೩೦ ಎಂದು ಸೂಚಿಸಿದ್ದಾರೆ. (ವಿವರಗಳಿಗೆ ನೋಡಿ : ರಾ.ನರಸಿಂಹಾಚಾರ್, ಕರ್ನಾಟಕ ಕವಿ ಚರಿತೆ, ಸಂ.೨, ಪು. ೬೪-೬೫), ಕ್ರಿಶ. ೧೫೦೦ರಲ್ಲಿದ್ದ ಕುಮಾರ ವಾಲ್ಮೀಕಿ ಕುಮಾರವ್ಯಾಸನನ್ನು ಸ್ತುತಿಸಿದ್ದಾನೆ. ಒಟ್ಟಿನಲ್ಲಿ ಹದಿನೈದನೆಯ ಶತಮಾನದ ಮಧ್ಯಭಾಗದಲ್ಲಿ ಕುಮಾರವ್ಯಾಸ ಜೀವಿಸಿದ್ದಿರಬಹುದು.

**ಕೃತಿ :**

ಭರತಖಂಡದ ಜನಪದದಲ್ಲಿ ಬೇರು ಬಿಟ್ಟಿದ್ದ, ವ್ಯಾಸ ಮಹರ್ಷಿಯಿಂದಲ್ಲಿ ಬಂದು ಹೋಗಿದ್ದ ಭಾರತದ ಪುರಾಣ ಕತೆ ಕುಮಾರವ್ಯಾಸನಂತಹ ಪ್ರತಿಭಾಶಾಲಿ

ಕವಿಯ ಕೈಗೆ ಸಿಕ್ಕಿ ಮಹಾಕಾವ್ಯವಾಯಿತು. ಇದರಲ್ಲಿ ಇತಿಹಾಸದ ಸಂಗತಿಗಳು ಮಿಳಿತವಾದವು. ಭಾರತದ ಸನಾತನ ಸಂಸ್ಕೃತಿ ಅಂತರ್ಗತವಾಯಿತು. ರಾಜಾದಿ ರಾಜರುಗಳ ರಾಜಕೀಯ ಮತ್ತುಸಾಮಾಜಿಕ ಜೀವನ ಬೆರೆತುಕೊಂಡವು. ಅಂದಿನ ಜೀವನ ಮೌಲ್ಯಗಳೂ ಬದುಕಿನ ರೀತಿ ನೀತಿಗಳೂ ಪಾತ್ರಗಳ ಮೂಲಕ ಸೂಕ್ತವಾಗಿ ಅಭಿವ್ಯಕ್ತಿ ಪಡೆದವು.. ಸಕಲ ಶಾಸ್ತ್ರ ಪಾರಂಗತನಾಗಿದ್ದ ಕವಿಯ ವ್ಯಾಪಕವಾದ ಲೋಕಾನುಭವ ಕೃತಿಗೆ ಸಂಕೀರ್ಣ ಸ್ವರೂಪವನ್ನು ತಂದುಕೊಟ್ಟಿತು. ಇದಕ್ಕೆ ತಕ್ಕಂತೆ ಕವಿಗೆ ಸಂಸ್ಕೃತ ಮತ್ತುಕನ್ನಡ ಸಾಹಿತ್ಯಗಳ ಪ್ರಾಚೀನ ಹಿನ್ನೆಲೆಯಿತ್ತು. ಈತ ಭಾಸ, ಕಾಳಿದಾಸ, ಭಾರವಿ, ಭರ್ತೃಹರಿ, ಬಾಣಭಟ್ಟ ಮೊದಲಾದ ಕವಿಗಳನ್ನು ಓದಿ ಜೀರ್ಣಿಸಿಕೊಂಡಿದ್ದ. ಹೆಚ್ಚು ಕಡಿಮೆ ಒಂದು ಸಾವಿರ ವರ್ಷದಿಂದ ಕನ್ನಡ ಸಾಹಿತ್ಯ ಭೂಮಿಯ ಶಿಖರದಲ್ಲಿ (೯ನೆಯ ಶತಮಾನದ ಕವಿರಾಜಮಾರ್ಗ ಅಲಂಕಾರ ಗ್ರಂಥವಾಗಿದ್ದರಿಂದ ಅದಕ್ಕೆ ಹಿಂದೆ ಕನಿಷ್ಠ ನಾನೂರು ವರ್ಷಗಳಿಂದಲಾದರೂ ಕನ್ನಡ ಸಾಹಿತ್ಯ ಬೆಳೆದು ಬಂದಿದೆ) ಬಂದವನಾದ್ದರಿಂದ ಪಂಪ, ರನ್ನ, ಪೊನ್ನ, ಬಸವೇಶ್ವರ, ಹರಿಹರ ಮತ್ತು ರಾಘವಾಂಕಾದಿ ಕವಿಶ್ರೇಷ್ಠರ ಹೆಗಲೇರಿ ನಿಂತಿದ್ದ. ಅವರ ಕಾವ್ಯಶಕ್ತಿಯ ಗುಣಗಳನ್ನೂ ದೌರ್ಬಲ್ಯಗಳನ್ನೂ ಅರಿತಿದ್ದ. ತನಗಿದ್ದ ಅಸಾಧಾರಣ ಪ್ರತಿಭೆಯಿಂದ ಔಚಿತ್ಯವರಿತು ತನ್ನ ಸಾಹಿತ್ಯ ಮಾರ್ಗವನ್ನು ಉತ್ತಮ ಪಡಿಸಿಕೊಂಡು ಕರ್ನಾಟಕ ಭಾರತ ಕಥಾ ಮಂಜರಿಯನ್ನು ಕಾವ್ಯಕ್ಕೆಗುರು ಎನ್ನುವ ಹಾಗೆ ರಚಿಸಿದ.

ವ್ಯಾಸ ಪರಂಪರೆಯಲ್ಲಿ ಬಂದ ಭಾರತಗಳು ಎರಡು; ಒಂದು ಪಂಪಭಾರತ ಮತ್ತೊಂದು ಕುಮಾರವ್ಯಾಸ ಭಾರತ. ಒಂದಕ್ಕೂ ಮತ್ತೊಂದಕ್ಕೂ ಐನೂರು ವರ್ಷಗಳ ಅಂತರ; ಆಶಯ ಮತ್ತು ರೂಪಾಂಶಗಳಲ್ಲೂ ಎರಡಕ್ಕೂ ಅಜಗಜಾಂತರ. ಕುಮಾರವ್ಯಾಸ ಭಾರತ ಪಂಪಭಾರತಕ್ಕಿಂತ ಮೂರು ಪಟ್ಟುದೊಡ್ಡದು. ಪಂಪನಿಗೆ ಸಂಕ್ಷೇಪಿಸುವ ಇಚ್ಛೆ. ನಾರಣಪ್ಪನಿಗೆ ವಿಸ್ತರಿಸುವ ಆಶೆ. ಇದರಿಂದ ಇಬ್ಬರ ಕಾವ್ಯಶಕ್ತಿ ಹಿರಿದು ಕಿರಿದಾಗಲಿಲ್ಲ. ಆದರೆ ಪಂಪ ಕಾವ್ಯ ಸತ್ವದಿಂದ ಬದುಕಿದನೆ ಹೊರತು ಕಥಾರೂಪದಿಂದಲ್ಲ. ಕುಮಾರವ್ಯಾಸನಿಗೆ ಕಥಾ ಸತ್ವ ಮತ್ತು ಕಾವ್ಯ ಸತ್ವ ಎರಡೂ ಇತ್ತು. ಪಂಪ ಅರಿಕೇಸರಿಯ ಋಣಕ್ಕೆ ಒಳಗಾಗಿ ಕತೆಯ ಪೌರಾಣಿಕತ್ವಕ್ಕೆ ಭಂಗತಂದಿದ್ದ. ಧರ್ಮರಾಯನನ್ನು ಬಿಟ್ಟು ಅರ್ಜುನನ್ನು ಕಥಾ ನಾಯಕನನ್ನಾಗಿ ಮಾಡಿದ್ದರ ಜೊತೆಗೆ ಅರಿಕೇಸರಿಯೇ ಅರ್ಜುನ ಎನ್ನುವ ದೌರ್ಬಲ್ಯ ದೊಡ್ಡದಾಗಿತ್ತು. ಕಾವ್ಯದ ರಸಕ್ಕೆ ಚರಿತ್ರೆಯ ಅನುಚಿತ ಕಸ ಬೆರೆತು ಹೋಗಿತ್ತು. ಪುರಾಣದ ಮಹಾವೀರನೊಬ್ಬನ ಸ್ಥಾನಕ್ಕೆ ಸಾಮಾನ್ಯ ಮಾಂಡಲೀಕನೊಬ್ಬನನ್ನು ಏರಿಸುವ ಅವಿವೇಕಕ್ಕೆ ಪಂಪ ಕೈಹಾಕಿಬಿಟ್ಟಿದ್ದ. ಅರಿಕೇಸರಿಯ ಹೆಂಡತಿಯದು ವಂಶದವಳಾದ್ದರಿಂದ ಅದೇ ವಂಶಕ್ಕೆ ಸೇರಿದ ಸುಭದ್ರೆಗೆ ದ್ರೌಪದಿಗೆ ಬದಲಾಗಿ ಪಟ್ಟಗಟ್ಟಿದ. ಹೀಗಾಗಿ ಪಂಪಭಾರತ ಅರಿಕೇಸರಿಯ

ಮಹಿಮೆಯಿಂದ ಅವ್ಯತವಾಯಿತು. ಎಷ್ಟೋ ಕಡೆಗಳಲ್ಲಿ ಪಂಪ ತಾನು ಜೈನಧರ್ಮೀಯ ಎಂಬುದನ್ನು ತೋರ್ಪಡಿಸಿಕೊಂಡಿದ್ದಾನೆ. ಮಹಾಭಾರತದ ಮಹಾ ನಾಯಕರುಗಳ ಹೆಸರು ಹೇಳುವಾಗ ಸಹ ಕೃಷ್ಣನ ಸೊಲ್ಲನ್ನೇ ಎತ್ತುವುದಿಲ್ಲ. ಕೃಷ್ಣ ಕೇವಲ ನಾರಾಯಣನಾದರ ಅರ್ಜುನನ್ನು ಉದಾತ್ತ ನಾರಾಯಣನನ್ನಾಗಿ ಚಿತ್ರಿಸುತ್ತಾನೆ. ಹಿಂದುಗಳಿಗೆ ಪರಮ ಪವಿತ್ರವಾದ ಭಗವದ್ಗೀತೆಯ ಪ್ರಸಂಗವನ್ನು ಪಂಪ ಒಂದೆರಡು ಪದ್ಯಗಳಲ್ಲಿ ಮುಗಿಸಿಬಿಡುತ್ತಾನೆ. ಪಂಪನ ಈ ಬಗೆಯ ಧೋರಣೆ ಮಹಾ ಭಾರತದ ಮಹತ್ವವನ್ನು ಸ್ವಲ್ಪ ಮಟ್ಟಿಗೆ ಲಘುಗೊಳಿಸುತ್ತದೆ. ಆದರೆ ಕುಮಾರ ವ್ಯಾಸನ ಕಾವ್ಯದಲ್ಲಿ ಇಂತಹ ರಸಾಭಾಸಕ್ಕಾಗಲಿ ಲೌಕಿಕ ಸಂಕೋಚಗಳಿಗಾಗಲಿ ಅಸ್ಪದವಿಲ್ಲ. ಋಷಿ ಸದೃಶವಾದ ದಿವ್ಯ ದರ್ಶನ. ಲೌಕಿಕ ಅಲೌಕಿಕ ವಿಚಾರಗಳ ಸಮನ್ವಯ ದೃಷ್ಟಿ ಅವನದು. ಇದರಿಂದಾಗಿಯೆ ಅವರ ಕೃತಿ ಮೂಲಭೂತವಾಗಿ ಕಲೆಯೂ ಮೌಲೀಭೂತವಾಗಿ ದರ್ಶನವೂ ಆಗಿದೆ; ತನ್ಮೂಲಕ ಕನ್ನಡ ಸಾಹಿತ್ಯದಲ್ಲಿ ತೀರ ವಿಶಿಷ್ಟ ಮತ್ತು ಶ್ರೇಷ್ಠವೆನಿಸಿದೆ. ಅದರಅಪಾರ ಜನ ಪ್ರಿಯತೆಯ ಗುಟ್ಟು ಕೂಡ ಇದೇ. (ಡಾ॥ ಸಿ.ಪಿ. ಕೃಷ್ಣಕುಮಾರ್. ಕ.ಅ. ಕನ್ನಡ ಸಾಹಿತ್ಯ ಚರಿತ್ರೆ, ಸಂ. ೫, ಪು. ೬೫೦)

ಕುಮಾರವ್ಯಾಸ ಲಕ್ಷ ಶ್ಲೋಕಗಳ ವ್ಯಾಸ ಭಾರತವನ್ನು ಮೂಲ ಆಕರವಾಗಿ ಮಾಡಿಕೊಂಡಿದ್ದರೂ ಸಹ ತನ್ನ ಕೃತಿಯನ್ನು ವಿಶಿಷ್ಟ ಸ್ವತಂತ್ರ ಕಾವ್ಯವನ್ನಾಗಿ ಮಾಡಿದ್ದಾನೆ. ಅನಗತ್ಯವಾದ ಎಷ್ಟೋ ವಿಷಯಗಳನ್ನು ತೊರೆದು ಅಗತ್ಯವೆನಿಸಿದ ಕಡೆ ಹೊಸ ಅಂಶಗಳನ್ನು ಸೇರಿಸಿಕೊಂಡಿದ್ದಾನೆ. ಕೆಲವುಕಡೆ ಸೂಕ್ತ ಮಾರ್ಪಾಡು ಮಾಡಿದ್ದಾನೆ. ಎಲ್ಲಿಯೂ ಅವನು ಮೂಲದ ಪಡಿ ಅಚ್ಚಲ್ಲ.

ಕುಮಾರ ವ್ಯಾಸ ತನ್ನ ಮಹಾಭಾರತವನ್ನು ಭಗವದ್ ವಿಲಾಸದ ಭೂಮಿ ಎಂದು ಕರೆದ. ಶ್ರೀ ಕೃಷ್ಣನನ್ನು ತನಗೆ ಮಾತ್ರವಲ್ಲದೆ ತನ್ನ ಕಾವ್ಯಕ್ಕೂ ನಾಯಕನನ್ನಾಗಿ ಸ್ವೀಕರಿಸಿದ. ವ್ಯಾಸನಲ್ಲಿ ಧರ್ಮರಾಯ, ಪಂಪನಲ್ಲಿ ಅರ್ಜುನ, ರನ್ನನಲ್ಲಿ ಭೀಮ ಕಥಾನಯಕರುಗಳಾದರೆ ಕುಮಾರವ್ಯಾಸನಲ್ಲಿ ಶ್ರೀ ಕೃಷ್ಣ ಕಥಾ ನಾಯಕ. ನಾಯಿಕೆಗೆ ಮಹತ್ವವನ್ನು ಕೊಡದೆ ನಾಯಕನನ್ನು ಸರ್ವತ್ರ ಮೆರೆಸಿದ್ದು ಕುಮಾರವ್ಯಾಸನ ವಿಶೇಷ . ಪದುಮನಾಭನ ಮಹಿಮೆ ಮತ್ತು ಧರ್ಮ ವಿಚಾರ, ಅವನ ಕಾವ್ಯದ ಘನೋದ್ದೇಶಗಳಾದವು..

ತಿಳಿಯ ಹೇಳುವೆ ಕೃಷ್ಣ ಕಥೆಯನು
ಇಳೆಯ ಜಾಣರು ಮೆಚ್ಚುವಂತಿರೆ
ನೆಲೆಗೆ ಪಂಚಮ ಶ್ರುತಿಯನೊರೆವನು ಕೃಷ್ಣ ಮೆಚ್ಚಲಿಕೆ.

ಎಂದು ಸ್ಪಷ್ಟವಾಗಿಯೇ ಹೇಳಿದ್ದಾನೆ. ಕೃಷ್ಣಾಂತರ್ಗತವಾದ ಮಹಾಭಾರತವನ್ನು ಕೃಷ್ಣನೂ ಇಳೆಯ ಜಾಣರೂ ಮೆಚ್ಚುವಂತೆ ಹೇಳುವುದು ಅವರ

ಆಸೆಯಾಗಿತ್ತು. ತಾನು ವಿಶಿಷ್ಟವಾಗಿ ನಿಯೋಜಿಸಿದ ದ್ರೌಪದಿಯ ವಸ್ತ್ರಾಪಹರಣ, ದೂರ್ವಾಸಾತಿಥ್ಯ ಮತ್ತು ವಿದುರಭಕ್ತಿ ಪ್ರಸಂಗಗಳಲ್ಲಿ ಕೃಷ್ಣನ ಮಹಿಮೆ ಮುಗಿಲು ಮುಟ್ಟಿದೆ. ಮಹಾಭಾರತದ ಮಹಾ ಪಾತ್ರಗಳಿಗೆಲ್ಲ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಶ್ರೀ ಕೃಷ್ಣಚಾಲಕ ಶಕ್ತಿಯಾಗಿದ್ದಾನೆ. ಕುಮಾರವ್ಯಾಸನಲ್ಲಿ ಹರಿಪಾರಮ್ಯವಿದ್ದರೂ ಸಹ ಈತ ಭಾಗವತ ಪ್ರಜ್ಞೆಯ ಕವಿ. ಹರಿಹರರಲ್ಲಿ ಭೇದವೆಣಿಸದ ಮಹಾನುಭಾವ. ಶ್ರೀ ಕೃಷ್ಣನನ್ನು ಸ್ತುತಿಸುವಂತೆಯೇ ಪರಮೇಶ್ವರನನ್ನೂ ಭಕ್ತಿಯಿಂದ ಹಾಡಿ ಮೈ ಮರೆತು ಕೊಂಡಾಡಿದ್ದಾನೆ. ಕಿರಾತಾರ್ಜುನೀಯ ಪ್ರಸಂಗ ಇದಕ್ಕೆ ಒಳ್ಳೆಯ ನಿದರ್ಶನ. ಮುಖ್ಯವಾಗಿ ಭಕ್ತ ಕವಿಯಾದ ಈತ ಜೀವನದ ಜಟಿಲತೆಯ ನಿವಾರಣೆಗೆ ಭಗವತ್ ಶಕ್ತಿಯ ಅವಲಂಬನೆಯನ್ನು ತರುತ್ತಾನೆ. ಭಕ್ತಿಯುಗದ ಮಹಾಪ್ರತಿನಿಧಿ ಈತ. ಋಷಿ ಕವಿಯಾದ ಈ ಆಧ್ಯಾತ್ಮ ಪುರುಷನ ಹೆಬ್ಬಯಕೆ ಲೋಕಕಲ್ಯಾಣ. ತನ್ನ ಕಾವ್ಯದಲ್ಲಿ ಅವಕಾಶ ಸಿಕ್ಕಾಗಲೆಲ್ಲ ನೀತಿ ಬೋಧೆಗೆ ಮಹತ್ವ ಕೊಡುತ್ತಾನೆ. ವಿದುರನೀತಿ - ನೀತಿ ಬೋಧೆಗಾಗಿಯೇ ಮೀಸಲಾದ ಒಂದು ಅಧ್ಯಾಯ. ಕೃಷ್ಣ ಧರ್ಮರಾಯ, ಧೃತರಾಷ್ಟ್ರ ಮತ್ತು ಋಷಿವರೇಣ್ಯರುಗಳು ನೀತಿ ಬೋಧೆ ಮಾಡುತ್ತಾರೆ. ನ್ಯಾಯಾನ್ಯಾಯ ಮತ್ತು ಧರ್ಮಾಧರ್ಮಗಳ ಜಿಜ್ಞಾಸೆ ಈ ಕಾವ್ಯದ ತುಂಬ ತುಂಬಿದೆ. 'ಎತ್ತಲೊಲೆವುದು ಧರ್ಮಬಲ ತಾನತ್ತಲೊಲೆವುದು ದೈವ' ಎಂದು ಪ್ರತಿಪಾದಿಸಿದ್ದಾನೆ ಕುಮಾವ್ಯಾಸ.

ಒಳ್ಳೆಯ ಸನ್ನಿವೇಶ ರಚನೆ ಮತ್ತು ಉತ್ತಮ ಪಾತ್ರ ಚಿತ್ರಣಕ್ಕೆ ಹೆಸರಾದವನು ಕುಮಾರವ್ಯಾಸ. ಮಾನವ ಸ್ವಭಾವದ ಬಗ್ಗೆ ಕವಿಗಿರುವ ಆಳವಾದ ಅರಿವು ಮತ್ತು ವ್ಯಾಪಕವಾದ ಲೋಕಾನುಭವ ಇದಕ್ಕೆ ಕಾರಣವಾಗಿದೆ. ಮಾನವನ ಅಂತರಂಗದ ಒಳನೋಟಗಳನ್ನೂ, ಜೀವನ ವ್ಯಾಪಾರದ ವೈಚಿತ್ರ್ಯಗಳನ್ನೂ ಇವನಷ್ಟು ಸಮರ್ಥವಾಗಿ 'ಚಿತ್ರಿಸಿರುವ ಕವಿ ಕನ್ನಡದಲ್ಲಿ ಮತ್ತೊಬ್ಬನಿಲ್ಲ. ದ್ರೌಪದಿ ಪಾಂಡವರಿಗೆ ನಿಷ್ಠೆಯುಳ್ಳ ಹೆಂಡತಿಯೇ ಆದರೂ ಸಮಯ ಒದಗಿದಾಗ ನೀವು ಗಂಡರೋ ಭಂಡರೋ ಎಂದು ಹೀಯಾಳಿಸಲು ಹಿಂಜರಿಯುವುದಿಲ್ಲ. ಪಂಚ ಪತಿವ್ರತೆಯರಲ್ಲಿ ಒಬ್ಬಳಾದರೂ ಅವಳ ಮನಸ್ಸಿನ ಚಾಂಚಲ್ಯದ ಭಿನ್ನ ಗತಿಸ್ಥಿತಿಯನ್ನು ಗುರುತಿಸದೆ ಬಿಡುವುದಿಲ್ಲ ಈ ಕವಿ. ಮಾನವ ಮನಸ್ಸಿನ ಒಳಪದರಗಳನ್ನು ಬಿಡಿಸಿ ಅರ್ಥೈಸುವ ನಿಪುಣ ಮನಶ್ಶಾಸ್ತ್ರಜ್ಞ. ಭೀಮ, ಧರ್ಮರಾಯನಿಗೆ ಸದಾ ವಿಧೇಯ. ನಿಜ ಆತ ಅಣ್ಣನ ಆಜ್ಞೆಯನ್ನು ಉಲ್ಲಂಘಿಸಲಾರದ ಸಂಯಮಿ. ಆದರೆ ಕೀಚಕನ ಕೆಟ್ಟ ಕಣ್ಣಿಗೆ ಗುರಿಯಾದ ದ್ರೌಪದಿ ತನ್ನ ಸಂಕಷ್ಟವನ್ನು ದುಃಖದಿಂದ ಹೇಳಿಕೊಂಡು, ಅವನ ಕಾಲಿಗೆರಗಿ 'ಪರಿಹರಿಸು'ವಂತೆ, ಪರಿಪರಿಯಲ್ಲಿ ಬೇಡಿಕೊಂಡಾಗ' ಅರಸಿಬಿಡು ಖಾತಿಯನು ವಿಸ್ತರಿಸಲೇಕೆಮ್ಮಣ್ಣ ನಾಜ್ಞೆಯ ಗೆರೆಯ ದಾಂಟಿದೆನು ಹೋಗೆಂದನಾ ಭೀಮ' ಒಮ್ಮೆಯಂತು'ಈ ನಪುಂಸಕರೊಡನೆ ಹುಟ್ಟಿದ ನಾನು ಮೂಗುಳ್ಳವನೆ' ಎಂದು ಬಿಡುತ್ತಾನೆ. ಹೀಗೆ ಒಂದೇ ಪಾತ್ರ ಸನ್ನಿವೇಶ ವಶದಿಂದ ಭಿನ್ನ

ಸ್ವಭಾವಕ್ಕೊಳಗಾಗುವುದನ್ನು ಈ ಕವಿ ಸಮರ್ಥವಾಗಿ ಕಡೆದಿಡಬಲ್ಲ. ಸಂದರ್ಭದ ಒತ್ತಡದಲ್ಲಿ ಪಾತ್ರಗಳ ಮೂಲಗುಣವನ್ನು ನೈಜವಾಗಿ ಹೊರಹೊಮ್ಮಿಸುವ ಕಲೆಗಾರಿಕೆ ಇವನದು. ಮಹಾಪರಾಕ್ರಮಿಯಾದ ಅಭಿಮನ್ಯುವಿನ ಹೋರಾಟದ ಬಗ್ಗೆ ಸಾರಥಿ ಸಂದೇಹಿಸಿದಾಗ ಸಿಡಿಲಮರಿಯಾದ ಅಭಿಮನ್ಯು 'ಬವರವಾದರೆ ಹರನ ವದನಕೆ ಬೆವರ ತಹೆನವಗಡಿಸಿದರೆ ವಾಸವನ ಸದೆವೆನು...' ಎನ್ನುತ್ತಾನೆ. ಪಾತ್ರ ಪೋಷಣೆಯೊಂದಿಗೆ ರಸಪೋಷಣೆಯನ್ನೂ ಮಾಡುವ ಅಧ್ಭುತ ಕಲಾ ಶಕ್ತಿ ಕುಮಾರವ್ಯಾಸನಿಗಿದೆ. ಅವನು ಚಿತ್ರಿಸಿರುವ ಉತ್ತರನ ಪಾತ್ರ ಕನ್ನಡ ಸಾಹಿತ್ಯದಲ್ಲಿಯೇ ವಿಶಿಷ್ಟವಾದುದು. ಅಭಿಮನ್ಯುವಿನಲ್ಲಿ ಸಹಜವಾಗಿ ವೀರರಸ ಒಸರಿದರೆ ಉತ್ತರನಲ್ಲಿ ಹಾಸ್ಯರಸ ಚಿಮ್ಮುತ್ತದೆ. ಹೆಂಗಸರ ಮುಂದೆ ಬಾಯಿಗೆ ಬಂದಂತೆ ಬಡಾಯಿ ಕೊಚ್ಚಿದ ಉತ್ತರ ಎದುರಿಗೆ ಕೌರವರ ಸೈನ್ಯವನ್ನು ಕಂಡಾಗ ಹೆದರಿ ಓಡುತ್ತಾನೆ. ಅವನನ್ನು ತಡೆದ ಅರ್ಜುನ : 'ಕೊಳುಗುಳದೊಳೋಡಿದೊಡೆ ಹಜ್ಜೆಗೆ ಫಲ ಮಹಾ ಪಾತಕವು ' ಎಂದರೆ ಉತ್ತರ : 'ಪಾತಕವ ಭೂಸುರರು ಕಳೆದಪರು' ಎನ್ನುತ್ತಾನೆ. 'ಮುಂದಣಿಗೊಲಿದು ಹೆಜ್ಜೆಯನಿಡಲು ಹೆಜ್ಜೆಯೊಳಶ್ವಮೇಧ ಫಲ' ಎಂದು ಅರ್ಜುನನೆಂದರೆ 'ಅಶ್ವಮೇಧವ ಧರಣಿಯಲಿ ಪ್ರತ್ಯಕ್ಷವಾಗಿಯೆ ಮಾಡಬಹುದು' ಎನ್ನುತ್ತಾನೆ, ಉತ್ತರ. ಯುದ್ಧದಲ್ಲಿ 'ಅಳಿದನಾದೊಡೆ ದೇವಲೋಕದ ಲಲನೆಯರು ತೊತ್ತಿರು' ಎಂದು ಅರ್ಜುನ ಹೇಳಿದರೆ 'ಸುರರ ಸತಿಯರನೊಲ್ಲೆ ವೆಮಗೆಮ್ಮರ ಮನೆಯ ನಾರಿಯರೆ ಸಾಕು' ಎನ್ನುತ್ತಾನೆ ಉತ್ತರ ಕುಮಾರ. ಕುಮಾರವ್ಯಾಸನು ಅರಿಯದ ಹಾಸ್ಯದ ಪ್ರಕಾರವು ಒಂದೂ ಇಲ್ಲ. ಕಟಕಿ, ಬಿರುನುಡಿ, ಕಿರಿನುಡಿ, ವ್ಯಂಗ್ಯ, ಸರಸ, ವಕ್ರ ವಕ್ರೋಕ್ತಿ, ಜಾಣ್ನುಡಿ, ಪರಿಹಾಸ ಎಲ್ಲವುಗಳೂ ಅವನ ಬತ್ತಳಿಕೆಯಲ್ಲಿವೆ. ಸರ್ವಜ್ಞನಂತೆ ಕುಮಾರವ್ಯಾಸನು ಮಾತು ಗಾರಿಕೆಯಲ್ಲಿ ಎದೆಗಾರ (ದ.ರಾ.ಬೇಂದ್ರೆ, ಕುಮಾರವ್ಯಾಸ ಉತ್ತರಕುಮಾರ, ಕುಮಾರವ್ಯಾಸ ಪ್ರಶಸ್ತಿ, ಪು. ೨೩೬). ಕುಮಾವ್ಯಾಸನು ಅಷ್ಟಾದಶ ವರ್ಣನೆಗಳಿಗೆ ಕುರುಡಾಗಿ ಕಟ್ಟು ಬಿದ್ದವನಲ್ಲ. ನವರಸಗಳನ್ನು ತರಬೇಕೆಂಬ ಉದ್ದೇಶವು ಅವನಿಗಿದ್ದಂತಿಲ್ಲ. ಆದರೆ ತನಗರಿವಿಲ್ಲದೆಯೇ ನವರಸಗಳ ಪ್ರತಿಪಾದನೆಯಲ್ಲಿ ಕುಮಾರವ್ಯಾಸನ ಪ್ರತಿಭೆ ಸಮಾನವಾಗಿ ಪ್ರವಹಿಸಿದೆ. ಮಹಾಭಾರತದಲ್ಲಿ 'ವೀರ -ಕರುಣಗಳ ನಡುವೆ ಶಾಂತವೂ ಗುಪ್ತ ಗಾಮಿಯಾಗಿ ಹರಿಯುತ್ತದೆ. ಸೂಕ್ಷ್ಮರಸೈಕದೃಷ್ಟಿಗೆ ಗೋಚರವಾಗತಕ್ಕದ್ದು ಅದು' (ಎಂ. ವಿ. ಸೀತಾರಾಮಯ್ಯ, ಕನ್ನಡ ಸಾಹಿತ್ಯದಲ್ಲಿ ಶಾಂತರಸ, ಪು. ೫೨)

ಒಟ್ಟಿನಲ್ಲಿ ಗದುಗಿನ ಭಾರತದ ಒಂದೊಂದು ಸಂಧಿಯೂ ರಸಸಂಧಿ, ರಸ ಮೂಲವಾದ ಭಾವನೆಗಳನ್ನು ಅರ್ಥಪೂರ್ಣವಾಗಿ ಪುಟಿಯುವಂತೆ ಮಾಡುವುದು ಅವರ ಹೆಗ್ಗಳಿಕೆ. ತಂದೆಯ ಶವದ ಬಳಿ ಬಂದ ಅಶ್ವತ್ಥಾಮ ದುಃಖ ಮತ್ತು ಕೋಪದ ಅಧಿಕ್ಯದಲ್ಲಿ 'ಕಾಣನು ಮುಂದೆ ಪರಬಲವು' ಅಭಿಮನ್ಯುವಿನ ಸಾವನ್ನು ಕಂಡ

ಅರ್ಜುನನ ಮುಂದೆ ಭೀತಿಗೊಂಡ 'ಸುರನಗರಿ ನಡುಗಿತ್ತು...ಯಮನ ಪಟ್ಟಣ ಸರಕುದೆಗೆದುದು, ಮೃತ್ಯುಮರೆ ಹೊಕ್ಕಳು ಮಹೇಶ್ವರನ' ಕೌರವರು ದ್ರೌಪದಿಯ ಸೀರೆ ಸೆಳೆಯುವ ಸಂದರ್ಭದಲ್ಲಿ ಭೀಮಾರ್ಜುನರು 'ಮನದೊಳಗೆ ಕೌರವನ ಕರುಳನು ತನಿರಕುತದಲ್ಲಿ ಕುದಿಸಿದರಂತೆ'. ಕವಿಯ ಉತ್ಸಾಹ ಭಾವುಕತೆಗಳು ಕಾವ್ಯದಲ್ಲಿ ಗುಣಗೊಂಡುದುಂಟು.

ಕುಮಾರವ್ಯಾಸನ ಭಾಷಾಶೈಲಿ ಅದ್ಭುತವಾದುದು; ಅನನುಕರಣೀಯವಾದುದು; ಅನುವಾದಿಸಲಸಾಧ್ಯವಾದುದು. ಕನ್ನಡದಲ್ಲಿ ಸಂಸ್ಕೃತವನ್ನು ಹದಕ್ಕೆಬೇಕಾದಷ್ಟು ಮಾತ್ರ ಬಳಸುವ ಕಲೆಗಾರಿಕೆ ಅವನದು. ಜೊತೆಗೆ ದೇಸಿಯ ಸೊಗಡನ್ನೆಲ್ಲ ಯಥೇಚ್ಛವಾಗಿ ಬಳಸಿಕೊಂಡ ಜಾಣನಾತ. ಗ್ರಾಮ್ಯದ ಸಶಕ್ತವಾದ ನುಡಿಕಟ್ಟುಗಳನ್ನೂ ಗಾದೆಮಾತುಗಳನ್ನೂ ಕುಮಾರವ್ಯಾಸ ಸಾಹಿತ್ಯಕಲೆಗೆ ಅರ್ಥವತ್ತಾಗಿ ಅಳವಡಿಸಿದ. ಗ್ರಾಮ ಜೀವನದ ಒರಟು ಸಂಸ್ಕೃತಿಯನ್ನೂ ಅವನು ಕಡೆಗಣಿಸಲಿಲ್ಲ. ಭೀಮ ದ್ರೌಪದಿ ಮುಂತಾದ ಪಾತ್ರಗಳಲ್ಲಿ ಸಮಯ ಬಂದಾಗ ಅದು ತಲೆಹಾಕಿದ್ದುಂಟು. ಬೈಯುವ ಸಂದರ್ಭಗಳು ಒದಗಿ ಬಂದಾಗಲಂತೂ ಕವಿ ಅಪ್ಪಟ ಹಳ್ಳಿಗನಾಗಿ ಜಾನಪದ ಭಾಷಾ ಬಂಡಾರವನ್ನು ಸೂರೆಗೊಳ್ಳುತ್ತಾನೆ. ವಿರಾಟಪರ್ವದಲ್ಲಿ ಕುರು ಸೈನ್ಯ ಸಾಗರವನ್ನು ಕಂಡುಬೆದರಿ ರಥದಿಂದಿಳಿದು ಬಿದ್ದು ಬೀಳ ಓಡುತ್ತಿದ್ದ ಉತ್ತರನನ್ನು ತಡೆದು ಪಾರ್ಥ : 'ಹುಟ್ಟಿದೆಯೋ ಹಾದರಕೆ ಕ್ಷತ್ರಿಯ ಬೀಜವಾ ನೀನು' ಎನ್ನುತ್ತಾನೆ. ಶಿಶುಪಾಲ ಕೃಷ್ಣನನ್ನು 'ಗೋವಳರ ಹೆಂಡಿರ ಹಾದರದ ಹೆಕ್ಕಳವ ಬಣ್ಣಿಸದಾದೆ' ಎನ್ನುತ್ತಾನೆ. 'ನೀಗಳಹಿದೊಡೆ ಕಟವಾಯ ಕೊಯ್ವೆನು', 'ಯಾದವ ಬಡಕರುವೆ', 'ಒರಲಬೇಡವೋ ಕುನ್ನಿ' ಮುಂತಾದವು ಇಂತಹ ನಿದರ್ಶನಗಳು. ಬಸವಾದಿ ವಚನಕಾರರು, ಹರಿಹರನಂತಹ ಕ್ರಾಂತಿ ಕವಿಗಳು ಗ್ರಾಮೀಣರ ಆಡು ನುಡಿಗಳಿಗೆ ಲಗ್ಗೆ ಹಾಕಿದ್ದುಂಟು. ಆದರೆ ಅವರಾರೂ ಕುಮಾರವ್ಯಾಸನ ಹಾಗೆ ಭಾಷಾ ಮಡಿವಂತಿಕೆಯನ್ನು ತೊರೆಯಲ್ಲಿಲ್ಲ. ಯಾವುದೇ ಶಬ್ದವನ್ನು ಅದು ಅಗತ್ಯ ಎಂದು ಕಂಡುಬಂದಾಗ ಮುಲಾಜಿಲ್ಲದೆ ಬಳಸುವ ಎದೆಗಾರಿಕೆ ಈತನದು. ಸರ್ವಜ್ಞನೆಂಬ ಮತ್ತೊಬ್ಬ ಕವಿ ಯಾವ ಸಿಗ್ಗಿಲ್ಲದೆ ಭಾಷೆಯನ್ನು ಬಳಸಿದ್ದಾನೆ. ಕಾವ್ಯದ ಬಂಧಕ್ಕೆ ಅತ್ಯಂತ ಶಕ್ತವಾಗಿ ಹೊಂದುವಂತಿದ್ದರೆ ಕುಮಾರವ್ಯಾಸ ಅಪಪ್ರಯೋಗಗಳನ್ನು ಪ್ರಯೋಗಿಸಲು ಹಿಂಜರಿಯ; ವ್ಯಾಕರಣದೋಷಗಳನ್ನುಲೆಕ್ಕಿಸ. 'ದುರಪದಿ', ವೀರನರಯಣ' ಮುಂತಾದ ಪದಗಳನ್ನು ಇಲ್ಲಿಗಮನಿಸಬಹುದು. ಆದರೆ ಇವು ದೋಷಗಳೇ? ಆನೆ ನಡೆದುದೆ ಮಾರ್ಗಂ ಎನ್ನುವ ಹಾಗೆ ಕುಮಾರವ್ಯಾಸ ಬಳಸಿದ ಮೇಲೆ ಆ ಪದಗಳು ವಿಶೇಷ ಆಕರ್ಷಣೆಯಿಂದ ಕಾಂತಿಗೊಂಡವು. ವ್ಯಂಗೋಕ್ತಿ ವಕ್ರೋಕ್ತಿಗಳನ್ನು ಲೀಲಾಜಾಲವಾಗಿ ಬಳಸಬಲ್ಲ ಈತ, ೧೫ನೇ ಶತಮಾನದ ಗದುಗಿನ ಪ್ರಾಂತದ ಗಂಡುಭಾಷೆಯ ಅವನ ವಾಗ್ವಿಹಾರ ಇಂದಿಗೂ ವಿಶಿಷ್ಟ ಆಕರ್ಷಣೆಯಿಂದ ಕೂಡಿದೆ. ಅವನ ಉಪಮೆಗಳಲ್ಲಿ ವಿಶೇಷ ಚೆಲುವಿದೆ. ಉಪಮೆಗಳನ್ನು ಬೆಸೆದು ರೂಪಕ ಮಾಡುವ, ರೂಪಕಗಳ

ಇಟ್ಟಿಗೆಗಳ ಮೇಲೆ ಪ್ರತಿಮೆಗಳ ಸೌಧ ನಿರ್ಮಿಸುವ ಅನನ್ಯ ಪ್ರತಿಭೆಯ ಕಲೆಗಾರನೀತ. ಕೌರವರ ಸೈನ್ಯ ಸಾಗರವನ್ನು ಕಂಡು ದಿಗ್‌ಭ್ರಾಂತನಾದ ಉತ್ತರ ಕುಮಾರ : 'ಹಸಿದ ಮಾರಿಯ ಮುಂದೆಯಲಿ ಕುರಿ ನುಸುಳಿದಂತಾದೆನು' ಎನ್ನುತ್ತಾನೆ. ಅಭಿಮನ್ಯು ಸತ್ತಾಗ 'ಒಳಗುರಿವ ಹಸಿಮರದ ತುದಿಯಲ್ಲಿ ಜಲವೊಗುವ್ವೊಲು' ಧರ್ಮರಾಯನ ದುಃಖವಿತ್ತಂತೆ. ಇನ್ನು ಕುಮಾರವ್ಯಾಸ ಮಹಾಕವಿಯನ್ನು ರೂಪಕ ಸಾಮ್ರಾಜ್ಯದ ಚಕ್ರವರ್ತಿಗೆ ಎಂದು ಕರೆಯದ ವಿಮರ್ಶಕರಿಲ್ಲ. ರೂಪಕಗಳಿಂದ ಪ್ರತಿಮೆಗಳನ್ನು ನಿರ್ಮಿಸುವುದಲ್ಲದೆ ಅವುಗಳನ್ನು ಸಮೀಕರಿಸುವುದರಲ್ಲೂ ಕುಮಾರವ್ಯಾಸ ಕಡುಜಾಣ. ಭೀಷ್ಮರ ಸಾವಿನ ಸಂದರ್ಭದಲ್ಲಿ 'ಪಡುವಣ ಶೈಲ ವಿಪುಲಸ್ತಂಭ ದೀಪಿಕೆಯಂತೆ ರವಿಮೆರೆದ' ನಂತೆ. ಸುಪ್ರತೀಕ ಗಜದ ಸೊಂಡಿಲು 'ಗಗನ ಗಂಗಾ ನದಿಯ ಕಾಲುವೆಯ ತೆಗೆದಂತೆ' ಕಾಣಿಸಿತಂತೆ. ಘಟೋತ್ಕಜ 'ಕಾರಿರುಳ ಪಟ್ಟಣಕೆ ಚಂದ್ರನ ತೋರಣವ ಬಿಗಿದಂತೆ' ಕಂಡುಬಂದನಂತೆ. 'ದಿಜ್ಞಮಣಿ ಸಹಿತಸ್ತಮಿಸೆ ಕಮಲಿನಿ ಕೌರವನ ಮುಖಕಮಲ ಬಾಡು'ತ್ತದೆ. ರೂಪಕಗಳ ಬಳಿಕೆ ' ಅವನ ನುಡಿಕಟ್ಟುಗಳ ಸಾಮಾನ್ಯಚಕ್ಕೆ'ಯಾಗಿದೆ. 'ಸಿಡಿಲ ಪೊಟ್ಟಣಗಟ್ಟಿಸಾಯಿವ ಕುಡುವರೇ ' 'ನುಡಿಯ ಖಿಡ್ಗದಲೇಕೆ ಗಂಟಲು ಕೊಯ್ವೆ', 'ಕೋಲಗುರುವಿನ ಮರಣವಾರ್ತಾ ಕಾಲಸರ್ಪನ ತಂದು ಸಂಜಯ ಹೇಳಿಗೆಯ ನೀಡಾದನು', 'ಮಾತು ಹೊಲಸಿನ ಗಂಧವಾಗಿದೆ' ಮುಂತಾದವನು ಕುಮಾರವ್ಯಾಸನ ರೂಪಕಶಕ್ತಿಯ ಅಪರೂಪದ ವೈವಿಧ್ಯಕ್ಕಾಗಿ ನೆನೆಯಬಹುದಾಗಿದೆ. ಜನಸಾಮಾನ್ಯರ ಆಡುಮಾತಿನಲ್ಲಿ ಪ್ರಚಲಿತವಾಗಿದ್ದ ಗಾದೆಗಳು ಈ ಕವಿಯಲ್ಲಿ ಬೆಲೆಗೊಂಡಿವೆ : 'ಬೆಂದ ಹುಣ್ಣಲಿ, ಸಾಸಿವೆಯ ಬಳಿಯದಿರು', 'ಕುರುಬರೂರಲಿ ಗಾಜು ಮಾಣಿಕ', ಬಡವರ ಕೋಪ ದವಡೆಗೆ ಮೃತ್ಯು' ಮುಂತಾದವು ಗಳಲ್ಲದೆ' ತಲೆಗೆ ತಾ ವೀಳಯವ, 'ನಿಮ್ಮಯ ಬಾಯ ತಂಬುಲ ತಿಂದವನು' ಇತ್ಯಾದಿ ನುಡಿಕಟ್ಟುಗಳು ಅವನ ಕಾವ್ಯದಲ್ಲಿ ಲೆಕ್ಕವಿಲ್ಲದಷ್ಟು ತುಂಬಿ ಶೋಭಿಸಿವೆ. ಆದ್ದರಿಂದಲೆ ಅವನಿಗೆ ಶಬ್ದಬ್ರಹ್ಮ ಎಂಬ ಬಿರುದು.

ಕುಮಾರವ್ಯಾಸ ಕನ್ನಡ ಸಾಹಿತ್ಯದ ಮಹಾಮೇರು. ಶ್ರೀ ಕುವೆಂಪು ಅವರು ಅವನನ್ನು ಕಂಡದ್ದು ಹೀಗೆ...' ಪ್ರಕೃತಿ ಸಹಜವಾದ ಪರ್ವತಾರಣ್ಯಕ ರುಂದ್ರ ರೂಕ್ಷತಾ ಶಕ್ತಿಯಲ್ಲಿ, ಸರ್ವವನ್ನೂ ಸರ್ವರನ್ನೂ ಸರ್ವಕಾಲದಲ್ಲಿಯೂ ಸರ್ವಭಾವದಲ್ಲಿಯೂ ಭಗವಾನ್ ಭಕ್ತಿಯ ಶ್ರೀಮಂತ ಕಾಂತಿಯ ಕಣ್ಣಿನಿಂದಲೇ ಕಾಣುವ 'ವಿರಾಡ್ ದರ್ಶನ'ದಲ್ಲಿ, ಲೌಕಿಕ ಆಗಮಿಕ, ಐಹಿಕ, ಆಮುಷ್ಮಿಕ ಎಂದು ಕವಲೊಡೆಯದೆ ಆಕಾಶೋನ್ನತವಾಗಿ ಬ್ರಾಹ್ಮಭೂಮವಾಗಿ ಪರಮ ಪುರುಷಾರ್ಥ ಸಂಸ್ಪರ್ಶಿಯಾಗಿ ಬದುಕಿಗೆ ಬೆಳಕಿತ್ತು, ಬಾಳನ್ನು ಹುರಿದುಂಬಿಸುವ ಆತ್ಮಶ್ರೀಯ ದಿವ್ಯಾಗ್ನಿಯಲ್ಲಿ ಆದಿಕವಿ ಪಂಪನಿಗೂ ಅದ್ವಿತೀಯನಾಗಿ ಆತನನ್ನೂ ದ್ವಿತೀಯನನ್ನಾಗಿ ಮಾಡುವ ಯೋಗಿ ಕವಿ ಪೂಜ್ಯ ನಾರಣಪ್ಪ...'' (ಕುವೆಂಪು, ತಪೋನಂದನ, ಪು.೯೩) ಈತನಿಗೆ ಬ್ರಹ್ಮದರ್ಶಿ ಎಂದೂ, ರಸದರ್ಶಿ ಎಂದೂ, ಕಾವ್ಯಬ್ರಹ್ಮನೆಂದೂ ವಿಮರ್ಶಕರ ಬಿರುದುಗಳು.

# ಆದಿ ಕದಂಬರು ಮತ್ತು ಜೈನಧರ್ಮ

- ಡಾ. ಆ. ಸುಂದರ

ಇತಿಹಾಸದ ಪುಟಗಳಲ್ಲಿ ಅತಿ ಪ್ರಾಚೀನ ಕಾಲದ ಮೂಲಭೂತ ಈಶ್ವರವಾದಿ ವೈದಿಕ ವಿಚಾರಗಳಿಗೆ ಮತ್ತು ವಿಶೇಷವಾಗಿ ಕರ್ಮ ಮಾರ್ಗಕ್ಕೆ ಕ್ರಮೇಣ ವಿರುದ್ಧವಾದ ಗಿರೀಶ್ವರವಾದಿ ಮತ್ತು ವೈದಿಕ ಕರ್ಮಮಾರ್ಗವನ್ನು ಖಂಡಿಸುವ ಜ್ಞಾನ ಮತ್ತು ಬೌದ್ಧ ಮತಗಳು ಹುಟ್ಟಿಕೊಂಡು ಜನಪ್ರಿಯವಾದವು ಎಂಬ ಮೊದಲಾದ ವಿಷಯಗಳಿವೆ. ಇದರಿಂದ ವೈದಿಕ ಮಾರ್ಗಾವಲಂಬಿಗಳ ಮತ್ತು ಜೈನ - ಬೌದ್ಧ ಮತಾವಲಂಬಿಗಳಿಗೆ ಮಧ್ಯೆ ಸಾಮರಸ್ಯವಿರದೆ ಪರಸ್ಪರ ದ್ವೇಷ ದೊಷಣೆಗಳೇ ಹೆಚ್ಚಾಗಿತ್ತೆಂಬ ಅಭಿಪ್ರಾಯವಿದೆ. ತರುವಾಯ ಕಾಲಿನ ವೈದಿಕ-ಜೈನ-ಬೌದ್ಧ ಸಾಹಿತ್ಯದ ಕೆಲವು ಗ್ರಂಥಗಳನ್ನು ಅವಲೋಕಿಸಿದರೆ ಇಂಥ ಸ್ಥಿತಿ ತಕ್ಕಮಟ್ಟಿಗೆ ಇದ್ದುದು ನಿಜವೆಂದು ಕಾಣುತ್ತದೆ. ಆದರೆ ಇತಿಹಾಸದ ಆಕರಗಳನ್ನು ಕೂಲಂಕಷವಾಗಿ ಸೂಕ್ಷ್ಮವಾಗಿ ಪರಿಶೀಲಿಸಿದಾಗ ಸತ್ಯಕ್ಕೆ ದೂರವಾಗಿ ಉತ್ಪ್ರೇಕ್ಷೆಗೊಳಿಸಲಾಗಿದೆಯೆಂದು ನಿಜ ಸಂಗತಿ ತಿಳಿಯುತ್ತದೆ. ಅಷ್ಟೆ ಅಲ್ಲ ಇವರ ನಡುವೆ ಗಣನೀಯವಾಗಿ ಸಾಮರಸ್ಯವು ಇತ್ತೆಂಬ ಸತ್ಯವೂ ಬೆಳಕಿಗೆ ಬರುತ್ತದೆ. ಇಂಥ ಸತ್ಯ ಸಂಗತಿಗಳು ಕಟ್ಟಾ ವೈದಿಕ ಮತಾವಲಂಬಿಗಳಾದ ಆದಿ ಕದಂಬ ಅರಸು ಮನೆತನದ ಆಶ್ರಯದಲ್ಲಿ ಜೈನ ಧರ್ಮ ಸ್ಥಿತಿಗಳನ್ನು ಪರಿಶೀಲಿಸಿದಾಗ ತಿಳಿಯುತ್ತದೆ.

**ಆದಿ ಕದಂಬರು :**

ತಾಳಗುಂದದ ಶಾಸನದಲ್ಲಿ ಹೇಳಿಕೊಂಡಂತೆ ಆದಿಕದಂಬರು ತಮ್ಮ ವಂಶವನ್ನು 'ಭೂಸುರಾದ್ವಿಜ ಪ್ರವರಾ: ಸಾಮ ಋಗ್ ಯಜುರ್ವೇದಾ ವಾದಿನ : ಯತ್ ಪ್ರಸಾದ ಸ್ತ್ರಾಯತ ನಿತ್ಯಂ ಭುವನತ್ರಯಂ ಪಾಪಮನೋಭಯಾತ್... ಅಥ ಬಬೂವ ದ್ವಿಜಕುಲಂ... ವಿವಿಧ ಯಜ್ಞಾವಭೃತ ಪುಣ್ಯಾಭೀಷೇಕಾರ್ದ್ರ ಮೂರ್ಧಜಾಂ ಪ್ರವಚನಾವಗಾಹ ನಿಷ್ಣಾತಂ ವಿದಿವತ್ ಸಮಿಧಾಗ್ನಿ ಸೋಮಪಂ. ಪ್ರಣವ ಪೂರ್ವ ಷಡ್ವಿಧಾಧ್ಯೇಯ ನಾನರ್ದ್ಯ ಮಾನಾಂತರಾಲಯಂ ಆಕೃಶ ಚಾತುರ್ಮಾಸ್ಯ ಹೋಮೇಷ್ಟಿ ಪಶುಪಾರ್ವಣ ಶಾರ್ಧ್ದ ಪೌಷ್ಟಿಕಂ... ಸವನತ್ರಯಾವಂಧ್ಯ ನೈತ್ಯಕಂ'. ಎಂದು ವರ್ಣಿಸಿಕೊಂಡಿದ್ದಾರೆ. ಈ ಅರಸು ಮನೆತನದ ಮೂಲ ಪುರುಷನಾದ ವೀರಶರ್ಮನು ವೇದ ಕುಲಮತಿ ಇವನ ಮೊಮ್ಮಗ ಮಯೂರಶರ್ಮ ವರ್ಮನು ದ್ವಿಜೋತ್ತಮನು

ಶೃತಶೀಲು, ಶೌಚ್ಯಾದಿ ಅಲಂಕೃತನು ವೇದಾಂಗ ವಿದ್ಯಾ ವಿಶಾರದನು ಇವನು ಆಗಿನ ಕಾಲದಲ್ಲಿ ಸುಪ್ರಸಿದ್ಧ ಕಾಂಚಿಯ ಘಟಿಕಾ ಸ್ಥಾನದಲ್ಲಿ ವಿಶೇಷ ವೇದಾಧ್ಯಯನ ಮಾಡುತ್ತಿದ್ದಾಗ ಒಬ್ಬ ಅಶ್ವದಳ ಅಧಿಕಾರಿಯಿಂದ ಅವಮಾನಿತನಾದಾಗ ತನ್ನ ಧರ್ಮದ ಶ್ರೇಷ್ಠತೆಯನ್ನು ಅತ್ಯಂತ ಕಳಕಳಿಯಿಂದ ಹೀಗೆ ನೆನೆಯುತ್ತಾನೆ.'ಅಹೊ ಬತ ಕ್ಷತ್ರಾತ್ ಪರಿಪೇಲವ ವಿಪ್ರತಾ ಯತಃ' ಗುರುಕುಲಾನಿ ಸಮ್ಯಗೆ ಆರಾಧ್ಯ ಶಾಖಾಂ ಅಧೀತ್ಯಪಿ ಯತ್ಮತಃ ಬ್ರಾಹ್ಮಣ್ಯ ಸಿದ್ಧಿರ್ಯ್ಯದಿ ನೃಪಾದೀನ ಕಿಮ್ ಅತಃ ಪರಮಂ ದುಃಖಮ್'. ೪ನೇ ಅರಸು ರಘುಮಹಾರಾಜನು ಶೃತಿಪಥ ನಿಪುಣನು. ಕಾಕುಸ್ಥ ವರ್ಮನು ತ್ರಿವರ್ಗಪಟು, ವಿಜಯಶಿವ ಮೃಗೇಶವರ್ಮನು ಪ್ರತರ್ದನನಂತೆ ಸತ್ಯವಾದಿ, ವಿಷ್ಣುವಿನಂತೆ ಬ್ರಾಹ್ಮಣ್ಯ: ಯುಧಿಷ್ಠಿರರಂತೆ ಧರ್ಮಜ್ಞನು, ತರುವಾಯ ೭ನೇ ಅರಸು ರವಿವರ್ಮನು ಅರ್ಥಶಾಸ್ತ್ರ ಸೂಬಂಧು ಮೊದಲಾದ ಪ್ರಾಚೀನ ಗ್ರಂಥಗಳಲ್ಲಿ ಪ್ರವೀಣನಾಗಿದ್ದನು. ಬ್ರಹ್ಮಾಸ್ವ ಅಂದರೆ ಬ್ರಾಹ್ಮಣರಿಗೆ ಕೊಟ್ಟ ದಾನದ ರಕ್ಷಣೆ ಬಗ್ಗೆ ವಿಶೇಷವಾಗಿ ಧರ್ಮಶಾಸ್ತ್ರದಲ್ಲಿಯ ಅಭಿಪ್ರಾಯಗಳನ್ನು ಎತ್ತಿ ಹೇಳಿದ್ದಾನೆ. ('ಬ್ರಹ್ಮಾಸ್ವೇನ ವಿಷಂ ಘೋರಂ ನ ವಿಷ್ಯೆಃ ವಿಷಂ ಏಕಾಕಿನಂ ಹಂತಿ ಬ್ರಹ್ಮಾಸ್ಮಂ ಪುತ್ರಪೌತ್ರಕಾಂ') ವಿಷ್ಣುವರ್ಮನನ್ನು ಹಾಗೂ ಇವನ ಮೊಮ್ಮಗನಾದ ಇಮ್ಮಡಿ ಕೃಷ್ಣನನ್ನು ತಮ್ಮನ್ನು 'ಪರಮ ಬ್ರಾಹ್ಮಣ' ನೆಂದು ವರ್ಣಿಸಲಾಗಿದೆ. ಮತ್ತೊಬ್ಬ ಅರಸು ಶಿವಾನಂದ ವರ್ಮನು'ಪರಮ ಮಹೇಶ್ವರ' ಇವನು ಶಾಸ್ತ್ರರೀತಿಯಲ್ಲಿ ನಿರಶನ ವ್ರತದಿಂದ ಮರಣವನ್ನಪ್ಪಿದನು. ಇಮ್ಮಡಿ ಕೃಷ್ಣವರ್ಮನು ಒಬ್ಬ 'ಪರಮ ಭಾಗವತ' ತನ್ನ ಬನಹಳ್ಳಿಯ ಶಾಸನದಲ್ಲಿ 'ಸ್ವಸ್ತಿ ಅಸ್ತು ಗೋ ಬ್ರಾಹ್ಮಣಭ್ಯಃ' ಎಂದು ಹೇಳಿದ್ದಾನೆ. ರವಿವರ್ಮನ ಆಳ್ವಿಕೆಯ ೫ನೇ ವರ್ಷದಿಂದ ದೇವವರ್ಮನ ಮೊಮ್ಮಗ ಮಾಂಧಾತ ರಾಜನ ೫ನೇ ವರ್ಷದವರಿಗೆ ಕದಂಬಳ ಕುಲವನ್ನು ಅಶ್ವಮೇಧ ಅವಭೃತಸ್ನಾನ ಪವಿತ್ರೀಕೃತಾಂಗಃ' ಎಂದು ಕಂಬ ವಂಶವನ್ನು ವರ್ಣಿಸಲಾಗಿದೆ. ಮೊದಲನೇ ಕೃಷ್ಣ ವರ್ಮ ಅಶ್ವಮೇಧ ಯಜ್ಞವನ್ನು ಮಾಡಿದನು. ಮತ್ತು ಬ್ರಾಹ್ಮಣರಿಗೆ ಯಾವಾಗಲೂ ದಾನ ಧರ್ಮವನ್ನು ಮಾಡುತ್ತಿದ್ದನು. ತನ್ನ ಅರಮನೆ ಶಾಲೆಯಲ್ಲಿ ಯುಧಿಷ್ಠಿರನಂತೆ ಸಾವಿರಾರು ಬ್ರಾಹ್ಮಣರಿಗೆ ಭೋಜನ ವ್ಯವಸ್ಥೆ ಮಾಡಿದನು. ಅಜವರ್ಮನು ಮತ್ತು ಭೋಗಿ ವರ್ಮನ ದಾನರಕ್ಷಣೆಯು'ಅಶ್ವಮೇಧ ಯಜ್ಞ' ಮಾಡಿವಷ್ಟು ಪುಣ್ಯ ತರುತ್ತದೆ ಎಂದು ಹೇಳಿಕೊಂಡಿದ್ದಾನೆ.

ಹೀಗೆ ವೈದಿಕ ಧರ್ಮವನ್ನು ಅಧ್ಯಯನ ಅಧ್ಯಾಪನ ಮತ್ತು ನಡೆಯಲ್ಲಿ ಉದ್ದಕ್ಕೂ ಕಟ್ಟುನಿಟ್ಟಾಗಿ ಆಚರಿಸುತ್ತಿದ್ದ ಈ ಬ್ರಾಹ್ಮಣ ಅರಸರು ಈಶ್ವರವಾದಿ ವೈದಿಕ ಧರ್ಮದ ಪ್ರಪಕ್ಷವೆಂದು ಮುಖ್ಯವಾಗಿ ಮೋಕ್ಷವನ್ನು ಪಡೆಯಲು ಯಜ್ಞಯಾಗಾದಿಗಳನ್ನು ಮಾಡುವ ಅವಶ್ಯಕತೆಯನ್ನು ಪ್ರತಿಪಾದಿಸುತ್ತಿದ್ದ ಈ

ಧರ್ಮದ ಕರ್ಮಕಾಂಡವನ್ನು ಖಂಡಿಸುತ್ತಿದ್ದ ನಿರೀಶ್ವರ ವಾದಿಗಳೆಂದು ವರ್ಣಿಸಲ್ಪಟ್ಟ ಜೈನ ಧರ್ಮದ ಬಗ್ಗೆ ಇವರ ದೃಷ್ಟಿಕೋನ ಮತ್ತು ಪೋಷಣ ಹೇಗಿತ್ತೆಂಬುದನ್ನು ಪರಿಶೀಲಿಸುವ.

ಮೊಟ್ಟ ಮೊದಲಾಗಿ ಕಾಕುಸ್ಥ ವರ್ಮನು ತನ್ನ ಸೇನಾಪತಿ ಶೃತಿಕೀರ್ತಿ ವಿಜ್ಞಾಪನೆ ಮೇರೆಗೆ ಇವನ ಮೇಲ್ವಿಚಾರಣೆಯಲ್ಲಿದ್ದ ಜಿನಾಲಯಕ್ಕೆ ಹಲಶಿಯಲ್ಲಿಯ ಖೇಟ ಗ್ರಾಮದ ಶ್ವೇತಪಟಹರಿಗೆ ಸೇರಿದ್ದ ಬಳೋವರ ಕ್ಷೇತ್ರವನ್ನು ಕೊಂಡುಕೊಂಡು ದಾನ ಮಾಡಿದನು. ಈ ಶಾಸನ 'ಜಯತಿ ಭಗವಾನ್ ಜಿನೆಂದ್ರೊ ಗುಣರುಂದ್ರ: ಪ್ರಥಿತ ಪರಮ ಕಾರುಣಿಕ:' ಎಂಬ ತೀರ್ಥಂಕರ ಪ್ರಾರ್ಥನೆಯಿಂದ ಆರಂಭವಾಗುತ್ತದೆ. ಆದರೆ ಶಾಸನವು 'ನಮೋ ನಮಃ ಪುರುಷಭಾಯ ನಮ:' ಎಂಬ ನಮ್ಮ ಭಕ್ತಿ ವಾಕ್ಯದಿಂದ ಕೊನೆಗೊಳ್ಳುವುದು ಗಮನಾರ್ಹ. ಮೇಲೆ ಹೇಳಿದ ಮಂಗಳ ಶ್ಲೋಕವು ಮೃಗೇಶ ವರ್ಮನ ೮ನೇ ಆಳ್ವಿಕೆಯ ವರ್ಷದ ಹಲಶಿ ಶಾಸನದಲ್ಲೂ, ರವಿವರ್ಮನ ೧೧ನೇ ವರ್ಷದ ಹಾಗೂ ಇತರ ೨ ಹಲಶಿ ಶಾಸನಗಳಲ್ಲಿಯೂ ಇನ್ನೂ ವಿಸ್ತೃತವಾಗಿದೆ. ಅಂದರೆ 'ಜಯತಿ ಭಗವಾನ್... ಕಾರುಣಿಕ: ತ್ರೈಲೋಕ್ಯಾಶ್ವಾಸಕಾರಿ ದಯಪತಾ ಕೋಚ್ಚರಿತ ಯಸ್ಯ' ಎಂದಿದೆ. ಇವಲ್ಲದೆ ಮುದಿಗೆರೆಯ ವಿಷ್ಣುವರ್ಮನ ಹಾಗೂ ಇವನ ಮಗ ಸಿಂಹವರ್ಮನ ಶಾಸನಗಳಲ್ಲಿಯೂ ಬೇರೆ ಬೇರೆ ಜೈನ ಮಂಗಳ ಶ್ಲೋಕಗಳಿವೆ. 'ಜಯತಿ ಅವಿರತಾಂತ ಯುಗಪಜ್ಞಾನ ದರ್ಶನ: ಜೀನೇಂದ್ರ: ಪರಮಐಶ್ವರ್ಯ ನಿತ್ಯ ವ್ಯಾಬಾಧ್ಯ ಐಖ್ಯ (ಸೌಖ್ಯ?) ಸೌಖ್ಯ ಚಾರ: ' ಮತ್ತು 'ವಿಭವಾಮಲ ಶೀತಲನಿ (ಶಾಂ) ತಚ್ಛಾಯಾ ಪ್ರಮೋದ ಭಾಗವಿಭಾಗೀ ಜಯತಿ ಜಯ್ಯೈಕಸ್ಥಾನಾನ್ ತ್ರಿಭೂವನ ಸಕಲಾಪತ್ರಂ ಇಹ ಸದ್ಧರ್ಮ:' ಹಾಗೆಯೇ ಉದಾಹರಣೆಗೆ ಮೃಗೇಶ ವರ್ಮನ ೩ನೇ ಆಳ್ವಿಕೆಯ ವರ್ಷದ ದೇವಗಿರಿಯ ಶಾಸನದಲ್ಲಿ 'ಜಯತಿ ಅರಹಂ ಸ್ತ್ರಿಲೋಕೇಶಃ ಸರ್ವ ಭೂತ ಹಿತೆ ರತಃ ರಾಗಾದಿ ಅರಹರಂತೊನಂತ ಜ್ಞಾನ ದೃಗೀಶ್ವರ:' ಎಂದಿದೆ.

ಹಲಶಿಯು ಆದಿ ಕದಂಬರ ಕಾಲದಲ್ಲಿ ಶ್ರೀ ವಿಜಯ ಪಲಾಶಿಕ ಎಂಬ ಹೆಸರಿನಿಂದ ಒಂದು ಉಪರಾಜಧಾನಿಯಾಗಿತ್ತು. ಈ ಅರಸರ ತಾಮ್ರ ಶಾಸನಗಳಲ್ಲಿ ಉಲ್ಲೇಖಿಸಿದಂತೆ ಇಲ್ಲಿ ಯೂಪನೀಯ, ಕೂರ್ಚಕ, ನಿಗ್ರಂಥ, ಶ್ವೇತಪತರರು ಮೊದಲಾದ ಜೈನ ಪಂಥಗಳ ಸಂಘಗಳಿದ್ದವು. ಹೀಗೆ ವಿವಿಧ ಒಳ ಪಂಥಗಳ ಮುನಿ ಸಂಘಗಳು ಒಂದೆಡೆಯಲ್ಲಿದ್ದ ಉಲ್ಲೇಖವು ತೀರ ಅಪರೂಪ. ಹಲಶಿಯು ಈ ಒಂದು ಹಿರಿಮೆಯನ್ನು ಪಡೆದಿತ್ತು. ಅನಂತರ ಕಾಲದ ಬಾದಾಮಿ ಹಾಗೂ ಕಲ್ಯಾಣ ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ ಅರಸರುಗಳ ಕೈಕೆಳಗಿನ ಜೈನ ಅಧಿಕಾರಿಗಳಂತೆ, ಆದಿ ಕದಂಬ ಅರಸರ ಆಡಳಿತದಲ್ಲಿಯೂ ಹಿರಿಯ ಜೈನ ಅಧಿಕಾರಿಗಳಿದ್ದರು. ಇವರೆಲ್ಲರೂ ಕೂಡ ಜೈನ ಧರ್ಮವನ್ನು ನಿಷ್ಠೆಯಿಂದ ಪರಿಪಾಲಿಸುತ್ತಿದ್ದು ಹಲವಾರು

ಜೈನ ಮಂದಿರಗಳ ನಿರ್ಮಾಣಕ್ಕೆ ಕಾರಣರಾಗಿದ್ದರು. ತಮ್ಮ ವರ್ಚಸ್ಸನ್ನು ಬೀರಿ ತಮ್ಮ ಒಡೆಯರಾದ ಈ ಅರಸರುಗಳಿಂದ ಈ ಜಿನಾಲಯಗಳಿಗೆ ಭೂಮಿ ದಾನಗಳನ್ನು ಪಡೆಯುತ್ತಿದ್ದುದು ಸರ್ವೆಸಾಮಾನ್ಯ. ಆದರೆ ಆದಿ ಕದಂಬರ ಜೈನ ಧರ್ಮದ ಪೋಷಣೆ ಮಾತ್ರ ತುಂಬಾ ವಿಶೇಷವಾಗಿದೆ.

ಹಲಶಿಯಲ್ಲಿಯ ಜಿನೇಂದ್ರಾಲಯಕ್ಕೆ ಕಾಕುಸ್ಥ ವರ್ಮನು ಭೂಮಿದಾನ ಮಾಡಿಟ ವಿಷಯವನ್ನು ಮೇಲೆ ಹೇಳಿದೆಯಷ್ಟೆ. ಈ ದಾನವನ್ನು ತರುವಾಯದ ಅರಸುಗಳಾದ ಶಾಂತಿ ವರ್ಮನು, ಮೃಗೇಶವರ್ಮನು ಮತ್ತು ರವಿವರ್ಮನು ದೃಢೀಕರಿಸಿದರು. ಅದೇ ಸಂದರ್ಭದಲ್ಲಿ ರವಿವರ್ಮನು ಈ ಜೀನೇಂದ್ರಾಲಯದಲ್ಲಿ ವಾರ್ಷಿಕ ಜಿನೇಂದ್ರ ಮಹಿಮಾ ಕಾರ್ಯವನ್ನು ನಡೆಸುವುದರಲ್ಲಿ ಸುಗ್ರೀವಾಜ್ಞೆಯ ತರಹ ಒಂದು ಘೋಷಣೆಯನ್ನೇ ಹೊರಡಿಸುತ್ತಾನೆ.'. ಪ್ರತಿವರ್ಷಂ ಜಿನೇಂದ್ರ ಮಹಿಮಾ ಕಾರ್ಯ ಕ್ರಮಾತ್ ಅಷ್ಟಾಹಕೃತ ಮರ್ಯಾದ ಕಾರ್ತಿಕ್ಯಾಂತ ದಾನಾಗಮಾತ್...ಧರ್ಮೇ ವೃದ್ಧಿ: ಜನಪದೈ ಸ್ಸನಾಗರೈ: ಜಿನೇಂದ್ರ ಪೂಜಾ ಸತತಂ ಪ್ರಣೇಯಾ ಇತಿ ಸ್ಥಿತಿ ಸ್ಥಾಪತವಾನ್.' ಅಷ್ಟೇ ಅಲ್ಲ ಎಲ್ಲೆಲ್ಲಿ ಜಿನೇಂದ್ರಪೂಜೆಯು ನಡೆಯುತ್ತದೆಯೋ ಆಯಾಯ ದೇಶಗಳಲ್ಲೆಲ್ಲಾ ಭಯರಹಿತವಾಗಿ ಅಭಿವೃದ್ಧಿಯನ್ನು ಹೊಂದುತ್ತದೆ. (ಯಸ್ಮಿನ್ ಜಿನೇಂದ್ರ ಪೂಜಾ ಪ್ರವರ್ತತ್ ತತ್ರ ತಂತ್ರ ಪರಿವೃದ್ಧಿ ನಗರಾಣಾಂ ನಿರ್ಭಯತಾ ತದ್ದೇಶ ಸ್ವಾಮಿನಾಂ ಚೋರ್ಜ : ನಮೋ ನಮಃ).

ರವಿ ವರ್ಮನ ತಮ್ಮನಾದ ಭಾನುವರ್ಮನು ಹಲಶಿಯ ಒಂದು ಜಿನ ಮಂದಿರದಲ್ಲಿ ಹುಣ್ಣಿಮೆ ದಿನ ಅಭಿಷೇಕಕ್ಕೋಸ್ಕರ ಭೂಮಿ ದಾನವನ್ನು ರವಿವರ್ಮನಿಂದ ಮಾಡಿಸಿದನು. ಈ ಮನೆತನದ ಮತ್ತೊಬ್ಬ ಅರಸನಾದ ಹರಿವರ್ಮನು ಹಲಶಿಯಲ್ಲಿ ಸಿಂಹಸೇನಾಪತಿಯ ಮಗ ಮೃಗೇಶನು ಕಟ್ಟಿಸಿದ ಅರ್ಹದಾಯತನದಲ್ಲೂ ಪ್ರತಿವರ್ಷವೂ ಅಷ್ಟಾಹ್ನಿಕ ಪೂಜೆ ನಡೆಸಲು ಭೂಮಿ ದಾನವನ್ನು ಮಾಡಿದನು. ಪರಮ ಮಾಹೇಶ್ವರನಾದ ಈ ಅರಸನು ಈ ಶಾಸನದಲ್ಲಿ ಅರ್ಹತೆ ವರ್ಧಮಾನ ತೀರ್ಥಂಕರನ ಮುಖ್ಯ ತತ್ವವಾದ ಧ್ಯಾನವು ಜೀವಿಗಳನ್ನು ಪಾಪ ಮುಕ್ತರನ್ನಾಗಿ ಮಾಡುತ್ತವೆ. ಅರ್ಹತ್ ವರ್ಧಮಾನನಿಗೆ ನಮಸ್ಕಾರವು. ('ವರ್ಧತಾಂ ವರ್ದಮಾನ್ಸಾಸನಂ ಸಮ್ಯ ಮಾಸನಂ ಏತಾದ್ಯದಿ ಜಗಜ್ಜೀವಿ ಪಾಪ ಪುಂಜ ಪ್ರಭಂಜನಂ ನಮೋರ್ಹತೆ ವರ್ಧಮಾನಾಯ' ಎಂದಿದೆ.

ಈ ರೀತಿ ಈ ಸ್ವತಂತ್ರ ಅರಸು ಮನೆತನದ ನಾಲ್ಕನೆ ಅರಸು ಕಾಕುಸ್ಥ ವರ್ಮ (ಸು. ೪೦೫-೪೩೦) ನಿಂದ ಹಿಡಿದು ೯ನೇಯ (ಕೊನೆಯ) ಅರಸು ಹರಿವರ್ಮನ (ಸು. ೫೧0-೫೭೦) ವರೆಗೆ ಸ್ವಲ್ಪ ಹೆಚ್ಚು ಕಡಿಮೆ ಪ್ರತಿಒಬ್ಬ ಅರಸನೂ ಕೂಡ ತಮ್ಮ ತಮ್ಮ ಅಧಿಕಾರಿಗಳ ವಿಜ್ಞಾಪನೆ ಮೇರೆಗೆ ಭೂಮಿ ದಾನ ಮಾಡಿದುದರ ಜೊತೆಗೆ

ಜಿನ ಪೂಜೆಯನ್ನು ಸಾರ್ವಜನಿಕವಾಗಿ ವಿಜೃಂಭಣೆಯಿಂದ ನಡೆಸಬೇಕೆಂಬುದನ್ನು ಹಾಗೂ ಜಿನ ಧರ್ಮದ ಶ್ರೇಷ್ಠತೆಯನ್ನು ಮುಕ್ತ ಕಂಠದಿಂದ ಹೊಗಳಿದುದನ್ನು ಸಮಕಾಲೀನ ಹಾಗೂ ಅನಂತರ ಕಾಲದ ಯಾವ ಅರಸು ಮನೆತನದ ಶಾಸನಗಳಲ್ಲಿ ಕಂಡುಬರುವುದಿಲ್ಲ.

ಈ ಅರಸು ಮನೆತನದ ಸಮಕಾಲೀನರಾದ ದಕ್ಷಿಣಕರ್ನಾಟಕದಲ್ಲಿ ಆಳುತ್ತಿದ್ದ ಗಂಗ ಅರಸು ಮನೆತನವು ಜೈನ ಗುರು ಸಿಂಹನಂದಿ ಆಚಾರ್ಯರ ಸಹಾಯದಿಂದ ಸ್ಥಾಪಿತವಾಯಿತೆಂಬುದನ್ನು ಆಯಾಯ ಕಾಲದ ತಮ್ಮ ಶಾಸನಗಳಲ್ಲಿ ಉದ್ದಕ್ಕೂ ಎಡೆಬಿಡದೆ ಹೇಳಿಕೊಂಡಿದ್ದಾರೆ. ಜೈನ ಚೈತ್ಯಾಲಯಗಳ ನಿರ್ಮಾಣಕ್ಕೆ ಹಾಗೂ ಈ ಆಲಯಗಳಲ್ಲಿ ಪೂಜೆ ಪುನಸ್ಕಾರ ನಡೆಸುವುದಕ್ಕೆ ಭೂಮಿ ದಾನವನ್ನು ಮಾಡಿದ್ದಾನೆ. ಆದರೆ ಇವರ ಎಲ್ಲಾ ಶಾಸನಗಳೂ ಒಂದೇ ಪ್ರಕಾರವಾಗಿ ವಿಷ್ಣುವಿನ (ಪದ್ಮನಾಭ) ಸ್ತುತಿಯಿಂದ ಆರಂಭವಾಗಿದೆ. ಇವರಾಗಲೀ ಇವರ ಅನಂತರ ಬಂದ ಯಾವುದೇ ಅರಸು ಮನೆತನದವರಾಗಲೀ, ಆದಿ ಕದಂಬರು ತೋರಿದ ಆತ್ಮೀಯ ಒಲವು ಮತ್ತು ಗೌರವದಂತೆ ಕಂಡು ಬರುವುದಿಲ್ಲ. ಆದರೆ ಈ ಸಂದರ್ಭದಲ್ಲಿ ಒಂದು ಪ್ರಶ್ನೆ, ಇವರ ಕೈಕೆಳಗಿನ ಜೈನಾಧಿಕಾರಿಗಳ ವರ್ಚಸ್ಸು ಕದಂಬ ಅರಸರುಗಳ ಮೇಲೆ ವಿಶೇಷವಾಗಿದ್ದು ತಮ್ಮ ಮತಾಸಕ್ತಿಯು ಮತ್ತು ಹಿರಿಮೆಯು ಪರೋಕ್ಷವಾಗಿ ಈ ರಾಜಶಾಸನಗಳಲ್ಲಿ ಬರುವಂತಾಗಲು ಕಾರಣವಾಗಿರಬಹುದೆ ? ಹೀಗೆ ಪರಾಮರ್ಶಿಸಿದಾಗ ಇಂಥ ಅಧಿಕಾರಿಗಳ ಪ್ರಭಾವವು ಅರಸರುಗಳ ಮೇಲೆ ಇದ್ದೇ ಇರುವುದು ನಿಜ. ಇದು ಇತಿಹಾಸದುದ್ದಕ್ಕೂ ಈಗಿನ ಪ್ರಜಾಪ್ರಭುತ್ವದ ಆಡಳಿತದಲ್ಲೂ ಕಾಣುತ್ತದೆ. ಇದರಿಂದ ಅಲ್ಲೊಬ್ಬ ಇಲ್ಲೊಬ್ಬ ಅರಸು ಇಂಥ ಧಾರ್ಮಿಕ ವಿಷಯವನ್ನು ಒತ್ತಿ ಹೇಳಿದ್ದಿರಬಹುದಾದರೂ ಸಾಮಾನ್ಯವಾಗಿ ಒಂದು ಮಿತಿಯಲ್ಲಿರುತ್ತದೆ. ಅಶೋಕ ಮೌರ್ಯ ಚಕ್ರವರ್ತಿಯು ಸ್ವತಃ ಬೌದ್ಧ ಮತಾವಲಂಬಿಯಾಗಿದ್ದು ಈ ಧರ್ಮವನ್ನು ದೇಶದ ಉದ್ದಗಲಕ್ಕೂ ಮತ್ತು ವಿದೇಶಗಳಲ್ಲಿ ಹರಡುವಂತೆ ಪ್ರಯತ್ನಿಸಿದ್ದರೂ, ಇವನ ಶಾಸನಗಳಲ್ಲಿ ಈ ಧರ್ಮದ ಹೆಚ್ಚುಗಾರಿಕೆಯನ್ನು ಒತ್ತಿ ಹೇಳುವ ಪ್ರಯತ್ನದ ಸುಳಿವೇ ಇಲ್ಲ. ಬದಲಾಗಿ ಧರ್ಮ ಸಮನ್ವಯದ ಸಹಿಷ್ಣುತೆಯ ('ಸಮ ವಾಯೋ ಏವ ಸಾಧು') ಮಾತನ್ನೇ ಮನ ಮುಟ್ಟುವಂತೆ ಹೇಳಿದ್ದಾನೆ. ಇಂಥ ಒಂದು ಮೂಲಭೂತ ನೀತಿಯನ್ನು ಹೆಚ್ಚು ಕಡಿಮೆ ಭಾರತದ ಎಲ್ಲ ಕಾಲದ ಎಲ್ಲ ಅರಸು ಮನೆತನಗಳು ಅನುಸರಿಸುವುದಕ್ಕೆ ವಿಪುಲ ಪುರಾವೆಗಳಿವೆ. ಈಗ ಕದಂಬ ಅರಸರುಗಳಲ್ಲಿ ಒಬ್ಬಿಬ್ಬರು ತಮ್ಮ ಜೈನಾಧಿಕಾರಿಗಳ ವಿಶೇಷ ಪ್ರಭಾವಕ್ಕೊಳಗಾಗಿರಬಹುದೆಂದು ಊಹಿಸಿಕೊಳ್ಳೋಣ. ಕಾಕುಸ್ಥವರ್ಮನು ಸೇನಾಪತಿ ಶೃತಿಕೀರ್ತಿಯ ವಿಜ್ಞಾಪನೆಯಂತೆ ಜಿನಾಲಯಕ್ಕೆ ಭೂಮಿದಾನ ಮಾಡುವ ಕಾಲದಲ್ಲಿ 'ಆತ್ಮನಸ್ತಾರಣಾರ್ಥಂ' ಎಂದು ಹೇಳಿಕೊಂಡಿದ್ದಾನೆ. ಶೃತಕೀರ್ತಿಯು ಇವನನ್ನು ಒಂದು ಮಹಾವಿಪತ್ತಿನಿಂದ ಪಾರು

ಮಾಡಿದುದನ್ನು ಇಲ್ಲಿ ಕೃತಜ್ಞತೆ ನೆನೆದಿದ್ದಾನೆಂದು ವಿದ್ವಾಂಸರ ಒಂದು ಅಭಿಪ್ರಾಯ. ಇಂಥ ಸಂದರ್ಭದಲ್ಲಿ ಈ ಅರಸನ ಈ ಶಾಸನದ ಕೊನೆಯಲ್ಲಿ 'ನಮೋ ನಮಃ ವೃಷಭಾಯ ನಮಃ' ಎಂದಿರುವುದು ವಿಶೇಷವೇನಲ್ಲ ಮತ್ತು ಇದು ವೈಯಕ್ತಿಕ. ಈ ವಂಶದ ಇತರ ಕೆಲವು ಅರಸರ ಇಂಥ ದಾನಗಳ ಉದ್ದೇಶವನ್ನು ಗಮನಿಸಿದಾಗ (ಉದಾ: ಭಾನುವರ್ಮನ ಶಾಸನದಲ್ಲಿ 'ಭೂತಿಂ ಇಚ್ಛತಾ' ರವಿ ವರ್ಮನ ಹಲಶಿ ಶಾಸನದಲ್ಲಿ 'ಪುಣ್ಯ ವೃಧ್ಯರ್ಥಂ' ಮೊದಲಾದವು). ಕಾಕುಸ್ಥ ವರ್ಮನೂ ಕೂಡ ದಾನ ಮಾಡಿದ ಉದ್ದೇಶ ತನ್ನ ಆತ್ಮ ಕಲ್ಯಾಣಕ್ಕೋಸ್ಕರವೇ ಎಂದು ಅರ್ಥೈಸಬೇಕಾಗುತ್ತದೆ. ಇಲ್ಲಿ ದಾನದ ಕಾರಣ ಸೂಚನೆ ಇದ್ದಂತಿಲ್ಲ. ಹಾಗಿದ್ದಲ್ಲಿ ತನ್ನನ್ನು ರಕ್ಷಿಸಿದ ಶ್ರುತಕೀರ್ತಿಗೆ ಎಂದಿದ್ದಿರಬೇಕು ಇದು ಹೇಗೇ ಇರಲಿ ಒಂದು ವೇಳೆ ಕೃತಜ್ಞತೆಯೇ ಕಾರಣವಾಗಿದ್ದರೆ ಇಂಥಹ ಒಬ್ಬಿಬ್ಬರು ಅರಸರಿರಬಹುದು. ಆದರೆ ಈ ವಂಶದ ಬಹಳಷ್ಟು ಅರಸರು ಜೈನ ಧರ್ಮದಲ್ಲಿ ತೋರಿದ ಆಸಕ್ತಿ ಗೌರವ ಹೀಗೆ ಸಾಮಾನ್ಯವಾದುದಲ್ಲ. ಅಯಾಯ ಕಾಲದ ಇತರ ಅರಸರುಗಳಂತೆ ರವಿವರ್ಮನು ಪಲಶಿಯ ಜಿನೇಂದ್ರಾಲಯದಲ್ಲಿ ಜನ ಮಹಿಮಾ ಅಷ್ಟಾಹ್ನಿಕ ಪೂಜೆಗೋಸ್ಕರ ಭೂಮಿದಾನ ಮಾಡಿದನು. ಇದನ್ನು ಇನ್ನು ನಡೆಸುವುದು ಆ ಜಿನಾಲಯದ ಸಂಬಂಧಪಟ್ಟ ಧರ್ಮಾಧಿಕಾರಿಗಳ ಕರ್ತವ್ಯ. ಆದರೆ ಇಲ್ಲಿ ಅರಸರು ಈ ಪೂಜೆಯನ್ನು ಪ್ರತಿವರ್ಷವೂ ಹಾಗೂ ಬೇರೆಡೆಗಳಲ್ಲಿ ಜಿನೇಂದ್ರ ಪೂಜೆಯನ್ನು ಧರ್ಮಭೀರುಗಳಾದ ತನ್ನ ರಾಜ್ಯದ ನಾಗರಿಕರು ಗ್ರಾಮವಾಸಿಗಳು ನಡೆಸಬೇಕೆಂದು ವಿಷಯವು ಆಜ್ಞಾ ರೂಪದಲ್ಲಿ ಶಾಸನದಲ್ಲಿ ಬರುವಂತೆ ಮಾಡುವಷ್ಟು ಪ್ರಭಾವವನ್ನು ಈ ಅಧಿಕಾರಿಗಳು ಈ ಅರಸನ ಮೇಲೆ ಬೀರಿದರೆಂದು ಅರ್ಥೈಸುವುದು ವಿಪರೀತವೆಂದೇ ಈ ಸಂದರ್ಭದಲ್ಲಿ ಕಾಣುತ್ತಧೆ. ಬಲಾಢ್ಯನಾದ ಈ ಅರಸನಿಗೆ ಈ ಮಟ್ಟಕ್ಕೆ ಹೋಗುವ ಕಾರಣವೂ ಅವಶ್ಯಕತೆಯೂ ಇರಲಿಲ್ಲ. ಹೀಗೆಯೇ ತರುವಾಯ ಕಾಲದ ಹರಿವರ್ಮನ ಹಲಶಿ ಶಾಸನದ ಕೊನೆಯಲ್ಲಿ ವರ್ಧಮಾನ ತೀರ್ಥಂಕರರ ತತ್ವವು ಅನುಸರಿಸಿದಲ್ಲಿ ಈಗಲೂ ಕೂಡ ಜೀವಿಯನ್ನು ಪಾಪಮುಕ್ತನನ್ನಾಗಿ ಮಾಡುತ್ತದೆ. ಆದ್ದರಿಂದ ಇದು ಎಲ್ಲೆಡೆಗಳಲ್ಲಿಯೂ ಅಭಿವೃದ್ಧಿಯಾಗಿದೆ ಎಂದು ಹೇಳಲಾಗಿದೆ.

ರವಿವರ್ಮನು ತನ್ನ ೩೪ನೇ ಆಳ್ವಿಕೆ ವರ್ಷದಲ್ಲಿ ಹರಿದತ್ತನ (ಒಬ್ಬ ಗಣ್ಯ ವರ್ತಕ) ವಿಜ್ಞಾಪನೆ ಮೇರೆಗೆ ಆಸಂದಿಯಲ್ಲಿಯ ಅಪರಾಜಿತ (ಬೌದ್ಧ ದೇವತೆ) ಸಿದ್ಧಾಯತನಕ್ಕೂ ಮತ್ತು ಅಲ್ಲಿಯ ಬೌದ್ಧ ಸಂಘಕ್ಕೂ ರಾಜ್ಯದ ಪಣತಗಳು ಸೇರಿದಂತೆ ಭೂಮಿ ದಾನವನ್ನು ಮಾಡಿದನು. ಇವನ ಮಾಂಡಲಿಕ ಕೈಕೇಯ ವಂಶದ ( ಈ ವಂಶದ ರಾಜಕುಮಾರಿಯು ಮೃಗೇಶ ವರ್ಮನ ಪತ್ನಿಯಾಗಿದ್ದಳು: ಅಂಬುದ್ವೀಪ (ಈಗಿನ ಹೈಗುಂದ, ಹೊನ್ನಾವರ ತಾ. ಉತ್ತರ ಕನ್ನಡ ಜಿಲ್ಲೆ, ಶರಾವತಿ ನದಿಯಲ್ಲಿ ಒಂದು ನಡಗಡ್ಡೆ)ವನ್ನು ಆಳುತ್ತಿದ್ದ ಕೈಕೇಯ ವಂಶದ ಚಿತ್ರಸೇನ ಮಹಾಕಲ್ಲನು

ಅಲ್ಲಿಯ (ಬೌದ್ಧ) ಆರ್ಯ ಸಂಘಕ್ಕೆ ನಾಪಿತಪಲ್ಲಿಯ ಕಣಸಮಕ್ಕೊಲ್ಲಿ ಕ್ಷೇತ್ರವನ್ನು ತೋಟ ಸಹಿತ ದಾನ ಮಾಡಿದನು. ಮತ್ತು ೩೫ನೇ ಆಳ್ವಿಕೆಯ ವರ್ಷದಲ್ಲಿ ತನ್ನ ಅಚ್ಚುಮೆಚ್ಚಿನ ('ಪ್ರಿಯ') ಹಾಗೂ ತನ್ನ ವರ್ಣದ ರಾಜ ವೈದ್ಯ ನೀಲಕಂಠ ದೇಶಾಮಾತ್ಯನ ವಿನಂತಿಯನ್ನು ಮನ್ನಿಸಿ ಸಾರೆ ಗ್ರಾಮದಲ್ಲಿಯ 'ಮಹಾದೇವ' ಆಯತನಕ್ಕೆ ಈ ಗ್ರಾಮದ ಭೂಮಿಯನ್ನು ದಾನ ನೀಡಿದನು.

ತಾಳಗುಂದದ ಶಾಸನದಲ್ಲಿಯ ಈ ಅರಸು ಮನೆತನದ ವಿಷಯವನ್ನು ಪರಿಶೀಲಿಸಿದಾಗ ಇವರು ಬಹು ಮಟ್ಟಿಗೆ ಮಹಾದೇವ (ಶಿವ)ನ ಆರಾಧಕರು. ಇದರಲ್ಲಿ ಶಿವವರ್ಣನೆಯ ಕಟಿದ ಒಂದು ಶುಭ ಭವ್ಯ ಮೂರ್ತಿಯಂತಿದೆ. ('ಜಯ ವಿಶ್ವದೇವ ಸಂಗಾತ ನಿಜತೈಕ ಮೂರ್ತಿ : ಸ್ವನಾತನ: ಸ್ಥಾಣುರಿಂದು ರಶ್ಮಿ ವಿಚ್ಚುರಿತ ದ್ಯುತಿಯ ಜರ್ಭಾರಾ ಪುಂಡನ:') ಹೀಗಿದ್ದರೂ ಕೂಡ ಈ ಯಾವ ಸಂದರ್ಭಗಳಲ್ಲಿಯೂ ತಮ್ಮ ಧರ್ಮ ಆಯಾಯ ಇತರ ಧರ್ಮದ ಹೆಗ್ಗಳಿಕೆಯನ್ನು ಎಲ್ಲಿಯೂ ಸೂಚಿಸಿಲ್ಲ. ಎಲ್ಲೆಡೆಗಳಲ್ಲಿಯೂ ಸಮಯೋಜಿತ ಮಂಗಳ ಶ್ಲೋಕವು ಸಾಮಾನ್ಯವಾಗಿದೆ.

ನಿಜ ಒಬ್ಬ ಅರಸು ಅವನ ವೈಯಕ್ತಿಕ ಧರ್ಮ ಯಾವುದೇ ಆಗಿರಲಿ ತನ್ನ ರಾಜ್ಯದಲ್ಲಿ ಎಲ್ಲ ಧರ್ಮಗಳನ್ನು ಸಮಾನ ದೃಷ್ಟಿಯಿಂದ ನೋಡಿಕೊಳ್ಳಬೇಕಾದುದು ರಾಜ್ಯದ ಹಿತ ದೃಷ್ಟಿಯಿಂದ ಅವರ ಕರ್ತವ್ಯ ಮತ್ತು ಬೇರೆ ಬೇರೆ ಮತಾವಲಂಬಿಗಳಿಂದ ತಮ್ಮ ತಮ್ಮ ಅಧಿಕಾರಗಳ ವಿಜ್ಞಾಪನೆಯ ಮೇರೆಗೆ ಕ್ರಮವಾಗಿ ದೇವಾಲಯಗಳಿಗೆ, ಬಸದಿಗಳಿಗೆ, ಸಿದ್ಧಾಲಯಗಳಿಗೆ ದಾನ ಧರ್ಮಗಳನ್ನು ಮಾಡಿರುವುದು ಸರ್ವೆಸಾಮಾನ್ಯ ಮತ್ತು ಇಂಥ ದಾನಗಳನ್ನು ಘೋಷಿಸುವ ಶಾಸನಗಳ ಆರಂಭದಲ್ಲಿ ತತ್ಸಂಬಂಧ ದೇವರ: ತೀರ್ಥಂಕರನ:ಬುದ್ಧನ ಪ್ರಾರ್ಥನೆಯಿಂದ ಕೂಡಿದ ಮಂಗಳಾ ಚರಣವಿರುವುದೂ ಸಾಮಾನ್ಯ. ಕರ್ನಾಟಕದಲ್ಲಿಯ ಎಲ್ಲ ಅರಸು ಮನೆತನಗಳ ರಾಜರುಗಳು ಈ ಧರ್ಮ ಸಹಿಷ್ಣುತೆಯನ್ನು ಉಜ್ವಲವಾಗಿ ತೋರಿಸಿದ್ದಾರೆ ಅವರು ತಮ್ಮನ್ನು 'ಚತುಸ್ಸಮಯ: ಎಂದು ಕರೆದುಕೊಳ್ಳುವುದರಲ್ಲಿ ಅಭಿಮಾನ. ಎರಡನೆಯದಾಗಿ ಒಬ್ಬ ಚಕ್ರವರ್ತಿಯು ರಾಜನು ಯಾವುದೋ ಒಂದು ಕಾರಣದಿಂದ ಮನಸೊಂದು ಪಶ್ಚಾತಾಪ ಪಡುತ್ತಿರುವಾಗ ಒಬ್ಬ ಶ್ರೇಷ್ಠ ಧಾರ್ಮಿಕನ ಧರ್ಮ ಬೋಧನೆ ಬಹು ಅಪ್ಯಾಯಮಾನವಾಗಿ ಕಂಡು ಆ ಧರ್ಮವನ್ನು ಸ್ವೀಕರಿಸಿ ಅದರ ಪ್ರಚಾರಕ್ಕೆ ಪ್ರಯತ್ನಿಸುವುದು ಸಹಜವೆ. ಉದಾಹರಣೆಗೆ ಮೌರ್ಯ ಚಕ್ರವರ್ತಿ ಅಶೋಕ. ಆದರೆ ಕದಂಬರು ಇಂಥ ಯಾವುದೇ ಒಂದು ಸ್ಥಿತಿಯಲ್ಲಿರಲಿಲ್ಲ. ಮೇಲಾಗಿ ಘನ ವಿದ್ವಾಂಸರು, ವೈಧಿಕ ಧರ್ಮವನ್ನು ಚೆನ್ನಾಗಿ ಅರಿತು ಕಟ್ಟುನಿಟ್ಟಾಗಿ ಆಚರಿಸುತ್ತಿದ್ದವರು ತಮ್ಮ ಧರ್ಮದಲ್ಲಿ ಅಭಿಮಾನವುಳ್ಳವರು ಆಡಳಿತದಲ್ಲಿ ಮನುಧರ್ಮ ಶಾಸ್ತ್ರವನ್ನು, ಕೌಟಿಲ್ಯನ ಅರ್ಥಶಾಸ್ತ್ರವನ್ನು, ರಾಮಾಯಣ ಮತ್ತು

ಮಹಾಭಾರತದಲ್ಲಿಯ ರಾಜನೀತಿಯನ್ನು ('ರಾಮಗೀತ' ಮತ್ತು ಭೀಷ್ಮಗೀತ') ಅನುಸರಿಸುತ್ತಿದ್ದವರು ವರ್ಣಾಶ್ರಮ ಪದ್ಧತಿ ಪಾಲಿಸುತ್ತಿದ್ದರು. ಆಗಿನ ಕಾಲದ ಸಮಾಜದಲ್ಲಿ ಬ್ರಾಹ್ಮಣ ವರ್ಗಕ್ಕೆ ಅತ್ಯುಚ್ಚ ಸ್ಥಾನವಿತ್ತು. ವೈದಿಕ ಧರ್ಮದಲ್ಲಿ ಶ್ರೇಷ್ಠ ಹಾಗೂ ಉದಾತ್ತ ನೀತಿ ತತ್ವಗಳಿಗೇನೂ ಕೊರತೆ ಇರಲಿಲ್ಲ. ಆದರೂ ಕೂಡ ವೈದಿಕ ಧರ್ಮಕ್ಕೆ ಪ್ರತಿಪಕ್ಷವಾಗಿ ಹುಟ್ಟಿ ಬೆಳೆದ ನಿರೀಶ್ವರವಾದಿ ಎಂದು ಇತಿಹಾಸದಲ್ಲಿ ಹೇಳಲಾದ ಜೈನ ಧರ್ಮಕ್ಕೆ ಇಷ್ಟೊಂದು ಮಹತ್ವದ ಸ್ಥಾನವನ್ನು ಕೊಡಲು ಕಾರಣವೇನಿದ್ದಿರಬಹುದು ? ಬಹುಶಃ ಸ್ಪಷ್ಟವಾಗಿ ಇವರ ಶಾಸನಗಳಲ್ಲಿ ಅಲ್ಲಲ್ಲಿ ಉತ್ತರ ಇರುವಂತೆ ಕಾಣುತ್ತದೆ. ಮಂಗಳ ಶ್ಲೋಕಗಳಲ್ಲಿ ಕಾಣುವ ಜೈನ ಧರ್ಮದ ವಿಶೇಷ ಲಕ್ಷಣ ಅಂದರೆ ಕರುಣೆ, ದಯೆ, ಅಹಿಂಸೆ ಪ್ರಧಾನವಾಗಿದೆ. ಅನಂತರ ಕಾಲದ ಶಾಸನಗಳಲ್ಲಿ ಎಲ್ಲೆಡೆಯಲ್ಲೂ ಒಂದೇ ರೀತಿಯ ಮಂಗಳಶ್ಲೋಕವು ಕಾಣಿಸಿಕೊಳ್ಳುತ್ತದೆ. ಅದೆಂದರೆ 'ಶ್ರೀಮತ್ ಪರಮ ಗಂಭೀರ ಸ್ಯಾದ್ ವಾದಾ ಮೋಘಲಾಂಛನಂ, ಜೀಯಾತ್ ತ್ರೈಲೋಕ್ಯ ನಾಥಸ್ಯ ಶಾಸನಂ ಜಿನಶಾಸನಂ' ಈ ಶ್ಲೋಕದಲ್ಲಿ ಜೈನ ಧರ್ಮದ ವಿಶಿಷ್ಟ ತತ್ವವಾದ ಸ್ಯಾದ್‌ವಾದ ತತ್ವ ಎತ್ತಿ ಹೇಳಿದೆ. ಮೃಗೇಶವರ್ಮನು ಆಳ್ವಿಕೆಯ ೩ನೇ ವರ್ಷದ ದೇವಗಿರಿ ಶಾಸನದಲ್ಲಿ ಬೃಹತ್ ಪರಲೂರು ಗ್ರಾಮದಲ್ಲಿ ಜೈನ ಚೈತ್ಯಾಲಯಕ್ಕೆ ಭೂಮಿದಾನ ಮಾಡುವ ಕಾಲದಲ್ಲಿ 'ತ್ರಿದಶಪತಿ ಮಕುಟ ಪರಿಗೃಷ್ಟ ಚಾರುಚರಣೇಭ್ಯಹ ಅರ್ಹದ್ಭ್ಯೋವೇಭ್ಯ:' ಎಂದು ತೀರ್ಥಂಕರರ ಶ್ರೇಷ್ಠತೆಯನ್ನು ಹೊಗಳಲಾಗಿದೆ. ಇತರೆಡೆಗಳಲ್ಲಿಯೂ ಕೂಡ 'ಭಗವತ್ ಮಹಾಜಿನೇಂದ್ರ ದೇವತಾಭ್ಯ:' ಎಂದು ವಿಶೇಷವಾಗಿ ಬಹುವಚನದಲ್ಲಿ ತೀರ್ಥಂಕರರಿಗೆ ಭಕ್ತಿಯನ್ನು ತೋರಿಸಲಾಗಿದೆ.

ಇನ್ನು ಜೈನ ಯತಿಗಳ ಬಗ್ಗೆ ಖೇಟ ಗ್ರಾಮದ ಶ್ವೇತಪಟರು ಭಗವತಾಂ ಅರ್ಹತಾಂ ಸರ್ವಭೂತ ಶರಣ್ಯಾಣಾಂ ತ್ರೈಲೋಕ್ಯ ನಿಸ್ತಾರರಾಣಾಂ' ಸದ್ಧರ್ಮ ಕರಣ ಪರಾ' ಎಂದು ಮತ್ತು ಮೃಗೇಶವರ್ಮನ ಶಾಸನದಲ್ಲಿ ಯಾಪನೀಯ ನಿರ್ಗ್ರಂಥ ಮತ್ತು ಕೂರ್ಚಿಕ ಯತಿಗಳನ್ನು' ಭಗವದ್ಭ್ಯೋ ಅರ್ಹದಭ್ಯ:' ಎಂದು ಪ್ರಶಂಸಿಸಲಾಗಿದೆ.

**ಜೈನ ಧರ್ಮದ ಶ್ರೇಷ್ಠತೆ ಮತ್ತು ಹಲಶಿ:**

ಇವೆಲ್ಲವನ್ನು ಪರಿಶೀಲಿಸಿದಾಗ ಈ ಧರ್ಮದಲ್ಲಿಯ ಬಿಚ್ಚು ಮನಸ್ಸಿನ ತತ್ವ ಚಿಂತನೆ (ಸಾಧ್ಯವಾದ) ಆತ್ಮ ಕಲ್ಯಾಣಕ್ಕೆ ಕೇವಲ ಸ್ವ ಪ್ರಯತ್ನ ಒಂದೇ ಮಾರ್ಗ ಎಂಬ ಅಹಿಂಸಾ ನೀತಿಗೆ ಇರುವ ಪರಮೋಚ್ಚ ಸ್ಥಾನ, ಜೈನ ಮುನಿಗಳ ಮತ್ತು ಬಹು ಮಟ್ಟಿಗೆ ಹಲಶಿಯಲ್ಲಿಯ ಯತಿಗಳ ಶ್ರಾವಕರ ನಿರ್ಮಲ ಮತ್ತು ಶಾಂತಿ ಪ್ರಿಯ ವಾಸ್ತವಿಕ ಜೀವನವು ಆದಿಕದಂಬರ ಮೇಲೆ ಗಂಭೀರ ಪ್ರಭಾವವನ್ನುಂಟು

ಮಾಡಿರಬೇಕು. ಜೈನ, ವೈದಿಕ ಮೊದಲಾದ ಮತಗಳ ಸಿದ್ಧಾಂತಗಳ ವಾದ ವಿವಾದಗಳೆಲ್ಲಾ ಖಂಡನೆ, ಮಂಡನೆ, ಕೆಲವೊಂದು ಸಲ ಉದ್ರೇಕದಿಂದ ನಿಂದನೆಗಳಿದ್ದರೂ ಕೂಡಾ ಹೃದಯ ಶ್ರೀಮಂತಿಕೆಯನ್ನು ಹೊಂದಿದ್ದ ಗಂಭೀರ ಹಾಗೂ ಉದಾತ್ತ ತತ್ವ ಚಿಂತನೆಯಿಂದ ಕೂಡಿದ ಪುಷ್ಟ ವೈದಿಕ ಧರ್ಮದಲ್ಲಿ ಶ್ರದ್ಧೆಯುಳ್ಳ ಆಧ್ಯಾತ್ಮಿಕ ವಿಷಯದಲ್ಲಿ ಘನ ವಿದ್ವಾಂಸರುಗಳಾದ ಅತ್ಯಂತ ಉಚ್ಚ ವರ್ಗಕ್ಕೆ ಸೇರಿದ ಆದಿ ಕದಂಬರು ಒಂದು ವಿಶಿಷ್ಟ ರೀತಿಯಲ್ಲಿ ತಮ್ಮ ವೈದಿಕ ಧರ್ಮಕ್ಕೆ ಪ್ರತಿ ಪಕ್ಷವಾದ ಜೈನ ಧರ್ಮಕ್ಕೆ ಮನ್ನಣೆ ಕೊಟ್ಟಿರುವುದಕ್ಕೆ ಅದು ಆ ಧರ್ಮದಲ್ಲಿಯ ವೈಶಿಷ್ಟ್ಯಪೂರ್ಣವಾದ ಸತ್ವವೇ ಕಾರಣ ಜೈನಧರ್ಮದಲ್ಲಿಯ ಅತ್ಯುನ್ನತ ಶ್ರೇಷ್ಠತೆಯನ್ನೂ ಗುರುತಿಸಿ ಜನಸಾಮಾನ್ಯರಿಗೆ ಹೇಳುವ ಪ್ರಯತ್ನ ಬಹುಶಃ ಕರ್ನಾಟಕದ ಇತಿಹಾಸದಲ್ಲಿ ವಿಶಿಷ್ಟವಾಗಿದೆ ಎಂದು ಹೇಳಬಹುದು. ಒಂದು ಅಪರೂಪದ ಘಟನೆ ಇಂದಿನ ಕಾಲಕ್ಕೂ ಆದರ್ಶ ಪ್ರಾಯವಾಗಿದೆ ಎಂದು ಹೇಳಬಹುದು. ಈ ಮಹತ್ವದ ಐತಿಹಾಸಿಕ ಸ್ಥಿತಿಗೆ ಹಲಶಿಯು ಭೂಮಿಕೆಯಾಗಿದ್ದುದ್ದರಿಂದ ಮಹತ್ವದ ಜೈನ ಕೇಂದ್ರಗಳಲ್ಲಿ ಒಂದು ಎಂದು ಪರಿಗಣಿಸಬಹುದು.

**ಅಡಿ ಟಿಪ್ಪಣಿಗಳು :**

1) ಎಪಿಗ್ರಾಫಿಯಾ ಕರ್ನಾಟಿಕಾ ಸಂಪುಟ ೨ (ಮೈಸೂರು ವಿಶ್ವವಿದ್ಯಾಲಯ) ಶಾಸನ ಸಂಖ್ಯೆ ೨೫೧ (೧೧ನೇ ಶತಮಾನ) ಮತ್ತು ೩೬೪ (೧೪೩೨) ನಂ. ೭೭ (೧೧೨೯), ೭೧ (೧೧೬೫)

2) ಅದೇಕಡೆ ಪುಟ XL ii-X Liv

3) ಮಹಾವಂಶ ೪೧ ಮತ್ತು ದೀಪವಂಶ VIII ೧೦

4) ಇಂಡಿಯನ್ ಆರ್ಕಿಯಾಲಜಿ, ಎ ರಿವ್ಯೂ

5) ವಡ್ಡಮಾನು ಎಕ್ಸ್‌ಕವೇಶನ್ಸ್ ಆ್ಯಂಡ್ ಎಕ್ಸ್‌ಪ್ಲೋರೇಶನ್ ಇನ್ ದಿ ಕೃಷ್ಣವ್ಯಾಲಿ

6) ತಾಳ್ತಜೆ ವಸಂತ ಕುಮಾರ : ಕರ್ನಾಟಕದಲ್ಲಿ ಬೌದ್ಧಧರ್ಮ

7) ಇದುವರೆಗೆ ದೊರೆ ಆದಿ ಕದಂಬರ ೫೨ ಶಾಸನಗಳಲ್ಲಿ ೧೩ ಒಂದಲ್ಲ ಒಂದು ರೀತಿಯಿಂದ ಜೈನ ಧರ್ಮಕ್ಕೆ ಸಂಬಂಧಿಸಿವೆ. ಇವುಗಳಲ್ಲಿ ೧೦ ಶಾನಗಳಲ್ಲಿ ವೈದಿಕ ಮತಾವಲಂಬಿಗಳಾದ ಬ್ರಾಹ್ಮಣ ಕಂಬ ಅರಸುಗಳೇ ಜೈನ ಚೈತ್ಯಾಲಯವನ್ನು ಕಟ್ಟಿಸಿದ, ಇಲ್ಲವೆ ತಮ್ಮ ಅಧಿಕಾರಿಗಳ ವಿನಂತಿಯ ಮೇರೆಗೆ ಭೂಮಿದಾನ ಮಾಡಿದ ಜೈನ ಹಬ್ಬದ ವಿಜೃಂಭಣೆ ಆಚರಣೆಯ ವಿಷಯಗಾಳಿವೆ. ದಕ್ಷಿಣ ಕರ್ನಾಟಕ ಭಾಗವನ್ನು ಆಳುತ್ತಿದ್ದ ಸಮಕಾಲೀನ

ಗಂಗರ ೨೬ ಶಾಸನಗಳಲ್ಲಿ ಅವನೀತ ಕೊಂಗುಣಿವರ್ಮ (೫೩೦-೬೦) ನ ಒಂದು ಶಾಸನದಲ್ಲಿ ಮಾತ್ರ ಅರ್ಹದಾಯತನಕ್ಕೆ ಭೂಮಿದಾನ ಮಾಡಿದ ವಿಷಯವಿದೆ. ದಕ್ಷಿಣ ಕರ್ನಾಟಕ ಭಾಗವನ್ನು ಆಳುತ್ತಿದ್ದ ಸಮಕಾಲೀನ ಗಂಗರ ೨೬ ಸಾಸನಗಳಲ್ಲಿ ಅವನೀತ ಕೊಂಗುಣಿವರ್ಮ (೫೩೦-೬೦)ನ ಒಂದು ಶಾಸನದಲ್ಲಿ ಮಾತ್ರ ಅರ್ಹದಾಯತನಕ್ಕೆ ಭೂಮಿದಾನ ಮಾಡಿದ ವಿಷಯವಿದೆ. ಆದರೆ ೧೧ನೇ ಶತಮಾನ ಕಲ್ಲೂರಿನ ಶಾಸನದಲ್ಲಿ ಮೂಲಪುರುಷನಾದ ಮಾಧವನಿಂದ ಒಂದು ಚೈತ್ಯಾಲಯವು ಸಿಂಹಣಂದ ಆಚಾರ್ಯರ ಅಣತಿಯಂತೆ ಕಟ್ಟಲ್ಪಟ್ಟಿತು.

8) ಸುಂದರ. ಅ: ೧೯೮೩ : 'ದಿ ಅರ್ಲಿ ಕದಂಬ ಟೆಂಪಲ್ ಅರ್ಕಿಟೆಕ್ಚರ್ ರಿಸೆಂಟ್ ನೋಟಿಸಸ್' ಮಿಥಿಕ್ ಸೊಸೈಟಿ ಜರ್ನಲ್ ನಂ. LXXV

9) ಬರ್ಜೆಸ್ ಜೇಮ್ಸ್ : ಆ್ಯಂಟಿಕ್ವಿಟೀಸ್ ಇನ್ ಬೆಳಗಾಂವ ಕಲಾದಗಿ ಡಿಸ್ಟ್ರಿಕ್ಟ್ ಈ ಮಂದಿರವನ್ನು ನಾನು ಸ್ವತ ಕೆಲವು ವರ್ಷಗಳ ಹಿಂದೆ ಪರಿಶೀಲಿಸಿ ಇದು ಮೂಲತ: ಜೈನ ಬಸದಿಯೆಂದು ಖಚಿತ ಪಡಿಸಿಕೊಂಡಿದ್ದೇನೆ.

10) ಸುಂದರ. ಅ : ೧೯೮೦ 'ಅನ್ ಎಲ್ಲಮ್ಮಾ ವರ್ಷಿಪ್ ಇನ್ ಸೌಂದತ್ತಿ' ಆರ್ಕ್ಕಿಯಾಲಾಜಿಕಲ್ ಸ್ಟಡಿಸ್ ನಂ. V ಮೈಸೂರು

11) ದಿವಾಕರ . ಆರ್. ಆರ್. : ದಿ.ಮಹಾಮಂಡಲೇಶ್ವರಾಸ್ ಆಫ್ ದಿ ಕಲ್ಯಾಣ ಚಾಲುಕ್ಯ

12) C11,No @

13) ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್ ಸಂಪುಟ ೨೦ ಶಾಸನ ಸಂಖ್ಯೆ ೩೨

14) ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್ ಸಂಪುಟ ೨೦ ಶಾಸನ ಸಂಖ್ಯೆ ೧೩

15) ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್ ಸಂಪುಟ ೨೦ ಶಾಸನ ಸಂಖ್ಯೆ ೧೮

16) ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್ ಸಂಪುಟ ೨೦ ಶಾಸನ ಸಂಖ್ಯೆ

17) ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್ ಸಂಪುಟ ೨೦ ಶಾಸನ ಸಂಖ್ಯೆ ೬೨

18) ARSIE; APPE No. 15, 1940 f41

19) ಬೆಳವಡಿ ಕೋಟೆ ಹತ್ತಿರ ಶಾಸನ S.H.R. 1979

20) ಅಪ್ರಕಟಿತ ಡಾ. ಎಸ್.ವಿ. ಪಾಡಗಾರ್ ಈ ಮಾಹಿತಿಯನ್ನು ಕೊಟ್ಟಿದ್ದಾರೆ ಅವರಿಗೆ ಕೃತಜ್ಞ

21) - '' -

22) - '' -

23) - ಅದೇ -

24) - '' -

25) ಗೋಪಾಲ, ಬಿ.ಆರ್. ೧೯೮೫ ಕಾರ್ಪಸ್ ಆಫ್ ಕದಂಬ ಇನ್‌ಸ್ಕ್ರಿಪ್ಷನ್ಸ್ ಸಂಪುಟ೧, ಕದಂಬ ಇನ್‌ಸ್ಟಿಟ್ಯೂಟ್ ಆಫ್ ಕಲ್ಚರಲ್ ಸ್ಟಡಿಸ್ (ರಿ), ಸಿರ್ಸಿ (ಕಾ.ಕ.ಇ.), ಶಾಸನ ಸಂ. ೫

26) ಕಾ.ಕ.ಇ. ಶಾಸನ ಸಂ. ೪

27) ಅದೇ ಕಡೆ ಪುಟ ೮೨

28) ಅದೇ ಕಡೆ ಪುಟ ೧೨,೧೩

29) ಅದೇ ಕಡೆ ಪುಟ ೧೪

30) ಅದೇ ಕಡೆ ಪುಟ ೪೩

31) ಅದೇ ಕಡೆ ಪುಟ ೮೪

32) - '' - ಪುಟ ೧೦೦

33) - '' - ಪುಟ ೧೩೦

34) - '' - ಪುಟ ೧೪೯

35) - '' - ಪುಟ ೧೨೨

36) - '' - ಪುಟ ೧೪೫

37) - '' - ಪುಟ ೧೫೦

38) - '' - ಪುಟ ೬೧, ೧೪೫, ೧೪೯,೧೫೩,೧೫೭,೧೬೧,೧೬೬,೧೭೦

39) - '' - ಪುಟ ೧೨೫,೧೩೦,೧೩೨,೧೩೬,೧೪೦ (ಒಟ್ಟು ಈ ಅರಸನ ಐದು ಶಾಸನಗಳಲ್ಲಿ)

40) - '' - ಪುಟ ೧೬೦

41) - '' - ಪುಟ ೧೬೪ ('ಮವಾಪ್ಯೋಸಿ' ) ಮತ್ತು ೧೬೬

42) – ” – ಶಾಸನ ಸಂಖ್ಯೆ : ೩

43) – ” – ಶಾಸನ ಸಂಖ್ಯೆ : ೧೩, ೧೮

44) – ” – ಶಾಸನ ಸಂಖ್ಯೆ : ೮ ಮತ್ತು

45) ಅದೇ ಕಡೇ ಪುಟ ಶಾಸನ ಸಂಖ್ಯೆ : ೪೨೪

46) – ” – ಶಾಸನ ಸಂಖ್ಯೆ : ೧೮

47) – ” – ಶಾಸನ ಸಂಖ್ಯೆ : ೨೯

48) – ” – ಎಪಿಗ್ರಾಫಿಯ ಕರ್ನಾಟಿಕ ಸಂ. ೭ ಕಲ್ಲೂರ ಶಾಸನ

49) ಅಶೋಕ ಚಕ್ರವರ್ತಿಯ ೧೩ನೇ ಪ್ರಧಾನ ಬಂಡೆ ಶಾಸನ

50) ಕ.ಕಾ.ಇ. ಶಾಸನ ಸಂಖ್ಯೆ ೩

51) ಅದೇ ಕಡೆ ಶಾಸನ ಸಂಖ್ಯೆ ೨೦ ಮತ್ತು ೨೬

52) ಅದೇ ಕಡೆ ಶಾಸನ ಸಂಖ್ಯೆ ೨೧

53) ಅದೇ ಕಡೆ ಶಾಸನ ಸಂಖ್ಯೆ ೧೧, ೪೪

54) ಅದೇ ಕಡೆ ಶಾಸನ ಸಂಖ್ಯೆ ೧೧, ೪೪

55) ಅದೇ ಕಡೆ ಶಾಸನ ಸಂಖ್ಯೆ ೨೦, ೭೨

# ಸೃಜನಶೀಲತೆಯ ವಾಂಶಿಕ ಸೆಲೆ

- ಡಾ॥ ಜಿ. ಎಸ್. ಭಟ್

ಎಲ್ಲ ಲಲಿತಕಲೆಗಳ ಸಂದರ್ಭದಲ್ಲಿ ಅವನ್ನು ಸೃಷ್ಟಿಸುವ ಸೃಜನಶೀಲ ಮನೋಧರ್ಮ ರೂಪುಗೊಳ್ಳಲು, ಕಲಾವಿದ ತನ್ನ ಮಾಧ್ಯಮದಲ್ಲಿ ಅಭಿವ್ಯಕ್ತಿಯ ಗರಿಷ್ಠ ಯಶಸ್ಸುಪಡೆಯಲು ಒದಗುವ ಬೀಜಕಾರಣ ಯಾವುದು ? ಆರ್ಷೇಯವಾದ ನಂಬಿಕೆಯಂತೆ ಈ ಬೀಜಕಾರಣ ದೈವಾನುಗ್ರಹವೆ, ಜನ್ಮಜಾತ ಪ್ರತಿಭೆಯೆ, ಆನುವಂಶಿಕವಾಗಿ ಹರಿದುಬಂದ. ನೈಪುಣ್ಯವೆ, ಅಥವಾ ಕಲಾವಿದ ವ್ಯಕ್ತಿಯ ಕಲಿಕೆ, ನಿಷ್ಠೆ, ಶ್ರದ್ಧೆ, ಪರಿಶ್ರಮ ಇವೆಲ್ಲವು ಗಳ ಒಟ್ಟಾರೆ ಮೊತ್ತದ ಪರಿಣತರೂಪವೆ ಎಂಬ ಜಿಜ್ಞಾಸೆ ನಡೆಯುತ್ತದೆ. ಮಾನವಕುಲ ಇತಿಹಾಸದಲ್ಲಿ ಆಗಿಹೋದ ಮಹಾಜನಶೀಲ ಮನೋಧರ್ಮದ ಒಳಮರ್ಮ ಅರಿತು, ಅಳೆದು ಹೊಸ ಸೃಜನಶೀಲತೆಯ ನಿರ್ಮಾಣಕ್ಕೂ ಕಲಾಸೃಷ್ಟಿಯ ಮೂಲಹೇತುವಿನ ಅನ್ವೇಷಣೆಗೂ ಜಾಡಾಗುತ್ತದೆ. ಭಾರತೀಯ ಕಾವ್ಯಮಿಮಾಂಸೆ ಕವಿ ಹಾಗೂ ಕಾವ್ಯ ನಿರ್ಮಾಣ ಶಕ್ತಿಯ ಸಂದರ್ಭದಲ್ಲಿ ಮಾಡುವ ಆಲೋಚನೆ ಹಾಗೂ ತಾಳುವ ಧೋರಣೆ ಇನ್ನುಳಿದ ಲಲಿತಕಲೆಗಳ ಮತ್ತು ಅವನ್ನು ಸೃಷ್ಟಿಸುವ ಶಕ್ತಿಗೆ ಅರ್ಥಪೂರ್ಣವಾಗಿ ಅನ್ವಯವಾಗುತ್ತದೆ. ಪ್ರತಿಭೆಯೇ ಕವಿತೆಯ ಬೀಜ ಎಂಬುದನ್ನು ಭಾರತೀಯ ಕಾವ್ಯಮೀಮಾಂಸಾಪರಂಪರೆ ನಿರ್ಣಯಿಸಿದ್ದು ಸರ್ವಗ್ರಾಹ್ಯಸಂಗತಿ. ಉಳಿದ ಲಲಿತಕಲೆಗಳ ಸೃಷ್ಟಿಶಕ್ತಿಯ ವಿಷಯದಲ್ಲಿಯೂ ಈ ಮಾತು ಸುಳ್ಳಲ್ಲ. ಹೊಸ ಹೊಸಭಾವಗಳನ್ನು ಸತತವಾಗಿ ಕಾಣುವ, ಕಟ್ಟುವ ಪ್ರಜ್ಞೆಯೇ ಪ್ರತಿಭೆ. ಈ ಪ್ರತಿಭೆಯ ಉಸಿರಿನಿಂದ ಜೀವತುಂಬಿ ವರ್ಣಿಸಬಲ್ಲ ನಿಪುಣನೇ ಕವಿ. ಕವಿ ಕರ್ಮವೇ ಕಾವ್ಯ. ಹೀಗೆ ಕವಿಸೃಷ್ಟಿಯ ರಹಸ್ಯವೆಲ್ಲ ಪ್ರತಿಭೆಯೆಂಬ ಮೂರು ಅಕ್ಷರಗಳಲ್ಲಿ ಅಡಗಿದೆ' ಎಂದು ಪ್ರತಿಭೆಯ ಸ್ವರೂಪವನ್ನು, ಸೃಜನಶೀಲತೆಯಲ್ಲಿ ಅದರ ಪಾತ್ರವನ್ನು ನಿರ್ದಿಷ್ಟಪಡಿಸಲಾಗಿದೆ. ಲಲಿತಕಲೆಗಳಲ್ಲಿ ಒಂದಾದ ಅಭಿನಯಕಲೆಗೆ ಈ ಮಾತನ್ನೇ ಸಮಗ್ರವಾಗಿ ಅನ್ವಯಿಸಿ ಹೀಗೆ ಹೇಳಬಹುದು. ಹೊಸ ಹೊಸ ಭಾವಗಳನ್ನು ಸತತವಾಗಿ ಕಾಣುವ, ಅಭಿನಯದಲ್ಲಿ ಕಟ್ಟುವ ಪ್ರಜ್ಞೆಯೇ ಪ್ರತಿಭೆ. ಈ ಪ್ರತಿಭೆಯ ಉಸಿರಿನಿಂದ ಜೀವತುಂಬಿ ಅಭಿನಯಿಸಬಲ್ಲ ನಿಪುಣನೇ ಅಭಿನೇತೃ. ಕಲಾವಿದನ ಕರ್ಮವೇ ಅಭಿನಯ ಹೀಗೆ ರಂಗನಟನೊಬ್ಬನ ರಂಗಸೃಷ್ಟಿಯ ರಹಸ್ಯವನ್ನೆಲ್ಲ ಪ್ರತಿಭೆಯೆಂಬ ಪದದಲ್ಲಿ ಹುದುಗಿಸಬಹುದು. ಕಾವ್ಯದ ಸಂದರ್ಭದಲ್ಲಿ ಕಟ್ಟುವ ಎಂದರೆ ನಿರ್ಮಾಣಕಾರ್ಯ ಭಾಷೆಯಲ್ಲಿ ನಡೆದರೆ,

ಅಭಿನಯದ ಸಂದರ್ಭದಲ್ಲಿ ನಿರ್ಮಾಣಕಾರ್ಯ ಶರೀರಜನ್ಯಕ್ರಿಯೆಗಳಿಂದ ನಡೆಯುತ್ತದೆ. ಭಿನ್ನಮಾಧ್ಯಮಗಳಿಂದ ಭಿನ್ನ ಭಿನ್ನ ಲಲಿತಕಲೆಗಳು ರೂಪುಗೊಳ್ಳುತ್ತವೆ. ಆದ್ದರಿಂದ ಕವಿ ಕಲಾವಿದರಿಗೆಲ್ಲ ಪ್ರತಿಭೆಯೇ ಬೀಜ. ಪ್ರತಿಭೆಯ ಪರಿಕಲ್ಪನೆಯ ವಿವಿಧ ನೆಲೆ ಹಾಗೂ ಮುಖಿದ ಅರ್ಥದವಿಷಯದಲ್ಲಿಯೂ ಕಾವ್ಯ ಮಿಮಾಂಸೆಯ ಆಲೋಚನೆ ಕಲಾಮೀಮಾಂಸೆಯ ಸಂದರ್ಭದಲ್ಲಿಯೂ ಪ್ರಸ್ತುತವೇ. 'ಪ್ರತಿಭೆ ಪದದ ಅಕ್ಷರಾರ್ಥಹೊಳಹು. ಸಮಾಹಿತವಾದ ಮನಸ್ಸಿನಲ್ಲಿ ಅನೇಕ ಪ್ರಕಾರವಾಗಿ ಅರ್ಥವೂ ಅದನ್ನು ತಿಳಿಸಲು ಕ್ಲಿಷ್ಟವಲ್ಲದ ಪದಗಳೂ ಯಾವುದರಿಂದ ಹೊಳೆಯುವವೋ ಅದೇ ಶಕ್ತಿ. ಆ ಶಕ್ತಿಯನ್ನೇ ಇತರರು ಪ್ರತಿಭೆಯೆಂದು ಕರೆಯುವರು' ರುದ್ರಟ ಹೇಳುವ ಈ ಮಾತೂ ಎಲ್ಲ ಲಲಿತಕಲೆಗಳಿಗೆ ಮೂಲ ಬೀಜವಾದ ಪ್ರತಿಭೆಗೂ ಸ್ವಲ್ಪವೂ ಬೇರೆಯಾಗದೆ ಹೊಂದಿಕೆಯಾಗುತ್ತದೆ. ಅಭಿನಯಕಲೆಯ ಸಂದರ್ಭದಲ್ಲಿ ಮನಸ್ಸಿನಲ್ಲಿ ಹೊಳೆಯುವ ನೂತನ ಅರ್ಥವನ್ನು ತಿಳಿಸಲು ಒದಗುವ ಮಾಧ್ಯಮ ವಿವಿಧ ಶಾರೀರಿಕ ಕ್ರಿಯೆಗಳು. ಅವನ್ನು ಪರಿಣಾಮಕಾರಿಯಾಗಿಯೂ ಔಚಿತ್ಯ ಪೂರ್ಣವಾಗಿಯೂ ಸೃಷ್ಟಿಸಿಕೊಳ್ಳಲು ಮತ್ತು ಬಳಸಿಕೊಳ್ಳಲು ಅರ್ಥಪೂರ್ಣವಾಗಿ ಅಭಿವ್ಯಕ್ತಿಸಲು ಮೂಲಕಾರಣವಾಗುವ ಶಕ್ತಿಯೇ ಪ್ರತಿಭೆ, ಈ ಅಂತಃಶಕ್ತಿ ನಟವ್ಯಕ್ತಿಗೆ ಆ ಕ್ಷಣದಲ್ಲಿ ಅಗತ್ಯವಾದ ಭಾವನೆಗಳು, ವಿಚಾರಗಳು ಹೊಳೆಯಲು ನೆರವಾಗುತ್ತವೆ. ನಟ ತನ್ನ ಬದುಕಿನಲ್ಲಿಹುಟ್ಟಾ ಅರಿಯದಿರಬಹುದಾದ ಸಂಗತಿಗಳನ್ನುಸಹ ಪರಿಭಾವಿಸಿಕೊಳ್ಳಲು ಈ ಶಕ್ತಿ ನೆರವಾಗುತ್ತದೆ. ಈ ಪ್ರತಿಭಾಶಕ್ತಿಯ ಕಣ್ಣು ಸಕಲ ಚರಾಚರದ ಅಂತರಂಗವನ್ನು ಕಂಡು ಅಭಿನಯದ ಮೂಲಕ ನಿರೂಪಿಸಲು ಅನುವು ಮಾಡಿಕೊಡುತ್ತದೆ. ತಾತ್ಕಾಲಿಕವಾದ ಲೌಕಿಕ ದೃಷ್ಟಿ ಇಲ್ಲದೆಯೂ ಬದುಕಿನ ಸಾಮಾನ್ಯ ಸಂಗತಿಗಳು ಕಲಾವಿದನ ಪ್ರತಿಭೆಯ ಬೆಳಕಿನಲ್ಲಿ ಮಿನುಗಿ ನಿತ್ಯ ನೂತನವೆನಿಸಿಕೊಳ್ಳುತ್ತವೆ. ಅಪೂರ್ವವಾದುದನ್ನು ನಿರ್ಮಿಸುವ ಶಕ್ತಿಯನ್ನು ಈ ಪ್ರತಿಭೆ ಒದಗಿಸುತ್ತದೆ. ಹೀಗೆ ಪ್ರತಿಭೆಯೇ ಕವಿತೆಯ ಬೀಜ, ಕಾವ್ಯದ ಜನನಿಯಾಗುವ ಹಾಗೆ ಸಕಲ ಲಲಿತ ಕಲೆಗಳ ಬೀಜ ಮತ್ತು ಜನನಿಯಾಗುತ್ತದೆ.

ಹಾಗಾದರೆ ಈ ಪ್ರತಿಭೆ ಕಲಾವಿದನ ಅಂತರಂಗದಲ್ಲಿ ಸ್ಥಾಪನೆಗೊಂಡು, ಹರಳು ಗಟ್ಟಿಕೊಳ್ಳುವುದು ಹೇಗೆ ? ಪ್ರಶ್ನೆ ನಿಗೂಢವೇ. ಆದರೂ ದೈವಾನುಗ್ರಹ, ಅನುವಂಶಿ ಕತೆ, ಕಲಿಕೆ ಮುಂತಾದ ಪ್ರಯತ್ನಗಳಲ್ಲಿ ಉತ್ತರಕಂಡುಕೊಳ್ಳುವುದಿದೆ.

ಈ ಹಿನ್ನೆಲೆಯಲ್ಲಿ ಕಲಾಸೃಷ್ಟಿಯ ಶಕ್ತಿಯಲ್ಲಿ ಕಲಿಕೆ ಹಾಗೂ ಅನುವಂಶಿಕತೆಯ ಪಾತ್ರ ವಿಚಾರಣೀಯ. ನಾಟಕಕಾರ, ನಟ, ಸಂಘಟಕ, ನಿರ್ಮಾಪಕ ಹಾಗೂ ವಿಮರ್ಶಕನಾದ ಸಿಡ್ನೆ ಡಬ್ಲ್ಯೂ ಕರೋಲ್ ಅಭಿನಯಕಲೆಯ ಸಂಧರ್ಭದಲ್ಲಿ ಇಂಥದ್ದೊಂದು ಪ್ರಶ್ನೆಯನ್ನು ಎತ್ತಿಕೊಂಡು ಆಲೋಚಿಸುತ್ತಾನೆ. ಅಭಿನಯಶಕ್ತಿಯ

ಉನ್ನತಸ್ತರ ಕೇವಲ ಕಲಿಕೆಯಿಂದ ಬರಲು ಸಾಧ್ಯವಿಲ್ಲ. ಕಲಿಕೆ ಕಲಾಸೃಷ್ಟಿಯ ಪ್ರಾಥಮಿಕ ತಿಳುವಳಿಕೆಯನ್ನಷ್ಟೇ ನೀಡಬಹುದು. ಆದ್ದರಿಂದ ಕಲಾಸೃಷ್ಟಿಯ ಪರಿಣತಿಯಲ್ಲಿ ಅನುವಂಶೀಯವಾದ ರಕ್ತಗುಣದ ಪಾತ್ರ ಮಹತ್ವವಾದುದು ಎಂಬುದು ಸಿಡ್ನೆಯ ನಿಲುವು. ಮೇಲುನೋಟಕ್ಕೆ ಈ ನಿಲುವಿನಲ್ಲಿ ಅಪವಾದಗಳು ಕಾಣಬಹುದು. ಸೃಷ್ಟಿಶೀಲ ಪ್ರತಿಭಾಸಂಪನ್ನನ ವಂಶಸಂಬಂಧಿ ಎಳೆಹಿಡಿದು ಹೊರಟರೆ ಒಂದಲ್ಲ ಒಂದು ಕಡೆ ಒಂದಲ್ಲ ಒಂದು ತರದ ವಾಂಶಿಕ ಹಿನ್ನೆಲೆ ಇದ್ದುದು ಮನದಟ್ಟಾಗುತ್ತದೆ

ಅಭಿನಯ ಕೌಶಲದ ವಿಷಯದಲ್ಲಿ ಆತ ಹೇಳುವ ಮಾತು ಲಲಿತಕಲೆಗಳಿಗೆಲ್ಲ ಅನ್ವಯ "Acting in its higher forms can not be taught. I have said this before and I repeat it. it must be in the blood... The large number of theatrical families is a testimony to the heriditory fact or in the suitability for a stage career." ಪ್ರತಿಭಾವಂತ ಕವಿ ಅಥವಾ ಕಲಾವಿದರಮಕ್ಕಳಾಗಿ ಹುಟ್ಟಿದವರಿಗೆ ಅನೇಕ ಸಂದರ್ಭದಲ್ಲಿ ಪ್ರಾಕೃತಿಕವಾದ ತೊಂದರೆ. ಅಡಚಣೆಗಳಿದ್ದರೂ ಅವನ್ನೆಲ್ಲ ಮೆಟ್ಟಿನಿಂತು ಹೆತ್ತವರ ಹಾದಿ ಹಿಡಿಯಲು ಪ್ರಚೋದಿತರಾಗಿ ಹಾತೊರೆದ ಉದಾಹರಣೆಗಳುಂಟು. ಕವಿ. ಕಲಾವಿದರ ಕುಟುಂಬದಲ್ಲಿ ಹುಟ್ಟಿದವರು ಅಂಥ ಒಂದಿಲ್ಲೊಂದು ಕಲೆಯ ಕಡೆಗೆ ಆಕರ್ಷಿತರಾಗಿ ಕಲಾಜೀವನಕ್ಕೆ ತಮ್ಮನ್ನು ತಾವು ದಾರೆ ಎರೆದುಕೊಂಡ ನಿದರ್ಶನಗಳುಂಟು. ಆ ಹಾದಿಯಿಂದ ತಪ್ಪಿಸಿ ಬೇರೆ ಹಾದಿಯಲ್ಲ ಒಯ್ಯಬೇಕೆಂದು ಪ್ರಯತ್ನಿಸಿದ ಹಾಗೂ ಹತ್ತಿಕ್ಕಲು ಪ್ರಯತ್ನಿಸಿದ ಹಾಗೆ ಪುಟದೇಕಲು ತೊಡಗಿದ ಘಟನೆಗಳಿವೆ. ಹಾಗಾಗಿ ಯಾವುದೇ ಸ್ವಜನಶೀಲ ಪ್ರತಿಭೆ ವಂಶಪಾರಂಪರ್ಯವಾದ ಉಡುಗೊರೆಯಾಗಿದ್ದುರಕ್ತದಲ್ಲಿ ಗುಪ್ತಗಾಮಿನಿ.

# ನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ - ಒಂದು ವಿವೇಚನೆ

- ನಾ.ಸು. ಭರತನ ಹಳ್ಳಿ

'ಮಹಿಳಾ ಸ್ವಾತಂತ್ರ್ಯ', 'ಮಹಿಳಾ ವಿಮೋಚನೆ' - ಇತ್ಯಾದಿ ಪದಗಳೊಂದಿಗೆ ನಮ್ಮೀದೇಶದಲ್ಲಿ ಚಳುವಳಿಯ ಧ್ವನಿ ಕೇಳಿ ಬರುವಂತಾಗಿದೆ. ಪ್ರಕೃತದಲ್ಲಿ ಕೋಟಿ ಕೋಟಿ ಮಹಿಳೆಯರು ಶೋಷಿತರಾಗಿದ್ದಾರೆ. ಪುರುಷನ ದಿಗ್ಬಂಧನದಲ್ಲಿ ನಲುಗುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ ಭಾರತದ ಗಟ್ಟಿಯಾಗಿ ಬೆಳೆದುಕೊಂಡಿದ್ದ ಕುಟುಂಬ ಪದ್ಧತಿ, ವಿವಾಹಪದ್ಧತಿ ದಾಂಪತ್ಯ ಜೀವನ ಇವುಗಳ ಪರಿಕಲ್ಪನೆಯೂ ಕೂಡಾ ಕೆಲವರಿಂದ ಇಂದು ನಿಂದನೆಗೆ, ತಿರಸ್ಕಾರಕ್ಕೆ ಬಲಿಯಾಗಿದೆ. ಅದೊಂದು ಸ್ತ್ರೀ ಸ್ವಾತಂತ್ರ್ಯ ಹರಣದ ಪದ್ಧತಿ; ಪುರುಷರು ಮಹಿಳೆಯ ಶೋಷಣೆಗೆ ನಿರ್ಮಿಸಿದ ವ್ಯವಸ್ಥೆ ಎಂಬ ವಿಕೃತ ಭಾವನೆ ಹೆದೆಯಾಡುತ್ತಲಿದೆ. ಈ ವ್ಯವಸ್ಥೆಯನ್ನೇ ತ್ಯಾಜ್ಯ ಮಾಡಬೇಕು; ಕೆಲವು ಪಾಶ್ಚಿಮಾತ್ಯ ದೇಶಗಳಲ್ಲಿಯಂತೆ ಮಹಿಳೆಯರು ಮುಕ್ತ-ಸ್ವತಂತ್ರ ಜೀವನವನ್ನು ಪಡೆಯಬೇಕು- ಎಂಬ ಸೊಲ್ಲಿಗೂ ಧ್ವನಿಗೂಡಿಸುವವರಿದ್ದಾರೆ. ಯಾಕೆ ಹೀಗೆ ? ಇದರ ಪ್ರಸ್ತುತಾಪ್ರಸ್ತುತತೆ ಎಷ್ಟು ?

ನಾವು ಈ ದಿಸೆಯತ್ತ ಮರಳಿನೋಡಿದರೆ ಈ ದೇಶದಲ್ಲಿ ಬೆಳೆದು ಬಂದಂಥ 'ಸ್ತ್ರೀ - ಪುರುಷ' ಸಂಬಂಧ- ಸಂಪ್ರದಾಯಗಳು ಆ ಬದುಕಿನ ಪರಂಪರೆಗಳು ಬಹು ಪ್ರಾಚೀನ ನೆಲೆಯುಳ್ಳದ್ದು, ಸಾತ್ವಿಕ-ಸಾಂಸ್ಕೃತಿಕ ಮೌಲ್ಯವುಳ್ಳದ್ದು. ಆದರ್ಶತೆಯ ಮನೋಭಾವ ಹೊಂದಿರುವಂಥದು, ಎಂಬೀ ಮಾತುಗಳಾಗಲೀ, ಇಲ್ಲಿರುವ ಕೌಟುಂಬಿಕ - ದಾಂಪತ್ಯ ಪದ್ಧತಿಗಳಾಗಲೀ ಬರೀ ಜೊಳ್ಳೆ ? ಅಪಥ್ಯದವೇ ? ಪುರುಷನು ತನ್ನ ಸ್ವಾಮಿತ್ವ-ಸ್ವಾಯತ್ತತೆಯನ್ನು ಸ್ಥಾಪಿಸಿಕೊಳ್ಳಲು ಹಾಕಿರುವಂಥ ಒಂದು ಸಂಚೇ ? ಆ ಪರಿಕಲ್ಪನೆ ಅಪ್ರಾಮಾಣಿಕ ನೆಲೆಯದೇ ? ಅಥವಾ ಪ್ರಕೃತದ ಅಪಧ್ವನಿ ಅಪ್ರಸ್ತುತ ವಾದುದೇ ? ವಿವೇಕದ ಸಂಗತಿ ಯಾವುದು ? ಎಂಬಿತ್ಯಾದಿ ಪ್ರಶ್ನೆಗಳತ್ತ ನಾವು ಸ್ತ್ರೀ ಪುರುಷರು ಒಟ್ಟೊಟ್ಟಿಗೇ ಅನುದ್ವೇಗದಿಂದ, ವಿವೇಚನೆಯೊಂದಿಗೆ ಯೋಚಿಸಬೇಕಾದ ಅಗತ್ಯ ಇಂದು ನಮ್ಮೆದುರು ಒದಗಿಕೊಂಡಿದೆ ಅಂತನಿಸುತ್ತದೆ.

ಹಾಗೆ ಯೋಚಿಸುವಾಗ ನಮ್ಮ ಕಣ್ಣೆದುರು ಕಟ್ಟುವ ಸಂಗತಿಗಳು ಹಲವು ಸ್ವರೂಪದವು. ಅವುಗಳಲ್ಲಿ -

ಒಂದು : ಪ್ರಕೃತದ ನೆಲೆಯ ಚಿತ್ರ; ಇನ್ನೊಂದು ನಮ್ಮ ಸನಾತನರ ತಾತ್ವಿಕ ನೆಲೆಯಲ್ಲಿಯ ಸ್ವರೂಪ.

ಪ್ರಸ್ತುತದ ಸನ್ನಿವೇಶದಲ್ಲಿ - 'ಹೆಣ್ಣು ಪುರುಷನ ಅಧೀನಗೊಂಡು, ಆತನ ಅಂಕಿತದಲ್ಲಿ ಬಂಧಿಯಾಗಿ ಬದುಕುತ್ತಿದ್ದಾಳೆ' ಎಂಬೀ ಮಾತು ಸಾಮಾನ್ಯಗೊಂಡುದುದು. ಅದರಲ್ಲಿಯೂ ಕೂಡ ವರ್ಗ ತಾರತಮ್ಯದ ಸ್ಥಿತಿ. ಶ್ರೀಮಂತ ಕುಟುಂಬ, ಬಡತನದ ಕುಟುಂಬ, ಮಧ್ಯಮ ವರ್ಗ ಕುಟುಂಬ - ಮತ್ತೆ ಅವುಗಳಲ್ಲೂ ಸುಶಿಕ್ಷಿತರು-ಅಶಿಕ್ಷಿತರುಗಳ ಪರಿಭೇದ, ಆರ್ಥಿಕ-ತಾರತಮ್ಯಕ್ಕನುಸರಿಸಿದ ಸ್ಥಿತಿ, ನಿಮ್ನವರ್ಗ, ಬಡತನದಲ್ಲಿ ಬಳಲುತ್ತಿರುವ ಕುಟುಂಬ ಹೀಗೆ ಹತ್ತು ಹಲವು ಬಗೆಯಲ್ಲಿ ಹೆಣ್ಣು-ಗಂಡಿನ ಮಧ್ಯೆಯ ಜೀವನ ಪರಿ ಬದುಕಿನ ಜೋಡಣೆ ವಿಂಗಡಣೆ, ವಿಕೃತಿ-ಪ್ರಕೃತಿ, ಸುಬುದ್ಧಿ-ದುರ್ಬುದ್ಧಿ ಇತ್ಯಾದಿಯಾಗಿ ಬಿಡಿ ಘಟಕಗಳನ್ನು ಅಥವಾ ಮಿಶ್ರಪಾಕವನ್ನು ನಾವು ಕಂಡುಕೊಳ್ಳುತ್ತೇವೆ. ಇವುಗಳ ಮೇಲೆಲ್ಲಾ ಒಂದೆಡೆ ವೈಚಾರಿಕ ಸ್ತರದ ಪ್ರಭಾವ ಪ್ರತಿಕ್ರಿಯೆಗಳೂ, ಇನ್ನೊಂದೆಡೆ ರೂಢಿಗತ ಸಾಂಪ್ರದಾಯಿಕ ನೆಲೆಯ ಪ್ರತಿರೂಪಗಳೂ ಪರಿಣಾಮ ಬೀರುತ್ತ ಆದರೆ ಯಾವ ಸ್ಪಷ್ಟತೆಯೂ ಮೂಡದೇ ಮುಂದುವರಿಯುತ್ತಿರುವುದು ಸ್ವಭಾವ ಚಿತ್ರವಾಗಿದೆ.

ಹೀಗೆಲ್ಲಾ ಪರಿಬೇದ ಒಳಗಡೆಗೆ ಸೂಕ್ಷ್ಮವ್ಯಾಪಿಯಾಗಿದ್ದರೂ, ಒಟ್ಟಾರೆ ಅರ್ಥದಲ್ಲಿ ಭಾರತದ ಸಮಾಜ ಅಷ್ಟೇಕೆ ಇಡೀ ಪೌರಾತ್ಯ ದೇಶದ ಸಮಾಜ ಹೆಣ್ಣನ್ನೂ - ಹೆಣ್ಣಿನ ಸ್ಥಿತಿಯನ್ನೂ ಶೋಷಿತ ವರ್ಗದಲ್ಲಿ ಅಥವಾ ಪುರುಷ ಪ್ರಾಬಲ್ಯದ ಅಡಿಯಾಳಾಗಿ ಬೆಳೆಸಿಕೊಂಡಿದೆ ಎಂಬುದು ಸರ್ವ ಸಾಮಾನ್ಯ ವ್ಯಾಖ್ಯಾನ.

ಆದರೆ ಹೀಗೆ ವ್ಯಾಖ್ಯಾನಿಸುವಾಗಲೂ ಈ ಬಗೆಯ ಸ್ಥಿತಿಯು ಬೆಳೆದು ಬರಲು ಕಾರಣವನ್ನು ಹುಡುಕುವಾಗ ಅಲ್ಲಿಯ ಸಾಮಾಜಿಕ ಸ್ಥಿತಿ -ಸ್ಥಿತ್ಯಂತರದ ನೆಲೆಯಲ್ಲಿ, ಮನೋ ವೈಜ್ಞಾನಿಕ ತಳಹದಿಯಲ್ಲಿ ಶೋಧಿಸುವ ಪ್ರಯತ್ನಕ್ಕಿಂತಲೂ ಮಿಗಿಲಾಗಿ ನಮ್ಮದೇ ಪ್ರಾಚೀನ ಪರಂಪರೆಯು ರೂಪಿಸಿದ್ದರೆ ದೋಷವಿದೆಂದೂ, ಅವರದೇ ಬಳುವಳಿಯೆಂದೂ ರೇಗಾಡುವುದೇ ಹೆಚ್ಚು ವಿಧಿತಗೊಳ್ಳುತ್ತದೆ ? ಮತ್ತು ಆ ಕಾರಣಕ್ಕೆ ಮನುಸ್ಮೃತಿಯಲ್ಲಿ ಉಲ್ಲೇಖಿತವಾದ 'ನಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂಬ ಒಂದು ಉಕ್ತಿಯನ್ನೇ ಮಹಾನ್‌ಗೊಳಿಸಿ ಎತ್ತಿಕೊಂಡು ಪುನರಪಿ ದೂಷಿಸಲಾಗುತ್ತಿದೆ. ಆ ಮನುಸ್ಮೃತಿಯಲ್ಲಿಯ 'ನಸ್ತ್ರೀ ಸ್ವಾತಂತ್ರ್ಯ ಮರ್ಹತಿ? ಎಂಬ ಸೊಲ್ಲು ಯಾವ ಹಿನ್ನೆಲೆಯದು ? ಅದು ಬಿಂಬಿಸುವುದೇನನ್ನು ? ಆ ಉಕ್ತಿಯು ಬಿಂಬಿಸಿದ್ದರ ಪ್ರತಿಫಲವೇ ಇಂದೂ ಸ್ತ್ರೀಯರನ್ನು ದಾಸ್ಯಕ್ಕೊಳಪಡಿಸಿಡಲೋ, ನಿಕೃಷ್ಟಗೊಳಿಸಲಿಕ್ಕೋ ನಿಜವಾದ ಕಾರಣವೇ ? ಆ ಮನುವು ಪ್ರತಿಗಾಮಿಯೇ ? ಸ್ತ್ರೀ ಸ್ವಾತಂತ್ರ್ಯದ ಅಥವಾ ಸ್ತ್ರೀ ಗಣ್ಯತೆಯ ವಿರೋಧಿಯಾಗಿದ್ದನೇ ? ಈ ಪ್ರಶ್ನೆಗಳನ್ನು ಪ್ರಾಮಾಣಿಕವಾದ,

ಪ್ರಾಂಜಲವಾದ ಮನಸ್ಸಿನಿಂದ ವಿವೇಚಿಸಿ ನೋಡಿದಾಗ ನಮಗೆ ದೊರಕುವ ಅರ್ಥ ವ್ಯಾಪ್ತಿಯೇನು, ಎಂಬುದನ್ನಿಷ್ಟು ಮೊದಲು ಚರ್ಚಿಸೋಣ.

ನಾನೇನು ಮನುವಾದಿಯೂ ಅಲ್ಲ; ಮನು ವಿರೋಧಿಯೂ ಅಲ್ಲ. ಅಂಥ ಯಾವ ಬದ್ಧತೆಗೂ ನನಗೆ ಕಾರಣಗಳಿಲ್ಲ. ಒಂದು ಬೌದ್ಧಿಕ- ಚರ್ಚೆಯಲ್ಲಿ ಆ ಬಗೆಯ ಪೂರ್ವಾಗ್ರಹ ನನಗಿಲ್ಲ. ಒಂದು ಕಾವ್ಯವನ್ನು ಅದರದರ ಆಶಯ, ದೃಷ್ಟಿ ಸೃಷ್ಟಿಯ ನೆಲೆಯಲ್ಲೇ ನಿಂತು ಆ, ಆ ಸಂದರ್ಭ ಸನ್ನಿವೇಶಗಳೊಂದಿಗೇ ತಪ್ಪು-ತಪ್ಪು ಒಪ್ಪನ್ನು ಕಂಡುಕೊಳ್ಳಬೇಕೆಂಬ ವಿಮರ್ಶಾ ಧರ್ಮದ ಹೆರೆಯಲ್ಲಿಯೇ ಯಾವುದೇ ಮಂತ್ರ ಸ್ಮೃತಿ, ಶ್ರುತಿ ವಾಕ್ಯಗಳನ್ನೂ ಅರ್ಥೈಸುವುದು ವಿಹಿತ ಪಕ್ಷವೆಂಬುದು ಅಥವಾ ಏಕೆ ಅರ್ಥೈಸಬಾರದು ಎಂಬುದು ನನ್ನ ಭಾವನೆ.

ಸ್ಮೃತಿಗಳು ಸಾಮಾನ್ಯವಾಗಿ ಜನರ ಸಾಮಾಜಿಕ ಬದುಕಿಗೆ ಹೊಂದಿಕೊಳ್ಳುವಂಥ ವ್ಯವಸ್ಥೆಯನ್ನು ಗಮನದಲ್ಲಿರಿಸಿಕೊಂಡು ರೂಪಿಸಿದ್ದ ಒಂದು ಕಟ್ಟಳೆ. ಆದರೆ ಆ ಕಟ್ಟಳೆಗಳು 'ಧರ್ಮ' - 'ನೀತಿ' ಪ್ರಜ್ಞೆಯನ್ನೂ ಅದರ ಉದ್ದೇಶವನ್ನೂ ಸೂಕ್ಷ್ಮವಾಗಿ ಅನುಲಕ್ಷಿಸಿಕೊಂಡು ನಮ್ಮ ಪ್ರಾಚೀನ 'ಋಷಿ' ಗಳೆಂಬ ಮಹಾಜ್ಞಾನಿಗಳು ಸತತ ಚಿಂತಿಸಿ ನೀಡಿರುವ ನೀತಿ ಸಂಹಿತೆಗಳಾಗಿವೆ. ನಮ್ಮ ಮಧ್ಯೆ ಹೆಚ್ಚು ಪ್ರಚಲಿತವಿರುವುದು ಮನುಸ್ಮೃತಿ. ಈ ಸ್ಮೃತಿಯನ್ನು ಕೊಟ್ಟ 'ಮನು' ಕೂಡಾ 'ಮಹಾಜ್ಞಾನಿ' - ಎಂಬರ್ಥದಲ್ಲಿ ಋಷಿಯೆಂದೇ ಪರಿಗಣಿಸಲ್ಪಟ್ಟಿದ್ದಾನೆ. ಆದರೂ ಆತನೊಬ್ಬ 'ದಂಡಾಧಿಪ ರಾಜ' ಎಂಬ ವ್ಯಾಖ್ಯಾನವೂ ಪ್ರಚಲಿತ. ಆ ಚರ್ಚೆಯಲ್ಲಿಗೌಣ. ಆತನು ನೀಡಿರುವ 'ಮನುಸ್ಮೃತಿ' ಕೂಡಾ ಅಂದಿನ - ಮುಂದಿನ ಸಮಾಜದ ಬದುಕಿನ ಒಳಿತು ಕ್ಷೇಮದ ವಾಂಛೆಯುಳ್ಳದ್ದಾಗಿ ಸಮಗ್ರವಾಗಿ ರೂಪಿಸಿದ್ದ 'ಧರ್ಮ ಕಟ್ಟಳೆ' (A Rule Spiritual) ಎಂದು ನಂಬಿ ಆ ಭಾವನಾತ್ಮಕತೆಯಿಂದಲೇ ಇಂದಿಗೂ ಆ ಸ್ಮೃತಿಯನ್ನು ಒಂದು 'ಧರ್ಮ ಪ್ರಮಾಣವೆಂದು' ಭಾವಿಸಿ ಅನುಸರಿಸಿಕೊಂಡು ಬರುತ್ತಿದ್ದವರಿದ್ದಾರೆ (ಇಲ್ಲಿ 'ಧರ್ಮ' ಎಂಬ ಪದಕ್ಕೆ ಮತ, ಪಂಥಗಳ ಸ್ವರೂಪದಲ್ಲಿರುವ ರೂಢಾರ್ಥ ಅನ್ವಯವಲ್ಲ. ಇಂಗ್ಲಿಷಿನ Religion ಪದ ಇದಕ್ಕೆ ಹೊಂದುವುದಿಲ್ಲ. ನಮ್ಮ 'ಧರ್ಮ' ಪದದ ಅರ್ಥ ವ್ಯಾಪ್ತಿಗೆ spiritual ಪದವು ಸೂಕ್ತ ಎಂಬುದು ನನ್ನ ಮತ. ಪ್ರಾಜ್ಞರ ವ್ಯಾಖ್ಯಾನಕ್ಕೆ ಬಿಡೋಣ) ಮನುಸ್ಮೃತಿ ಜಡ್ಡುಗಟ್ಟಿದ ಸಂಸ್ಕೃತಿಯ ಪ್ರತಿಬಿಂಬ ಎನ್ನುವವರೂ ಇದ್ದಾರೆ.

ಈ ಮನುಸ್ಮೃತಿಯನ್ನು ನಾವು ಇಡಿಯಾಗಿ ಅವಲೋಕಿಸಿದರೆ ಪ್ರಕೃತಕ್ಕೆ ಅಪ್ರಸ್ತುತವಾಗುವ ಹಲವಷ್ಟು ಅಂಶಗಳೂ ವೇದ್ಯವಾಗಬಹುದು. ಅಂಥದಕ್ಕೆ ಸಮಕಾಲೀನತೆ ಅನ್ವಯವಾಗುವುದು ಕಷ್ಟ. ಹಾಗೆ ನೋಡಿದರೆ - ನಾವು ಕೇಳುವ, ಪಡೆದುಕೊಳ್ಳುವ ಜಗತ್ತಿನ ಯಾವ ಉಕ್ತಿಗಳಲ್ಲೂ ಎಲ್ಲವೂ ಸರ್ವಕಾಲಿಕವಾಗಿ

ಅನ್ವಯವಾಗುವಂಥ ಅರ್ಥವ್ಯಾಪ್ತಿಯನ್ನು ತುಂಬಿಕೊಂಡಿರಲಾರವು. ಅವುಗಳಲ್ಲಿ ಸಾಂದರ್ಭಿಕ ಸತ್ಯ ಮತ್ತು ಸರ್ವಕಾಲಿಕ - ಶಾಶ್ವತ ಸತ್ಯ - ಸತ್ವ (ಸಂಚಾರೀ ಭಾವ, ಸ್ಥಾಯಿ ಭಾವ) ಎಂಬ ಭೇದ ಅಡಕವಾಗಿರುವುದು ಸಹಜ.

ಅದೇ ರೀತಿ - ಮನುಸ್ಮೃತಿಯಲ್ಲಿಯೂ ಕೂಡಾ ಆ ಕಾಲದಲ್ಲಿಯ ಆಡಳಿತ, ಜನಜೀವನಕ್ಕೆ ಅಗತ್ಯವೆನಿಸಿದ 'ಧರ್ಮ' ವನ್ನು ಲಕ್ಷಿಸಿಯೇ ವಿಧಿಸಿದ್ದ ಹಲವು ಶಾಸನವಿಧಿಗಳೂ ಇವೆ. ಅವುಗಳಲ್ಲಿ ಹಲವಷ್ಟು ತತ್ಕಾಲೀನ ಸಾಂದರ್ಭಿಕ ಮೌಲ್ಯವನ್ನು ಹೊಂದಿದಂಥವೆಂದೆನಿಸಬಹುದು. ಆದರೆ ಅದೇ ಸ್ಮೃತಿಯಲ್ಲಿ ಸಾರ್ವಕಾಲಿಕ ಮೌಲ್ಯವನ್ನು ಗುರುತಿಸಬಹುದಾದಂಥ ನುಡಿಗಳೂ ಎಂದೆಂದಿಗೂ ಮನುಕುಲ ಧರ್ಮವಾಗಿ ನಿಲ್ಲುವಂಥವೂ ಸತ್ಯ ಪ್ರಮಾಣವನ್ನು ಸಾರುವಂಥವೂ ಕೂಡ ತುಂಬಿಕೊಂಡಿವೆ ಎಂಬುದನ್ನು ತೆರೆದ ಕಣ್ಣಿನಿಂದ ನೋಡಿ ಕಂಡುಕೊಳ್ಳುವುದಗತ್ಯ. ಸಾರಾಸಗಟಾಗಿ ಮನುಸ್ಮೃತಿಯನ್ನೇ ಆಚೆಗೆ ತಳ್ಳಿಬಿಡಲಿಕ್ಕಾಗದು.

ಇಂದು ಆ ಮನುಸ್ಮೃತಿಯನ್ನೂ ಮತ್ತು ಮನುವನ್ನೂ ನಿಂದಿಸುವುದರಲ್ಲಿ ಮುಖ್ಯವಾಗಿ ಎತ್ತಿಕೊಳ್ಳುವ ಕಾರಣ - 'ಅದು ವರ್ಣಭೇದ ವ್ಯವಸ್ಥೆಯನ್ನು ಹುಟ್ಟುಹಾಕಿ 'ಜಾತಿಪದ್ಧತಿ'ಯ ಸೃಷ್ಟಿಕರ್ತೃವಾಗಿದೆ. 'ಶ್ರೇಣೀಕೃತ ಸಮಾಜ' ನಿರ್ಮಾಣಕ್ಕೆ ಕಾರಣೀಭೂತವಾಗಿದೆ. - ಎಂಬುದು ಒಂದಾದರೆ; ಭಾರತದ ಸ್ತ್ರೀ ಕುಲವನ್ನು ನಿಕೃಷ್ಟವಾಗಿಸಿ, ಪದತಲಗೊಳಿಸಿ, ಬಂಧನದಲ್ಲಿರಿಸಲು ಮೂಲ ಪ್ರವರ್ತಕ' - ಎಂಬುದು ಇನ್ನೊಂದು.

ಆದರೆ ಮನುಸ್ಮೃತಿಯ ನೈತ್ತಿಕೊಂಡು ಅವಲೋಕಿಸಿ ಈ ಸಂಗತಿಯತ್ತ ಮನುವು ಹೇಳಿರುವ ಸ್ಮೃತಿ ವಾಕ್ಯಗಳೇನು ? ಎಂದು ಮೂಲದಲ್ಲಿ ಹುಡುಕಹೊರಟರೆ ನಮ್ಮೆದುರು ನಿರ್ದುಷ್ಟವಾಗಿ ತೆರೆದುಕೊಳ್ಳುವ ಸತ್ಯವೇ ಬೇರೆ ಅಂತ ನನಗನಿಸುತ್ತದೆ. ಅದಕ್ಕೊಂದು ಉದಾಹರಣೆಯೆಂದರೆ - ಮನುವು ಹೇಳಿರುವ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವಿಧದ ವರ್ಣಭೇದದ ಸಂಗತಿ. ಮನು ಅವಶ್ಯವಾಗಿ ವರ್ಣಭೇದ ಪದ್ಧತಿಯನ್ನು ಪ್ರತಿಪಾದಿಸಿದಾತ ನಿಜ. ಆದರೆ ಸಾಮಾನ್ಯವಾಗಿ ಭಾವಿಸಿಕೊಂಡಿರುವ ಬಗೆಯ ಪರಿಕಲ್ಪನೆಯದಲ್ಲ. ಅದು ವ್ಯಕ್ತಿಯ ಹುಟ್ಟಿಗೋ, ಹುಟ್ಟಿರುವ ಕುಲವನ್ನೋ ಅನ್ವಯಿಸಿಕೊಂಡು ನಿರ್ಮಾಗೊಳ್ಳಬೇಕಾದಂಥ ವರ್ಣ ವ್ಯವಸ್ಥೆಯಲ್ಲ. ಭಗವದ್ಗೀತೆಯಲ್ಲಿ ಹೇಳಿದ 'ಚತುರ್ವರ್ಣಂ ಮಯಾಸೃಷ್ಟ್ಯಾ ಗುಣಕರ್ಮ ವಿಭಾಗಶಃ ' - ಎಂಬ ಮಾತಿನಂತೆ - ( ಇಲ್ಲಿ 'ಮಯಾಸೃಷ್ಟ್ಯಾ' ಎಂದರೆ ಅದು ತಾನೇ ತಾನಾಗಿ ನಿರ್ಮಿತವಲ್ಲ. ಉದ್ದಿಶ್ಯದಿಂದ ರಚಿಸಿಕೊಂಡಿರುವಂಥದು - ಎಂಬುದು ಇಂಗಿತಾರ್ಥ. ಹಲವರು ಭಾವಿಸಿಕೊಳ್ಳುವಂತೆ ಭಗವಂತನೇ ಸೃಷ್ಟಿಸಿದ ನೈಸರ್ಗಿಕ-ಉತ್ಪತ್ತಿ ಎಂಬ ಸಹಜಾರ್ಥವಲ್ಲ) ಮನುಷ್ಯನ ಶೀಲ ಮತ್ತು ಕರ್ಮಕ್ರಿಯೆಗಳಿಗನುಗುಣವಾಗಿ

ಸಮಾಜವಲ್ಲಿ ವಿಂಗಡಿಸಿಕೊಳ್ಳಬೇಕಾದ ಸಂಸ್ಕಾರಸಂಬಂಧದ ಒಂದು ತರಹೇವಾರೀ ಕ್ರಮವಿದು. ಹೀಗ ವಿಂಗಡಿಸಲ್ಪಡುವ 'ವರ್ಣ'ಕ್ಕೆ ಸೇರುವ ವ್ಯಕ್ತಿಯ ಆಚರಣೆ ನೀತಿ-ನಿಯಮಗಳು ಹೇಗಿರಬೇಕಾಗುತ್ತದೆ ಎಂಬುದನ್ನೂ ಮನು ಸ್ಪಷ್ಟವಾಗಿ ವಿಧಿಸಿದ್ದಾನೆ. ಅಂದರೆ ಆ ರೀತಿಯಲ್ಲಿ ಆಚರಣೆಯನ್ನು ಹೊಂದಿದವ ಮಾತ್ರ ಆ, ಆ ವರ್ಣದ ವರ್ಗದವನಾಗುವ ಅರ್ಹತೆ ಹೊಂದುತ್ತಾನೆಂಬುದು ಸ್ಪಷ್ಟವಾಗಿದೆ. ಆ 'ವರ್ಣ'ವು ವ್ಯಕ್ತಿ ವ್ಯಕ್ತಿಯ ಅಂತರ್ಗತ ಚರ್ಯೆ. ಸ್ಥಳಾಂತರಗೊಳ್ಳುವಂಥ ಚಲನಗೊಳ್ಳುವಂಥ ವರಿ ಇವನ್ನು ಮನುಸ್ಮೃತಿಯ ೧೦ನೇ ಅಧ್ಯಾಯ ೬೫ನೇ ಶ್ಲೋಕದಲ್ಲಿ

'ಶೂದ್ರೋ ಬ್ರಾಹ್ಮಣತಾಮೇತಿ। ಬ್ರಾಹ್ಮಣ ಶ್ಚೈತಿ ಶೂದ್ರ ತಾಂ.।' ಎಂದು ಸ್ಪಷ್ಟಪಡಿಸಲಾಗಿದೆ. 'ಬ್ರಾಹ್ಮಣವರ್ಣಕ್ಕೆ ವಿಧಿಸಿದ ನಿಯಮ ಸಂಸ್ಕಾರವನ್ನು ಹೊಂದಿದರೆ ಅವರೆಗೆ ಶೂದ್ರನಾಗಿದ್ದವನೂ ಬ್ರಾಹ್ಮಣನಾಗುತ್ತಾನೆ. ಬ್ರಾಹ್ಮಣ ವಿಧಿಯನ್ನು ತೊರೆದ ಬ್ರಾಹ್ಮಣನೂ ಶೂದ್ರನಾಗುತ್ತಾನೆ.' ಎಂಬ ಈ ಮಾತನ್ನು ಗಮನಿಸಿದಾಗ ಪ್ರಕೃತದಲ್ಲಿ ನಾವು ಕಾಣುವ ಉಚ್ಚ ನೀಚ ಭಾವನೆಯು ಜಾತಿ ಮೂಲಕದ 'ವರ್ಣ' ಪದ್ಧತಿಯು ಮನುಸ್ಮೃತಿ ಪ್ರಣೀತವಾದುದಲ್ಲ. ಅದಕ್ಕಾಗಿ ಮನುಸ್ಮೃತಿಯನ್ನು ನಿಂದಿಸುವುದರಲ್ಲಿ ಅರ್ಥವಿಲ್ಲ ವೆಂದನಿಸದಿರಲಾರದು. (ಶ್ರೀಮದ್ ಭಗವದ್ಗೀತೆಯಲ್ಲಿಯೂ ಕೂಡಾ ಈ ಕುರಿತು 'ಜನ್ಮನಾ ಜಾಯತೇ ಶೂದ್ರ ಸಂಸ್ಕಾರಾತ್ ದ್ವಿಜಉಚ್ಚತೆ ' ಎಂದು ಹೇಳಿದ್ದನ್ನೂ ಗಮನಿಸಬಹುದು.) ಒಂದು ದೃಷ್ಟಿಯಿಂದ ಮನು ಪ್ರಣೀತ 'ವರ್ಣ' ಕಲ್ಪನೆಯು ವೃತ್ತಿ-ಪ್ರವೃತ್ತಿಗಳಿಗ ಸಂಬಂಧಿಸಿ ವಿಂಗಡಿಸಲ್ಪಟ್ಟ ಸಾಮಾಜಿಕ ಆಡಳಿತಾತ್ಮಕ ವ್ಯವಸ್ಥೆ. ನಮ್ಮ ಕಾರ್ಖಾನೆಗಳಲ್ಲಿಯೋ, ವ್ಯಾಪಾರೋದ್ಯಮದಲ್ಲಿಯೋ, ಕಚೇರಿಗಳಲ್ಲಿಯೋ ಕಾಣಬಹುವ ಅಂತಸ್ತು - ವಿಭಾಗಗಳ ವ್ಯವಸ್ಥೆಯು ಇರುವಂತೆಯೇ ಇದೂ ಒಂದು. It is only a Social 'Order' and Layer'. ಇದು ಸಹಜ ಪ್ರಕೃತಿ. ಆದರೆ ಆ ಮೂಲ ಕಲ್ಪನೆಯನ್ನೂ ಸಾಮಾಜಿಕ ಉದ್ದಿಶ್ಯವನ್ನೂ ಅಪಭ್ರಂಶಗೊಳಿಸಿ 'ವಿಕೃತಿ'ಗೊಳಿಸಿಕೊಂಡವರು ಅನಂತರದ ಪ್ರತಿಷ್ಠಾಕಾಂಕ್ಷಿಗಳು. ಪಟ್ಟಭದ್ರರು. ಈ ಲೇಖನದ ಮಧ್ಯೆ ನಾನೀ ಮಾತನ್ನು ಅಡ್ಡ ಬಳಸಿದ್ದು - ಮನುವಿನ ಎಲ್ಲಾ ಮಾತುಗಳನ್ನೂ ವಿಕೃತವಾಗಿ ಅರ್ಥೈಸುವುದು ಯುಕ್ತವಾಗಲಿಕ್ಕಿಲ್ಲವೆಂಬುದಕ್ಕೆ ಒಂದು ಉದಾಹರಣೆಯಾಗಿ ಮಾತ್ರ.

'ನಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂಬ ಮಾತನ್ನು ಬೆನ್ನು ಹತ್ತಿ ಖಂಡಿಸುವುದರಲ್ಲಿಯೂ ಅದರ ನಿಜವಾದ ಅರ್ಥವ್ಯಾಪ್ತಿಯನ್ನು ಮರೆಮಾಚಲಾಗಿದೆ ಎಂದೇ ನನ್ನ ಕಲ್ಪನೆ. ಇದು ಅಂಥವರ ಅವಜ್ಞೆಯೋ, ಅಥವಾ ಪೂರ್ವಾಗ್ರಹವೋ ಗೊತ್ತಿಲ್ಲ. ಮನುಸ್ಮೃತಿಯಲ್ಲಿ 'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂಬುದೊಂದು ಸ್ವತಂತ್ರ ಉಕ್ತಿಯೂ ಅಲ್ಲ; ವಾಕ್ಯವೂ ಅಲ್ಲ. ಈ ನುಡಿಯ ಸುತ್ತ ಮುತ್ತ ಪರಿವೇಷಣಗಳಿವೆ. ಮನುಕುಲದ ಎಲ್ಲಾ ಸ್ತ್ರೀಯರ ಬಗೆಗೆ ಅನ್ಯರು ತಾಳಿರಬೇಕಾದ

ಗೌರವಾದರಗುಣ, ಹೊತ್ತಿರಬೇಕಾದ ಹೊಣೆಗಾರಿಕೆ, ಸ್ತ್ರೀಯರ ಪಾವಿತ್ರತೆ, ಪೂಜ್ಯತೆ, ಶ್ರೇಷ್ಠತ್ವ ಇತ್ಯಾದಿಗಳನ್ನೆಲ್ಲಾ ಸಾರುತ್ತ, ಅದನ್ನು ಧರ್ಮವೆಂದೇ ಬಿಂಬಿಸುತ್ತ ಹೇಳಿದಂಥ ಹಲವು ಮಾತುಗಳ ನಡುವೆ ಒಂದು ಶ್ಲೋಕದಲ್ಲಿ 'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂಬ ನುಡಿಬರುತ್ತದೆ. ಆದರೆ ಮನುವು ಸ್ತ್ರೀಯರ ಕುರಿತು ಹೇಳಿರುವ ಇನ್ನುಳಿದ ಮಾತುಗಳನ್ನೆಲ್ಲಾ ಆಚೆಗಿಟ್ಟು ಅಥವಾ ಅನ್ವಯಗೊಳ್ಳುವ ಅರ್ಥವ್ಯಾಪ್ತಿಯನ್ನೂ, ಅನುಬಂಧದ ನುಡಿಗಳನ್ನೂ ಕೈಬಿಟ್ಟು ಕೇವಲ 'ನ ಸ್ತ್ರೀ ಸ್ವಾತಂತ್ರ್ಯಂ ಅರ್ಹತಿ' ಎಂಬ ನುಡಿಯೊಂದನ್ನೇ ಎತ್ತಿಕೊಂಡು ವಿಶ್ಲೇಷಿಸಿದರೆ ಪ್ರಾಮಾಣಿಕ ಅರ್ಥ ಲಭಿಸಲಿಕ್ಕಿಲ್ಲ. ಅಂಬಿಕಾತನಯದತ್ತರ 'ಇನ್ನೂಯಾಕೆ ಬರಲಿಲ್ಲವ್ವ ಹುಬ್ಬಳ್ಳಿಯಂವಾ ' ಎಂಬ ಕವನದ ಒಂದು ಸಾಲನ್ನು ಹಿಡಿದೋ, 'ಟೊಂಕದಮೇಲೆ ಕೈ ಇಟ್ಟಗೊಂಡ, ಬಿಂಕದವಳಾರೀಕಿ' ಎಂಬ ಪದ್ಯದ ಸಾಲನ್ನಷ್ಟೇ ಇಟ್ಟುಕೊಂಡೋ ಅರ್ಥೈಸುವುದಾಗಲೀ, ಶಾಲಾಮಕ್ಕಳು ಆ ಪದ್ಯವನ್ನು ಮನರಂಜನೆಯ ನಟನೆಗಾಗಿ ಬಳಸುವ ಪರಿಯಾಗಲೀ ಬೇಂದ್ರೆ ಕಾವ್ಯದ ವಿಶ್ಲೇಷಣಾ ಕಾರ್ಯಕ್ಕೆ ಅಭಾಸವೆನಿಸುವಂತೆಯೇ ಇದು ಕೂಡಾ ಅಭಾಸವಾಗಿಕೊಳ್ಳುತ್ತದೆ.

ಮನುಸ್ಮೃತಿಯ ೯-೩ರಲ್ಲಿ ಹೇಳಿರುವ 'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂಬ ನುಡಿಯನ್ನೊಳಗೊಂಡ ಶ್ಲೋಕದ ಪೂರ್ತಿ ಪಾಠವನ್ನವಲೋಕಿಸಿದರೆ ಆಗ ಅದರ ಗರ್ಭಾರ್ಥವೇ ಬೇರೆಯಾಗಿ ಹೊಳೆಯುತ್ತದೆ. ಅದು ಹೀಗಿದೆ :

'ಪಿತಾರಕ್ಷತಿ ಕೌಮಾರೇ, ಭರ್ತಾರಕ್ಷತಿ ಯೌವನೇ ।

ರಕ್ಷಂತಿ ಸ್ಥಾವಿರೇ ಪುತ್ರಾ'ನ ಸ್ತ್ರೀ ಸ್ವಾತಂತ್ರಂ ಅರ್ಹತಿ ॥

ಇಲ್ಲಿರುವ ಪೂರ್ಣಾರ್ಥವನ್ನೂ, ಶಬ್ದಾರ್ಥವನ್ನೂ ವಾಕ್ಯದಲ್ಲಿರುವ ವ್ಯಾಕರಣ ಪ್ರಯೋಗವನ್ನೂ ಒಟ್ಟಿಗೆ ಗಮನಿಸಬೇಕು. ಇಲ್ಲಿ 'ರಕ್ಷತಿ' ಎಂಬ ಪದ ಬಳಕೆಯೇ ಸ್ವಾರಸ್ಯವನ್ನು ಹೊಂದಿದೆ. ಸ್ತ್ರೀಯನ್ನು ಬಾಲ್ಯದಲ್ಲಿ ತಂದೆಯಾದವನು ರಕ್ಷಿಸುತ್ತಾನೆ. (ರಕ್ಷತಿ) ಎನ್ನಲಾಗಿದೆ. ಹಾಗೆಯೇ ಯೌವನದಲ್ಲಿ ಪತಿಯು ರಕ್ಷಿಸುತ್ತಾನೆ. ವೃದ್ಧಾಪ್ಯದಲ್ಲಿ ಮಗನು ರಕ್ಷಿಸುತ್ತಾನೆ (ಆದ್ದರಿಂದ ಸ್ತ್ರೀಯು (ಎಂದೂ ) ಸ್ವಾತಂತ್ರ್ಯವನ್ನು ಹೊಂದುವುದಿಲ್ಲ - ಎಂಬುದು ಇಲ್ಲಿ ತೋರುವ ಸಾಮಾನ್ಯಅರ್ಥ. ಮನುವು 'ರಕ್ಷತಿ' ಎಂದಿದ್ದಾನೆಯೇ ವಿನಃ ರಕ್ಷೇತ್ (ರಕ್ಷಿಸತಕ್ಕದ್ದು) ಎಂದು 'ವಿಧಿ'ಯನ್ನು ಹೇರಲಿಲ್ಲ. ಈ ಮಾತುಗಳನ್ನು ಹೇಳುವಾಗ ಮನುವು ತನ್ನ ವರ್ತಮಾನದಲ್ಲಿ ಹೇರಲಿಲ್ಲ. ಈ ಮಾತುಗಳನ್ನು ಹೇಳುವಾಗ ಮನುವು ತನ್ನ ವರ್ತಮಾನದಲ್ಲಿ ನಿಂತು ಸ್ತ್ರೀ ಗಿರುವಂಥ ವಾಸ್ತವಿಕ ಸ್ಥಿತಿಯನ್ನೂ ಅದರ ವರ್ತಮಾನ ರೂಪವನ್ನು ಎದುರಿಗಿಟ್ಟಿದ್ದಾನೆಂಬ ಅರ್ಥ ನೀಡುತ್ತದೆಯೇ ವಿನಃ ಸ್ತ್ರೀಯು ಸ್ವಾತಂತ್ರ್ಯವನ್ನು ಪಡೆದುಕೊಳ್ಳತಕ್ಕದಲ್ಲವೆಂಬಂತೆ ನಿಷೇಧವನ್ನು ವಿಧಿಸಿರುವ

ಅರ್ಥವನ್ನು ನೀಡುವುದಿಲ್ಲ. ' ಈ ಬಾಲಕ ಈ ಮೂಟೆ ಭಾರವನ್ನು ಎತ್ತಲು ಅರ್ಹನಲ್ಲ' ಎಂದು ಹೇಳಿದರೆ ಮುಂದೆ ಆತ ಅರ್ಹನಾಗಲಾರನೆಂದಾಗಲೀ, ಅರ್ಹನಾಗತಕ್ಕವನಲ್ಲವೆಂದಾಗಲೀ ವ್ಯಾಖ್ಯಾನಿಸಲು ಆದೀತೆ ? ಸ್ತ್ರೀಯರ 'ವರ್ತಮಾನ' ಸಂಕೇತವೂ ಆರೀತಿಯದು.

ಹಾಗೆ ನೋಡಿದರೆ - ಮನುಷ್ಯ ಹೊಂದುವ ಬಾಲ್ಯ ಅಥವಾ ಕೌಮಾರ, ಯೌವ್ವನ, ವೃದ್ಧಾಪ್ಯ ಎಂಬೀ ಮೂರು ಅವಸ್ಥೆಗಳೂ ಸ್ತ್ರೀ -ಪುರುಷರಿಬ್ಬರಿಗೂ ಅವ್ಯಾಹತ. ಬಾಲ್ಯ ಮತ್ತು ವೃದ್ಧಾಪ್ಯಗಳಲ್ಲಿ ಪುರುಷನೂ ಕೂಡಾ ಸ್ತ್ರೀಯಂತೆಯೇ ಪರಾವಲಂಬಿ ಸ್ಥಿತಿಗೊಳಪಡುತ್ತಾನೆ. ಯೌವ್ವನಾವಸ್ಥೆಯಲ್ಲಿ ಮಾತ್ರ ಪುರುಷನಿಗೆ ಲಭಿಸುವ ಸ್ವತಂತ್ರತೆ, ಸ್ವಚ್ಛಂದತೆ ಸ್ತ್ರೀಗೆ ಲಭಿಸುತ್ತಿಲ್ಲ. ಯೌವ್ವನದಲ್ಲಿ ಆಕೆಯೇ ಪುರುಷನ ಅಧೀನಕ್ಕೊಳಪಡುತ್ತಾಳೋ, ರಕ್ಷಣೆ ಆಶ್ರಯಿಸುತ್ತಾಳೋ, ಅಥವಾ ಪುರುಷನೇ ಸ್ತ್ರೀಯನ್ನು ಅಧೀನಗೊಳಿಸಿಕೊಳ್ಳುತ್ತಾನೋ ಎಂಬುದು ದೀರ್ಘ ಚರ್ಚೆಯ ವಿಷಯ. ಸ್ತ್ರೀಗೆ ಅವಳ ದೈಹಿಕವಾದ ಕಾರಣದಿಂದಲೂ ಸಮಾಜದ ಸಾಮಾಜಿಕ ವ್ಯವಸ್ಥೆಯ ಕಾರಣದಿಂದಲೂ ಆ ರೀತಿ ಸ್ವಾತಂತ್ರ್ಯವನ್ನು ಹೊಂದಲಾಗದ, ಹೊಂದಲಾರದ ಅನಿವಾರ್ಯತೆಯೆಂದೇ ಮನುಭಾವಿಸಿದಂತೆ ಅನಿಸುತ್ತದೆ. ಹಾಗೆಂದು ಸ್ತ್ರೀಯನ್ನು ದಾಸ್ಯತೆ ಸ್ಥಿತಿಗೊಡ್ಡಲಿಕ್ಕಾಗಲೀ, ಶೋಷಣೆ, ನಿಕೃಷ್ಟತೆಗೊಳ ಪಡಿಸಲಿಕ್ಕಾಗಲೀ ಸಿದ್ಧನಿಲ್ಲ. ಅದೇ ಕಾಲಕ್ಕೆ ಸ್ತ್ರೀಯ ಸ್ವಚ್ಛಂದ ಮನೋವೃತ್ತಿಯನ್ನು ಒಪ್ಪುವುದಿಲ್ಲ. ಪುರುಷನ ಆಕೆಯನ್ನು ರಕ್ಷಿಸಿಕೊಳ್ಳುವುದೊಂದು ಆತನ ಹೊಣೆಗಾರಿಕೆಯೆಂದೇ ಭಾವಿಸಿ ಸ್ತ್ರೀ - ಪುರುಷರ ಮಧ್ಯೆ ಸ್ತ್ರೀಯನ್ನು ಅತ್ಯಂತ ಉನ್ನತವಾಗಿರಿಸುತ್ತಾನೆ. ತನ್ನ ಅನೇಕ ನುಡಿಗಳಲ್ಲಿ ಅದನ್ನು ವಿವಿಧ ರೀತಿಯಲ್ಲಿ ಹೇಳುತ್ತ ಶಾಸನಗೊಳಿಸಿ ಸ್ತ್ರೀ ಔನ್ನತ್ಯವನ್ನು ಕಾಪಾಡುವ ಹೊಣೆಯನ್ನು ಪುರುಷನಿಗೇ ಒಪ್ಪಿಸುತ್ತಾನೆ.

ತಂದೆ, ಸಹೋದರ,ಪತಿ, ಮೈದುನ ಇವರು ಯಾರೇ ಆದರೂ ಕೂಡಾ ತಮ್ಮ ಕುಟುಂಬದ ಕಲ್ಯಾಣವನ್ನು ಇಚ್ಛಿಸುವುದಾದಲ್ಲಿ ಕುಟುಂಬದಲ್ಲಿಯ ಸ್ತ್ರೀಯನ್ನು ಪೂಜ್ಯಭಾವನೆ, ಪ್ರೀತಿ-ಗೌರವ ಭಾವನೆಯಿಂದ ಕಾಣುತ್ತ ಅವರನ್ನು ನಾನಾ ರೀತಿ ಒಡವೆ ವಸ್ತು ವಸ್ತ್ರಗಳಿಂದ ಸಂತೋಷಗೊಳಿಸಿಟ್ಟುಕೊಳ್ಳಬೇಕು. ಎಂಬ ಮಾತನ್ನು ಮನುಸ್ಮೃತಿ ೩-೫೫ರಲ್ಲಿ - 'ಪಿತೃಭಿರ್ಭ್ರಾತೃಭಿಶ್ಚೈತಾಃ ಪತಿಭಿರ್ದೇವರೈಸ್ತಥಾ। ಪೂಜ್ಯಾ ಭೂಷಯಿತವ್ಯಾಶ್ಚ ಬಹುಕಲ್ಯಾಣ ಮೀಪ್ಸುಭಿಃ। ಎಂದು ವ್ಯಕ್ತಪಡಿಸಲಾಗಿದೆ.

ಇನ್ನೂ ಮುಂದರಿದು ಸ್ತ್ರೀ ಶ್ರೇಷ್ಠತೆ, ಸ್ತ್ರೀ ಗೌರವಗಳ ಕುರಿತು ಮನು ಹೇಳುವ ಅದೇ ಅಧ್ಯಾಯದಲ್ಲಿಯ ಮತ್ತೆಕೆಲವು ಶ್ಲೋಕಗಳು ಹೀಗಿವೆ :-

'ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರದೇವತಾಃ।

ಯತ್ರೈತಾಸ್ತು ನ ಪೂಜ್ಯಂತೇ ಸರ್ವಾಸ್ತತ್ರಾಫಲಾಃ ಕ್ರಿಯಾಃ ।೫೬।

'ಶೋಚಂತಿ ಜಾಮಯೋಯತ್ರ ವಿನಶ್ಯತ್ಯಾಶು ತತ್ಕುಲಮ್

ನಶೋಚಂತಿ ತು ಯತ್ರೈತಾ ವರ್ಧತೇ ತದ್ಧಿ ಸರ್ವದಾ। ೫೭।

– ಎಂಬೀ ಶ್ಲೋಕಗಳಲ್ಲಿ : 'ಎಲ್ಲಿ ಹೆಣ್ಣನ್ನು ಗೌರವದಿಂದ, ಆದರದಿಂದ ಕಂಡು ಅವಳು ದುಃಖಿತಳಾಗದಂತೆ ನೋಡಿಕೊಳ್ಳುತ್ತಾರೋ ಅಲ್ಲಿ ದೇವತೆ ನಲಿಯುತ್ತಿರುತ್ತದೆ. ಮತ್ತು ಎಲ್ಲಿ ಹೀಗೆ ಸ್ತ್ರೀಯು ಆದರಿಸಲ್ಪಡುವುದಿಲ್ಲವೋ ಅಂಥಲ್ಲಿ ಎಲ್ಲವೂ ಹಾಳಾಗುತ್ತವೆ( ಸುಖ -ಸಂತೋಷ) (ಇಲ್ಲಿ 'ದೇವತಾ' ಶಬ್ದವು ಸುಖ-ಸಮೃದ್ಧಿ ಸಂತೋಷದ ಪ್ರತೀಕವು) ಹಾಗೂ - ಯಾವ ಮನೆಯಲ್ಲಿ ನಾರಿಯು ಶೋಕವನ್ನು ಅನುಭವಿಸುವಂತಾಗುತ್ತದೆಯೋ ಅಂಥ ಆ ಕುಲವೇ ಬಹುಬೇಗ ವಿನಾಶಗೊಳ್ಳುತ್ತದೆ. ಮತ್ತು ಎಲ್ಲಿ ನಾರಿಯು ಸಂತುಷ್ಟಳಾಗಿ ಇರುತ್ತಾಳೋ ಆ ಮನೆಯು ದಿನೇ ದಿನೇ ವೃದ್ಧಿಯನ್ನು ಕಾಣುತ್ತದೆ. ಎಂಬಿತ್ಯಾದಿ ಮಾತುಗಳ ಮೂಲಕ ಸ್ತ್ರೀಯನ್ನು ಅತ್ಯಂತ ಉನ್ನತವಾಗಿ ಭಾವಿಸಿದ್ದಾರೆ. ಅದೇ ಅಲ್ಲದೇ – 'ಸ್ತ್ರೀಯಾಂತು ರೋಚ ಮಾನಾಯಾಂ ಸರ್ವ ತದ್ರೋಚತೇ ಕುಲಂ। ತಸ್ಯಾಂತ್ವ ರೋಚಮನಾಯಾಂ ಸರ್ವಮೇವ ನ ರೋಚಯತೇ ಎಂದೂ ಪುನಃ ಒತ್ತಿ ಹೇಳಿದ್ದಾನೆ ಮನು.

ಕುಟುಂಬದಲ್ಲಿ ಸ್ತ್ರೀ ಮತ್ತು ಪುರುಷನ ಅಸ್ತಿತ್ವಮಹತ್ವದ ಸಂಬಂಧವು ಪರಸ್ಪರವೇ ವಿನಃ ಏಮ್ಮುಖವಲ್ಲ. ಪುರುಷನು ಸ್ತ್ರೀಯನ್ನೂ; ಸ್ತ್ರೀಯು ಪುರುಷನನ್ನೂ ಅನ್ಯೋನ್ಯವಾಗಿ ಆದರಿಸಿ ಪ್ರೀತಿಯಿಂದ ನಡೆದುಕೊಂಡರೇನೇ ಅಲ್ಲಿ ಶಾಶ್ವತವಾದ ಸಂತಸ ತುಂಬಿಕೊಂಡಿರಲು ಸಾಧ್ಯ. ಸ್ತ್ರೀಪುರುಷರ ನಿಷ್ಪತ್ತಿಯು ಒಂದು ಶಾಶ್ವತವಾದ ಸಂತಸ ತುಂಬಿಕೊಂಡಿರಲು ಸಾಧ್ಯ. ಸ್ತ್ರೀ ಪುರುಷರ ನಿಷ್ಪತ್ತಿಯು ಒಂದು ವಾರೀಸು ಸೊತ್ತು. ಎಷ್ಟೇ ಸ್ವಾತಂತ್ರ್ಯವನ್ನು ಬಯಸಿದರೂ ಕೊನೆಗೂ ಓರ್ವ ಪುರುಷನ ವಶವಾಗದೇ, ಪುರುಷನ ಅಲಿಂಗನವಿಲ್ಲದೇ ಸ್ತ್ರೀ ಜೀವಿತ ಕಾಲವನ್ನು ಕಳೆಯಲಾರಳು. ಕಂಡ ಕಂಡ ಹಣ್ಣಿಗೆ ಹಾರುವ ಹಕ್ಕಿಯಂತೆ ಪುರುಷನು ವ್ಯವಹರಿಸುವುದನ್ನು ಸ್ತ್ರೀ ಸ್ವೀಕರಿಸಲಾರಳು. ತಾನೂ ಕೂಡಾ ಪಶುವಿನಂತೆ ಕೇವಲ ಲೈಂಗಿಕ ತೀಟೆಗಷ್ಟೇ ಅಸ್ತವ್ಯಸ್ತ ಸಂಬಂಧದೊಂದಿಗೆ ವಿಹರಿಸುವುದು ಸ್ವಾತಂತ್ರ್ಯವೆಂದು ಗ್ರಹಿಸಲಿಕ್ಕಿಲ್ಲ. ಪುರುಷನೂ ಕೂಡಾ ಹೆಣ್ಣಿನ ಸಂಬಂಧ ಹೆಣ್ಣಿನ ಅಗತ್ಯತೆಯು ತನ್ನ ಯಾಜಮಾನ್ಯ ಅಂಕಿತವನ್ನಾಗಿ, ನಾಯಕತ್ವದ ಪೌರುಷವೆಂದಾಗಿ, ಸ್ವೀಕರಿಸಲು ಅವಕಾಶವಿಲ್ಲ. ಅದೊಂದು ಅವಿಭಾಜ್ಯಅಂಗ. ತನ್ನ ದೇಹದ ಕ್ಷೇಮ, ಸಂತುಷ್ಟಿಯ ಮಹತ್ವದಷ್ಟೇ

ಅಥವಾ ಅದಕ್ಕಿಂತಲೂ ಮಿಗಿಲಾಗಿ ಸ್ತ್ರೀಯನ್ನು ಗ್ರಹಿಸಬೇಕಾಗುತ್ತದೆ. ಈ ಕುರಿತು ಮನು ಸ್ಮೃತಿಯಲ್ಲಿ :

ಸಂತುಷ್ಟೋ ಭಾರ್ಯಯಾ ಭರ್ತಾ ಭರ್ತ್ರಾ ಭಾರ್ಯಾ ತಥೈವಚ।

ಯಸ್ಮಿನ್ನೇವೇ ಕುಲೇನಿತ್ಯಂ ಕಲ್ಯಾಣಂ ತತ್ರವೈ ಧ್ರುವಂ (೩-೬೦)

'ಕುಟುಂಬದಲ್ಲಿ ಪತ್ನಿಯಿಂದ ಪತಿಯು ಸಂತುಷ್ಟ, ಪತಿಯಿಂದ ಪತ್ನಿಯು ಸಂತುಷ್ಟವಾಗಿದ್ದರೆ ಅಲ್ಲಿ ಸುಖಸಮೃದ್ಧಿ ಸ್ಥಿರವಾಗಿರುತ್ತದೆ. ಎಂದೇ ಹೇಳಲಾಗಿದೆ. ಇದು ಸ್ತ್ರೀ-ಪುರುಷರ ಪರಸ್ಪರತೆಯನ್ನು ಎತ್ತಿತೋರಿಸುತ್ತದೆ. ಆದರೆ ಈ ಪರಸ್ಪರತೆಯಲ್ಲಿ ಪುರುಷನು ಸ್ತ್ರೀಯನ್ನು ಸಂತುಷ್ಟವಾಗಿರಿಸಿಕೊಳ್ಳಬೇಕೆಂಬುದರಲ್ಲಿ ಇಡೀ ಬದುಕಿನ ಕಲ್ಯಾಣವನ್ನು ಅಲಕ್ಷಿಸಿ, ಅದನ್ನು ಧರ್ಮವೆಂದು ಅನುಶಾಸನಗೊಳಿಸಿದ್ದಾರೆ. ಸ್ತ್ರೀಯು ಪುರುಷನನ್ನು ಸಂತುಷ್ಟಗೊಳಿಸಬೇಕೆಂಬುದರಲ್ಲಿ ಆತನ ಕಾಮಾಭೀಷ್ಟತೆಯ ದೃಷ್ಟಿಯಿಂದಷ್ಟೇ ಅನುಲಕ್ಷಿಸಿದಂತಿದೆ.

'ಯದಿ ಹಿ ಸ್ತ್ರೀ ನ ರೋಚೇತ ಪುಮಾಂಸಂ ನ ಪ್ರಮೋದಯೇತ್'

ಅಪ್ರಮೋದಾತ್ಪುನಃ ಪುಂಸಃ ಪ್ರಜನಂ ನ ಪ್ರವರ್ತತೇ ' - ಎಂಬ ಈ ಉಕ್ತಿಯಲ್ಲಿ ಅದು ವೇದ್ಯ.

ಬದುಕಿನಲ್ಲಿ ಸ್ತ್ರೀ - ಪುರುಷರ ಸಂಬಂಧವು ಸಮಾನ ಅಗತ್ಯತೆ ಯುಳ್ಳದ್ದಾಗಿದ್ದರೂ - ಪ್ರಕೃತಿ ದತ್ತವಾಗಿ ದೈಹಿಕ - ಮಾನಸಿಕ ಸ್ಥಿತಿಯಲ್ಲಿ ಅಂತರವಿದ್ದೇ ಇದೆ. ಸ್ತ್ರೀಯರ ಮೃದುಲ ಮನಸ್ಸು, ಸುಕೋಮಲ ಭಾವನೆ, ಕರುಣಾದ್ರಕ ಹೃದಯ, ತಕ್ಷಣದ ಪ್ರತಿಕ್ರಿಯ ಇತ್ಯಾದಿ ವಿಶಿಷ್ಟತೆಗಳಿಂದಲೂ, ದೈಹಿಕ ವಿನ್ಯಾಸ ಆ ಸೂಕ್ಷ್ಮತೆಯಿಂದಲೂ ಆಕೆ ಪುರುಷನಿಗಿಂತ ಭಿನ್ನ. ಅಷ್ಟೇ ಅಲ್ಲ 'ಮಾತೃತ್ವಹೊಂದುವ ಪುನರ್ ಸೃಷ್ಟಿ ಕ್ರಿಯೆಯ ಕೇಂದ್ರ ಶಕ್ತಿಯಾಗಿ ಪುರುಷನಿಗಿಂತ ವಿಶಿಷ್ಟ ಹೊಣೆಗಾರಿಕೆ ಹೊರಿಸಲ್ಪಟ್ಟವಳಾಗಿದ್ದಾಳೆ. ಇದು ನಿಸರ್ಗದ ನಿಯತಿ. ತನ್ನ ನಾಯಕತ್ವದಿಂದಾಗಲೀ, ಸರ್ವಾಧಿಕಾರ ಹೊಂದಿಯಾಗಲೀ, ದೈಹಿಕ ಬಲದ ಯುಕ್ತಿಯಿಂದಾಗಲೀ ಪುರುಷನು ಸ್ತ್ರೀಯಲ್ಲಿದತ್ತವಾದ ಈ ಸಾಮರ್ಥ್ಯಗಳನ್ನು ಪಡೆದುಕೊಳ್ಳಲಾರ. ಆದುದರಿಂದಲೇ ಸ್ತ್ರೀ ಪುರುಷರ ಅನುಪಾತವು ಏನೇ ಇದ್ದರೂ ಸ್ತ್ರೀಯ ಸೃಜ ಕ್ರಿಯೆಯ ನಿರ್ವಹಣೆ, ಆ ರಚನಾತ್ಮಕ ಉದ್ದೇಶದ ಮಹತ್ವಗಳನ್ನು ಶ್ರೇಷ್ಠವಾಗಿ ಕಂಡ ಮನುವಿನಂಥ ಮಹಾ ಜ್ಞಾನಿಗಳು ಸ್ತ್ರೀ ರಕ್ಷಣೆ, ಸ್ತ್ರೀ ಪೂಜ್ಯತೆ, ಇದರಣೆ ಬಗ್ಗೆ ಒತ್ತಿ ಒತ್ತಿ ಹೇಳಿರಬಹುದು. ಮನುವು ಹೇಳಿರುವ ಅಂಥ ಕೆಲವೇ ಮಾತುಗಳನ್ನಿಲ್ಲಿ ಉಲ್ಲೇಖಿಸುತ್ತೇನೆ.

'ಮಹಿಳೆಯರಿಗೆ ಸೇರಿದ ಹಣ, ಚಿನ್ನ, ಆಸ್ತಿ, ವಸ್ತ್ರ ಮೊದಲಾದ ಯಾವುದನ್ನೂ ಪುರುಷರು ತಮ್ಮ ಉಪಯೋಗಕ್ಕೆ ಪಡೆದುಕೊಳ್ಳತಕ್ಕದ್ದಲ್ಲ. ಹಾಗೆ ಪಡೆದುಕೊಳ್ಳುವುದು ಪಾಪಕಾರ್ಯ. ಅಂಥವರಿಗೆ ನರಕ - ಪ್ರಾಪ್ತಿ ಕಟ್ಟಿಟ್ಟದ್ದು' (ಮನು ೩-೫೨)

'ಹೆಣ್ಣುಮಕ್ಕಳು ಮದುವೆಯಾಗಿ ಹೋದಮೇಲೂಕೂಡಾ ತಂದೆಯಾಗಲೀ ಸೋದರರೇ ಆಗಿರಲಿ ಆಕೆಯನ್ನು ಉಪೇಕ್ಷಿಸಬಾರದು. ಆಗಾಗ ಕರೆದು ಸತ್ಕರಿಸಬೇಕು. ಗಂಡನ ಮನೆಯವರೂ ಹೀಗೇ ನೋಡಿಕೊಳ್ಳಬೇಕು ' (೩-೫೫)

'ಕನ್ಯೆಯು ದುಷ್ಕುಲದಲ್ಲಿ ಜನಿಸಿದ್ದರೂ (ಆಗ ಜಾತಿ ವಾಚಕವಿರಲೇ ಇಲ್ಲ. ವೃತ್ತಿ ನೀತಿ. ನಡತೆಗನ್ವಯ ಕುಲವಾಚಕವಿರುತ್ತಿತ್ತುಎಂಬುದನ್ನು ಗಮನಿಸಬೇಕು) ಆಕೆಯು ಗುಣವತಿಯಾಗಿದ್ದರೆ ಪತ್ನಿಯನ್ನಾಗಿ ಪರಿಗ್ರಹಿಸಬಹುದು. ಆದರೆ ವರನಾಗುವವನು ದುಷ್ಕುಲದವನಾಗಿದ್ದರೆ ಗುಣವಂತನಾದರೂ ಆತನಿಗೆ (ಕನ್ಯಾಪಿತೃ) ಮಗಳನ್ನು ಕೊಟ್ಟು ವಿವಾಹ ಮಾಡಕೂಡದು (೨-೨೩೮)

'ಗಂಡನು ತಾನು ಗಳಿಸಿ ತಂದಂಥ ಹಣವನ್ನು ಮುಂದಿನ, ತಕ್ಕವಿನಿಯೋಗಕ್ಕಾಗಿ ಹೆಂಡತಿಯ ವಶಕ್ಕೆ ಒಪ್ಪಿಸಬೇಕು.ಗೃಹಕೃತ್ಯಕ್ಕೆ ಸಂಬಂಧಿಸಿದ ಖರ್ಚಿನ ಜವಾಬ್ದಾರಿಯನ್ನು ಅವಳಿಗೇ ವಹಿಸಬೇಕು.' (ಮ:೯-೧೦,೧೧)

'ಪತ್ನಿಯು ತನ್ನ ಬಳಿಬಂದ ಗಳಿಕೆಯನ್ನು ವ್ಯವಸ್ಥಿತವಾಗಿ ವೆಚ್ಚಮಾಡುವುದು, ಅವುಗಳ ಲೆಕ್ಕವನ್ನು ಪತಿಗೆ ಒಪ್ಪಿಸುವುದು, ಗೃಹ-ಕೃತ್ಯ', ಸ್ವಚ್ಛತೆ, ಅಲಂಕಾರ ಇತ್ಯಾದಿಗಳನ್ನು ನಿರ್ವಹಿಸಬೇಕು.' (ಮ. ೫-೧೫೦)

'ತಂದೆಗಿಂತಲೂ ತಾಯಿಯು ಸಾವಿರಪಟ್ಟುಗೌರವಕ್ಕೆಅರ್ಹಳು.' (೨-೧೪೫)

'ಸ್ತ್ರೀಯು ಎದುರಿಗೆ ಬಂದರೆ ಪುರುಷರು ದಾರಿಬಿಟ್ಟು ಸರಿಯಬೇಕು' (೨-೧೩೮)

ಸ್ತ್ರೀಯರನ್ನು ಆದರಿಸುವ, ಸ್ತ್ರೀಯರನ್ನು ಹೆಚ್ಚು ಮಹತ್ವನೀಡಿ ನೋಡಿಕೊಳ್ಳುವ ಇಂಥ ಎಷ್ಟೋ ಮಾತುಗಳನ್ನು ಮನುಸ್ಮೃತಿಯಿಂದ ಉಧೃತಗೊಳಿಸಬಹುದು. ಮನುವು ಸ್ತ್ರೀಯರ ವಿಧವಾವಿವಾಹ, ಸ್ತ್ರೀಯರ ಶಿಕ್ಷಣ ಜ್ಞಾನ ಸಂಪನ್ನತೆಯ ಕುರಿತೂ ಮಾತಾಡಿ, ದಾರಿತೋರಿ ಪ್ರಗತಿ ಪರನೆಂದೇ ತೋರಿಸಿಕೊಂಡಿದ್ದಾನೆ. (ಸ್ತ್ರೀಯರ ಉದ್ಯೋಗ-ವೃತ್ತಿ ವಿಷಯದಲ್ಲಿ ಮಾತ್ರಮನುವಿನ ಮಾತು ಪ್ರಕೃತದಲ್ಲಿ ಅಪ್ಯಾಯ ಮಾನವಾಗಲಿಕ್ಕಿಲ್ಲ. ಇದೊಂದು ಅಪವಾದ)

ಹೀಗೆಲ್ಲಾ ರೀತಿಯಿಂದಲೂ ಸ್ತ್ರೀಯನ್ನು ಉನ್ನತ ಪರಿಕಲ್ಪನೆಯಲ್ಲಿಟ್ಟು ಆದರಿಸುವ 'ಮನುವು' ಸ್ತ್ರೀ ದಾಸ್ಯತೆಗಾಗಲೀ, ಸ್ತ್ರೀ, ಸ್ತ್ರೀಶೋಷಕತೆಗಾಗಲೀ ಪುಷ್ಟಿನೀಡುವ ಆದಿಪುರುಷನಂತೂ ಆಗಲಾರ.

ಭಾರತೀಯರಲ್ಲಿ ಅನುರಣನಗೊಂಡಿರುವ 'ಸನಾತನ ಪರಂಪರೆಯ ಕುಟುಂಬ ವ್ಯವಸ್ಥೆಯಾಗಲೀ, ದಾಂಪತ್ಯ ಜೀವನ ಪದ್ಧತಿಯಾಗಲೀ, ಲೇಪನಗೊಂಡಿರುವ ಧಾರ್ಮಿಕ ಮನೋಭೂಮಿಕೆಯಾಗಲೀ ದೋಷಯುಕ್ತವಾದುದು; ಗೊಡ್ಡುತನದ್ದು, ಆ ಅವರ ಬಳುವಳಿಯೇ ಸ್ತ್ರೀಯರ ಶೋಚನೀಯತೆಗೆ ಕಾರಣವಾಯ್ತು ಎಂದು ಹೇಗೆ ಹೇಳಲಿಕ್ಕಾದೀತು ?

ಹಾಗೆ ಹೇಳುವವರಿದ್ದರೆ ಅವರು ಮನುಕುಲದ ಧರ್ಮವನ್ನು ದ್ವೇಷಿಸುವವರಾಗಿರಬಹುದು. ಅಥವಾ ಅನ್ಯ ಸಂಸ್ಕೃತಿಯ ಎರವಲು ಪಾಂಡಿತ್ಯ ಮೋಹದಿಂದ ತಮ್ಮ ಪ್ರತಿಷ್ಠೆ ಬುದ್ಧಿಪ್ರಾಮಾಣ್ಯವನ್ನು ಮೆರೆಸುವ ಜಂಭವಂತರಾಗಿ ಇಲ್ಲಿರುವುದನ್ನು ಟೀಕಿಸುವ ಪೂರ್ವಾಗ್ರಹಿಗಳಾಗಿರಬಹುದು.

ಮನುಷ್ಯರ ಬದುಕಿನ ಸಂದರ್ಭಕ್ಕೆ 'ಧರ್ಮ' ಲೇಪನವಿರಲೇಬೇಕು. ಹಾಗಿಲ್ಲವಾದರೆ ಅದೊಂದು ಮೂಗದಾಣ ಹರಿದ 'ಪುಂಡುಹೋರಿ'ಯಂತೆ ಲಂಗುಲಗಾಮಿಲ್ಲದೇ ಸ್ವಚ್ಛಂದ ವರ್ತನೆಗೆ ಗುರಿಯಾಗಿಬಿಡಬಹುದು. ಮನುಷ್ಯೇತರ ಪ್ರಾಣಿಕೋಟಿಗಳೂ ತಮ್ಮ ಬದುಕಿಗೆ ನಿಸರ್ಗ ಶಾಸನಕ್ಕೊಳಪಟ್ಟು, ತಮ್ಮದೇ ಆದ ಸ್ವಯಂ ಘೋಷಿತ 'ಧರ್ಮ'ವನ್ನು ಪಾಲಿಸುತ್ತಲಿರುತ್ತದಲ್ಲವೇ ? ಕಟ್ಟುಪಾಡುಗಳಿಗೊಳಪಡದ ಯಾವುದೇ ಬದುಕು, ಸಮಾಜ ನೆಮ್ಮದಿಯಿಂದಿರಲು ಸಾಧ್ಯವಿಲ್ಲ. ಹಾಗಿಲ್ಲದಾಗ ಅದು ದ್ವೇಷ ಅಸೂಯೆ, ಬಲಾತ್ಕಾರ, ಅಕ್ರಮಣಗಳ ದೊಂಬಿಯ ತಾಣವಾದೀತು. ಆಗಿದ್ದ ಉದಾಹರಣೆಗಳೂ ಮನುಕುಲ ಇತಿಹಾಸದಲ್ಲಿವೆ ತಾನೆ ? ಆ ದೃಷ್ಟಿಯಿಂದ 'ಮನು'ವಿನ ಚಿಂತನೆಯಿಂದ ಹೊರಬಂದ 'ಮನುಸ್ಮೃತಿ'ಯನ್ನು ಅದೊಂದು 'ಧರ್ಮಕಟ್ಟಳೆ' - ಎಂದು ಅನೇಕರು ನಂಬಿ ಬಂದುದರಲ್ಲಿ ವ್ಯತ್ಯಯವೇನೂ ಇಲ್ಲ. ಹಾನಿಯೂ ಇಲ್ಲ. ಮನುಸ್ಮೃತಿಯನ್ನು ಒಪ್ಪದಿದ್ದವರೂ ಕೂಡಾ ಅಂಥ ಬೇರೆ ಬೇರೆ ನೀತಿ ಧರ್ಮದುಕ್ತಿಗಳಿಗೆ ಅವಲಂಬಿತರಾಗುತ್ತಾರೆ. (ಕೆಲವರದು ಈ ದೇಶದ್ದಿರಬಹುದು. ಇನ್ನು ಕೆಲವರದು ಅನ್ಯದೇಶದ್ದಿರಬಹುದು. ಅವಲಂಬನೆಯಂತೂ ದಿಟ)

ಹೀಗಿದ್ದಾಗಲೂ ನಮ್ಮೀ ಸಮಾಜ ಬದುಕಿನ ಮಧ್ಯೆ ಅಲ್ಲಲ್ಲಿ ಸ್ತ್ರೀಯರ ಶೋಷಣಾಕೃತ್ಯಗಳೂ, ಆಕೆಯನ್ನು ದಬ್ಬಾಳಿಕೆಗೆ ಒಡ್ಡುವ, ಬಂಧಿಯಾಗಿರಿಸುವ ಕೃತ-ಕೃತ್ಯಗಳೂ, ಸನಾತನ ಪರಂಪರೆಯನ್ನು ಹೀಯಾಳಿಸುವ ಮನೋಭಿತ್ತಿಗಳೂ ಸುಳ್ಳೇ ? ಎಂಬ ಪ್ರಶ್ನೆ ಎದುರಾಗುತ್ತದೆ. ಮತ್ತು ಉತ್ತರವನ್ನು ಹುಡುಕ ಬೇಕಾಗುತ್ತದೆ.

ನಮ್ಮೀದೇಶದ 'ಸನಾತನ ಪರಂಪರೆ' ಎಂಬುದಕ್ಕೆಪ್ರಮಾಣ ಎಲ್ಲಿಂದ, ಎಲ್ಲಿಯದು ? ಎಂಬುದು ಮುಖ್ಯ. ಭಾರತದ್ದು ಭವ್ಯ ಪರಂಪರೆ, ಭವ್ಯ ಸಂಸ್ಕೃತಿ, ಎಂದೆಲ್ಲಾ ಹೆಮ್ಮೆ ಪಡುತ್ತಲೇ ಇರುತ್ತೇವೆ. ಇಂಥ ಇರುವಿನ ಮಧ್ಯದಲ್ಲೇ ಸಾಕಷ್ಟು ವಿಕಾರ - ವಿಕೃತಿಗಳೂ ಕಾಣುವಂತಾಗಿವೆ. 'ಸನಾತನ' ಎಂದೆಂಬ 'ಶಾಶ್ವತ ಮೌಲ್ಯವೂ ಕೂಡಾ ಜಡ್ಡುಗಟ್ಟಿದ ಸಂಪ್ರದಾಯ, ಹಳಸಿದ ಪರಂಪರೆ' ಎಂದು ಹೀಯಾಳಿಸುವ ಸುಧಾರಣಾವಾದಿಗಳೂ ಇದ್ದಾರೆ. ಆ ಎಲ್ಲ ವಿಚಾರಗಳಚರ್ಚೆ ಇಲ್ಲಿ ಅಪ್ರಸ್ತುತ. ಮುಖ್ಯವಾಗಿ ಮಹಿಳೆಯ ಸ್ಥಿತಿ ಸ್ಥಾನಮಾನ, ಆ ಪರಂಪರೆ ವಿಷಯದತ್ತವಷ್ಟೇ ಯೋಚಿಸುವುದಾದರೆ : 'ಸ್ತ್ರೀ' ಕುರಿತ ಉನ್ನತ ಭಾವನೆಗಳು ಕುಂಠಿತವಾಗುವಲ್ಲಿ ಅರ್ವಾಚೀನ ಸಂಗತಿಗಳೇ ಮುಖ್ಯವಾಗುತ್ತವೆಂದು ನನ್ನ ಭಾವನೆ.

ಸ್ತ್ರೀಯರ ದೈನ್ಯಾವಸ್ಥೆ, ಅಸಹಾಯಕ ಪರಿಸ್ಥಿತಿ, ಪುರುಷನು ಧರ್ಮ ಸಂಪ್ರದಾಯದ ಹೆಸರಿನಡಿಯಲ್ಲಿ ಆಕೆಯ ಮೇಲೆ ಹೇರುವ ಪ್ರಭುತ್ವ ಅಧೀನತೆ ಇತ್ಯಾದಿ ಸ್ಥಿತಿಗಳೆಲ್ಲವೂ ಪ್ರಾಚೀನ ಕಾಲದಿಂದಲೂ ಬಂದವು. ಅಲ್ಲಿಯದೇ ಪ್ರಭಾವ ಎಂದು ವಾದಿಸಲಿಕ್ಕಾಗಿ ಹಲವರು ನಮ್ಮ ರಾಮಾಯಣ, ಮಹಾಭಾರತ ಕಾಲಗಳ ಅಷ್ಟೇ ಏಕೆ, ವೇದಕಾಲೀನ ಕಥೆಗಳಲ್ಲಿ ಬರುವಂಥ ಕೆಲವೇ ಸ್ತ್ರೀ ಪಾತ್ರಗಳ ಚಿತ್ರಣವನ್ನು ಎತ್ತಿಕೊಂಡು ತಮಗೆ ನೇರದತ್ತವ್ಯಾಖ್ಯಾನಿಸುತ್ತಿದ್ದಾರೆ. ಆದರೆ ಅದು 'ಪ್ರಮಾಣ'ವೆನಿಸುವುದಿಲ್ಲ. ಆ ಕುರಿತು ವ್ಯಾಖ್ಯಾನಗಳನ್ನು ವಿವಿಧ ಮುಖದಲ್ಲೂ ಮಾಡಬಹುದಾಗಿದೆ. ಆ ಕಾಲದಲ್ಲಿಯೇ ಸ್ತ್ರೀಯರಿಗೆ ಶಿಕ್ಷಣದ ಉನ್ನತ, ಸ್ವತಂತ್ರ ಅವಕಾಶ, ವಿವಾಹ ಸ್ವಾತಂತ್ರ್ಯ, ವಿಧವಾಪುನರ್ವಿವಾಹ ಇತ್ಯಾದಿಗಳನ್ನು ಒದಗಿಸಿದ್ದ ಉದಾಹರಣೆಗಳೂ ಸಾಕಷ್ಟುದೊರೆಯುತ್ತವೆ. ಪುರುಷನನ್ನೂ ಮೀರಿಸಿದ ಮಹಿಳಾಮಣಿಗಳಾಗಲು ಮಿಂಚಿರುವಂಥದೂ ವೇದ್ಯ. ಕೆಲವೇ ಉದಾಹರಣೆಗಳು ಪ್ರಾತಿನಿಧಿಕವೆನಿಸಬೇಕಾದುದಿಲ್ಲ.

ಸ್ತ್ರೀಯರಿಗಿಟ್ಟಿದ್ದ ಗೌರವಭಾವನೆ, ಸ್ತ್ರೀಯರಿಗೆ ಪೂಜ್ಯತೆಯನ್ನು ನೀಡಬೇಕೆಂಬ ಸನಾತನರ ಧಾರ್ಮಿಕ ಕಟ್ಟಲೆಯನ್ನು ಕಳಚಿಕೊಂಡು ಪುರುಷ ಪ್ರಾಬಲ್ಯವು ಪುರುಷಶಾಹಿಯಾಗಿ ಮಾರ್ಪಡುತ್ತ ಬಂದುದು ಹೆಚ್ಚೆಚ್ಚುಅನಂತರದ ಕಾಲದಲ್ಲಿ. ಸ್ತ್ರೀಯರ ವಶದಲ್ಲಿ ಸಂಪತ್ತು, ಆಸ್ತಿ, ಕುಟುಂಬದ ಯಜಮಾನಿಕೆ ಎಲ್ಲ ಇದ್ದ ಹಾಗೂ ಸ್ತ್ರೀ ಜ್ಞಾನಿ ಯಾಗಿಯೂ ಇದ್ದಕಾಲದಿಲ್ಲ, ಅಥವಾ ಆ ಮಾತೃ ಪ್ರಧಾನ ಜೀವನ ಪದ್ಧತಿಯ ಕಾಲದಲ್ಲಿ ಒಂದೆಡೆ ಅದನ್ನು ಒರೆಸಿ ಪುರುಷ ಪ್ರಧಾನ ಕುಟುಂಬ ತಲೆದೋರತೊಡಗಿದಾಗ ರಾಜೀಸೂತ್ರವೂ ಇದ್ದಿರಬಹುದು - ಸ್ತ್ರೀ ಮಾನ ಮರ್ಯಾದೆಗೆ, ಪ್ರತಿಭೆಗೆ ಪುಷ್ಠಿಯಿತ್ತು. ಮು ುಂದೆ ಅದು ಗೌಣಗೊಳ್ಳುತ್ತ 'ಸ್ತ್ರೀ' ಪಾರತಂತ್ರ್ಯದ ಮುಷ್ಠಿಯಲ್ಲಿ ಹಿಡಿದಿಡಲ್ಪಟ್ಟ ಸ್ಥಿತಿ ಬೆಳೆದು ಬಂದುದನ್ನು ಸಮಾಜದ ವಿವಿಧ ಆಯಾಮದ ಚರಿತ್ರೆಯ ಹಿನ್ನೆಲೆಯ ಹಿನ್ನೆಲೆಯಲ್ಲೇ ಕಂಡು ಕೊಳ್ಳಬೇಕಾಗಬಹುದು.

ಸ್ತ್ರೀಯರ ಕಾರಣಕ್ಕಾಗಿ ನಡೆದ ಸಂಘರ್ಷಗಳ ಇತಿಹಾಸ ನಮ್ಮೆದುರಿಗಿದೆ. ದೈಹಿಕ ಬಲವುಳ್ಳ ಪುರುಷನು ಸ್ತ್ರೀಯರನ್ನು ಆಟದ ಮೈದಾನಿನ 'ಚಂಡಿನಂತೆ' ಕಸಿದುಕೊಂಡೊಯ್ದ ಚರಿತ್ರೆಗಳಿವೆ. ಲೈಂಗಿಕ ದಾಹಕ್ಕೆಬಲಿಯಾಗಿಸಿ ಎಸೆದ ರಾಕ್ಷಸ ಉದಾಹರಣೆಗಳಿವೆ. ಹೆಣ್ಣಿಗಾಗಿ ಹೊಡೆದಾಟ ಬಡಿದಾಟ ಕಿತ್ತಾಟ, ಮೇಲಾಟಗಳಾಗಿದ್ದಿವೆ. ಘಟಿಸಿದ ವ್ಯಾಜ್ಯಗಳಿಗೆ, ಮೇಲಾಟಗಳಿಗೆ 'ಹೊನ್ನು' 'ಹೆಣ್ಣು' 'ಮಣ್ಣು' ಕಾರಣವಾಗುವದನ್ನು ಅನೇಕ ಸ್ತರಗಳಲ್ಲಿ ಅಂದೂ ಕಾಣಬಹುದಿತ್ತು. ಇಂದೂ ಕಾಣುತ್ತಲಿದ್ದೇವೆ.

ಪರಕೀಯ ಆಕ್ರಮಣದ ಸನ್ನಿವೇಶದಿಂದ ಕುಟುಂಬಸ್ಥ ಸಾಮಾನ್ಯ ಬದುಕಿನ ಸುರಕ್ಷಿತತೆಗೆ, ಆ ಮಾನ-ಮರ್ಯಾದೆಯ ಉಳಿವಿಗೆ ಕುತ್ತು ಉಂಟಾಗುವ ಪರಿಸ್ಥಿತಿ ತಲೆದೋರಿದಲ್ಲಿಂದ ಕುಟುಂಬ ದೊಳಗಿನ ಹೆಣ್ಣು ಹೆಚ್ಚೆಚ್ಚು ಮನೆ ಪುರುಷರ/ಸಬಂಧಿಯಾಗುವಂತಾಯಿತು. ಆ ಪುರುಷರು ತಮ್ಮ ಸ್ತ್ರೀಯರ ಸುರಕ್ಷಿತತೆಯ ದೃಷ್ಟಿಯಿಂದಲೂ ಆ ರೀತಿ ಆಗ್ರಹಗೊಳಿಸುವ ಪ್ರಮೇಯ ಉಂಟಾಗಿರಲೂ ಬಹುದು. ಆದರೆ ಈ ಪರಿಸ್ಥಿತಿಯ ಪರಿಣಾಮವಾಗಿ ಆಕೆ ಅಶಿಕ್ಷಿತಳಾದಳು. ಭಯ-ಭೀತಳಾಗಿ ತನ್ನೆಲ್ಲಾ ಪ್ರತಿಭೆ, ಕ್ರಿಯಾಶಕ್ತಿಯನ್ನು ಸ್ವತಂತ್ರವಾಗಿ ಬೆಳಗಿಸಿಕೊಳ್ಳಲಾಗದೆ ಮುಂದೂಡಿಕೊಂಡಳು. ಅಜ್ಞಾನುಸಾರ ತೆಪ್ಪಗೆ ವರ್ತಿಸುವ ಪ್ರವೃತ್ತಿಗೆ ಒಗ್ಗಿಕೊಂಡು ಬಂದಳು. ಇದೊಂದು ಸಮಾಜ ವಿಜ್ಞಾನ, ಮನೋವಿಜ್ಞಾನದ ನೆಲೆಯಲ್ಲಿ ಕಂಡುಕೊಳ್ಳಬೇಕಾದ ಸಂಗತಿ. ಕುಟುಂಬದ ಆರ್ಥಿಕ ಸಂಗತಿಯೂ ಇದರಲ್ಲಿ ಭಾಗಿ.

ಪ್ರಕೃತ ಸಂದರ್ಭದಲ್ಲಿ ಸ್ತ್ರೀಯು ಸ್ವಾತಂತ್ರ್ಯವನ್ನು ಬಯಸುವುದರ ಸಾಮಾನ್ಯ ಮಾನಸಿಕ ಹಿನ್ನೆಲೆ ಆರ್ಥಿಕ ಕಾರಣದ್ದೇ ಹೆಚ್ಚು. ಜಗತ್ತಿನಲ್ಲಿ ಔದ್ಯೋಗಿಕ ಕ್ರಾಂತಿ ಉಂಟಾದಾಗ ಮಹಿಳೆ ತಾನೂ ಹೊರಬಿದ್ದು ದುಡಿದು ಆರ್ಥಿಕ ಸಂಪಾದನೆ ಗೈಯಬೇಕೆಂಬ ಹಂಬಲ-ಅವಕಾಶಗಳ ಪರಿಕಲ್ಪನೆಯನ್ನು ಪಡೆದುಕೊಂಡಳು. ಆಗ ಅವಳು ತನ್ನ ಸಾಂಪ್ರದಾಯಿಕ ಬದುಕಿನಿಂದ ಹೊರಬರಲು ಹಾತೊರೆಯುವಾಗ ಭಾರತದಂಥ ದೇಶಗಳಲ್ಲಿ ಹಲವು ಬಗೆಯ ಆತಂಕಗಳನ್ನೇ ಎದುರಿಸುವಂತಾಯಿತು. ಅದನ್ನಾಕೆ ಇಲ್ಲಿಯ ಸಂಪ್ರದಾಯ ಪರಂಪರೆಗಳು ಉಂಟುಮಾಡಿರುವ ತನ್ನ ಸ್ವಾತಂತ್ರ್ಯಹರಣ ಸ್ಥಿತಿ ಎಂದು ಭಾವಿಸಿದಳು. 'ಸ್ತ್ರೀ ಸ್ವಾತಂತ್ರ್ಯ' ಎಂಬ ಧ್ವನಿ ಕೆಲವರ್ಗದಿಂದ ಎತ್ತಿ ಮೊಳಗಲ್ಪಟ್ಟಿತು. ತನ್ನೀ ಬಯಕೆಯ ಈಡೇರಿಕೆಗೆ ನಮ್ಮ ಹಳೆಯ ಪರಂಪರೆಯ ಜೀವನ ಪದ್ಧತಿ, ಕುಟುಂಬ ಪದ್ಧತಿಯು ಆತಂಕಕಾರಿ ಎಂದು ತಪ್ಪಾಗಿ ಗ್ರಹಿಸಿ ಆಕ್ರೋಶಗೊಳ್ಳುವ, ನಿಂದಿಸುವ ಮನೋಸ್ಥಿತಿಯನ್ನು ತೋರಿಕೊಂಡಳು. ಆದರೆ ವಸ್ತುಸ್ಥಿತಿಯಲ್ಲಿ ಬಹುಸಂಖ್ಯಾತರಿಗೆ ಬಡಿದ ಅಭಿಶಪ್ತ ಬಡತನ, ಔದ್ಯೋಗಿಕ ಅವಕಾಶದ ಅಭಾವವು ಆತಂಕವೇ ವಿನಃ ಇಲ್ಲಿಯ ಪರಂಪರೆ ಸಂಪ್ರದಾಯಗಳು, ಅಲ್ಲವೆಂಬುದನ್ನು ಗ್ರಹಿಸಬೇಕಾಗಿದೆ. ಬಹುವಾಗಿ

ವ್ಯಾಪಿಸಿಕೊಂಡಿರುವ ದಟ್ಟ ಬಡತನ, ಅಶಿಕ್ಷಣಗಳ ಬಾಹುಳ್ಯದಲ್ಲಿ 'ಸ್ತ್ರೀ ಸ್ವಾತಂತ್ರ್ಯ' ಸಾರ್ವತ್ರಿಕಗೊಳ್ಳುವ ಪ್ರಾಯೋಗಿಕತೆಯು ಹೇಗೆ ಸಾಧ್ಯ? ಅದನ್ನು ಬಳಸಿಕೊಳ್ಳಲು ಎಷ್ಟು ಪ್ರಮಾಣದಲ್ಲಿ ಸಾಧ್ಯವಾದೀತು ? ವಿಹಿತಗೊಂಡೀತು ?

ಇಲ್ಲಿ ನಾವು ಯೋಚಿಸಬೇಕಾದ ಮುಖ್ಯ ಪ್ರಶ್ನೆಯೆಂದರೆ ಸ್ತ್ರೀ ಸ್ವಾತಂತ್ರ್ಯದ ಅವಕಾಶಕ್ಕೆ ಸನಾತನ ಪರಂಪರೆ, ಸಂಪ್ರದಾಯಗಳು ಆತಂಕವೇ ? ರಾಜಕೀಯ - ಆರ್ಥಿಕ - ವ್ಯವಸ್ಥೆ ಕಾರಣವೇ ? ಏಕೆಂದರೆ ಒಂದು ಕುಟುಂಬದಲ್ಲಿ ಪುರುಷನು ಗಳಿಸುವ ದುಡಿಮೆಯು ಆರ್ಥಿಕ ಸಬಲತೆಯನ್ನೀಯುವಂತಿದ್ದಲ್ಲಿ ಅಲ್ಲಿ ಸ್ತ್ರೀ ಆರ್ಥಿಕ -ಗಳಿಕೆಗಾಗಿ ಸ್ವಾತಂತ್ರ್ಯ ಬಯಸುವ ಪ್ರಮೇಯ ಗೌಣ ವಾಗುತ್ತದೆ. ಹಾಗಿದ್ದಾಗಲೂ ಆಕೆ ಸ್ವತಂತ್ರ ಆರ್ಥಿಕ ಗಳಿಕೆಯನ್ನು ಬಯಸುವುದಾದಲ್ಲಿ ಆಗಿನ ಮಾನಸಿಕ ಕಾರಣ ಬೇರೆಯಾದ ಹಿನ್ನೆಲೆ ಹೊಂದಿದೆ ಎಂದೇ ಅರ್ಥೈಸಬೇಕು. ಆರ್ಥಿಕ ಅಗತ್ಯತೆ ಇಲ್ಲದಿದ್ದರೂ ಮಹಿಳೆ ತನ್ನ ಬೌದ್ಧಿಕ ಪ್ರತಿಭೆಯ ಸ್ವಾತಂತ್ರ್ಯ ಬಯಸುವುದಾದಲ್ಲಿ ಪ್ರಸ್ತುತದಲ್ಲಿಯ ಕೌಟುಂಬಿಕ ಪರಂಪರೆಯಲ್ಲಿಯೂ ನಿರ್ಬಂಧವಿಲ್ಲ. ನಿರ್ಬಂಧ ಉಂಟಾಗುವುದಿದ್ದರೆ ಅದು ಅವಕಾಶವನ್ನು ಪಡೆದುಕೊಳ್ಳಲಾಗದ ಇನ್ನಿತರ ದೌರ್ಬಲ್ಯದ ಕಾರಣದಿಂದಾಗಿರಬಹುದು.

ಆದರೆ ಸ್ತ್ರೀಯು ಬಯಸುವಂಥ ಸ್ವಾತಂತ್ರ್ಯವು ಕೆಲವು ಪಾಶ್ಚಾತ್ಯ ರಾಷ್ಟ್ರಗಳಲ್ಲಿ ತೋರಿ ಬರುವಂಥ ಮುಕ್ತ ಜೀವನದ (ಅಂದರೆ ವಾಸ, ವಸನ, ಅಶನ, ಮೈಥುನಗಳಿಗೆಲ್ಲದಕ್ಕೂ ಪಶುಸದೃಶ ಕಟ್ಟುಪಾಡು ರಹಿತ ಸ್ವಾತಂತ್ರ್ಯ) ಪರಿಕಲ್ಪನೆಯದ್ದೋ ? ಅಥವಾ ನಮ್ಮ ಭಾರತೀಯತೆ ಯೊಂದಿಗೇನೇ ಬದುಕಿನ ಸಂದರ್ಭ, ಅಗತ್ಯತೆ, ಸಾಧ್ಯತೆಗನುಸರಿಸಿ ಸ್ತ್ರೀಯು ತನ್ನ ಪ್ರತಿಭೆ ಕ್ರಿಯಾಶಕ್ತಿಗಳನ್ನು ಹೊರಸೂಸಿ ಉದ್ಯೋಗ, ಆರ್ಥಿಕ, ಸಾಮಾಜಿಕತೆಗಳಲ್ಲೂಸಹಭಾಗಿಯಾಗಲು ಕುಟುಂಬದ ಗೋಡೆಯ ಹೊರಗಡೆ ಬರಲು ಅಗತ್ಯವಾಗಿರುವ ಸ್ವಾತಂತ್ರ್ಯದ ಪರಿಕಲ್ಪನೆಯೋ ?

ನಮ್ಮೀ ಭಾರತದ ಪರಂಪರೆ ಜೀವನ ಕ್ರಮದಲ್ಲಿ ಸ್ತ್ರೀಯು ತನ್ನ ಲೈಂಗಿಕಾಕಾಂಕ್ಷೆಗಾಗಿ ವ್ಯತಿಕ್ರಮಿಸಿ ವರ್ತಿಸುವುದನ್ನು 'ವ್ಯಭಿಚಾರ' ವೆಂದು ಹೇಳಿ ಅದಕ್ಕೆ 'ಧರ್ಮ ಕಟ್ಟಲೆ' ಹೇಳಿ ನಿರ್ಬಂಧಿಸಲಾಗಿದೆಯೇ ವಿನಃ (ಇದಕ್ಕೆ ಪುರುಷನೂ ಹೊರತಲ್ಲ) ಆಕೆಯು ಕುಟುಂಬದ ಹಿತಕ್ಕಾಗಿ ದುಡಿಮೆ, ಆರ್ಥಿಕ ಗಳಿಕೆ, ಶೈಕ್ಷಣಿಕ ಸಾಧನೆಗಳಲ್ಲಿ ಪಾಲ್ಗೊಳ್ಳುವುದನ್ನು ಅಧರ್ಮಕ್ರಿಯೆಂದು ಎಂದೂ ನಿರ್ಬಂಧಿಸಲಿಲ್ಲ. (ಲೈಂಗಿಕ ಕಾಮ ನಿರ್ಬಂಧವು ಸ್ವತಃ ಮಹಿಳೆಯ ದೈಹಿಕ ಪೋಷಣೆ, ದೈಹಿಕ ವ್ಯತಿರಿಕ್ತ ದುಷ್ಪರಿಣಾಮಗಳು ದೃಷ್ಟಿಯಿಂದ ನಮ್ಮ ಯಾವ ಮಹಿಳೆಯೂ ಇದನ್ನೊಂದು ಪರಂಪರೆಯು ವಿಧಿಸಿದ ತನ್ನ ಸ್ವಾತಂತ್ರ್ಯ ಹರಣವೆಂದು ಭಾವಿಸಲಿಕ್ಕಿಲ್ಲ.)

ಈ ನೆಲೆಯಲ್ಲಿ ನಮ್ಮ ಪರಂಪರೆಯು ಹಾಕಿಕೊಟ್ಟ ಸುಂದರ ಕುಟುಂಬ ದಾಂಪತ್ಯ ವ್ಯವಸ್ಥೆಯೊಂದಿಗೇ ತನ್ನರಿಸಿಕೊಂಡು ಲೈಂಗಿಕ ಕಾಮನೆಯ ಮುಕ್ತತೆಯನ್ನು ಅಲ್ಲಗಳೆದು ತನ್ನ ಸಾಮರ್ಥ್ಯಕ್ಕನುಗುಣವಾಗಿ ವ್ಯಕ್ತಿತ್ವವನ್ನು ಸಾಧಿಸಿಕೊಳ್ಳುವ ಸ್ವಾತಂತ್ರ್ಯವು 'ಪ್ರಗತಿ ಪರ' ತೆಯೊ, ಅಥವಾ ಈ ಪರಂಪರೆಯನ್ನೇ ಕಿತ್ತೆಸೆದು ಪಾಶ್ಚಾತ್ಯಪರಿಕಲ್ಪನೆಯ ಹೊಸಸ್ವಾತಂತ್ರ್ಯಗಳಿಕೆಯು 'ಪ್ರಗತಿಪರ' ತೆಯೋ ಎಂಬುದು ಕೊನೆಗೂ ಅವರವರ ವಿಚಾರ - ವಿವೇಚನೆಗೇ ಬಿಟ್ಟ ಸಂಗತಿ. ನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ ಎಂಬುದರ ಗುಟ್ಟಿನ ಸಂಗತಿ.

## ಟಿ. ಮಹಾಬಲೇಶ್ವರ ಭಟ್ಟ

೭೩ 'ಸುದರ್ಶನ'
ಶ್ರೀ ಮಾರಿಕಾಂಬಾ ರಸ್ತೆ
ಸಾಗರ - ೫೭೭ ೪೦೧
ಶಿವಮೊಗ್ಗ ಜಿಲ್ಲೆ

ಸಾಗರ ಮನೆ : ೨೬೩೭೩
ಬೇದೂರು : ೩೭೩೨
ಎಸ್.ಟಿ.ಡಿ : ೦೮೧೮೩


# ಟಿ. ಮಹಾಬಲೇಶ್ವರ ಭಟ್ಟ ಅವರ ಜೀವನದ ಮುಖ್ಯ ಪರಿಚಯ

| | | |
|---|---|---|
| ಹೆಸರು | : | ಟಿ. ಮಹಾಬಲೇಶ್ವರ ಭಟ್ಟ |
| ಜನನ | : | ೮-೯-೧೯೨೮ |
| ಜನ್ಮಸ್ಥಳ | : | ತೊರೆಮನೆ, ಸಾಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ |
| ತಂದೆ | : | ಶ್ರೀ ವಿಶ್ವನಾಥ ಭಟ್ಟ |
| ತಾಯಿ | : | ಶ್ರೀಮತಿ ವೆಂಕಮ್ಮ |
| ಪತ್ನಿ | : | ಶ್ರೀಮತಿ ಪದ್ಮಾವತಿ |
| ಮಕ್ಕಳು | : | ಗೀತಾ, ಪುಷ್ಪಾ, ವಿಶ್ವನಾಥ, ಶ್ರೀನಾಥ, ರೋಹಿಣಿ, ಭಾಗ್ಯ, ತಿಮ್ಮಪ್ಪ. |
| ಅಧ್ಯಯನ | : | ಎಸ್.ಎಸ್.ಎಲ್.ಸಿ |
| ೧೯೪೬ | : | ಅಖಿಲ ಭಾರತ ಕಾಂಗ್ರೆಸ್ ಪಕ್ಷದ ಪ್ರಾಥಮಿಕ ಹಾಗೂ ಸಕ್ರಿಯ ಸದಸ್ಯರಾಗಿ ೪೩ ವರ್ಷಗಳ ಕಾಲ ಒಂದೇ ಪಕ್ಷದಲ್ಲಿ ನಮ್ರ ಸೇವೆ. ಈಗ ಯಾವುದೇ ರಾಜಕೀಯ ಪಕ್ಷದಲ್ಲೂ ಇಲ್ಲದೇ, ಸಾಹಿತ್ಯ ಹಾಗೂ ಸಾಮಾಜಿಕ ಸೇವೆ. |
| ೧೯೪೭ | : | ಸ್ವಂತ ಪುಸ್ತಕ ಪ್ರಕಾಶನ ಸಂಸ್ಥೆ, ಜಲಂಧರ ಪ್ರಕಟನಾಲಯ ಆರಂಭ. |
| ೧೯೪೮ | : | ಸಾಹಿತ್ಯ ಕೃತಿಗಳನ್ನು ಕುರಿತು ಪ್ರತ್ಯೇಕ ವಿವರಗಳನ್ನು ಕೊಟ್ಟಿದೆ. |

೧೯೪೯ : ಕನ್ನಡ ಸಾಹಿತ್ಯ ಪರಿಷತ್ತಿನ ಕವಿಗೋಷ್ಠಿಯಲ್ಲಿ ಪ್ರಥಮವಾಗಿ ಭಾಗವಹಿಸಿದ್ದು.

೧೯೫೩ : ಸಾಗರ ಪುರಸಭೆಯ ಸದಸ್ಯರಾಗಿ ಮೂರು ಬಾರಿ ಆಯ್ಕೆಯಾಗಿ ಒಂಭತ್ತು ವರ್ಷಗಳ ಕಾಲ ಸೇವೆ

೧೯೫೮ : ಮೈಸೂರು ಆಕಾಶವಾಣಿಯಲ್ಲಿ ಪ್ರಥಮ ಭಾಷಣ

೧೯೫೯ : ಸಾಗರ ತಾಲ್ಲೂಕು ಕಾಂಗ್ರೆಸ್ ಪಕ್ಷದ ಪ್ರಧಾನ ಕಾರ್ಯದರ್ಶಿಯಾಗಿ ಆಯ್ಕೆ, ಹಾಗೂ ಶಿವಮೊಗ್ಗ ಜಿಲ್ಲಾ ಕಾಂಗ್ರೆಸ್ ಸಮಿತಿಗೂ ಆಯ್ಕೆ.

೧೯೬೧ : ರಾಜ್ಯ ಮಟ್ಟದ ಸಮಿತಿಯಾದ ಶರಾವತಿ ನೀರು ಮುಳುಗಡೆ ಪುನರ್‌ವಸತಿ ಸಮಿತಿಗೆ ರಾಜ್ಯ ಸರ್ಕಾರದ ಪ್ರತಿನಿಧಿಯಾಗಿ ಆರು ವರ್ಷಗಳ ಕಾಲ ಸೇವೆ.

೧೯೬೧ : ಶಿವಮೊಗ್ಗ ಜಿಲ್ಲಾ ಬರಹಗಾರ ಮಂಡಳಿಯ ಅಧ್ಯಕ್ಷ ಎಂಟು ವರ್ಷಗಳ ಕಾಲ.

೧೯೬೨ : ಮಲೆನಾಡು ಅಡಿಕೆ ಮಾರಾಟದ ಸಹಕಾರ ಸಂಘ, ಶಿವಮೊಗ್ಗ, ಇದರ ನಿರ್ದೇಶಕರಾಗಿ ಸತತ ಇಪ್ಪತ್ತೊಂದು ವರ್ಷಗಳ ಕಾಲ ಸೇವೆ.

೧೯೬೮ : ಕಲೆ, ಸಾಹಿತ್ಯ, ಸಂಸ್ಕೃತಿ, ನಾಟಕ, ಸಂಗೀತ ಇದರ ಅಭಿವೃದ್ಧಿಗಾಗಿ ಹಾಗೂ ವಿಕಾಸಕ್ಕಾಗಿ ಸ್ಥಾಪನೆಯಾದ ಕನ್ನಡ ಸಂಘದ ಅಧ್ಯಕ್ಷರಾಗಿ ಎಂಟು ವರ್ಷಗಳ ಕಾಲ ಕೆಲಸ.

೧೯೬೯ : ಸಾಗರ ತಾಲ್ಲೂಕು ಕಾಂಗ್ರೆಸ್ ಸಮಿತಿ ಅಧ್ಯಕ್ಷರಾಗಿ ಐದು ವರ್ಷಗಳ ಕೆಲಸ.

೧೯೭೪ : ಸಾಗರ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘದ ಅಧ್ಯಕ್ಷರಾಗಿ ಆರು ವರ್ಷಗಳ ಕಾಲ ಕೆಲಸ. ಹಾಗೆಯೇ ಸಾಗರ ಕೃಷಿ ಭೂ ಅಭಿವೃದ್ಧಿ ಬ್ಯಾಂಕಿನ ಅಧ್ಯಕ್ಷರಾಗಿ ಐದು ವರ್ಷಗಳ ಕಾಲ ಕೆಲಸ.

೧೯೭೬ : ಶಿವಮೊಗ್ಗದಲ್ಲಿ ನಡೆದ ಅಖಿಲ ಭಾರತ ೪೯ನೇ ಕನ್ನಡ ಸಾಹಿತ್ಯ ಸಮ್ಮೇಳನದ ಸ್ವಾಗತ ಸಮಿತಿಯ ಉಪಾಧ್ಯಕ್ಷ.

| | | |
|---|---|---|
| | | ಸಾಗರ ವ್ಯವಸಾಯೋತ್ಪನ್ನ ಮಾರುಕಟ್ಟೆ ಸಮಿತಿಗೆ ಸದಸ್ಯರಾಗಿ ಸರ್ಕಾರದಿಂದ ನೇಮಕ, ಮೂರು ವರ್ಷಗಳಕಾಲ |
| ೧೯೭೭ | : | ಆರು ವರ್ಷಗಳ ಕಾಲ ಮಲೆನಾಡು ಅಡಿಕೆ ಮಾರಾಟದ ಸಹಕಾರ ಸಂಘ ಶಿವಮೊಗ್ಗ, ಇದರ ಉಪಾಧ್ಯಕ್ಷರಾಗಿ ಸೇವೆ. |
| ೧೯೭೮ | : | ೫೦ನೇ ವರ್ಷದ ಹುಟ್ಟು ಹಬ್ಬದಲ್ಲಿ ತಾಲ್ಲೂಕಿಗೆ, ಸಾಹಿತ್ಯ, ಸಂಸ್ಕೃತಿ, ಕಲೆ ಬಗ್ಗೆ ಸತತವಾಗಿ ನಡೆಸಿದ ಸೇವೆಗಾಗಿ, ಸಾಗರ ಪ್ರಾಂತ್ಯ ಮಹಾ ಜನತೆಯಿಂದ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಹಂ.ಪಾ. ನಾಗರಾಜಯ್ಯನವರ ಅಧ್ಯಕ್ಷತೆಯಲ್ಲಿ ಸಾಗರ ಪುರಸಭಾ ಬಯಲು ರಂಗಮಂದಿರಲ್ಲಿ 'ಸನ್ಮಾನ' ಹಾಗೂ 'ಮಹಾನಂದ' ಅಭಿನಂದನಾ ಗ್ರಂಥ ಅರ್ಪಣೆ. |
| ೧೯೮೦ | : | ಮಲೆನಾಡು ಅಭಿವೃದ್ಧಿ ಪ್ರತಿಷ್ಠಾನದ ಉಪಾಧ್ಯಕ್ಷರಾಗಿ ಆಯ್ಕೆ, ೧೬ ವರ್ಷಗಳ ಕಾಲ. |
| ೧೯೮೦ | : | ಸಾಗರದಲ್ಲಿ ನಡೆದ ಶಿವಮೊಗ್ಗ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ಸ್ವಾಗತ ಸಮಿತಿ ಅಧ್ಯಕ್ಷ. |
| ೧೯೮೦ | : | ಇಕ್ಕೇರಿ ವಿದ್ಯಾ ಸಂಸ್ಥೆಯ ಅಧ್ಯಕ್ಷರಾಗಿ, ಆರು ವರ್ಷಗಳ ಕಾಲಸೇವೆ. |
| ೧೯೮೪ | : | ಶಿವಮೊಗ್ಗ ಜಿಲ್ಲಾ ಕಾಂಗ್ರೆಸ್ ಸಮಿತಿ ಉಪಾಧ್ಯಕ್ಷರಾಗಿ ಕೆಲಸ, ಆರು ವರ್ಷಗಳ ಕಾಲ. |
| ೧೯೮೮ | : | ಮಲೆನಾಡು ಅಭಿವೃದ್ಧಿ ಪ್ರತಿಷ್ಠಾನದ ಬೆಳ್ಳಿ ಹಬ್ಬದ ಕಾರ್ಯಾಧ್ಯಕ್ಷರಾಗಿ ಕಾರ್ಯ ನಿರ್ವಹಣೆ. |
| ೧೯೭೬-೮೮ | : | 'ಆರಾಧನೆ' ಮತ್ತು 'ಸಂಭ್ರಮ' ಸ್ಮರಣ ಸಂಚಿಕೆ. ಸಂಪಾದಕ ಹಾಗೂ ಪ್ರಧಾನ ಸಂಪಾದಕರಾಗಿ ಕೆಲಸ. |
| ೧೯೯೨ | : | ಸಾಗರ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಆಯ್ಕೆ, ಅಂದಿನಿಂದ ಇಂದಿನ ತನಕ. |
| ೧೯೯೬ | : | ಬೆಂಗಳೂರಿನ ಸಂಯುಕ್ತ ಕರ್ನಾಟಕ ಪತ್ರಿಕೆಗೆ 'ಬೇವು - ಬೆಲ್ಲ' ಅಂಕಣಕಾರ, ಶಿವಮೊಗ್ಗೆಯ ಜನವಾರ್ತೆ ಪತ್ರಿಕೆಗೆ |

'ಸಮ್ಮೋದನೆ' ಅಂಕಣಕಾರರಾಗಿ, ನಾನಾ ವಿಚಾರಗಳನ್ನು ಕುರಿತು ಬರವಣಿಗೆ.

೧೯೯೬ : ಭಾರತೀಯ ವಿದ್ಯಾಭವನ ಶಿವಮೊಗ್ಗ ಕೇಂದ್ರದ ಉಪಾಧ್ಯಕ್ಷ.

೧೯೯೭ : ತಾಳಗುಪ್ಪಾದಲ್ಲಿ ನಡೆಯುವ ಅಖಿಲ ಕರ್ನಾಟಕ ಸಮಗ್ರ ಯಕ್ಷಗಾನ ಸಮ್ಮೇಳನದ ಸ್ವಾಗತ ಸಮಿತಿಯ ಕಾರ್ಯಾಧ್ಯಕ್ಷ.

ಇತರೆ : ನಾಡಿನ, ದಿನಪತ್ರಿಕೆ, ವಾರಪತ್ರಿಕೆ, ಮಾಸಪತ್ರಿಕೆಗಳಲ್ಲಿ ಮುನ್ನೂರಕ್ಕೂಹೆಚ್ಚು ಲೇಖನಗಳು ಪ್ರಕಟಿತ.

## ಟಿ. ಮಹಾಬಲೇಶ್ವರ ಭಟ್ಟರ ಸಾಹಿತ್ಯ ಕೃತಿಗಳು

| | | |
|---|---|---|
| ೧. | ಗುಲಾಬಿ | ಕಥಾಸಂಕಲನ |
| ೨. | ತೋರಣ | ಕಥಾಸಂಕಲನ |
| ೩. | ಹೂಮಾಲೆ | ಕವನಸಂಕಲನ |
| ೪. | ಹೊಸೂರಿನ ಹಲವರು | ಜನಜೀವನ ಚಿತ್ರಣ |
| ೫. | ಮೈಸೂರಿನ ಉಕ್ಕಿನ ಮನುಷ್ಯ | ಜೀವನ ಪರಿಚಯ |
| ೬. | ಸಾಹಿತ್ಯ ಶಿಲ್ಪಿಗಳು ಭಾಗ-೧ | ಸಾಹಿತಿಗಳ ಪರಿಚಯ |
| ೭. | ಸಾಹಿತ್ಯ ಶಿಲ್ಪಿಗಳು ಭಾಗ-೨ | ಸಾಹಿತಿಗಳ ಪರಿಚಯ |
| ೮. | ಋತುಗಾನ | ಕವನ ಸಂಗ್ರಹ |
| ೯. | ಅಣ್ಣ-ತಂಗಿ | ಕಾದಂಬರಿ |
| ೧೦. | ವ್ಯಾಘ್ರಮುಖ | ಕಾದಂಬರಿ |
| ೧೧. | ಮಾನವ ರಾಕ್ಷಸರು | ಕಾದಂಬರಿ |
| ೧೨. | ಕನ್ನಡಕುಲದೀಪಕರು | ಸಾಹಿತಿಗಳ ಪರಿಚಯ |
| ೧೩. | ನನ್ನ ಬದುಕು | ಜೀವನ ಚಿತ್ರ (ಅಚ್ಚಿನಲ್ಲಿ) |

**ಸಂಪಾದನೆ :**

**ಸಂಭ್ರಮ : ಪ್ರಧಾನ ಸಂಪಾದಕ** **ಆರಾಧನೆ : ಸಂಪಾದಕ**

**ಟಿ. ಮಹಾಬಲೇಶ್ವರ ಭಟ್ಟರನ್ನು ಕುರಿತು ಅಭಿನಂದನ ಗ್ರಂಥಗಳು :**

ಮಹಾನಂದ : ೧೯೭೮, ಐವತ್ತನೇ ವರ್ಷದ ಹುಟ್ಟುಹಬ್ಬದ ಸಂದರ್ಭದಲ್ಲಿ.

ಮಹಾಬಲ : ೧೯೯೭, ಎಪ್ಪತ್ತನೇ ವರ್ಷದ ಹುಟ್ಟುಹಬ್ಬದ ಸಂದರ್ಭದಲ್ಲಿ.

# ಲೇಖಕರ ವಿಳಾಸಗಳು

೧. **ಡಾ. ಕೆ. ಶಿವರಾಮ ಕಾರಂತ**
ಅಂಚೆ : ಸಾಲಿಗ್ರಾಮ
ಉಡುಪಿ ತಾಲ್ಲೂಕು
ದ.ಕ. ಜಿಲ್ಲೆ - ೫೭೬ ೨೨೫

೨. **ಶ್ರೀ ಗೊ.ರು. ಚನ್ನಬಸಪ್ಪ**
೨೮೧೬, 'ಗ್ರಾಮಜ್ಯೋತಿ'
ದಕ್ಷಿಣಾಂತ್ಯ, 'ಎ' ರಸ್ತೆ
೯ನೇ ವಿಭಾಗ, ಜಯನಗರ
ಬೆಂಗಳೂರು - ೫೬೦ ೦೬೯

೩. **ಡಾ॥ ಹಂಪಾ. ನಾಗರಾಜಯ್ಯ**
೧೦೭೯, ೪ನೇ ವಿಭಾಗ,
ರಾಜಾಜಿ ನಗರ
ಬೆಂಗಳೂರು - ೫೬೦ ೦೧೦

೪. **ಪ್ರೊ. ಎಸ್. ಆರ್ ಮಳಗಿ**
೧೦-ಬಿ, ೧ನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು - ೫೬೦ ೦೧೦

೫. **ಶ್ರೀ ಕಯ್ಯಾರ ಕಿಞ್ಞಣ್ಣರೈ**
ಪೆರಡಾಲ - ೬೭೧ ೫೫೧
ಕಾಸರಗೋಡು

೬. **ಶ್ರೀ ಕೆ. ವಾಸುದೇವ ಆಚಾರ್**
'ಗೌರಿ ಕೃಪ', ೧ನೇ ತಿರುವು,
ಪಾರ್ಕ್ ಬಡಾವಣೆ
ಶಿವಮೊಗ್ಗ - ೫೭೭ ೨೦೧

೭. **ಶ್ರೀ ಗರುಡನಗಿರಿ ನಾಗರಾಜ್**
ಪತ್ರಕರ್ತ - ಲೇಖಕ
'ಬೆನಕ' ನಂ. ೨, ೨ನೇ ಮುಖ್ಯ ರಸ್ತೆ
ಜೆ.ಪಿ. ನಗರ ೩ನೇ ಹಂತ
ಬೆಂಗಳೂರು - ೫೬೦ ೦೭೮

೮. **ಶ್ರೀ ಟಿ.ಕೆ. ಮುಹಮೂದ್**
'ಆಜಾದ್ ಮಹಲ್'
ಅಂಚೆ ಪೆಟ್ಟಿಗೆ ನಂ. ೨೫
ಸಿದ್ದಾಪುರ - ೫೮೧ ೩೫೫
ಉ.ಕ. ಜಿಲ್ಲೆ.

೯. **ಶ್ರೀಮತಿ ಪ್ರೇಮಾಭಟ್**
'ಶ್ರೀ ಗುರು ಪ್ರಸಾದ್'
೮೪೫, ೪ನೇ ಮುಖ್ಯ ರಸ್ತೆ
ವಿಜಯನಗರ
ಬೆಂಗಳೂರು - ೫೬೦ ೦೪೦

೧೦. **ಶ್ರೀ ಹೆಚ್.ವಿ. ನಾಗರಾಜನ್**
ನಂ. ೩೨೬, ಬೋಗಾದಿ ೨ನೇ ಹಂತದ
ಮುಖ್ಯ ರಸ್ತೆ, ಬೋಗಾದಿ ಬಡಾವಣೆ
ಮೈಸೂರು - ೫೭೦ ೦೦೬

೧೧. **ಪ್ರೊ. ಅ.ರಾ. ಮಿತ್ರ**
೫೧- ಮಂಜುನಾಥ ನಿಲಯ
೮ನೇ ಕ್ರಾಸ್, ಮಹಾಲಕ್ಷ್ಮಿಲೇಔಟ್
ಫರ್ದರ್ ಎಕ್ಸ್‌ಟೆನ್‌ಷನ್
ಬೆಂಗಳೂರು - ೫೬೦ ೦೮೬

೧೨. **ಟಿ.ಎಂ. ಸುಬ್ಬರಾಯ**
ಗೋಖಲೆ ಬಿಲ್ಡಿಂಗ್ಸ್
ಚೌಕಿಮಠ - ಶಿರಸಿ (ಉ.ಕ)

೧೩. **ಡಾ॥ ಎಸ್.ಪಿ. ಪದ್ಮಪ್ರಸಾದ್**
ಪ್ರಾಂಶುಪಾಲರು
ಟಿ.ವಿ.ವಿ. ಶಿಕ್ಷಣ ಮಹಾವಿದ್ಯಾಲಯ
ಮಧುಗಿರಿ - ೫೭೨ ೧೩೨
ತುಮಕೂರು ಜಿಲ್ಲೆ

೧೪. ಕೆಳದಿ ಗುಂಡಾಜೋಯಿಸ್
ಕೆಳದಿ - ೫೭೭ ೪೦೧
ಅಂಚೆ, ಕೆಳದಿ - ಸಾಗರ ತಾಲ್ಲೂಕು

೧೫. ಕೆ.ಆರ್. ಲಿಂಗಪ್ಪ
ಅಡ್ವೋಕೇಟ್
ತರೀಕೆರೆ - ೫೭೭ ೨೨೮

೧೬. ಡಾ॥ ದೊಡ್ಡೇರಿ ವೆಂಕಟಗಿರಿರಾವ್
ದೊಡ್ಡೇರಿ
ಅಂಚೆ - ಉಳವಿ - ಸೊರಬ ತಾಲ್ಲೂಕು

೧೭. ಡಾ. ಕಮಲಾ ಹಂಪನಾ
೧೦೭೬, ನಾಲ್ಕನೇ ವಿಭಾಗ
ರಾಜಾಜಿನಗರ
ಬೆಂಗಳೂರು - ೫೬೦ ೦೨೪

೧೮. ಚದುರಂಗ
೨೮೨೩, ೮ನೇ ತಿರುವು
ವಿ.ವಿ. ಮೊಹಲ್ಲಾ
ಮೈಸೂರು - ೫೭೦ ೦೦೨

೧೯. ಮಾವಿನಕುಳಿ ಶ್ರೀನಿವಾಸ
೧೨೭, 'ವಿಶ್ವಮಿತ್ರ'
೩ನೇ ಮುಖ್ಯರಸ್ತೆ
೨ನೇ ಅಡ್ಡರಸ್ತೆ, 'ಹೆಚ್' ಬಡಾವಣೆ
ರಾಮಕೃಷ್ಣನಗರ
ಮೈಸೂರು - ೫೭೦ ೦೨೩

೨೦. ಶಾ. ಮಂ. ಕೃಷ್ಣರಾವ್
ಎ.೪, ಜನತಾ ಕ್ವಾರ್ಟರ್ಸ್
ಬೇಯಿನ್ - ವಾಸ್ಕೋ
ಗೋವಾ - ೪೦೩ ೮೦೨

೨೧. ವ್ಯಾಸರಾಯ ಬಲ್ಲಾಳ
'ಉತ್ತರಾಯಣ'
ನಂ. ೧೦೬೪,
ಕುಮಾರ ಸ್ವಾಮಿ ಬಡಾವಣೆ
೧ನೇ ಹಂತ, ಬೆಂಗಳೂರು - ೭೮

೨೨. ಡಾ॥ ಪು.ತಿ. ನರಸಿಂಹಾಚಾರ್
೫೭೮, ೧೧ನೇ ಮೇಯಿನ್
೪ನೇ ಬ್ಲಾಕ್, ಜಯನಗರ
ಬೆಂಗಳೂರು - ೫೬೦ ೦೪೧

೨೩. ಶ್ರೀಮತಿ ರೋಹಿಣಿ ಎಸ್. ಶರ್ಮಾ
ತ್ಯಾಗರಾಜ ವಿಸ್ತರಣೆ
ಅಜ್ಜಂಪುರ - ೫೭೭ ೫೪೭
ತರೀಕೆರೆ ತಾಲ್ಲೂಕು

೨೪. ಮೋಹನ. ಗ. ಹೆಗಡೆ
ಬಂದಗದ್ದೆ
ಅಂಚೆ- ಕೆಳದಿ - ೫೭೭ ೪೦೧
ಸಾಗರ ತಾಲ್ಲೂಕು

೨೫. ಗೋಪಾಲ ಕೃಷ್ಣ ಹೆಗಡೆ
ಕೇರಿಮನೆ
ಅಂಚೆ - ಬೊಮ್ಮನಹಳ್ಳಿ
ಶಿರಸಿ - ೫೮೧ ೪೦೨ (ಉ.ಕ)

೨೬. ಟಿ.ಎಲ್. ಸುಬ್ರಹ್ಮಣ್ಯ ಅಡಿಗ
'ಅರವಿಂದಾಲಯ'
ಅರಳ ಸುರಳಿ - ೫೭೭ ೪೧೪
ತೀರ್ಥಹಳ್ಳಿ ತಾಲ್ಲೂಕು

೨೭. ಪ್ರೊ. ಎಲ್.ಎಸ್. ಶೇಷಗಿರಿರಾವ್
'ಜ್ಯೋತಿ', ೧೬೭, ೩ನೇ ಬ್ಲಾಕ್
ಜಯನಗರ, ಬೆಂಗಳೂರು - ೧೧

೨೮. **ಬೇಡರೆಡ್ಡಿಹಳ್ಳಿ ಪಂಪಣ್ಣ**
ನಂ. ೨೬೫/೧ 'ಮಾರ್ಬಲ್‌ವಿಲ್ಲಾ'
೧೧ನೇ ಮುಖ್ಯ ರಸ್ತೆ
೨ನೇ ಅಡ್ಡರಸ್ತೆ, ಮತ್ತೀಕೆರೆ,
ಬೆಂಗಳೂರು - ೫೬೦ ೦೫೪

೨೯. **ಬಿ.ಪಿ. ಶಿವಾನಂದರಾವ್**
ಶಿಕ್ಷಕರು, ಗಿಬ್ ಹೈಸ್ಕೂಲ್
ಕುಮಟಾ - ೫೮೧ ೩೪೩

೩೦. **ವೇಣುಗೋಪಾಲ ಸೊರಬ**
ಸೊರಬ
(ದಿವಂಗತರಾಗಿದ್ದಾರೆ)

೩೧. **ಶ್ರೀ ನಾ.ಡಿಸೋಜ**
೧೫./೧೪, ೨ನೇ ಕ್ರಾಸ್
ನೆಹರೂ ನಗರ
ಸಾಗರ - ೫೭೭ ೪೦೧

೩೨. **ಶ್ರೀಮತಿ ಭುವನೇಶ್ವರಿ ಹೆಗಡೆ**
ರೀಡರ್ - ಅರ್ಥ ಶಾಸ್ತ್ರ ವಿಭಾಗ
ವಿಶ್ವವಿದ್ಯಾನಿಲಯ ಕಾಲೇಜ್
ಮಂಗಳೂರು (ದ.ಕ)

೩೩. **ಶ್ರೀ ಟಿ.ಎಂ. ಶೇಷಗಿರಿ**
ತುಮರಿ - ಅಂಚೆ- ತುಮರಿ
ಸಾಗರ - ೫೭೭ ೪೦೧
ಶಿವಮೊಗ್ಗ ಜಿಲ್ಲೆ

೩೪. **ಪ್ರೊ. ಟಿ. ಕೇಶವಭಟ್ಟ. ವಿದ್ವಾನ್**
೭೫೪, 'ಶ್ರೀ ವರ್ಧನ'
೧೫ನೇ ಮುಖ್ಯ ರಸ್ತೆ
ಬನಶಂಕರಿ ೨ನೇ ಹಂತ
ಬೆಂಗಳೂರು - ೫೬೦ ೦೭೦

೩೫. **ಶ್ರೀ. ವೈ.ಕೆ. ತಿಮ್ಮರಸಯ್ಯ**
ರಥಬೀದಿ, ತೀರ್ಥಹಳ್ಳಿ-೫೭೭ ೪೩೨
ಶಿವಮೊಗ್ಗ ಜಿಲ್ಲೆ

೩೬. **ಶ್ರೀ ರಾಧಾಕೃಷ್ಣ ಎಸ್.ಭಡ್ತಿ**
ಕರ್ಕಿಕೊಪ್ಪ
ಅಂಚೆ : ಯಡಜಿಗಳೆ ಮನೆ
ಸಾಗರ ತಾಲ್ಲೂಕು

೩೭. **ವಿದ್ವಾನ್ ವಿ.ಎನ್. ಭಟ್**
ಸಂಸ್ಕೃತ ಪ್ರಾಧ್ಯಾಪಕರು
ಸಹ್ಯಾದ್ರಿ ಆರ್ಟ್ಸ್ ಕಾಲೇಜ್
ಕುವೆಂಪು ವಿಶ್ವವಿದ್ಯಾನಿಲಯ
ಶಿವಮೊಗ್ಗ - ೫೭೭ ೨೦೩

೩೮. **ಶ್ರೀ ಡಿ. ನಾಗೇಂದ್ರಪ್ಪ**
ಸಹಾಯಕ ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ಕಲಾಮಂದಿರ - ಮೈಸೂರು

೩೯. **ವಿಲಿಯಂ**
೧೫/೧೩ ೨ನೇತಿರುವು
ನೆಹರೂ ನಗರ
ಸಾಗರ ೫೭೭ ೪೦೧

೪೦. **ಎನ್. ಹುಚ್ಚಪ್ಪಮಾಸ್ತರ್**
ಚೂರಿ ಕಟ್ಟೆ - ಹೆಲಿಪ್ಯಾಡ್ ಹತ್ತಿರ
ಹಿರೇಮನೆ ೫೭೭ ೪೩೦
ಸಾಗರ ತಾಲ್ಲೂಕು

೪೧. **ನಾರಾಯಣ ಎಸ್. ಹೆಗಡೆ**
ಕುಂದರಗಿ
ಅಂಚೆ-ಕುಂದರಗಿ-೫೮೧ ೪೦೨
ಯಲ್ಲಾಪುರ - ಉ.ಕ.

೪೨. **ಎಲ್.ಟಿ. ತಿಮ್ಮಪ್ಪ ಹೆಗಡೆ**
ಕಾನುಕೊಪ್ಪ
ಅಂಚೆ :ಎಂ.ಎಲ್.ಹಳ್ಳಿ - ೫೭೭ ೪೩೪
ಸಾಗರ ತಾಲ್ಲೂಕು

೪೩. **ಬಂಜಗೆರೆ ವಿ. ಟಿ. ಸ್ವಾಮಿ**
ಕಳೂರು
ಅಂಚೆ-ತುಮರಿ ೫೭೭ ೪೦೧
ಸಾಗರ ತಾಲ್ಲೂಕು

೪೪. **ಬಿ.ಹೆಚ್. ಚಂದ್ರಶೇಖರ್**
ಬೇಳೂರು
ಅಂಚೆ-ಬೆಳೆಯೂರು
ಸಾಗರ ತಾಲ್ಲೂಕು ೫೭೭ ೪೦೧

೪೫. **ಕೆ.ಈ. ಪ್ರಕಾಶಕುಗ್ವೆ**
ಅಂಚೆ - ಕುಗ್ವೆ
ಸಾಗರ ತಾಲ್ಲೂಕು - ೫೭೭ ೪೦೧

೪೬. **ರವೀಂದ್ರ ಭಟ್ಟ ಕುಳಿಬೀಡು**
ಉಪನ್ಯಾಸಕರು - ಅಗ್ರಹಾರ
ಸಾಗರ - ೫೭೭ ೪೦೧

೪೭. **ಕೆ.ಡಿ. ಕೃಷ್ಣಮೂರ್ತಿ**
ಕನ್ನಡ ಉಪನ್ಯಾಸಕ
ಸರ್ಕಾರಿ ಪದವಿ ಪೂರ್ವ ಕಾಲೇಜು
ಸಾಗರ ೫೭೭ ೪೦೧

೪೮. **ಸಾ.ಕೆ. ಸುರೇಶ**
ಶಿಕ್ಷಕರು 'ಶ್ರೀಧರ ನಿಲಯ'
ಮಾಯಾಬಜಾರ್ - ೨ನೇ ತಿರುವು
ಸಾಗರ - ೫೭೭ ೪೦೧

೪೯. **ಬಿ. ನಾಗೇಶರಾವ್**
ಉಪನ್ಯಾಸಕರು
ಸರ್ಕಾರಿ ಪದವಿ ಪೂರ್ವ ಕಾಲೇಜು
ಸಾಗರ - ೫೭೭ ೪೦೧

೫೦. **ಶ್ರೀ ಎಂ. ವಿ. ರಾಜಣ್ಣವರ**
ಮನೆ ನಂ. ೬/೧, ಅಗ್ರಹಾರ
ಸಾಗರ - ೫೭೭ ೪೦೧

೫೧. **ಡಾ || ಜಯಪ್ರಕಾಶಮಾವಿನಕುಳಿ**
ಹಿರಿಯ ಉಪನ್ಯಾಸಕರು
ಶ್ರೀ ಮಹಾವೀರ ಕಾಲೇಜು
ಮೂಡಬಿದ್ರೆ - ದ.ಕ. ೫೭೪ ೧೯೭

೫೨. **ಪ್ರೊ. ಕೆ.ಎಸ್. ನಿಸಾರ್ ಅಹಮದ್**
೩೪೧, 'ಹಮೀದ ಹೈದರ್'
೩ನೇ ಕ್ರಾಸ್, ಪದ್ಮನಾಭನಗರ
ಬೆಂಗಳೂರು - ೫೬೦ ೦೭೦

೫೩. **ಶ್ರೀ ವಂದಗದ್ದೆ ಚಂದ್ರಮೌಳಿ**
ಉಪನ್ಯಾಸಕರು
ಸರ್ಕಾರಿ ಮಹಿಳಾ ಪದವಿ ಪೂರ್ವ
ಕಾಲೇಜು - ಸಾಗರ - ೫೭೭ ೪೦೧

೫೪. **ಶ್ರೀ ಗಣಪತಿ ಶಿರಳಗಿ**
'ಶ್ರೀಹರಿ' ಅಣಲೆಕೊಪ್ಪ ಬಡಾವಣೆ
ಸಾಗರ ೫೭೭ ೪೦೧

೫೫. **ಶ್ರೀ ಕೆ. ಜಗನ್ನಾಥ ಶಾಸ್ತ್ರಿ**
'ಶ್ರೀ ಕೃಪಾ'
೧ ನೇ ತಿರುವು, ಅಶೋಕನಗರ
ಶಿವಮೊಗ್ಗ - ೫೭೭ ೨೦೧

೫೬. **ಶ್ರೀ ನೀ.ನಾ. ಮಧ್ಯಸ್ಥ**
ನಿವೃತ್ತ ಕನ್ನಡ ಪಂಡಿತರು
೧ನೇ ತಿರುವು, ವಿನೋಬಾನಗರ
ಸಾಗರ – ೫೭೭ ೪೦೧

೫೭. **ಶ್ರೀ ಹೊಸಬಾಳೆ ಸೀತಾರಾಮರಾವ್**
ನಂ. ೩೪, ಅಂಚೆ : ಹೊಸಬಾಳೆ
ಸೊರಬ ತಾಲ್ಲೂಕು ೫೭೭ ೪೩೪

೫೮. **ಶ್ರೀ ಬಂದಗದ್ದೆ ರಾಧಾಕೃಷ್ಣ**
ಬಂದಗದ್ದೆ, ಅಂಚೆ : ಕೆಳದಿ
ಸಾಗರ – ೫೭೭ ೪೦೧

೫೯. **ಪ್ರೊ. ವಸಂತ ಕುಷ್ಟಗಿ**
ಎಂ. ಐ.ಜಿ. ೨೬, ಹುಡ್ಕೋ ಮನೆ
ಆದರ್ಶನಗರ, ೧ನೇ ಹಂತ, ಬಡೇಪುರ
ಕಾಲೋನಿ,ಕಲಬುರಗಿ – ೫೮೫ ೧೦೫

೬೦. **ಶ್ರೀ ಗಣಪತಿ ವರ್ಧನ್**
ಕರ್ನಾಟಕ ಬ್ಯಾಂಕ್ ಲಿ
ಅಶೋಕ ರಸ್ತೆ
ಸಾಗರ – ೫೭೭ ೪೦೧

೬೧. **ಶ್ರೀ ಕೆ. ಶಾಮರಾವ್**
ವ್ಯವಸ್ಥಾಪಕ ಸಂಪಾದಕರು
ಸಂಯುಕ್ತ ಕರ್ನಾಟಕ, ನಂ. ೭,
ಫೀಲ್ಡ್ ಮಾರ್ಷಲ್ ಕಾರಿಯಪ್ಪ ರಸ್ತೆ
ಬೆಂಗಳೂರು – ೫೬೦ ೦೨೫

೬೨. **ಡಾ॥ ಸಾ.ಶಿ. ಮರುಳಯ್ಯ**
'ರಾಗಿಣಿ' ಸರ್ವೀಸ್ ರಸ್ತೆ
ವಿಜಯನಗರ ೨ನೇ ಹಂತ
ಬೆಂಗಳೂರು – ೫೬೦ ೦೪೦

೬೩. **ಡಾ॥ ತೀ.ನಂ. ಶಂಕರನಾರಾಯಣ**
ಕನ್ನಡ ಪ್ರಾಧ್ಯಾಪಕ
ಕುವೆಂಪು ವಿಶ್ವವಿದ್ಯಾನಿಲಯ
ಶಂಕರ ಘಟ್ಟ – ೫೭೭ ೪೫೧
ಶಿವಮೊಗ್ಗ ಜಿಲ್ಲೆ

೬೪. **ಶ್ರೀ ಕೈ.ರಾ. ಸುಬ್ಬರಾವ್**
ಹಿರಿಯ ಉಪನ್ಯಾಸಕರು
ಕೆ.ಇ.ಬಿ. ಪದವಿಪೂರ್ವ ಕಾಲೇಜು
ಜೋಗ್ ಜಲಪಾತ – ೫೭೭ ೪೩೫
ಶಿವಮೊಗ್ಗ ಜಿಲ್ಲೆ

೬೫. **ಕು. ಬಿ.ಆರ್. ವಾಸಂತಿ**
ಅಧ್ಯಾಪಕಿ
ಎಂ. ಜಿ. ಎನ್. ಪೈ. ಪ್ರೌಢ ಶಾಲೆ
ಸಾಗರ – ೫೭೭ ೪೦೧

೬೬. **ಶ್ರೀ ಎಸ್.ಬಿ. ಮಹದೇವ್**
ಮಾರ್ಕೆಟ್ ರಸ್ತೆ
ಸಾಗರ – ೫೭೭ ೪೦೧

೬೭. **ಶ್ರೀ ವಿ.ಎಂ. ಶರ್ಮಾ**
ಕನ್ನಡ ಉಪನ್ಯಾಸಕರು
ಲಾಲ್‌ಬಹದ್ದೂರ್ ಕಾಲೇಜು
ಸಾಗರ – ೫೭೭ ೪೦೧

೬೮. **ಶ್ರೀ ಎಸ್.ಬಿ. ಹೊಸಮನಿ**
ಪ್ರಾಚಾರ್ಯರು
ಸ. ಮಹಿಳಾ ಪದವಿ ಪೂರ್ವಕಾಲೇಜು
ಸಾಗರ – ೫೭೭ ೪೦೧

೬೯. **ಶ್ರೀ ಎಂ. ಹೆಚ್. ಶ್ರೀ ನರಹರಿ**
ಹರಿತ್ಸಾಗರ, ಇಂಗ್ಲೀಷ್ ವಿಭಾಗ
ಸರ್ಕಾರಿ ಪದವಿ ಪೂರ್ವ ಕಾಲೇಜು
ಸಾಗರ – ೫೭೭ ೪೦೧

೭೦ ಶ್ರೀ ವಿ. ಗಣೇಶ, ಉಪನ್ಯಾಸಕರು
ಚಾಮರಾಜ ಪೇಟೆ
ಸಾಗರ – ೫೭೭ ೪೦೧

೭೧. ಶ್ರೀ ಹೆಚ್. ಗಣಪತಿಯಪ್ಪ
ವಡ್ನಾಲ
ಅಂಚೆ – ಸಾಗರ – ೫೭೭ ೪೦೧

೭೨. ಆರ್.ಜಿ. ರಾಯಕರ
ಚನ್ನಪಟ್ಟಣಬಜಾರ್
ಶಿರಸಿ – ೫೮೧ ೪೦೧ (ಉ.ಕ)

೭೩. ಪಿ.ಆರ್. ತಿಪ್ಪೇಸ್ವಾಮಿ
ಕಲಾವಿದರು
೧೭೩, ರಾಮ ವಿಲಾಸ ರಸ್ತೆ
ಮೈಸೂರು – ೫೩೦ ೦೨೪

೭೪. ಪ್ರಕಾಶ್ ಆರ್. ಕಮ್ಮಾರ್
ನಂ. ೨೫/೧೦೫,
ಸರ್ಕಾರಿ ನೌಕರರ ಭವನದ ಹತ್ತಿರ
ಸಾಗರ – ೫೭೭ ೪೦೧

೭೫. ಶ್ರೀನಿವಾಸ ಉಡುಪ
'ಕಾದಂಬರಿ ಕಾರರು'
೬೪/೧, 'ವಿಜಯ ಲಕ್ಷ್ಮಿ'
ಅಗ್ರಹಾರದ ೧ ನೇ ಅಡ್ಡರಸ್ತೆ,
ಗಾಂಧಿನಗರ,ಸಾಗರ – ೫೭೭ ೪೦೧

೭೬. ಡಾ॥ ಮಲ್ಲಿಕಾ ಘಂಟಿ
ರೀಡರ್, ಕನ್ನಡ ಅಧ್ಯಯನ ಸಂಸ್ಥೆ
ಸ್ನಾತಕೋತ್ತರ ಕೇಂದ್ರ
ಕೃಷ್ಣದೇವರಾಯ ನಗರ
ಸೊಂಡೂರು – ೫೮೩ ೧೧೯

೭೭. ಡಾ॥ ಮಳಲಿ ವಸಂತಕುಮಾರ್
ಕನ್ನಡ ಪ್ರಾಧ್ಯಾಪಕರು
ಎಲ್.೨೦, ಮಾನಸ ಗಂಗೋತ್ರಿ
ಮೈಸೂರು – ೫೭೦ ೦೦೭

೭೮. ಡಾ॥ ಸುಶೀಲಾ ನೆಲ್ಲಿಸರ
ಕನ್ನಡ ಉಪನ್ಯಾಸಕಿ
ನ್ಯಾಷನಲ್ ಕಾಲೇಜು
ಬಿ.ಆರ್. ಪ್ರಾಜೆಕ್ಟ್
ಶಿವಮೊಗ್ಗ ಜಿಲ್ಲೆ

೭೯. ಡಾ॥ ಜಿ. ಎಂ. ಹೆಗಡೆ
೭ನೇ ತಿರುವು, ಕಲ್ಯಾಣ ನಗರ
ಧಾರವಾಡ – ೫೮೦ ೦೦೭

೮೦. ಆರ್. ಬಸವರಾಜ್
ನಿವೃತ್ತಕನ್ನಡ ಉಪನ್ಯಾಸಕರು
ಶಿವ ಟ್ರೇಡರ್ಸ್
ಚಿಕ್ಕನಾಯಕನಹಳ್ಳಿ ೫೭೨ ೨೧೪

೮೧. ಡಾ॥ ನಿಂಗಣ್ಣ ಸಣ್ಣಕ್ಕಿ
'ಶ್ರೀ ನೀಲಕಂಠ ನಿವಾಸ'
ಬಸವನಗರ – ಗೋಕಾಕ–೫೯೧೩೦೭

೮೨. ಡಾ॥ ಎಸ್.ಎಂ. ವೃಷಭೇಂದ್ರ ಸ್ವಾಮಿ
ಕರ್ನಾಟಕ ವಿಶ್ವವಿದ್ಯಾನಿಲಯ
ಧಾರವಾಡ – ೩

೮೩. ದು.ನಿಂ. ಬೆಳಗಲಿ
ವಿಶ್ವ ಕರ್ನಾಟಕ ಸಾಹಿತ್ಯ ಮಂಟಪ
'ಕಾದಂಬರಿ'
ಸೋಮವಾರ ಪೇಟೆ – ಬನಹಟ್ಟಿ
೫೮೭ ೩೧೧ (ಬಿಜಾಪುರ ಜಿಲ್ಲೆ)

೮೪. **ಡಾ॥ ಕೆಳದಿ ವೆಂಕಟೇಶ ಜೋಯಿಸ್**
ಕೆಳದಿ – ೫೭೭ ೪೦೧
ಕೆಳದಿ ಅಂಚೆ, ಸಾಗರ ತಾಲ್ಲೂಕು

೮೫. **ನಾ. ಸು. ಭರತನಹಳ್ಳಿ**
ಲೇಖಕ – ಪತ್ರ ಕರ್ತ
ಅಂಚೆ – ಕುಂದರಗಿ – ೫೮೧ ೪೦೨
ಸಿರ್ಸಿ ಮಾರ್ಗ, ಉತ್ತರ ಕನ್ನಡ

೮೬. **ವಿದ್ವಾನ್ ಎಸ್. ರಂಗನಾಥ ಶರ್ಮ**
೮೩೧, ೪ನೇ ಮುಖ್ಯ ರಸ್ತೆ
ವಿಜಯನಗರ
ಬೆಂಗಳೂರು – ೫೬೦ ೦೪೦

೮೭. **ಡಾ॥ ಅ. ಸುಂದರ**
ನಿರ್ದೇಶಕರು
ಕರ್ನಾಟಕ ವಿಶ್ವವಿದ್ಯಾನಿಲಯ
ಸ್ನಾತಕೋತ್ತರ ಕೇಂದ್ರ
ಸೊಲ್ಲಾಪುರ ರಸ್ತೆ, ಬಿಜಾಪುರ

೮೮. **ಡಾ॥ ಎಚ್.ಜೆ. ಲಕ್ಕಪ್ಪಗೌಡ**
ಪ್ರಾಧ್ಯಾಪಕರು, ಕನ್ನಡ ಭಾರತಿ
ಜ್ಞಾನ ಸಹ್ಯಾದ್ರಿ – ೫೭೭ ೪೫೧
ಶಿವಮೊಗ್ಗ ಜಿಲ್ಲೆ

೮೯. **ಪ್ರೊ. ಕು.ಶಿ. ಹರಿದಾಸಭಟ್ಟ**
ಮುಖ್ಯಸಂಯೋಜಕ
ಪ್ರಾದೇಶಿಕ ಜಾನಪದ ರಂಗಕಲೆಗಳ
ಅಧ್ಯಯನ ಕೇಂದ್ರ
ಎಂ.ಜಿ.ಎಂ. ಕಾಲೇಜು
ಉಡುಪಿ – ೫೭೬ ೧೦೨

೯೦. **ಶ್ರೀ ಹೆಚ್.ಎಲ್. ನಾಗೇಗೌಡ**
೮, ಸುಬ್ರಹ್ಮಣ್ಯ ಸ್ವಾಮಿ ದೇವಸ್ಥಾನದ
ರಸ್ತೆ, ೫ನೇ ಕ್ರಾಸ್, ೪ನೇ ಬ್ಲಾಕ್
ಕುಮಾರ ಪಾರ್ಕ್ ವೆಸ್ಟ್
ಬೆಂಗಳೂರು – ೫೬೦ ೦೨೦

೯೧. **ಶ್ರೀ ಮಾಸ್ಟರ್ ಹಿರಣ್ಣಯ್ಯ**
'ರಂಗಭೂಮಿ'
೯೭೯, ೧೩ನೇ ಅಡ್ಡರಸ್ತೆ,
ಬನಶಂಕರಿ ೨ನೇ ಅಡ್ಡರಸ್ತೆ
ಬನಶಂಕರಿ ೨ನೇ ಹಂತ
ಬೆಂಗಳೂರು – ೫೬೦ ೦೭೦

೯೨. **ಪ್ರೊ. ಜಿ. ವೆಂಕಟಸುಬ್ಬಯ್ಯ**
೫೮, ೩೧ ನೇ ಅಡ್ಡ ರಸ್ತೆ
೭ನೇ ಹಂತ, ಜಯನಗರ
ಬೆಂಗಳೂರು ೫೬೦ ೦೮೨

೯೩. **ಶ್ರೀ ಶಂ. ಪಾ. ದೈತೋಟ**
ಸಾಹಿತಿ ಹಾಗೂ ಪತ್ರಕರ್ತ
ಅಂಚೆ : ಪಾಣಾಜೆ – ೫೭೪ ೨೫೯
ದಕ್ಷಿಣ ಕನ್ನಡ

೯೪. **ಶ್ರೀ. ಕ. ಮ. ಶಿ. ಚಂದ್ರಶೇಖರಯ್ಯ**
'ಸೌಜನ್ಯ' ೧೬೮, ೨ನೇ ಹಂತ
ವಿನೋಬಾನಗರ
ಶಿವಮೊಗ್ಗ – ೫೭೭ ೨೦೧

೯೫. **ಶ್ರೀ ಟಿ. ಪಿ. ಅಶೋಕ**
ಅಗ್ರಹಾರ
ಸಾಗರ – ೫೭೭ ೪೦೧

೯೬. **ಶ್ರೀ ತಿರುಮಲಮಾವಿನಕುಳಿ**
ಕರ್ಕಿಕೊಪ್ಪ
ಅಂಚೆ : ಯಡಜಿಗಳೆ ಮನೆ
ಸಾಗರ ತಾಲ್ಲೂಕು – ೫೭೭ ೪೦೧

೯೭. **ಡಾ॥ ಜಿ.ಎಸ್. ಭಟ್**
ಕನ್ನಡ ಉಪನ್ಯಾಸಕರು
ಲಾಲಬಹದ್ದೂರ್ ಕಾಲೇಜ್
ಸಾಗರ - ೫೭೭ ೪೦೧

೯೮. **ಪ್ರೊ. ಎಂ.ಕೆ. ರೇಣುಕಪ್ಪ ಗೌಡ**
ಮುಖ್ಯಸ್ಥರು ಕನ್ನಡ ವಿಭಾಗ
ಲಾಲಬಹದ್ದೂರ್ ಕಾಲೇಜ್
ಸಾಗರ - ೫೭೭ ೪೦೧

೯೯. **ಮತ್ತೂರು ಕೃಷ್ಣಮೂರ್ತಿ**
ಕಾರ್ಯನಿರ್ವಹಣಾಧಿಕಾರಿ,
ಭಾರತೀಯ ವಿದ್ಯಾಭವನ,
ಬೆಂಗಳೂರು ಕೇಂದ್ರ
ರೇಸ್‌ಕೋರ್ಸ್ ರಸ್ತೆ
ಬೆಂಗಳೂರು - ೫೬೦ ೦೦೧

* * *





ಸಾಗರದ ಶ್ರೀ ಟಿ.ಮಹಾಬಲೇಶ್ವರ ಭಟ್ಟರು ಹುಟ್ಟಾ ಕನ್ನಡದ ಕೆಲಸಗಾರರು. ನಾಡು ನುಡಿಯ ಬಗ್ಗೆ ತುಂಬಾ ಕಳಕಳಿಯುಳ್ಳವರು. ತೊರೆಮನೆ ಎಂಬ ಪುಟ್ಟಹಳ್ಳಿಯಲ್ಲಿ ಹುಟ್ಟಿ, ಸಾಹಿತ್ಯ ಕ್ಷೇತ್ರ, ಸಾಮಾಜಿಕ ಕ್ಷೇತ್ರ ಗಳೆರಡರಲ್ಲೂ ದುಡಿದು ಖ್ಯಾತಿಯ ಮೆಟ್ಟಲನ್ನೇರಿದ್ದಾರೆ.ಇವರ 'ಹೊಸೂರಿನ ಹಲವರು' ಗ್ರಾಮೀಣ ಬದುಕಿನ ಚಿತ್ರಣವನ್ನು ಬಿಂಬಿಸುವ ಕೃತಿಯಾಗಿದ್ದು ಮಲೆನಾಡಿನ ಜನ ಜೀವನವನ್ನು ಬಹು ಸುಂದರವಾಗಿ ಅನಾವರಣ ಮಾಡಿದ್ದಾರೆ. ಇವರ ಇನ್ನೊಂದು ಕೃತಿ 'ಅಣ್ಣ ತಂಗಿ' ಸಮಾಜದಲ್ಲಿ ಇಂದಿಗೂ ಬೇರೂರಿ ನಡೆಯುತ್ತಿರುವ ಅನಿಷ್ಟ ನಡವಳಿಕೆಗಳ ಬಗ್ಗೆ ಅಸಹಾಯಕರ ಶೋಷಣೆಯ ಬಗ್ಗೆ ಬಹಳ ಮನೋಜ್ಞವಾಗಿ ಚಿತ್ರಿಸಿದ್ದಾರೆ. ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲಿ ಕೃಷಿಗೈದಿರುವ ಶ್ರೀಯುತರ ಶೈಲಿ ಬಹು ವಿಶಿಷ್ಠವಾದುದು. ಇವರ 'ಋತುಗಾನ' ಎಂಬ ಮತ್ತೊಂದು ಕೃತಿ ಬಹುಜನಪ್ರಿಯವಾಗಿದೆ. ಶ್ರೀಭಟ್ಟರು ಪ್ರಸ್ತುತ ಸಂಯುಕ್ತ ಕರ್ನಾಟಕ ಪತ್ರಿಕೆಯ ಜನಪ್ರಿಯ ಅಂಕಣ ಬರಹಗಾರರು. ಶಿಸ್ತು ಮತ್ತು ಅಚ್ಚುಕಟ್ಟುತನ ಇವರಿಗೆ ಹುಟ್ಟಿನಿಂದಲೂ ಮೈಗೂಡಿ ಬಂದಿದೆ.

ಎಪ್ಪತ್ತನ್ನು ಮುಟ್ಟುತ್ತಿರುವ ಶ್ರೀಯುತರಿಗೆ ಶತಮಾನದ ಆಯುಸ್ಸು ತುಂಬಿ ಮಂಗಳವಾಗಲೆಂದು ಹಾರೈಸುತ್ತೇನೆ.

**ಮತ್ತೂರು ಕೃಷ್ಣಮೂರ್ತಿ**

ಬಹಳ ದೀರ್ಘಕಾಲದಿಂದಲೂ ಶ್ರೀ ಮಹಾಬಲೇಶ್ವರ ಭಟ್ಟರನ್ನು ನಾನು ಮೆಚ್ಚುತ್ತಾ ಬಂದವನು. ಇವರ ವಿಷಯದಲ್ಲಿ ನನಗೆ ಅತ್ಯಂತ ಸ್ನೇಹ, ಆದರ, ಗೌರವಗಳುಂಟು.

**ವಿದ್ವಾನ್ ಎನ್. ರಂಗನಾಥ ಶರ್ಮ**

ಟಿ.ಮಹಾಬಲೇಶ್ವರ ಭಟ್ಟರಿಗೆ ಈಗ ಎಪ್ಪತ್ತು ವರ್ಷ. ಈತನಕ ಅವರು ಪ್ರಾಮಾಣಿಕವಾಗಿ, ಸಾಹಿತ್ಯ ಕ್ಷೇತ್ರದಲ್ಲಿ ದೀರ್ಘ ಕಾಲದಿಂದ ಕೆಲಸ ಮಾಡಿದ್ದನ್ನು ಕಂಡಿದ್ದೇನೆ.

**ಎಚ್. ಎಲ್. ನಾಗೇಗೌಡ**

ಶ್ರೀ ಭಟ್ಟರು ಕರ್ನಾಟಕದಲ್ಲಿ ಒಳ್ಳೆ ಹೆಸರನ್ನು ಮಾಡಿದವರು. ನಮಗೆಲ್ಲಾ ಗೌರವಾರ್ಹರು. ಈತನಕದ ಅವರ ಸಾಹಿತ್ಯ ಕೆಲಸವನ್ನು ನೆನಪಿಸಿಕೊಳ್ಳುವುದು ನಮ್ಮೆಲ್ಲರ ಕರ್ತವ್ಯ.

**ಪ್ರೊ॥ ಜಿ. ವೆಂಕಟಸುಬ್ಬಯ್ಯ**

ಟಿ. ಮಹಾಬಲೇಶ್ವರಭಟ್ಟರು, ಜೀವನದ ಉದ್ದಕ್ಕೂ ಸಾಗರ ಪ್ರಾಂತ್ಯದಲ್ಲಿ ಸಾಂಸ್ಕೃತಿಕ ನೇತಾರರಾಗಿ ದುಡಿದಿದ್ದಾರೆ. ಭಗವಂತನು ಇವರಿಗೆ ಆಯುರಾರೋಗ್ಯವನ್ನು ಕೊಡಲಿ.

**ಪ್ರೊ ॥ ಕು.ಶಿ.ಹರಿದಾಸಭಟ್ಟ**

ನನ್ನ ಜೀವನ ವಾಹಿನಿಯಲ್ಲಿ ಶ್ರೀ ಭಟ್ಟರು ರಂಗ ಪ್ರಿಯ ಪ್ರೇರಕ ಪೂರಕರಾಗಿ ನವ ಯುವ ಶಕ್ತಿಗಳಿಗೆ ಚೈತನ್ಯಧಾರಕರಾಗಿ ಜೀವನ ಸಾರ್ಥಕ್ಯವನ್ನು ಸಾಧಿಸಿದ್ದಾರೆ.

**ಮಾಸ್ಟರ್ ಹಿರಣ್ಣಯ್ಯ**

ಶ್ರೀ ಟಿ. ಮಹಾಬಲೇಶ್ವರ ಭಟ್ಟ
ಅಭಿನಂದನ ಸಮಿತಿ
ಸಾಗರ